ಸಂಪುಟ - 8

# ತರ್ಕತಾಂಡವ ವಿಶ್ವರೂಪ



ಪ್ರಕಾಶನ

ಶ್ರೀ ಗುರುಸಾರ್ವಭೌಮ ಸಂಶೋಧನ ಮಂದಿರ

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ

ಶ್ರೀ ರಾಘವೇಂದ್ರಸ್ವಾಮಿಗಳ ಮಠ

ಮಂತ್ರಾಲಯ - 518 345 (ಆಂಧ್ರ ಪ್ರದೇಶ)

|| ಶ್ರೀಮನ್ಮೂಲರಾಮೋ ವಿಜಯತೇ || || ಶ್ರೀ ಗುರುರಾಜೋ ವಿಜಯತೇ ||

## ಸಂಪುಟ -೮

ಶ್ರೀವ್ಯಾಸತೀರ್ಥಗುರುಸಾರ್ವಭೌಮ-ವಿರಚಿತ

# ತರ್ಕತಾಂಡವ

ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮ-ವಿರಚಿತ

# ನ್ಯಾಯದೀಪ

ಅನುವ್ಯಾಖ್ಯಾನ, ನ್ಯಾಯಸುಧಾ, ಯುಕ್ತಿಮಲ್ಲಿಕಾ, ಅಭಿನವತಾಂಡವ
ಗ್ರಂಥಗಳ ಆಯ್ದಭಾಗದ ಮೂಲ ಹಾಗೂ ಕನ್ನಡ ಅನುವಾದ.
ನ್ಯಾಯಕುಸುಮಾಂಜಲಿ, ನ್ಯಾಯಲೀಲಾವತಿ, ಲೀಲಾವತಿ ಪ್ರಕಾಶ,
ತತ್ವಚಿಂತಾಮಣಿ ಪ್ರಕಾಶ ಎಂಬ ಐದು ಪ್ರಾಚೀನ ತರ್ಕಗ್ರಂಥಗಳ
ಮೂಲ ಹಾಗೂ ಕನ್ನಡ ಅನುವಾದ.

ವಿವರಣೆ, ವಿಶೇಷ-ವಿಚಾರ, ನೆನಪಿಡಿ, ಗೋಷ್ಠಿವಿಚಾರ, ಪ್ರಶ್ನೋತ್ತರ,
ಆಕರ್ಷಕ ಶಿರೋನಾಮ, ಸಾರಾಮೃತಗಳೊಂದಿಗೆ ಕನ್ನಡದ ಕನ್ನಡಿಯಲ್ಲಿ

* * * * * *

ಪ್ರಕಾಶನ :
ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,
ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345 ಆಂಧ್ರಪ್ರದೇಶ.

॥

'ತರ್ಕತಾಂಡವ-ವಿಶ್ವರೂಪ' : ಮನ್ಮಥನಾಮಸಂವತ್ಸರ, ಭಾದ್ರಪದ ಶುದ್ಧ ಅನಂತಚತುರ್ದಶಿಯ (ದಿನಾಂಕ : ೨೭-೯-೨೦೧೫) ಶುಭಮುಹೂರ್ತದಲ್ಲಿ ಮಂತ್ರಾಲಯ ಕ್ಷೇತ್ರದಲ್ಲಿ ಪರಮಪೂಜ್ಯ ॥ ಶ್ರೀ ಸುಬುಧೇಂದ್ರತೀರ್ಥಶ್ರೀಪಾದಂಗಳವರು ತಮ್ಮ ತೃತೀಯ ಚಾತುರ್ಮಾಸ್ಯದ ಸಮಾರೋಪ ಸಮಾರಂಭದಲ್ಲಿ ಈ ಕೃತಿಯನ್ನು ಲೋಕೇಶಾರ್ಪಣೆ ಹಾಗೂ ಲೋಕಾರ್ಪಣೆ ಮಾಡಿದರು.


| | |
|---|---|
| ಪ್ರಕಾಶನ | : ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,<br>ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,<br>ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345<br>ಆಂಧ್ರಪ್ರದೇಶ. |
| ಸಂಪಾದನೆ ಮತ್ತು ಅನುವಾದ | : ವಿ ॥ ಬೆಮ್ಮತ್ತಿ ವೇಂಕಟೇಶಾಚಾರ್ಯ, ಬೆಂಗಳೂರು.<br>ದೂರವಾಣಿ : 9141495120 |
| ಪ್ರಥಮಮುದ್ರಣ | : 2015 |
| ಪುಟಗಳು | : 29+647 = 676 |
| ಬೆಲೆ | : 600 ರೂ |
| ಪ್ರತಿಗಳು | : 1000 |







ಅಕ್ಷರಜೋಡಣೆ :

ಶ್ರೀ ಸುಬ್ಬಣ್ಣ ಕೆಂಪದಾಳಿಹಳ್ಳಿ.
ಎಸ್. ನಾಗಲತಾ

ಮುದ್ರಣ :
ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.

॥ Srimanmoola Ramo Vijayate ॥ ॥ Sri Gururajo Vijayate ॥

## VOLUME - 8

# TARKA TANDAVA

## VISVARUPA

a work of

## Sri Vyasatirtha gurusarvabhouma

with Glossary

# NYAYADIPA

of

## Sri Raghavendragurusarvabhouma

along with extract of

Pruvapaksha texts

**NYAYA KUSUMAJALI; NYAYALEEVATI;**

**TATVA-CINTAMANI, CHINTAMANI-PRAKASHA**

Siddanta texts

**ANUVYAKYANA, NYAYASUDHA, YUKTIMALLIKA;**

**ABHINAVATANDAVA**

including meanings in Kannada
Note, things to remember, Q&A and headings

**PUBLISHERS :**

**Sri Gurusarvabhouma Samshodhana Mandira,**

**Jagadguru Srimanmadhvacharya Mula Mahasamsthana,**
**Sri Raghavendraswamy Mutt, Mantralayam - 518 345 A.P.**

TARKA TANDAVA VISVARUPA- a work of Sri Vysatirtha gurusarvabhouma with glossaries and notes was released on the auspicious occassion of Anantachatudarshi HH Sri Sri Subhudendra Swamiji.

| | |
|---|---|
| Publication | : **Sri Gurusarvabhouma Sanshodhana Mandira,** Jagadguru Srimanmadhvacharya Mula Mahasamsthana, Sri Raghavendraswamy mutt, Mantralayam. A.P. |
| Edited & Translated by | : Vidwan Bemmatti Venkateshacharya, Bangalore. Ph : 9141495120 |
| First Edition | : 2015 |
| Pages | : 29+647=676 |
| Price | : Rs. 600 |
| Copies | : 1000 |



D.T.P.
Subbanna Kempadali Halli (080-26761624)
Smt. S. Nagalatha, Bangalore.

Printers :
Muktipatha Mudranalaya,
Bangalore.

|| ಶ್ರೀಮನ್ಮೂಲರಾಮೋ ವಿಜಯತೇ || || ಶ್ರೀಗುರುರಾಜೋ ವಿಜಯತೇ ||

# ತರ್ಕತಾಂಡವ
## ವಿಶ್ವರೂಪ

* * * *

ಅಧ್ಯಕ್ಷರು :

## ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :

ವಿ|| ರಾಜಾ ಎಸ್. ಗಿರಿಆಚಾರ್ಯ

ಮಂತ್ರಾಲಯ.

ಮಾರ್ಗದರ್ಶನ :

ವಿ|| ಆರ್.ವೇಂಕಟೇಶಾಚಾರ್ಯ,

ಶ್ರೀರಂಗಂ.

ಸಂಪಾದನೆ ಮತ್ತು ಅನುವಾದ :

ವಿ|| ಬೆಮ್ಮತ್ತಿ ವೇಂಕಟೇಶಾಚಾರ್ಯ

ಬೆಂಗಳೂರು.

|| Srimanmoola Ramo Vijayate || || Sri Gururajo Vijayate ||

# VOLUME - 8

# TARKATANDAVA

## VISVARUPA

******

**President:**

**HIS HOLINESS SRI SUBUDHENDRATHIRTHA SWAMIJI**

**PitadhipatHi of Sri Raghavendraswamy Mut, Mantralayam.**

Honorary Editor:

**Sri Vidwan Raja S. Giri Acharya**

Mantralayam.

Guidance:

**Vidwan R. Venkateshacharya,**

Srirangam

Compiled, Edited & Translated by :

**Vidwan Bemmatti Venkateshacharya,**

Bangalore.

# ಸಂಪಾದಿತ ಹಾಗೂ ಅನುವಾದಿತ ಗ್ರಂಥಗಳು ಮತ್ತು ಗ್ರಂಥಕಾರರು

(ಸಿದ್ಧಾಂತ ಗ್ರಂಥಗಳು)

1. ಅನುವ್ಯಾಖ್ಯಾನ - ಜಗದ್ಗುರು - ಶ್ರೀಮನ್ಮಧ್ವಾಚಾರ್ಯರು

2. ಶ್ರೀಮನ್-ನ್ಯಾಯಸುಧಾ- ಶ್ರೀಜಯತೀರ್ಥಭಿಕ್ಷುಗಳು

3. ಯುಕ್ತಿಮಲ್ಲಿಕಾ - ಶ್ರೀವಾದಿರಾಜತೀರ್ಥ- ಗುರುಸಾರ್ವಭೌಮರು

4. ತರ್ಕತಾಂಡವ - ಶ್ರೀವ್ಯಾಸತೀರ್ಥ- ಗುರುಸಾರ್ವಭೌಮರು

5. ನ್ಯಾಯದೀಪ - ಶ್ರೀರಾಘವೇಂದ್ರತೀರ್ಥ-
ಗುರುಸಾರ್ವಭೌಮರು

6. ಅಭಿನವ ತಾಂಡವ -ಶ್ರೀಸತ್ಯನಾಥತೀರ್ಥಶ್ರೀಪಾದರು

(ಪೂರ್ವಪಕ್ಷ ಗ್ರಂಥಗಳು)

7. ನ್ಯಾಯಕುಸುಮಾಂಜಲಿ - ಉದಯನಾಚಾರ್ಯ

8. ನ್ಯಾಯಲೀಲಾವತಿ - ಭಾಸ್ಕರಾಚಾರ್ಯ

9. ನ್ಯಾಯಲೀಲಾವತಿ ಪ್ರಕಾಶ - ವರ್ಧಮಾನ ಉಪಾಧ್ಯಾಯ

10. ತತ್ವಚಿಂತಾಮಣಿ - ಗಂಗೇಶೋಪಾಧ್ಯಾಯ

11. ತತ್ವಚಿಂತಾಮಣಿ ಪ್ರಕಾಶ - ರುಚಿದತ್ತ

ತರ್ಕತಾಂಡವ ಗ್ರಂಥವು ಅತ್ಯಂತ ಕಠಿಣವಾಗಿರುವುದರಿಂದ ಸುಲಭವಾಗಿ ಅರ್ಥಮಾಡಿಕೊಳ್ಳಲು ಅನೇಕ ಮಜಲುಗಳಲ್ಲಿ ಅನುವಾದ ಮಾಡಲಾಗಿದೆ. ಆ ಮಜಲುಗಳನ್ನು ಭಾಗಾನುಕ್ರಮಣಿಕೆಯಲ್ಲಿ ವಿವರಿಸಲಾಗಿದೆ.

# ಭಾಗಾನುಕ್ರಮಣಿಕಾ

## ತರ್ಕತಾಂಡವ-ವಿಶ್ವರೂಪ -೧

1. ಸಾರಾಮೃತ,
2. ತರ್ಕತಾಂಡವ - ಸಂಸ್ಕೃತ ಮೂಲ
3. ನ್ಯಾಯದೀಪ-ಸಂಸ್ಕೃತ ಮೂಲ
4. ತರ್ಕತಾಂಡವ - ಕನ್ನಡದಲ್ಲಿ ಮೂಲ
5. ಅನುವಾದ
6. ವಿವರಣೆ,
7. ನ್ಯಾಯದೀಪ -ಕನ್ನಡದಲ್ಲಿ ಮೂಲ,
8. ಅನುವಾದ
9. ವಿಶೇಷವಿಚಾರ
10. ಪ್ರಶ್ನೋತ್ತರ,
11. ಗೋಷ್ಠಿಯ ವಿಚಾರ,
12. ನೆನಪಿಡಿ

## ಸಿದ್ಧಾಂತ ತಾಂಡವ -2

1. ಅನುವ್ಯಾಖ್ಯಾನ
2. ಶ್ರೀಮನ್-ನ್ಯಾಯಸುಧಾ
3. ಯುಕ್ತಿಮಲ್ಲಿಕಾ
4. ಅಭಿನವ ತಾಂಡವ

ಇವುಗಳ ಸಂಸ್ಕೃತ ಮೂಲ ಹಾಗೂ ಕನ್ನಡ ಅನುವಾದ

## ಪೂರ್ವಪಕ್ಷ ತಾಂಡವ -3

1. ಉದಯನಾಚಾರ್ಯ ಪ್ರಣೀತ ನ್ಯಾಯಕುಸುಮಾಂಜಲಿ
2. ಭಾಸ್ಕಾರಾಚಾರ್ಯ ಪ್ರಣೀತ ನ್ಯಾಯಲೀಲಾವತಿ
3. ವರ್ಧಮಾನ ಉಪಾಧ್ಯಾಯ ಪ್ರಣೀತ ನ್ಯಾಯಲೀಲಾವತಿ ಪ್ರಕಾಶ
3. ಗಂಗೇಶೋಪಾಧ್ಯಾಯ ಪ್ರಣೀತ ತತ್ವಚಿಂತಾಮಣಿ
4. ರುಚಿದತ್ತ ಪ್ರಣೀತ ಪ್ರಕಾಶ

# ಯಾವುದು ಹಿತ ಈ ನಾಕರೊಳಗೆ ?



**1.**

"ತರ್ಕತಾಂಡವ ಬಲುಕಠಿಣ. ಟಿಪ್ಪಣಿಗಳನ್ನು ಓದಿ ಅರ್ಥಮಾಡಿಕೊಳ್ಳುವ ತಾಳ್ಮೆ ನನಗಿಲ್ಲ. ಕಠಿಣ ಪ್ರಾಚೀನತಾರ್ಕಿಕಗ್ರಂಥಗಳ ಸಹವಾಸವಂತು ಕೇವಲ ದುಃಖಕರ. ಶಕ್ತಿವಾದದ ಈ ಬೃಹತ್‌ಸಂಪುಟದಿಂದ ನನಗೇನೂ ಉಪಯೋಗವಿಲ್ಲ. ಈ ಜೀವನದಲ್ಲೇ ಇದನ್ನು ನಾನು ಓದಿ ಅರ್ಥಮಾಡಿಕೊಳ್ಳಲಾರೆ".

ಈ ಭಾವನೆ ನಿಮ್ಮದಾಗಿದ್ದಲ್ಲಿ ಪುಟ 182 ರಿಂದ 188ರ ತನಕ ಒಮ್ಮೆ ಕಣ್ಣಾಡಿಸಿ ಸಾಕು. ಅದರಲ್ಲೂ ಕೊನೆಯ ಮಾತನ್ನು ಓದದೇ ಇರಬೇಡಿ.

**2.**

ನನಗೆ ಸಂಸ್ಕೃತಭಾಷೆ ಸರಿಯಾಗಿ ಬರುವುದಿಲ್ಲ. ಆದರೆ ತರ್ಕತಾಂಡವದಲ್ಲಿರುವ ಶಕ್ತಿವಾದದ ಸಾರ ಏನೆಂಬುದನ್ನು ತಿಳಿಯಲು ಬಹಳ ಕುತೂಹಲವಿದೆ. ಸುಲಭವಾಗಿ ಶಕ್ತಿವಾದದ ಸಾರವನ್ನು ತಿಳಿಸಿದರೆ ಪೂರ್ಣ ಅರ್ಥಮಾಡಿಕೊಳ್ಳುವೆ.

ಈ ಭಾವನೆ ನಿಮ್ಮದಾಗಿದ್ದಲ್ಲಿ ಪುಟ 1ರಿಂದ 18ರ ತನಕ ಓದಿರಿ ಸಾಕು.

**3.**

ಕಠಿಣವಿಷಯಗಳನ್ನು ಪ್ರಶ್ನೋತ್ತರಮಾಲಿಕೆಯಲ್ಲಿ ಸುಲಭವಾಗಿ ತಿಳಿಸಿದರೆ ಕೂಡಲೇ ಅರ್ಥಮಾಡಿಕೊಳ್ಳುವೆ. ಬುಲೆಟ್ ಪ್ರಶ್ನೆಗೆ ಖಡಕ್ ಉತ್ತರ ನನಗೆ ಬಹಳ ಇಷ್ಟ.

ಈ ಭಾವನೆ ನಿಮ್ಮದಾಗಿದ್ದಲ್ಲಿ 119, 133, 182 ಈ ಪುಟಗಳಲ್ಲಿರುವ ವಿಷಯಗಳನ್ನು ಓದಿರಿ.

**4.**

ನನಗೆ ಗ್ರಾಂಥಿಕವಾದ ಗೋಷ್ಠಿಯ ವಿಚಾರಗಳು ಬೇಕು. ಗೋಷ್ಠಿಯ ವಿಚಾರ ಸ್ವಲ್ಪ ತಿಳಿದರೂ ಸಾಕು. ನನಗೆ ಅದು ಗೋಷ್ಠಿಯ ಪ್ರವೇಶಕ್ಕೆ ಅನುಕೂಲವಾಗುತ್ತದೆ.

ಈ ಭಾವನೆ ನಿಮ್ಮದಾಗಿದ್ದಲ್ಲಿ 50,97, 150, 168 ಈ ಪುಟಗಳಲ್ಲಿರುವ ವಿಷಯವನ್ನು ಅಧ್ಯಯನ ಮಾಡಿರಿ.

# ತರ್ಕತಾಂಡವ-ವಿಶ್ವರೂಪ

# ವಾಙ್ಮಯ ಕುಸುಮಹಾರ

## ಸಮರ್ಪಣೆ



ಶ್ರೀರಾಘವೇಂದ್ರಸ್ವಾಮಿಗಳ ಮಠಾಧೀಶರಾದ
ಪರಮಪೂಜ್ಯ ॥ ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರು
ತಮ್ಮ ಪಾದಕಾಣಿಕೆಯಿಂದ 'ತರ್ಕತಾಂಡವ-ವಿಶ್ವರೂಪ' ಕೃತಿಯ ಎಂಟನೆಯ ಭಾಗವನ್ನು
ಶ್ರೀರಾಘವೇಂದ್ರತೀರ್ಥಶ್ರೀಪಾದರ ಅಂತರ್ಯಾಮಿಗಳಾದ
ಜಗದ್ಗುರು ಶ್ರೀಮಧ್ವಾಚಾರ್ಯರಲ್ಲಿ ನೆಲೆಸಿದ ಶ್ರೀಮನ್ಮೂಲರಘುಪತಿದೇವರಿಗೆ
ವಾಙ್ಮಯಕುಸುಮಹಾರವನ್ನಾಗಿ ಸಮರ್ಪಣೆ ಮಾಡಿರುವರು.

## ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದರ ಸಾರಥ್ಯದಲ್ಲಿ

# ತರ್ಕತಾಂಡವ-ವಿಶ್ವರೂಪ ದರ್ಶನದ

## ಎಂಟನೆಯ ಭಾಗ

ಶ್ರೀಸುಬುಧೇಂದ್ರತೀರ್ಥಶ್ರೀಪಾದರು ಎಂಟನೆಯ ಭಾಗದ ಮುದ್ರಣಕ್ಕೆ ತಗಲುವ ದುಬಾರಿವೆಚ್ಚವನ್ನು ತಮ್ಮ ಪಾದಕಾಣಿಕೆಯಿಂದಲೇ ನಿರ್ವಹಿಸಿರುವರು. ಮತ್ತು ತರ್ಕತಾಂಡವ ಗ್ರಂಥವನ್ನು ಪ್ರತಿಯೊಬ್ಬ ಸಾಧಕರೂ ಕೂಡ ಪರಿಪೂರ್ಣವಾಗಿ ಅರ್ಥಮಾಡಿಕೊಳ್ಳುವಂತೆ ಶ್ರಮವಹಿಸಿರುವರು. ಕೇವಲ ತರ್ಕತಾಂಡವ ಗ್ರಂಥದ ಅನುವಾದವಷ್ಟೇ ಅಲ್ಲದೇ ಇದರ ಅಧ್ಯಯನದ ಪರಿಪೂರ್ಣತೆಗೆ ಉಪಯುಕ್ತವಾಗುವ ಹತ್ತಾರು ಗ್ರಂಥಗಳನ್ನು ಒಂದೇ ಕೃತಿಯಲ್ಲಿ ಸುಲಭವಾಗಿ ನೀಡಿರುವರು. ಈ ಕೃತಿಗೆ ಮುಖ್ಯಮಾರ್ಗದರ್ಶಕರು ಮತ್ತು ಸಂಪಾದಕರು ಪರಿಪೂರ್ಣಕಲ್ಪನೆಯುಳ್ಳವರು ಸ್ವತಃ ಶ್ರೀಪಾದರೇ ಆಗಿರುತ್ತಾರೆ. ಈ ಸಂಪುಟದಲ್ಲಿ ಹಿಂದಿನ ಸಂಪುಟಕ್ಕಿಂತ ಹೆಚ್ಚಿನ ವಿಷಯಗಳನ್ನು ಶ್ರೀಪಾದಂಗಳವರು ಸೇರಿಸಿರುತ್ತಾರೆ. ಹಾಗೂ ಶ್ರೀಸತ್ಯನಾಥತೀರ್ಥಶ್ರೀಪಾದರು ವಿರಚಿಸಿದ 'ಅಭಿನವತಾಂಡವ' ಗ್ರಂಥದ ಅನುವಾದವನ್ನು ಅತ್ಯಂತ ವಿವರಾತ್ಮಕವಾಗಿ ಕೃತಿಯಲ್ಲಿ ಅನುವಾದ ಮಾಡಲಾಗಿದೆ. ತರ್ಕತಾಂಡವಗ್ರಂಥವನ್ನು ಅಧ್ಯಯನ ಮಾಡುವ ವಿದ್ಯಾರ್ಥಿಗಳಿಗಿದು ಪರಿಪಕ್ವವಾದ ಕಳಿತ ರಸವತ್ತಾದ ಹಣ್ಣನಂತಿದೆ. ಶ್ರೀಪಾದಂಗಳವರ ಉದಾರತೆ, ವಿಶಾಲ ಮನೋಭಾವನೆ ಹಾಗೂ ಜ್ಞಾನದೀಕ್ಷೆ ಈ ಎಲ್ಲಾ ಗುಣಗಳಿಗೆ 'ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ' ಎಂದಷ್ಟೇ ಹೇಳಲು ನಮ್ಮಿಂದ ಸಾಧ್ಯ.

ಲೇಖಕ.

|| ಶ್ರೀಮನ್ಮೂಲರಾಮೋ ವಿಜಯತೇ || || ಶ್ರೀಗುರುರಾಜೋ ವಿಜಯತೇ ||

ಶ್ರೀಮತ್-ಪರಮಹಂಸ-ಪರಿವ್ರಾಜಕಾಚಾರ್ಯ-ಪದ-ವಾಕ್ಯ-ಪ್ರವೀಣ-ಪಾರಾವಾರ-ಪಾರಂಗತ-
ಸರ್ವತಂತ್ರ-ಸ್ವತಂತ್ರ-ಶ್ರೀಮನ್-ಮೂಲರಘುಪತಿ-ವೇದವ್ಯಾಸ-ದೇವ-ದಿವ್ಯ-ಶ್ರೀಪಾದ
ಪದ್ಮಾರಾಧಕ-ಜಗದ್ಗುರು-ಶ್ರೀಮನ್-ಮಧ್ವಾಚಾರ್ಯ-ಮೂಲಮಹಾಸಂಸ್ಥಾನ-
ಮಂತ್ರಾಲಯ-ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ-ಸಾಮ್ರಾಜ್ಯ-
ದಿಗ್ವಿಜಯ-ವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ
ಪರಮಪೂಜ್ಯ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರರಾದ
ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ಭಕ್ತಿಪರಂಪರೆಯ ಸಾಂಸ್ಕೃತಿಕ ಇತಿಹಾಸದಲ್ಲಿ ಅತ್ಯಂತ ಪ್ರಭಾವಶಾಲಿಗಳಾಗಿ ಹೆಸರು ಪಡೆದ ಇಬ್ಬರು ಮಹಾನ್ ಸಂತರು ಎಂದರೆ ಶ್ರೀವ್ಯಾಸತೀರ್ಥಶ್ರೀಪಾದರು ಹಾಗೂ ಶ್ರೀರಾಘವೇಂದ್ರಶ್ರೀಪಾದರು. ವೈದಿಕ ವಿದ್ಯಾಪರಂಪರೆಯನ್ನು ಸಂರಕ್ಷಣೆ ಮಾಡುವುದಷ್ಟೇ ಅಲ್ಲದೆ ಲೋಕಕಲ್ಯಾಣಚಿಂತಕರೂ ಆದ ಇವರ ಧೀರೋಧಾತ್ತ ಚಿಂತನೆ ಯಾರಿಂದಲೂ ಊಹಿಸಲು ಅಸಾಧ್ಯವಾದುದು. ಸನ್ಯಾಸಿಗಳಾಗಿ ಸಮಾಜದಲ್ಲಿ ಬೇರೆಯದೆ ನಿರಂತರ ಜಪ, ತಪ, ಧ್ಯಾನ, ಮೌನ, ಪಾಠ ಪ್ರವಚನ, ಗ್ರಂಥರಚನೆ, ದೇವಪೂಜೆ, ಸಂಚಾರ, ಅಧ್ಯಾತ್ಮಚಿಂತನೆ ಇತ್ಯಾದಿ ಸಾಧನಗಳಲ್ಲಿಯೇ ಮಗ್ನರಾಗಿದ್ದರೂ ಕೂಡ ಭಕ್ತರ ಕಷ್ಟ ಸಂಕಷ್ಟಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ದೀನೋದ್ಧಾರಕಾರ್ಯದಲ್ಲಿ ಹೆಸರಾದ ಇವರಿಬ್ಬರ ನಡೆ, ನುಡಿ, ಚಿಂತನೆ, ಎಲ್ಲವೂ ನಿಜಕ್ಕೂ ಬಹು ಅಚ್ಚರಿ.

ತರ್ಕ, ಮೀಮಾಂಸಾ, ವ್ಯಾಕರಣ, ವೇದಾಂತ ಎಂಬ ನಾಕು ಶಾಸ್ತ್ರಗಳಲ್ಲಿ ಅಪಾರ ಪರಿಣತಿಯನ್ನು ಸಾಧಿಸಿದ ಈ ಇಬ್ಬರು ಮಹಾಪುರುಷರು ಸಂಸ್ಕೃತ ಇತಿಹಾಸಕ್ಕೆ ನೀಡಿದ ಕೊಡುಗೆ ಅಪಾರವಾದದ್ದು, ತಾರ್ಕಿಕರ ಹಮ್ಮು ಮುರಿಯುವ ತರ್ಕತಾಂಡವ ಎಂಬ ಮೇರುಕೃತಿಯನ್ನು ಶ್ರೀ ವ್ಯಾಸತೀರ್ಥರು ರಚಿಸಿದರೆ ಅದಕ್ಕೆ ವ್ಯಾಖ್ಯಾನರೂಪದಲ್ಲಿ ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರು ''ನ್ಯಾಯದೀಪ'' ಎಂಬ ಅತ್ಯಂತ ಬೃಹತ್ ಕೃತಿಯನ್ನು ರಚಿಸಿರುವರು. ಇದಕ್ಕಾಗಿ ತಮ್ಮ ಜೀವನವನ್ನು ಸವೆಸಿರುವರು. ಇವರ ಪ್ರೀತಿಯನ್ನು ಗಳಿಸುವ ದಾರಿ ಎಂದರೆ ಅವರು ರಚಿಸಿರುವ ಇಂಥ ಗ್ರಂಥಗಳನ್ನು ಅಧ್ಯಯನ ಮಾಡಿ ಅನುಷ್ಠಾನಕ್ಕೆ ತಂದು ಮುಂದಿನ ಜನಾಂಗಕ್ಕೂ ಅದನ್ನು ತಲುಪಿಸುವುದೇ ಆಗಿರುತ್ತದೆ.

ಈ ಸಂಪುಟದಲ್ಲಿ ಶಕ್ತಿಯನ್ನು ಸಮರ್ಥಿಸುವ ವಿಚಾರಧಾರೆಯಿದೆ. ತಾರ್ಕಿಕರು ಶಕ್ತಿಯನ್ನು ಒಪ್ಪುವುದಿಲ್ಲ. ಆದರೆ ಶ್ರೀಮದಾಚಾರ್ಯರು ಶಕ್ತಿ ಎಂಬ ಪದಾರ್ಥವನ್ನು ಅನುವ್ಯಾಖ್ಯಾನದ ಅತ್ಯತ್ವಾಧಿಕರಣದಲ್ಲಿ 'ಜ್ಞಾನಂ ನಿತ್ಯಾ ಕ್ರಿಯಾ ನಿತ್ಯಾ ಬಲಂ ಶಕ್ತಿಃ ಪರಾತ್ಮನಃ' ಎಂಬ ಸ್ಮೃತಿಯ ಆಧಾರದಿಂದ ಸಮರ್ಥಿಸಿದ್ದಾರೆ. ಶ್ರೀಮದಾಚಾರ್ಯರ ಈ ಒಂದು ಮಾತನ್ನೇ ಶ್ರೀವ್ಯಾಸತೀರ್ಥರು ಶಕ್ತಿವಾದದಲ್ಲಿ ಸಮರ್ಥನೆ ಮಾಡಿದ್ದಾರೆ.

ಬೆಂಕಿಯಲ್ಲಿ ಸುಡುವ ಶಕ್ತಿ, ನೀರಿನಲ್ಲಿ ಹರಿಯುವ ಶಕ್ತಿ, ಗಾಳಿಯಲ್ಲಿ ಬೀಸುವ ಶಕ್ತಿ, ಕುಲಾಲನಲ್ಲಿ ಘಟವನ್ನು ನಿರ್ಮಾಣ ಮಾಡುವ ಶಕ್ತಿ, ಯೋಜಕನಲ್ಲಿ ಆಯಾ ಕಾರ್ಯವನ್ನು ನಿರ್ವಹಣ ಮಾಡುವ ಶಕ್ತಿ, ಹೀಗೆ ಪದಾರ್ಥಗಳಲ್ಲಿ ಅಸಾಧಾರಣವಾದ ಶಕ್ತಿಯಿರುವುದನ್ನು ನಾವು ಅನುಭವಿಸುತ್ತಿದ್ದೇವೆ. ಆದರೆ ತಾರ್ಕಿಕರು ಈ ಯಾವ ಪದಾರ್ಥಗಳಲ್ಲಿಯೂ ಶಕ್ತಿಯೇ ಇಲ್ಲ ಎಂದು ಹೇಳುತ್ತಾರೆ. ಇಷ್ಟಕ್ಕೆ ಇವರ ಮಾತು ಮುಗಿಯದೆ ಭಗವಂತನಲ್ಲೂ ಕೂಡ ಶಕ್ತಿ ಇಲ್ಲ ಎಂದು ಹೇಳಲು ಮುನ್ನುಗ್ಗುತ್ತಾರೆ. ಅನಂತ ಜಗತ್ತುಗಳನ್ನು ಅನಂತ ಕಾಲದ ತನಕ ಅನಂತ ರೀತಿಯಲ್ಲಿ ನಿರ್ಮಾಣ ಮಾಡುವ

ಶಕ್ತಿ ಪರಮಾತ್ಮನಲ್ಲಿ ಮಾತ್ರವಿದೆ. ಅಪರಿಮಿತವಾದ ಸ್ವತಂತ್ರವಾದ ಶಕ್ತಿ ಇರುವುದು ಪರಮಾತ್ಮನಲ್ಲಿ ಮಾತ್ರ. ಇದನ್ನೇ ಅಲ್ಲಗಳೆದರೆ ಜಗತ್ತಿನ ಸೃಷ್ಟ್ಯಾದಿಗಳನ್ನು ಸಮರ್ಥಿಸುವುದಾದರೂ ಕೂಡ ಹೇಗೆ ಸಾಧ್ಯ ? ಆದ್ದರಿಂದ ಶ್ರುತಿ-ಸ್ಮೃತಿಗಳು 'ಪರಾಸ್ಯ ಶಕ್ತಿಃ ವಿವಿಧೈವ ಶ್ರೂಯತೇ' ಇತ್ಯಾದಿಯಾಗಿ ಪರಮಾತ್ಮನಲ್ಲಿ ಬಗೆಬಗೆಯ ಶಕ್ತಿ ಇದೆ ಎಂದು ಸಮರ್ಥಿಸುತ್ತವೆ.

ಒಂದು ಚಿಕ್ಕ ಮಗುವಿನಲ್ಲಿ ಉದ್ಧರಣೆ ಎತ್ತುವ ಶಕ್ತಿಯಿದೆ. ಮೂರು ವರ್ಷದ ಮಗುವಿಗೆ ಪುಸ್ತಕ ಎತ್ತುವ ಶಕ್ತಿಯಿದೆ. ಹತ್ತು ವರ್ಷದ ಮಗುವಿಗೆ ತುಂಬಿದ ಕೊಡ ಎತ್ತುವ ಶಕ್ತಿಯಿದೆ. ಇಪ್ಪತ್ತು ವರ್ಷದ ಯುವಕನಿಗೆ ಭಾರದ ಕಲ್ಲನ್ನು ಎತ್ತುವ ಸಾಮರ್ಥ್ಯವಿರುತ್ತದೆ. ಹೀಗೆ ಒಂದೊಂದು ಪದಾರ್ಥದಲ್ಲೂ ಕೂಡ ತರತಮಭಾವದಿಂದ ಶಕ್ತಿಯು ವಿಭಿನ್ನವಾಗಿದೆ. ಆದ್ದರಿಂದ ಪದಾರ್ಥಗಳಲ್ಲಿ ಶಕ್ತಿ ಇದೆ ಎಂಬುದನ್ನು ತಿಳಿಯುವುದಷ್ಟೇ ಮುಖ್ಯವಲ್ಲ. ಆ ಶಕ್ತಿಯಲ್ಲಿ ತಾರತಮ್ಯ ಇದೆ ಎಂದು ತಿಳಿಯುವುದು ಬಹಳ ಮುಖ್ಯ. ತೃಣದಿಂದ ಆರಂಭಿಸಿ ಬ್ರಹ್ಮದೇವರ ತನಕ ಪ್ರತಿಯೊಬ್ಬರಲ್ಲಿರುವ ಶಕ್ತಿಯು ತಾರತಮ್ಯ ಪ್ರಕಾರ ಹೆಚ್ಚುತ್ತಾ ಹೋಗುತ್ತದೆ. ಈ ಎಲ್ಲಾ ಶಕ್ತಿಗಳನ್ನು ಮೀರಿಸಿದ ಅಪರಿಮಿತ ಶಕ್ತಿಯುಳ್ಳವನು ಆ ಭಗವಂತ ಮಾತ್ರ. ಈ ತತ್ವವನ್ನು ತಿಳಿಸುವುದೇ ಶಕ್ತಿವಾದದ ಮುಖ್ಯ ಸಾರಾಂಶ. ಅನಂತ ಶಕ್ತಿಯುಳ್ಳ ಪರಮಾತ್ಮನನ್ನು ನಾವೆಲ್ಲರೂ ಶರಣಾಗತರಾಗಿ ಅವನೆಡೆ ಸಾಗುವುದೇ ಜೀವನದ ಮುಖ್ಯ ಉದ್ದೇಶ.

ಈ ಸಂಪುಟದಲ್ಲಿ ಶ್ರೀಮದಾಚಾರ್ಯರು ಅನುವ್ಯಾಖ್ಯಾನದಲ್ಲಿ ಹೇಳಿದ್ದನ್ನು. ಹಾಗೂ ಶ್ರೀಮತ್-ಟೀಕಾಕೃತ್ಪಾದರು ನ್ಯಾಯಸುಧಾಗ್ರಂಥದಲ್ಲಿ ಹೇಳಿದ್ದನ್ನು ವಿವರಾತ್ಮಕವಾಗಿ ತಿಳಿಸಲಾಗಿದೆ. ಹಾಗೂ ಹಿಂದಿನ ಸಂಪುಟದಂತೆ ತಾರ್ಕಿಕಗ್ರಂಥಗಳಲ್ಲಿರುವ ವಿಷಯಗಳನ್ನೆಲ್ಲಾ ಯಥಾವತ್ತಾಗಿ ಅನುವಾದ ಸಹಿತ ವಿವರಿಸಲಾಗಿದೆ. ತರ್ಕತಾಂಡವ ಹಾಗೂ ನ್ಯಾಯದೀಪಗ್ರಂಥಗಳಲ್ಲಿ ಅತ್ಯಂತ ವಿವರವಾಗಿ ನಿರೂಪಣೆ ಮಾಡಿದ ಶಕ್ತಿಯ

ವಿಚಾರವು ಅತ್ಯಂತ ಆಹ್ಲಾದಕರವಾಗಿದೆ. ಓದುಗರು ಇದರ ಸದುಪಯೋಗವನ್ನು ಪಡೆದುಕೊಂಡು ಧನ್ಯರಾಗಬೇಕು.

ಇದನ್ನು ಬರೆದು ನೀಡಿದ ವಿದ್ವಾನ್ ॥ ಬೆಮ್ಮತ್ತಿ ವೆಂಕಟೇಶಾಚಾರ್ಯರಿಗೆ ಶ್ರೀಮನ್ ಮೂಲರಘುಪತಿರಾಮಚಂದ್ರದೇವರು, ಮುಖ್ಯಪ್ರಾಣದೇವರು ಹಾಗೂ ಮಂತ್ರಾಲಯ ಪ್ರಭುಗಳು ಜ್ಞಾನ ಭಕ್ತಿ ವೈರಾಗ್ಯಗಳನ್ನು ನೀಡಿ ಆಶೀರ್ವದಿಸಲಿ ಎಂದು ಪ್ರಾರ್ಥಿಸುತ್ತೇವೆ.

ಈ ಕೃತಿಗಾಗಿ ಸಹಕರಿಸಿದ ಎಲ್ಲಾ ಸಾಧಕರಿಗೂ ಹಾಗೂ ವಿದ್ವಾಂಸರಿಗೂ ಅಸ್ಮದ್ಗುರ್ವಂತರ್ಗತ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ-ಭಾರತೀರಮಣ - ಮುಖ್ಯಪ್ರಾಣಾಂತರ್ಗತ - ಶ್ರೀಮನ್‌ಮೂಲರಘುಪತಿ - ವೇದವ್ಯಾಸದೇವರು ಸಂಪೂರ್ಣವಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.

# ತರ್ಕತಾಂಡವ ವಿಶ್ವರೂಪದರ್ಶನಕ್ಕೆ
# ಸ್ವಾಗತ

ತರ್ಕತಾಂಡವ ಜಿಜ್ಞಾಸುಗಳೇ ...... !!!!

ಇದೊಂದು ಪ್ರವೇಶಿಕೆ ಮಾತ್ರ. ಶ್ರೀವ್ಯಾಸರಾಜರ ಹಾಗೂ ಶ್ರೀಗುರುರಾಯರ ಭೌಮವ್ಯಕ್ತಿತ್ವವನ್ನು ಸಮಗ್ರವಾಗಿ ಪರಿಚಯಿಸುವುದು ಇದರ ವ್ಯಾಪ್ತಿಗೆ ಮೀರಿದ್ದು.

ಬಿಂದುಜಲದಲ್ಲಿ ಪ್ರತಿಬಿಂಬ ತೋರಿಸಿ ಸೂರ್ಯನ ಭೌಮವ್ಯಕ್ತಿತ್ವ ಪರಿಚಯಿಸಲು ಸಾಧ್ಯವೇ...?

ಕೇವಲ ಚಿತ್ರಪಟದಿಂದ ಹಿಮಾಲಯದಲ್ಲಿದ್ದ ಅನುಭವ ಬರಲು ಸಾಧ್ಯವೆ...?

ಗಂಗಾಳದಲ್ಲಿನ ನೀರಿನ ಸ್ನಾನದಿಂದ ಗಂಗಾನದಿಯಲ್ಲಿ ಮಿಂದು ಎದ್ದ ಪಾವಿತ್ರ್ಯದ ಅನುಭವ ಬರಲು ಸಾಧ್ಯವೆ?

ಉತ್ತಮ ಶೈಲಿ ಪ್ರಾಸ-ಅನುಪ್ರಾಸಗಳೆಂಬ ಬಿಂಕದ ನದಿಯ ವೈಯಾರಗಳಲ್ಲಿ ಸಂಸ್ಕೃತಭಾಷೆಯ ವಿಶಾಲಮೈದಾನದಲ್ಲಿ ಸರಾಗವಾಗಿ ವಿಹರಿಸುವ, ಚಮತ್ಕಾರಮೂರುತಿಗಳಾಗಿ ನವನವೋನ್ಮೇಷ-ಶಾಲಿಗಳಾದ ಶ್ರೀವ್ಯಾಸರಾಜಗುರುಸಾರ್ವಭೌಮರ ಹಾಗೂ ಶ್ರೀಮಂತ್ರಾಲಯಪ್ರಭುಗಳ ಹೃದಯಾಂತರಾಳದ ಸಂಸ್ಕೃತವಾಕ್ಯಪುಂಜಗಳನ್ನು ಕನ್ನಡದ ಕನ್ನಡಿಯಲ್ಲಿ ಪರಿಚರಿಯಿಸಲೂ ಕೂಡ ಹೇಗೆ ಸಾಧ್ಯ....!!

ಮಹಾಪುರುಷರ ಅರಿವಿನ ಆಳವನ್ನು ಅರಿತವರು ಬಹಳ ವಿರಳ......!! ಅಪಾರ್ಥ ಮಾಡಿಕೊಳ್ಳುವವರೇ ಹೆಚ್ಚು. ಮಹಾಪುರುಷರ ಎತ್ತರಕ್ಕೆ ಹತ್ತಲಾರದ ಜನರು ತಮ್ಮ ಮೂಗಿನ ನೇರಕ್ಕೆ ಅವರನ್ನು ಎಳೆದುಬಿಡುತ್ತಾರೆ. ತಮ್ಮ ಅಜ್ಞಾನವನ್ನೇ ಮಹಾಪುರುಷರ ಭೌಮವ್ಯಕ್ತಿತ್ವದ ಆಳತೆಗೆ ಮಾನದಂಡ ಮಾಡುತ್ತಾರೆ....!!

ಶ್ರೀವ್ಯಾಸರಾಜರ ಹಾಗೂ ಗುರುರಾಯರ ಅಧ್ಯಾತ್ಮಪ್ರಪಂಚದ ತತ್ವವಾದದ ಸವಿಯನ್ನು ಅನುಭವಿಸಬೇಕೆಂದರೆ ನೇರ ಅವರ ಮಾತುಗಳನ್ನೇ ಓದಬೇಕು. ಇಲ್ಲದಿದ್ದರೆ ಎಂದೆಂದೂ ಅವರ ಅರಿವಿನ ಆಳವನ್ನು ತಿಳಿಯಲು ಸಾಧ್ಯವಿಲ್ಲ. ಅವರ ಎತ್ತರವನ್ನೂ ತಲೆ ಎತ್ತಿ ನೋಡಲು ಸಾಧ್ಯವಿಲ್ಲ. ಅವರ ವಿದ್ವಲ್ಲೋಕದ ಹೊಸ ಬೆಳಕನ್ನು ಕಣ್ಣರಳಿಸಿ ಕಾಣಲು ಕೂಡ ಸಾಧ್ಯವಿಲ್ಲ....!!

ಪುಟಗಟ್ಟಳೆ ಬರೆಯುವುದನ್ನು ಅವರು ಒಂದು ವಾಕ್ಯದಲ್ಲಿ ಸೂಚಿಸಿರುತ್ತಾರೆ. ಕೆಲವೊಮ್ಮೆ ಭಾಷಾಂತರದಲ್ಲಿ ಸರಿಯಾದ ಶಬ್ದಗಳು ಸಿಗದೆ ಅವರೆದುರು ಕಗ್ಗ-ಮಂಕುತಿಮ್ಮನಾಗುವುದೂ ಉಂಟು.

ಹಿಂಗೆಂದ ಮಾತ್ರಕ್ಕೆ ಇಂಥ ಕೃತಿಗಳು ವ್ಯರ್ಥವೆಂದಲ್ಲ; ಗ್ರಂಥದ ಭಾಷಾಶೈಲಿ ಕಬ್ಬಿಣದ ಕಡಲೆಯಾಗಿ ಕೆಲವರಿಗೆ ಅರ್ಥವೇ ಆಗದು. ಕೆಲವರಿಗೆ ತಪ್ಪು ತಿಳಿವಳಿಕೆ ಆಗುವುದು. ಇನ್ನು ಕೆಲವರಿಗೆ ತಾವು ತಿಳಿದಿದ್ದರಲ್ಲಿ ಅದೇನೋ ತಳಮಳ ಆಗುವುದೂ ಉಂಟು. ಇಂಥವರಿಗಾಗಿ ಇಂಥ ಕೃತಿಗಳು ಬೇಕೇ ಬೇಕು. ಮುಂದಿನ ವ್ಯಾಪಕವಾದ ಆಳವಾದ ಅಧ್ಯಯನಕ್ಕೆ ಇದು ಪ್ರಚೋದನೆ ನೀಡಿದರೆ ಸಾಕು. ಇಷ್ಟೇ ಇದರ ಸಾರ್ಥಕ್ಯ.

ಶ್ರೀವ್ಯಾಸರಾಜರ ಹಾಗೂ ಗುರುರಾಯರ ಗ್ರಂಥಪ್ರತಿಭೆ ನಿಜಕ್ಕೂ ವಿಸ್ಮಯ ಬರಿಸುವಂಥದ್ದು.....!!!!

ಇದಕ್ಕಿಂತಲೂ ವಿಸ್ಮಯದ ಸಂಗತಿಯೆಂದರೆ ಮಧ್ವಮತದಲ್ಲಿ ಅವತರಿಸಿದ ಇಬ್ಬರು ಸಂತರಿಂದ ಇಷ್ಟು ವ್ಯಾಪಕವಾದ ಕೊಡುಗೆ ಸಂದಿದೆ ಎನ್ನುವುದನ್ನೇ ಮರೆತು ನಮ್ಮ ಜನ ಹಾಯಾಗಿ ಕುಳಿತಿರುವುದು ........!!!!

ಇಂದು ನಾವೇನಾದರೂ ಬೇಜವಾಬುದಾರಿಗಳಾದರೆ ಮುಂದಿನ ಬುದ್ಧಿವಂತ ಪ್ರಪಂಚಕ್ಕೆ ಆಗುವ ಹಾನಿ ಹೇಳತೀರದು. ಬಹಳ ಕಷ್ಟದಿಂದ ಜತನದಿಂದ ಉಳಿಸಿ ಬೆಳೆಸಿದ ಇಂಥ ಗ್ರಂಥವೃಕ್ಷಗಳು ಲಘುಪ್ರಜ್ಞೆಯ ಪ್ರಹಾರದಿಂದ ಗಾಳಿಪಾಲಾಗುವುದರಲ್ಲಿ ಸಂದೇಹವಿನಿತಿಲ್ಲ.

ಒಟ್ಟಿನಲ್ಲಿ ಶ್ರೀವ್ಯಾಸರಾಜರ ಹಾಗೂ ಗುರುರಾಯರ ಗ್ರಂಥದ ಅಗಾಧತೆ ವಿಷಯವೈಶಾಲ್ಯ ಭಾರತೀಯ ತತ್ವಜ್ಞಾನದ ಪರಂಪರೆಯಲ್ಲೇ ಸರಿಸಾಟಿಯಿಲ್ಲದ್ದು. ಬೇರಾವ ದಾರ್ಶನಿಕರೂ ಇಷ್ಟು ಬೃಹತ್ತಾಗಿ ಇಷ್ಟೊಂದು ಸಮಗ್ರವಾಗಿ ವಿಷಯಸ್ಪರ್ಶ ಮಾಡಿದ ದಾಖಲೆಯೇ ಇಲ್ಲ. ಶ್ರೀಮದಾಚಾರ್ಯರು ಸಾಧಿಸದ ವಿಷಯವಿಲ್ಲ. ಸೃಷ್ಟಿಯ ಪ್ರಾರಂಭದಿಂದ ಪ್ರಳಯದ ತನಕ

ಪ್ರತಿನಿತ್ಯವೂ ಹೊಸ-ಹೊಸದಾಗಿ ಹುಟ್ಟಿಕೊಳ್ಳುವ ಲಕ್ಷಾಂತರ-ಕೋಟ್ಯಂತರ ಪೂರ್ವಪಕ್ಷಗಳಿಗೆಲ್ಲ ಶ್ರೀಮದಾಚಾರ್ಯರ ಸರ್ವಮೂಲಗ್ರಂಥಗಳು ಆತ್ಯಂತಿಕವಾಗಿ ಉತ್ತರಿಸುತ್ತಿವೆಯೆಂಬುದನ್ನು ಸಾಧಿಸಿ ತೋರಿಸಿದ ಧೀರರೆಂದರೆ ಶ್ರೀವ್ಯಾಸರಾಜರು. ಎಲ್ಲ ನದಿಗಳು ಸಮುದ್ರವನ್ನು ಸೇರುವಂತೆ ಶ್ರೀವ್ಯಾಸತೀರ್ಥರ ಎಲ್ಲ ಮಾತುಗಳು ಶ್ರೀಮದಾಚಾರ್ಯರ ತತ್ವಜ್ಞಾನದ ಕಡಲಲ್ಲೇ ವಿಶ್ರಾಂತಿ ಪಡೆಯುವವೆಂದು ಸಾಧಿಸಿ ತೋರಿಸಿಕೊಟ್ಟವರಲ್ಲಿ ಶ್ರೀಮಂತ್ರಾಲಯಪ್ರಭುಗಳೇ ಮೊದಲಿಗರು. ಮತ್ತು ಪ್ರಾಯಃ ಅವರೇ ಕೊನೆಯವರು ಕೂಡ.

## ಶ್ರೀಸುಬುಧೇಂದ್ರತೀರ್ಥರು ಮಾಡುತ್ತಿರುವ ಐತಿಹಾಸಿಕ ದಾಖಲೆಯ ಕಾರ್ಯವಿದು

ಇಂಥ ಮಹಾನುಭಾವಿಗಳ ಗ್ರಂಥಗಳನ್ನು ಕಳೆದುಕೊಳ್ಳುವುದೆಂದರೆ ಅವರನ್ನೇ ಕಳೆದುಕೊಂಡಂತೆ. ಕೆಲವು ಗ್ರಂಥಗಳು ಇನ್ನೇನು ಬೆಳಕು ಕಾಣದೆ ಮೂಲೆ ಸೇರುವ ಅಪಾಯದ ಸನ್ನಿವೇಶದಲ್ಲಿ, ಮಧ್ವಸಿದ್ಧಾಂತದ ತರ್ಕತಾಂಡವ ಎಂಬ ಮೈಲಿಗಲ್ಲು ಮುಚ್ಚಿಹೋಗುತ್ತಿರುವ ತುರ್ತು ಪರಿಸ್ಥಿತಿಯಲ್ಲಿ ದಿಟ್ಟತನದಿಂದ ಎದುರಾದವರೇ ಶ್ರೀಸುಬುಧೇಂದ್ರತೀರ್ಥಶ್ರೀಪಾದರು.

ತರ್ಕತಾಂಡವ ಮೂಲ ಹಾಗೂ ನ್ಯಾಯದೀಪಗ್ರಂಥದ ಸಂಸ್ಕೃತ ಮೂಲವನ್ನು ಸಂಶೋಧನೆ ಮಾಡಿಸಿ ಅನುವಾದ, ವಿವರಣೆ, ವಿಶ್ಲೇಷಣೆ, ಪ್ರಶ್ನೋತ್ತರ, ಗೋಷ್ಠಿವಿಚಾರ, ನೆನಪಿಡಿ ಮೊದಲಾದ ಅನೇಕ ಬಗೆಯಲ್ಲಿ ಅನುವಾದ ಮಾಡಿಸಿದವರು ಶ್ರೀಪಾದರು. ಮತ್ತು ನಾಮಾವಶೇಷವಾಗಿ ಉಳಿದಿರುವ ಪ್ರಾಚೀನತರ್ಕಗ್ರಂಥಗಳಾದ ನ್ಯಾಯಲೀಲಾವತಿ, ನ್ಯಾಯಕುಸುಮಾಂಜಲಿ, ಪ್ರಕಾಶ, ತತ್ವಚಿಂತಾಮಣಿ, ಇವುಗಳನ್ನು ಸಂಶೋಧನೆ ಮಾಡಿಸಿ ಅನುವಾದ ಮಾಡಿಸಿರುವರು. ಶ್ರೀಸತ್ಯನಾಥತೀರ್ಥಶ್ರೀಪಾದರು ವಿರಚಿಸಿದ ಅಭಿನವತಾಂಡವ ಗ್ರಂಥವನ್ನು ಮತ್ತಷ್ಟು ವಿವರಾತ್ಮಕವಾಗಿ ಅನುವಾದ ಮಾಡಬೇಕೆಂದು ಆಜ್ಞೆ ಮಾಡಿರುವರು.

ಶ್ರೀವಾದಿರಾಜತೀರ್ಥಶ್ರೀಪಾದರು ಸ್ವರಸವಾಗಿ ಯುಕ್ತಿಮಲ್ಲಿಕಾ ಗ್ರಂಥದಲ್ಲಿ ನಿರೂಪಣೆ ಮಾಡಿದ ಶಕ್ತಿವಾದವನ್ನು ಸೇರಿಸಿರುವರು. ಹೀಗೆ ಜಿಜ್ಞಾಸುಗಳಿಗೆ ಕಲ್ಪವೃಕ್ಷ ಕಾಮಧೇನುವಂತೆ ಈ ಕೃತಿಯ ಪ್ರಕಟಣೆಯನ್ನು ಮಾಡುತ್ತಿರುವ ಶ್ರೀಪಾದರ ಬಗ್ಗೆ ಎಷ್ಟು ಹೇಳಿದರೂ ಕಡಿಮೆ.

ಸಾವಿರಾರು ಸಾಧಕರ ಬಗೆಯಾಳದಲ್ಲಿ ಬಹುಕಾಲದಿಂದ ಹುದುಗಿದ್ದ ಬಯಕೆಗಳು ಶ್ರೀಸುಬುಧೇಂದ್ರತೀರ್ಥಶ್ರೀಪಾದರಲ್ಲಿ ಇಂದು ಮೂರ್ತಿಮತ್ತಾಗಿ ರೂಪುಗೊಂಡಿವೆ. ಯಾವುದೇ ಉಗ್ರ-ಕ್ಷುದ್ರ ವಿರೋಧಗಳಿಗೂ ಸೊಪ್ಪು ಹಾಕದೆ ಎಲ್ಲವನ್ನೂ ಧೀರತನದಿಂದ ಎದುರಿಸುತ್ತಿರುವ ಶ್ರೀಸುಬುಧೇಂದ್ರತೀರ್ಥಶ್ರೀಪಾದರು ತಮ್ಮ ಇಡಿಯ ಬದುಕನ್ನು ತತ್ವಪ್ರಸಾರಕ್ಕಾಗಿ ಮುಡುಪಾಗಿಟ್ಟವರು.

ಗಗನದಲ್ಲಿರುವ ಗ್ರಹ ನಕ್ಷತ್ರಗಳಿಂದ ನಮ್ಮ ಜೀವನದ ಉಜ್ವಲಭವಿಷ್ಯವನ್ನು ಜ್ಯೋತಿಷ್ಕರು ಆಲೋಚನೆ ಮಾಡುತ್ತಾರೆ. ಆದರೆ ನಮ್ಮ ಸಮಾಜದ ಮುಂದಿನ ಭವಿಷ್ಯವನ್ನು ಯಾವುದರಿಂದ ನಿರ್ಣಯ ಮಾಡಬೇಕು. ಯಾವ ನಕ್ಷತ್ರಗಳಿಂದ ನಮ್ಮ ವೈಷ್ಣವಪರಂಪರೆ ಹಸನ್ಮುಖಿಯಾಗಿ ಬೆಳಗಬೇಕು? ಎಂಬ ಪ್ರಶ್ನೆಗೆ ಉತ್ತರವೇ ಶ್ರೀಸುಬುಧೇಂದ್ರತೀರ್ಥಶ್ರೀಪಾದರು. ದೃಢಕಾಯರಾದ ಶ್ರೀಪಾದರ ಕಣ್ಣುಗಳೇ ಅಂಥ ನಕ್ಷತ್ರಗಳು. ಅವರ ಯೋಚನಾಲಹರಿಗಳೇ ಸುತ್ತುವ ಗ್ರಹಗಳು. ಮಿನುಗುವ ತಾರೆಗಳಂತಿರುವ ಕಾಂತಿಯುಕ್ತವಾದ ಸಾವಿರಾರು ಸದ್‌ವಿಚಾರಗಳನ್ನು ಶ್ರೀಪಾದರ ಕಣ್ಣುಗಳು ಮುಂದಿನ ಜಗತ್ತಿನ ಉಜ್ವಲ ಭವಿಷ್ಯಕ್ಕೆ ನಿರ್ಣಾಯಕಗಳು. ನಿಷ್ಠಾವಂತ, ಪ್ರಜ್ಞಾವಂತ, ಧೀಮಂತ ಯತಿಗಳ ಅನಿವಾರ್ಯತೆ ನಮ್ಮ ಸಮಾಜಕ್ಕೆ ಬಹಳ ಬೇಕಾಗಿದೆ. ಅಂಥ ಉತ್ತಮಸ್ಥಾನವನ್ನು ಯಾರು ಅಲಂಕರಿಸುತ್ತಾರೆ ? ಎಂಬ ಕುತೂಹಲದಿಂದ ಸಾವಿರಾರು ಭಕ್ತವರ್ಗಕ್ಕೆ ಶ್ರೀಪಾದರು ತಮ್ಮಲ್ಲಿರುವ ಧೀರೋದಾತ್ತಗುಣಗಳಿಂದ ಇಂದು ಎಲ್ಲರಿಗೂ ಉತ್ತರಿಸುತ್ತಿದ್ದಾರೆ.

ಶ್ರೀಪಾದರ ಕಣ್ಣುಗಳಿಂದ ಹೊರಸೂಸುತ್ತಿರುವ ರಶ್ಮಿಗಳು ನಿರಂತರ ಕ್ರಿಯಾಶೀಲತೆಯ ಮಂದಹಾಸದ ಕಾಂತಿ ಇವುಗಳು - 'ನಾನು ಯಾವುದೇ ಕಷ್ಟಗಳಿಗೆ ಹೆದರಿ ಪರಂಪರಾಗತವಾದ ಸಂಪ್ರದಾಯಗಳನ್ನು ಮುರಿಯಲಾರೆ. ಅಥವಾ ಸುಖಕ್ಕಾಗಿ ಸುಖವನ್ನೇ ವಿಷವನ್ನಾಗಿ

ಮಾಡಿಕೊಳ್ಳಲಾರೆ. ಸುಖದುಃಖಗಳನ್ನು ಸಮಾನವಾಗಿ ಕಾಣುತ್ತಾ ಜೀವನದಲ್ಲಿ ಎಲ್ಲರಿಗೂ ಆದರ್ಶವ್ಯಕ್ತಿಯಾಗಿ ಬೆಳೆದು ಕ್ರಾಂತಿಕಾರಿಯಾದ ಕೆಲಸಗಳನ್ನು ಮಾಡುತ್ತೇನೆ' ಎಂದು ಹೇಳುತ್ತಲೇ ಇರುತ್ತವೆ.

ಶ್ರೀಸುಬುಧೇಂದ್ರತೀರ್ಥರ ಮನದಲ್ಲಿ ಭಗವಂತನ ಹಾಗೂ ಶ್ರೀಮಂತ್ರಾಲಯಪ್ರಭುಗಳ ಬಗೆ-ಬಗೆಯ ಆರಾಧನೆಯ ತುಡಿತ ಮಿಡಿತಗಳಷ್ಟೇ ಹುಟ್ಟುತ್ತವೆ. ಸರ್ವಮೂಲಗ್ರಂಥ ಹಾಗೂ ಶ್ರೀಮಂತ್ರಾಲಯಪ್ರಭುಗಳು ರಚಿಸಿದ ಗ್ರಂಥಗಳೆಂಬ ದುರ್ಗಗಳಲ್ಲಿ ಶ್ರೀಪಾದರು ಎಂದೆಂದೂ ವಿರಾಜಿಸುತ್ತಿದ್ದಾರೆ. ನವನವೋನ್ಮೇಷಶಾಲಿಗಳಾದ ಇವರು ಸಂಸ್ಕೃತ, ಕನ್ನಡ, ಇಂಗ್ಲಿಷ್, ಹಿಂದಿ, ತಮಿಳು, ತೆಲಗು, ತುಳು ಎಂಬ ಏಳು ಭಾಷೆಗಳಲ್ಲಿ ಪ್ರವೀಣರಾಗಿದ್ದಾರೆ.

ಇನ್ನೂ ಯುವಕರಾದ ಶ್ರೀಪಾದರು ತಮ್ಮ ವಿಚಾರದಲ್ಲಿ ಅಗಾಧತೆಯನ್ನು ಹೊಂದಿ ಮುತ್ತು, ರತ್ನ, ವಜ್ರ, ವೈಢೂರ್ಯ, ಚಿನ್ನದಂಥ ಗುಣಗಳೆಂಬ ಸಂಪತ್ತನ್ನು ಹೇರಳವಾಗಿ ಬೆಳೆಸುತ್ತಿದ್ದಾರೆ. ರಂಜನೆಗೆ ರಾಜಿ ಮಾಡಿಕೊಳ್ಳದೆ, ಸತ್ವ, ತತ್ವ, ಸತ್ಯ, ಇವುಗಳ ವಿಷಯಗಳಲ್ಲಿ ನಿಷ್ಠುರ ಮನೋಭಾವನೆಯುಳ್ಳವರಾಗಿದ್ದರೆ.

ಕ್ಷಣಬಿಡದೆ ಸಾವಿರಾರು ಕಾರ್ಯಗಳನ್ನು ಒಟ್ಟಿಗೆ ಪೂರೈಸಬೇಕೆಂದರೆ ಕಷ್ಟಗಳಿಗೆ ಗುರಿಯಾಗಬೇಕು. ವಿಪತ್ತುಗಳಿಗೆ ತಲೆಯೊಡ್ಡುವ ಧೈರ್ಯ ಇರಬೇಕು. ಗುರಿಯಕಡೆ ಮನಸ್ಸಿಡುವ ಸ್ಥಿರತೆ ಇರಬೇಕು. ಯಾರನ್ನೂ ಒಲಿಸಿಕೊಳ್ಳುವ ನಯತೆ ಇರಬೇಕು. ಮಾತು ಮಧುರವಿರಬೇಕು. ನಡೆ ನೇರವಿರಬೇಕು. ಇಂಥ ವ್ಯಕ್ತಿ ಮಾತ್ರ ಭದ್ರವಾದ ಸಮಾಜವನ್ನು ಕಟ್ಟಲು ಸಮರ್ಥನಾಗುತ್ತಾನೆ. ಧೀರರಾದ ಶ್ರೀಪಾದರಲ್ಲಿರುವ ಇಂಥ ಅನೇಕ ಗುಣಗಳಿಂದ ಆಕರ್ಷಿತರಾದವರಲ್ಲಿ ನಾನೂ ಕೂಡ ಒಬ್ಬ.

## ವರುಷ ಮುಗಿಯಿತು

ಶ್ರೀಪಾದರ ಅಂತೇವಾಸಿತ್ವಕ್ಕೆ ನನಗೀಗ ವರುಷ ಮುಗಿಯಿತು. ಪ್ರಾರಂಭದ ದಿವಸದಿಂದ ಇಲ್ಲಿಯ ತನಕ ಒಂದು ಬಾರಿಯೂ ಲವಲೇಶ ಅವಿಶ್ವಾಸವನ್ನು ಕೂಡ ಶ್ರೀಪಾದರು ತೋರಿಸಿದವರಲ್ಲ. ದೃಢವಿಶ್ವಾಸದಿಂದ ಒಂದೇ ಧೋರಣೆಯಿಂದ ಈ ಯೋಜನೆಗಳಿಗೆಲ್ಲಾ

ಸಕಲ ಬಗೆಯ ಅನುಕೂಲಗಳನ್ನು ಮಾಡಿಕೊಡುತ್ತಿರುವರು. ಸ್ವತಃ ತಾವೇ ನಿಂತು ಎಲ್ಲಾ ಬಗೆಯ ಸಮಸ್ಯೆಗಳನ್ನು ಪರಿಹರಿಸುತ್ತಿರುವರು. ಶ್ರೀಪಾದರಲ್ಲಿರುವ ವಿಶ್ವಾಸ, ಧೈರ್ಯ, ಗುರಿಮುಟ್ಟುವ ಛಲ, ಇವೆಲ್ಲವನ್ನು ಗಮನಿಸಿ ನಾನು ಆಶ್ಚರ್ಯಚಕಿತನಾಗಿರುವೆ.

೭೦೦ ಪುಟದ ಒಂದು ಇಂಥ ಬೃಹತ್ ಕೃತಿಯನ್ನು ಮುದ್ರಿಸಿ ಹೊರತರಲು ಆರು ತಿಂಗಳು ಅನಿವಾರ್ಯ. ೫ ಮಂದಿ ಸಹಾಯಕರು ಬೇಕೇ ಬೇಕು. ಇಷ್ಟೆಲ್ಲಾ ಅನುಕೂಲಗಳಿದ್ದಾಗ ಯಾವುದೇ ರಾಜಕೀಯ ಇಲ್ಲದಿದ್ದರೆ ನಿರಾತಂಕವಾಗಿ ಆರು ತಿಂಗಳಲ್ಲಿ ಇಂಥ ಒಂದು ಸಂಪುಟವನ್ನು ಲೋಕಾರ್ಪಣೆ ಮಾಡಬಹುದು. ಆದರೆ ಒಂದು ವರುಷದಲ್ಲಿ ಈಗ ೭ ಸಂಪುಟಗಳು ಮುದ್ರಿತವಾಗಿದೆ. ಹೆಚ್ಚಿನ ಸಹಾಯಕರಿಲ್ಲ ಒಬ್ಬನೇ ವ್ಯಕ್ತಿ ಇಷ್ಟು ಅನುವಾದವನ್ನು ಮಾಡಬಹುದೇ .....!!!! ನಿಮ್ಮಂತೆ ನನಗೂ ಹಲವು ಬಾರಿ ಅಚ್ಚರಿ ಆಗಿದ್ದುಂಟು. ಇದೆಲ್ಲವೂ ಶ್ರೀಪಾದರ ಅನುಗ್ರಹಶಕ್ತಿ. ಅವರಲ್ಲಿರುವ ಪ್ರೇರಕಶಕ್ತಿ. ಮಧ್ವಸಿದ್ಧಾಂತ ದೀಕ್ಷೆ, ಗುರುರಾಯರಲ್ಲಿರುವ ಭಕ್ತಿಗಳೇ ಈ ಕಾರ್ಯಕ್ಕೆ ಮುಖ್ಯಕಾರಣ.

ಭಾವದೀಪದ ೫ ಸಂಪುಟಗಳು ಬುಭುತ್ಸುಗಳ ಕೈ ಸೇರಿದೆ. ತರ್ಕತಾಂಡವದ ಎರಡು ಸಂಪುಟಗಳು ಈಗ ಲೋಕಾರ್ಪಣೆಯಾಗುತ್ತಿವೆ. ಒಟ್ಟು ೫೦೦೦ ಪುಟಗಳ ೭ ಸಂಪುಟಗಳನ್ನು ಶ್ರೀಪಾದರು ಸಿದ್ಧಗೊಳಿಸಿರುವರು.

ಒಂದು ವರುಷದಲ್ಲಿ ನಡೆದ ಈ ಎಲ್ಲಾ ಜ್ಞಾನಕಾರ್ಯಗಳು ಶ್ರೀಪಾದರ ಅಂತರ್ಯಾಮಿಗಳಾದ ಹರಿವಾಯುಗುರುಗಳಿಗೆ ಸಮರ್ಪಿತವಾಗಲಿ. ಮುಂದಿನ ವರುಷದಲ್ಲಿ ನಡೆಯುವ ಜ್ಞಾನಕಾರ್ಯಕ್ಕಾಗಿ ಶ್ರೀಪಾದರ ಅನುಗ್ರಹ ಎಡೆ-ಬಿಡದೆ ಕಾಪಾಡಲಿ.

ಲೇಖಕ - ಬೆಮ್ಮತ್ತಿ ವೇಂಕಟೇಶಾಚಾರ್ಯ

ಬೆಂಗಳೂರು

# ಅನುಕ್ರಮಣಿಕಾ

# ತರ್ಕತಾಂಡವ

## ದ್ವಿತೀಯಪರಿಚ್ಛೇದ

## ಶಕ್ತಿವಾದ

# ಶಕ್ತಿವಾದ

## ಸಾರಾಮೃತ

## ನ್ಯಾಯಲೀಲಾವತಿಯಲ್ಲಿ ಶಕ್ತಿಯನ್ನು ಅಪಲಾಪ ಮಾಡಲಾಗಿದೆ. ಅದರ ನಿರಾಕರಣೆ ಇಲ್ಲಿದೆ

ಈ ಹಿಂದೆ ವೇದಗಳಿಗೆ ಪ್ರಾಮಾಣ್ಯವನ್ನು ಒಪ್ಪಲು ವೇದಗಳಲ್ಲಿ ಆಕಾಂಕ್ಷಾ, ಯೋಗ್ಯತಾ, ಸನ್ನಿಧಿ ಇತ್ಯಾದಿಗಳು ಇರಬೇಕು ಎಂಬ ನೈಯಾಯಿಕರ ಪ್ರಶ್ನೆಗೆ ಅಪೌರುಷೇಯವಾದ ವೇದದಲ್ಲೂ ಕೂಡ ಆಕಾಂಕ್ಷಾ, ಯೋಗ್ಯತಾ, ಸನ್ನಿಧಿ ಇವುಗಳನ್ನು ಹೊಂದಿಸಬಹುದು ಎಂದು ಉತ್ತರವನ್ನು ನೀಡಿದ್ದೇವೆ. ಹೀಗೆ ವೇದಗಳು ಪ್ರಮಾಣ ಎಂದು ನಿಶ್ಚಯವಾದ ನಂತರ ಈ ಪ್ರಮಾಣತಮವಾದ ವೇದಗಳಿಗೆ ವಿಷ್ಣುವಿನಲ್ಲೇ ಶಕ್ತಿ ಮತ್ತು ತಾತ್ಪರ್ಯ ಎಂದು ಉಪಪಾದನೆ ಮಾಡುವಾಗ ಇಲ್ಲಿ ಬಂದ ಶಕ್ತಿಯ ಬಗ್ಗೆ ನೈಯಾಯಿಕರು ಆಕ್ಷೇಪವನ್ನು ಮಾಡುತ್ತಿದ್ದಾರೆ. ವೇದಗಳಿಗೆ ವಿಷ್ಣುವಿನಲ್ಲಿ ಶಕ್ತಿ ಎಂಬುದಾಗಲೀ, ಪದಗಳಿಗೆ ಅರ್ಥದಲ್ಲಿ ಶಕ್ತಿ ಎಂಬುದಾಗಲೀ, ಶಕ್ತಿ ಎಂಬ ಅತೀಂದ್ರಿಯವಾದ ವಸ್ತುವು ಸಿದ್ಧವಾದ ನಂತರವೇ ಹೇಳಬೇಕು. ಆದರೆ ಅತೀಂದ್ರಿಯವಾದ ಶಕ್ತಿ ಎಂಬ ವಸ್ತು ಇದೆ ಎಂಬುದಕ್ಕೆ ಯಾವುದೇ ಪ್ರಮಾಣವಿಲ್ಲ ಎಂಬುದಾಗಿ ನೈಯಾಯಿಕರು ಆಕ್ಷೇಪಮಾಡುತ್ತಾರೆ.

ಯಾವುದೇ ಕಾರ್ಯವು ನಡೆಯಬೇಕಾದರೆ ಅದಕ್ಕೆ ಅನೇಕ ಕಾರಣಗಳು ಮತ್ತು ಸಹಕಾರಿಗಳು ಅಗತ್ಯವಾಗಿವೆ. ಉದಾ : ದಂಡದಿಂದ ಘಟದ ಉತ್ಪತ್ತಿಯಾಗಬೇಕಾದರೆ, ದಂಡ, ಚಕ್ರ, ಕುಲಾಲ ಇತ್ಯಾದಿ ಅನೇಕ ಕಾರಣಗಳು ಅಗತ್ಯ. ಅಥವಾ ಬೀಜದಿಂದ ಮೊಳಕೆಯು ಉತ್ಪತ್ತಿಯಾಗಬೇಕಾದರೆ ಬೀಜ, ಮಣ್ಣು, ನೀರು ಇತ್ಯಾದಿಗಳು ಅಗತ್ಯ. ಅಥವಾ ವಹ್ನಿಯಿಂದ ದಾಹವು ಉಂಟಾಗಬೇಕಾದರೆ ವಹ್ನಿ, ಕೈ ಇವುಗಳ ಸಂಯೋಗ ಇತ್ಯಾದಿಗಳು ಅಗತ್ಯ. ಈ ಎಲ್ಲ ಕಡೆ ಈ ಕಾರಣಗಳಿಂದ ಕಾರ್ಯವು ಸಂಭವಿಸಬೇಕಾದರೆ ಈ ಕಾರಣಗಳಲ್ಲಿ ಕಾರ್ಯವನ್ನು ಉಂಟುಮಾಡಲು ಅಗತ್ಯವಾದ ಒಂದು ಶಕ್ತಿಯಿದೆ ಎಂದು ಶಕ್ತಿಯನ್ನು ಒಪ್ಪುವ ಎಲ್ಲ ದಾರ್ಶನಿಕರು ಅಭಿಪ್ರಾಯಪಡುತ್ತಾರೆ. ಈ ಶಕ್ತಿಯು ಅತೀಂದ್ರಿಯವೆಂದು ಎಲ್ಲರೂ ಒಪ್ಪುತ್ತಾರೆ. ಸಾಮಾನ್ಯವಾಗಿ ಎಲ್ಲ ಕಾರಣಗಳಲ್ಲೂ ಕಾರ್ಯ ಉಂಟಾಗಲು ಅನುಕೂಲವಾದ ಶಕ್ತಿ ಇದ್ದರೂ, ಯಾವುದು ಪ್ರಧಾನಕಾರಣವೋ ಆ ಕಾರಣದಲ್ಲಿ ಶಕ್ತಿಯಿದೆ ಎಂದು ಎಲ್ಲರೂ ವ್ಯವಹಾರ ಮಾಡುತ್ತಾರೆ. ಉದಾಹರಣೆಗೆ ಅಗ್ನಿಯಿಂದ

ದಾಹವುಂಟಾಗಬೇಕಾದರೆ ಅಗ್ನಿ, ಕರತಲ ಮತ್ತು ಇವುಗಳ ಸಂಯೋಗ, ಈ ಮೂರೂ ಕಾರಣವಾಗಿದ್ದರೂ ಅಗ್ನಿಯು ಪ್ರಧಾನವಾದ ಕಾರಣವಾಗಿರುವುದರಿಂದ ಅಗ್ನಿಯಲ್ಲಿ ದಾಹಮೂಲವಾದ ಶಕ್ತಿ ಇದೆ ಎಂದು ವ್ಯವಹರಿಸುತ್ತಾರೆ. ಹಾಗೆಯೇ ದಂಡಾದಿಗಳಿಂದ ಘಟವು ಉತ್ಪತ್ತಿಯಾಗಬೇಕಾದರೆ ದಂಡದಲ್ಲಿ ಘಟವನ್ನು ಉಂಟುಮಾಡುವ ವಿಶಿಷ್ಟವಾದ ಶಕ್ತಿ ಇದೆ ಎಂದು ವ್ಯವಹಾರ ಮಾಡುತ್ತಾರೆ. ಹಾಗೆಯೇ ಬೀಜದಿಂದ ಅಂಕುರವು ಉತ್ಪತ್ತಿಯಾಗಬೇಕಾದರೆ ಬೀಜ, ಭೂಮಿ, ನೀರು ಇತ್ಯಾದಿಗಳು ಕಾರಣವಾಗಿದ್ದರೂ, ಬೀಜವು ಪ್ರಧಾನಕಾರಣವಾದುದರಿಂದ ಬೀಜವು ಅಂಕುರವನ್ನು ಉತ್ಪತ್ತಿ ಮಾಡುವ ಶಕ್ತಿವುಳ್ಳದ್ದು ಎಂದು ವ್ಯವಹಾರ ಮಾಡುತ್ತಾರೆ. ಹೀಗೆ ಈ ಎಲ್ಲ ಕಾರಣಗಳಲ್ಲಿ ಇರುವ ಶಕ್ತಿಯು ಅತೀಂದ್ರಿಯವಾದದ್ದು ಎಂದು ದಾರ್ಶನಿಕರು ಒಪ್ಪಿದರೂ, ನೈಯಾಯಿಕರು ಈ ಅತೀಂದ್ರಿಯವಾದ ಶಕ್ತಿಯನ್ನು ಒಪ್ಪುವ ಅಗತ್ಯವಿಲ್ಲ ಎಂದು ವಾದಿಸುತ್ತಾರೆ. ಕಾರಣಗಳ ಸ್ವರೂಪ ಮತ್ತು ಅವುಗಳಿಗೆ ಸಹಕಾರಿಯಾದ ವಿಷಯಗಳು ಈ ಎರಡು ಅಂಶ ಸೇರಿದರೆ ಆಗ ಕಾರ್ಯವು ಉಂಟಾಗುತ್ತದೆ ಹೊರತು ಇವುಗಳಿಗೆ ಅತಿರಿಕ್ತವಾದ ಅತೀಂದ್ರಿಯವಾದ ಶಕ್ತಿಯನ್ನು ಒಪ್ಪುವ ಅವಶ್ಯಕತೆ ಇಲ್ಲ ಎಂಬುದು ಅವರ ಅಭಿಪ್ರಾಯ.

ಈ ನೈಯಾಯಿಕರ ಆಕ್ಷೇಪವನ್ನು ಪರಿಹರಿಸಿ ಶಕ್ತಿಯನ್ನು ಸಾಧಿಸಲು ಇಲ್ಲಿ ಪ್ರಸಿದ್ಧವಾದ ಉದಾಹರಣೆಯನ್ನು ನೀಡಿದ್ದಾರೆ. ಜ್ವಲಿಸುವ ಅಗ್ನಿಯನ್ನು ಮುಟ್ಟಿದರೆ ಆಗ ಕೈಗೆ ಸುಡುವ ಅನುಭವವಾಗುತ್ತದೆ. ಕರತಲ, ಜ್ವಲಿಸುವ ಅಗ್ನಿ ಮತ್ತು ಇವುಗಳ ಅತ್ಯಂತ ಸಮೀಪದಲ್ಲಿ ಸಂಯೋಗ, ಈ ಮೂರು ಕಾರಣಗಳಿಂದ ಈ ಅನುಭವವು ಘಟಿಸುತ್ತದೆ. ಆದರೆ ಈ ಮೂರು ಕಾರಣಗಳು ಇದ್ದಾಗಲೂ ಕೈಯಲ್ಲಿ ಮಣಿಯನ್ನಾಗಲೀ, ಓಷಧವನ್ನಾಗಲೀ ಧರಿಸಿದ್ದರೆ ಅಥವಾ ಈ ಅಗ್ನಿಯು ಸುಡದಿರುವಂತೆ ಮಂತ್ರವನ್ನು ಜಪಿಸಿದರೆ ಆಗ ದಾಹವು ಉಂಟಾಗಲಾರದು. ಈ ದಾಹರೂಪವಾದ ಕಾರ್ಯವನ್ನು ಕುರಿತು ಮಂತ್ರವು ಅಥವಾ ಮಣಿಯು ಅಥವಾ ಓಷಧಿಯು ಪ್ರತಿಬಂಧಕವಾಗಿದೆ. ಪ್ರತಿಬಂಧಕವಾದ ಮಣಿ, ಮಂತ್ರ, ಓಷಧಗಳು ಇದ್ದಾಗಲೂ ಹಿಂದೆ ದಾಹವಾಗಲು ಯಾವ ಕಾರಣಗಳ ಅವಶ್ಯಕತೆ ಇತ್ತೋ, ಆ ಎಲ್ಲಾ ಕಾರಣಗಳು ಅಲ್ಲಿ ಇದ್ದೇ ಇವೆ. ಹಾಗಾಗಿ ಈ ಪ್ರತಿಬಂಧಕವಾದ ಮಣಿ ಮೊದಲಾದವುಗಳಿಂದ ಪ್ರತಿಬದ್ಧವಾದ ಒಂದು ಶಕ್ತಿ ಇದೆ ಎಂದು ಇಲ್ಲಿ ಸಿದ್ಧವಾಗುತ್ತದೆ. ಹೇಗೆಂದರೆ, ವಹ್ನಿಯಿಂದ ಕರತಲದಲ್ಲಿ ದಾಹವು ಸಂಭವಿಸಬೇಕಾದರೆ ವಹ್ನಿಯ ಸ್ವರೂಪ, ಕರತಲದ ಸ್ವರೂಪ ಇರಬೇಕು. ಇವೆರಡಕ್ಕೆ ಸಹಕಾರಿಯಾಗಿ ವಹ್ನಿ ಮತ್ತು ಕರತಲಗಳ ಅತ್ಯಂತ ಸಮೀಪದ ಸಂಯೋಗವು ಇರಬೇಕು. ಈ ಮೂರು ಸೇರಿದಾಗ ದಾಹವು ಸಂಭವಿಸುತ್ತದೆ. ಹೀಗೆ ಸ್ವರೂಪ ಮತ್ತು ಸಹಕಾರಿ ಈ ಎರಡೂ ಸರಿಯಾಗಿದ್ದರೂ ಕೈಯಲ್ಲಿ ಮಣಿಯನ್ನು ಧರಿಸಿದಾಗ ದಾಹವು ಉಂಟಾಗುವುದಿಲ್ಲ. ಇಲ್ಲಿ ಹಿಂದೆ ದಾಹವಾಗಬೇಕಾದರೆ ಇರಬೇಕಾದ ಎಲ್ಲ ವಿಷಯಗಳೂ ಇದ್ದರೂ, ಮಣಿಯ ಸಂಪರ್ಕವಿರುವುದರಿಂದ ದಾಹ ನಡೆದಿಲ್ಲ. ಹಾಗಾಗಿ ಮಣಿಯು ದಾಹವನ್ನು ಕುರಿತು ಪ್ರತಿಬಂಧಕ

ಎಂದು ಸಿದ್ಧವಾಯಿತು. ದಾಹವನ್ನು ಕುರಿತು ಮಣಿಯು ಪ್ರತಿಬಂಧಕ ಎಂದು ಸಿದ್ಧವಾದಾಗ ಮಣಿಯು ಯಾವುದನ್ನು ಪ್ರತಿಬಂಧಿಸುತ್ತದೆ ಎಂಬುದಕ್ಕೆ ಉತ್ತರವನ್ನು ಹೇಳಬೇಕಾಗುತ್ತದೆ. ಮಣಿಯು ಕರತಲವನ್ನು ತಡೆಯುವುದಿಲ್ಲ, ಅಗ್ನಿಯನ್ನೂ ತಡೆಯುವುದಿಲ್ಲ, ಸಂಯೋಗವನ್ನೂ ತಡೆಯುವುದಿಲ್ಲ. ಏಕೆಂದರೆ ಈ ಮೂರು ಅಲ್ಲಿ ಇದೆ. ಹಾಗಾಗಿ ಮಣಿಯು ಯಾವುದನ್ನು ತಡೆಯುತ್ತದೋ ಅಂತಹ ಒಂದು ವಿಶೇಷ ಧರ್ಮ ಅಗ್ನಿಯಲ್ಲಿದೆ ಎಂದು ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕು. ಹೀಗೆ ಮಣಿಯಲ್ಲಿ ವಿಶೇಷಧರ್ಮ ಯಾವುದಿದೆಯೋ ಅದೇ ಅತೀಂದ್ರಿಯವಾದ ಶಕ್ತಿ ಎಂಬುದಾಗಿ ಸಿದ್ಧವಾಗುತ್ತದೆ.

ಅದೃಷ್ಟವು ಯಾವುದೇ ಕಾರ್ಯವನ್ನು ಕುರಿತು ಸಾಕ್ಷಾತ್ಕಾರಣವಾಗುವುದಿಲ್ಲ. ಇಲ್ಲಿ ಎರಡು ವಿಷಯವನ್ನು ನಾವು ಗಮನಿಸಬೇಕು. ಯಾವ ಕಾರ್ಯವನ್ನು ಕುರಿತು ದೃಷ್ಟವಾದ ಸಾಮಗ್ರಿಗಳು ಇರುವವೋ ಅಂತಹ ಕಾರ್ಯವನ್ನು ಕುರಿತು ಅದೃಷ್ಟವು ಸಾಕ್ಷಾತ್ತಾಗಿ ಕಾರಣವಾಗುವುದಿಲ್ಲ. ಅದು ದೃಷ್ಟಸಾಮಗ್ರಿಗಳನ್ನು ಹೊಂದಿಸುವುದರಲ್ಲಿ ಮಾತ್ರ ಕಾರಣವಾಗುತ್ತದೆ. ಯಾವ ಕಾರ್ಯವನ್ನು ಕುರಿತು ದೃಷ್ಟವಾದ ಯಾವುದೇ ಸಾಮಗ್ರಿ ಇರುವುದಿಲ್ಲವೋ ಅಂತಹ ಕಾರ್ಯಕ್ಕೆ ಅದೃಷ್ಟವೇ ನೇರವಾಗಿ ಕಾರಣವಾಗುತ್ತದೆ. ಉದಾಹರಣೆ- ಘಟರೂಪ ಕಾರ್ಯವನ್ನು ಕುರಿತು ದಂಡ, ಚಕ್ರ ಇತ್ಯಾದಿಗಳು ಕಾರಣವಾಗಿವೆ. ಈ ಘಟರೂಪ ಕಾರಣದಲ್ಲಿ ಅದೃಷ್ಟವು ದಂಡಚಕ್ರಾದಿಗಳನ್ನು ಒಂದುಗೂಡಿಸುವುದರ ಮುಖೇನ ಕಾರಣವಾಗುತ್ತದೆಯೇ ಹೊರತು ನೇರವಾಗಿ ಕಾರಣವಾಗುವುದಿಲ್ಲ. ಹಾಗೆಯೇ ದಂಡ ಮತ್ತು ಚಕ್ರ ಇದನ್ನು ನಾವು ಕಾರ್ಯವೆಂದು ಸ್ವೀಕರಿಸಿದಾಗ ಈ ದಂಡವನ್ನು ಕುರಿತು ಕೂಡ ಅದೃಷ್ಟವು ನೇರವಾಗಿ ಕಾರಣವಲ್ಲ. ಈ ದಂಡಚಕ್ರಾದಿಗಳು ಉತ್ಪತ್ತಿಯಾಗಬೇಕಾದರೆ ಅದಕ್ಕೆ ದೃಷ್ಟವಾದ ಬೇರೇನೋ ಕಾರಣಗಳು ಇವೆಯೋ ಆ ಕಾರಣಗಳನ್ನು ಒಗ್ಗೂಡಿಸುವುದರಲ್ಲೇ ಅದೃಷ್ಟವು ಪರ್ಯವಸಾನವನ್ನು ಹೊಂದುತ್ತದೆ. ಈ ದಂಡಚಕ್ರಾದಿಗಳನ್ನು ಕುರಿತು ಕಾರಣವಾದ ವಸ್ತುವನ್ನು ಇಟ್ಟುಕೊಂಡಾಗಲೂ ಅಲ್ಲೂ ಅದೃಷ್ಟವು ನೇರ ಕಾರಣವಲ್ಲ, ಆ ವಸ್ತುವು ಹುಟ್ಟುವುದಕ್ಕೆ ಅಗತ್ಯವಾದ ಇನ್ನೊಂದು ದೃಷ್ಟಸಾಮಗ್ರಿಯನ್ನು ಒಟ್ಟುಗೂಡಿಸುವ ಕೆಲಸವನ್ನು ಅದೃಷ್ಟವು ಮಾಡುತ್ತದೆ. ಈ ಪರಂಪರೆ ಎಲ್ಲಿ ನಿಲ್ಲುತ್ತದೋ, ಅಂದರೆ ಸೃಷ್ಟಿಯ ಆರಂಭದಲ್ಲಿ ಬೇರಾವುದೇ ಕಾರಣ ಮತ್ತು ಕಾರ್ಯವಸ್ತುಗಳು ಇಲ್ಲದೇ ಹೋದಾಗ ಅಲ್ಲಿ ಒಂದು ವಸ್ತುವು ಉತ್ಪತ್ತಿಯಾಗಬೇಕಾದರೆ ಅದೃಷ್ಟವು ನೇರವಾಗಿ ಕಾರಣವಾಗುತ್ತದೆ. ಅಂದರೆ ದೃಷ್ಟಸಾಮಗ್ರಿಗಳ ಅವಶ್ಯಕತೆಯೇ ಇಲ್ಲದಿರುವ ಕಾರ್ಯದಲ್ಲಿ ಅದೃಷ್ಟವು ನೇರವಾಗಿ ಕಾರಣ. ಯಾವ ಕಾರ್ಯಕ್ಕೆ ದೃಷ್ಟಸಾಮಗ್ರಿ ಇದೆ ಎಂದು ತಿಳಿದಿರುತ್ತದೋ, ಅಲ್ಲಿ ಅದೃಷ್ಟವು ನೇರವಾಗಿ ಕಾರಣವಾಗುವುದಿಲ್ಲ.

# ತತ್ವಚಿಂತಾಮಣಿಯಲ್ಲಿ ಮಾಡಿದ ಶಕ್ತ್ಯಪಲಾಪ ನಿರಾಕರಣೆ

ಲೀಲಾವತಿಯಲ್ಲಿ ಶಕ್ತಿಯು ಪ್ರತ್ಯೇಕ ಪದಾರ್ಥವಲ್ಲ ಎಂದು ಸಮರ್ಥಿಸಲಾಗಿದೆ. ಆದರೆ ತತ್ವಚಿಂತಾಮಣಿಕಾರನಿಗೆ ಲೀಲಾವತಿಯಲ್ಲಿ ಹೇಳಿದ್ದು ಒಪ್ಪಿಗೆ ಯಾಗಿಲ್ಲ. ಆದ್ದರಿಂದ ಸ್ವತಃ ತಾನೇ ತನ್ನ ಗ್ರಂಥದಲ್ಲಿ ಲೀಲಾವತಿಗೆ ಅಭಿಮತವಾದ ಶಕ್ತಿಯ ನಿರಾಕರಣೆಯನ್ನು ಖಂಡನೆ ಮಾಡಿರುತ್ತಾನೆ. ಅದು ಹೀಗಿದೆ --

ಉತ್ತೇಜಕ ಹಾಗೂ ಮಣಿ ಎರಡೂ ಇದ್ದರೆ ದಾಹ ಹುಟ್ಟುವುದಿಲ್ಲ. ಏಕೆಂದರೆ ದಾಹ ಹುಟ್ಟಬೇಕೆಂದರೆ ಮಣಿ ಇರಲೇಬಾರದು. ಮತ್ತು ಉತ್ತೇಜಕವೂ ಕೂಡ ಇರಬಾರದು. ಆದ್ದರಿಂದ ಉತ್ತೇಜಕಾಭಾವವಿಶಿಷ್ಟವಾದ ಮಣ್ಯಭಾವವು ದಾಹದ ಹುಟ್ಟದಿರುವಿಕೆಗೆ ಮುಖ್ಯಕಾರಣವಾಗಿದೆ. ಹೀಗೆ ದೃಷ್ಟವಾದ ಕಾರಣದಿಂದಲೇ ದಾಹವು ಹುಟ್ಟುವುದಿಲ್ಲವೆಂದು ಸಮರ್ಥಿಸಲು ಬರುವಾಗ ಅದೃಷ್ಟವಾದ ಶಕ್ತಿಯನ್ನೇಕೆ ಒಪ್ಪಬೇಕು?

ಹೀಗೆ ತತ್ವಚಿಂತಾಮಣಿಕಾರ ಹೇಳಿದಾಗ ಇವನ ಮೇಲೆ ಒಂದು ಆಕ್ಷೇಪ ಬರುತ್ತದೆ. - ಮಣ್ಯಭಾವವು ಕಾರಣವೆನ್ನುವುದಾದರೆ ಮಣ್ಯಭಾವತ್ವ ಎಂಬ ಧರ್ಮಪುರಸ್ಸರವಾಗಿ ಕಾರಣವೋ ಪ್ರತಿಬಂಧಕಾಭಾವ ಎಂಬ ಧರ್ಮಪುರಸ್ಸರವಾಗಿ ಕಾರಣವೋ? ಮೊದಲನೆಯ ಪಕ್ಷದಲ್ಲಿ ಮಂತ್ರ ಇದ್ದಾಗ ದಾಹ ಹುಟ್ಟಬೇಕಾದೀತೆಂಬ ಅತಿಪ್ರಸಂಗ ಬರುತ್ತದೆ. ಎರಡನೆಯ ಪಕ್ಷದಲ್ಲಿ ಕಾರಣೀಭೂತವಾದ ಅಭಾವಪ್ರತಿಯೋಗಿತ್ವವೇ ಪ್ರತಿಬಂಧಕ ಎನಿಸುವುದರಿಂದ ಅನ್ಯೋನ್ಯಾಶ್ರಯದೋಷ ಬರುತ್ತದೆ. ಏಕೆಂದರೆ ಪ್ರತಿಬಂಧಕಾಭಾವ ಎಂಬ ಕಾರಣದ ಗರ್ಭದಲ್ಲಿ ಕಾರಣವೇ ಸೇರಿದೆ. ಮತ್ತು ಮಂತ್ರವಿದ್ದಾಗಲೂ ಮಣ್ಯಭಾವ ಇದೆ ಎಂಬ ಕಾರಣದಿಂದ ದಾಹವು ಹುಟ್ಟಬೇಕಾದೀತೆಂಬ ಅತಿಪ್ರಸಂಗಕ್ಕೆ ಅವಕಾಶವಿದೆ.

ಈ ದೋಷದ ಪರಿಹಾರಕ್ಕಾಗಿ ಕಾರ್ಯದ ಉತ್ಪತ್ತಿಗೆ ಒಂದೇ ಕಾರಣ ಸಾಲದು ಎಲ್ಲಾ ಕಾರಣಗಳಿರಬೇಕೆಂಬ ಪರಿಹಾರವನ್ನು ಹೇಳಬೇಕು. ಹಾಗಾದರೆ ಒಂದು ಘಟದ ಉತ್ಪತ್ತಿಯಾಗಬೇಕೆಂದರೆ ಜಗತ್ತಿನಲ್ಲಿರುವ ಎಲ್ಲಾ ದಂಡಗಳೂ ಇರಬೇಕಾದೀತೆಂಬ ಅತಿಪ್ರಸಂಗ ಬರುತ್ತದೆ. ಆದ್ದರಿಂದ ಮಣ್ಯಭಾವವನ್ನು ಹೇಗೆ ಕಾರಣವೆನ್ನುವಿರಿ?

ಈ ಆಕ್ಷೇಪವನ್ನು ತತ್ವಚಿಂತಾಮಣಿಯಲ್ಲಿ ಹೀಗೆ ಪರಿಹರಿಸಲಾಗಿದೆ -- ನಾವು ಸಕಲವಿಧವಾದ ಪ್ರತಿಬಂಧಕಗಳ ಸಂಸರ್ಗಾಭಾವಕೂಟವನ್ನು ಕಾರಣವೆನ್ನುವೆವು. ಮಣಿ, ಮಂತ್ರ ಮೊದಲಾದ ಎಲ್ಲಾ ಪ್ರತಿಬಂಧಕಗಳ ಸಂಸರ್ಗಾಭಾವದ ಸಮೂಹವನ್ನು ಕಾರಣವೆಂದು ಹೇಳಿದಾಗ ಹಿಂದಿನ ಯಾವ ದೋಷಗಳಿಗೂ ಅವಕಾಶವಿಲ್ಲ.

ಮತ್ತು ಪ್ರತಿಬಂಧಕ ಎಂದರೆ ಕಾರಣೀಭೂತಾಭಾವಪ್ರತಿಯೋಗಿತ್ವಎಂದರ್ಥವಲ್ಲ. ಕಾರ್ಯಅನುತ್ಪತ್ತಿಯಿಂದ ವ್ಯಾಪ್ಯವಾದದ್ದೆಂದರ್ಥ. ಆದ್ದರಿಂದ ಪ್ರತಿಬಂಧಕಾಭಾವವೆಂಬ ಕಾರಣಕೋಟಿಯಲ್ಲಿ ಪುನಃ ಕಾರಣತ್ವವು ಗರ್ಭಿತವಾಗಲಿಲ್ಲ. ಕಾರ್ಯಅನುತ್ಪತ್ತಿವ್ಯಾಪ್ಯತ್ವವನ್ನು ಪ್ರತಿಬಂಧಕ ಎಂದಿರುವುದರಿಂದ ಅನ್ಯೋನ್ಯಾಶ್ರಯ ದೋಷಕ್ಕೆ ಅವಕಾಶವಿಲ್ಲ. ಯಾವುದಾದರೊಂದು ಪ್ರತಿಬಂಧಕವಿದ್ದರೂ ಕೂಡ ಕಾರ್ಯ ಅನುತ್ಪತ್ತಿವ್ಯಾಪ್ಯತ್ವವೆಂಬ ಪ್ರತಿಬಂಧಕವೇ ಇದ್ದಂತಾಗುತ್ತದೆ. ತದಭಾವವನ್ನು ಹೇಳಲು ಸಾಧ್ಯವಿಲ್ಲ ಎಂಬುದು ಇದರ ಅಭಿಪ್ರಾಯ.

ಮಂತ್ರವು ದಾಹಕ್ಕೆ ಪ್ರತಿಬಂಧಕವೆಂಬ ವಿಷಯದಲ್ಲಿ ಸ್ವಲ್ಪ ಹೆಚ್ಚಿನ ವಿಚಾರವನ್ನು ತಿಳಿಯಬೇಕು. ಮಂತ್ರವು ಶಬ್ದೋಚ್ಚಾರಣ ರೂಪವಾಗಿರುವುದರಿಂದ ಧ್ವನ್ಯಾತ್ಮಕವಾದ ಈ ಶಬ್ದವು ಒಂದೇ ಕ್ಷಣದಲ್ಲಿ ಇರಲು ಸಾಧ್ಯ. ಆದರೆ ಮಂತ್ರ ಹಾಕಿದ ಅನೇಕ ಗಂಟೆಗಳ ತನಕ ಬೆಂಕಿಯು ಸುಡುವುದಿಲ್ಲ. ಇಲ್ಲಿ ಮಂತ್ರವೆಂಬ ಕಾರಣವಿದೆ ಎಂದು ಹೇಳಲು ಕೂಡ ಸಾಧ್ಯವಿಲ್ಲ. ಈ ಸಮಸ್ಯೆಯನ್ನು ಹೇಗೆ ಪರಿಹರಿಸಬೇಕು? ಎಂಬುದಕ್ಕೂ ತತ್ವಚಿಂತಾಮಣಿಯಲ್ಲಿ ಉತ್ತರವನ್ನು ನೀಡಲಾಗಿದೆ. ಕೇವಲ ಮಂತ್ರವೇ ದಾಹಕ್ಕೆ ಪ್ರತಿಬಂಧಕವಲ್ಲ ಮಂತ್ರವನ್ನು ಪ್ರಯೋಗಿಸಿದ ಯಾವ ಪುರುಷನಿದ್ದಾನೋ ಅವನ ಅಭಿಪ್ರಾಯಕ್ಕೆ ಎಷ್ಟು ಕಾಲ ವಿಷಯವಾಗಿದೆಯೋ ಅಷ್ಟು ಕಾಲ ಪ್ರತಿಬಂಧಕವೆಂದು ತಿಳಿಯಬೇಕು. ಆದ್ದರಿಂದ ಅತಿರಿಕ್ತವಾದ ಶಕ್ತಿಯೆಂಬ ಪದಾರ್ಥವನ್ನು ಒಪ್ಪುವ ಅವಶ್ಯಕತೆ ಇಲ್ಲ. ಇಷ್ಟು ತತ್ವಚಿಂತಾಮಣಿಯಲ್ಲಿ ಸಮರ್ಥಿಸಿದ ವಾದ.

## ಶಕ್ತಿಯನ್ನೊಪ್ಪಲು ಶ್ರುತಿ-ಸ್ಮೃತಿಗಳ ಆಧಾರ

ಶಕ್ತಿಯ ವಿಷಯದಲ್ಲಿ ಅನೇಕ ಶ್ರುತಿಸ್ಮೃತಿಗಳು ಆಧಾರವಾಗಿವೆ. ಪ್ರತಿಯೊಂದು ಕಾರ್ಯವು ಹುಟ್ಟುವಾಗ ಯಾವ ಕಾರಣವಿದೆಯೋ ಅದರಲ್ಲಿರುವ ಕಾರಣತ್ವವನ್ನೇ ಶಕ್ತಿಯೆಂದು ನಾವು ಕರೆಯುತ್ತೇವೆ. ಘಟಪಟಾದಿ ಪ್ರತಿಯೊಂದು ಭಾವಪದಾರ್ಥದಲ್ಲಿ ಇಂತಹ ಶಕ್ತಿಗಳು ಅನಂತವಾಗಿವೆ ಮತ್ತು ಅಚಿಂತ್ಯವಾಗಿವೆ. ಅವುಗಳನ್ನೆಲ್ಲಾ ತಿಳಿದು ಮುಗಿಸಲು ಸಾಧ್ಯವೂ ಇಲ್ಲ.

ಇದನ್ನೊಪ್ಪದ ಕೆಲವರು ಶ್ರುತಿಸ್ಮೃತಿಗಳಲ್ಲಿರುವ ಶಕ್ತಿಶಬ್ದಕ್ಕೆ ಸ್ವರೂಪ ಎಂದರ್ಥವನ್ನು ಹೇಳುತ್ತಾರೆ. ಆಗ ವ್ಯಕ್ತಿ ಹಾಗೂ ಶಕ್ತಿಗಳಿಗೆ ಭೇದಜ್ಞಾಪಕವಾದ 'ಅಸ್ಯ' ಎಂಬ ಷಷ್ಠೀವಿಭಕ್ತಿಯು ಹಾಗೂ 'ವಿಚಿತ್ರಶಕ್ತಿಃ' ಎಂಬ ಬಹುವ್ರೀಹಿಸಮಾಸವು ಅಯುಕ್ತವಾಗುತ್ತದೆ. ಮತ್ತು 'ಶಕ್ತಿಭಿಃ ಯುಕ್ತಾ' ಎಂಬುದಾಗಿ ಶ್ರುತಿಯು ಸ್ಪಷ್ಟವಾಗಿ ಶಕ್ತಿಯಿಂದ ವಸ್ತುಗಳು ಯುಕ್ತವಾಗಿವೆ ಎಂದು ಹೇಳುತ್ತಿದೆ. ವಸ್ತುಸ್ವರೂಪವೇ ಶಕ್ತಿ ಎಂದಾದಲ್ಲಿ ಈ ಎಲ್ಲ ಪ್ರಯೋಗಗಳೂ ಹೇಗೆ ತಾನೇ ಕೂಡುತ್ತವೆ?

ಶಕ್ತಿ ಎಂದರೆ ವಸ್ತುಸ್ವರೂಪವಲ್ಲ. ಆಗಂತುಕಸಹಕಾರಿ ಎಂದರ್ಥ. ಪರಮಾತ್ಮನು ಸೃಷ್ಟ್ಯಾದಿಗಳನ್ನು ಮಾಡುವಾಗ ಅನೇಕ ಆಗಂತುಕಸಹಕಾರಿಗಳನ್ನು ಅಪೇಕ್ಷಿಸುತ್ತಾನೆ. ಅವನ್ನೇ ಶ್ರುತಿಸ್ಮೃತಿಗಳು ಶಕ್ತಿ ಎಂದು ಕರೆಯುತ್ತಿವೆ. ಅಷ್ಟೇ ಹೊರತು ಶಕ್ತಿ ಎಂಬ ಪದಾರ್ಥವನ್ನು ಒಪ್ಪಲೇಬೇಕಿಲ್ಲವೆಂದು ಕೆಲವರು ವಾದಿಸುತ್ತಾರೆ. ಈ ವಾದದಲ್ಲಿ ಹುರುಳಿಲ್ಲ. ಏಕೆಂದರೆ 'ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ' ಎಂಬುದಾಗಿ ಅದೇ ಶ್ರುತಿಯು ಪರಮಾತ್ಮನು ಸೃಷ್ಟ್ಯಾದಿಗಳಲ್ಲಿ ತೊಡಗುವಾಗ ಯಾವುದೇ ಪದಾರ್ಥವನ್ನು ಅಪೇಕ್ಷಿಸುವುದಿಲ್ಲವೆಂದು ಹೇಳುತ್ತಿದೆ. ಮತ್ತು ಅವನಲ್ಲಿರುವ ಶಕ್ತಿಯು ಸ್ವಾಭಾವಿಕವಾಗಿದೆ ಮತ್ತು ಅನಾದಿನಿತ್ಯವಾಗಿದೆಯೆಂದೂ ಹೇಳುತ್ತಿದೆ. ಆಗಂತುಕಸಹಕಾರಿ ಎಂದು ಹೇಳಿದರೆ ಸ್ವಾಭಾವಿಕತ್ವವನ್ನು ಅನಾದಿನಿತ್ಯತ್ವವನ್ನೂ ಕೂಡಿಸಲು ಹೇಗೆ ಸಾಧ್ಯವಾಗುತ್ತದೆ?

ಶಕ್ತಿ ಎಂದರೆ ವ್ಯಕ್ತಿಸ್ವರೂಪವೂ ಅಲ್ಲ, ಆಗಂತುಕಸಹಕಾರಿಯೂ ಅಲ್ಲ ಪ್ರತಿಬಂಧಕಾಭಾವವೆಂದು ಇನ್ನು ಕೆಲವರು ಹೇಳುತ್ತಾರೆ. ಪ್ರತಿಬಂಧಕವಿದ್ದರೆ ವಸ್ತುವು ಹುಟ್ಟುವುದಿಲ್ಲ. ಪ್ರತಿಬಂಧಕವಿಲ್ಲದಿದ್ದರೆ ವಸ್ತುವು ಹುಟ್ಟುತ್ತದೆ. ಆದ್ದರಿಂದ ಪ್ರತಿಬಂಧಕಾಭಾವವನ್ನೇ ಶ್ರುತಿಸ್ಮೃತಿಗಳಲ್ಲಿ ಶಕ್ತಿ ಎಂದು ಕರೆಯಲಾಗಿದೆ ಹೊರತು ಪ್ರತ್ಯೇಕ ಪದಾರ್ಥವಲ್ಲ ಎಂಬುದು ಇವರ ವಾದ. ಆದರೆ ಅದೇ ಸ್ಮೃತಿಯಲ್ಲಿ 'ಭಾವಶಕ್ತಯಃ' ಎಂಬುದಾಗಿ ಭಾವರೂಪವಾದ ಶಕ್ತಿಯೆಂದು ಹೇಳಲಾಗಿದೆ. ಮತ್ತು ಅಭಾವವು ಪ್ರತ್ಯಕ್ಷಸಿದ್ಧವಾಗಿದೆ. ಆದರೆ ಶ್ರುತಿಸ್ಮೃತಿಗಳು ಶಕ್ತಿಯನ್ನು ಅತೀಂದ್ರಿಯವೆಂದು ಹೇಳುತ್ತಿವೆ. ಅಷ್ಟೇ ಅಲ್ಲದೇ ಇದು ಶಕ್ತ, ಇದು ಶಕ್ತತರ, ಇದು ಶಕ್ತತಮ ಎಂಬುದಾಗಿ ಶಕ್ತಿಯಲ್ಲಿಯೂ ತಾರತಮ್ಯವಿರುವುದು ಪ್ರತೀತವಾಗಿದೆ. ಶಕ್ತಿಯು ಪ್ರತಿಬಂಧಕಾಭಾವವಾದರೆ ಈ ತಾರತಮ್ಯವು ಕೂಡ ತಪ್ಪಾಗುತ್ತದೆ. ಆದ್ದರಿಂದ ಘಟಪಟಾದಿ ಎಲ್ಲಾ ವಸ್ತುಗಳಲ್ಲಿ ಅತಿರಿಕ್ತವಾದ ಶಕ್ತಿ ಎಂಬ ವಸ್ತುವನ್ನು ಒಪ್ಪಲೇಬೇಕು.

## ಐದು ಅರ್ಥಾಪತ್ತಿಗಳಿಂದ ಶಕ್ತಿಯ ಸಮರ್ಥನೆ

ಶಕ್ತಿಯ ವಿಷಯದಲ್ಲಿ ಶ್ರುತಿಸ್ಮೃತಿಗಳಷ್ಟೇ ಪ್ರಮಾಣಗಳಲ್ಲ. ಅರ್ಥಾಪತ್ತಿಯೂ ಪ್ರಮಾಣವಾಗಿದೆ. ಒಟ್ಟು ಐದು ಬಗೆಯಲ್ಲಿ ಅರ್ಥಾಪತ್ತಿ ಪ್ರಮಾಣವನ್ನು ಸಮರ್ಥಿಸಬಹುದು. ಮೊದಲನೆಯಅರ್ಥಾಪತ್ತಿ ಹೀಗಿದೆ -

ಅನ್ವಯವ್ಯತಿರೇಕಗಳಿಂದ ದಂಡವು ಘಟಕ್ಕೆ ಕಾರಣವಾಗಿದೆಯೆಂದು ಅನುಮಾನ ಮಾಡುತ್ತೇವೆ. ಇದಕ್ಕೆ ಪೂರ್ವವೃತ್ತಿತ್ವವನ್ನು ಲಿಂಗವೆಂದು ಪರಿಗಣಿಸಿದರೆ ರಾಸಭದಲ್ಲಿ ವ್ಯಭಿಚಾರ ಬರುತ್ತದೆ. ನಿಯತಪೂರ್ವವೃತ್ತಿತ್ವವನ್ನು ಹೇತುವನ್ನಾಗಿ ಮಾಡಿದರೆ ಮೃತ್ಪಿಂಡದಲ್ಲಿರುವ ರೂಪದಲ್ಲಿ ವ್ಯಭಿಚಾರ ಬರುತ್ತದೆ. ಆದ್ದರಿಂದ ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವರೂಪವನ್ನೇ ಲಿಂಗವೆನ್ನಬೇಕು. ಆದರೆ ಇದೇ ಪ್ರತ್ಯಕ್ಷಸಿದ್ಧವಾದ ಕಾರಣತಾ ಎನ್ನಿಸಿದೆ. ಹಾಗಾದರೆ ಕಾರಣತ್ವವೆಂಬ ಹೇತುವಿನಿಂದ ಘಟಾದಿಕಾರಣತ್ವವನ್ನು

ದಂಡದಲ್ಲಿ ಸಾಧನೆ ಮಾಡಿದಂತಾಯಿತು. ತನ್ನಿಂದಲೇ ತನ್ನನ್ನು ಅನುಮಾನ ಮಾಡಲು ಹೇಗೆ ಸಾಧ್ಯ? ಈ ಸಮಸ್ಯೆಯನ್ನು ಪರಿಹರಿಸಿಕೊಳ್ಳಬೇಕೆಂದರೆ ಶಕ್ತಿ ಎಂಬ ಅತೀಂದ್ರಿಯಪದಾರ್ಥವನ್ನು ಒಪ್ಪಿಕೊಳ್ಳಲೇ ಬೇಕು. ಪ್ರತ್ಯಕ್ಷಸಿದ್ಧವಾದ ಹೇತುವೆನಿಸಿದ ಕಾರಣತ್ವವೇ ಬೇರೆ, ದಂಡಾದಿಗಳಲ್ಲಿರುವ ಘಟಾದಿ ಕಾರಣತ್ವವೇ ಬೇರೆ. ದಂಡಾದಿಗಳಲ್ಲಿರುವ ಘಟಾದಿಕಾರಣತ್ವವು ಅತೀಂದ್ರಿಯವಾದ ಶಕ್ತಿ ಎಂದು ಕರೆಸಿಕೊಳ್ಳುತ್ತದೆ.

ದಂಡದಲ್ಲಿರುವ ಕಾರಣತಾವಚ್ಛೇದಕ ದಂಡತ್ವ. ಇದು ಸ್ವರೂಪಯೋಗ್ಯತಾರೂಪವೆಂದು ಹೇಳಲು ಸಾಧ್ಯವಿಲ್ಲ; ಪ್ರತ್ಯಕ್ಷಸಿದ್ಧವಾದುದರಿಂದ.

ಇನ್ನು ಸಹಕಾರಿಸಮವಧಾನರೂಪವಾದ ಫಲೋಪಾಧಾನರೂಪವೆಂದು ಹೇಳಬೇಕು. ಫಲೋಪಧಾನ ಎಂದರೆ ಸಕಲ ಸಹಕಾರಿಗಳ ಸಮವಧಾನರೂಪ ಎಂದರ್ಥ. ಘಟ ಹುಟ್ಟುವ ಮೊದಲು ಕಲ್ಲಿನ ಮೇಲೆ ಎಲ್ಲಾ ಬಗೆಯ ಸಹಕಾರಿಗಳ ಸಮವಧಾನ ಇದೆ. ಇದನ್ನು ಯಾರೂ ಕೂಡ ಕಾರಣತ್ವವೆಂದು ವ್ಯವಹರಿಸುವುದಿಲ್ಲ. ಇದರಂತೆ ಅನನ್ಯಥಾಸಿದ್ಧವಿಶಿಷ್ಟನಿಯಮಾವಚ್ಛೇದಕತ್ವವನ್ನು ಕಾರಣತ್ವವೆನ್ನಬೇಕು. ಇದೂ ಕೂಡ ಅನುಮೇಯವಾಗುವುದಿಲ್ಲ. ಏಕೆಂದರೆ ಅನನ್ಯಥಾಸಿದ್ಧ ನಿಯತಪೂರ್ವವೃತ್ತಿತ್ವ ಅನ್ಯೂನಾಧಿಕವೃತ್ತಿತ್ವವೇ ಹೇತುವಾಗುತ್ತದೆ. ಆಗ ಹೇತು ಮತ್ತು ಸಾಧ್ಯಗಳು ಒಂದೇ ಆಗುತ್ತವೆ.

ಈ ಸಮಸ್ಯೆಯು ಪರಿಹಾರವಾಗಬೇಕೆಂದರೆ ಅನ್ವಯವ್ಯತಿರೇಕದಿಂದ ಸಮಧಿಗಮ್ಯವಾದ ಮೃದಾದಿಗಳಲ್ಲಿರುವ ಅತೀಂದ್ರಿಯವಾದ ಘಟಾದಿಕಾರಣತ್ವವನ್ನು ಒಪ್ಪಬೇಕು. ಅದೇ ಶಕ್ತಿ ಎಂದು ಕರೆಸಿಕೊಳ್ಳುತ್ತದೆ.

## ಎರಡನೆಯ ಅರ್ಥಾಪತ್ತಿ

ಶಕ್ತಿ ಎಂಬ ಪದಾರ್ಥವನ್ನೊಪ್ಪಲು ಎರಡನೆಯ ಅನ್ಯಥಾನುಪಪತ್ತಿಪ್ರಮಾಣ ಹೀಗಿದೆ - ಜಲದಲ್ಲಿ ಪಿಪಾಸೋಪಶಾಮಕತ್ವವು ಅನುಮೇಯವಾಗಿದೆ. ಇದನ್ನು ಅನ್ಯಥಾನುಪಪತ್ತಿ ಪ್ರಮಾಣದಿಂದ ಶಕ್ತಿ ಎಂದೇ ಹೇಳಬೇಕು. ಬೇರೆ ಉಪಾಯವಿಲ್ಲ. ಅದು ಹೀಗೆ -- ನೀರನ್ನು ಕುಡಿದಾಗ ಬಾಯಾರಿಕೆಯು ಪರಿಹಾರವಾಗುತ್ತದೆ. ಜಲದಲ್ಲಿರುವ ಬಾಯಾರಿಕೆಯನ್ನು ಪರಿಹರಿಸುವ ಶಕ್ತಿಯೇ ಇದಕ್ಕೆ ಮುಖ್ಯಕಾರಣ. ಒಂದು ವೇಳೆ ಅತೀಂದ್ರಿಯವಾದ ಇಂತಹ ಶಕ್ತಿಯನ್ನು ಜಲದಲ್ಲಿ ಒಪ್ಪದಿದ್ದರೆ ಪಿಪಾಸೋಪಶಾಮಕತ್ವ ಎಂಬ ಧರ್ಮವನ್ನು ಬೇರೆ ರೀತಿಯಲ್ಲಿ ಕೂಡಿಸಲು ಸಾಧ್ಯವೇ ಆಗುವುದಿಲ್ಲ.

ಪಿಪಾಸೋಪಶಾಮಕತ್ವವನ್ನು ಫಲೋಪಧಾನವೆಂದು ವಿವಕ್ಷಿಸಿ ಅನುಮೇಯವೆಂದು ಹೇಳುವುದಾದರೆ ಬಾಧ ಹಾಗೂ ವ್ಯಭಿಚಾರ ದೋಷಗಳು ಬರುತ್ತವೆ. ಫಲೋಪಧಾನ ಎಂದರೆ ಕಾರ್ಯವನ್ನು ಹುಟ್ಟಿಸುವುದು ಎಂದರ್ಥ. ಜಗತ್ತಿನಲ್ಲಿ ಎಷ್ಟು ನೀರುಗಳಿವೆಯೋ ಅವೆಲ್ಲವೂ ಬಾಯಾರಿಕೆಯನ್ನು ಪರಿಹರಿಸುತ್ತಿವೆ ಎಂದು ಹೇಳಲು ಹೇಗೆ ಸಾಧ್ಯ? ಹಾಗೆ ಹೇಳುವುದು ಸಾಧ್ಯವಾಗಿದ್ದಲ್ಲಿ ಫಲೋಪಧಾನ ಎಂದು ವ್ಯಾಖ್ಯಾನ

ಮಾಡಬಹುದಿತ್ತು. ಮತ್ತು ಯಾವ ಜಲವು ಹುಟ್ಟಿದ ಮರುಕ್ಷಣದಲ್ಲಿಯೇ ನಾಶವನ್ನು ಹೊಂದಿದೆಯೋ ಅದರಲ್ಲಿ ಪಿಪಾಸೋಪಶಾಮಕತ್ವವನ್ನು ಹೇಳಲು ಸಾಧ್ಯವೇ ಇಲ್ಲ.

ಶಕ್ತಿಯನ್ನು ನಾವು ಒಪ್ಪುವುದಿಲ್ಲ ಹಾಗೆಂದು ಫಲೋಪಧಾನರೂಪವೆಂದು ಕೂಡ ಹೇಳಲಾರೆವು. ಪಿಪಾಸೋಪಶಮನಕಾರಣತ್ವವೆಂದು ವ್ಯಾಖ್ಯಾನ ಮಾಡುತ್ತೇವೆ. ಈಗ ಬಾಧ ಮತ್ತು ವ್ಯಭಿಚಾರದೋಷಗಳಿಗೆ ಅವಕಾಶವಿಲ್ಲ. ಏಕೆಂದರೆ ಇದು ಫಲೋಪಧಾನರೂಪವಲ್ಲದ ಕಾರಣ ನೀರು ಬಾಯಾರಿಕೆಯನ್ನು ಪರಿಹರಿಸುತ್ತದೆ ಎಂದಷ್ಟೇ ಹೊರತು ಬಾಯಾರಿಕೆಯನ್ನು ಪರಿಹರಿಸಲೇಬೇಕೆಂಬ ಅರ್ಥವನ್ನು ಹೇಳಿದಂತಾಗುವುದಿಲ್ಲ.

ಆದರೆ ಪಿಪಾಸೋಪಶಮನಕಾರಣತ್ವಂ ಎಂಬಲ್ಲಿರುವ ಕಾರಣತ್ವವೇನು? ಎಂಬ ನಮ್ಮ ಪ್ರಶ್ನೆಗೆ ನಿಮ್ಮಿಂದ ಉತ್ತರಿಸಲು ಸಾಧ್ಯವೇ ಇಲ್ಲ. 'ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವ' ಎಂದು ಹೇಳಬೇಕು. ಅಥವಾ ಸಹಕಾರಿವಿರಹಪ್ರಯುಕ್ತಕಾರ್ಯಾಭಾವತ್ವ ಎಂದು ಹೇಳಬೇಕು. ಮೊದಲನೆಯ ಪಕ್ಷವನ್ನು ಒಪ್ಪಿದರೆ ಕಾರಣತ್ವವು ಮೊದಲೇ ತಿಳಿದಂತಾಯಿತು. ವ್ಯಾಪ್ತಿಗ್ರಹದ ಮೊದಲೇ ಹೇತುವಿನ ಜ್ಞಾನವು ಇದೆಯೆಂದು ಒಪ್ಪಿಕೊಂಡಂತಾಯಿತಾದ್ದರಿಂದ ಅದನ್ನೇ ಅನುಮಾನದಿಂದ ಸಾಧಿಸಲು ಹೊರಟರೆ ಸಿದ್ಧಸಾಧನತಾದೋಷವು ಪ್ರಾಪ್ತವಾಗುತ್ತದೆ.

ಎರಡನೆಯ ಪಕ್ಷವನ್ನು ಒಪ್ಪಿದರೆ ಸಹಕಾರಿ ಎಂಬ ಶಬ್ದದ ಅರ್ಥವನ್ನು ಹೇಳುವುದೇ ನಿಮ್ಮಿಂದ ಕಷ್ಟವಾಗುತ್ತದೆ. ಸಹಕಾರಿ ಶಬ್ದಕ್ಕೆ ಸ್ವೇತರಕಾರಣತ್ವವನ್ನು ಹೇಳಿದರೆ ಕಾರಣತ್ವದ ಲಕ್ಷಣದಲ್ಲಿಯೇ ಪುನಃ ಕಾರಣತ್ವವನ್ನು ಸೇರಿಸಿದಂತಾಯಿತು. ಆಗ ಆತ್ಮಾಶ್ರಯದೋಷವು ಪ್ರಾಪ್ತವಾಯಿತು. ಮತ್ತು ಸಹಕಾರಿವಿರಹಪ್ರಯುಕ್ತ-ಕಾರ್ಯಾಭಾವಃ ಎಂಬಲ್ಲಿ ಅಭಾವಶಬ್ದಕ್ಕೆ ಪ್ರಾಗಭಾವ ಎಂದೇ ನೀವು ವ್ಯಾಖ್ಯಾನ ಮಾಡಬೇಕು. ಕಾರ್ಯಪ್ರಾಗಭಾವವು ಸಹಕಾರಿವಿರಹಪ್ರಯುಕ್ತವಾಗಿದೆ ಎಂಬುದಕ್ಕೆ ಉತ್ತರಕಾಲಸಂಬಂಧದ ಮೂಲಕ ಕಾರಣ ಎಂದು ಹೇಳಿದಂತಾಗುತ್ತದೆ. ಹೀಗೆ ಕಾರಣತ್ವದ ಲಕ್ಷಣದಲ್ಲಿಯೇ ಕಾರಣತ್ವವು ಪುನಃ ಗರ್ಭಿತವಾಗುವುದರಿಂದ ಆತ್ಮಾಶ್ರಯದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಮತ್ತು ಸಹಕಾರಿವಿರಹಪ್ರಯುಕ್ತಕಾರ್ಯಾಭಾವವತ್ವವು ಪ್ರಾಗಭಾವವೆಂಬ ಕಾರಣದಲ್ಲಿ ಹೇಗೆ ಹೇಳುತ್ತೀರಿ? ಘಟಕ್ಕೆ ದಂಡಚಕ್ರಾದಿಗಳು ಹೇಗೆ ಕಾರಣವೋ ಅದರಂತೆ ಪ್ರಾಗಭಾವವು ಕೂಡ ಕಾರಣವಾಗಿದೆ. ಕಾರಣವಾದ ಪ್ರಾಗಭಾವದಲ್ಲಿಯೇ ಕಾರಣತ್ವದ ಲಕ್ಷಣವು ಬರುತ್ತಿಲ್ಲವೆಂದು ಅವ್ಯಾಪ್ತಿದೋಷವಿದೆ.

ಆದ್ದರಿಂದ ಪಿಪಾಸೋಪಶಾಮಕತ್ವವನ್ನು ಫಲೋಪಧಾನರೂಪವೆಂದಾಗಲೀ ಪಿಪಾಸೋಪಶಮನಕಾರಣತ್ವರೂಪವೆಂದಾಗಲಿ ವ್ಯಾಖ್ಯಾನ ಮಾಡಲು ನಿಮ್ಮಿಂದ ಸಾಧ್ಯವಿಲ್ಲ. ಅನಿವಾರ್ಯವಾಗಿ ಇದೊಂದು ಶಕ್ತಿರೂಪ ಕಾರಣವೆಂದು ಒಪ್ಪಬೇಕು. ಅತೀಂದ್ರಿಯವಾದ ಶಕ್ತಿರೂಪಕಾರಣತ್ವವನ್ನು ಒಪ್ಪದೇ ಜಲದಲ್ಲಿ

ಪಿಪಾಸೋಪಶಾಮಕತ್ವವನ್ನು ಅನುಮಾನದಿಂದ ತಿಳಿಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಅತೀಂದ್ರಿಯವಾದ ಶಕ್ತಿ ಎಂಬ ಪದಾರ್ಥವು ಸಿದ್ಧವಾಯಿತು.

## ಮೂರನೆಯ ಅರ್ಥಾಪತ್ತಿ

ಶಕ್ತಿಯನ್ನು ಸಮರ್ಥನೆ ಮಾಡುವುದಕ್ಕಾಗಿ ಮೂರನೆಯ ಅರ್ಥಾಪತ್ತಿಯನ್ನು ಹೇಳುತ್ತಿದ್ದಾರೆ. ದಂಡವು ಘಟಕ್ಕೆ ಕಾರಣವೆಂದು ವ್ಯವಹರಿಸುತ್ತಾರೆ. ರಾಸಭವು ಘಟಕ್ಕೆ ಕಾರಣವಲ್ಲವೆಂದು ವ್ಯವಹರಿಸುತ್ತಾರೆ. ರಾಸಭದ ಕಾರಣತ್ವದಲ್ಲಿ ಯಾವ ಭಾಗವು ಇಲ್ಲದ್ದರಿಂದ ಕಾರಣತ್ವವಿಲ್ಲವೆಂದು ವ್ಯವಹರಿಸುತ್ತಾರೆ. ನಮ್ಮ ಸಿದ್ಧಾಂತದಲ್ಲಿ ಕಾರಣತ್ವವೇ ಶಕ್ತಿಯಾಗಿರುವುದರಿಂದ ದಂಡದಲ್ಲಿ ಶಕ್ತಿ ಇರುವುದರಿಂದ ಕಾರಣತ್ವವ್ಯವಹಾರವಿದೆ. ರಾಸಭದಲ್ಲಿ ಶಕ್ತಿ ಇಲ್ಲದ್ದರಿಂದ ಕಾರಣತ್ವ ಇಲ್ಲ ಎಂದು ವ್ಯವಹರಿಸುತ್ತಾರೆ ಎಂದು ಉತ್ತರಿಸುತ್ತೇವೆ. ಆದರೆ ತಾರ್ಕಿಕನಾದ ನೀನು 'ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವವನ್ನು ಕಾರಣ' ಎಂದು ಹೇಳುವಿ. ಆದ್ದರಿಂದ ಈ ಕಾರಣತ್ವಲಕ್ಷಣದಲ್ಲಿ ಅನನ್ಯಥಾಸಿದ್ಧತ್ವವು ರಾಸಭದಲ್ಲಿ ಇಲ್ಲವೆಂಬ ಅಭಿಪ್ರಾಯದಿಂದಲೋ? ಅಥವಾ ಪೂರ್ವವೃತ್ತಿತ್ವ ಇಲ್ಲವೆಂಬ ಅಭಿಪ್ರಾಯದಿಂದಲೋ? ನಿಯತವಾದ ಪೂರ್ವವೃತ್ತಿತ್ವ ಇಲ್ಲವೆಂಬ ಅಭಿಪ್ರಾಯದಿಂದಲೋ?

ಅನನ್ಯಥಾಸಿದ್ಧತ್ವವಿಲ್ಲವೆಂಬ ಕಾರಣದಿಂದ ರಾಸಭದಲ್ಲಿ ಕಾರಣತ್ವದ ವ್ಯವಹಾರವಿಲ್ಲವೆಂದು ಹೇಳಿದರೆ ನಿಯತಪದವೇ ವ್ಯರ್ಥವಾಗುತ್ತದೆ. ತಾರ್ಕಿಕನಾದ ನೀನು ನಿಯತಪದವನ್ನು ರಾಸಭದಲ್ಲಿ ಅತಿವ್ಯಾಪ್ತಿ ಪರಿಹಾರ ಮಾಡುವುದಕ್ಕಾಗಿ ಸಾರ್ಥಕ ಎನ್ನುವಿ. ಆದರೆ ಈಗ ಅನನ್ಯಥಾಸಿದ್ಧತ್ವವಿಶೇಷಣದಿಂದಲೇ ಅತಿವ್ಯಾಪ್ತಿಯನ್ನು ಪರಿಹರಿಸುವುದಾದರೆ ನಿಯತಪದವನ್ನು ಹೇಳುವುದು ಅನಾವಶ್ಯಕ.

ಪೂರ್ವವೃತ್ತಿತ್ವವು ರಾಸಭಕ್ಕೆ ಇಲ್ಲವೆಂದು ಹೇಳಲಾಗದು. ನಿಯತವಾದ ಪೂರ್ವವೃತ್ತಿತ್ವವೆಂದೇ ಹೇಳಬೇಕು. ಆಗ ವ್ಯಕ್ತಿಯ ವಿಶೇಷಕ್ಕೆ ರಾಸಭವಿಶೇಷವು ನಿಯತವಾಗಿ ಪೂರ್ವವೃತ್ತಿಯಾಗಿಲ್ಲ ಎಂಬ ಅಭಿಪ್ರಾಯವೋ ಅಥವಾ ಯಾವುದೇ ಘಟಕ್ಕೆ ಯಾವ ರಾಸಭವು ಕೂಡ ನಿಯತವಾಗಿ ಪೂರ್ವವೃತ್ತಿಯಾಗಿಲ್ಲ ಎಂದು ಹೇಳುವಿಯೋ? ಮೊದಲನೆಯ ಪಕ್ಷವು ತಪ್ಪು. ಏಕೆಂದರೆ ಇಂತಹ ಘಟಕ್ಕೆ ಇಂತಹ ರಾಸಭವೇ ನಿಯತವಾಗಿ ಪೂರ್ವವೃತ್ತಿಯಾಗಿಲ್ಲ ಎಂದು ಹೇಳುವುದಾದರೆ ದಂಡದಲ್ಲಿಯೂ ಕೂಡ ಕಾರಣತ್ವವು ಇಲ್ಲದಿರಬೇಕಾದೀತು. ಏಕೆಂದರೆ ಇಂತಹ ಘಟಕ್ಕೆ ಇಂತಹ ದಂಡವೇ ಕಾರಣವೆಂದು ನಿಯಮ ಮಾಡಲು ಸಾಧ್ಯವಿರುವುದಿಲ್ಲ. ಇನ್ನು ಯಾವುದೇ ಘಟಗಳಿಗೆ ಯಾವುದೇ ರಾಸಭವು ಪೂರ್ವವೃತ್ತಿಯಾಗಿಲ್ಲ ಎಂದು ಹೇಳಲಾಗದು. ಏಕೆಂದರೆ ಅನಾದಿಯಾದ ಸಂಸಾರದಲ್ಲಿ ಯಾವುದೋ ಒಂದು ಘಟಕ್ಕೆ ಯಾವುದೋ ಒಂದು ರಾಸಭವು ವ್ಯವಹಿತವಾಗಿ ಪೂರ್ವವೃತ್ತಿಯಾಗಿರಬಹುದು.

ಮತ್ತು ಕಾರಣತ್ವಲಕ್ಷಣದಲ್ಲಿ ಅವ್ಯವಹಿತತ್ವವನ್ನು ವಿಶೇಷಣವನ್ನಾಗಿ ಹೇಳಲು ಸಾಧ್ಯವಿಲ್ಲ. ಹಾಗೆ ಹೇಳಿದರೆ ಯಾಗದಲ್ಲಿ ಸ್ವರ್ಗದ ಕಾರಣತ್ವವೇ ಇಲ್ಲದಿರಬೇಕಾಗುತ್ತದೆ. ಯಾಗವು ನೇರವಾಗಿ ಸ್ವರ್ಗಕ್ಕೆ ಕಾರಣವಲ್ಲ ಅಪೂರ್ವವನ್ನು ಹುಟ್ಟಿಸುವ ಮೂಲಕ ಸ್ವರ್ಗಕ್ಕೆ ಕಾರಣವಾಗಿದೆ. ಆದ್ದರಿಂದ ವ್ಯವಹಿತವಾಗಿಯೇ ಯಾಗವು ಸ್ವರ್ಗಕ್ಕೆ ಕಾರಣವಾಗುತ್ತದೆ ಎಂದು ಹೇಳಬೇಕು. ಆದ್ದರಿಂದ ಅವ್ಯವಹಿತತ್ವವನ್ನು ಕಾರಣತ್ವಶರೀರದಲ್ಲಿ ಸೇರಿಸಲು ಸಾಧ್ಯವಿಲ್ಲ. ಹೀಗೆ ತಾರ್ಕಿಕರಿಗೆ ಕಾರಣತ್ವದ ಪರಿಷ್ಕಾರವನ್ನೇ ಸಮಂಜಸವಾಗಿ ನಿರ್ವಹಿಸಲು ಸಾಧ್ಯವಾಗುವುದಿಲ್ಲ. ಅದಕ್ಕಾಗಿ ಅತೀಂದ್ರಿಯವಾದ ಶಕ್ತಿಯನ್ನೇ ಕಾರಣತ್ವವೆಂದು ಒಪ್ಪಬೇಕು.

'ಯತ್ರ ಯತ್ರ ಶಕ್ತಿಃ ತತ್ರ ತತ್ರ ಅವ್ಯವಧಾನೇನ ಕಾರ್ಯೋತ್ಪತ್ತಿಃ' ಎಂಬ ವ್ಯಾಪ್ತಿಯನ್ನು ಹೇಳುತ್ತೇವೆ. ಉದಾಹರಣೆ - ದಂಡದಲ್ಲಿ ಘಟವನ್ನು ಹುಟ್ಟಿಸುವ ಶಕ್ತಿ ಇದೆ. ಈ ದಂಡದಲ್ಲಿ ಅವ್ಯವಹಿತತ್ವವು ಕೂಡ ಇರುತ್ತದೆ. ಇಲ್ಲಿ ಅವ್ಯವಧಾನ ಎಂದರೆ ಕಾಲಕೃತವಾದದ್ದಲ್ಲ. ಆದ್ದರಿಂದ ದಂಡವಿದ್ದ ಮಾತ್ರಕ್ಕೆ ಘಟ ಹುಟ್ಟಲಿ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಘಟ ಹುಟ್ಟುವಾಗ ಬೇರೆ ಪದಾರ್ಥಗಳು ಮಧ್ಯದಲ್ಲಿ ಅಪೇಕ್ಷಿತವಲ್ಲ ಎಂದಷ್ಟೇ ಅರ್ಥ. ಆದ್ದರಿಂದ ಯಾವ ಪದಾರ್ಥಕ್ಕೆ ಫಲ ಹುಟ್ಟಿಸುವ ಶಕ್ತಿ ಇದೆಯೋ ಆ ಎಲ್ಲಾ ಪದಾರ್ಥಗಳೂ ಕಾರ್ಯಕ್ಕೆ ಅವ್ಯವಹಿತವಾಗಿಯೇ ಕಾರಣವಾಗುತ್ತದೆ. ಮಧ್ಯದಲ್ಲಿ ಯಾವುದಾದರೂ ವ್ಯವಧಾನ ಬಂದಲ್ಲಿ ಅದು ಕಾರಣವೇ ಆಗುವುದಿಲ್ಲ ಎಂಬುದೇ ನಮ್ಮ ಸಿದ್ಧಾಂತ.

ಅನುಭವವು ಸ್ಮೃತಿಗೆ ಕಾರಣವಾಗಿದೆ. ಮಧ್ಯದಲ್ಲಿ ಸಂಸ್ಕಾರದ ವ್ಯವಧಾನವಿದೆ. ಅದರಂತೆ ಯಾಗವು ಸ್ವರ್ಗಕ್ಕೆ ಕಾರಣ ಎಂದಾಗಲು ಮಧ್ಯದಲ್ಲಿ ಅಪೂರ್ವದ ವ್ಯವಧಾನವಿದೆ. ಆದ್ದರಿಂದ 'ಯತ್ರ ಶಕ್ತಿಃ ತತ್ರ ಫಲಾವ್ಯವಧಾನಂ' ಎಂಬ ವ್ಯಾಪ್ತಿಯು ವ್ಯಭಿಚರಿತವಾಗಿತಲ್ಲವೇ?

ಎಲ್ಲಿ ಕಾರಣತ್ವವು ಪ್ರಮಿತವಾಗಿದೆಯೋ ಅಲ್ಲಿ ಫಲದ ವ್ಯವಧಾನವಿದ್ದರೆ ಅಂತಹ ಸಂದರ್ಭದಲ್ಲಿ ವ್ಯಾಪಾರದ್ವಾರಾ ಕಾರಣತ್ವವನ್ನು ಸಮರ್ಥಿಸುತ್ತೇವೆ. ಅವಾಂತರವ್ಯಾಪಾರದಿಂದ ವ್ಯಾಪಾರಿಗೆ ಅನ್ಯಥಾಸಿದ್ಧತ್ವವನ್ನು ಹೇಳಬಾರದು. ಆದ್ದರಿಂದ ಯಾಗ ಅನುಭವ ಇವುಗಳಿಗೆ ವ್ಯಾಪಾರದ್ವಾರಾ ಅವ್ಯವಧಾನವನ್ನು ಹೇಳಬೇಕು.

ತಾರ್ಕಿಕರು ಶಕ್ತಿಯನ್ನೊಪ್ಪದೇ ಪ್ರತಿಬಂಧಕಾಭಾವದಿಂದಲೇ ಶಕ್ತಿಕಾರ್ಯವನ್ನು ನಿರ್ವಹಣೆ ಮಾಡುತ್ತಾರೆ. ಆದರೆ ಕಲ್ಪನಾಗೌರವದೋಷವನ್ನು ಎದುರಿಸಬೇಕಾದ ಪರಿಸ್ಥಿತಿ ತಾರ್ಕಿಕರಿಗೆ ಇದೆ ಎಂಬುದನ್ನು ಗ್ರಂಥಕಾರರು ಇಲ್ಲಿ ತೋರಿಸುತ್ತಿದ್ದಾರೆ.

ಮಣಿ, ಮಂತ್ರ, ಓಷಧಿ ಮೊದಲಾದವುಗಳು ದಾಹಕ್ಕೆ ಪ್ರತಿಬಂಧಕವಾಗಿವೆ. ಪ್ರತಿಬಂಧಕತ್ವ ಎಂದರೆ ದಾಹಾನುಕೂಲವಾದ ಶಕ್ತಿಗೆ ವಿಘಟಕವಾಗುವುದು ಎಂಬರ್ಥವನ್ನು ನಾವು ಹೇಳುತ್ತೇವೆ. ಇದನ್ನು

ತಾರ್ಕಿಕರು ಒಪ್ಪುವುದಿಲ್ಲ. ಹೀಗೆ ಒಪ್ಪಿದರೆ ಅವರೂ ಕೂಡ ಶಕ್ತಿಯನ್ನು ಒಪ್ಪುವ ಪರಿಸ್ಥಿತಿ ಬರುತ್ತದೆ. ಅದಕ್ಕಾಗಿ ಅವರು ಕಾರಣೀಭೂತಅಭಾವಪ್ರತಿಯೋಗಿತ್ವವನ್ನು ಪ್ರತಿಬಂಧಕತ್ವವೆಂದು ಹೇಳುತ್ತಾರೆ. ಅಥವಾ ಪ್ರತಿಬಂಧಕಾಭಾವವನ್ನು ಕೂಡ ಕಾರಣವೆಂದು ಹೇಳುತ್ತಾರೆ. ಅದಕ್ಕೆ ಪ್ರತಿಯೋಗಿಯಾದದ್ದು ಪ್ರತಿಬಂಧಕತ್ವ. ಇದಕ್ಕಿಂತ ಬೇರೆಯಾದ ಪ್ರತಿಬಂಧಕತ್ವವಿರುವುದಿಲ್ಲ.

ಈಗ ಮಣಿ ಮಂತ್ರ ಓಷಧಿ ಮೊದಲಾದವುಗಳೆಲ್ಲ ಪ್ರತಿಬಂಧಕ ಆಗುವುದಾದರೆ ಮಣಿ ಮಂತ್ರ ಓಷಧಿಗಳ ಅಭಾವವು ಪ್ರತಿಬಂಧಕಾಭಾವತ್ವೇನ ಕಾರಣವಾಗುವುದಾದರೆ ಅನ್ಯೋನ್ಯಾಶ್ರಯದೋಷವು ಪ್ರಾಪ್ತವಾಗುತ್ತದೆ. ಏಕೆಂದರೆ, ಮಣ್ಯಾದಿಗಳಿಗೆ ಪ್ರತಿಬಂಧಕತ್ವವು ಸಿದ್ಧವಾದರೆ ತದಭಾವಗಳಿಗೆ ಕಾರಣತ್ವವು ಸಿದ್ಧವಾಗುತ್ತದೆ. ಮಣ್ಯಾದ್ಯಭಾವಗಳಿಗೆ ಕಾರಣತ್ವವು ಸಿದ್ಧವಾದರೆ ಇಂತಹ ಅಭಾವಗಳಿಗೆ ಪ್ರತಿಯೋಗಿಯಾದ ಮಣ್ಯಾದಿಗಳಿಗೆ ಪ್ರತಿಬಂಧಕತ್ವವು ಸಿದ್ಧವಾಗುತ್ತದೆ.

ಈ ಅನ್ಯೋನ್ಯಾಶ್ರಯದೋಷಕ್ಕೆ ಹೆದರಿದ ತತ್ವಚಿಂತಾಮಣಿಕಾರನು ಮಣ್ಯಾದ್ಯಭಾವಾದಿಗಳ ಕೂಟವೇ ದಾಹಕ್ಕೆ ಕಾರಣವೆಂದು ಹೇಳಿದ್ದಾನೆ. ಪ್ರತಿಬಂಧಕಾಭಾವತ್ವೇನ ಕಾರಣತ್ವವನ್ನು ಹೇಳಿದರೆ ಅನ್ಯೋನ್ಯಾಶ್ರಯದೋಷಕ್ಕೆ ಅವಕಾಶವಿರುತ್ತಿತ್ತು. ಆದರೆ ಈಗ ಮಣ್ಯಭಾವವು ಮಣ್ಯಭಾವತ್ವೇನ ಕಾರಣ, ಮಂತ್ರಾಭಾವವು ಮಂತ್ರಾಭಾವತ್ವೇನ ಕಾರಣ, ಓಷಧ್ಯಭಾವವು ಓಷಧ್ಯಭಾವತ್ವೇನ ಕಾರಣವಾಗಿದೆ ಹೊರತು ಪ್ರತಿಬಂಧಕಾಭಾವತ್ವೇನ ರೂಪೇಣ ಕಾರಣವಾಗಿಲ್ಲ. ಆದ್ದರಿಂದ ಅನ್ಯೋನ್ಯಾಶ್ರಯದೋಷವು ಬರುವುದಿಲ್ಲವೆಂದು ತತ್ವಚಿಂತಾಮಣಿಕಾರನ ಅಭಿಪ್ರಾಯ.

ಹೌದು; ಅನ್ಯೋನ್ಯಾಶ್ರಯದೋಷವೇನೋ ಪರಿಹಾರವಾಗಬಹುದು. ಆದರೆ, ಕಲ್ಪನಾಗೌರವದ ಕೂಪದಲ್ಲಿ ಬಿದ್ದಂತಾಯಿತು. ಅನೇಕಕಾರಣಗಳಲ್ಲಿ ಕಾರಣತಾವಚ್ಛೇದಕವೂ ಕೂಡ ಅನೇಕವಾಗುತ್ತದಲ್ಲವೇ ಎಂಬ ಕಲ್ಪನಾಗೌರವದೋಷವು ಪ್ರಾಪ್ತವಾಗುತ್ತದೆ. ಈ ದೋಷವನ್ನೂ ಕೂಡ ತತ್ವಚಿಂತಾಮಣಿಕಾರನು ಪರಿಹರಿಸಿಕೊಳ್ಳಲು ಕೂಟ ಎಂಬ ಪದವನ್ನು ಪ್ರಯೋಗಿಸಿದ್ದಾನೆ. ಎಲ್ಲಾ ಪ್ರತಿಬಂಧಕಗಳ ಅಭಾವಕೂಟವನ್ನು ಕಾರಣವೆಂದುಹೇಳುತ್ತಿದ್ದಾನೆ. ಒಂದು ವೇಳೆ ಕಾರಣವೇ ಅನೇಕವಾಗಿದ್ದರೆ ಕಾರಣತಾವಚ್ಛೇದಕವೂ ಕೂಡ ಅನೇಕವಾಗುತ್ತಿತ್ತು. ಪ್ರಕೃತ ದಾಹಕ್ಕೆ ಕಾರಣವಾದದ್ದು ಮಣ್ಯಭಾವ ಮೊದಲಾದವುಗಳನ್ನು ಪ್ರತ್ಯೇಕವಾಗಿ ಹೇಳುವುದಿಲ್ಲ; ಮಣ್ಯಾದ್ಯಭಾವಗಳ ಕೂಟವು ಕಾರಣವಾಗಿದೆ. ಒಂದು ವೇಳೆ ಕೇವಲ ಮಣಿ ಇದ್ದರೂ ಕೂಡ ಅಭಾವಗಳ ಕೂಟವನ್ನು ಹೇಳಲು ಸಾಧ್ಯವಾಗುವುದಿಲ್ಲ. ಎಷ್ಟು ಪ್ರತಿಬಂಧಕಗಳಿವೆಯೋ ಆ ಎಲ್ಲಾ ಪ್ರತಿಬಂಧಕಗಳು ಇಲ್ಲದಿದ್ದಾಗ ಮಾತ್ರ ಈ ಅಭಾವಗಳ ಕೂಟವನ್ನು ಹೇಳಲು ಸಾಧ್ಯ.

ಆದರೆ ಇಷ್ಟು ಮಾತ್ರದಿಂದ ತಾರ್ಕಿಕರಿಗೆ ದೋಷವು ಪರಿಹಾರವಾಗಲಿಲ್ಲ. ಅನನುಗತವಾದ ಅನೇಕ ಅಭಾವಗಳನ್ನು ಕಾರಣವೆಂದು ಒಪ್ಪಬೇಕಾದ ಪರಿಸ್ಥಿತಿ ಬಂದೇ ಬರುತ್ತದೆ. ಏಕೆಂದರೆ ಸಮುದಾಯವು ಸಮುದಾಯಿಗಳಿಗಿಂತ ಅಭಿನ್ನವಾಗಿದೆಯೆಂದು ತಾರ್ಕಿಕರು ಹೇಳುತ್ತಾರೆ. ನಮ್ಮ ಸಿದ್ಧಾಂತದಲ್ಲಿ ಭೇದಾಭೇದ ಒಪ್ಪಿರುವುದರಿಂದ ಕಥಂಚಿತ್ ದೋಷವು ಪರಿಹಾರವಾಗಬಹುದು. ಆದರೆ ತಾರ್ಕಿಕರು ಭೇದಾಭೇದವನ್ನು ಒಪ್ಪದೇ ಅಭೇದವನ್ನೇ ಒಪ್ಪಿರುವುದರಿಂದ ಸಮುದಾಯಿಗಳು ಅನಂತವಾಗಿರುವುದರಿಂದ ಸಮುದಾಯಗಳು ಕೂಡ ಅನಂತವಾಗುತ್ತವೆ. ಆದ್ದರಿಂದ ಸಮುದಾಯವನ್ನು ಕಾರಣವೆಂದು ಹೇಳಿದಾಗಲೂ ಪ್ರತ್ಯೇಕವಾದ ಸಮುದಾಯಗಳಿಗೆ ಕಾರಣತ್ವವನ್ನು ಹೇಳಿದಂತಾಗುತ್ತದೆ.

ಅನಂತ ಕಾರಣಗಳನ್ನು ಒಪ್ಪಿದಾಗ ಕಾರಣತಾವಚ್ಛೇದಕವನ್ನು ನಿರೂಪಣೆ ಮಾಡಲು ಬರುವುದಿಲ್ಲ. ಆದರೆ ಕಾರಣತಾವಚ್ಛೇದಕವನ್ನು ಯಾವುದೆಂದು ತಾರ್ಕಿಕನು ಹೇಳಿರುವುದೇ ಇಲ್ಲ. ಪ್ರತಿಬಂಧಕಾಭಾವತ್ವವನ್ನು ಕಾರಣತಾವಚ್ಛೇದಕವೆಂದು ಪರಿಗಣಿಸಿದರೆ ಅನ್ಯೋನ್ಯಾಶ್ರಯದೋಷವು ಪುನಃ ಬರುತ್ತದೆ. ಆದ್ದರಿಂದ ಅನಂತ ಅಭಾವಗಳಿಗೆ ಅನಂತಕಾರಣತ್ವವನ್ನು ಅನಂತವಾದ ಕಾರಣತಾವಚ್ಛೇದಕಗಳನ್ನು ಕಲ್ಪನೆ ಮಾಡಬೇಕಾಗುತ್ತದೆ. ಇಷ್ಟೆಲ್ಲಾ ಕಲ್ಪನೆ ಮಾಡುವುದಕ್ಕಿಂತ ಕೇವಲ ಶಕ್ತಿಯನ್ನು ಒಪ್ಪುವುದರಿಂದ ಲಾಘವವು ಇರುತ್ತದೆ.

ಈ ಕಲ್ಪನಾಗೌರವವನ್ನು ಪರಿಹರಿಸಲು ಶಕ್ತಿಯನ್ನು ಒಪ್ಪಬೇಕು. ಇದರಿಂದ ಕಲ್ಪನಾಗೌರವವು ಪರಿಹಾರವಾಗುವುದಷ್ಟೇ ಅಲ್ಲದೆ ಲಾಘವವನ್ನು ಕೂಡ ಸಂಪಾದನೆ ಮಾಡಿದಂತಾಗುತ್ತದೆ. ಶಕ್ತಿಯನ್ನು ಒಪ್ಪಿದಾಗ ಪ್ರತಿಬಂಧಕಾಭಾವವನ್ನು ಕಾರಣವೆಂದು ಹೇಳಿದರೂ ಸಮಸ್ಯೆಇಲ್ಲ. ಏಕೆಂದರೆ ಪ್ರತಿಬಂಧಕಾಭಾವತ್ವವನ್ನು ಕಾರಣವೆಂದು ಹೇಳಿದರೆ ಅನ್ಯೋನ್ಯಾಶ್ರಯದೋಷವು ಬರುತ್ತದೆಂದು ಹೆದರಬೇಕು. ಆದರೆ ಪ್ರತಿಬಂಧಕಾಭಾವದಲ್ಲಿ ಸೇರಿದ ಪ್ರತಿಬಂಧಕ ಶಬ್ದಕ್ಕೆ ಕಾರ್ಯಜನನಾನುಕೂಲಶಕ್ತಿವಿಘಟಕತ್ವಂ ಎಂದರ್ಥ. ಆದ್ದರಿಂದ ಅನ್ಯೋನ್ಯಾಶ್ರಯದೋಷವು ಬರುವುದಿಲ್ಲ. ಆದ್ದರಿಂದ ಶಕ್ತಿಯನ್ನು ಒಪ್ಪಿದಾಗ ಕೂಟವನ್ನು ಕಾರಣವೆಂದು ಹೇಳುವ ಅವಶ್ಯಕತೆಯೇ ಇರುವುದಿಲ್ಲ.

ಕಲ್ಪನಾಗೌರವದೋಷವನ್ನು ಸಹಿಸಿಕೊಳ್ಳುತ್ತೇನೆಂದು ತಾರ್ಕಿಕನಿಂದ ಉತ್ತರಿಸಲಾಗದು. ಏಕೆಂದರೆ ಕಲ್ಪನಾಗೌರವದೋಷವು ಬರಬಾರದೆಂದು ಹೇಳುವುದಕ್ಕಾಗಿಯೇ ತಾರ್ಕಿಕನು ಸಮವಾಯಸಂಬಂಧವನ್ನು ಒಪ್ಪಿದ್ದಾನೆ. ಅವಯವ ಅವಯವಿಗಳಿಗೆ, ಗುಣಗುಣಿಗಳಿಗೆ, ಜಾತಿವ್ಯಕ್ತಿಗಳಿಗೆ, ಕ್ರಿಯಾಕ್ರಿಯಾವತ್ವಗಳಿಗೆ ಸ್ವರೂಪಸಂಬಂಧವನ್ನೇ ಹೇಳಬಹುದು. ಸಮವಾಯಸಂಬಂಧವನ್ನು ಏಕೆ ಒಪ್ಪುವಿರಿ? ಎಂದು ನಾವು ಕೇಳಿದರೆ ತಾರ್ಕಿಕನು ಕಲ್ಪನಾಗೌರವದೋಷ ಬರುವುದರಿಂದ ಸಮವಾಯಸಂಬಂಧವನ್ನು ಒಪ್ಪುತ್ತೇನೆಂದು ಉತ್ತರಿಸುತ್ತಾನೆ. ತಂತುವಿಗೂ ಪಟಕ್ಕೂ ಸ್ವರೂಪಸಂಬಂಧವನ್ನು ಒಪ್ಪಿದಾಗ ತಂತು ಹಾಗೂ ಪಟವನ್ನೇ ಸಂಬಂಧವೆಂದು ಹೇಳಿದಂತಾಗುತ್ತದೆ. ಅದರಂತೆ ಕಪಾಲ ಹಾಗೂ ಘಟಕ್ಕೆ ಸ್ವರೂಪಸಂಬಂಧವನ್ನು ಒಪ್ಪಿದರೆ

ಆಯಾ ವ್ಯಕ್ತಿಯನ್ನೇ ಸಂಬಂಧವೆಂದು ಹೇಳಿದಂತಾಗುವುದರಿಂದ ಅನಂತಸಂಬಂಧವನ್ನು ಒಪ್ಪಿದಂತಾಗಿ ಕಲ್ಪನಾಗೌರವವು ಪ್ರಾಪ್ತವಾಗುತ್ತದೆ. ಆದ್ದರಿಂದ ಸಮವಾಯಸಂಬಂಧವನ್ನು ಒಪ್ಪಬೇಕು. ಇದು ಎಲ್ಲಾ ಸಂಬಂಧಿಗಳಲ್ಲಿ ಒಂದೇ ಆಗಿರುವುದರಿಂದ ಮತ್ತು ನಿತ್ಯವಾಗಿರುವುದರಿಂದ ಕಲ್ಪನಾಗೌರವವು ಬರುವುದಿಲ್ಲವೆಂದು ಹೇಳುತ್ತಾನೆ. ಹಾಗಾದರೆ ಸಮವಾಯಸಂಬಂಧವನ್ನು ಒಪ್ಪುವಾಗ ಕಲ್ಪನಾಗೌರವದೋಷಕ್ಕೆ ಹೆದರಿದ ನೀನು ಅನಂತ ಪ್ರತಿಬಂಧಕಾಭಾವಗಳನ್ನು ಅನಂತಕಾರಣತಾ-ವಚ್ಛೇದಕಗಳನ್ನು ಒಪ್ಪುವಾಗ ಕಲ್ಪನಾಗೌರವದ ದೋಷಕ್ಕೆ ಏಕೆ ಹೆದರುತ್ತಿಲ್ಲ?

ತಾರ್ಕಿಕನು ವಿಶಿಷ್ಟವಿರೋಧಿತ್ವವನ್ನು ಕಾರಣತಾವಚ್ಛೇದಕವೆಂದು ಹೇಳಿದನು. ಪುನಃ ಅಲ್ಲಿ ವಿಶಿಷ್ಟ ಎಂದರೇನು? ಎಂಬುದಾಗಿ ವಿಚಾರ ಮಾಡಿದರೆ ಉತ್ತೇಜಕಾಭಾವವಿಶಿಷ್ಟಪ್ರತಿಬಂಧಕತ್ವಂ ಎಂದೇ ಹೇಳಬೇಕು. ಆಗ ಪುನಃ ಅನ್ಯೋನ್ಯಾಶ್ರಯದೋಷ ಅವನಿಗೆ ತಪ್ಪಿದ್ದಲ್ಲ. ಆದಕ್ಕಾಗಿ ಈಗ ಸಮ್ಮುಗ್ಧವಾಗಿ ಹೇಳಲು ಹೊರಟಿದ್ದಾನೆ. ಉತ್ತೇಜಕಾಭಾವವಿಶಿಷ್ಟಮಣ್ಯಭಾವವು ಕಾರಣವಾಗಿದೆ ಎಂದು. ಉತ್ತೇಜಕಾಭಾವವಿಶಿಷ್ಟವಾದದ್ದು ಪ್ರತಿಬಂಧಕವೆಂದು ಹೇಳದೇ ಮಣಿ ಎಂದು ಹೇಳುತ್ತಿರುವುದರಿಂದ ಪ್ರತಿಬಂಧಕತ್ವವನ್ನು ಸೇರಿಸಿದಂತಾಗಲಿಲ್ಲ. ಆದ್ದರಿಂದ ಅನ್ಯೋನ್ಯಾಶ್ರಯದೋಷ ಬರುವುದಿಲ್ಲವೆಂದು ಅವನ ಅಭಿಪ್ರಾಯವಾಗಿದೆ. ಹೀಗೆ ಉತ್ತೇಜಕಾಭಾವವಿಶಿಷ್ಟವಾದ ಮಣ್ಯಭಾವವನ್ನು ಕಾರಣವೆಂದು ಒಪ್ಪಿ ಶಕ್ತಿಯನ್ನು ತಾರ್ಕಿಕನು ಅಪಲಾಪ ಮಾಡುತ್ತಿದ್ದಾನೆ. ಇಂತಹ ತಾರ್ಕಿಕನಿಗೆ ಅಪೂರ್ವಪ್ರತಿಬಂದಿಯ ಮೂಲಕ ಶಕ್ತಿಯನ್ನು ಸಮರ್ಥಿಸುತ್ತಿದ್ದಾರೆ.

ಒಂದು ವೇಳೆ ತಾರ್ಕಿಕರಾದ ನೀವು ಉತ್ತೇಜಕಾಭಾವವಿಶಿಷ್ಟವಾದ ಮಣ್ಯಭಾವವನ್ನು ಒಪ್ಪಿ ಶಕ್ತಿಯನ್ನು ಅಪಲಾಪ ಮಾಡುವುದಾದರೆ ಪ್ರಾಯಶ್ಚಿತ್ತಾಭಾವಸಹಕೃತಸಂಧ್ಯಾವಂದನಾದ್ಯಕರಣವೇ ನರಕಹೇತುವೆಂದು ಅಂಗೀಕರಿಸಿ ದುರಿತಾಪೂರ್ವವನ್ನೇ ಅಲ್ಲಗಳೆಯಬೇಕು. ಸಾಂಗಯಾಗಪ್ರಾಗಭಾವವಿಶಿಷ್ಟವಾದ ಆತ್ಮಾಭಾವವನ್ನೇ ಸ್ವರ್ಗಾದಿಫಲಹೇತುವೆಂದು ಒಪ್ಪಿ ಸುಕೃತಾಪೂರ್ವವನ್ನು ಕೂಡ ಅಲ್ಲಗಳೆಯಬೇಕಾದೀತು ಎಂಬುದಾಗಿ ಪ್ರತಿಬಂದಿಯನ್ನು ಹೇಳುತ್ತಿದ್ದಾರೆ.

ಇಷ್ಟೆಲ್ಲಾ ಕಲ್ಪನೆ ಮಾಡುವುದಕ್ಕಿಂತ ಅಪೂರ್ವವನ್ನು ಕಲ್ಪನೆ ಮಾಡುವುದರಲ್ಲಿ ಲಾಘವವಿದೆ ಎಂದು ತಾರ್ಕಿಕರು ಹೇಳಿದರೆ ನಾವೂ ಅದೇ ಸಮಾಧಾನವನ್ನು ತಾರ್ಕಿಕರಿಗೆ ಹೇಳುತ್ತೇವೆ. ಉತ್ತೇಜಕಾಭಾವವಿಶಿಷ್ಟ ಪ್ರತಿಬಂಧಕಾಭಾವವನ್ನು ಹೇತುವೆಂದು ಹೇಳುವುದಕ್ಕಿಂತ ಶಕ್ತಿಯನ್ನು ಒಪ್ಪುವುದರಲ್ಲಿ ಲಾಘವವಿದೆ.

ತಾರ್ಕಿಕನು ಉತ್ತಂಭಕಾಭಾವವಿಶಿಷ್ಟಪ್ರತಿಬಂಧಕಾಭಾವವೇ ದಾಹಕ್ಕೆ ಕಾರಣವೆಂದು ಹೇಳುತ್ತಿದ್ದಾನೆ. ಅವನ ಬಾಯಿಯಿಂದಲೇ ಉತ್ತರವನ್ನು ಹೇಳಿಸುವುದಕ್ಕಾಗಿ ಎರಡು ಪ್ರಧಾನವಾದ ಪ್ರತಿಬಂದಿಯನ್ನು ಗ್ರಂಥಕಾರರು ಹೇಳುತ್ತಿದ್ದಾರೆ. ದಾಹಕ್ಕೆ ಭಾವರೂಪವಾದ ಶಕ್ತಿಯು ಕಾರಣವಲ್ಲವೆಂದರೆ ಸ್ವರ್ಗಕ್ಕೆ ಅಪೂರ್ವವು

ಕಾರಣವೆಂದು ಆಗುವುದು ಬೇಡ. ಸಾಂಗಯಾಗಪ್ರಾಗಭಾವವಿಶಿಷ್ಟಾತ್ಮಧ್ವಂಸವೇ ಕಾರಣವಾಗಲಿ. ಇದರಂತೆ ಸ್ಮರಣೆಗೂ ಕೂಡ ಸಂಸ್ಕಾರವು ಕಾರಣವಾಗುವುದು ಬೇಡ. ತದನುಭವವಿಶಿಷ್ಟ ಆತ್ಮಧ್ವಂಸವೇ ಕಾರಣವಾಗಲಿ.

ಒಂದು ವೇಳೆ ಈ ಎರಡು ಸ್ಥಳಗಳಲ್ಲಿ ಒಪ್ಪಿದ ಸಾಂಗಯಾಗಪ್ರಾಗಭಾವವಿಶಿಷ್ಟ ಆತ್ಮಧ್ವಂಸವು, ತದನುಭವಪ್ರಾಗಭಾವವಿಶಿಷ್ಟ ಆತ್ಮಧ್ವಂಸವು ಗುರುಭೂತವಾಗಿದೆ ಮತ್ತು ಅಭಾವರೂಪವಾಗಿದೆ ಎಂಬ ಎರಡು ದೋಷವನ್ನು ನೀನು ಹೇಳವುದಾದರೆ ನಾವು ಕೂಡ ಇದೇ ದೋಷವನ್ನು ಹೇಳುತ್ತೇವೆ. ದಾಹಕ್ಕೆ ಶಕ್ತಿಯೆಂಬ ಭಾವಪದಾರ್ಥವನ್ನೇ ಕಾರಣವೆಂದು ಹೇಳಲು ಬರುತ್ತಿರುವಾಗ ಉತ್ತಂಭಕಾಭಾವವಿಶಿಷ್ಟ-ಪ್ರತಿಬಂಧಕಾಭಾವವು ಕಾರಣವೆಂದು ಹೇಳುವುದು ಗುರುಭೂತವಾಗಿದೆ ಮತ್ತು ಅಭಾವರೂಪವಾಗಿದೆ ಎಂದು. ಆದ್ದರಿಂದ ದಾಹಕ್ಕೆ ಶಕ್ತಿ ಎಂಬ ಅತೀಂದ್ರಿಯವಾದ ಪದಾರ್ಥವೇ ಕಾರಣ. ಯಾವಾಗ ಶಕ್ತಿಯು ಅಗ್ನಿಯಲ್ಲಿರುವುದಿಲ್ಲವೋ ಆಗ ದಾಹವು ಕೂಡ ಹುಟ್ಟುವುದಿಲ್ಲ ಎಂದೇ ಸುಲಭವಾಗಿ ಉತ್ತರಿಸಬೇಕು. ಹೀಗೆ ಎರಡು ಬಗೆಯ ಪ್ರತಿಬಂದಿಗಳಿಂದ ತಾರ್ಕಿಕರ ಮುಖದಿಂದಲೇ ಸಮಾಧಾನವನ್ನು ಹೇಳುವಂತೆ ಮಾಡಿ ಶಕ್ತಿ ಎಂಬ ಪದಾರ್ಥವನ್ನು ಸಾಧಿಸಲಾಯಿತು.

ದಾಹಕ್ಕೆ ಕಾರಣತ್ವರೂಪವಾದ ಅತೀಂದ್ರಿಯವಾದ ಶಕ್ತಿಯೇ ಕಾರಣವೆಂದು ಐದು ಪ್ರತಿಬಂದಿಗಳಿಂದ ಸಮರ್ಥನೆ ಮಾಡಿದ್ದಾಯಿತು. ಇದನ್ನು ಸಹಿಸದ ತಾರ್ಕಿಕನು ಪುನಃ ಆಕ್ಷೇಪ ಮಾಡುತ್ತಿದ್ದಾನೆ.

ಪ್ರತಿಬಂಧಕವಿದ್ದಾಗ ಅಗ್ನಿಯಲ್ಲಿ ದಾಹವು ಹುಟ್ಟದಿರಲು ಶಕ್ತಿಯ ನಾಶವನ್ನೇ ಕಾರಣವೆಂದು ಹೇಳುತ್ತೀರಿ. ಪ್ರತಿಬಂಧಕವಿಲ್ಲದಿದ್ದಾಗ ಉತ್ತೇಜಕವಿದ್ದಾಗ ಶಕ್ತಿಯು ಹುಟ್ಟುವುದರಿಂದ ದಾಹವು ಹುಟ್ಟುತ್ತದೆಂದು ಹೇಳುತ್ತೀರಿ. ಹಾಗಾದರೆ ನೀವು ಕೂಡ ನಮ್ಮಂತೆ ಅನೇಕ ಶಕ್ತಿಗಳ ಉತ್ಪತ್ತಿಯನ್ನು ಶಕ್ತಿಗಳ ನಾಶವನ್ನು ಒಪ್ಪಬೇಕಾಯಿತು. ಅಷ್ಟೇ ಅಲ್ಲದೆ ಪ್ರತಿಬಂಧಕವು ಬಂದಾಗ ಹಿಂದಿನ ಶಕ್ತಿಯು ನಾಶವಾಗುತ್ತದೆ. ಪ್ರತಿಬಂಧಕವು ಧ್ವಂಸವಾದಾಗ ಉತ್ತೇಜಕವಿದ್ದಾಗ ಶಕ್ತಿಯು ಹುಟ್ಟುತ್ತದೆಂದು ಹೇಳುತ್ತೀರಿ. ಹಾಗಾದರೆ, ಶಕ್ತಿಯ ಹುಟ್ಟುವಿಕೆಗೆ ಪ್ರತಿಬಂಧಕಧ್ವಂಸವು ಕಾರಣವೆಂದು ಹೇಳಿದಂತಾಯಿತು. ಹೀಗೆ ನಮ್ಮ ಸಿದ್ಧಾಂತವನ್ನೇ ನೀವು ಪ್ರವೇಶ ಮಾಡಿದಿರಿ.

ಹೀಗೆ ತಾರ್ಕಿಕನು ಆಕ್ಷೇಪ ಮಾಡುತ್ತಾನೆ. ಆದರೆ ನಾವು ಶಕ್ತಿಗೆ ಉತ್ಪತ್ತಿಯನ್ನಾಗಲೀ ಧ್ವಂಸವನ್ನಾಗಲೀ ಹೇಳುವುದೇ ಇಲ್ಲ. ಅಗ್ನಿಯು ಇರುವಷ್ಟು ಕಾಲ ಯಾವದ್ದ್ರವ್ಯಭಾವಿಯಾಗಿ ಅದರಲ್ಲಿ ಶಕ್ತಿ ಎಂಬ ಪದಾರ್ಥ ಇದ್ದೇ ಇರುತ್ತದೆ. ಪ್ರತಿಬಂಧಕವು ಬಂದಾಗ ಇರುವ ಶಕ್ತಿಯೇ ಕುಂಠಿತವಾಗುತ್ತದೆ ಹೊರತು ನಾಶವಾಗುವುದಿಲ್ಲ. ಅನೇಕ ದೃಷ್ಟಾಂತಗಳಿಂದ ಇದನ್ನು ಒಪ್ಪಲೇಬೇಕು.

ಕುಠಾರವಿದ್ದರೂ ಛೇದನಕ್ರಿಯೆ ಉಂಟಾಗುವುದಿಲ್ಲ; ಸಂಸ್ಕಾರವಿದ್ದರೂ ಕೆಲವೊಮ್ಮೆ ಸ್ಮರಣೆ ಬರುವುದಿಲ್ಲ; ಅನುಮಿತಿ ಹಾಗೂ ಪ್ರತ್ಯಕ್ಷ ಸಾಮಗ್ರಿಗಳಿದ್ದರೂ ಅನುಮಿತಿ ಹುಟ್ಟದೇ ಪ್ರತ್ಯಕ್ಷವೇ ಹುಟ್ಟುತ್ತದೆ; ಅನುಭವಿಸುವ

ಸುಕೃತಾಪೂರ್ವವಿದ್ದರೂ ಅನುಭವಿಸಲು ಸಾಧ್ಯವಾಗುವುದಿಲ್ಲ. ಹೀಗೆ ಅನೇಕ ದೃಷ್ಟಾಂತಗಳನ್ನು ಲೋಕದಲ್ಲಿ ಕಂಡಿದ್ದೇವೆ. ಇದಕ್ಕೆಲ್ಲಾ ಏನು ಕಾರಣ? ಎಂದು ಪ್ರಶ್ನಿಸಿದರೆ ಇರುವ ಶಕ್ತಿಯೇ ಕುಂಠಿತವಾಗಿದೆ ಎಂದು ಹೇಳಬೇಕು. ಯಾವಾಗ ಶಕ್ತಿಯು ಕುಂಠಿತವಾಗುತ್ತದೋ ಆಗಾಗ ಕಾರ್ಯವು ಹುಟ್ಟುವುದಿಲ್ಲ. ಆದ್ದರಿಂದ ಶಕ್ತಿಯ ಧ್ವಂಸವನ್ನಾಗಲೀ ಉತ್ಪತ್ತಿಯನ್ನಾಗಲೀ ನಾವು ಒಪ್ಪುವುದಿಲ್ಲ.

## ನಾಕನೆಯ ಹಾಗೂ ಐದನೆಯ ಅರ್ಥಾಪತ್ತಿ

ಪ್ರತಿಬಂಧಕತ್ವಾನ್ಯಥಾನುಪಪತ್ತಿಯಿಂದ ಶಕ್ತಿಯು ಸಿದ್ಧವಾಗುತ್ತದೆ. ಅದು ಹೀಗೆ - ಮುಂದೆ ತಾರ್ಕಿಕನು ನಾಲ್ಕು ಪಕ್ಷಗಳನ್ನು ಹೇಳುವ ಮೂಲಕ ದಾಹಕ್ಕೆ ಯಾವುದು ಕಾರಣ? ಎಂಬುದನ್ನು ವಿಚಾರ ಮಾಡಿದ್ದಾನೆ. ವಿಶಿಷ್ಟವನ್ನು ಪದಾರ್ಥಾಂತರವೆಂದು ತಾರ್ಕಿಕನು ಒಪ್ಪುವುದಿಲ್ಲ. ಇಂತಹ ವಿಶಿಷ್ಟಾಭಾವವನ್ನು ಕಾರಣವೆಂದು ಹೇಳಿದಾಗ ಮಾತ್ರ ಅನುಗಮ ಮತ್ತು ಕಾರಣತ್ವವು ಸಿದ್ಧವಾಗುತ್ತದೆ. ಆದರೂ ಕೂಡ ಶಕ್ತಿಯನ್ನು ತಾರ್ಕಿಕನು ಒಪ್ಪಿಕೊಳ್ಳಲೇ ಬೇಕು. ಲೋಕದಲ್ಲಿ ಪ್ರತಿಬಂಧಕತ್ವ ಎಂದರೆ ಕಾರ್ಯಾನುಕೂಲಕಿಂಚಿದ್ಧರ್ಮ-ವಿಘಟಕತ್ವವೆಂಬರ್ಥವೇ ಪ್ರಸಿದ್ಧವಾಗಿದೆ. ಕಾರ್ಯಾನುಕೂಲಕಿಂಚಿದ್ಧರ್ಮವಿಘಟಕತ್ವ ಎಂದರೆ ಅದು ಶಕ್ತಿಯೇ ಆಗಬೇಕು. ಆದ್ದರಿಂದ ಪ್ರತಿಬಂಧಕತ್ವಾನ್ಯಥಾನುಪಪತ್ತಿಯಿಂದ ಶಕ್ತಿ ಎಂಬ ಪದಾರ್ಥವನ್ನು ತಾರ್ಕಿಕನು ಒಪ್ಪಿಕೊಳ್ಳಲೇಬೇಕು. ಮಣಿಯು ಕಾರ್ಯವಿಘಟನರೂಪವಾಗಿರುವುದರಿಂದ ಪ್ರತಿಬಂಧವಾಗುತ್ತದೆಯೇ ಹೊರತು ಪ್ರತಿಬಂಧಕವಾಗುವುದಿಲ್ಲ. ತತ್ಪ್ರಯೋಕ್ತೃವಾದ ಪುರುಷನಷ್ಟೇ ಪ್ರತಿಬಂಧಕನಾಗುತ್ತಾನೆ. ಹೀಗಿರುವಾಗ ಮಣಿಯನ್ನು ಪ್ರತಿಬಂಧಕವೆಂದು ಹೇಗೆ ಕರೆಯುತ್ತೀರಿ? ಔಪಚಾರಿಕವಾಗಿ ಪ್ರತಿಬಂಧಕವೆನ್ನಬೇಕು. ಅಥವಾ ಸ್ವಾರ್ಥದಲ್ಲಿ ಅಕಪ್ರತ್ಯಯವನ್ನು ವಿವಕ್ಷಿಸಿದಾಗ ಮಾತ್ರ ಮಣಿಯನ್ನು ಪ್ರತಿಬಂಧಕವೆನ್ನಲು ಸಾಧ್ಯವಲ್ಲವೇ?

ಹಾಗೇನಿಲ್ಲ. ಮುಖ್ಯಾರ್ಥದಲ್ಲಿಯೇ ಮಣಿಯನ್ನು ಪ್ರತಿಬಂಧಕ ಎನ್ನಬಹುದು. ರಥಃ ಗಚ್ಛತಿ, ವೃಕ್ಷಃ ತಿಷ್ಠತಿ ಎಂಬುದಾಗಿ ಜಡಪದಾರ್ಥದಲ್ಲಿಯೇ ಕ್ರಿಯಾಶ್ರಯತ್ವರೂಪವಾದ ಕರ್ತೃತ್ವದ ಪ್ರಯೋಗವಿದೆ. ಮತ್ತು ಮಣಿನಾ ಪ್ರತಿಬದ್ಧಃ ಎಂಬ ವ್ಯವಹಾರಕ್ಕೆ ಅನುಸಾರಿಯಾಗಿ ಮಣಿಃ ಪ್ರತಿಬಂಧಕಃ ಎಂಬಲ್ಲಿಯೂ ಕರ್ತರ್ಥದಲ್ಲಿರುವ ಅಕ ಪ್ರತ್ಯಯವನ್ನೇ ವಿವಕ್ಷಿಸಬೇಕು. ಆದ್ದರಿಂದ ಸ್ವಾರ್ಥದಲ್ಲಿ ಅಕಪ್ರತ್ಯಯವನ್ನು ಆಶ್ರಯಿಸುವ ಅವಶ್ಯಕತೆ ಇರುವುದಿಲ್ಲ. ಸಾರಾಮೃತ

ಮಣಿಯು ದಾಹಕ್ಕೆ ಪ್ರತಿಬಂಧಕವೆಂದು ಲೋಕದಲ್ಲಿ ಎಲ್ಲರೂ ತಿಳಿದಿದ್ದಾರೆ. ಈಗ ತಾರ್ಕಿಕರ ಪ್ರಕಾರ ಮಣಿಯು ಪ್ರತಿಬಂಧಕವಲ್ಲ; ಕಾರಣಾಭಾವ ಎಂದು ಹೇಳಿದಂತಾಗುತ್ತದೆ. ಏಕೆಂದರೆ ತಾರ್ಕಿಕನು ಮಣ್ಯಭಾವವು

ದಾಹಕ್ಕೆ ಕಾರಣವೆನ್ನುತ್ತಾನೆ. ಆಗ ಮಣಿಯು ಕಾರಣಾಭಾವರೂಪವಾಯಿತು. ಏಕೆಂದರೆ ಮಣ್ಯಭಾವವು ಕಾರಣವೆಂದ ಮೇಲೆ ಮಣ್ಯಭಾವಾಭಾವವು ಕಾರಣಾಭಾವವೆಂದಾಯಿತು. ಮಣ್ಯಭಾವಾಭಾವವು ಮಣಿಸ್ವರೂಪವಾದ್ದರಿಂದ ಮಣಿಯು ಪ್ರತಿಬಂಧಕವೆಂದು ಹೇಳಲು ಹೇಗೆ ಸಾಧ್ಯವಾಗುತ್ತದೆ?

ಲೋಕದಲ್ಲಿದಂಡಾಭಾವವನ್ನು ಕಾರಣಾಭಾವವೆಂದು ಎಲ್ಲರೂ ಕರೆಯುತ್ತಾರೆ. ಹೊರತು ಪ್ರತಿಬಂಧಕವೆಂದು ಯಾರೂ ಕರೆಯುವುದಿಲ್ಲ. ಈಗ ದಾಹಕ್ಕೆ ಮಣ್ಯಭಾವವು ಕಾರಣವೆಂದು ಹೇಳುವುದಾದರೆ ಘಟಕ್ಕೆ ದಂಡಾಭಾವವು ಕೂಡ ಪ್ರತಿಬಂಧಕ ಎಂದೇ ಕರೆಯಬೇಕಾದೀತು.

ಮತ್ತು ವಿಹಿತವಾದ ಸಂಧ್ಯಾವಂದನೆ ಮೊದಲಾದವುಗಳ ಆಚರಣೆಯನ್ನು ಪ್ರತ್ಯವಾಯಕ್ಕೆ ಪ್ರತಿಬಂಧಕವೆಂದು ಲೋಕದಲ್ಲಿ ಯಾರೂ ಕರೆಯುವುದಿಲ್ಲ. ಈಗ ನಿನ್ನ ಪ್ರಕಾರ ಪ್ರತ್ಯವಾಯಕ್ಕೆ ಕಾರಣವಾದ ವಿಹಿತ ಅಕರಣದ ಅಭಾವರೂಪವಾಗಿರುವುದರಿಂದ ವಿಹಿತಕರಣವು ಪ್ರತಿಬಂಧಕ ಎಂದಾಗಬೇಕಾಗುತ್ತದೆ. ಆದ್ದರಿಂದ ನಿನಗೆ ಅಭಿಮತವಾದ ಪ್ರತಿಬಂಧಕತ್ವವನ್ನು ಒಪ್ಪಬೇಕೆಂದರೂ ಕೂಡ ಶಕ್ತಿಯನ್ನು ಒಪ್ಪದೇ ಬೇರೆ ಮಾರ್ಗವಿಲ್ಲ. ಹಾಗಾಗಿ ನೀನು ಶಕ್ತಿಯನ್ನು ಅಂಗೀಕಾರ ಮಾಡಲೇಬೇಕು.

ಒಟ್ಟು ಇಲ್ಲಿಯ ತನಕ ಐದು ಬಗೆಯ ಅನ್ಯಥಾನುಪಪತ್ತಿಗಳನ್ನು ಸಮರ್ಥಿಸಿದಂತಾಯಿತು.

श्रीमद्धनुमद्भीममध्वान्तर्गतनरहरिरामकृष्णवेदव्यासाय नमः

# तर्कताण्डवम्

## द्वितीयपरिच्छेदः

अथ शक्तिवादः ।।

**तर्कताण्डवम् – ननु – स्वरूपसहकार्यातिरिक्तशक्तौ मानं नेति चेन्न । यादृशात् कारतलानलसंयोगाद् दाहो जायते तादृशादेव मण्यादिसमवधाने न जायत इति मण्यादिविघटनीयशक्तिसिद्धेः । तत्र दृष्टसामग्र्याः सत्वेन तद्विलम्बेन वा तत्सम्पादकादृष्टविलम्बेन वा दाहविलम्बायोगात् ।।**

न्यायदीपः – विष्णावेव शक्तितात्पर्ये इत्युक्तम् । अतीन्द्रियशक्तावेव मानाभावादिति भावेन लिङ्गपादे 'अत्ताचराचरग्रहणा'दित्यधिकरण सुधायां ''स्वरूपसहकारिसमवधानातिरिक्तशक्तिरेव नास्तीति केचिदि''त्यादिना ''आस्तां प्रपञ्चः'' इत्यन्तेन संक्षेपेण शक्तिसमर्थनं कृतं, तत्स्पष्टं विवृण्वानः शक्तिमाक्षिप्य समाधत्ते – स्वरूपेत्यादिना ।। शब्दादिस्वरूपतत्सहकारिभ्यामन्यश क्ताविनत्यर्थः ।।

(क्वचिदेव शक्तिसिद्धौ) क्वचिदतीन्द्रियशक्तिसिद्धौ शब्दे सा सेत्स्यतीति भावेनोपपादनसौकर्याय प्रसिद्धवह्नौ तावत् साधयति – यादृशेति ।।

दाहाभावस्य कारणवैकल्यनिमित्तकत्वशङ्काव्युदासायोक्तं यादृशात्तादृशादेवेति।। **न जायत इति** ।। दाह इत्यनुषङ्गः । एतेन मण्यादेर्दाहादिप्रतिबन्धकत्वं प्राप्तं, ततः किमित्यत आह – **इति मण्यादीति** ।। इतिशब्दो हेत्वर्थः ।

मण्यादेः प्रतिबन्धकत्वान्यथानुपपत्तिरेव वह्न्यादिगतातीन्द्रिय शक्तौ मानम् । कार्यानुकूलकिञ्चिद्धर्मविघटकत्वरूपत्वात्प्रतिबन्धकत्वस्य कार्यानुकूलकिञ्चिद्धर्मश्च शक्तेरन्यो न युक्त इति भावः । एतच्चोपलक्षणम् । वक्ष्यमाणार्थपञ्चकेनापीत्यपि ध्येयम् ।।

ननु – मण्यादेः प्रतिबन्धकत्वमेवासिद्धम् । मण्यादिसन्निधिस्थले दाहाभावस्य दाहसामग्र्यभावेन वा दाहसामग्रीसम्पादकादृष्टाभावेनोपपत्तेरित्यतस्ता-दृशादेवेत्युक्तिकृत्यं व्यञ्जयन् प्रतिबन्धकत्वं तावद्-धृढयति – **तत्रेति** ।। मण्यादिसन्निधिस्थल इत्यर्थः ।।

**तर्कताण्डवम् – न च दृष्टसामग्र्याः सत्वेपि मणिरेव साक्षाद्दाह-जनकमदृष्टं नाशयतीति वाच्यम् ।**

न्यायदीपः – नन्वस्त्वेवं मण्यादेः प्रतिबन्धकत्वं तथापि साक्षाद्दाहजनकादृष्ट-नाशकत्वेन वा दाहप्रतिकूलदुरदृष्टजनकत्वेन वा स्वाभावरूपदाहकारण-विघटकत्वेन वा, मण्यादेः प्रतिबन्धकत्वोपपत्तौ न तदन्यथानुपपत्त्याऽतीन्द्रिय-शक्तिसिद्धिरित्यतः आद्यं तावदशङ्क्य निराह – **न च दृष्टेति** ।।

**तर्कताण्डवम् – तादृशादृष्टे मानाभावात् । अन्यथान्त्यतन्तुसंयोगादौ सत्यपि कदाचित्पटानुत्पत्तिः स्यात् ।**

ಹೇಳಿರುವುದರಿಂದ ನರಕಾದಿ ಅನರ್ಥಗಳಿಗೆ ಕಾರಣವಾದ ಎಲ್ಲಾ ದಾರ್ಶನಿಕರು ಒಪ್ಪಿರುವ ದುರಿತವನ್ನು ಅವಶ್ಯವಾಗಿ ಅಂಗೀಕಾರ ಮಾಡಲೇಬೇಕು. ಹಾಗಾಗಿ ಸಾಕ್ಷಾಜ್ಜನಕಾದೃಷ್ಟದಲ್ಲಿ ವಿಲಂಬದಲ್ಲಿ ಅಂತಹ ಒಂದು ಅದೃಷ್ಟವನ್ನು ಒಪ್ಪಿ ಅದರ ವಿಳಂಬವನ್ನು ಹೇಳದ ಪ್ರತಿಬಂಧಕವಾಗಿ ದುರಿತರೂಪವಾದ ಅದೃಷ್ಟವಿದೆ ಎಂದು ಒಪ್ಪುವುದೇ ಸೂಕ್ತ.

ಪ್ರಶ್ನೆ - ದುರಿತಾದೃಷ್ಟವು ಪ್ರತಿಬಂಧಕ ಎಂದು ಒಪ್ಪಿದಾಗ, 'ಪುತ್ರಕಾಮೋ ಪುತ್ರೇಷ್ಟ್ಯಾ ಯಜೇತ' ಎಂಬಲ್ಲಿ ಪುತ್ರೇಷ್ಟಿಯಿಂದ ಉತ್ಪಾದಿತವಾದ ಅದೃಷ್ಟ ಇದೆ ಅಥವಾ ಪುಣ್ಯರೂಪವಾದ ಜನಕಾದೃಷ್ಟ ಇದೆ, ಈ ಅದೃಷ್ಟವೇ ಪುತ್ರೋತ್ಪತ್ತಿಯನ್ನು ಕುರಿತು ಕಾರಣವಾಗಿದೆ. ಇಂತಹ ಸಂದರ್ಭದಲ್ಲಿ ಮೊದಲು ಎಲ್ಲಾ ಸಾಮಗ್ರಿಗಳು ಇದ್ದು, ಪುತ್ರೋತ್ಪತ್ತಿಯಾಗದೆ ಇದ್ದಾಗ, ಪುತ್ರೇಷ್ಟಿಯನ್ನು ನಡೆಸಿದ ನಂತರ ಪುತ್ರೋತ್ಪತ್ತಿಯಾಗುತ್ತದೆ. ಹೀಗೆ ಮೊದಲು ಸಾಮಗ್ರಿಗಳನ್ನು ಒಗ್ಗೂಡಿಸುವ ಅದೃಷ್ಟ ಇದ್ದೇ ಇದೆ. ನಂತರ ಸಾಕ್ಷಾತ್ ಪುತ್ರಜನಕವಾದ ಅಂದರೆ ಪುತ್ರೇಷ್ಟಿಯಿಂದ ಉಂಟಾದ ಅದೃಷ್ಟವು ಪುತ್ರೋತ್ಪತ್ತಿಯನ್ನು ಕುರಿತು ಕಾರಣವಾಗಿದೆ. ಹಾಗಾಗಿ ಎರಡು ಜನಕಾದೃಷ್ಟಗಳನ್ನು ಒಪ್ಪಬಹುದಲ್ಲವೇ?

ಉತ್ತರ - 'ಪುತ್ರಕಾಮೋ ಪುತ್ರೇಷ್ಟ್ಯಾ ಯಜೇತ' ಎಂಬಲ್ಲಿ ಪುತ್ರೇಷ್ಟಿಯನ್ನು ಮಾಡಿದರೆ ಯಾವ ಅದೃಷ್ಟವುಂಟಾಗುತ್ತದೋ ಅದು ಜನಕಾದೃಷ್ಟವೇ ಆಗಬೇಕೆಂಬ ನಿಯಮವಿಲ್ಲ. ಪ್ರತಿಬಂಧಕವಾದ ಅದೃಷ್ಟವನ್ನು ನಾಶಗೊಳಿಸುವ ಮೂಲಕವೂ ಪುತ್ರೇಷ್ಟಿಯನ್ನು ಪರ್ಯವಸಾನ ಹೊಂದಬಹುದು. ಹಾಗಾಗಿ ಎಲ್ಲಿ ಎಲ್ಲಾ ಸಾಮಗ್ರಿಗಳು ಇದ್ದು ಪುತ್ರೋತ್ಪತ್ತಿಯಾಗಿರುವುದಿಲ್ಲವೋ ನಂತರ ಪುತ್ರೇಷ್ಟಿಯನ್ನು ಮಾಡಿ ಪುತ್ರೋತ್ಪತ್ತಿಯಾಗುತ್ತದೋ ಅಂತಹ ಸಂದರ್ಭದಲ್ಲಿ ಪುತ್ರೇಷ್ಟಿಯಿಂದ ಉಂಟಾದ ಪರಿಣಾಮ ಏನೆಂದರೆ ಪ್ರತಿಬಂಧಕವನ್ನು ಅದು ನಾಶಮಾಡಿದೆ ಎಂದು ಹೇಳಬಹುದು.

ಪುತ್ರೋತ್ಪತ್ತಿಯ ಪ್ರಯತ್ನವನ್ನು ಮಾಡುವ ಸಂದರ್ಭದಲ್ಲಿ ಪುತ್ರೋತ್ಪತ್ತಿಗೆ ಕಾರಣವಾದ ಸಾಮಗ್ರಿಗೆ ವೈಫಲ್ಯವು ಕಂಡುಬಂದಿದ್ದರೆ ಆಗ ಪುತ್ರೇಷ್ಟಿಯಿಂದ ಉಂಟಾದ ಪುಣ್ಯವು ನಂತರ ಈ ಸಾಮಗ್ರಿಗಳನ್ನು ಒಟ್ಟುಗೂಡಿಸಿದೆ ಎಂದು ಹೇಳಬಹುದು. ಹೀಗೆ ಪುತ್ರೇಷ್ಟಿಯು ಜನಕಾದೃಷ್ಟವಾದ ಪುಣ್ಯವನ್ನು ಉಂಟುಮಾಡುವುದರ ಮೂಲಕವೂ ಕಾರಣವಾಗಬಹುದು. ಪ್ರತಿಬಂಧಕವಾದ ದುರಿತಗಳನ್ನು ನಾಶಮಾಡುವುದರ ಮೂಲಕವೂ ಕಾರಣವಾಗಬಹುದು. ಇವೆರಡಕ್ಕೂ ಶ್ರುತಿಯೇ ಆಧಾರವಾಗಿರುತ್ತದೆ.

ಇಲ್ಲಿ ಇನ್ನೊಂದು ವಿಚಾರವನ್ನು ಗಮನಿಸಬೇಕು. ದುರಿತಾದೃಷ್ಟವಾದ ಪಾಪವು ಕೂಡ ನೇರವಾಗಿ ಕಾರ್ಯವನ್ನು ಪ್ರತಿಬಂಧಿಸುವುದಿಲ್ಲ. ಈ ಅದೃಷ್ಟ ಸಾಮಗ್ರಿಗಳಲ್ಲಿರುವ ಶಕ್ತಿಯನ್ನು ವಿಘಟನ ಮಾಡುವುದರ ಮೂಲಕವೇ ಪ್ರತಿಬಂಧಕವಾಗಿದೆ. ಪುಣ್ಯಕರ್ಮದಿಂದ ಅಥವಾ ಪುತ್ರೇಷ್ಟ್ಯಾದಿ ಕರ್ಮದಿಂದ ದುರಿತಾದೃಷ್ಟವು ನಾಶವಾದಾಗ ಪ್ರತಿಬಂಧಿತವಾದ ಈ ಶಕ್ತಿಯು ಮತ್ತೆ ಕೆಲಸಮಾಡುತ್ತದೆ. ಹಾಗಾಗಿ ನಂತರ ಪುತ್ರೋತ್ಪತ್ತಿ ಆಗುತ್ತದೆ. ಹೀಗೆ ಕಾರಣಾದೃಷ್ಟವಾಗಲೀ, ದುರಿತಾದೃಷ್ಟವಾಗಲೀ ನೇರವಾಗಿ ಕಾರ್ಯವನ್ನು ಕುರಿತು ಕಾರಣವೂ ಆಗಲಾರದು ಅಥವಾ ಕಾರ್ಯವನ್ನು ಪ್ರತಿಬಂಧಿಸಲು ಆಗದು.

ಈ ಪ್ರತಿಬಂಧಕಗಳು ಅನೇಕ ರೀತಿಯಲ್ಲಿ ಕೆಲಸ ಮಾಡುತ್ತವೆ. ಕೆಲವೊಂದು ಪ್ರತಿಬಂಧಕಗಳು ಸಾಕ್ಷಾತ್ ಕಾರಣವನ್ನು ನಾಶಮಾಡುವುದರ ಮೂಲಕವೇ ಪ್ರತಿಬಂಧಕವಾಗಬಹುದು. ಕೆಲವು ಪ್ರತಿಬಂಧಕಗಳು ಕಾರಣನಿಷ್ಠವಾದ ಯಾವುದೋ ಒಂದು ಧರ್ಮವನ್ನು ಪ್ರತಿಬಂಧಿಸುವುದರ ಮೂಲಕ ಪ್ರತಿಬಂಧಕವಾಗಬಹುದು. ಉದಾಹರಣೆ - ಘಟವನ್ನು ತಯಾರಿಸಲು ಕುಂಬಾರ ತಯಾರಾಗಿದ್ದಾಗ ಆ ಸಂದರ್ಭದಲ್ಲಿ ಒಬ್ಬ ವ್ಯಕ್ತಿ ಬಂದು ದಂಡವನ್ನು ಮುರಿದರೆ ಆಗ ಘಟದ ಉತ್ಪತ್ತಿ ಆಗಲಾರದು. ವ್ಯಕ್ತಿ ನೇರವಾಗಿ ಕಾರಣವನ್ನು ನಾಶಮಾಡುವುದರ ಮೂಲಕ ಘಟೋತ್ಪತ್ತಿಯನ್ನು ಕುರಿತು ಪ್ರತಿಬಂಧಕನಾಗಿದ್ದಾನೆ. ಆದರೆ ಎಲ್ಲಿ ಕಾರಣವು ನಾಶವಾಗದೆ ಎಲ್ಲಾ ಸಾಮಗ್ರಿಗಳು ಇದ್ದೇ ಇರುವವು ಅಂತಹ ಕಡೆ ಪ್ರತಿಬಂಧಕವು ಕಾರಣನಿಷ್ಠವಾದ ಶಕ್ತಿಯನ್ನು ವಿಘಟನ ಮಾಡುವುದರ ಮೂಲಕವೇ ಪ್ರತಿಬಂಧಕವಾಗುತ್ತದೆ ಎಂದು ಅನಿವಾರ್ಯವಾಗಿ ಒಪ್ಪಬೇಕಾಗುತ್ತದೆ. ಈ ರೀತಿ ಕಾರಣ ನಾಶವಾಗದೇ ಇರುವಲ್ಲಿ ಶಕ್ತಿಯನ್ನು ಎಲ್ಲರೂ ಒಪ್ಪಿಕೊಳ್ಳಬೇಕು.

**ನ್ಯಾಯದೀಪ – ನನುವಂಧ್ಯಾಸಂಪ್ರಯೋಗಾದೌ ದೃಷ್ಟಾವ್ಯಭಿಚಾರಾದದೃಷ್ಟವಿಲಂಬೋ ವಾಚ್ಯ ಇತ್ಯತ ಆಹ - ವಂಧ್ಯೇತಿ ॥**

ಅನುವಾದ – ವಂಧ್ಯಾಸ್ತ್ರೀಗೂ ಪುರುಷನಿಗೂ ಸಂಪರ್ಕ ಉಂಟಾದಾಗ ಅಲ್ಲಿ ಪುತ್ರೋತ್ಪತ್ತಿ ಆಗಲಾರದು. ಆದರೆ ಈ ಸಂದರ್ಭದಲ್ಲಿ ಪುತ್ರೋತ್ಪತ್ತಿಯನ್ನು ಕುರಿತು ಯಾವೆಲ್ಲ ಕಾರಣಗಳು ಅಗತ್ಯವೋ, ಆ ಎಲ್ಲ ಕಾರಣಗಳು ಇರುವಾಗ ದೃಷ್ಟವಾದ ಕಾರಣದಲ್ಲಿ ವ್ಯಭಿಚಾರ ಇಲ್ಲ. ಹಾಗಾಗಿ ಪುತ್ರೋತ್ಪತ್ತಿಯನ್ನು ಕುರಿತು ಪ್ರತಿಬಂಧಕವಾದ ಯಾವುದಾದರೂ ಅದೃಷ್ಟವೇ

ಇಲ್ಲಿ ಇಲ್ಲ ಎಂದು ಹೇಳಬೇಕಾಗುತ್ತದೆ. ಆದರೆ ನೀವು ಹೇಳುವಂತೆ ಅದೃಷ್ಟವು ದೃಷ್ಟವಾದ ಸಾಮಗ್ರಿಗಳನ್ನು ಹೊಂದಿಸುವುದರಲ್ಲೇ ಪರ್ಯವಸಾನವನ್ನು ಹೊಂದುವುದಿದ್ದರೆ ಇಲ್ಲಿ ದೃಷ್ಟವಾದ ಎಲ್ಲ ಕಾರಣಗಳು ಇದ್ದೇ ಇವೆ. ಆದ್ದರಿಂದ ದೃಷ್ಟವಾದ ಕಾರಣಗಳನ್ನು ಒಗ್ಗೂಡಿಸುವ ಅದೃಷ್ಟಕ್ಕಿಂತ ಬೇರೆಯಾದ ಸಾಕ್ಷಾತ್ತಾಗಿ ಕಾರ್ಯವನ್ನು ಉಂಟುಮಾಡುವ ಅದೃಷ್ಟವನ್ನು ಒಪ್ಪಿಕೊಂಡಾಗ ಮಾತ್ರ ಇಲ್ಲಿ ಪುತ್ರೋತ್ಪತ್ತಿಯನ್ನು ಅಂತಹ ಅದೃಷ್ಟವು ತಡೆದಿದೆ ಎಂದು ಹೇಳಬರುತ್ತದೆ. ಹಾಗಾಗಿ ಸಾಕ್ಷಾತ್ ದಾಹಜನಕವಾದ ಅದೃಷ್ಟವನ್ನು ನೀವು ಒಪ್ಪಲೇಬೇಕು ಎಂಬ ಆಕ್ಷೇಪಕ್ಕೆ "ವಂಧ್ಯಾ" ಇತ್ಯಾದಿ ವಾಕ್ಯಗಳಿಂದ ಉತ್ತರ ನೀಡುತ್ತಿದ್ದಾರೆ.

ವಿವರಣೆ – ವಂಧ್ಯಾಸ್ತ್ರೀಗೂ ಪುರುಷನಿಗೂ ಸಂಪರ್ಕವುಂಟಾದಾಗ ಪುತ್ರೋತ್ಪತ್ತಿ ಆಗುವುದಿಲ್ಲ. ಇಲ್ಲಿ ಎಲ್ಲಾ ಕಾರಣಗಳ ಸಮಾವೇಶ ಇದ್ದೇ ಇದೆ. ಹಾಗಾಗಿ ಈ ಕಾರಣ ಸಮಾವೇಶವನ್ನು ಉಂಟುಮಾಡುವ ಅದೃಷ್ಟವು ಇದ್ದೇ ಇದೆ. ಈ ದೃಷ್ಟವಾದ ಸಾಮಗ್ರಿಗಳು ಇದ್ದರೂ ಪುತ್ರೋತ್ಪತ್ತಿ ಆಗದಿರುವುದರಿಂದ ಇಲ್ಲಿ ಸಾಕ್ಷಾತ್ ಕಾರ್ಯಜನಕವಾದ ಅಂದರೆ ಪುತ್ರೋತ್ಪತ್ತಿ ಜನಕವಾದ ಅದೃಷ್ಟವು ಇಲ್ಲ ಎಂದು ನೀವು ಒಪ್ಪಬೇಕಾಗುತ್ತದೆ. ಅಥವಾ ಇಂತಹ ಅದೃಷ್ಟವು ನಾಶವಾಗಿದೆ ಎಂದು ಒಪ್ಪಬೇಕಲ್ಲವೇ? ಎಂಬ ಪ್ರಶ್ನೆ ಬರಬಹುದು. ಆದರೆ ಇದು ಸರಿಯಲ್ಲ. ಏಕೆಂದರೆ ಸಾಕ್ಷಾತ್ ಜನಕಾದೃಷ್ಟ ಇಲ್ಲದೇ ಹೋದರೂ ಕೂಡ ಇಲ್ಲಿ ಪ್ರತಿಬಂಧಕವಾದ ದುರಿತ ಇದೆ. ಅಥವಾ ಪ್ರತಿಬಂಧಕವಾದ ಅದೃಷ್ಟ ಇದೆ ಎಂದು ಒಪ್ಪಬೇಕು. ಸಾಕ್ಷಾದ್ದಾಹಜನಕವಾದ ಅದೃಷ್ಟವನ್ನು ಒಪ್ಪದೇ ಪ್ರತಿಬಂಧಕವಾದ ದುರಿತವನ್ನು ಒಪ್ಪಲು ಏನು ಪ್ರಮಾಣ? ಎಂದು ಕೇಳಿದರೆ, 'ನಾಪುತ್ರಸ್ಯ ಲೋಕೋಽಸ್ತಿ' ಎಂಬ ಶ್ರುತಿಯಲ್ಲಿ ಅಪುತ್ರನಾದ ವ್ಯಕ್ತಿಗೆ ನರಕಾದಿಗಳು ಉಂಟಾಗುತ್ತವೆ ಎಂದು ಹೇಳಿದ್ದಾರೆ. ನೇರವಾಗಿ ಇಲ್ಲಿ ನರಕಾದಿಗಳನ್ನು ಹೇಳದೇ ಇದ್ದರೂ, ಅಪುತ್ರನಾದ ವ್ಯಕ್ತಿಗಳಿಗೆ ಉತ್ತಮಾದಿ ಸ್ವರ್ಗಾದಿಲೋಕಗಳು ಇಲ್ಲ ಎಂದು ಹೇಳಿರುವುದರಿಂದ ನಿಕೃಷ್ಟವಾದ ನರಕಾದಿಗಳು ಉಂಟಾಗುತ್ತದೆ ಎಂದು ಅರ್ಥತಃ ಪ್ರಾಪ್ತವಾಗುತ್ತದೆ. ಅಥವಾ 'ಪುನ್ನಾಮನರಕಾತ್ ತ್ರಾಯತೇ ಇತಿ ಪುತ್ರಃ' ಎಂಬ ಸ್ಮೃತಿಯ ಬಲದಿಂದ 'ಪುತ್ರನು ನರಕಾದಿಗಳಿಂದ ರಕ್ಷಣೆಯನ್ನು ನೀಡುತ್ತಾನೆ' ಎಂದು ಹೇಳಿರುವುದರಿಂದ ಪುತ್ರೋತ್ಪತ್ತಿಯಾಗದೆ ಹೋದರೆ ನರಕಾದಿಗಳು ಆಗುತ್ತದೆಂಬುದು ಅರ್ಥಾತ್ ಸಿದ್ಧವಾಗುತ್ತದೆ. ಹಾಗಾಗಿ ಅಂತಹ ಪುತ್ರೋತ್ಪತ್ತಿಗೆ ಪ್ರತಿಬಂಧಕವಾದ ನರಕಾದಿಗಳನ್ನು ಉಂಟುಮಾಡುವ ದುರಿತವು ಅಲ್ಲಿ ಇದೆ ಅಂದರೆ

ಪ್ರತಿಬಂಧಕವಾದ ಅದೃಷ್ಟ ಇದೆ ಎಂದು ಒಪ್ಪಬೇಕು. ಹಾಗೆಯೇ, ಮಣಿಯು ಯಾವ ರೀತಿ ದಾಹವನ್ನು ಕುರಿತು ಪ್ರತಿಬಂಧಕವಾಗಿದೆಯೋ ಅದೇ ರೀತಿ ಇಲ್ಲಿ ದುರಿತವು ಪುತ್ರೋತ್ಪತ್ತಿ ಪ್ರತಿಬಂಧಕವಾಗಿದೆ ಎಂಬುದನ್ನು ಒಪ್ಪಬೇಕಾಗುತ್ತದೆ. ಈ ವಿಷಯದಲ್ಲಿ ಪ್ರಮಾಣವನ್ನು ತೋರಿಸಿದ್ದೇವೆ.

## ಅದೃಷ್ಟವೇಕೆ ಸಾಕ್ಷಾಜ್ಜನಕವಲ್ಲ?

ತರ್ಕತಾಂಡವ – ನ ಚೈವಮದೃಷ್ಟಸ್ಯ ಕುತ್ರಚಿದಪಿ ಸಾಕ್ಷಾಜ್ಜನಕತ್ವಾಭಾವೇ ಪರಂಪರಯಾ ಜನಕತ್ವಮಪಿ ನ ಸ್ಯಾದಿತಿ ವಾಚ್ಯಮ್ । ದೃಷ್ಟಸಾಮಗ್ರೀರಹಿತೇ ಸರ್ಗಾದ್ಯಕಾಲೀನೇ ಕಾರ್ಯೇಽದೃಷ್ಟಸ್ಯ ಸಾಕ್ಷಾಜ್ಜನಕತ್ವಸ್ವೀಕಾರಾತ್ ॥

ಅಸ್ತುವಾ ದಾಹಾದಾವಪಿಸಾಕ್ಷಾಜ್ಜನಕಮದೃಷ್ಟಂ, ತಥಾಪಿನತನ್ಮಣ್ಯಾದಿವಿನಾಶ್ಯಮ್।

ಅದೃಷ್ಟಸ್ಯಾದೃಷ್ಟನಾಶಕತ್ವೇನ ವಿಹಿತೇತರಫಲಮಾತ್ರನಾಶ್ಯತ್ವಾತ್ । ಅನ್ಯಥಾ ಮಣ್ಯಾದೀನಾಽದೃಷ್ಟನಾಶಶಂಕ್ಯಾ ವೈದಿಕೇ ಕರ್ಮಣಿ ನಿಷ್ಕಂಪಪ್ರವೃತ್ತಿರ್ನ ಸ್ಯಾತ್॥

ಅನುವಾದ - ಅಥವಾ 'ಅದೃಷ್ಟವು ಎಲ್ಲಿಯೂ ಸಾಕ್ಷಾತ್ತಾಗಿ ಜನಕವಾಗದಿದ್ದರೆ ಪಂಪರೆಯಿಂದಲೂ ಜನಕ ಆಗದಿರಬೇಕಾದೀತು' ಎಂದು ಆಕ್ಷೇಪ ಮಾಡಬಾರದು.

ಸೃಷ್ಟಿಯ ಪ್ರಾರಂಭದಲ್ಲಿ ಕಾರ್ಯದಲ್ಲಿ ಯಾವುದೇ ದೃಷ್ಟಸಾಮಗ್ರಿಗಳಿಲ್ಲ. ಆಗ ಅದೃಷ್ಟವು ಸಾಕ್ಷಾತ್ತಾಗಿ ಜನಕವೆಂದು ಅಂಗೀಕರಿಸಲಾಗಿದೆ.

ದಾಹಾದಿ ಕ್ರಿಯೆಗಳನ್ನು ಕುರಿತು ಸಾಕ್ಷಾಜ್ಜನಕವಾದ ಅದೃಷ್ಟವೆಂಬುದಿದೆ ಎಂದು ನೀವು ಹೇಳಿದ್ದೀರೋ ಅದನ್ನು ಒಪ್ಪಿಕೊಳ್ಳೋಣ. ಹಾಗಿದ್ದರೂ ಅಂತಹ ಅದೃಷ್ಟವನ್ನು ಮಣ್ಯಾದಿಗಳು ನಾಶಮಾಡುತ್ತವೆ ಎಂದು ಒಪ್ಪಲಾಗುವುದಿಲ್ಲ. ಏಕೆಂದರೆ ಅದೃಷ್ಟವು ಇನ್ನೊಂದು ಅದೃಷ್ಟದಿಂದ ಮಾತ್ರ ನಾಶವಾಗುತ್ತದೆ ಅಥವಾ ಫಲದಿಂದ ಮಾತ್ರ ನಾಶವಾಗುತ್ತದೆ. ಈ ಎರಡಕ್ಕಿಂತ ಅತಿರಿಕ್ತವಾದ ಬೇರೊಂದು ವಸ್ತುವಿನಿಂದಲೂ ಅದೃಷ್ಟವು ನಾಶವಾಗುತ್ತದೆ ಎಂದು

ಒಪ್ಪಿಕೊಂಡಲ್ಲಿ ಸಂಬಂಧವೇ ಇಲ್ಲದ ಮಣ್ಯಾದಿಗಳಿಂದ ಅದೃಷ್ಟವು ನಾಶವಾಗಬಹುದು ಎಂಬ ಸಂದೇಹದಿಂದ ವೈದಿಕ ಕರ್ಮಗಳಲ್ಲಿ ಸಂದೇಹವಿಲ್ಲದೇ ಪ್ರವೃತ್ತಿಯನ್ನು ಮಾಡಲು ಸಾಧ್ಯವಾಗಲಾರದು.

ವಿವರಣೆ – ಈ ಹಿಂದೆ ನೀವು ಅದೃಷ್ಟವು ಸಾಕ್ಷಾತ್ತಾಗಿ ಜನಕವಾಗುವುದಿಲ್ಲ ಹೊರತು ಸಾಮಗ್ರಿಯನ್ನು ಒಟ್ಟುಗೂಡಿಸುವುದರ ಮೂಲಕವೇ ಅದು ಜನಕವಾಗುತ್ತದೆ ಎಂದು ಹೇಳಿದ್ದೀರಿ. ಆದರೆ ಅದು ಸರಿಯಲ್ಲ. ಏಕೆಂದರೆ ಅದೃಷ್ಟವು ಎಲ್ಲೂ ಕೂಡ ಸಾಕ್ಷಾಜ್ಜನಕವಾಗಿಲ್ಲ ಎಂದು ನೀವು ಹೇಳುವುದಾದರೆ ಪರಂಪರೆಯ ಮೂಲಕವೂ ಆಗಲಾರದು. ಉದಾಹರಣೆಗೆ ದಾಹರೂಪವಾದ ಕಾರ್ಯವನ್ನು ಕುರಿತು ಅದೃಷ್ಟವು ದಾಹಕ್ಕೆ ಅಗತ್ಯವಿರುವ ಕರತಲ, ಅಗ್ನಿ ಮತ್ತು ಸಂಯೋಗಗಳನ್ನು ಒಗ್ಗೂಡಿಸುವುದರಲ್ಲಿ ಪರ್ಯವಸಾನವಾಗುತ್ತದೆ. ದಾಹವನ್ನು ಕುರಿತು ಅದೃಷ್ಟವು ಸಾಕ್ಷಾಜ್ಜನಕವಲ್ಲದೇ ಹೋದರೂ ಸಾಮಗ್ರಿಗಳನ್ನು ಒಗ್ಗೂಡಿಸುವ ವಿಷಯದಲ್ಲಿ ಅದೃಷ್ಟವು ಸಾಕ್ಷಾಜ್ಜನಕವೇ ಆಗಿದೆ. ಹಾಗಲ್ಲದಿದ್ದರೆ ಸಾಮಗ್ರಿಗಳನ್ನು ಒಗ್ಗೂಡಿಸುವ ವಿಷಯದಲ್ಲೂ ಇನ್ನೊಂದು ಪರಂಪರೆಯನ್ನು ನೀವು ಒಪ್ಪಿಕೊಳ್ಳಬೇಕಾಗುತ್ತದೆ. ಹಾಗಾಗಿ ಅದೃಷ್ಟವು ಎಲ್ಲೂ ಕೂಡ ಸಾಕ್ಷಾಜ್ಜನಕವಾಗಿಲ್ಲ ಎಂದು ಹೇಳಲು ಬರುವುದಿಲ್ಲ ಎಂಬುದಾಗಿ.

ಇದಕ್ಕೆ ಉತ್ತರ - ನಾವು ಅದೃಷ್ಟವು ಎಲ್ಲೂ ಕೂಡ ಸಾಕ್ಷಾಜ್ಜನಕವಾಗಿಲ್ಲ ಎಂದು ಹೇಳುವುದಿಲ್ಲ. ಎಲ್ಲಿ ಕಾರ್ಯವನ್ನು ಕುರಿತು ದೃಷ್ಟಸಾಮಗ್ರಿಗಳು ಇವೆಯೋ ಅಲ್ಲಿ ಅಂತಹ ದೃಷ್ಟಸಾಮಗ್ರಿಗಳನ್ನು ಒಗ್ಗೂಡಿಸುವ ಕೆಲಸವನ್ನು ಮಾತ್ರ ಅದೃಷ್ಟ ಮಾಡುತ್ತದೆ. ಎಲ್ಲಿ ದೃಷ್ಟ ಸಾಮಗ್ರಿಗಳೇ ಇಲ್ಲವೋ ಅಂತಹ ಕಡೆ ಸಾಮಗ್ರಿಗಳನ್ನು ಒಗ್ಗೂಡಿಸುವ ಕೆಲಸವೇ ಇಲ್ಲವಾದ ಕಾರಣ ಕಾರ್ಯವನ್ನು ಕುರಿತು ನೇರವಾಗಿ ಅದೃಷ್ಟವೇ ಕಾರಣವಾಗುತ್ತದೆ.

ಉದಾಹರಣೆ — ಜಗತ್ತು ಪ್ರಳಯವಾದ ನಂತರ ಮುಂದೆ ಯಾವುದೋ ಒಂದು ಕಾಲದಲ್ಲಿ ಸೃಷ್ಟಿಯ ಆರಂಭವಾಗುತ್ತದೆ. ಸೃಷ್ಟಿಯ ಆರಂಭವಾದ ಕಾಲದಲ್ಲಿ ಯಾವುದೇ ಕಾರ್ಯವಸ್ತುವಾಗಲೀ, ಯಾವುದೇ ಕಾರಣವಸ್ತುವಾಗಲೀ ಇರುವುದಿಲ್ಲ. ಅಂತಹ ಸಂದರ್ಭದಲ್ಲಿ ಇಂತಹ ಕಾರ್ಯವನ್ನು ಕುರಿತು ಇಂತಹ ಒಂದುವಸ್ತುವು ಕಾರಣ ಎಂದು ಹೇಳಲೇ ಬರುವುದಿಲ್ಲ. ಅಲ್ಲಿ ಏನು ಕಾರ್ಯ ನಡೆಯುತ್ತದೋ ಅಂತಹ ಕಾರ್ಯದ

ವಿಷಯದಲ್ಲಿ ಅದೃಷ್ಟವು ಸಾಕ್ಷಾತ್ತಾಗಿ ಜನಕವಾಗಬಹುದು. ಅಷ್ಟೇ ಅಲ್ಲದೇ, ನೈಯಾಯಿಕರ ಮತದಲ್ಲೂ ಕೂಡ ದ್ವ್ಯಣುಕವು ಆದ್ಯಕಾರ್ಯವಾಗಿದೆ. ದ್ವ್ಯಣುಕೋತ್ಪತ್ತಿಗಿಂತ ಮೊದಲು ಏನು ಪರಮಾಣು ಇದೆಯೋ ಈ ಪರಮಾಣುವಿನಿಂದ ದ್ವ್ಯಣುಕವು ಉತ್ಪತ್ತಿಯಾಗಬೇಕಾದರೆ ಪರಮಾಣುಗಳಲ್ಲಿ ನೋದನವು ಉಂಟಾಗಬಹುದು. ಈ ಪರಮಾಣುಗಳಲ್ಲಿ ನೋದನ ಉಂಟಾಗಬೇಕಾದ ಚಲನೆಗೆ ಅದೃಷ್ಟವೇ ಕಾರಣ ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಏಕೆಂದರೆ ದ್ವ್ಯಣುಕೋತ್ಪತ್ತಿಗಿಂತ ಮೊದಲು ಪರಮಾಣುಗಳ ರಾಶಿಯೇ ಇರುವುದು ಹೊರತು ಮತ್ತೆ ಬೇರೆ ಯಾವ ಕಾರ್ಯವಸ್ತುಗಳು ಇರುವುದಿಲ್ಲ. ಇಂತಹ ಸಂದರ್ಭದಲ್ಲಿ ಸಾಮಗ್ರಿಗಳೇ ಇಲ್ಲದೇ ಇರುವುದರಿಂದ ದ್ವ್ಯಣುಕೋತ್ಪತ್ತಿ ರೂಪವಾದ ಕಾರ್ಯವನ್ನು ಕುರಿತು ಅದೃಷ್ಟವೇ ಸಾಕ್ಷಾತ್ತಾಗಿ ಕಾರಣ ಎಂದು ಒಪ್ಪಿಕೊಳ್ಳಬೇಕಾಗುತ್ತದೆ.

## ಸಾಕ್ಷಾಜ್ಜನಕವಾಗದ ಅದೃಷ್ಟವು ಪರಂಪರೆಯಿಂದಲೇ ಜನಕವಾಗುವುದಿಲ್ಲ

**ನ್ಯಾಯದೀಪ – ನನ್ವದೃಷ್ಟಂ ಕ್ವಚಿತ್ ಸಾಕ್ಷಾಜ್ಜನಕತ್ವಮ್ । ಅನ್ಯಥಾ ದೃಷ್ಟಸಾಮಗ್ರೀ ರಹಿತಸ್ಥಲೇ ಸಾಕ್ಷಾದಹೇತುತ್ವೇ ದೃಷ್ಟಸಾಮಗ್ರ್ಯಾಮಪ್ಯಹೇತುತ್ವಾಪತ್ತ್ಯಾ ಪರಂಪರಯಾ ಹೇತುರಪಿ ನ ಸ್ಯಾದತಃ ಕಥಂ ತಾದೃಶಾದೃಷ್ಟಂ ನೇತ್ಯುಚತ ಇತ್ಯತ ಆಹ – ನ ಚೈವ ಮಿತಿ ॥**

ಅನುವಾದ - ಸಾಕ್ಷಾಜ್ಜನಕಾದೃಷ್ಟವನ್ನು ಒಪ್ಪಿಕೊಳ್ಳುವವರು ಈ ರೀತಿ ಪ್ರಶ್ನೆ ಮಾಡಿದ್ದಾರೆ. ಅದೃಷ್ಟವು ಎಲ್ಲೋ ಒಂದುಕಡೆ ಸಾಕ್ಷಾತ್ತಾಗಿ ಜನಕವಾಗಿದೆ. ಇದನ್ನು ಒಪ್ಪಿಕೊಳ್ಳದೇ ಹೋದರೆ ಎಲ್ಲಿ ದೃಷ್ಟಸಾಮಗ್ರಿಯೇ ಇರುವುದಿಲ್ಲವೋ, ಅಂತಹ ಕಡೆ ಅದೃಷ್ಟವು ಯಾವ ಕಾರ್ಯವನ್ನೂ ಸಾಕ್ಷಾತ್ತಾಗಿ ಉಂಟುಮಾಡುವುದಿಲ್ಲವಾದ್ದರಿಂದ ಅದು ದೃಷ್ಟಸಾಮಗ್ರಿಯನ್ನು ಕೂಡ ಸಾಕ್ಷಾತ್ತಾಗಿ ಉಂಟುಮಾಡಲಾರದು. ಅದೃಷ್ಟವು ದೃಷ್ಟಸಾಮಗ್ರಿಯನ್ನು ಉಂಟುಮಾಡಲಾರದು ಎಂದಮೇಲೆ ಪರಂಪರೆಯಿಂದಲೂ ಅದು ಕಾರ್ಯವನ್ನು ಕುರಿತು ಕಾರಣವೂ ಆಗಲಾರದು. ಈ ಅಂಶವನ್ನು ಪ್ರಶ್ನೆಮಾಡಿಕೊಂಡು 'ನ ಚೈವಂ' ಇತ್ಯಾದಿ ಮೂಲವಾಕ್ಯಗಳಿಂದ ಇದಕ್ಕೆ ಉತ್ತರಿಸುತ್ತಿದ್ದಾರೆ.

## ದಾಹವು ಮಣ್ಯಾದಿವಿನಾಶ್ಯವಲ್ಲ

**ನ್ಯಾಯದೀಪ – ನ ತನ್ಮಣ್ಯಾ ವಿನಾಶ್ಯಮಿತಿ । ಯೇನ ಮಣ್ಯಾದೇಃ ಪ್ರತಿಬಂಧಕತ್ವೇ ಶಕ್ತಿಂ ವಿನಾಪ್ಯುಪಪನ್ನಂ ಸ್ಯಾದಿತಿ ದೋಷಃ ಕುತೋ ನೇತ್ಯತ ಆಹ - ಅದೃಷ್ಟಸ್ಯೇತಿ ॥**

ಅನುವಾದ - ದಾಹಾದಿ ಸ್ಥಳದಲ್ಲಿ ಅದೃಷ್ಟವೇ ಸಾಕ್ಷಾಜ್ಜನಕವಾಗಲೀ, ಆದರೂ ಕೂಡ ಅದು ಮಣ್ಯಾದಿಗಳಿಂದ ವಿನಾಶ್ಯವಾಗುವುದಿಲ್ಲ. ಮಣ್ಯಾದಿಗಳಿಂದ ವಿನಾಶವೆಂದು ಒಪ್ಪಿದ್ದರೆ, ಆಗ ಶಕ್ತಿಯನ್ನು ಅಂಗೀಕಾರ ಮಾಡದಿದ್ದರೂ ಕೂಡ ಮಣ್ಯಾದಿಗಳಿಗೆ ಪ್ರತಿಬಂಧಕತ್ವವು ಉಪಪನ್ನವಾಗುತ್ತಿತ್ತು ಎಂಬ ದೋಷವನ್ನೇಕೆ ಹೇಳಬಾರದು? ಎಂಬ ಪ್ರಶ್ನೆಗೆ 'ಅದೃಷ್ಟಸ್ಯ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

## ಅದೃಷ್ಟವೇ ಅದೃಷ್ಟಕ್ಕೆ ನಾಶಕ

**ನ್ಯಾಯದೀಪ – ಪ್ರಬಲದುರಿತಾದೃಷ್ಟಸ್ಯ ಪುಣ್ಯಾದೃಷ್ಟನಾಶಕತ್ವೇನ ಪ್ರಬಲಪುಣ್ಯಾದೃಷ್ಟಸ್ಯ ದುರಿತಾದೃಷ್ಟನಾಶಕತ್ವೇನ ಮಣ್ಯಾದೇರನಾಶಕತ್ವಾದಿತ್ಯರ್ಥಃ । ಅದೃಷ್ಟಸ್ಯ ವಿಹಿತಾದಿಜನ್ಯತ್ವಾದ್ವಿಹಿತೇತರನಾಶ್ಯತ್ವೇಽಪಿ ಫಲಮಾತ್ರನಾಶ್ಯತ್ವೇನ ಮಣ್ಯಾದಿರೂಪೇಣ ವಿಪರೀತೇತರೇಣಾನಾಶ್ಯತ್ವಾದಿತ್ಯರ್ಥಃ । ಕೀರ್ತನಾದೇರಪ್ಯುಪಲಕ್ಷಣಮ್ । 'ಧರ್ಮಃ ಕ್ಷರತಿ ಕೀರ್ತನಾತ್' ಇತ್ಯಾದೇಃ ।**

ಅನುವಾದ - ಪ್ರಬಲವಾದ ದುರಿತಾದೃಷ್ಟವು ಪುಣ್ಯಾದೃಷ್ಟತ್ವಕ್ಕೆ ನಾಶಕವಾಗಿದೆ. ಪ್ರಬಲವಾದ ಪುಣ್ಯಾದೃಷ್ಟವು ದುರಿತಾದೃಷ್ಟಕ್ಕೆ ನಾಶಕವಾಗಿದೆ. ಲೋಕದಲ್ಲಿ ಹೀಗೆಯೇ ಕಂಡಿದೆ ಹೊರತು, ಮಣ್ಯಾದಿಗಳು ದುರಿತಾದೃಷ್ಟಕ್ಕಾಗಲೀ, ಪುಣ್ಯಾದೃಷ್ಟಕ್ಕಾಗಲೀ ನಾಶಕವಾಗಿರುವುದು ಕಂಡಿರುವುದಿಲ್ಲ. ಅದೃಷ್ಟವು ವಿಹಿತದಿಂದ ಅಥವಾ ನಿಷಿದ್ಧದಿಂದಲೇ ಜನ್ಯವಾಗಿದೆ. ಆದ್ದರಿಂದ ಅವುಗಳಿಂದಲೇ ನಾಶವನ್ನೂ ಕೂಡ ಹೊಂದುತ್ತದೆ. ಒಂದು ವೇಳೆ ವಿಹಿತಾದೃಷ್ಟದಿಂದ ಅಥವಾ ನಿಷಿದ್ಧಾದೃಷ್ಟದಿಂದ ಬೇರೆಯಾದ ಪದಾರ್ಥದಿಂದ ನಾಶವಾಗುವುದಾದರೆ ಫಲಮಾತ್ರದಿಂದಷ್ಟೇ ನಾಶವಾಗುತ್ತದೆ. ಹೊರತು, ವಿಹಿತೇತರವಾದ ಮಣ್ಯಾದಿರೂಪದಿಂದ ನಾಶವಾಗಲು ಸಾಧ್ಯವೇ ಇಲ್ಲ ಎಂಬುದು 'ಅದೃಷ್ಟಸ್ಯ' ಇತ್ಯಾದಿ ವಾಕ್ಯದ ಮೊದಲನೆಯ ವ್ಯಾಖ್ಯಾನ.

'ಫಲಮಾತ್ರನಾಶ್ಯತ್ವಾತ್' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಹೊಗಳಿಕೊಳ್ಳುವುದನ್ನೂ ಕೂಡ ಇಲ್ಲಿ ಉಪಲಕ್ಷಣಯಾ ವಿವಕ್ಷಿಸಬೇಕು. 'ಧರ್ಮಃ ಕ್ಷರತಿ ಕೀರ್ತನಾತ್' ಹೊಗಳಿಕೊಳ್ಳುವುದರಿಂದ ಧರ್ಮವು ನಾಶವಾಗುತ್ತದೆ ಎಂದು ಪ್ರಮಾಣವಿದೆ.

ವಿವರಣೆ - 'ಅದೃಷ್ಟಸ್ಯ' ಇತ್ಯಾದಿ ವಾಕ್ಯಕ್ಕೆ ಎರಡು ಬಗೆಯ ವ್ಯಾಖ್ಯಾನವನ್ನು ತಿಳಿಯಬೇಕು. ಅದೃಷ್ಟ ಎಂಬ ಪದಕ್ಕೆ ಅದೃಷ್ಟನಾಶಕತ್ವೇನ ಎಂಬಲ್ಲಿ ಅನ್ವಯ ಮಾಡಿದಾಗ ತೃತೀಯಾವಿಭಕ್ತಿಯು ಹೇತ್ವರ್ಥದಲ್ಲಿ ಉಪಪನ್ನವಾಗುತ್ತದೆ. 'ಅದೃಷ್ಟಸ್ಯ' ಎಂಬ ಪದಕ್ಕೆ ನಾಶ್ಯತ್ವಾತ್ ಎಂಬಲ್ಲಿ ಅನ್ವಯ ಮಾಡಿದಾಗ ಪ್ರಕಾರಾರ್ಥದಲ್ಲಿ ತೃತೀಯಾವಿಭಕ್ತಿಯನ್ನು ತಿಳಿಯಬೇಕು. ಅದೃಷ್ಟನಾಶಕತ್ವ ರೂಪದಿಂದ ವಿಹಿತೇತರಫಲಮಾತ್ರದಿಂದ ನಾಶವಾಗುತ್ತದೆ ಎಂಬುದು ಎರಡನೆಯ ವ್ಯಾಖ್ಯಾನ. ಹೀಗೆ 'ಅದೃಷ್ಟಸ್ಯ' ಎಂಬ ಪದಕ್ಕೆ ಎರಡು ಕಡೆ ಅನ್ವಯ ಮಾಡಿ ನ್ಯಾಯದೀಪದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಎರಡು ಅರ್ಥಗಳ ವ್ಯತ್ಯಾಸವಿಲ್ಲದಿದ್ದರೂ, ಅನ್ವಯಕ್ರಮದಲ್ಲಿ ಇರುವ ವ್ಯತ್ಯಾಸವನ್ನು ಗಮನಿಸಬೇಕು.

ಪುಣ್ಯಾದೃಷ್ಟವು ದುರಿತಾದೃಷ್ಟದಿಂದಲೇ ನಾಶವಾಗುತ್ತದೆ. ಒಂದುವೇಳೆ ಬೇರೆಯದರಿಂದ ನಾಶವಾಗುವುದಾದರೂ ಕೂಡ ಫಲದಿಂದ ನಾಶವಾಗುತ್ತದೆಂದು ಗ್ರಂಥದಲ್ಲಿ ಹೇಳಿದ್ದಾರೆ. ಫಲದ ಜೊತೆ ಕೀರ್ತನೆಯನ್ನೂ ಕೂಡ ವಿವಕ್ಷಿಸಬೇಕೆಂದು ನ್ಯಾಯದೀಪದಲ್ಲಿ ತಿಳಿಸಿರುತ್ತಾರೆ. ಪುಣ್ಯವನ್ನು ಸಂಪಾದನೆ ಮಾಡಿ, ಆ ಪುಣ್ಯಕರ್ಮವನ್ನು ತಾನು ಹೊಗಳಿಕೊಳ್ಳುವುದರಿಂದ ಸಂಪೂರ್ಣವಾಗಿ ಆ ಪುಣ್ಯಕರ್ಮವು ನಾಶವಾಗುತ್ತದೆ ಎಂದು ಧರ್ಮಶಾಸ್ತ್ರವು ತಿಳಿಸುತ್ತದೆ. ಆದ್ದರಿಂದ ಫಲದಿಂದಷ್ಟೇ ಪುಣ್ಯಾದೃಷ್ಟಕ್ಕೆ ನಾಶ್ಯತ್ವವಿರುವುದಲ್ಲ. ಕೀರ್ತನೆಯಿಂದಲೂ ನಾಶ್ಯತ್ವವಿರುತ್ತದೆ ಎಂಬುದು ಇದರ ಅಭಿಪ್ರಾಯ.

## ಅದೃಷ್ಟಸ್ಯ ಇತ್ಯಾದಿ ವಾಕ್ಯಕ್ಕೆ ಮತ್ತೊಂದು ವ್ಯಾಖ್ಯಾನ

ನ್ಯಾಯದೀಪ – ಯದ್ವಾಽದೃಷ್ಟಸ್ಯ ನಾಶ್ಯತ್ವಾದಿತ್ಯನ್ವಯಃ। ಅದೃಷ್ಟನಾಶಕತ್ವೇನ ಯದ್ವಿಹಿತಂ ಪ್ರಾಯಶ್ಚಿತ್ತಾದಿ ತದಿತರೇಣ ಫಲಮಾತ್ರೇಣ ನಾಶ್ಯತ್ವಾದಿತ್ಯರ್ಥಃ । ಮಣ್ಯಾದಿ ತ್ವದೃಷ್ಟನಾಶಕತಯಾ ವಿಹಿತೇತರದಪಿ ನ ಫಲರೂಪಮಿತಿ ನ ತನ್ನಾಶಕಮಿತಿ ಭಾವಃ॥

ಅನುವಾದ–ಅಥವಾ 'ಅದೃಷ್ಟಸ್ಯ' ಎಂಬ ಪದಕ್ಕೆ ನಾಶ್ಯತ್ವಾತ್ ಎಂಬಲ್ಲಿ ಅನ್ವಯವನ್ನು ತಿಳಿಯಬೇಕು. ಈ ಪಕ್ಷದಲ್ಲಿ ಅದೃಷ್ಟಸ್ಯ ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ಅದೃಷ್ಟನಾಶಕವಾಗಿ ಯಾವ ಪ್ರಾಯಶ್ಚಿತ್ತವು ವಿಹಿತವಾಗಿದೆಯೋ, ಅಂಥ ಪ್ರಾಯಶ್ಚಿತ್ತಾದಿಗಳಿಂದಲೇ ಅದೃಷ್ಟವು ನಾಶವಾಗುತ್ತದೆ. ಪ್ರಾಯಶ್ಚಿತ್ತಾದಿಗಳಿಗಿಂತ ಇತರದಿಂದ ನಿವೃತ್ತಿಯಾಗುವುದಾದರೆ, ಫಲಮಾತ್ರದಿಂದಷ್ಟೇ ನಿವೃತ್ತಿಯಾಗುತ್ತದೆ. ಇದನ್ನು ಹೊರತಾಗಿ ಮಣ್ಯಾದಿಗಳಿಂದ ನಾಶವಾಗುವುದಿಲ್ಲ. ಮಣ್ಯಾದಿಗಳು ವಿಹಿತೇತರವಾದ ಫಲರೂಪವೂ ಆಗಿರುವುದಿಲ್ಲ. ಆದ್ದರಿಂದ ಅದೃಷ್ಟಕ್ಕೆ ನಾಶಕವಾಗಲು ಸಾಧ್ಯವಿಲ್ಲ.

ವಿವರಣೆ – ದೃಷ್ಟಸಾಮಗ್ರಿಗಳನ್ನು ಒಟ್ಟುಗೂಡಿಸುವ ಅದೃಷ್ಟಕ್ಕಿಂತ ಬೇರೆಯಾದ ಸಾಕ್ಷಾದ್ದಾಹಜನಕವಾದ ಅದೃಷ್ಟವು ಇಲ್ಲ ಎಂದು ಈ ಹಿಂದೆ ಪ್ರತಿಪಾದನೆ ಮಾಡಿದ್ದಾರೆ. ಈಗ ಸಾಕ್ಷಾತ್‌ದಾಹಜನಕವಾದ ಅದೃಷ್ಟವನ್ನು ಒಪ್ಪಿಕೊಂಡರೂ ಇದರಿಂದ ಶಕ್ತಿಯು ಸಿದ್ಧವಾಗುವುದಿಲ್ಲ ಎಂದು ಪ್ರತಿಪಾದನೆ ಮಾಡುತ್ತಿದ್ದಾರೆ. ಸಾಕ್ಷಾತ್‌ದಾಹಜನಕವಾದ ಅದೃಷ್ಟವನ್ನು ಒಪ್ಪಿಕೊಂಡರೂ ಆ ಅದೃಷ್ಟವು ಮಣಿಯಿಂದ ವಿನಾಶವಾಗಿದೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಅದೃಷ್ಟವು ಅದೃಷ್ಟವಾದ ಇನ್ನೊಂದು ವಸ್ತುವಿನಿಂದ ನಾಶವಾಗಬಹುದೇ ವಿನಹ ಬೇರೆ ವಸ್ತುವಿನಿಂದ ನಾಶವಾಗುವುದಿಲ್ಲ. ಒಂದುವೇಳೆ ಬೇರೆ ವಸ್ತುವಿನಿಂದ ನಾಶವಾಗುವ ಸಂದರ್ಭವಿದ್ದರೂ ಅದೃಷ್ಟಕ್ಕಿಂತ ಇತರವಾದ ಬೇರೆ ವಸ್ತು ಅದು ಫಲವೇ ಆಗಿರಬೇಕು. ಉದಾಹರಣೆಗೆ ಮಕ್ಕಳಾಗದೇ ಇರುವುದಕ್ಕೆ ಪ್ರತಿಬಂಧಕವಾಗಿ ಒಂದು ಅದೃಷ್ಟವಿದೆ. ಈ ಅದೃಷ್ಟವು ಪುತ್ರಕಾಮೇಷ್ಟಿಯಾಗವನ್ನು ಮಾಡಿದಾಗ ವಿನಾಶವಾಗುತ್ತದೆ. ಪುತ್ರಕಾಮೇಷ್ಟಿಯಾಗವನ್ನು ಮಾಡುವುದಕ್ಕಿಂತ ಮೊದಲು ಇರುವ ಪ್ರತಿಬಂಧಕವಾದ ಅದೃಷ್ಟವು ಪುತ್ರಕಾಮೇಷ್ಟಿಯಿಂದ ಉತ್ಪತ್ತಿಯಾದ ಪುಣ್ಯರೂಪವಾದ ಅದೃಷ್ಟದಿಂದ ನಾಶವಾಗಿದೆ. ಈ ಪುಣ್ಯರೂಪವಾದ ಅದೃಷ್ಟವು ಪ್ರತಿಬಂಧಕವಾದ ಅದೃಷ್ಟವನ್ನು ನಾಶ ಮಾಡುತ್ತದೆ ಎಂಬುದಕ್ಕೆ ಶ್ರುತಿಯೇ ಆಧಾರ. 'ಪುತ್ರಕಾಮಃ ಪುತ್ರೇಷ್ಟ್ಯಾ ಯಜೇತ' ಎಂದು ಶ್ರುತಿಯಲ್ಲಿ ವಿಧಾನ ಮಾಡಿರುವುದರಿಂದ ಈ ಶ್ರುತಿಯು ಪುತ್ರೇಷ್ಟಿಯಿಂದ ಉತ್ಪನ್ನವಾದ ಪುಣ್ಯವು ಪ್ರತಿಬಂಧಕವಾದ ಅದೃಷ್ಟವನ್ನು ನಾಶಮಾಡುತ್ತದೆ ಎಂಬುದನ್ನು ಬೋಧಿಸಿದಂತೆ ಆಯಿತು.

ಹೀಗೆ ಶ್ರುತಿಯಿಂದ ವಿಹಿತವಾದ ಅದೃಷ್ಟವು ಶ್ರುತಿಯಿಂದ ಬೋಧಿತವಾದ ಪ್ರತಿಬಂಧಕ ಅದೃಷ್ಟವನ್ನು ನಾಶಮಾಡಬಹುದು. ಹೀಗಿಲ್ಲವಾದರೆ ಆಗ ಅಂತಹ ಪ್ರತಿಬಂಧಕಾದೃಷ್ಟವು ಫಲದಿಂದ ಮಾತ್ರ ನಾಶವಾಗಬೇಕು. ಅಂದರೆ ಇಲ್ಲಿ ಪ್ರತಿಬಂಧಕವಾದ ಅದೃಷ್ಟವು ನಾಶವಾಗದೇ ಇರುವುದರಿಂದ ಅದು ಫಲರೂಪದಿಂದ ಗೋಚರಿಸಿಯೇ ಗೋಚರಿಸುತ್ತದೆ. ಅಂದರೆ ಪುತ್ರೋತ್ಪತ್ತಿಯಾಗುವುದಿಲ್ಲ. ಇದರಿಂದಾಗಿ ಪುತ್ರೋತ್ಪತ್ತಿಗೆ ಪ್ರತಿಬಂಧಕವಾದ ಪಾಪದಿಂದ ಸಿಗಬೇಕಾದ ಅನಿಷ್ಟಫಲವು ಮಗನಿಲ್ಲ ಎಂಬ ದುಃಖರೂಪವಾದ ಫಲದಿಂದ ನಾಶವಾಗಬಹುದು. ಹಾಗಾಗಿ ದಾಹಜನಕವಾಗಿರುವ ಸಾಕ್ಷಾಜ್ಜನಕವಾದ ಅದೃಷ್ಟವು ಮಣ್ಯಾದಿಗಳಿಂದ ನಾಶವಾಗುತ್ತದೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಎಲ್ಲೂ ಕೂಡ ಮಣ್ಯಾದಿಗಳು ದಾಹಜನಕವಾದ ಅದೃಷ್ಟವನ್ನು ನಾಶಮಾಡುತ್ತದೆ ಎಂದು ವಿಹಿತವಾಗಿಲ್ಲ.

ಅಥವಾ ದಾಹಜನಕವಾದ ಮಣ್ಯಾದಿಗಳು ಸಾಕ್ಷಾಜ್ಜನಕವಾದ ಅದೃಷ್ಟವನ್ನು ನಾಶಗೊಳಿಸುವುದು ಕಂಡಿಲ್ಲ. ಹೀಗೆ ಮಣ್ಯಾದಿಗಳು ಸಾಕ್ಷಾಜ್ಜನಕ ಅದೃಷ್ಟವನ್ನು ನಾಶಗೊಳಿಸುತ್ತವೆ ಎಂದು ಶ್ರುತಿಯಲ್ಲಿ ಬೋಧಿತವೂ ಆಗಿಲ್ಲ ಮತ್ತು ಫಲರೂಪವೂ ಆಗಿಲ್ಲ. ಏಕೆಂದರೆ ಸಾಕ್ಷಾಜ್ಜನಕವಾದ ಅದೃಷ್ಟಕ್ಕೆ ಫಲವು ದಾಹರೂಪವಾಗಿದೆಯೇ ಹೊರತು ದಾಹವನ್ನು ಕುರಿತು ಪ್ರತಿಬಂಧಿಸುವುದು ಅಲ್ಲ.

ಇಲ್ಲಿ ಇನ್ನೊಂದು ವಿಚಾರವನ್ನು ಗಮನಿಸಬೇಕು. ಅದೃಷ್ಟವು ವಿಹಿತವಾದ ಇನ್ನೊಂದು ಅದೃಷ್ಟದಿಂದ ನಾಶವಾಗುತ್ತದೆ ಎನ್ನುವ ಕಡೆಯಲ್ಲಿ ಅದೃಷ್ಟನಾಶಕತ್ವೇನ ವಿಹಿತವಾದುದರಿಂದ ಅದೃಷ್ಟವು ನಾಶವಾಗುತ್ತದೆ ಎಂಬ ವಾಕ್ಯವನ್ನು ಮೂಲದಲ್ಲಿ ಪ್ರಯೋಗಿಸಲಾಗಿದೆ. ಈ ಅದೃಷ್ಟವು ಪುಣ್ಯರೂಪವಾಗಿಲ್ಲದೇ ಪಾಪವಾಗಿದ್ದರೆ, ಆಗ ಪುಣ್ಯರೂಪವಾದ ಅದೃಷ್ಟವನ್ನು ಸಂಪಾದಿಸಬೇಕು ಎಂದು ಶಾಸ್ತ್ರದಲ್ಲಿ ವಿಹಿತವಾಗಿರಬಹುದು. ಆದರೆ ಪುಣ್ಯರೂಪವಾದ ಅದೃಷ್ಟವು ನಾಶವಾಗುವ ಸಂದರ್ಭದಲ್ಲಿ ಅದು ಶಾಸ್ತ್ರದಲ್ಲಿ ವಿಹಿತವಾಗಿರುವುದಿಲ್ಲ.

ಉದಾಹರಣೆ - ಕಲಂಜಭಕ್ಷಣವನ್ನು ಮಾಡಿದರೆ ಪುಣ್ಯನಾಶನವನ್ನು ಹೇಳಿದ್ದಾರೆ. ಈ ಪುಣ್ಯನಾಶವು ಕಲಂಜಭಕ್ಷಣದಿಂದ ಉಂಟಾದ ಅದೃಷ್ಟದಿಂದ ನಾಶವಾಗುತ್ತದೆ. ಆದರೆ ಕಲಂಜ ಭಕ್ಷಣಾದಿಗಳು ಶಾಸ್ತ್ರದಲ್ಲಿ ವಿಹಿತವಾಗಿಲ್ಲ. ಆದರೆ ಕಲಂಜಭಕ್ಷಣಾದಿಗಳು ಮಾಡಿದಾಗ ಪುಣ್ಯಗಳು ನಾಶವಾಗುತ್ತವೆ ಎಂದು ಶಾಸ್ತ್ರದಲ್ಲಿ ಬೋಧಿತವಾಗಿದೆ. ಹೀಗೆ 'ಅದೃಷ್ಟನಾಶಕತ್ವೇನ

ವಿಹಿತ' ಎಂಬ ಸ್ಥಳದಲ್ಲಿ 'ಅದೃಷ್ಟನಾಶಕತ್ವೇನ ಬೋಧಿತ' ಎಂಬ ಅಭಿಪ್ರಾಯವನ್ನು ನಾವು ಗ್ರಹಿಸಿಕೊಳ್ಳಬೇಕು. ಪಾಪದಿಂದ ಪುಣ್ಯರೂಪವಾದ ಅದೃಷ್ಟವು ನಾಶವಾಗುವಲ್ಲಿ ಅಂತಹ ಪಾಪವು ಕೇವಲ ಶಾಸ್ತ್ರದಿಂದ ಬೋಧಿತವಾದದ್ದು. ಪುಣ್ಯದಿಂದ ಪಾಪರೂಪವಾದ ಅದೃಷ್ಟವು ನಾಶವಾಗುವಲ್ಲಿ ಈ ಪುಣ್ಯಕರ್ಮವು ಶಾಸ್ತ್ರದಲ್ಲಿ ವಿಹಿತವಾದದ್ದು. ಇವೆರಡರಲ್ಲಿರುವ ಈ ವ್ಯತ್ಯಾಸವನ್ನು ಗಮನಿಸಬೇಕು.

ಹೀಗೆ ಅದೃಷ್ಟನಾಶಕತ್ವೇನ, ಶಾಸ್ತ್ರದಲ್ಲಿ ಯಾವುದನ್ನು ಹೇಳಿದ್ದರೋ ಅವುಗಳಲ್ಲಿ ಇನ್ನೊಂದು ಅದೃಷ್ಟವು ನಾಶವಾಗದೇ ವಿನಹ ಅದೃಷ್ಟವಲ್ಲದ ವಸ್ತುಗಳು ಒಂದು ಅದೃಷ್ಟವನ್ನು ನಾಶಮಾಡುವುದಿದ್ದರೆ ಅದು ಫಲಮಾತ್ರವಾಗಿರುತ್ತದೆ. ಅಂದರೆ ಆ ನಾಶವಾಗಬೇಕಾದ ಅದೃಷ್ಟಕ್ಕೆ ಏನು ಫಲವೋ ಆ ಫಲವನ್ನು ಅನುಭವಿಸಿಯೇ ಅದೃಷ್ಟವು ನಾಶವಾಗಬೇಕು. ಪ್ರಕೃತ ಶಾಸ್ತ್ರದಲ್ಲಿ ಎಲ್ಲಿಯೂ ಕೂಡ ದಾಹಾದಿಗಳನ್ನು ಉಂಟುಮಾಡುವುದಕ್ಕೆ ಒಂದು ಸಾಕ್ಷಾಜ್ಜನಕವಾದ ಅದೃಷ್ಟವಿದೆ. ಈ ಅದೃಷ್ಟವನ್ನು ನಾಶಮಾಡುವುದಕ್ಕಾಗಿ ಮಣಿಯನ್ನು ಧರಿಸಬೇಕು ಎಂದು ಶಾಸ್ತ್ರದಲ್ಲಿ ಎಲ್ಲೂ ಬೋಧಿತವಾಗಿಲ್ಲ. ಅಲ್ಲದೇ ಈ ಸಾಕ್ಷಾಜ್ಜನಕವಾದ ಅದೃಷ್ಟಕ್ಕೆ ಮಣ್ಯಾದಿಗಳು ಫಲರೂಪವೂ ಆಗಿಲ್ಲ. ಹಾಗಾಗಿ ಸಾಕ್ಷಾಜ್ಜನಕವಾದ ಅದೃಷ್ಟವನ್ನು ಮಣ್ಯಾದಿಗಳು ನಾಶಮಾಡುತ್ತವೆ ಎಂಬ ವಿಷಯವೇ ಸರಿಯಲ್ಲ. ಇಲ್ಲಿ ಇನ್ನೊಂದು ವಿಷಯವನ್ನು ಗಮನಿಸಬೇಕು. ದಾಹವಾಗದೇ ಇರುವಂತೆ ನೋಡಿಕೊಳ್ಳಲು ಮಣಿ, ಮಂತ್ರ, ಓಷಧ ಈ ಮೂರು ಸಾಧನವಾಗಿವೆ. ಇವುಗಳಲ್ಲಿ ಮಣಿಯನ್ನು ಹೊರತುಪಡಿಸಿ ಮಂತ್ರವನ್ನು ಶಾಸ್ತ್ರದಲ್ಲಿ ವಿಧಾನಮಾಡಿದ್ದಾರೆ. ಅದೇ ರೀತಿ ಓಷಧವನ್ನು ಆಯುರ್ವೇದ ಗ್ರಂಥಗಳಲ್ಲಿ ವಿಧಾನಮಾಡಿದ್ದಾರೆ. ಹೀಗೆ ಓಷಧ ಮತ್ತು ಮಂತ್ರಗಳು ಶಾಸ್ತ್ರದಲ್ಲಿ ವಿಹಿತವಾಗಿವೆ, ಹಾಗಾಗಿ ಅದೃಷ್ಟವು ನಾಶವಾಗಬಹುದು ಎಂಬ ಶಂಕೆ ಬರಬಹುದಾದರೂ ಶಾಸ್ತ್ರದಲ್ಲಿ ಮಂತ್ರವನ್ನು ವಿಧಾನಮಾಡುವಾಗ ಈ ಮಂತ್ರವು ದಾಹಜನಕವಾದ ಸಾಕ್ಷಾತ್ ಅದೃಷ್ಟವನ್ನು ವಿನಾಶಮಾಡುತ್ತದೆ ಎಂದು ಹೇಳಿಲ್ಲ ಹೊರತು ದಾಹವಾಗದೇ ಇರುವಂತೆ ಮಂತ್ರವನ್ನು ಉಚ್ಚರಿಸಬೇಕು ಎಂದಷ್ಟೇ ಹೇಳಿದ್ದಾರೆ. ಅದೇ ರೀತಿ ಆಯುರ್ವೇದ ಗ್ರಂಥಗಳಲ್ಲೂ ಕೂಡ ಓಷಧವನ್ನು ಲೇಪಿಸಿಕೊಂಡಾಗ ಸಾಕ್ಷಾಜ್ಜನಕವಾದ ಅದೃಷ್ಟವು ನಾಶವಾಗುತ್ತದೆ ಎಂದು ವಿವರಣೆಯನ್ನು ನೀಡಿಲ್ಲ. ಹೊರತಾಗಿ ದಾಹವಾಗದೇ ಇರುವಂತೆ ಓಷಧವನ್ನು ಲೇಪಿಸಿಕೊಳ್ಳಬೇಕು ಎಂದಷ್ಟೇ ವಿಧಾನ ಮಾಡಿದಾರೆ.

ಹೀಗೆ ಅದೃಷ್ಟನಾಶಕತ್ವೇನ ಮಂತ್ರವಾಗಲೀ, ಓಷಧವಾಗಲೀ ವಿಹಿತವೂ ಅಲ್ಲ, ಬೋಧಿತವೂ ಅಲ್ಲ. ಮಣಿಯಂತೆ ಮಂತ್ರವೂ, ಓಷಧವೂ ವಿಹಿತವಾಗಿಲ್ಲ ಎಂಬ ಅಂಶವನ್ನು ಗಮನಿಸಬೇಕು. ಹೀಗೆ ಅದೃಷ್ಟ ನಾಶಕತ್ವೇನ ಶಾಸ್ತ್ರದಲ್ಲಿ ಬೋಧಿತವೂ ಅಲ್ಲದ, ವಿಹಿತವೂ ಅಲ್ಲದ ಅಥವಾ ಅದೃಷ್ಟದ ಫಲರೂಪವೂ ಆಗಿಲ್ಲದ ಮಣ್ಯಾದಿಗಳಿಂದ ಅದೃಷ್ಟವು ನಾಶವಾಗುತ್ತದೆ ಎಂದು ಒಪ್ಪಿಕೊಂಡಲ್ಲಿ ವೈದಿಕ ಕರ್ಮಗಳಲ್ಲಿ ಸಂದೇಹವಿಲ್ಲದೆ ಯಾರೂ ಪ್ರವೃತ್ತಿಯನ್ನು ಮಾಡಲು ಸಾಧ್ಯವಾಗುವುದಿಲ್ಲ.

ಹೇಗೆಂದರೆ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂಬ ಶ್ರುತಿಯಲ್ಲಿ ಸ್ವರ್ಗವನ್ನು ಅಪೇಕ್ಷೆಪಡುವವನು ಜ್ಯೋತಿಷ್ಟೋಮ ಯಾಗವನ್ನು ಮಾಡಬೇಕು ಎಂದು ವಿಧಾನಮಾಡಿದ್ದಾರೆ. ಈ ಜ್ಯೋತಿಷ್ಟೋಮ ಯಾಗವು ಅದೃಷ್ಟವನ್ನು ಹುಟ್ಟಿಸುವುದರ ಮೂಲಕ ಅಥವಾ ಪುಣ್ಯವನ್ನು ಹುಟ್ಟಿಸುವುದರ ಮೂಲಕ ಸ್ವರ್ಗಕ್ಕೆ ಕಾರಣವಾಗಿದೆ. ಆದರೆ ಈ ಸ್ವರ್ಗಕ್ಕೆ ಕಾರಣವಾದ ಜ್ಯೋತಿಷ್ಟೋಮ ಯಾಗವನ್ನು ಮಾಡಿದರೂ ಸ್ವರ್ಗರೂಪ ಫಲವನ್ನು ನೀಡುವುದಕ್ಕೆ ಅಥವಾ ಸ್ವರ್ಗಪ್ರಾಪ್ತಿ ರೂಪವಾದ ಕಾರ್ಯಕ್ಕೆ ಸಾಕ್ಷಾಜ್ಜನಕವಾದ ಒಂದು ಅದೃಷ್ಟವಿದ್ದು, ಈ ಅದೃಷ್ಟವು ಸಂಬಂಧವೇ ಇಲ್ಲದ ಬೇರೊಂದು ವಸ್ತುವಿನಿಂದ ನಾಶವಾಗಬಹುದು ಎಂಬ ಶಂಕೆ ಬರುತ್ತದೆ.

ಈ ಶಂಕೆ ಇದ್ದಾಗ ವೈದಿಕ ಕರ್ಮದಲ್ಲಿ ಪ್ರವೃತ್ತಿ ಆಗಲಾರದು. ಏಕೆಂದರೆ ಜ್ಯೋತಿಷ್ಟೋಮವು ಸ್ವರ್ಗವನ್ನು ಕುರಿತು ಸಾಕ್ಷಾಜ್ಜನಕ ಅಲ್ಲ. ಜ್ಯೋತಿಷ್ಟೋಮವು ಅದೃಷ್ಟವನ್ನು ಉಂಟುಮಾಡುವುದರ ಮೂಲಕ ಸ್ವರ್ಗಕ್ಕೆ ಜನಕವಾಗಿದೆ. ಹಾಗಾಗಿ ಸಾಕ್ಷಾಜ್ಜನಕವಾದ ಅದೃಷ್ಟವು ಬೇರೊಂದು ಇದ್ದು, ಅಂತಹ ಅದೃಷ್ಟವನ್ನು ಬೇರಾವುದೋ ಒಂದು ವಸ್ತು, ಅಂದರೆ ಮಣ್ಣು, ಕಲ್ಲು ಇತ್ಯಾದಿ ಯಾವುದೇ ಒಂದು ಸಂಬಂಧವೇ ಇಲ್ಲದ ವಸ್ತು ಅದನ್ನು ನಾಶಮಾಡಬಹುದು ಎಂಬ ಶಂಕೆ ಬಂದೇ ಬರುತ್ತದೆ.

ಮೂಲದಲ್ಲಿ ಸಾಕ್ಷಾಜ್ಜನಕವಾದ ಅದೃಷ್ಟವನ್ನು ಒಪ್ಪಿಕೊಂಡರೂ ಅದು ಮಣ್ಯಾದಿಗಳಿಂದ ನಾಶವಾಗುವುದಿಲ್ಲ ಎಂದು ಹೇಳಿದ್ದಾರೆ. ಒಂದುವೇಳೆ ಸಾಕ್ಷಾಜ್ಜನಕವಾದ ಅದೃಷ್ಟವು ಮಣ್ಯಾದಿಗಳಿಂದ ನಾಶವಾಗುತ್ತಿದ್ದರೆ ಆಗ ಮಣ್ಯಾದಿಗಳಿಗೆ ಶಕ್ತಿಯನ್ನು ಒಪ್ಪಿಕೊಳ್ಳದೇ ಪ್ರತಿಬಂಧಕತ್ವವನ್ನು ಒಪ್ಪಿಕೊಳ್ಳಬಹುದಿತ್ತು. ಆದರಿಂದ ನಮಗೆ ದೋಷ ಸಂಭವಿಸುತ್ತಿತ್ತು.

ಶಕ್ತಿವಾದ

ಆದರೆ ಮಣ್ಯಾದಿಗಳಿಂದ ಸಾಕ್ಷಾಜ್ಜನಕ ಅದೃಷ್ಟವೇ ನಾಶವಾಗುವುದಿಲ್ಲ. ಹಾಗಾಗಿ ನೀವು ಹೇಳುವ ದೋಷ ನಮಗೆ ಬರಲಾರದು. ಮಣ್ಯಾದಿಗಳಿಂದ ಸಾಕ್ಷಾಜ್ಜನಕವಾದ ಅದೃಷ್ಟವು ನಾಶವಾಗುವುದಿಲ್ಲ ಎಂದು ಹೇಗೆ ಹೇಳುತ್ತೀರಿ ಎಂಬುದಕ್ಕೆ ಉತ್ತರವಾಗಿ 'ಅದೃಷ್ಟಸ್ಯ' ಇತ್ಯಾದಿ ವಾಕ್ಯಗಳನ್ನು ಹೇಳುತ್ತಿದ್ದಾರೆ.

ಪ್ರಬಲವಾದ ದುರಿತಾದೃಷ್ಟವು ಪುಣ್ಯರೂಪವಾದ ಅದೃಷ್ಟವನ್ನು ನಾಶಮಾಡುತ್ತದೆ ಎಂದು ವಿಹಿತವಾಗಿದೆ. ಅದೇ ರೀತಿ ಪ್ರಬಲವಾದ ಪುಣ್ಯಾದೃಷ್ಟವು ದುರಿತಾದೃಷ್ಟವಾದ ನಾಶಮಾಡುತ್ತದೆ ಎಂದು ವಿಹಿತವಾಗಿದೆ. ಹೀಗೆ ಮಣ್ಯಾದಿಗಳು ಈ ರೀತಿ ವಿಹಿತವಾಗದೆ ಇರುವುದರಿಂದ ಮಣ್ಯಾದಿಗಳು ಅದೃಷ್ಟವನ್ನು ನಾಶಗೊಳಿಸಲಾರವು ಎಂದು ಅರ್ಥ. ಏಕೆಂದರೆ ಅದೃಷ್ಟವು ವಿಹಿತವಾದ ಕ್ರಿಯೆಗಳಿಂದ ಹುಟ್ಟಿದೆ. ವಿಹಿತವಾದ ಕ್ರಿಯೆಯಿಂದ ಹುಟ್ಟಿರುವಂತದ್ದು ವಿಹಿತವಾದುದ್ದರಿಂದಲೇ ನಾಶವಾಗಬೇಕು. ಹೀಗೆಂದ ಮಾತ್ರಕ್ಕೆ ವಿಹಿತಕ್ಕಿಂತ ಇತರವಾದುದರಿಂದ ಅದೃಷ್ಟವು ನಾಶವಾಗುವುದೇ ಇಲ್ಲ ಎಂದು ನಾವು ಹೇಳುತ್ತಿಲ್ಲ. ವಿಹಿತವಾದ ಇತರದಿಂದ ಅದೃಷ್ಟವು ನಾಶವಾಗುವುದಿದ್ದರೆ ಅದು ಫಲದಿಂದ ಮಾತ್ರ ನಾಶವಾಗುತ್ತದೆ ಎಂದು ಹೇಳುತ್ತೇವೆ. ಮಣ್ಯಾದಿರೂಪವಾದ ಪ್ರತಿಬಂಧಕವು ಅದೃಷ್ಟನಾಶಕತ್ವೇನ ವಿಹಿತವೂ ಅಲ್ಲ ಅದೃಷ್ಟಕ್ಕೆ ಫಲರೂಪವೂ ಆಗಿಲ್ಲ. ಹೀಗೆ ಫಲವೂ ಅಲ್ಲದ, ವಿಹಿತವೂ ಅಲ್ಲದ ಮಣ್ಯಾದಿಗಳಿಂದ ಅದೃಷ್ಟವು ನಾಶವಾಗಲಾರದು.

ಇಲ್ಲಿ ವಿಹಿತ ಕ್ರಿಯೆಗಳಿಂದ ಹುಟ್ಟಿದ ಅದೃಷ್ಟವು ವಿಹಿತವಾದುದ್ದರಿಂದಲೇ ನಾಶವಾಗುತ್ತದೆ ಎಂಬಲ್ಲಿ ಕೀರ್ತನಾದಿಗಳನ್ನು ಸ್ವೀಕರಿಸಬೇಕು. ಏಕೆಂದರೆ 'ಧರ್ಮಃ ಕ್ಷರತಿ ಕೀರ್ತನಾತ್' ಇತ್ಯಾದಿ ವಾಕ್ಯಗಳಿಂದ ನಾವು ಮಾಡಿದ ಧರ್ಮವು ಕೀರ್ತನೆಯಿಂದ ನಾಶವಾಗುತ್ತದೆ ಎಂದು ಹೇಳಿದ್ದಾರೆ. ಇಲ್ಲಿ ವಿಹಿತವಾದ ಧರ್ಮದಿಂದ ಉಂಟಾದ ಅದೃಷ್ಟವು ಕೀರ್ತನರೂಪವಾದ ಕ್ರಿಯೆಯಿಂದ ಅದೃಷ್ಟದಿಂದ ನಾಶವಾಗುತ್ತದೆ.

ಹಿಂದೆ ಅದೃಷ್ಟಸ್ಯ ಅದೃಷ್ಟನಾಶಕತ್ವೇನ ಎಂಬ ವಾಕ್ಯದಲ್ಲಿ ವಿಭಾಗಮಾಡಿ 'ಅದೃಷ್ಟಸ್ಯ ಅದೃಷ್ಟನಾಶಕತ್ವೇನ ನ ತನ್ಮಣ್ಯಾದಿವಿನಾಶ್ಯಂ' ಎಂಬುದಾಗಿಯೂ ವಿಹಿತೇತರಫಲಮಾತ್ರನಾಶ್ಯತ್ವಾತ್ ನ ತನ್ಮಣ್ಯಾದಿವಿನಾಶ್ಯಂ' ಎಂಬುದಾಗಿಯೂ ಅರ್ಥವನ್ನು ಹೇಳಿದ್ದಾರೆ. ಈಗ ಅದನ್ನು ಒಂದೇ ವಾಕ್ಯ ಎಂದು ಇಟ್ಟುಕೊಂಡು ಅರ್ಥವನ್ನು ಹೇಳುತ್ತಿದ್ದಾರೆ.

'ಯದ್ವಾ ಅದೃಷ್ಟಸ್ಯ ನಾಶ್ಯತ್ವಾತ್ ಇತ್ಯನ್ವಯಃ' ಅಂದರೆ ಅದೃಷ್ಟಸ್ಯ ಎಂಬ ಪದಕ್ಕೆ ನಾಶ್ಯತ್ವಾತ್ ಎಂಬಲ್ಲಿ ಅನ್ವಯವನ್ನು ಹೇಳಬೇಕು. ಇಲ್ಲಿ ಅರ್ಥಮಾಡುವ ಕ್ರಮ ಹೀಗಿದೆ - 'ಅದೃಷ್ಟನಾಶಕತ್ವೇನ ಯದ್ವಿಹಿತಂ ಪ್ರಾಯಶ್ಚಿತ್ತಾದಿ ತದಿತರೇಣ ಫಲಮಾತ್ರೇಣ ನಾಶ್ಯತ್ವಾತ್ ಇತ್ಯರ್ಥಃ' ಅಂದರೆ ಅದೃಷ್ಟನಾಶಕತ್ವೇನ ಎಂಬುದಾಗಿ ಏನು ಪ್ರಾಯಶ್ಚಿತ್ತಾದಿಗಳನ್ನು ಹೇಳಿದ್ದರೋ ಅದರಿಂದ ನಾಶವಾಗುತ್ತದೆ, ಅದಕ್ಕಿಂತ ಇತರದಿಂದ ನಾಶವಾಗುವುದಿದ್ದರೆ ಅದು ಕೇವಲ ಫಲದಿಂದ ನಾಶವಾಗುತ್ತದೆ ಎಂಬ ಅರ್ಥವನ್ನು ಆ ವಾಕ್ಯಕ್ಕೆ ಹೇಳಬೇಕು.

ಮಣ್ಯಾದಿಗಳು ಅದೃಷ್ಟನಾಶಕತಯಾ ವಿಹಿತವಾಗಿಲ್ಲದೇ ಇರುವುದರಿಂದ ಜೊತೆಗೆ ಅದು ಫಲರೂಪವೂ ಅಲ್ಲದೇ ಇರುವುದರಿಂದ ಮಣ್ಯಾದಿಗಳು ಅದೃಷ್ಟದಿಂದ ನಾಶವಾಗಲಾರದು ಎಂದು ಅಭಿಪ್ರಾಯ.

## ಚಂದ್ರಕಾಂತಮಣಿಯು ಅದೃಷ್ಟಜನಕವೆಂದರೂ ಶಕ್ತಿಯನ್ನೊಪ್ಪಬೇಕು

**ತರ್ಕತಾಂಡವ – ನಾಪಿ - ಮಣಿನಾ ದಾಹಪ್ರತಿಪಕ್ಷಾದೃಷ್ಟಜನನಾದ್ದಾಹ-ವಿಲಂಬಃ, ಪ್ರತಿಪಕ್ಷಾದೃಷ್ಟಜನನೇ ಶೌಚಾದ್ಯನಪೇಕ್ಷಾದಿತಿ ವಾಚ್ಯಮ್ । ಪ್ರತಿಪಕ್ಷಾದೃಷ್ಟಸ್ಯಾಪಿ ಮಣಿತುಲ್ಯತಯಾ ತದ್ವಿಘಟನೀಯತ್ವೇನೈವ ಶಕ್ತಿಸಿದ್ಧೇಃ ॥**

ಅನುವಾದ - ಆಕ್ಷೇಪ - ದಾಹಕ್ಕೆ ಪ್ರತಿಕೂಲವಾದ ಅದೃಷ್ಟವನ್ನು ಮಣಿಯು ಹುಟ್ಟಿಸುತ್ತದೆ. ಆದ್ದರಿಂದ ಚಂದ್ರಕಾಂತಮಣಿಯಿದ್ದಾಗ ದಾಹವು ವಿಲಂಬವಾಗುತ್ತದೆಂದು ಉತ್ತರಿಸುತ್ತೇವೆ. ಪ್ರತಿಕೂಲವಾದ ಅದೃಷ್ಟವನ್ನು ಹುಟ್ಟಿಸುವ ವಿಷಯದಲ್ಲಿ ಶೌಚ, ಆಚಮನ ಮೊದಲಾದವುಗಳು ಅನಾವಶ್ಯಕ.

ನಿರಾಕರಣೆ - ಇದು ತಪ್ಪು. ಪ್ರತಿಕೂಲವಾದ ಅದೃಷ್ಟವೂ ಕೂಡ ಮಣಿಸಮಾನವಾಗಿ ಶಕ್ತಿಗೆ ವಿಘಟಕವಾಗಿದೆ ಎಂದೇ ಒಪ್ಪಬೇಕು. ಆದ್ದರಿಂದ ಘಟ್ಟಕುಟ್ಟಿಪ್ರಭಾತನ್ಯಾಯದಿಂದ ನೀವು ಶಕ್ತಿಯನ್ನು ಒಪ್ಪಿದಂತಾಯಿತು.

## ಮಣಿಯಿಂದ ಅದೃಷ್ಟಹುಟ್ಟಲು ಶೌಚಾಚಮನಗಳು ಬೇಡ

ನ್ಯಾಯದೀಪ–(ದ್ವಿತೀಯಂ ನಿರಾಹ) - ನಾಪೀತಿ।। ಪ್ರತಿಪಕ್ಷೇಪಿ।। ಪ್ರತಿಕೂಲೇತ್ಯರ್ಥಃ।। ಶೌಚಾಚಮನಾದೇರಭಾವೇ ಕಥಮದೃಷ್ಟಜನ್ಮೇತ್ಯತ ಆಹ – ಪ್ರತಿಪಕ್ಷೇತಿ ।।

ಅನುವಾದ - ಗ್ರಂಥದಲ್ಲಿರುವ ಪ್ರತಿಪಕ್ಷ ಶಬ್ದಕ್ಕೆ ಪ್ರತಿಕೂಲ ಎಂದರ್ಥ. ಶೌಚಾಚಮನಗಳು ಇಲ್ಲದಿದ್ದಾಗ ಅದೃಷ್ಟವು ಹೇಗೆ ಹುಟ್ಟುತ್ತದೆ ? ಎಂಬ ಪ್ರಶ್ನೆಗೆ 'ಪ್ರತಿಪಕ್ಷ' ಇತ್ಯಾದಿ ವಾಕ್ಯಗಳು ಹೊರಟಿದೆ.

ವಿವರಣೆ - ಮಂತ್ರವನ್ನು ಉಚ್ಚಾರಣೆ ಮಾಡುವ ಸಂದರ್ಭದಲ್ಲಿ ಕರ್ತೃವಾದವನು ಶುಚಿಯಾಗಿರಬೇಕು. ಆಚಮನಾದಿಗಳನ್ನು ಮಾಡಿರಬೇಕು. ಆಗ ಮಾತ್ರ ಅವನು ಉಚ್ಚರಿಸುವ ಮಂತ್ರದಿಂದ ಅದೃಷ್ಟವು ಹುಟ್ಟುತ್ತದೆ. ಅದರಂತೆ ಪ್ರಕೃತ ಚಂದ್ರಕಾಂತಮಣಿಯಿಂದಲೂ ಕೂಡ ದಾಹಪ್ರತಿಕೂಲವಾದ ಅದೃಷ್ಟವು ಹುಟ್ಟಬೇಕಾದರೆ ಶೌಚ ಆಚಮನ ಮೊದಲಾದವುಗಳು ಆವಶ್ಯಕವಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಮೂಡುತ್ತದೆ. ಇದಕ್ಕೆ ಗ್ರಂಥಕಾರರು ಪ್ರತಿಪಕ್ಷ 'ಅದೃಷ್ಟಜನನೇ ಶೌಚಾದ್ಯನಪೇಕ್ಷಾತ್' ಎಂಬುದಾಗಿ ಪೂರ್ವಪಕ್ಷಕಾರರ ಉತ್ತರವನ್ನು ತಿಳಿಸಿದ್ದಾರೆ. ಚಂದ್ರಕಾಂತಮಣಿಯಿಂದ ಹುಟ್ಟುವ ಅದೃಷ್ಟವು ದಾಹಜನನಕ್ಕೆ ಕೇವಲ ಪ್ರತಿಕೂಲವಾದ ಅದೃಷ್ಟವನ್ನು ಹುಟ್ಟಿಸುತ್ತಿರುವುದರಿಂದ ಇಲ್ಲಿ ಶೌಚ ಆಚಮನ ಮೊದಲಾದವುಗಳು ಅನಾವಶ್ಯಕವಾಗಿವೆ. ಕೇವಲ ಪ್ರತಿಬಂಧಕವಾಗಬೇಕಾದರೆ ಶೌಚಾದಿಗಳ ಆವಶ್ಯಕತೆ ಇರುವುದಿಲ್ಲ ಎಂದಭಿಪ್ರಾಯ.

## ತಾರ್ಕಿಕರಿಗೆ ಶಕ್ತಿಯನ್ನೊಪ್ಪದೇ ಬೇರೆ ಉಪಾಯವಿಲ್ಲ

ನ್ಯಾಯದೀಪ – ನನು - 'ಪ್ರತಿಕೂಲಾದೃಷ್ಟಸ್ಯ ಮಣ್ಯಾದಿಜನ್ಯಸ್ಯ ನ ಶಕ್ತಿವಿಘಟಕತ್ವೇನ ದಾಹಪ್ರತಿಬಂಧಕತಾ, ಕಿಂ ತು ಪ್ರತಿಕೂಲಾದೃಷ್ಟಾಂತರಜನಕತ್ವೇನೇತಿ ಚೇತ್, ತರ್ಹ್ಯನವಸ್ಥಾಪತ್ತಿಃ।

ಅನುವಾದ - ಆಕ್ಷೇಪ - ಪ್ರತಿಕೂಲವಾದ ಅದೃಷ್ಟವು ಮಣ್ಯಾದಿಗಳಿಂದ ಜನ್ಯವಾಗಿದೆ. ಹೀಗಂದ ಮಾತ್ರಕ್ಕೆ ಆ ಅದೃಷ್ಟವು ಶಕ್ತಿವಿಘಟಕವೆಂದು ಒಪ್ಪಿದರೆ ಮಾತ್ರ ದಾಹಪ್ರತಿಬಂಧಕವಾಗಬೇಕಾಗಿಲ್ಲ ಹೊರತಾಗಿ ಪ್ರತಿಕೂಲವಾದ ಮತ್ತೊಂದು ಅದೃಷ್ಟದ ಜನಕವಾಗುವ ಮೂಲಕ ದಾಹಕ್ಕೆ ಪ್ರತಿಬಂಧಕವಾಗುತ್ತದೆ ಎಂದು ಉತ್ತರಿಸುತ್ತೇವೆ.

ನಿರಾಕರಣೆ - ಪೂರ್ವಪಕ್ಷಕಾರರ ಈ ಸಮಾಧಾನವು ಅಯುಕ್ತವಾಗಿದೆ. ಏಕೆಂದರೆ ಪ್ರತಿಕೂಲದ ಅದೃಷ್ಟಾಂತರಕ್ಕೆ ಅದು ಜನಕವಾಗಿದೆ ಎಂದು ಹೇಳುವುದಾದರೆ, ಅದಕ್ಕೂ ಕೂಡ ಮತ್ತೊಂದು ಪ್ರತಿಕೂಲವಾದ ಅದೃಷ್ಟಾಂತರಜನಕತ್ವವನ್ನು ಒಪ್ಪಬೇಕಾಗುತ್ತದೆ. ಹೀಗೆ ಅನೇಕ ಅದೃಷ್ಟಗಳನ್ನು ಕಲ್ಪನೆ ಮಾಡುವ ಪರಿಸ್ಥಿತಿ ಬರುವುದರಿಂದ ಅನವಸ್ಥಾದೋಷವು ಪ್ರಾಪ್ತವಾಗುತ್ತದೆ. ಆದ್ದರಿಂದ ಮಣ್ಯಾದಿಗಳಿಂದ ಹುಟ್ಟಿದ ಪ್ರತಿಕೂಲವಾದ ಅದೃಷ್ಟವು ಶಕ್ತಿಯನ್ನು ವಿಘಟನೆ ಮಾಡುವ ಮೂಲಕವೇ ದಾಹಪ್ರತಿಬಂಧಕವಾಗುತ್ತದೆ ಎಂದು ಒಪ್ಪಬೇಕು. ಆದ್ದರಿಂದ ತಾರ್ಕಿಕರಿಗೆ ಶಕ್ತಿಯನ್ನು ಒಪ್ಪದೇ ಬೇರೆ ಉಪಾಯ ಇರುವುದಿಲ್ಲ.

## ಮಧ್ಯದಲ್ಲಿ ಅದೃಷ್ಟವು ಅನಾವಶ್ಯಕ

ನ್ಯಾಯದೀಪ - ಏವಂ ತರ್ಹಿ ಸ್ವಭಾವ-ರೂಪದಾಹಕಾರಣವಿಘಟನರೂಪತ್ವೇನ ಪ್ರತಿಪಕ್ಷಾದೃಷ್ಟಸ್ಯ ದಾಹಪ್ರತಿಬಂಧಕತಾಸ್ತು, ಇತಿ ಚೇನ್ನ । ಏವಂ ಹಿ ಮಣ್ಯಾದೇರೇವ ತಥಾತ್ವೋಪಪತ್ತೌ ಕಿಂ ಪ್ರತಿಪಕ್ಷಾದೃಷ್ಟಜನ್ಮಕಲ್ಪನಯಾ ॥

ಅನುವಾದ - ಆಕ್ಷೇಪ - ಹಾಗಾದರೆ ತನ್ನ ಅಭಾವರೂಪವಾದ ದಾಹಕಾರಣವಿಘಟನದ್ವಾರ ಪ್ರತಿಪಕ್ಷವಾದ ಅದೃಷ್ಟಕ್ಕೆ ದಾಹಪ್ರತಿಬಂಧಕತ್ವವನ್ನು ಒಪ್ಪಬಹುದಲ್ಲವೇ?

ನಿರಾಕರಣೆ - ಹೀಗೆ ಹೇಳುವುದಾದರೆ ಮಣ್ಯಾದಿಗಳಿಗೆ ನೇರವಾಗಿ ದಾಹಪ್ರತಿಬಂಧಕತ್ವವನ್ನು ಹೇಳುವುದೇ ಸುಲಭ. ಮಧ್ಯದಲ್ಲಿ ಪ್ರತಿಪಕ್ಷವಾದ ಅದೃಷ್ಟದ ಹುಟ್ಟುವಿಕೆಯನ್ನು ಒಪ್ಪುವುದು ಅನಾವಶ್ಯಕ. ಹಾಗೆಯೇ ಒಪ್ಪುವುದರಿಂದ ಕಲ್ಪನಾಗೌರವದೋಷವಷ್ಟೇ ಪ್ರಾಪ್ತವಾಗುತ್ತದೆ.

## ಅಭಾವವು ಕಾರಣವಾಗಬಹುದೇ ?

**ತರ್ಕತಾಂಡವ - ನಾಪಿ - ಮಣ್ಯಾದ್ಯಭಾವರೂಪದೃಷ್ಟಕಾರಣಾಭಾವಾದೇವ ದಾಹವಿಲಂಬಃ, ಅಭಾವಸ್ಯಾಪಿ ಭಾವವತ್, ಗ್ರಾಹಕತೌಲ್ಯೇನ ಕಾರಣತ್ವಾತ್; ತ್ವಯಾಪಿ ವಿಶೇಷದರ್ಶನೇನ ಭ್ರಮಸ್ಯ, ವಿಹಿತಾಕಾರಣೇನ ಪ್ರತ್ಯವಾಯಸ್ಯ, ನಿರ್ದೋಷತ್ವಾದಿನಾ ವೇದಪ್ರಮಾಣ್ಯಾದೇಶ್ಚ ಸ್ವೀಕೃತತ್ವಾದಿತಿ ವಾಚ್ಯಮ್ । ಉತ್ತೇಜಕಸಮಯೇ ಮಣಿಸತ್ವೇಪಿ ದಾಹದರ್ಶನೇನ ಮಣ್ಯಾದ್ಯಭಾವಸ್ಯಾಹೇತುತ್ವಾತ್ ॥**

ಅನುವಾದ - ಆಕ್ಷೇಪ - ಮಣ್ಯಾದ್ಯಭಾವ ಎಂಬ ದೃಷ್ಟಕಾರಣ ಇಲ್ಲದ್ದರಿಂದಲೇ ದಾಹವು ವಿಲಂಬವಾಗಿದೆ ಎಂಬ ಮೂರನೆಯ ಪಕ್ಷವನ್ನು ನಾವು ಅಂಗೀಕರಿಸುತ್ತೇವೆ. ಅಭಾವವು ಕಾರ್ಯೋತ್ಪತ್ತಿಗೆ ಹೇಗೆ ಕಾರಣವಾಗುತ್ತದೆ ಎಂದು ನೀವು ಆಕ್ಷೇಪ ಮಾಡಬಹುದು. ಆದರೆ ನಾವಷ್ಟೇ ಅಲ್ಲದೇ ತಮ್ಮ ಮತದಲ್ಲಿಯೂ ಕೂಡ ಅಭಾವಕ್ಕೆ ಕಾರಣತ್ವವನ್ನು ಅನೇಕ ಕಡೆ ಅಂಗೀಕರಿಸಲಾಗಿದೆ.

ಭಾವಪದಾರ್ಥವು ಅನ್ವಯವ್ಯತಿರೇಕದಿಂದ ಕಾರ್ಯೋತ್ಪತ್ತಿಗೆ ಕಾರಣವಾಗುವುದು ಲೋಕಸಿದ್ಧವಾಗಿದೆ. ಅದರಂತೆ ಅಭಾವಪದಾರ್ಥದಲ್ಲಿಯೂ ಕೂಡ ಅನ್ವಯವ್ಯತಿರೇಕವಿರುವುದರಿಂದ ಭಾವಪದಾರ್ಥದಂತೆ ಕಾರಣತ್ವವನ್ನು ಒಪ್ಪಲೇಬೇಕು. ('ಗ್ರಾಹಕತೌಲ್ಯೇನ' ಎಂದರೆ ಅನ್ವಯವ್ಯತಿರೇಕವು ಸಮಾನವಾಗಿರುವುದರಿಂದ ಎಂದರ್ಥ.)

೧. ಶುಕ್ತಿರಜತಸ್ಥಳದಲ್ಲಿ ಶುಕ್ತಿತ್ವವೆಂಬ ವಿಶೇಷಜ್ಞಾನವಿಲ್ಲದ್ದರಿಂದಲೇ ರಜತದ ಭ್ರಾಂತಿಯು ಹುಟ್ಟುತ್ತದೆ ಎಂದು ನಿಮ್ಮ ಸಿದ್ಧಾಂತದಲ್ಲಿಯೂ ಅಂಗೀಕಾರ ಮಾಡಿರುವಿರಿ. ಇಲ್ಲಿ ಶುಕ್ತಿತ್ವಜ್ಞಾನಾಭಾವವು ರಜತಭ್ರಮ ಎಂಬ ಕಾರ್ಯದ ಉತ್ಪತ್ತಿಗೆ ಕಾರಣವೆಂದು ಒಪ್ಪಿದಂತಾಯಿತು.

**೨. ವಿಹಿತವಾದ ಆಚರಣೆಯನ್ನು ಮಾಡದಿದ್ದಾಗ ಪ್ರತ್ಯವಾಯ ಬರುತ್ತದೆಂದು ಒಪ್ಪುತ್ತೀರಿ. ಇಲ್ಲಿ ವಿಹಿತಕರಣಾಭಾವವು ಪ್ರತ್ಯವಾಯವೆಂಬ ಕಾರ್ಯದ ಉತ್ಪತ್ತಿಗೆ ಕಾರಣವೆಂದು ಒಪ್ಪಿದಂತಾಯಿತು.**

೩. ನಿರ್ದೋಷತ್ವದಿಂದ ವೇದಪ್ರಾಮಾಣ್ಯವು ಸಿದ್ಧವಾಗುತ್ತದೆ ಎಂದು ಹೇಳಿದಿರಿ. ನಿರ್ದೋಷತ್ವ ಎಂದರೆ ದೋಷಾಭಾವ ಎಂದರ್ಥ. ಆದ್ದರಿಂದ ವೇದಪ್ರಾಮಾಣ್ಯವೆಂಬ ಕಾರ್ಯದ ಉತ್ಪತ್ತಿಗೆ ದೋಷಾಭಾವವು ಕಾರಣವೆಂದು ಒಪ್ಪಿದಂತಾಯಿತು. ಹೀಗೆ ಅನೇಕ ಕಡೆ ಅಭಾವಕ್ಕೂ ಕೂಡ ಕಾರ್ಯೋತ್ಪಾದಕತ್ವವನ್ನು ನೀವು ಅಂಗೀಕಾರ ಮಾಡಿರುವಿರಿ.

ಸಮಾಧಾನ - ಹೀಗೆ ಆಕ್ಷೇಪ ಮಾಡಬಾರದು. ಒಂದುವೇಳೆ ಮಣ್ಯಾದ್ಯಭಾವವೆಂಬ ದೃಷ್ಟಕಾರಣಭಾವದಿಂದಲೇ ದಾಹದ ಅನುತ್ಪತ್ತಿಯನ್ನು ಕೂಡಿಸಲು ಸಾಧ್ಯವಿಲ್ಲ. ಏಕೆಂದರೆ ಕೆಲವೆಡೆ ಮಣಿಯೇ ಇದ್ದಾಗ ಉತ್ತೇಜಕವಿದ್ದಲ್ಲಿ ದಾಹವು ಉಂಟಾಗುವುದು ಕಾಣಿಸುತ್ತಿದೆ. ಆದ್ದರಿಂದ ಮಣ್ಯಭಾವವನ್ನು ದಾಹದ ಉತ್ಪತ್ತಿಗೆ ಪ್ರತಿಬಂಧಕವೆಂದು ಹೇಳಲು ಸಾಧ್ಯವಿಲ್ಲ.

## ತಾರ್ಕಿಕರು ಮೂರನೆಯ ಪಕ್ಷವನ್ನು ಅಂಗೀಕರಿಸಿದ್ದಾರೆ

ನ್ಯಾಯದೀಪ - ನನ್ವಸ್ತು ತರ್ಹಿ ತಥೈವೇತ್ಯತಸ್ತೃತೀಯಂ ಪಕ್ಷಂ ಸಯುಕ್ತಿಕಮಾಶಂಕ್ಯ ನಿರಾಹ – ನಾಪೀತಿ ॥ ವಾಚ್ಯಮಿತ್ಯನ್ವಯಃ । ಭಾವವತ್ ಭಾವಸ್ಯ ಕಾರಣತ್ವವತ್ ।

ಅನುವಾದ - ಮಣ್ಯಾದಿಗಳೇ ದಾಹಕಾರಣಕ್ಕೆ ವಿಘಟಕವಾಗಲಿ, ಅದೃಷ್ಟವನ್ನು ಮಧ್ಯದಲ್ಲಿ ನಾವು ಒಪ್ಪುವುದಿಲ್ಲ. ಆದ್ದರಿಂದ ಮೂರನೆಯ ಪಕ್ಷವನ್ನು ತಾರ್ಕಿಕರು ಯುಕ್ತಿಬದ್ಧವಾಗಿ ಸಮರ್ಥಿಸುತ್ತಾರೆ. ಅದನ್ನು ಪ್ರಕೃತ 'ನಾಪಿ' ಇತ್ಯಾದಿ ವಾಕ್ಯದಿಂದ ಆಶಂಕಿಸಿ ನಿರಾಕರಣೆ ಮಾಡುತ್ತಿದ್ದಾರೆ.

'ನಾಪಿ' ಎಂಬ ಪದಕ್ಕೆ 'ವಾಚ್ಯಮ್' ಎಂಬಲ್ಲಿ ಅನ್ವಯವನ್ನು ತಿಳಿಯಬೇಕು. ಮಧ್ಯದಲ್ಲಿರುವ ವಿಷಯವೆಲ್ಲವೂ ತಾರ್ಕಿಕರು ಮಾಡಿರುವ ಆಕ್ಷೇಪ ಭಾಗವೆಂದು ತಿಳಿಯಬೇಕು.

'ಭಾವವತ್' ಎಂಬ ಪದಕ್ಕೆ ಭಾವಪದಾರ್ಥಕ್ಕೆ ಕಾರಣತ್ವವನ್ನು ಒಪ್ಪಿದಂತೆ ಎಂದರ್ಥ.

## ಅಭಾವಕ್ಕೆ ಕಾರಣತ್ವವು ಪ್ರತಿವಾದಿಗಳಿಗೂ ಕೂಡ ಸಿದ್ಧ

ನ್ಯಾಯದೀಪ - ಅಭಾವಸ್ಯ ಹೇತುತಾ ನ ಕೇವಲಂ ಯುಕ್ತಿಸಿದ್ಧಾ ಪ್ರತಿವಾದಿಸಿದ್ಧಾ ಚೇತ್ಯಾಹ – ತ್ವಯಾಪೀತಿ ॥ ಅದರ್ಶನಾಕರಣನಿರ್ದೋಷಪದೈರಭಾವಸ್ಯೈವ ಪ್ರತೀತೇರಿತಿ ಭಾವಃ।

ಅನುವಾದ - ಅಭಾವಕ್ಕೆ ಕಾರಣತ್ವವು ಕೇವಲ ಯುಕ್ತಿಯಿಂದಷ್ಟೇ ಸಿದ್ಧವಾಗಿರುವುದಲ್ಲ. ಪ್ರತಿವಾದಿಯೂ ಕೂಡ ಇದನ್ನು ಅಂಗೀಕರಿಸಿದ್ದಾರೆಂಬುದಾಗಿ 'ತ್ವಯಾಪಿ' ಇತ್ಯಾದಿ ವಾಕ್ಯವು ಪ್ರತಿಪಾದನೆ ಮಾಡುತ್ತಿದೆ. ವಿಶೇಷ ಅದರ್ಶನೇನ ಎಂಬಲ್ಲಿ ಆದರ್ಶನ ಎಂಬ ಪದದಿಂದ ವಿಶೇಷಜ್ಞಾನಾಭಾವವು ಕಾರಣವೆಂದು ಹೇಳಿದಂತಾಯಿತು. ವಿಹಿತ ಅಕರಣೇನ ಎಂಬಲ್ಲಿರುವ ಅಕರಣೇನ ಎಂಬ ಪದದಿಂದ ವಿಹಿತ ಕರಣಾಭಾವವು ಕಾರಣವೆಂದು ಹೇಳಿದಂತಾಯಿತು. ನಿರ್ದೋಷತ್ವಾದಿನಾ ಎಂಬಲ್ಲಿರುವ ನಿರ್ದೋಷಪದದಿಂದ ದೋಷಾಭಾವವನ್ನು ಕಾರಣವೆಂದು ಹೇಳಿದಂತಾಯಿತು ಎಂಬ ಅಭಿಪ್ರಾಯವನ್ನು ತಿಳಿಯಬೇಕು.

## ಇನ್ನೂ ಕೆಲವು ಅಭಾವಗಳಿಗೆ ಕಾರಣತ್ವವನ್ನು ವಿವಕ್ಷಿಸಬೇಕು

ನ್ಯಾಯದೀಪ - ಆದಿಪದೇನ ಕುಡ್ಯಸಂಯೋಗಾಭಾವಸ್ಯ ಗತಾವನುಪಲಬ್ಧೇಶ್ಚಾ-ಭಾವಜ್ಞಾನೇ ಹೇತುತ್ವಮಪೀತಿ ಗೃಹ್ಯತೇ । ತಸ್ಮಾದಿತ್ಯುಕ್ತಮೇವ ಹೇತುತ್ರಯಂ ವ್ಯನಕ್ತಿ – ಮಣ್ಯಾದಿನೇತಿ ॥

ಅನುವಾದ - ಗ್ರಂಥದಲ್ಲಿ 'ನಿರ್ದೋಷತ್ವಾದಿನಾ' ಹಾಗೂ 'ವೇದಪ್ರಾಮಾಣ್ಯಾದೇಶ್ಚ' ಎಂಬಲ್ಲಿ ಆದಿಪದವನ್ನು ಪ್ರಯೋಗಿಸಿದ್ದಾರೆ. ಇದರಿಂದ ಕುಡ್ಯಸಂಯೋಗಾಭಾವವು ಗತಿಗೆ ಕಾರಣವಾಗಿದೆ ಎಂಬುದನ್ನು ಅನುಪಲಬ್ಧಿಯು ಅಭಾವಜ್ಞಾನಕ್ಕೆ ಕಾರಣವಾಗಿದೆ ಎಂಬುದನ್ನು ಉಪಲಕ್ಷಣಯಾ ವಿವಕ್ಷಿಸಬೇಕು.

ನಡೆದುಹೋಗುವಾಗ ಕುಡ್ಯಸಂಯೋಗವಾದರೆ ಮುಂದೆ ನಡೆಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಗೋಡೆ ಮೊದಲಾದ ತಡೆಗಳಿಲ್ಲದಿದ್ದರೆ ಮಾತ್ರ ಗಮನಕ್ರಿಯೆಯು ಉಂಟಾಗುತ್ತದೆ. ಹೀಗೆ ಗಮನಕ್ರಿಯೆಗೆ ಕುಡ್ಯಸಂಯೋಗಾದ್ಯಭಾವಗಳು ಕಾರಣವಾಗಿವೆ ಎಂದು ಒಪ್ಪಬೇಕು. ಇದರಂತೆ ಭೂತಲದಲ್ಲಿ ಘಟವಿಲ್ಲವೆಂಬ ಜ್ಞಾನವು ಹುಟ್ಟುತ್ತದೆ. ಇದಕ್ಕೆ ಕಾರಣ ಘಟದ ಉಪಲಬ್ಧಿ ಇಲ್ಲದಿರುವಿಕೆಯೇ ಆಗಿದೆ. ಆದ್ದರಿಂದ ಉಪಲಬ್ಧ್ಯಭಾವವು ಅಭಾವವನ್ನು ಕುರಿತು ಕಾರಣವಾಗಿದೆ ಎಂಬುದನ್ನೂ ಕೂಡ ಇಲ್ಲಿ ವಿವಕ್ಷಿಸಬೇಕು.

ತರ್ಕತಾಂಡವ – ತಸ್ಮಾನ್ಮಣ್ಯಾದಿನಾ ಪ್ರತಿಬಂಧದಶಾಯಾಂ ದಾಹಜನಕಾದೃಷ್ಟಸ್ಯ ಮಣ್ಯಾದಿನಾ ನಾಶಾದ್ವಾ ಮಣ್ಯಾದಿನಾ ದಾಹಪ್ರತಿಕೂಲಾದೃಷ್ಟಜನನಾದ್ವಾ ಮಣ್ಯಾದ್ಯಭಾವರೂಪದೃಷ್ಟಕಾರಣವಿರಹಾದ್ವಾ ದಾಹಾನುತ್ಪತ್ತಿರಿತಿ ಲೀಲಾವತ್ಯಾದ್ಯುಕ್ತಂ ಪಕ್ಷತ್ರಯಮಪ್ಯಯುಕ್ತಮ್ ॥

ಲೀಲಾವತ್ಯುಕ್ತಶಕ್ತ್ಯಪಲಾಪಪ್ರಕಾರಭಂಗಃ ॥

ಅನುವಾದ – ಆದ್ದರಿಂದ ಮಣಿ ಮೊದಲಾದವು ಪ್ರತಿಬಂಧಕವಿರುವಾಗ ದಾಹವು ಉಂಟಾಗದಿರಲು ಮೂರು ಕಾರಣಗಳು ಹೀಗಿವೆ -

೧. ದಾಹಜನಕವಾದ ಅದೃಷ್ಟವು ಮಣ್ಯಾದಿಗಳಿಂದ ನಾಶವಾಗಿದೆ.

೨. ಮಣ್ಯಾದಿಗಳಿಂದ ದಾಹಕ್ಕೆ ಪ್ರತಿಕೂಲವಾದ ಅದೃಷ್ಟವು ಉತ್ಪನ್ನವಾಗಿದೆ.

೩. ಮಣ್ಯಾದ್ಯಭಾವವೆಂಬ ದೃಷ್ಟಕಾರಣವು ನಾಶವಾಗಿದೆ. ಹೀಗೆ ಮೂರು ಕಾರಣಗಳಿಂದ ದಾಹದ ಅನುತ್ಪತ್ತಿಯನ್ನು ಕೂಡಿಸಬಹುದು ಎಂಬುದಾಗಿ ಲೀಲಾವತಿಯಲ್ಲಿ ಹೇಳಿದ ಮೂರು ಪಕ್ಷಗಳೂ ಅಯುಕ್ತವಾಗಿದೆ ಎಂಬುದು ಇಲ್ಲಿಯ ತನಕ ಸಿದ್ಧವಾಯಿತು.

ಇಲ್ಲಿಗೆ ಲೀಲಾವತಿಯಲ್ಲಿ ಹೇಳಿದ ಶಕ್ತ್ಯಪಲಾಪಪ್ರಕಾರಭಂಗವು ಸಮಾಪ್ತವಾಯಿತು.

ನ್ಯಾಯದೀಪ – ತಸ್ಮಾದಿತ್ಯುಕ್ತಮೇವ ಹೇತುತ್ರಯಂ ವ್ಯನಕ್ತಿ – ಮಣ್ಯಾದಿನೇತಿ ॥

ಲೀಲಾವತ್ಯುಕ್ತಶಕ್ತ್ಯಪಲಾಪಭಂಗಃ ॥

ಅನುವಾದ - 'ತಸ್ಮಾದ್' ಇತ್ಯಾದಿ ವಾಕ್ಯಗಳಿಂದ ಹೇಳಲ್ಪಟ್ಟ ಹೇತುತ್ರಯಗಳನ್ನು 'ಮಣ್ಯಾದಿನಾ' ಇತ್ಯಾದಿಯಾಗಿ ನಿಖರವಾಗಿ ಹೇಳುವ ಮೂಲಕ ಉಪಸಂಹಾರ ಮಾಡುತ್ತಿದ್ದಾರೆ.

ಲೀಲಾವತಿಯಲ್ಲಿ ಹೇಳಿದ ಶಕ್ಯಪಲಾಪಭಂಗವು ಸಮಾಪ್ತವಾಯಿತು

## ತತ್ವಚಿಂತಾಮಣಿಯಲ್ಲಿ ಶಕ್ತಿಯ ನಿರಾಸ

ತರ್ಕತಾಂಡವ– ಅತ್ರ ನೈಯಾಯಿಕಾಃ - ಉತ್ತೇಜಕಾಭಾವವಿಶಿಷ್ಟಮಣ್ಯಾದ್ಯಭಾವ-ರೂಪದೃಷ್ಟಕಾರಣವಿರಹಾದೇವ ದಾಹಾನುತ್ಪತ್ತ್ಯುಪಪತ್ತೇರ್ನ ಶಕ್ತಿಸಿದ್ಧಿಃ ॥

ಅನುವಾದ- ಲೀಲಾವತಿಯಲ್ಲಿ ಶಕ್ಯಪಲಾಪದ ಪ್ರಕಾರವನ್ನು ತಾರ್ಕಿಕರು ಹೀಗೆ ಹೇಳುತ್ತಾರೆ- ಉತ್ತೇಜಕಾಭಾವವಿಶಿಷ್ಟಮಣ್ಯಾದ್ಯಭಾವ ಎಂಬ ದೃಷ್ಟಕಾರಣ ಇಲ್ಲದಿರುವುದರಿಂದಲೇ ದಾಹವು ಉತ್ಪತ್ತಿಯಾಗುವುದಿಲ್ಲವೆಂದು ಕೂಡಿಸಬಹುದು. ಹಾಗಾಗಿ ಶಕ್ತಿಯು ಸಿದ್ಧವಾಗುವುದಿಲ್ಲ.

ವಿವರಣೆ - ಕೇವಲ ಮಣ್ಯಭಾವವು ದಾಹಕ್ಕೆ ಕಾರಣವಲ್ಲ. ಉತ್ತೇಜಕಾಭಾವವಿಶಿಷ್ಟವಾದ ಮಣ್ಯಭಾವವು ದಾಹಕ್ಕೆ ಕಾರಣವಾಗಿದೆ. ಒಂದು ವೇಳೆ ಉತ್ತೇಜಕ ಹಾಗೂ ಮಣಿ ಎರಡೂ ಇದ್ದಾಗ ಉತ್ತೇಜಕವಿಶಿಷ್ಟಮಣಿ ಎಂಬ ಕಾರಣವೇ ಇದೆ. ಉತ್ತೇಜಕಾಭಾವವಿಶಿಷ್ಟವಾದ ಮಣ್ಯಭಾವವು ಇರುವುದಿಲ್ಲ. ಆದ್ದರಿಂದ ಯದಾ ಉತ್ತೇಜಕಾಭಾವವಿಶಿಷ್ಟಮಣ್ಯಾದ್ಯಭಾವಃ ತದಾ ದಾಹಃ; ಯದಾ ಉತ್ತೇಜವಿಶಿಷ್ಟಮಣ್ಯಾದ್ಯಭಾವಾಭಾವಃ ತದಾ ನ ದಾಹಃ' ಎಂಬ

ವ್ಯಾಪ್ತಿಯನ್ನು ಹೇಳಿದಂತಾಯಿತು. ಆದ್ದರಿಂದ ದೃಷ್ಟಕಾರಣವಿಲ್ಲದ್ದರಿಂದಲೇ ದಾಹವು ಉಂಟಾಗುತ್ತಿಲ್ಲವೆಂದು ಹೇಳಲು ಬರುತ್ತಿರುವಾಗ ಶಕ್ತಿಯನ್ನು ಕಲ್ಪನೆ ಮಾಡುವ ಅವಶ್ಯಕತೆ ಇರುವುದಿಲ್ಲ. ಹೀಗೆ ಲೀಲಾವತಿಯಲ್ಲಿ ಶಕ್ತಿಯು ಪ್ರತ್ಯೇಕ ಪದಾರ್ಥವಲ್ಲವೆಂದು ಖಂಡನೆ ಮಾಡಿದ್ದನ್ನು ತತ್ವಚಿಂತಾಮಣಿಕಾರನು ಖಂಡನೆ ಮಾಡಿದ್ದಾನೆ.

## ಗ್ರಂಥಕಾರರು ಮಾಡುತ್ತಿರುವ ತತ್ವಚಿಂತಾಮಣಿಯ ಅನುವಾದ

ನ್ಯಾಯದೀಪ – ಯತ್ತ್ವನುಮಾನಖಂಡೇ ಮಣಾವೀಶ್ವರವಾದಾನಂತರಂ ಲೀಲಾವತ್ಯಾದ್ಯಭಿಮತಶಕ್ತ್ಯಪಲಾಪಪ್ರಕಾರಂ ನಿರಸ್ಯ ಸ್ವಯಂ ಪ್ರಕಾರಾಂತರೇಣಾಪಲಾಪಪ್ರದರ್ಶನಂ ಕೃತಂ ತದಪ್ಯುಚ್ಯತ ಇತ್ಯಾದಿನಾ ನ ಯುಕ್ತಮಿತಿ ವಕ್ತುಮನುವದತಿ – ಅತ್ರ ನೈಯಾಯಿಕಾ ಇತ್ಯಾದಿನಾ । ತಸ್ಮಾನ್ನ ಶಕ್ತಿರಿತ್ಯಂತೇನ । ಉತ್ತೇಜಕಂ ಪ್ರತಿಬಂಧಕಪ್ರತಿಬಂಧಕಂ, – ತದಭಾವವಿಶಿಷ್ಟೋ ಯೋ ಮಣ್ಯಾದಿಸ್ತದಭಾವೇತ್ಯರ್ಥಃ।

ಅನುವಾದ - ಅನುಮಾನಖಂಡದಲ್ಲಿ ಮಣಿಕಾರನು ಈಶ್ವರವಾದದ ಅನಂತರ ಲೀಲಾವತಿಯಲ್ಲಿ ಅಭಿಪ್ರಾಯಪಟ್ಟಿರುವ ಶಕ್ತಿಯ ಅಪಲಾಪಪ್ರಕಾರವನ್ನು ನಿರಾಕರಣೆ ಮಾಡಿದ್ದಾನೆ. ಮತ್ತು ಸ್ವತಃ ತಾನು ಮತ್ತೊಂದು ಪ್ರಕಾರದಿಂದ ಶಕ್ತಿಯ ಅಪಲಾಪವನ್ನು ಪ್ರದರ್ಶನ ಮಾಡಿದ್ದಾನೆ. ಅದನ್ನು ಪ್ರಕೃತ ಗ್ರಂಥಕಾರರು 'ಉಚ್ಯತೇ' ಎಂಬ ಗ್ರಂಥದಿಂದ ಮುಂದೆ ಖಂಡನೆ ಮಾಡುತ್ತಿದ್ದಾರೆ. ಮೊದಲು 'ಅತ್ರ ನೈಯಾಯಿಕಾಃ' ಎಂದು ಪ್ರಾರಂಭಮಾಡಿ 'ತಸ್ಮಾನ್ನ ಶಕ್ತಿಃ' ಎಂಬಲ್ಲಿಯ ತನಕ ಮಣಿಕಾರ ತನ್ನ ಗ್ರಂಥದಲ್ಲಿ ಹೇಳಿದ್ದನ್ನು ಅನುವಾದ ಮಾಡುತ್ತಿದ್ದಾರೆ.

'ಉತ್ತೇಜಕ' ಎಂಬ ಪದಕ್ಕೆ ಪ್ರತಿಬಂಧಕದ ಪ್ರತಿಬಂಧಕ ಎಂದರ್ಥ. 'ಉತ್ತೇಜಕಾಭಾವವಿಶಿಷ್ಟ' ಎಂದರೆ 'ಪ್ರತಿಬಂಧಕದ ಪ್ರತಿಬಂಧಕಾಭಾವವಿಶಿಷ್ಟವಾದ' ಎಂದರ್ಥ. ಇಂತಹ ವಿಶಿಷ್ಟವಾದ ಯಾವ ಮಣ್ಯಾದಿಗಳು ಇವೆಯೋ ಅವುಗಳ ಅಭಾವ ಎಂದರ್ಥ.

ವಿವರಣೆ - ಇಲ್ಲಿಯ ತನಕ ಲೀಲಾವತಿಯಲ್ಲಿ ಹೇಳಿದ ಶಕ್ತಿಯ ನಿರಾಕರಣೆಯ ಪ್ರಕಾರವನ್ನು ಖಂಡನೆ ಮಾಡಿದ್ದಾಯಿತು. ಈಗ ಮಣಿಕಾರನ ಮತವನ್ನು ಖಂಡನೆ ಮಾಡಲು ಹೊರಟಿದ್ದಾರೆ. ಮೊದಲು ಮಣಿಕಾರನು ಲೀಲಾವತಿಯಲ್ಲಿ ಹೇಳಲ್ಪಟ್ಟ ಶಕ್ತಿಯ ಅಪಲಾಪದ

ಪ್ರಕಾರವನ್ನು ಸ್ವತಃ ತಾನೇ ನಿರಾಕರಣೆ ಮಾಡಿದ್ದಾನೆ. ಅದನ್ನು ಅನುವಾದ ಮಾಡಿ ಅನಂತರ ಇವನ ಅಭಿಪ್ರಾಯವನ್ನು ಖಂಡನೆ ಮಾಡಲು ಹೊರಟದ್ದಾರೆ.

### ಕಾರಣತಾವಚ್ಛೇದಕವು ಅನನುಗಮ ಆಗುವುದಿಲ್ಲವೇ?

**ತರ್ಕತಾಂಡವ – ನನು ಮಣ್ಯಾದ್ಯಭಾವಾನಾಂ ನ ತಾವನ್ಮಣ್ಯಾದ್ಯಭಾವತ್ವೇನ ಕಾರಣತ್ವಮ್। ಅನನುಗಮಾತ್ ।**

ಅನುವಾದ - ಮಣ್ಯಾದ್ಯಭಾವಗಳು ಮಣ್ಯಾದ್ಯಭಾವತ್ವಾವಚ್ಛೇದಕಾವಚ್ಛೇದೇನ ದಾಹಕ್ಕೆ ಕಾರಣವಾಗುವುದಿಲ್ಲ. ಹಾಗಾದಲ್ಲಿ ಅನನುಗಮದೋಷವು ಬರುತ್ತದೆ.

ವಿವರಣೆ - ಕಾರಣೀಭೂತಸ್ವಾಭಾವವಿಘಟಕತ್ವೇನ ಮಣ್ಯಾದಿಗಳು ದಾಹಕ್ಕೆ ಪ್ರತಿಬಂಧಕವಾಗಿವೆ ಎಂಬ ಮೂರನೆಯ ಪಕ್ಷವನ್ನು ಒಪ್ಪುತ್ತೇವೆಂದು ಮಣಿಕಾರನು ಹೇಳುತ್ತಿದ್ದಾನೆ. ಮಣ್ಯಭಾವವು ದಾಹಕ್ಕೆ ಹೇಗೆ ಕಾರಣವಾಗುತ್ತದೆ. ಏಕೆಂದರೆ ಮಣಿ ಇದ್ದರೂ ಕೂಡ ಉತ್ತೇಜಕವಿದ್ದರೆ ದಾಹವು ಉಂಟಾಗುತ್ತದೆ. ಆದ್ದರಿಂದ ವ್ಯತಿರೇಕವ್ಯಭಿಚಾರ ಬರುತ್ತದೆ. ಆದ್ದರಿಂದ ಮಣ್ಯಭಾವವು ದಾಹಕ್ಕೆ ಹೇಗೆ ಕಾರಣವಾಯಿತು? ಎಂಬ ಪ್ರಶ್ನೆಗೆ ಮಣಿಕಾರನು ಉತ್ತೇಜಕಾಭಾವವಿಶಿಷ್ಟಮಣ್ಯಾದ್ಯಭಾವವನ್ನು ಕಾರಣವೆಂದು ಹೇಳಿದ. ಹೀಗೆ ಹೇಳಿದಾಗ ಅವನ ಮೇಲೆ ಬರುವ ಪ್ರಶ್ನೆಯನ್ನು 'ನನು' ಎಂಬಲ್ಲಿಂದ ಪ್ರಾರಂಭಿಸಿ 'ಇತಿ ಚೇತ್' ಎಂಬಲ್ಲಿಯ ತನಕ ಹೇಳುತ್ತಿದ್ದಾರೆ.

ಮಣ್ಯಾದ್ಯಭಾವಗಳು ದಾಹಕ್ಕೆ ಕಾರಣವೆಂದು ಹೇಳಿದಾಗ ಕಾರಣತಾವಚ್ಛೇದಕ ಯಾವುದು? ಎಂಬ ಪ್ರಶ್ನೆಗೆ ಉತ್ತರಿಸಬೇಕು. ಮಣ್ಯಾದ್ಯಭಾವತ್ವವನ್ನು ಕಾರಣತಾವಚ್ಛೇದಕವೆಂದು ಪರಿಗಣಿಸಿದರೆ ಅನನುಗಮ ದೋಷ ಬರುತ್ತದೆ. ಏಕೆಂದರೆ ದಾಹಕ್ಕೆ ಮಣ್ಯಭಾವ ಮಾತ್ರ ಕಾರಣವಲ್ಲ. ಮಂತ್ರಾಭಾವ, ಓಷಧ್ಯಭಾವಗಳು ಕೂಡ ಕಾರಣವಾಗಿವೆ. ಮಣ್ಯಭಾವತ್ವವನ್ನು ಕಾರಣತಾವಚ್ಛೇದಕವೆಂದರೆ ಇದು ಮಂತ್ರಾಭಾವದಲ್ಲಿ ಇರುವುದಿಲ್ಲ. ಇನ್ನು ಮಂತ್ರಾಭಾವತ್ವವನ್ನು ಕಾರಣತಾವಚ್ಛೇದಕವೆಂದರೆ ಇದು ಮಣ್ಯಭಾವದಲ್ಲಿ ಬರುವುದಿಲ್ಲ. ಹೀಗೆ ಅನನುಗಮ ದೋಷವು ಪ್ರಾಪ್ತವಾಗುತ್ತದೆ ಆದ್ದರಿಂದ ಯಾವುದೇ

ಕಾರ್ಯದ ಉತ್ಪತ್ತಿಗೆ ಕಾರಣವು ಅನೇಕವಾಗಿದ್ದರೂ ಕೂಡ ಕಾರಣತಾವಚ್ಛೇದಕ ಮಾತ್ರ ಒಂದೇ ಆಗಿರಬೇಕು. ಆದರೆ ನಿಮಗೆ ಇಲ್ಲಿ ಕಾರಣತಾವಚ್ಛೇದಕವು ಒಂದೇ ಎಂದು ಸಮರ್ಥಿಸಲು ಆಗುತ್ತಿಲ್ಲ.

## ತತ್ವಚಿಂತಾಮಣಿಯಲ್ಲಿ ಹೇಳಿದ ಕಾರಣತ್ವ

**ನ್ಯಾಯದೀಪ – ಮಣ್ಯಾದ್ಯುಕ್ತಂ ಮಣಿಮಂತ್ರೌಷಧಾದ್ಯಭಾವಾನಾಂ ಕೂಟಸ್ಯ ಕಾರಣತ್ವಂ ಶಂಕೋತ್ತರಾಭ್ಯಾಂ ವ್ಯನಕ್ತಿ – ನನ್ವಿತ್ಯಾದಿನಾ ॥**

ಅನುವಾದ - ತತ್ವಚಿಂತಾಮಣಿಯಲ್ಲಿ ಹೇಳಲ್ಪಟ್ಟ ಮಣಿ, ಮಂತ್ರ, ಓಷಧಿಗಳ ಅಭಾವಗಳ ಯಾವ ಕೂಟವಿದೆಯೋ ಅದಕ್ಕೆ ಕಾರಣತ್ವವನ್ನು ಆಶಂಕೆ ಹಾಗೂ ಉತ್ತರಗಳಿಂದ ಸ್ಪಷ್ಟಪಡಿಸಲು 'ನನು' ಇತ್ಯಾದಿ ಗ್ರಂಥವು ಹೊರಟಿದೆ.

## ಪ್ರತಿಬಂಧಕಾಭಾವತ್ವವನ್ನು ಕಾರಣತಾವಚ್ಛೇದಕವೆಂದರೆ ಅನ್ಯೋನ್ಯಾಶ್ರಯ

**ತರ್ಕತಾಂಡವ – ನಾಪಿ ಪ್ರತಿಬಂಧಕಾಭಾವತ್ವೇನ ಅನ್ಯೋನ್ಯಾಶ್ರಯಾತ್ । ಕಾರಣೀಭೂತಾಭಾವಪ್ರತಿಯೋಗಿನ ಏವ ಪ್ರತಿಬಂಧಕತ್ವಾತ್ ।**

ಅನುವಾದ – ಪ್ರತಿಬಂಧಕಾಭಾವತ್ವವು ಕಾರಣತಾವಚ್ಛೇದಕವೆಂದು ಹೇಳಿದರೆ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಕಾರಣೀಭೂತವಾದ ಅಭಾವಪ್ರತಿಯೋಗಿಯೇ ಪ್ರತಿಬಂಧಕವಾಗಿರುವುದರಿಂದ.

**ವಿವರಣೆ** – ಮಣ್ಯಭಾವತ್ವ, ಮಂತ್ರಾಭಾವತ್ವ, ಓಷಧ್ಯಭಾವತ್ವ ಇವುಗಳಲ್ಲಿ ಯಾವುದೇ ಒಂದನ್ನು ಕಾರಣತಾವಚ್ಛೇದಕವೆಂದು ಹೇಳಿದರೂ ಕೂಡ ಅನನುಗಮದೋಷವು ಪ್ರಾಪ್ತವಾಗುತ್ತದೆ. ಆದರೆ ನಾವು ಹಾಗೆ ಹೇಳುವುದಿಲ್ಲ. ಈ ಮೂರರಲ್ಲಿಯೂ ಕೂಡ ಅನುಗತವಾದ ಪ್ರತಿಬಂಧಕಾಭಾವತ್ವವನ್ನು ಕಾರಣತಾವಚ್ಛೇದಕವೆಂದು ಹೇಳುತ್ತೇವೆ. ಈಗ ಪ್ರತಿಬಂಧಕಾಭಾವತ್ವವು ಮೂರರಲ್ಲಿಯೂ ಅನುಗತವಾಗಿರುವುದರಿಂದ ಅನನುಗಮ-ದೋಷಕ್ಕೆ ಅವಕಾಶವಿಲ್ಲ.

ಅನನುಗಮದೋಷವಿಲ್ಲದಿದ್ದರೂ ಅನ್ಯೋನ್ಯಾಶ್ರಯದೋಷ ಬರುತ್ತದೆ. ಏಕೆಂದರೆ ಪ್ರತಿಬಂಧಕಶಬ್ದಕ್ಕೆ ಕಾರಣೀಭೂತಅಭಾವಪ್ರತಿಯೋಗಿ ಎಂದರ್ಥ. ಮಣ್ಯಭಾವವು ದಾಹಕ್ಕೆ ಕಾರಣ ಎಂದು ತಿಳಿದರೆ ಮಾತ್ರ ಕಾರಣೀಭೂತ - ಅಭಾವಪ್ರತಿಯೋಗಿತ್ವವು ಮಣಿಯಲ್ಲಿದೆ ಎಂದು ತಿಳಿಯುತ್ತದೆ. ಮಣಿಯಲ್ಲಿ ಕಾರಣೀಭೂತಅಭಾವಪ್ರತಿಯೋಗಿತ್ವವೆಂಬ ಪ್ರತಿಬಂಧಕತ್ವವು ತಿಳಿದರೆ ಮಾತ್ರ ಮಣಿಗೆ ಪ್ರತಿಬಂಧಕತ್ವವು ತಿಳಿಯುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವು ಪ್ರಾಪ್ತವಾಗುತ್ತದಾದ್ದರಿಂದ ಪ್ರತಿಬಂಧಕಾಭಾವತ್ವವನ್ನೂ ಕೂಡ ಕಾರಣತಾವಚ್ಛೇದಕವೆಂದು ಹೇಳಲು ಸಾಧ್ಯವಾಗುವುದಿಲ್ಲ.

## ಮಂತ್ರೋಚ್ಚಾರಣೆ ನಡೆಯುತ್ತಿರುವಾಗಲೂ ಮಣಿ ಇಲ್ಲವೆಂಬ ಕಾರಣದಿಂದ ದಾಹ ಹುಟ್ಟಲಿ

**ತರ್ಕತಾಂಡವ – ಮಂತ್ರಸತ್ವೇಪಿ ಮಣ್ಯಾಭಾವಮಾತ್ರೇಣ ದಾಹಾಪತ್ತೇಶ್ಚ । ತಸ್ಯಾಪಿ ಪ್ರತಿಬಂಧಕಾಭಾವತ್ವಾತ್ ।**

ಅನುವಾದ – ಮತ್ತೊಂದು ದೋಷ - ಮಂತ್ರವಿದ್ದರೂ ಕೂಡ ಮಣಿ ಇಲ್ಲದ ಕಾರಣದಿಂದ ದಾಹವು ಉತ್ಪತ್ತಿಯಾಗಬೇಕಾಗುತ್ತದೆ. ಏಕೆಂದರೆ ಮಣ್ಯಭಾವವು ಕೂಡ ಪ್ರತಿಬಂಧಕಾಭಾವವಾಗಿರುವುದರಿಂದ.

ವಿವರಣೆ – ಪ್ರತಿಬಂಧಕಾಭಾವತ್ವವನ್ನು ಕಾರಣತಾವಚ್ಛೇದಕವೆಂದು ಪರಿಗಣಿಸಿದರೆ ಅನ್ಯೋನ್ಯಾಶ್ರಯ ಮಾತ್ರವಲ್ಲ, ಅತಿಪ್ರಸಂಗದೋಷವೂ ಕೂಡ ಬರುತ್ತದೆ. ಏಕೆಂದರೆ, ಮಂತ್ರೋಚ್ಚಾರಣೆಯಿಂದ ಅಗ್ನಿಯಲ್ಲಿ ದಾಹವನ್ನು ನಾಶಪಡಿಸಿರುವಾಗ ಮಣಿ ಇಲ್ಲ ಎಂಬ ಕಾರಣದಿಂದ ದಾಹವು ಉತ್ಪತ್ತಿಯಾಗಬೇಕಾಗುತ್ತದೆ. ಆದರೆ ಹೀಗೆ ಎಲ್ಲಿಯೂ ಕಂಡಿಲ್ಲ. ನೀವು ದಾಹಕ್ಕೆ ಪ್ರತಿಬಂಧಕ ಇರಬಾರದು ಎಂದಷ್ಟೇ ಹೇಳಿದರೆ ಇಲ್ಲಿ ಮಣಿ ಎಂಬ ಪ್ರತಿಬಂಧಕ ಇಲ್ಲದ ಕಾರಣ ಮಂತ್ರೋಚ್ಚಾರಣೆ ನಡೆಯುತ್ತಿರುವಾಗಲೂ ಕೂಡ ದಾಹವು ಉತ್ಪತ್ತಿಯಾಗಬೇಕಾಗುತ್ತದೆ.

## ಯಾವತ್ಪ್ರತಿಬಂಧಕಾಭಾವತ್ವವೂ ಕೂಡ ಕಾರಣತಾವಚ್ಛೇದಕವಲ್ಲ

**ತರ್ಕತಾಂಡವ – ನ ಹಿ ಯಾವತ್ಕಾರಣಸಮವಧಾನ ಏವ ಕಾರ್ಯಮ್ । ಏಕದಂಡಸಮವಧಾನೇಽಪಿ ಘಟೋತ್ಪತ್ತೇರಿತಿ ಚೇತ್;**

ಅನುವಾದ – ಕಾರ್ಯವಾಗಬೇಕೆಂದರೆ ಎಲ್ಲಾ ಕಾರಣಗಳೂ ಇರಬೇಕೆಂದು ಹೇಳುವುದು ಅಯುಕ್ತ. ಏಕೆಂದರೆ ಒಂದೇ ದಂಡವಿದ್ದರೂ ಕೂಡ ಘಟವು ಉತ್ಪತ್ತಿಯಾಗುತ್ತಿರುವುದು ಕಾಣಿಸುತ್ತಿದೆಯಲ್ಲವೇ? ಇಷ್ಟು ಆಕ್ಷೇಪ.

ವಿವರಣೆ – ಪ್ರತಿಬಂಧಕಾಭಾವತ್ವವನ್ನು ಕಾರಣತಾವಚ್ಛೇದಕವೆಂದು ಹೇಳಿದರೆ ಮಂತ್ರವಿದ್ದಾಗ ಮಣ್ಯಭಾವವೆಂಬ ಒಂದು ಪ್ರತಿಬಂಧಕಾಭಾವವಿದ್ದರೂ ಕೂಡ ದಾಹವು ಉತ್ಪತ್ತಿಯಾಗಲಿ ಎಂಬ ಅತಿಪ್ರಸಂಗಕ್ಕೆ ಅವಕಾಶವಿಲ್ಲ. ಏಕೆಂದರೆ, ದಾಹದ ಉತ್ಪತ್ತಿಗೆ ಒಂದು ಪ್ರತಿಬಂಧಕಾಭಾವ ಇದ್ದರೆ ಸಾಲದು ಎಲ್ಲಾ ಪ್ರತಿಬಂಧಕಾಭಾವಗಳು ಕೂಡ ಇರಬೇಕು. ಆದ್ದರಿಂದ ಯಾವತ್ಪ್ರತಿಬಂಧಕಾಭಾವತ್ವವನ್ನು ಕಾರಣತಾವಚ್ಛೇದಕವೆಂದು ಹೇಳುತ್ತೇವೆ. ಈಗ ಮಣಿ ಎಂಬ ಪ್ರತಿಬಂಧಕ ಇಲ್ಲದಿದ್ದರೂ ಮಂತ್ರವೆಂಬ ಪ್ರತಿಬಂಧಕ ಇರುವುದರಿಂದ ಯಾವತ್ಪ್ರತಿಬಂಧಕಾಭಾವತ್ವವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಯಾವತ್ಪ್ರತಿಬಂಧಕಾಭಾವತ್ವವೆಂಬ ಕಾರಣತಾವಚ್ಛೇದಕ ಇಲ್ಲದ ಕಾರಣ ದಾಹವೆಂಬ ಕಾರ್ಯ ಹುಟ್ಟುವುದಿಲ್ಲ.

ಹೀಗೂ ಸಹ ಹೇಳಬಾರದು. ಏಕೆಂದರೆ ಘಟದ ಉತ್ಪತ್ತಿಗೆ ಒಂದು ದಂಡಕಾರಣ ಸಾಕು. ಯಾವತ್ಕಾರಣಸಮವಧಾನೇ ಏವ ಕಾರ್ಯಮ್ ಎಂದು ಹೇಳಿದರೆ ಜಗತ್ತಿನಲ್ಲಿರುವ ಎಲ್ಲಾ ದಂಡಗಳೂ ಇದ್ದಾಗ ಮಾತ್ರ ಘಟವು ಹುಟ್ಟುತ್ತದೆಂದು ಹೇಳಬೇಕಾಗುತ್ತದೆ. ಅದರಂತೆ ಇಲ್ಲಿಯೂ ಕೂಡ ಅನೇಕ ಬಗೆಯ ಮಂತ್ರಗಳಿವೆ, ಅನೇಕ ಮಣಿಗಳಿವೆ, ಅನೇಕ ಓಷಧಗಳಿವೆ. ಹೀಗೆ ನಾನಾವಿಧವಾದ ಪ್ರತಿಬಂಧಕಗಳನ್ನು ಸಂಗ್ರಹಿಸಿ ಇವುಗಳಿಲ್ಲದಿರುವಾಗ ದಾಹವು ಉತ್ಪತ್ತಿಯಾಗುತ್ತದೆಂದು ಸಮರ್ಥಿಸಲು ಸಾಧ್ಯವಾಗುವುದಿಲ್ಲ.

ಮಣಿಕಾರನು ತನ್ನ ಗ್ರಂಥದಲ್ಲಿ ಇಷ್ಟು ಆಕ್ಷೇಪವನ್ನು ಸ್ವತಃ ಮಾಡಿಕೊಂಡಿದ್ದಾನೆ. ಇದಕ್ಕೆ ಮುಂದೆ ತಾನೇ ಉತ್ತರವನ್ನು ನೀಡುತ್ತಾನೆ.

## ಸಕಲದೋಷಗಳ ಪರಿಹಾರಕ್ಕಾಗಿ ಕೂಟಘಟಿತಲಕ್ಷಣ

**ತರ್ಕತಾಂಡವ – ಮೈವಮ್ । ದಂಡಚಕ್ರಾದಿಕೂಟವತ್ ಸಕಲಾನಾಂ ಮಣ್ಯಾದೀನಾಂ ಸಂಸರ್ಗಾಭಾವಕೂಟಸ್ಯ ದಾಹಜನಕತ್ವೇನಾನನುಗಮಾನ್ಯೋನ್ಯಾಶ್ರಯಯೋರ- ಭಾವಾತ್ ॥**

ಇದು ತಪ್ಪು; ದಂಡಚಕ್ರಾದಿಗಳು ಕೂಡವು ಘಟಕ್ಕೆ ಕಾರಣವಾಗುವಂತೆ ಸಕಲಬಗೆಯ ಮಣ್ಯಾದಿಗಳ ಸಂಸರ್ಗಾಭಾವದ ಕೂಟವು ದಾಹಕ್ಕೆ ಕಾರಣವಾಗಿದೆ. ಈಗ ಅನನುಗಮ ಹಾಗೂ ಅನ್ಯೋನ್ಯಾಶ್ರಯದೋಷಗಳಿಗೆ ಅವಕಾಶವಿಲ್ಲ.

ವಿವರಣೆ – ಮಣ್ಯಾದ್ಯಭಾವತ್ವವನ್ನಾಗಲೀ, ಪ್ರತಿಬಂಧಕಾಭಾವತ್ವವನ್ನಾಗಲೀ ಕಾರಣತಾವಚ್ಛೇದಕವೆಂದು ಹೇಳುವುದೇ ಇಲ್ಲ. ಹಾಗೆ ಹೇಳಿದ್ದಲ್ಲಿ ಅನನುಗಮ ಹಾಗೂ ಅನ್ಯೋನ್ಯಾಶ್ರಯ ದೋಷಗಳಿಗೆ ಅವಕಾಶವಿರುತ್ತಿತ್ತು. ಈಗ ದಂಡಚಕ್ರಮಣ್ಯಾದಿಗಳ ಸಂಸರ್ಗಾಭಾವಕೂಟವನ್ನು ಕಾರಣವೆಂದು ಹೇಳುತ್ತೇವೆ. ಕೂಟವು ಒಂದೇ ಆಗಿರುವುದರಿಂದ ಇಲ್ಲಿ ಕಾರಣತಾವಚ್ಛೇದಕವನ್ನು ಹೇಳುವ ಪ್ರಸಂಗವೇ ಬರುವುದಿಲ್ಲ.

ಅಭಿಪ್ರಾಯವಿಷ್ಟು -- ಘಟಕ್ಕೆ ಕೇವಲ ದಂಡವಾಗಲೀ, ಕೇವಲ ಚಕ್ರವಾಗಲೀ ಕಾರಣವಾಗುವುದಿಲ್ಲ. ದಂಡ, ಚಕ್ರ, ಮಣ್ಣು, ಕುಂಬಾರ ಎಲ್ಲವೂ ಇದ್ದರೆ ಮಾತ್ರ ಘಟವು ಉತ್ಪತ್ತಿಯಾಗುತ್ತದೆ. ಆದ್ದರಿಂದ ದಂಡಚಕ್ರಾದಿಗಳ ಕೂಟವು ಘಟಕ್ಕೆ ಕಾರಣ ಎಂದೇ ಹೇಳಬೇಕು. ಇದರಂತೆ ಲೋಕದಲ್ಲಿ ದಾಹಕ್ಕೆ ಪ್ರತಿಬಂಧಕವಾದ ಮಣಿಗಳು ಹೇರಳವಾಗಿವೆ. ಇದರಂತೆ ಮಂತ್ರ, ಹಾಗೂ ಓಷಧಿಗಳು ಕೂಡ ಬಹಳಷ್ಟು ಇವೆ. ಇವುಗಳ ಸಂಸರ್ಗಾಭಾವದ ಕೂಟವು ದಾಹಕ್ಕೆ ಕಾರಣವೆಂದು ಈಗ ಹೇಳುತ್ತಿದ್ದೇವೆ. ಸಕಲಪ್ರತಿಬಂಧಕಗಳ ಅಭಾವಗಳು ಇರಬೇಕು ಎಂದು ಇದರ ಅಭಿಪ್ರಾಯ. ಈಗ ಒಂದು ಪ್ರತಿಬಂಧಕವಿದ್ದರೂ ಕೂಡ ಪ್ರತಿಬಂಧಕಸಂಸರ್ಗಾಭಾವಕೂಟವು ಬರುವುದಿಲ್ಲ. ಮತ್ತು ಸಾಕಲ್ಯವನ್ನು ಅಭಾವದಲ್ಲಿ ವಿಶೇಷಣವನ್ನಾಗಿ ಹೇಳುತ್ತಿದ್ದೇವೆ ಹೊರತು ಕೂಟದಲ್ಲಿ ಹೇಳುತ್ತಿಲ್ಲ. ಆದ್ದರಿಂದ ಒಂದು ಘಟದ ಉತ್ಪತ್ತಿಗೆ ಜಗತ್ತಿನಲ್ಲಿರುವ ಎಲ್ಲಾ ದಂಡಗಳು ಇರಬೇಕಾದೀತು ಎಂಬ ಅತಿಪ್ರಸಂಗಕ್ಕೆ ಅವಕಾಶವು ಕೂಡ ಇರುವುದಿಲ್ಲ.

## ಕೂಟಘಟಿತಲಕ್ಷಣದಲ್ಲಿ ಸಂಸರ್ಗಾಭಾವ ಎಂಬ ವಿಶೇಷಣದ ಅರ್ಥಚಿಂತನೆ

**ನ್ಯಾಯದೀಪ – ಅನ್ಯೋನ್ಯಾಭಾವವ್ಯಾವೃತ್ತ್ಯರ್ಥಂ ಪ್ರಾಗಭಾವಾದಿಸಾಧಾರಣಾಭಾವ-ಲಾಭಂ ಚಾಹ – ಸಂಸರ್ಗಾಭಾವಕೂಟಸ್ಯೇತಿ ॥**

ಅನುವಾದ – ಅನ್ಯೋನ್ಯಾಭಾವವನ್ನು ವ್ಯಾವೃತ್ತಿ ಮಾಡುವುದಕ್ಕಾಗಿ ಪ್ರಾಗಭಾವಾದಿ ಸಾಧಾರಣವಾದ ಅಭಾವದ ಲಾಭಕ್ಕಾಗಿಯೂ ಸಂಸರ್ಗಾಭಾವಕೂಟಸ್ಯ ಎಂಬ ವಿಶೇಷಣವನ್ನು ಹೇಳಿದ್ದಾರೆ.

ವಿವರಣೆ – ನಾವು ಪ್ರಾಗಭಾವ, ಪ್ರಧ್ವಂಸಾಭಾವ, ಸದಾಭಾವ ಎಂಬುದಾಗಿ ಅಭಾವವನ್ನು ವಿಂಗಡನೆ ಮಾಡುತ್ತೇವೆ. ಆದರೆ ತಾರ್ಕಿಕರು ಸಂಸರ್ಗಾಭಾವ, ಅನ್ಯೋನ್ಯಾಭಾವ ಎಂಬುದಾಗಿ ಎರಡೇ ಪ್ರಭೇದವನ್ನು ಹೇಳುತ್ತಾರೆ. ಅನ್ಯೋನ್ಯಾಭಾವ ಎಂಬುದಕ್ಕೆ ಭೇದ ಎಂದರ್ಥ. ಸಂಸರ್ಗಾಭಾವವು ಪುನಃ ಮೂರುವಿಧ. ಪ್ರಾಗಭಾವ, ಪ್ರಧ್ವಂಸಾಭಾವ ಹಾಗೂ ಅತ್ಯಂತಾಭಾವ ಎಂಬುದಾಗಿ. ಈಗ ಸಕಲಪ್ರತಿಬಂಧಕಸಂಸರ್ಗಾಭಾವಕೂಟವು ದಾಹಕ್ಕೆ ಜನಕವಾಗಿದೆ ಎಂಬ ಲಕ್ಷಣದಲ್ಲಿ ಸಂಸರ್ಗಾಭಾವ ಎಂಬ ವಿಶೇಷಣವನ್ನು ಹೇಳಿರುವುದರಿಂದ ಅನ್ಯೋನ್ಯಾಭಾವವನ್ನು ವ್ಯಾವೃತ್ತಿ ಮಾಡಿದಂತಾಯಿತು. ಕೇವಲ ಅಭಾವವೆಂದಷ್ಟೇ ಹೇಳಿದ್ದಲ್ಲಿ ಅನ್ಯೋನ್ಯಾಭಾವವೂ ಕೂಡ ಸೇರುತ್ತಿತ್ತು. ಆಗ ಮಣ್ಯಾದಿಗಳ ಭೇದವು ದಾಹಕ್ಕೆ ಕಾರಣವೇ ಆಗುವುದಿಲ್ಲ. ಮತ್ತು ಪ್ರಾಗಭಾವ, ಪ್ರಧ್ವಂಸಾಭಾವ ಮತ್ತು ಅತ್ಯಂತಾಭಾವ ಮೂರನ್ನೂ ಕೂಡ ಸಂಸರ್ಗಾಭಾವ ಎಂಬ ಒಂದೇ ಪದದಿಂದ ಸಂಗ್ರಹಿಸಿದಂತಾಯಿತು. ಆದ್ದರಿಂದ ದಾಹಕ್ಕೆ ಮಣ್ಯಾದಿಗಳ ಮೂರು ಬಗೆಯ ಅಭಾವಗಳ ಕೂಟವು ಕಾರಣ ಎಂದು ಹೇಳಿದಂತಾಗುತ್ತದೆ.

## ಸಾಕಲ್ಯಕ್ಕೆ ಪ್ರತಿಯೋಗಿಯಲ್ಲಿ ವಿಶೇಷಣ

ತರ್ಕತಾಂಡವ – ಏತೇನ – ದಾಹಕಾಲೇ ಸಕಲಾನಾಂ ಮಣ್ಯಾದಿಸಂಸರ್ಗಾಭಾವಾನಾಂ ಕೂಟೋಽಸಂಭವೀ, ಮಣಿಧ್ವಂಸಕಾಲೇ ತತ್ಪ್ರಾಗಭಾವಸ್ಯಾಸಂಭವಾದಿತಿ ನಿರಸ್ತಮ್ । ಸಾಕಲ್ಯಸ್ಯ

**ಪ್ರತಿಯೋಗಿವಿಶೇಷಣತ್ವೇನೋಕ್ತತಯಾ ಸರ್ವೇಷಾಂ ಮಣ್ಯಾದೀನಾಮೇಕೈಕಸ್ಯ ಸಂಸರ್ಗಾಭಾವಸ್ಯ ದಾಹಕಾಲೇ ಸತ್ವೇನ ತಾದೃಶಾಭಾವೇ ಕೂಟಸ್ಯಾಪಿ ತತ್ಕಾಲೇ ಸತ್ತ್ವಾತ್॥**

ಅನುವಾದ- ಅಸಂಭವದೋಷ ಹೀಗಿದೆ - ದಾಹಕಾಲದಲ್ಲಿ ಸಕಲವಿಧವಾದ ಮಣ್ಯಾದಿಗಳ ಸಂಸರ್ಗಾಭಾವವು ಕೂಟದಲ್ಲಿ ಅಸಂಭಾವಿತವಾಗಿದೆ. ಏಕೆಂದರೆ ಮಣಿಧ್ವಂಸಕಾಲದಲ್ಲಿ ಮಣಿಯ ಪ್ರಾಗಭಾವವು ಅಸಂಭಾವಿತವಾದ್ದರಿಂದ ಎಂದು. ಹೀಗೆ ಹೇಳಿದ್ದರಿಂದ ಅಸಂಭವದೋಷವನ್ನು ಪರಿಹರಿಸಿದಂತಾಯಿತು.

ಸಾಕಲ್ಯವು ಪ್ರತಿಯೋಗಿಯಲ್ಲಿ ವಿಶೇಷಣವಾಗಿರುವುದರಿಂದ ಎಲ್ಲಾ ಬಗೆಯ ಮಣ್ಯಾದಿಗಳಲ್ಲಿ ಒಂದೊಂದರ ಸಂಸರ್ಗಾಭಾವವು ದಾಹಕಾಲದಲ್ಲಿ ಇರುತ್ತದೆ. ಆದ್ದರಿಂದ ತಾದೃಶಾಭಾವಕೂಟವೂ ಕೂಡ ದಾಹಕಾಲದಲ್ಲಿ ಇರುತ್ತದೆಂದು ತಿಳಿಯಬೇಕು.

ವಿವರಣೆ– ಸಾಕಲ್ಯವನ್ನು ಅಭಾವದಲ್ಲಿ ವಿಶೇಷಣ ಮಾಡುತ್ತೀರೋ ಅಥವಾ ಮಣ್ಯಾದಿಗಳಲ್ಲಿ ವಿಶೇಷಣವನ್ನಾಗಿ ಹೇಳುತ್ತೀರೋ? ಅಭಾವದಲ್ಲಿ ವಿಶೇಷಣವೆಂದು ಹೇಳಿದರೆ, ಒಂದು ಅಭಾವ ಇದ್ದಾಗಲೂ ಕಾರ್ಯವು ಹುಟ್ಟಲಿ ಎಂಬ ಅತಿಪ್ರಸಂಗ ದೋಷವು ಬರುತ್ತದೆ. ಆದ್ದರಿಂದ ಸಾಕಲ್ಯವನ್ನು ಅಭಾವದಲ್ಲಾಗಲೀ ಮಣ್ಯಾದಿಗಳಲ್ಲಾಗಲೀ ವಿಶೇಷಣವನ್ನಾಗಿ ಹೇಳುವುದಿಲ್ಲ. ಪ್ರತಿಯೋಗಿಯಲ್ಲಿ ವಿಶೇಷಣವನ್ನಾಗಿ ಹೇಳುತ್ತೇವೆ. ಸಕಲವಾದ ಮಣ್ಯಾದಿಗಳು, ಅವುಗಳ ಅಭಾವ, ಅವುಗಳ ಕೂಟ ಎಂಬ ಅರ್ಥವನ್ನು ತಿಳಿಯಬೇಕು. ಹೀಗೇಕೆ ವ್ಯಾಖ್ಯಾನ ಮಾಡಬೇಕು? ಎಂಬುದಕ್ಕೆ "ಏತೇನ" ಇತ್ಯಾದಿ ಗ್ರಂಥದಿಂದ ಕಾರಣವನ್ನು ನಿರೂಪಣೆ ಮಾಡುತ್ತಿದ್ದಾರೆ.

ಸಕಲವಿಧವಾದ ಮಣ್ಯಾದಿಗಳ ಸಂಸರ್ಗಾಭಾವದ ಕೂಟವನ್ನೇ ಹೇಳಲು ಸಾಧ್ಯವಿಲ್ಲ. ಏಕೆಂದರೆ ಯಾವ ಮಣಿಯ ಪ್ರಾಗಭಾವ ಇರುತ್ತದೋ ಅದರ ಪ್ರಧ್ವಂಸಾಭಾವವನ್ನು ಆಗ ಹೇಳಲು ಸಾಧ್ಯವಿಲ್ಲ. ಪ್ರಧ್ವಂಸಾಭಾವ ಹೇಳಿದಾಗ ಪ್ರಾಗಭಾವ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಸಕಲ ಅಭಾವಗಳ ಕೂಟವನ್ನು ಹೇಳಲು ಹೇಗೆ ಸಾಧ್ಯ ?

ಈ ದೋಷವು ಈಗ ಪರಿಹಾರವಾಯಿತು. ಏಕೆಂದರೆ ಸಾಕಲ್ಯವನ್ನು ಪ್ರತಿಯೋಗಿಯಲ್ಲಿ ವಿಶೇಷಣವನ್ನಾಗಿ ಹೇಳಿರುವುದರಿಂದ ಎಲ್ಲಾ ಅಭಾವಗಳೂ ಒಂದೇ ಕಾಲದಲ್ಲಿರಬೇಕೆಂಬುದು ಇದರ ಅಭಿಪ್ರಾಯವಲ್ಲ. ಒಂದು ಮಣಿಪ್ರತಿಯೋಗಿಕವಾಗಿ ಎಷ್ಟು ಅಭಾವಗಳಿವೆಯೋ ಆ ಎಲ್ಲಾ ಅಭಾವಗಳನ್ನು ಇಲ್ಲಿ ವಿವಕ್ಷಿಸುತ್ತಿಲ್ಲ. ಹೊರತಾಗಿ ಎಲ್ಲಾ ಮಣಿಗಳ ಒಂದು ಅಭಾವ ಇದ್ದರೂ ಸಾಕು ಎಂದಭಿಪ್ರಾಯ. ಉದಾಹರಣೆ - ಕರತಲಕ್ಕೂ ಅನಲಕ್ಕೂ ಸಂಯೋಗವಾದಾಗ ಮೂರರ ಪ್ರಧ್ವಂಸವು ಇರುವುದಿಲ್ಲ. ಆದರೆ ಮೂರರ ಒಂದು ಅಭಾವ ಇರುವುದರಿಂದ ದಾಹ ಎಂಬುದು ಉತ್ಪತ್ತಿಯಾಗುತ್ತದೆ.

## ಸಾಕಲ್ಯಕ್ಕೆ ಅಭಾವದಲ್ಲಿ ವಿಶೇಷಣವಲ್ಲ

**ನ್ಯಾಯದೀಪ – ಸಕಲಪದಸ್ಯ ಮಣ್ಯಾದೇರ್ವಿಶೇಷಣತ್ವೇನೋಕ್ತೌ ಕೃತ್ಯಂ ವ್ಯನಕ್ತಿ – ಏತೇನೇತಿ॥ ಏತಚ್ಛಬ್ದಾರ್ಥಂ ಸ್ಫುಟೀಕರೋತಿ – ಸಾಕಲ್ಯಸ್ಯೇತಿ ॥ ಅಭಾವವಿಶೇಷಣತ್ವೇ ಹಿ ಸ್ಯಾತ್ ತ್ವದುಕ್ತದೋಷಃ, ನ ಚೈವಮಿತ್ಯರ್ಥಃ।**

ಅನುವಾದ – ಸಾಕಲ್ಯಕ್ಕೆ ಮಣ್ಯಾದಿಗಳಲ್ಲಿ ವಿಶೇಷಣವನ್ನಾಗಿ ಹೇಳಿದರೆ ಬರುವ ದೋಷವನ್ನು 'ಏತೇನ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ. ಏತಚ್ಛಬ್ದದ ಅರ್ಥವನ್ನೇ 'ಸಾಕಲ್ಯಸ್ಯ' ಎಂಬ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. ಸಾಕಲ್ಯವು ಅಭಾವದಲ್ಲಿ ವಿಶೇಷಣವನ್ನಾಗಿ ಹೇಳಿದ್ದರೆ ನೀವು ಹೇಳಿದ ದೋಷವು ಬರುತ್ತಿತ್ತು. ಆದರೆ ಹಾಗೆ ನಾವು ಹೇಳಿಲ್ಲ ಎಂದರ್ಥ.

ವಿವರಣೆ – ಸಕಲಾನಾಂ ಮಣ್ಯಾದೀನಾಂ ಸಂಸರ್ಗಾಭಾವಕೂಟಃ ದಾಹಂ ಪ್ರತಿ ಕಾರಣಂ ಎಂಬಲ್ಲಿ ಸಾಕಲ್ಯಕ್ಕೆ ಮಣ್ಯಾದಿಗಳಲ್ಲಾಗಲೀ ಅಭಾವದಲ್ಲಾಗಲೀ ವಿಶೇಷಣವಲ್ಲ. ಸಂಸರ್ಗಾಭಾವಕ್ಕೆ ಪ್ರತಿಯೋಗಿಯಲ್ಲಿ ವಿಶೇಷಣವನ್ನಾಗಿ ಹೇಳುತ್ತಿದ್ದೇವೆ. ಒಂದು ವೇಳೆ ಅಭಾವದಲ್ಲಿ ವಿಶೇಷಣವನ್ನಾಗಿ ಹೇಳಿದ್ದರೆ ಒಂದು ಕಾರಣವಿದ್ದರೂ ದಾಹವು ಉತ್ಪತ್ತಿಯಾಗಬೇಕಾದೀತೆಂಬ ಅತಿಪ್ರಸಂಗಕ್ಕೆ ಅವಕಾಶವಿರುತ್ತಿತ್ತು.

## ಪ್ರತಿಬಂಧಕ ಎಂದರೆ ಕಾರ್ಯಅನುತ್ಪತ್ತಿವ್ಯಾಪ್ಯ

**ತರ್ಕತಾಂಡವ – ಕಿಂಚ ಕಾರ್ಯಾನುತ್ಪತ್ತಿವ್ಯಾಪ್ಯತ್ವಂ ಪ್ರತಿಬಂಧಕತ್ವಮಿತಿ**

**ಪಕ್ಷೇ ಪ್ರತಿಬಂಧಕತ್ವಾವಚ್ಛಿನ್ನಾಭಾವಃ ಕಾರಣಮ್ । ಸ ಚ ಯತ್ಕಿಂಚಿತ್ ಪ್ರತಿಬಂಧಕಸತ್ವದಶಾಯಾಂ ನಾಸ್ತೀತಿ ನ ತದಾ ದಾಹಪ್ರಸಂಗಃ।**

ಅನುವಾದ - ಮತ್ತು ಕಾರ್ಯ ಅನುತ್ಪತ್ತಿವ್ಯಾಪ್ಯತ್ವವನ್ನೇ ಪ್ರತಿಬಂಧಕತ್ವವೆಂದು ಹೇಳುತ್ತೇವೆ. ಈ ಪಕ್ಷದಲ್ಲಿ ಪ್ರತಿಬಂಧಕತ್ವಾವಚ್ಛಿನ್ನಾಭಾವವೇ ದಾಹಕ್ಕೆ ಕಾರಣವಾಗುತ್ತದೆ. ಈ ಕಾರಣವು ಯತ್ಕಿಂಚಿತ್ ಪ್ರತಿಬಂಧಕತ್ವ ಇದ್ದರೂ ಕೂಡ ಇರುವುದಿಲ್ಲ. ಆದ್ದರಿಂದ ಕಾರಣವಿಲ್ಲದೇ ದಾಹವೆಂಬ ಕಾರ್ಯ ಹುಟ್ಟುವುದಿಲ್ಲ.

ವಿವರಣೆ – ಮಣ್ಯಾದ್ಯಭಾವಗಳು ಪ್ರತಿಬಂಧಕಾಭಾವತ್ವೇನ ಕಾರಣವೆಂದು ಹೇಳಿದರೆ ಪ್ರತಿಬಂಧಕಶಬ್ದಕ್ಕೆ ಕಾರಣೀಭೂತ-ಅಭಾವಪ್ರತಿಯೋಗಿತ್ವ ಎಂಬ ಅರ್ಥವು ಇರುವುದರಿಂದ ಅನ್ಯೋನ್ಯಾಶ್ರಯದೋಷವನ್ನು ಹಿಂದೆ ಆಕ್ಷೇಪ ಮಾಡಲಾಗಿತ್ತು. ಆದರೆ ಈಗ ಅನ್ಯೋನ್ಯಾಶ್ರಯದೋಷಕ್ಕೆ ಅವಕಾಶವಿಲ್ಲ. ನಾವು ಮಣ್ಯಾದ್ಯಭಾವಗಳು ಪ್ರತಿಬಂಧಕಾಭಾವತ್ವೇನ ಕಾರಣವೆಂದೇ ಈಗಲೂ ಕೂಡ ಹೇಳುತ್ತೇವೆ. ಆದರೆ ಪ್ರತಿಬಂಧಕಶಬ್ದಕ್ಕೆ ಕಾರಣೀಭೂತಅಭಾವಪ್ರತಿಯೋಗಿತ್ವ ಎಂದರ್ಥವಲ್ಲ ಹೊರತು ಕಾರ್ಯ ಅನುತ್ಪತ್ತಿವ್ಯಾಪ್ಯತ್ವ ಎಂದರ್ಥ.

ಅಭಿಪ್ರಾಯ ಹೀಗಿದೆ - ಎಲ್ಲಾ ಸಾಮಗ್ರಿಗಳು ಇರುವಾಗಲೂ ಕೂಡ ಕಾರ್ಯ ಹುಟ್ಟದಿರಲು ಯಾವುದು ವ್ಯಾಪ್ಯವು ಅದೇ ಪ್ರತಿಬಂಧಕ ಎನಿಸಿಕೊಳ್ಳುತ್ತದೆ. ಉದಾ- ಕರತಲ, ಅನಲ ಮೊದಲಾದ ಸಾಮಗ್ರಿಗಳು ಎಲ್ಲವೂ ಇದ್ದಾಗಲೂ ದಾಹವು ಹುಟ್ಟುವುದಿಲ್ಲ. ಏಕೆಂದರೆ ಕಾರ್ಯಅನುತ್ಪತ್ತಿಗೆ ವ್ಯಾಪ್ಯವಾದ ಮಣಿ ಎಂಬ ಪ್ರತಿಬಂಧಕವಿದೆ. 'ಯತ್ರ ಮಣಿಃ ತತ್ರ ದಾಹಸ್ಯ ಅನುತ್ಪತ್ತಿಃ' ಎಂಬುದಾಗಿ ಕಾರ್ಯ ಅನುತ್ಪತ್ತಿವ್ಯಾಪ್ಯತ್ವವು ಮಣಿಯಲ್ಲಿ ಬರುತ್ತದೆ. ಇದರಂತೆ 'ಯತ್ರ ಮಂತ್ರಃ ತತ್ರಾಪಿ ದಾಹಸ್ಯ ಅನುತ್ಪತ್ತಿಃ'; 'ಯತ್ರ ಓಷಧಿಃ ತತ್ರ ದಾಹಸ್ಯ ಅನುತ್ಪತ್ತಿಃ' ಹೀಗೆ ಪ್ರತ್ಯೇಕಪ್ರತ್ಯೇಕವಾಗಿ ಮೂರರಲ್ಲಿಯೂ ಕೂಡ ಪ್ರತಿಬಂಧಕತ್ವವು ಬರುತ್ತದೆ. ಮೂರರಲ್ಲಿಯೂ ಪ್ರತಿಬಂಧಕತ್ವ ಎಂಬುದು ಅನುಗತವಾಗಿದೆ. ಈ ಪ್ರತಿಬಂಧಕತ್ವವೆಂಬ ಅವಚ್ಛೇದಕಧರ್ಮದಿಂದ ಅವಚ್ಛೇದಕವಾದದು ಮಣಿ, ಮಂತ್ರ, ಹಾಗೂ ಓಷಧಿಗಳು. ಈ ಮೂರರಲ್ಲಿ ಒಂದಿದ್ದರೂ ಕೂಡ ಪ್ರತಿಬಂಧಕತ್ವಾವಚ್ಛಿನ್ನತ್ವವೇ

ಬರುತ್ತದೆ. ಹೊರತು ಪ್ರತಿಬಂಧಕತ್ವಾವಚ್ಛಿನ್ನಾಭಾವವು ಬರುವುದಿಲ್ಲ. ಯಾವಾಗ ಮೂರೂ ಕೂಡ ಇರುವುದಿಲ್ಲವೋ ಆಗ ಪ್ರತಿಬಂಧಕತ್ವಾವಚ್ಛಿನ್ನಾಭಾವವೆಂಬ ಕಾರಣವಿರುವುದರಿಂದ ದಾಹವು ಹುಟ್ಟುತ್ತದೆ. ಈ ಪಕ್ಷದಲ್ಲಿ ಅನ್ಯೋನ್ಯಾಶ್ರಯದೋಷಕ್ಕೆ ಅವಕಾಶವೇ ಇಲ್ಲ.

## ತತ್ವಚಿಂತಾಮಣಿಯಲ್ಲಿ ಮತ್ತೊಂದು ಬಗೆಯ ಅನ್ಯೋನ್ಯಾಶ್ರಯ ಪರಿಹಾರ

**ನ್ಯಾಯದೀಪ - ಪ್ರತಿಬಂಧಕಾಭಾವತ್ವೇನ ಕಾರಣತ್ವೇಪಿ ನ ಪ್ರಾಗುಕ್ತದೋಷ ಇತಿ ಭಾವೇನ 'ಯದ್ವಾ ಪ್ರತಿಬಂಧಕತ್ವಾವಚ್ಛಿನ್ನಪ್ರತಿಯೋಗಿಕೋऽಭಾವಃ ಕಾರಣಮ್' ಇತ್ಯಾದಿನಾ ಮಣ್ಯುಕ್ತಮೇವಾಹ - ಕಿಂಚೇತಿ ॥**

ಅನುವಾದ - ಪ್ರತಿಬಂಧಕಾಭಾವತ್ವೇನ ಮಣ್ಯಾದ್ಯಭಾವಗಳು ದಾಹಕ್ಕೆ ಕಾರಣವಾಗುತ್ತದೆ. ಆದರೂ ಕೂಡ ಹಿಂದೆ ಹೇಳಿದ ಅನ್ಯೋನ್ಯಾಶ್ರಯದೋಷಗಳು ಬರುತ್ತವೆ ಎಂಬ ಅಭಿಪ್ರಾಯದಿಂದ ತತ್ವಚಿಂತಾಮಣಿಯಲ್ಲಿ 'ಯದ್ವಾ ಪ್ರತಿಬಂಧಕತ್ವಾವಚ್ಛಿನ್ನಪ್ರತಿಯೋಗಿಕೋऽಭಾವಃ ಕಾರಣಮ್' 'ಅಥವಾ ಪ್ರತಿಬಂಧಕತ್ವಾವಚ್ಛಿನ್ನಪ್ರತಿಯೋಗಿಕವಾದ ಅಭಾವವೇ ಕಾರಣವಾಗಿದೆ' ಇತ್ಯಾದಿಯಾಗಿ ಹೇಳಲಾಗಿದೆ. ಅದನ್ನೇ ಗ್ರಂಥಕಾರರು ''ಕಿಂಚ'' ಇತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ.

ವಿವರಣೆ - ಮಣ್ಯಾದ್ಯಭಾವತ್ವೇನ ಮಣ್ಯಾದಿಗಳು ಕಾರಣವೆಂದು ಹೇಳುವುದಿಲ್ಲ. ಪ್ರತಿಬಂಧಕಾಭಾವತ್ವೇನ ಕಾರಣವೆಂದೇ ಹೇಳುತ್ತೇವೆ. ಹೀಗೆ ಹೇಳಿದಾಗ ಅನ್ಯೋನ್ಯಾಶ್ರಯ ದೋಷವನ್ನು ಹಿಂದೆ ಆಕ್ಷೇಪಿಸಲಾಗಿತ್ತು. ಈಗ ಅದನ್ನು ತತ್ವಚಿಂತಾಮಣಿಯಲ್ಲಿ ಯದ್ವಾ ಎಂಬ ಪಕ್ಷದಿಂದ ಪರಿಹರಿಸಿಕೊಳ್ಳಲಾಗಿದೆ.

ಪ್ರತಿಬಂಧಕಾಭಾವತ್ವಾವಚ್ಛೇದೇನ ಮಣ್ಯಾದ್ಯಭಾವಗಳು ಕಾರಣವೆಂದು ಹೇಳಿದ್ದರೆ ಅನ್ಯೋನ್ಯಾಶ್ರಯದೋಷ ಬರುತ್ತಿತ್ತು. ಆದರೆ ನಾವು ಪ್ರತಿಬಂಧಕತ್ವಾವಚ್ಛಿನ್ನ ಅಭಾವತ್ವೇನ ಮಣ್ಯಾದ್ಯಭಾವಗಳು ಕಾರಣವೆಂದು ಹೇಳುತ್ತೇವೆ. ಆದ್ದರಿಂದ ಅನ್ಯೋನ್ಯಾಶ್ರಯದೋಷಕ್ಕೆ ಅವಕಾಶವಿಲ್ಲ. ಈ ವಿಷಯವನ್ನು ಗ್ರಂಥಕಾರರು 'ಕಿಂಚ' ಇತ್ಯಾದಿಯಾಗಿ ಪ್ರತಿಪಾದನೆ ಮಾಡುತ್ತಿದ್ದಾರೆ.

## ವ್ಯಾಪ್ಯತ್ವವನ್ನು ಕಾಲಿಕವಾಗಿ ವಿವಕ್ಷಿಸಬೇಕು

ನ್ಯಾಯದೀಪ – ಕಾರ್ಯಾನುತ್ಪತ್ತಿಃ ಕಾರ್ಯಪ್ರಾಗಭಾವಸ್ತೋ ವ್ಯಾಪ್ತಿಶ್ಚ ಕಾಲಿಕೀತಿ ಭಾವಃ॥ ಪ್ರತಿಬಂಧಕತ್ವಾವಚ್ಛಿನ್ನಾಭಾವೇತಿ ॥ ಮಣಿಮಂತ್ರಾದ್ಯನುಗತಪ್ರತಿಬಂಧಕತ್ವಾವಚ್ಛಿನ್ನ-ಪ್ರತಿಯೋಗಿತಾಕಾಭಾವತ್ವೇನ ಮಣ್ಯಾದ್ಯಭಾವಸ್ಯ ಕಾರಣತ್ವಮಿತ್ಯರ್ಥಃ ॥

ಅನುವಾದ – 'ಕಾರ್ಯಾನುತ್ಪತ್ತಿವ್ಯಾಪ್ಯತ್ವಂ ಪ್ರತಿಬಂಧಕತ್ವಂ' ಎಂದು ಗ್ರಂಥದಲ್ಲಿ ಹೇಳಲಾಗಿದೆ. ಇಲ್ಲಿರುವ ವ್ಯಾಪ್ಯತ್ವವನ್ನು ಕಾಲಿಕವಾಗಿ ತಿಳಿಯಬೇಕೇ ಹೊರತು ದೈಶಿಕವಾಗಲ್ಲ.

ಪ್ರತಿಬಂಧಕತ್ವಾವಚ್ಛಿನ್ನಅಭಾವ ಎಂದರೆ ಮಣಿಮಂತ್ರಾದಿಗಳಲ್ಲಿ ಅನುಗತವಾದ ಪ್ರತಿಬಂಧಕತ್ವಾವಚ್ಛಿನ್ನ ಪ್ರತಿಯೋಗಿತಾಕವಾದ ಅಭಾವತ್ವೇನ ಮಣ್ಯಾದ್ಯಭಾವಗಳು ಕಾರಣ ಎಂದರ್ಥ.

ವಿವರಣೆ – ಕಾರ್ಯ ಅನುತ್ಪತ್ತಿಯಿಂದ ಪ್ರತಿಬಂಧಕವು ವ್ಯಾಪ್ಯವಾಗಿರಬೇಕೆಂದು ಗ್ರಂಥದಲ್ಲಿ ಹೇಳಿದ್ದಾರೆ. ಇದನ್ನು ಕಾಲಿಕವಾಗಿ ಹೇಳಬೇಕು ಹೊರತು ದೈಶಿಕವಾಗಿ ಹೇಳಬಾರದು. 'ಯದಾ ಕಾರ್ಯಪ್ರತಿಬಂಧಕಂ ತದಾ ಕಾರ್ಯಪ್ರಾಗಭಾವಃ' ಎಂದು ಹೇಳಬೇಕು ಹೊರತು ಯತ್ರ ಕಾರ್ಯಪ್ರತಿಬಂಧಕಂ ತತ್ರ ಕಾರ್ಯಪ್ರಾಗಭಾವಃ ಎಂದು ಹೇಳಬಾರದು. ಏಕೆಂದರೆ ಸಮವಾಯಿಕಾರಣವಾದ ಕಪಾಲದಲ್ಲಿ ಕಾರ್ಯಪ್ರಾಗಭಾವವಿದೆ. ಅಲ್ಲಿ ಕಾರ್ಯಪ್ರತಿ-ಬಂಧಕವನ್ನು ಹೇಳಲು ಸಾಧ್ಯವಿಲ್ಲ.

ಮಣಿ, ಮಂತ್ರ, ಓಷಧಿ ಇವುಗಳೆಲ್ಲಲ್ಲ ಪ್ರತಿಬಂಧಕತ್ವವು ಅನುಗತವಾಗಿದೆ. ಆದ್ದರಿಂದ ಮಣ್ಯಾದ್ಯಭಾವ ಎಂದರೆ ಪ್ರತಿಬಂಧಕತ್ವಾವಚ್ಛಿನ್ನಪ್ರತಿಯೋಗಿತಾಕ ಅಭಾವ ಎಂದರ್ಥ. ಇದೇ ದಾಹಕ್ಕೆ ಕಾರಣವೆಂದು ತಿಳಿಯಬೇಕು.

## ಪ್ರತಿಬಂಧಕತ್ವಾವಚ್ಛಿನ್ನಪ್ರತಿಯೋಗಿತಾಕವಾದ ಅಭಾವವನ್ನು ವಿವಕ್ಷಿಸಬೇಕು

ನ್ಯಾಯದೀಪ – ಮಂತ್ರಸತ್ವೇಽಪಿ ಮಣ್ಯಾದ್ಯಭಾವಮಾತ್ರೇಣ ದಾಹಾಪತ್ತಿರೂಪ-ಪ್ರಾಗುಕ್ತದೋಷೋ ನೇತ್ಯಾಹ – ಸ ಚೇತಿ ॥ ಮಂತ್ರಸತ್ವಸ್ಥಳೇ

ಮಣಿತ್ವಾದ್ಯವಚ್ಛಿನ್ನಾಭಾವಸತ್ವೇಪಿ ಏಕಪ್ರತಿಬಂಧಕಸತ್ವೇ ಪ್ರತಿಬಂಧಕತ್ವಾವಚ್ಛಿನ್ನಾಭಾವೋ ನೇತಿ ನ ದಾಹಪ್ರಸಂಗದೋಷ ಇತಿ ಭಾವಃ ॥

ಅನುವಾದ – ಮಂತ್ರ ಇದ್ದರೂ ಕೂಡ ಮಣಿ, ಓಷಧಿಗಳಿಲ್ಲ ಎಂಬ ಕಾರಣದಿಂದ ದಾಹವು ಹುಟ್ಟಬೇಕಾದೀತು ಎಂಬ ಹಿಂದೆ ಹೇಳಿದ ದೋಷಕ್ಕೆ ಅವಕಾಶವಿಲ್ಲ ಎಂಬುದನ್ನು ಸಚ ಇತ್ಯಾದಿಯಾಗಿ ಸಮರ್ಥಿಸುತ್ತಿದ್ದಾರೆ. ಮಂತ್ರ ಇರುವ ಸ್ಥಳದಲ್ಲಿ ಮಣಿತ್ವಾದ್ಯವಚ್ಛಿನ್ನಾಭಾವವಿದ್ದರೂ ಕೂಡ ಏಕಪ್ರತಿಬಂಧಕವಿದ್ದರೂ ಪ್ರತಿಬಂಧಕತ್ವಾವಚ್ಛಿನ್ನಾಭಾವವು ಇರುವುದಿಲ್ಲ ಆದ್ದರಿಂದ ದಾಹಪ್ರಸಂಗದೋಷವು ಬರುವುದಿಲ್ಲ.

ವಿವರಣೆ – ಮಣ್ಯಭಾವ, ಮಂತ್ರಾಭಾವ, ಓಷಧ್ಯಭಾವ ಮೂರೂ ಕೂಡ ದಾಹಕ್ಕೆ ಕಾರಣವಾಗಿವೆ. ಈ ಮೂರು ಅಭಾವಗಳು ಪ್ರತಿಬಂಧಕಾಭಾವತ್ವೇನ ಕಾರಣವೆಂದು ಹೇಳಬಾರದು. ಹಾಗೆ ಹೇಳಿದಲ್ಲಿ ಒಂದು ಕಾರಣವಿದ್ದರೂ ಇನ್ನೊಂದು ಕಾರಣವಿಲ್ಲ ಎಂಬುದಾಗಿ ದಾಹವು ಉತ್ಪತ್ತಿಯಾಗಬೇಕಾದ ಪರಿಸ್ಥಿತಿ ಬರುತ್ತದೆ. ಪ್ರತಿಬಂಧಕತ್ವಾವಚ್ಛಿನ್ನ ಪ್ರತಿಯೋಗಿತಾಕ ಅಭಾವವನ್ನು ಕಾರಣವೆಂದು ಹೇಳಬೇಕು. ಆಗ ಮೂರು ಅಭಾವಗಳಿದ್ದಾಗ ಪ್ರತಿಬಂಧಕತ್ವಾವಚ್ಛಿನ್ನಪ್ರತಿಯೋಗಿತಾಕ ಅಭಾವವೆಂಬ ಕಾರಣವಿರುತ್ತದೆ. ಆದರಂತೆ ಒಂದು ಅಭಾವವಿಲ್ಲದಿದ್ದರೂ ಪ್ರತಿಬಂಧಕತ್ವಾವಚ್ಛಿನ್ನಪ್ರತಿಯೋಗಿತಾಕ ಅಭಾವವನ್ನು ಹೇಳಲು ಸಾಧ್ಯವಿಲ್ಲ. ಪ್ರತಿಬಂಧಕತ್ವಾವಚ್ಛೇದಕದಲ್ಲಿ ಆಕ್ರಾಂತವಾದ ಒಂದು ಪ್ರತಿಬಂಧಕ ಇದ್ದರೆ ಅಭಾವವು ಪ್ರತಿಬಂಧಕತ್ವಾವಚ್ಛಿನ್ನಪ್ರತಿಯೋಗಿತಾಕ ಆಗುವುದಿಲ್ಲ. ಉದಾ - ಭೂತಲದಲ್ಲಿ ಯಾವುದೇ ಘಟ ಇಲ್ಲದಿದ್ದಾಗ ಘಟತ್ವಾವಚ್ಛಿನ್ನಪ್ರತಿಯೋಗಿತಾಕ ಅಭಾವವನ್ನು ಹೇಳಬಹುದು. ಒಂದು ಘಟವಿದ್ದಾಗಲೂ ಕೂಡ ಘಟತ್ವಾವಚ್ಛಿನ್ನಪ್ರತಿಯೋಗಿತಾಕ ಅಭಾವವನ್ನು ಹೇಳಲು ಸಾಧ್ಯವಿಲ್ಲ. ಘಟತ್ವಾವಚ್ಛೇದಕದಲ್ಲಿ ಆಕ್ರಾಂತವಾದ ಒಂದು ಘಟವಿದ್ದರೂ ತತ್ಪ್ರತಿಯೋಗಿತಾಕವಾದ ಅಭಾವವನ್ನು ಹೇಳಲು ಹೇಗೆ ಸಾಧ್ಯವಿಲ್ಲವೋ ಆದರಂತೆ ಪ್ರಕೃತ ಪ್ರತಿಬಂಧಕತ್ವಾವಚ್ಛೇದಕದಲ್ಲಿ ಆಕ್ರಾಂತವಾದದ್ದು ಪ್ರತಿಬಂಧಕತ್ವ. ಇದು ಒಂದರಲ್ಲಿದ್ದರೂ ಕೂಡ ತದವಚ್ಛಿನ್ನಪ್ರತಿಯೋಗಿತಾಕ ಅಭಾವವನ್ನು ಹೇಳಲಾಗದು. ಆದ್ದರಿಂದ ಮೂರುಅಭಾವಗಳಲ್ಲಿ ಒಂದಿದ್ದರೂ ಕೂಡ ಇನ್ನೊಂದಿಲ್ಲ ಎಂಬ ಕಾರಣದಿಂದ ದಾಹ ಉತ್ಪತ್ತಿಯಾಗಲಿ ಎಂಬ ಅತಿಪ್ರಸಂಗಕ್ಕೆ ಅವಕಾಶವಿಲ್ಲ.

## ಏಕಕ್ಷಣಾವಸ್ಥಾಯಿಯಾದ ಮಂತ್ರವು ಹೇಗೆ ಪ್ರತಿಬಂಧಕ

**ತರ್ಕತಾಂಡವ – ನಾಪ್ಯನ್ಯೋನ್ಯಾಶ್ರಯಾನನುಗಮೌ । 'ಪ್ರಹರಂ ಮಾ ದಹ' ಇತಿ ಸಾವಧಿಮಂತ್ರಪಾಠೇ ಮಂತ್ರಸ್ಯ ಝಟಿತಿ ನಾಶೇಪಿ ಮಂತ್ರಪ್ರಯೋಕ್ತೃಪುರುಷಾಭಿಪ್ರಾಯ ವಿಷಯಃ ಕಾಲವಿಶೇಷ ಏವ ಪ್ರತಿಬಂಧಕ ಇತಿ ನ ಕೋಪಿ ದೋಷಃ। ತಸ್ಮಾನ್ನ ಶಕ್ತಿಸಿದ್ಧಿರಿತಿ।**

ಅನುವಾದ – ಅನ್ಯೋನ್ಯಾಶ್ರಯ ಅನನುಗಮದೋಷಗಳಿಗೆ ಕಾರಣೀಭೂತಾಭಾವ-ಪ್ರತಿಯೋಗಿಪಕ್ಷದಲ್ಲಿ ಅವಕಾಶವೇ ಇಲ್ಲ. 'ಪ್ರಹರಂ ಮಾ ದಹ' 'ಒಂದು ಯಾಮದ ಕಾಲ ನನ್ನನ್ನು ಸುಡಬೇಡ' ಎಂಬುದಾಗಿ ಕಾಲದ ಅವಧಿಯನ್ನು ಹಾಕಿ ಮಂತ್ರವನ್ನು ಪಠಿಸುತ್ತಾನೆ. ಆದ್ದರಿಂದ ಮಂತ್ರವು ಕೂಡಲೇ ನಾಶವಾದರೂ ಕೂಡ ಮಂತ್ರವನ್ನು ಪ್ರಯೋಗಿಸಿದ ಪುರುಷನ ಅಭಿಪ್ರಾಯಕ್ಕೆ ವಿಷಯವಾದ ಕಾಲವೇ ಪ್ರತಿಬಂಧಕವೆಂದು ಹೇಳುತ್ತೇವೆ. ಈಗ ಯಾವುದೇ ದೋಷವಿಲ್ಲ. ಆದ್ದರಿಂದ ಅತಿರಿಕ್ತವಾದ ಶಕ್ತಿ ಎಂಬ ಪದಾರ್ಥವನ್ನು ಒಪ್ಪುವ ಅವಶ್ಯಕತೆ ಇರುವುದಿಲ್ಲ.

ವಿವರಣೆ – ಪ್ರಶ್ನೆ – ನಮ್ಮ ಸಿದ್ಧಾಂತದಲ್ಲಿ ಶಬ್ದವು ವರ್ಣಾತ್ಮಕ ಹಾಗೂ ಧ್ವನ್ಯಾತ್ಮಕ ಎಂದು ಎರಡು ಬಗೆಯಲ್ಲಿ ಒಪ್ಪುತ್ತೇವೆ. ಆದರೆ ತಾರ್ಕಿಕರು ಧ್ವನ್ಯಾತ್ಮಕ ಶಬ್ದವನ್ನಷ್ಟೇ ಒಪ್ಪಿದ್ದಾರೆ. ಅವರ ಸಿದ್ಧಾಂತದಲ್ಲಿ ಧ್ವನ್ಯಾತ್ಮಕವಾದ ವರ್ಣವು ಒಂದು ಕ್ಷಣದಲ್ಲಿ ಮಾತ್ರ ಅಸ್ತಿತ್ವವನ್ನು ಹೊಂದಿರುತ್ತದೋ. ಯಾವಾಗ ವರ್ಣವು ಹುಟ್ಟುತ್ತದೋ ಅದರ ಮೂರನೆಯ ಕ್ಷಣದಲ್ಲಿ ನಾಶ ಹೊಂದುತ್ತದೆ. ಈಗ ದಾಹವು ಉತ್ಪತ್ತಿಯಾಗದಿರಲು ಯಾವಾಗ ಮಂತ್ರವನ್ನು ಪಠಿಸುತ್ತಾನೋ ಆ ಒಂದು ಕ್ಷಣದಲ್ಲಿ ಮಾತ್ರ ದಾಹವು ಉತ್ಪತ್ತಿಯಾಗಬಾರದು. ಏಕೆಂದರೆ, ಮುಂದಿನ ಕ್ಷಣದಲ್ಲಿ ಮಂತ್ರ ಎಂಬ ಪ್ರತಿಬಂಧಕವೇ ಇರುವುದಿಲ್ಲ. ಪ್ರತಿಬಂಧಕವು ಇಲ್ಲದಿರುವ ಕಾರಣ ದಾಹವು ಉತ್ಪತ್ತಿಯಾಗದಿರಬೇಕು. ಆದರೆ ಅವನು ಉಚ್ಚಾರಣೆ ಮಾಡಿದ ಒಂದು ಯಾಮದ ತನಕ ದಾಹದ ಉತ್ಪತ್ತಿ ಆಗುವುದಿಲ್ಲ. ಹೀಗಿರುವಾಗ ಮಂತ್ರವನ್ನು ಪ್ರತಿಬಂಧಕವೆಂದು ಹೇಗೆ ಕೂಡಿಸುತ್ತೀರಿ?

ಉತ್ತರ - ಮಂತ್ರವನ್ನು ದಾಹಕ್ಕೆ ಪ್ರತಿಬಂಧಕವೆಂದು ನಾವು ಹೇಳುವುದಿಲ್ಲ. ಮಂತ್ರವನ್ನು ಪ್ರಯೋಗಿಸುವಪುರುಷನಅಭಿಪ್ರಾಯಕ್ಕೆವಿಷಯವಾದಕಾಲವಿಶೇಷವನ್ನೇಪ್ರತಿಬಂಧಕವೆಂದು ಹೇಳುತ್ತೇವೆ. 'ಒಂದು ಯಾಮದ ಕಾಲ ನನ್ನನ್ನು ಸುಡಬೇಡ' ಎಂಬುದಾಗಿ ಕಾಲದ ಅವಧಿಯನ್ನು ಹೇಳಿ ಮಂತ್ರವನ್ನು ಪಠಿಸುತ್ತಾನೆ. ಹೀಗೆ ಮಂತ್ರವನ್ನು ಹೇಳುವ ಪುರುಷನ ಅಭಿಪ್ರಾಯಕ್ಕೆ ಒಂದು ಯಾಮ ಎಂಬ ಕಾಲವಿಶೇಷವು ವಿಷಯವಾಗಿದೆ. ಈ ಪ್ರತಿಬಂಧಕವು ಎಲ್ಲಿಯ ತನಕ ಇರುತ್ತದೋ ಅಲ್ಲಿಯ ತನಕ ದಾಹವು ಉತ್ಪತ್ತಿಯಾಗುವುದಿಲ್ಲ. ಅನಂತರ ಉತ್ಪತ್ತಿಯಾಗುತ್ತದೆ. ಆದ್ದರಿಂದ ಮಂತ್ರವು ಏಕಕ್ಷಣಾವಸ್ಥಾಯಿಯಾದ್ದರಿಂದ ಅತಿಪ್ರಸಂಗವು ಬರಲಿ ಎಂದು ಆಕ್ಷೇಪ ಮಾಡಲು ಸಾಧ್ಯವಿಲ್ಲ. ಹಾಗಾಗಿ ಶಕ್ತಿ ಎಂಬ ಪದಾರ್ಥವು ಸಿದ್ಧವಾಗುವುದಿಲ್ಲ.

## ಮಂತ್ರವು ಪ್ರತಿಬಂಧಕವಲ್ಲ ಕಾಲವಿಶೇಷವು ಪ್ರತಿಬಂಧಕ

ನ್ಯಾಯದೀಪ - ನಾಪ್ಯನ್ಯೋನ್ಯಾಶ್ರಯೇತಿ ॥ ಕಾರಣೀಭೂತಾಭಾವಪ್ರತಿಯೋಗಿತ್ವಪಕ್ಷ ಏವಾಸ್ಯ ದೋಷಪ್ಯೋಕ್ತೇರಿತಿ ಭಾವಃ॥ ನನು ವ್ಯಭಿಚಾರಾತ್ ಕಥಂ ಮಂತ್ರಾದ್ಯಭಾವಃ ಕಾರಣಮಿತ್ಯತೋ ವ್ಯಭಿಚಾರಂ ನಿರಾಹ - ಪ್ರಹರಮಿತಿ ॥

ಅನುವಾದ - ಅನ್ಯೋನ್ಯಾಶ್ರಯ ಅನನುಗಮದೋಷಗಳಿಗೆ ಅವಕಾಶವಿಲ್ಲ. ಏಕೆಂದರೆ ಕಾರಣೀಭೂತಾಭಾವಪ್ರತಿಯೋಗಿತ್ವಪಕ್ಷದಲ್ಲಷ್ಟೇ ಈ ಎರಡು ದೋಷಗಳಿಗೆ ಅವಕಾಶವಿರಲು ಸಾಧ್ಯ.

ವ್ಯಭಿಚಾರವಿರುವುದರಿಂದ ಮಂತ್ರಾದ್ಯಭಾವವು ಹೇಗೆ ದಾಹಕ್ಕೆ ಕಾರಣವಾಗುತ್ತದೆ ? ಎಂಬ ಪ್ರಶ್ನೆಗೆ ಉತ್ತರಿಸಲು ವ್ಯಭಿಚಾರವನ್ನು ಪರಿಹರಿಸುತ್ತಿದ್ದಾರೆ 'ಪ್ರಹರಂ' ಇತ್ಯಾದಿಯಾಗಿ.

ವಿವರಣೆ - 'ಯತ್ರ ಮಂತ್ರಾಭಾವಃ ತತ್ರ ದಾಹಃ' ಎಂಬ ವ್ಯಾಪ್ತಿಗೆ ವ್ಯಭಿಚಾರ ಬರುತ್ತದೆ. ಮಂತ್ರವು ಒಂದು ಕ್ಷಣದಲ್ಲಿ ಮಾತ್ರ ಇರುತ್ತದೆ. ಮುಂದಿನ ಕ್ಷಣದಲ್ಲಿ ಮಂತ್ರವಿರುವುದಿಲ್ಲ. ಆದರೂ ಕೂಡ ದಾಹವು ಉತ್ಪತ್ತಿಯಾಗುತ್ತಿಲ್ಲ ಎಂಬುದಾಗಿ ಕಾರಣವಿಲ್ಲದಿದ್ದರೂ ಕಾರ್ಯವು ಹುಟ್ಟುತ್ತಿದೆ ಎಂದು ವ್ಯತಿರೇಕವ್ಯಭಿಚಾರವು ಬರುತ್ತದೆ.

ಇಲ್ಲಿಗೆ ತತ್ವಚಿಂತಾಮಣಿಯಲ್ಲಿ ಮಾಡಿದ ಲೀಲಾವತಿಯ ಶಕ್ತ್ಯಪಲಾಪಭಂಗಪ್ರಸಂಗದ ನಿರಾಕರಣೆಯು ಮುಗಿಯಿತು.

## 'ಪ್ರಹರಂ ಮಾ ದಹ' ಎಂಬ ಪ್ರಯೋಗ ಸಾಧುವೇ ಆಗಿದೆ

**ನ್ಯಾಯದೀಪ – ನಿಷೇಧಾರ್ಥಕಮಾಶಬ್ದೋಽಯಮ್ । ನ ಮಾಙ್ । ತೇನ 'ಮಾಙಿ ಲುಙ್' ಇತಿ ಲುಙಾ ಭಾವ್ಯಮಿತಿ ನ ಶಂಕ್ಯಮ್ ।**

ಅನುವಾದ – 'ಪ್ರಹರಂ ಮಾ ದಹ' ಎಂಬಲ್ಲಿರುವ ಮಾ ಎಂಬ ಶಬ್ದವು ನಿಷೇಧಾರ್ಥದಲ್ಲಿದೆ ಹೊರತು ಮಾಙ್ ಎಂದಲ್ಲ. ಆದ್ದರಿಂದ ಮಾಙ್ ಎಂಬುದರ ಯೋಗವಿದ್ದಾಗ ಲುಙ್ ಬಂದು ದಾಹಿ ಎಂಬ ರೂಪವು ಆಗಬೇಕಲ್ಲವೇ? ಎಂಬ ಆಶಂಕೆಗೆ ಅವಕಾಶವಿಲ್ಲ.

ವಿವರಣೆ– 'ಪ್ರಹರಂ ಮಾ ದಹ' ಎಂದು ಗ್ರಂಥಕಾರರು ಪ್ರಯೋಗಿಸಿದ್ದಾರೆ. ದಹ ಎಂಬುದು ಲೋಟ್ ಲಕಾರದ ಮಧ್ಯಮ ಪುರುಷ. ಇಲ್ಲಿ ಲುಙ್ ಲಕಾರವನ್ನು ಪ್ರಯೋಗಿಸಬೇಕಿತ್ತು. ಏಕೆಂದರೆ 'ನ ಮಾಙ್ ಯೋಗೇ' ಎಂಬ ಸೂತ್ರದಂತೆ ಮಾಙ್‌ನ ಯೋಗವಿದ್ದಾಗ ಲುಙ್ ಬಂದು ಅದಾಹಿ ಎಂದಾಗಬೇಕು. ಅಕಾರವು ಲೋಪವಾದರೆ ದಾಹಿ ಎಂದಾಗಬೇಕು. ಹೀಗಿರುವಾಗ ದಹ ಎಂದು ಹೇಗೆ ಪ್ರಯೋಗಿಸಿದರು?

ಇದು ಮಾಙ್ ಪ್ರತ್ಯಯವೇ ಅಲ್ಲ. ಅಮಾಙೋನಾಃ ಪ್ರತಿಷೇಧೇ ಎಂಬಲ್ಲಿ ಹೇಳಿದ ನಿಷೇಧಾರ್ಥಕವಾದ ಮಾ ಎಂಬ ಶಬ್ದವಾಗಿದೆ. ಆದ್ದರಿಂದ ಲುಙ್‌ಲಕಾರವೇ ಬರಬೇಕಾಗಿಲ್ಲ. ಲೋಟ್‌ಲಕಾರವನ್ನು ಹೇಳಬಹುದು.

## ಗೋಷ್ಠಿಯ ವಿಚಾರ

ಆಕ್ಷೇಪ - ಉತ್ತೇಜಕಾಭಾವವಿಶಿಷ್ಟಮಣ್ಯಭಾವವು ದಾಹ ಅನುತ್ಪತ್ತಿಗೆ ಕಾರಣವೆಂದು ತಾರ್ಕಿಕರು ಹೇಳುತ್ತಾರೆ. ಇದು ಪ್ರತಿಬಂಧಕಾಭಾವವಾಯಿತು. ಕಾರಣವೆನ್ನುವುದು ಹೇಗೆ?

ಉತ್ತರ - ತಾರ್ಕಿಕರು ಪ್ರತಿಬಂಧಕಾಭಾವವನ್ನೇ ಕಾರಣವೆಂದು ಒಪ್ಪಿದ್ದಾರೆ.

ಆಕ್ಷೇಪ - ಕಾರ್ಯ ಅನುತ್ಪತ್ತಿವ್ಯಾಪ್ಯತ್ವಂ ಪ್ರತಿಬಂಧಕತ್ವಂ ಎಂದು ತಾರ್ಕಿಕರು ಹೇಳುತ್ತಾರೆ.

ಇದು ಕಾರಣಾಭಾವದಲ್ಲಿಯೂ ಬರುತ್ತಿದೆ. ದಂಡಾಭಾವವೂ ಕೂಡ ಕಾರ್ಯದ ಅನುತ್ಪತ್ತಿಯಿಂದ ವ್ಯಾಪ್ಯವಾಗಿದೆ. ಆದ್ದರಿಂದ ಪ್ರತಿಬಂಧಕತ್ವದ ಲಕ್ಷಣ ದಂಡಾಭಾವವೆಂಬ ಕಾರಣಾಭಾವದಲ್ಲಿ ಅತಿಪ್ರಸಕ್ತವಾಯಿತಲ್ಲವೇ?

ಸಮಾಧಾನ - ಈ ದೋಷವನ್ನು ಹೀಗೆ ಪರಿಹರಿಸಬಹುದು -- ದಂಡಾಭಾವವು ಪ್ರತಿಬಂಧಕವಾಗುವುದಿಲ್ಲ. ಏಕೆಂದರೆ ಸ್ವೇತರಸಕಲವಿಧಕಾರಣಗಳಲ್ಲಿ ದಂಡವೂ ಕೂಡ ಸೇರಿದೆ. ದಂಡವೆಂಬ ಕಾರಣವಿರುವಾಗ ದಂಡಾಭಾವವನ್ನು ಪ್ರತಿಬಂಧಕವೆಂದು ಹೇಳಲು ಸಾಧ್ಯವಾಗುವುದಿಲ್ಲ.

## ಸ್ಮೃತಿಶ್ರುತಿಗಳಿಂದ ಶಕ್ತಿಯು ಸಿದ್ಧವಾಯಿತು

ತರ್ಕತಾಂಡವ – ಉಚ್ಯತೇ -

'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ......'
ವಿಚಿತ್ರಶಕ್ತಿಃ ಪುರುಷಃ ಪುರಾಣೋ, ನ ಚಾನ್ಯೇಷಾಂ ಶಕ್ತಯಸ್ತಾದೃಶಾಃ ಸ್ಯುಃ
ಸರ್ವೈರ್ಯುಕ್ತಾ ಶಕ್ತಿಭಿರ್ದೇವತಾ ಸಾ ಪರೇತಿ ಯಾಂ ಪ್ರಾಹುಃ'
ಇತ್ಯಾದಿ ಶ್ರುತ್ಯಾ
'ಶಕ್ತಯಃ ಸರ್ವಭಾವಾನಾಮಚಿಂತ್ಯಜ್ಞಾನಗೋಚರಾಃ।
ಯತೋಽತೋ ಬ್ರಹ್ಮಣಸ್ತಾಸ್ತು ಸರ್ಗಾದ್ಯಾ ಭಾವಶಕ್ತಯಃ॥

ಇತ್ಯಾದಿಸ್ಮೃತ್ಯಾ ಚ ಶಕ್ತಿಸಿದ್ಧೇಃ॥

ಸಮಾಧಾನವನ್ನು ಹೀಗೆ ಹೇಳುತ್ತೇವೆ - ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ' 'ಪರಮಾತ್ಮನ ಶಕ್ತಿಯು ಬಹುಬಗೆಯಾಗಿ ಕೇಳಿಸುತ್ತಿದೆ. ಇದು ಸ್ವಾಭಾವಿಕವಾಗಿದೆ.

'ವಿಚಿತ್ರಶಕ್ತಿಃ ಪುರುಷಃ ಪುರಾಣೋ, ನ ಚಾನ್ಯೇಷಾಂ ಶಕ್ತಯಸ್ತಾದೃಶಾಃ ಸ್ಯುಃ' 'ಸರ್ವೈಯುಕ್ತಾ ಶಕ್ತಿಭಿರ್ದೇವತಾ ಸಾ' 'ಅನಾದಿಪುರುಷನಾದ ಪರಮಾತ್ಮನಲ್ಲಿ ವಿಚಿತ್ರವಾದ

ಶಕ್ತಿಯಿದೆ; ಬೇರೆ ಯಾರಲ್ಲಿಯೂ ಇಂತಹ ಶಕ್ತಿ ಇರುವುದಿಲ್ಲ. ಬೇರೆಯವರಲ್ಲಿರುವ ಶಕ್ತಿಯು ಕೂಡ ಇವನ ಅಧೀನವಾಗಿದೆ. ಆದ್ದರಿಂದಲೇ ಇವನನ್ನು ಪರಶಕ್ತಿ ಎಂದು ಕರೆಯುತ್ತಾರೆ ಇವೇ ಮೊದಲಾದ ಶ್ರುತಿಗಳಿಂದ, ಹಾಗೂ,

'ಶಕ್ತಯಃ ಸರ್ವಭಾವಾನಾಮಚಿಂತ್ಯಜ್ಞಾನಗೋಚರಾಃ।
ಯತೋऽತೋ ಬ್ರಹ್ಮಣಸ್ತಾಸ್ತು ಸರ್ಗಾದ್ಯಾ ಭಾವಶಕ್ತಯಃ॥'

ಸಕಲಪದಾರ್ಥಗಳಲ್ಲಿರುವ ಶಕ್ತಿಗಳು ಅಚಿಂತ್ಯವಾಗಿವೆ. ಬ್ರಹ್ಮನಲ್ಲಿಯೂ ಸರ್ಗಾದಿ ಭಾವ- ಶಕ್ತಿಗಳು ಇರುತ್ತವೆ. ಇವೇ ಮೊದಲಾದ ಸ್ಮೃತಿಗಳಿಂದಲೂ ಶಕ್ತಿ ಎಂಬ ಪದಾರ್ಥವು ಸಿದ್ಧವಾಗುತ್ತದೆ.

## ಅತ್ತೃತ್ವಾಧಿಕರಣದ ಅನುವ್ಯಾಖ್ಯಾನದಲ್ಲಿ ಶಕ್ತಿಯ ಸಮರ್ಥನೆ

ನ್ಯಾಯದೀಪ – ಮಣ್ಯಾದೇಃ ಪ್ರತಿಬಂಧಕತ್ವಾನ್ಯಥಾನುಪಪತ್ತಿರೂಪಾರ್ಥಾಪತ್ತೇ-ರ್ನೈಯಾಯಿಕೋಕ್ತಾನ್ಯಥೋಪಪತ್ತಿಂ ಅಗ್ರೇ ನಿರಸಿಷ್ಯನ್, ಏಕತ್ರ ಶಕ್ತಿಸಿದ್ಧೌ ಅನ್ಯತ್ರ ಶಬ್ದಾದಾವಪಿ ತದನುಮಾನಮಿತಿ ಭಾವೇನ, ಪರಮೇಶ್ವರೇ ಶಕ್ತಿಸತ್ವೇ ತಾವತ್ –

'ಜ್ಞಾನಂ ನಿತ್ಯಂ ಕ್ರಿಯಾ ನಿತ್ಯಾ ಬಲಂ ಶಕ್ತಿಃ ಪರಾತ್ಮನಃ।
ನಿತ್ಯಾನಂದೋऽವ್ಯಯಃ ಪೂರ್ಣೋ ಭಗವಾನ್ ವಿಷ್ಣುರುಚ್ಯತೇ॥
ಇತಿ ಪೈಂಗಿಶ್ರುತಿಶ್ಚಾಹ ಶಕ್ತಿಸದ್ಭಾವ ಏವ ತು' - ಅತ್ತೃತ್ವಾಧಿಕರಣಮ್ -1/2/)

ಇತ್ಯತ್ರಾಧಿಕರಣಾನುವ್ಯಾಖ್ಯಾನಾದ್ಯುಕ್ತದಿಶಾ ಶ್ರುತ್ಯಾದಿರೂಪಮಾನೋಕ್ತ್ಯಾ 'ಶಕ್ತೌ ಮಾನಂ ನ' ಇತ್ಯೇತಾವತ್ ತಾವನ್ನಿರಾಕರೋತಿ - ಪರಾಸ್ಯೇತಿ॥

ಅನುವಾದ - ಮಣ್ಯಾದಿಗಳು ಪ್ರತಿಬಂಧಕವಾಗಿರುವುದರಿಂದ ಇದರ ಅನ್ಯಥಾನುಪಪತ್ತಿಯಿಂದ ಶಕ್ತಿಯು ಸಿದ್ಧವಾಗುತ್ತದೆಂದು ಶಕ್ತಿಯ ವಿಷಯದಲ್ಲಿ ಅರ್ಥಾಪತ್ತಿಪ್ರಮಾಣವನ್ನು ನಾವು ಹೇಳಿದೆವು.

ಇದಕ್ಕೆ ತಾರ್ಕಿಕರು ಅನ್ಯಥೋಪಪತ್ತಿಯನ್ನು ಹೇಳುವ ಮೂಲಕ ಅರ್ಥಾಪತ್ತಿಯನ್ನು ನಿರಾಕರಣೆ ಮಾಡಿದರು. ಇದನ್ನು ಮುಂದೆ ನಿರಾಕರಣೆ ಮಾಡುತ್ತಾರೆ. ಈಗ 'ಒಂದು ಕಡೆ ಶಕ್ತಿಯು ಸಿದ್ಧವಾದ ಮೇಲೆ ಬೇರೆಡೆಯೂ ಅದೇ ತರಹ ಅನುಮಾನದ ಮೂಲಕ ಶಕ್ತಿಯು ಸಿದ್ಧವಾಗುತ್ತದೆ' ಎಂಬ ಅಭಿಪ್ರಾಯದಿಂದ ಪರಮಾತ್ಮನಲ್ಲಿ ಶಕ್ತಿಯನ್ನು ಸಮರ್ಥನೆ ಮಾಡಲು ಶ್ರುತಿಸ್ಮೃತಿಗಳನ್ನು ಪ್ರಮಾಣವಾಗಿ ನೀಡುತ್ತಿದ್ದಾರೆ. ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ -

'ಜ್ಞಾನಂ ನಿತ್ಯಂ ಕ್ರಿಯಾ ನಿತ್ಯಾ ಬಲಂ ಶಕ್ತಿಃ ಪರಾತ್ಮನಃ।
ನಿತ್ಯಾನಂದೋಽವ್ಯಯಃ ಪೂರ್ಣೋ ಭಗವಾನ್ ವಿಷ್ಣುರುಚ್ಯತೇ।
ಇತಿ ಪೈಂಗಿಶ್ರುತಿಶ್ಚಾಹ ಶಕ್ತಿಸದ್ಭಾವ ಏವ ತು' -

ಭಗವಂತನಾದ ಮಹಾವಿಷ್ಣುವಿನಲ್ಲಿರುವ ಜ್ಞಾನ, ಕ್ರಿಯಾ, ಬಲ, ಶಕ್ತಿ ಇತ್ಯಾದಿಗಳು ನಿತ್ಯವಾಗಿವೆ. ಅವನ ಆನಂದವೂ ನಿತ್ಯವಾಗಿದೆ. ಇವನು ನಾಶರಹಿತನೂ ಪರಿಪೂರ್ಣನೂ ಆಗಿದ್ದಾನೆ. ಹೀಗೆ ಶಕ್ತಿಯ ವಿಷಯದಲ್ಲಿ ಪೈಂಗಿಶ್ರುತಿಯು ಪ್ರಮಾಣವಾಗಿದೆ.

ಹೀಗೆ ಅತ್ಯತ್ವಾಧಿಕರಣದ ಅನುವ್ಯಾಖ್ಯಾನದಲ್ಲಿ ಹೇಳಿದಂತೆ, ಶ್ರುತ್ಯಾದಿಗಳೇ ಶಕ್ತಿಯ ವಿಷಯದಲ್ಲಿ ಪ್ರಮಾಣವೆಂದು ಸಿದ್ಧವಾಗುತ್ತದೆ. ಆದ್ದರಿಂದ ಶಕ್ತಿಯ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲವೆನ್ನುವ ತಾರ್ಕಿಕರನ್ನು ನಿರಾಕರಣೆ ಮಾಡಿದಂತಾಯಿತು.

ವಿವರಣೆ – ಈಗ ಲೀಲಾವತಿ ಹಾಗೂ ತತ್ವಚಿಂತಾಮಣಿಯಲ್ಲಿ ಹೇಳಿದ ಶಕ್ತಿಯ ನಿರಾಕರಣೆಯನ್ನು ಖಂಡನೆ ಮಾಡುತ್ತಿದ್ದಾರೆ. ಮತ್ತು ಶಕ್ತಿಯು ಇದೆ ಎನ್ನಲು ಅನೇಕ ಪ್ರಮಾಣಗಳಿವೆ ಎಂಬುದನ್ನು ಸಮರ್ಥನೆ ಮಾಡುತ್ತಿದ್ದಾರೆ.

'ಶಕ್ತಿಂ ಅನ್ಯಥಾ ಮಣ್ಯಾದೇಃ ಪ್ರತಿಬಂಧಕತ್ವಂ ನೋಪಪದ್ಯತೇ' ಎಂಬ ಅನ್ಯಥಾನುಪಪತ್ತಿಯಿಂದ ಶಕ್ತಿಯು ಸಿದ್ಧವಾಗುತ್ತದೆ. ಆದರೆ ತಾರ್ಕಿಕರು 'ಶಕ್ತಿಂ ಅನ್ಯಥಾಪಿ ಮಣ್ಯಾದೇಃ ಪ್ರತಿಬಂಧಕತ್ವಂ ಉಪಪದ್ಯತೇ' ಎಂದು ಹೇಳುತ್ತಾರೆ. ಇವರ ಈ ವಾದವನ್ನು ಗ್ರಂಥಕಾರರು ಪ್ರಾರಂಭದಲ್ಲಿ ಏಕೆ ನಿರಾಕರಣೆ ಮಾಡುತ್ತಿಲ್ಲ ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಇದನ್ನು ನಿರಾಕರಣೆ ಮಾಡುವ ಮೊದಲು ಶಕ್ತಿಯ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲವೆಂದು ಹೇಳಿದ ತಾರ್ಕಿಕರ ಅಭಿಪ್ರಾಯವನ್ನು ಖಂಡನೆ ಮಾಡಬೇಕಾಗಿದೆ. ಅದಕ್ಕಾಗಿ ಅನೇಕ ಪ್ರಮಾಣಗಳನ್ನು ಶಕ್ತಿಯ ವಿಷಯದಲ್ಲಿ ನೀಡುತ್ತಿದ್ದಾರೆ.

ಕೇವಲ ಪರಮಾತ್ಮನಲ್ಲಿ ಮಾತ್ರ ಶಕ್ತಿ ಇರುವುದಲ್ಲ. ಪ್ರತಿಯೊಂದು ಪದಾರ್ಥದಲ್ಲಿ ಕೂಡ ಶಕ್ತಿಯು ಇರುತ್ತದೆ. ಇಲ್ಲಿ ಗ್ರಂಥಕಾರರು ಪರಮಾತ್ಮನ ವಿಷಯದಲ್ಲಿ ಮಾತ್ರ ಶಕ್ತಿಯನ್ನು ಏಕೆ ಸಮರ್ಥಿಸುತ್ತಿದ್ದಾರೆ? ಎಂದು ಪ್ರಶ್ನಿಸಬಾರದು. ಪರಮಾತ್ಮನಲ್ಲಿ ಸಿದ್ಧವಾದ ಶಕ್ತಿಯಿಂದ ಬೇರೆಡೆಯೂ ಅನುಮಾನದ ಮೂಲಕ ಶಕ್ತಿಯನ್ನು ಊಹಿಸಬಹುದು. ಅದಕ್ಕಾಗಿ ಮುಖ್ಯವಾದ ಪರಮಾತ್ಮನಲ್ಲಿ ಶಕ್ತಿಯನ್ನು ಶ್ರುತಿ ಸ್ಮೃತಿಗಳಿಂದ ಸಮರ್ಥನೆ ಮಾಡುತ್ತಿದ್ದಾರೆ.

'ಶಕ್ತಯಃ ಸರ್ವಭಾವಾನಾಮಚಿಂತ್ಯಜ್ಞಾನಗೋಚರಾಃ ।
ಯತೋಽತೋ ಬ್ರಹ್ಮಣಸ್ತಾಸ್ತು ಸರ್ಗಾದ್ಯಾ ಭಾವಶಕ್ತಯಃ ॥'

ಸರ್ವಭಾವಾನಾಂ = ಘಟಪಟಾದಿ ಸಕಲಭಾವಪದಾರ್ಥಗಳ, ಶಕ್ತಯಃ = ಶಕ್ತಿಗಳು, ಅಚಿಂತ್ಯಜ್ಞಾನಗೋಚರಾಃ = ಚಿಂತನೆ ಮಾಡಲು ಅಶಕ್ಯವಾಗಿವೆ ಮತ್ತು ತಿಳಿಯಲು ಅಶಕ್ಯವಾಗಿವೆ ಯತಃ = ಯಾವ ಕಾರಣದಿಂದ ಅತಃ = ಆ ಕಾರಣದಿಂದ, ಬ್ರಹ್ಮಣಃ = ಬ್ರಹ್ಮನ, ಸರ್ಗಾದ್ಯಾಃ = ಸೃಷ್ಟ್ಯಾದಿವಿಷಯಕವಾದ ಸ್ವಭಾವಶಕ್ತಿಗಳು (ಅಚಿಂತ್ಯಜ್ಞಾನ ಗೋಚರವೆಂದು ಪ್ರತ್ಯೇಕವಾಗಿ ಹೇಳಬೇಕೇನು?)

ಸಕಲ ಭಾವಪದಾರ್ಥಗಳಲ್ಲಿ ಚಿಂತನೆ ಮಾಡಲು ಸಾಧ್ಯವಾಗದಷ್ಟು, ಹಾಗೂ ಜ್ಞಾನಕ್ಕೆ ಗೋಚರವಾಗದಷ್ಟು ಶಕ್ತಿಗಳಿವೆ. ಇನ್ನು ಬ್ರಹ್ಮನಲ್ಲಿರುವ ಸೃಷ್ಟ್ಯಾದಿವಿಷಯಕವಾದ ಸ್ವಭಾವಶಕ್ತಿಗಳು ಇನ್ನು ಎಷ್ಟಿರಬಹುದು?

## ಜ್ಞಾನಬಲಕ್ರಿಯಾ ಎಂಬಲ್ಲಿ ಏಕವಚನ ಸಾಧುವಾಗಿದೆ

ನ್ಯಾಯದೀಪ – ಅಸ್ಯ ಭಗವತ ಇತ್ಯರ್ಥಃ । 'ಜ್ಞಾನಬಲಾಭ್ಯಾಂ ಸಹಿತಾ ಕ್ರಿಯಾ ಜ್ಞಾನಬಲಕ್ರಿಯಾ ಚ' ಇತಿ ವಿಗ್ರಹಃ

ಅನುವಾದ– ಪರಾಸ್ಯ ಎಂಬಲ್ಲಿರುವ ಅಸ್ಯ ಎಂಬ ಶಬ್ದಕ್ಕೆ ಭಗವಂತನ ಎಂದರ್ಥ. ಜ್ಞಾನಬಲಕ್ರಿಯಾ ಚ ಎಂಬಲ್ಲಿ 'ಜ್ಞಾನಬಲಾಭ್ಯಾಂ ಸಹಿತಾ ಕ್ರಿಯಾ ಜ್ಞಾನಬಲಕ್ರಿಯಾ' ಎಂದು ವಿಗ್ರಹವನ್ನು ತಿಳಿಯಬೇಕು.

ವಿವರಣೆ – 'ಜ್ಞಾನಬಲಕ್ರಿಯಾ ಚ' ಎಂಬಲ್ಲಿ ಬಹುವಚನವನ್ನು ಪ್ರಯೋಗಮಾಡಬೇಕಿತ್ತು. ಏಕವಚನವನ್ನು ಹೇಗೆ ಪ್ರಯೋಗ ಮಾಡಿದರು? ಎಂಬ ಪ್ರಶ್ನೆಗೆ ಮಧ್ಯಮಪದಲೋಪೀ

ಸಮಾಸವನ್ನು ಮಾಡುವ ಮೂಲಕ ಉತ್ತರಿಸುತ್ತಿದ್ದಾರೆ. 'ಜ್ಞಾನಬಲಾಭ್ಯಾಂ ಸಹಿತಾ ಕ್ರಿಯಾ ಜ್ಞಾನಬಲಕ್ರಿಯಾ' ಎಂದು ಮಧ್ಯಮಪದಲೋಪೀಸಮಾಸ ಮಾಡಿದಾಗ ಜ್ಞಾನ ಹಾಗೂ ಬಲಗಳಿಂದ ಸಹಿತವಾದ ಕ್ರಿಯೆ ಎಂದರ್ಥವು ತಿಳಿಯುತ್ತದೆ. ಈಗ ಬಹುವಚನವನ್ನು ಹೇಳದಿರುವುದು ತಪ್ಪಾಗುವುದಿಲ್ಲ.

## ಶ್ರುತಿಗಳ ವ್ಯಾಖ್ಯಾನ

**ನ್ಯಾಯದೀಪ – ವಿಚಿತ್ರೇತಿ ವಾಕ್ಯಾಂತರಮ್ । ತಾದೃಶಾಸ್ತಾದೃಶ್ಯಃ । ಸರ್ವೈರ್ಯುಕ್ತೇತಿ ವಾಕ್ಯಾಂತರಮ್ । ಸರ್ವೈಃ = ಸರ್ವಾಭಿಃ 'ಪರೇತಿ ಯಾಂ ಪ್ರಾಹುರಜಸ್ರಶಕ್ತಿಮ್' ಇತಿ ವಾಕ್ಯಶೇಷಃಲಿಂಗವ್ಯತ್ಯಯಾತ್ ॥**

ಅನುವಾದ – 'ವಿಚಿತ್ರಶಕ್ತಿಃ' ಎಂಬುದು ಪ್ರತ್ಯೇಕ ಶ್ರುತಿಯಾಗಿದೆ. 'ತಾದೃಶಾಃ' ಎಂಬುದಕ್ಕೆ 'ತಾದೃಶ್ಯಃ' ಎಂದು ವಿವಕ್ಷಿಸಬೇಕು. 'ಸರ್ವೈರ್ಯುಕ್ತಾ' ಎಂಬುದು ಬೇರೆ ಶ್ರುತಿಯಾಗಿದೆ. 'ಸರ್ವೈಃ' ಎಂಬುದಕ್ಕೆ ಎಲ್ಲಾ ಬಗೆಯ ಎಂದರ್ಥ. ಲಿಂಗವನ್ನು ವ್ಯತ್ಯಾಸ ಮಾಡಿ ಪ್ರಯೋಗಿಸಿದ್ದಾರೆ.

'ಪರೇತಿ ಯಾಂ ಪ್ರಾಹುರಜಸ್ರಶಕ್ತಿಮ್' ಎಂಬ ವಾಕ್ಯಶೇಷವನ್ನು ಇಲ್ಲಿ ವಿವಕ್ಷಿಸಬೇಕು.

ವಿವರಣೆ – ಶಕ್ತಿಶಬ್ದವು ಸ್ತ್ರೀಲಿಂಗವಾದ್ದರಿಂದ 'ತಾದೃಶ್ಯಃ' ಎಂದು ಪ್ರಯೋಗಿಸಬೇಕಿತ್ತು. 'ತಾದೃಶಾಃ' ಎಂಬ ಪುಲ್ಲಿಂಗ ಪ್ರಯೋಗ ಹೇಗೆ ಎಂದರೆ 'ತಾದೃಶ್ಯಃ' ಎಂದು ವ್ಯಾಖ್ಯಾನ ಮಾಡಿದ್ದಾರೆ. ಶ್ರುತಿಯಲ್ಲಿ ಲಿಂಗವ್ಯತ್ಯಾಸದಿಂದ ಹೀಗೆ ಪ್ರಯೋಗಿಸುವುದು ತಪ್ಪಲ್ಲ. ಇದರಂತೆ 'ಸರ್ವಾಭಿಃ' ಎಂದು ಹೇಳಬೇಕಿತ್ತು. 'ಸರ್ವೈಃ' ಎಂಬ ಪುಲ್ಲಿಂಗಪ್ರಯೋಗವು ಕೂಡ ಲಿಂಗವ್ಯತ್ಯಾಸದಿಂದ ಶ್ರುತಿಯಲ್ಲಿ ಯುಕ್ತವಾಗುತ್ತದೆ. 'ಸರ್ವೈರ್ಯುಕ್ತಾ ಶಕ್ತಿಭಿರ್ದೇವತಾ ಸಾ ಪರೇತಿ ಯಾಂ ಪ್ರಾಹುರಜಸ್ರಶಕ್ತಿಮ್' ಎಂಬುದು ಶ್ರುತಿಯ ಪೂರ್ಣಪಾಠ.

## ರಾಮಾನುಜಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿವಾಕ್ಯ

ನ್ಯಾಯದೀಪ – ಏತಾ 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಇತ್ಯಾದಿ ಸೂತ್ರಭಾಷ್ಯೋಕ್ತಾಃ ।

**ತಾವತಾ ನ ಸರ್ವವಸ್ತುಷು ಶಕ್ತಿಲಾಭ ಇತ್ಯತೋ ರಾಮಾನುಜಭಾಷ್ಯೋಕ್ತವಿಷ್ಣುಪುರಾಣಸ್ಮೃತಿಮಾಹ – ಶಕ್ತಯ ಇತಿ ॥**

ಅನುವಾದ – ಈ ಎಲ್ಲಾ ಶ್ರುತಿಗಳೂ 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಎಂಬ ಸೂತ್ರದ ಭಾಷ್ಯದಲ್ಲಿ ಉದಾಹರಿಸಲ್ಪಟ್ಟಿವೆ. ಇಷ್ಟು ಶ್ರುತಿಗಳಿಂದ ಸಕಲವಸ್ತುಗಳಲ್ಲಿ ಶಕ್ತಿಯು ಹೇಗೆ ಸಿದ್ಧವಾಗುತ್ತದೆ? ಎಂಬ ಪ್ರಶ್ನೆಗೆ ರಾಮಾನುಜಭಾಷ್ಯದಲ್ಲಿ ಉದಾಹರಿಸಿದ ವಿಷ್ಣುಪುರಾಣದ ಶ್ರುತಿಯನ್ನು ಶಕ್ತಯಃ ಎಂಬುದಾಗಿ ಉಲ್ಲೇಖಿಸಿದ್ದಾರೆ.

## ಸರ್ಗಾದ್ಯಾಃ ಭಾವಶಕ್ತಯಃ

**ನ್ಯಾಯದೀಪ – ಸರ್ಗಾದ್ಯಾಃ ಸೃಷ್ಟ್ಯಾದಿವಿಷಯಾ ಭಾವಶಕ್ತಯಃ ಭಾವರೂಪಶಕ್ತಯ ಇತಿ ವಾ ಸ್ವಭಾವಶಕ್ತಯ ಇತಿ ವಾಽರ್ಥಃ।**

ಅನುವಾದ –'ಶಕ್ತಯಃ' ಎಂಬ ಶ್ಲೋಕದಲ್ಲಿರುವ 'ಸರ್ಗಾದ್ಯಾಃ' ಎಂಬ ಪದಕ್ಕೆ ಸೃಷ್ಟ್ಯಾದಿ ವಿಷಯಕವಾದ ಎಂದರ್ಥ. ಭಾವಶಕ್ತಯಃ ಎಂಬುದಕ್ಕೆ ಭಾವರೂಪವಾದ ಶಕ್ತಿಗಳು ಅಥವಾ ಸ್ವಭಾವಶಕ್ತಿಗಳು ಎಂದರ್ಥ.

## ಶಕ್ತಿ ಶಬ್ದಕ್ಕೆ ಸ್ವರೂಪ ಎಂದರ್ಥವಲ್ಲ

**ತರ್ಕತಾಂಡವ– ನ ಚೇಯಂ ಸ್ವರೂಪಮಾತ್ರಪರಾ। ಅಸ್ಯೇತಿ ಷಷ್ಠ್ಯಾ, ವಿಚಿತ್ರಶಕ್ತಿರಿತಿ ಬಹುವ್ರೀಹಿಣಾ, ಶಕ್ತಿಭಿರ್ಯುಕ್ತೇತಿ ಯುಕ್ತಶಬ್ದೇನ ಸಂಬಂಧತ್ವೇನ, ವಿವಿಧೈವೇತಿ ವಿಚಿತ್ರೇತಿ ಚ ಬಹುವಿಧತ್ವೇನ, ಶಕ್ತಿಭಿಃ ಶಕ್ತಯ ಇತಿ ಬಹುತ್ವೇನ ಚೋಕ್ತೇಃ ॥**

ಅನುವಾದ – ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟ ಶಕ್ತಿಯು ಕೇವಲ ಸ್ವರೂಪಪರವೆಂದು ಹೇಳಬಹುದಲ್ಲವೇ? ಹೀಗೆ ಪ್ರಶ್ನಿಸಬಾರದು. ಏಕೆಂದರೆ ನಿರ್ವಿಶೇಷಾಭೇದವನ್ನು ಹೇಳಿದರೆ 'ಪರಾಸ್ಯ ಶಕ್ತಿಃ' ಎಂಬಲ್ಲಿ 'ಅಸ್ಯ' ಎಂಬ ಷಷ್ಠೀವಿಭಕ್ತಿಯು ಅಯುಕ್ತವಾಗುತ್ತದೆ. ಮತ್ತು 'ವಿಚಿತ್ರಶಕ್ತಿಃ' ಎಂಬಲ್ಲಿ 'ವಿಚಿತ್ರಾಃ ಶಕ್ತಯಃ ಯಸ್ಯ ಸಃ' ಎಂಬ ಬಹುವ್ರೀಹಿಸಮಾಸ

ಮಾಡಿದಾಗ ವಿಚಿತ್ರಶಕ್ತಿಯುಳ್ಳವನು ಎಂದು ತಿಳಿಯುತ್ತದೆ. ಮತ್ತು 'ಶಕ್ತಿಭಿರ್ಯುಕ್ತಾ' ಎಂಬಲ್ಲಿ 'ಯುಕ್ತಾ' ಎಂಬ ಶಬ್ದದಿಂದ ಸಂಬಂಧತ್ವವು ತಿಳಿಯುತ್ತದೆ. 'ವಿವಿಧೈವ' ಎಂಬಲ್ಲಿ 'ವಿಚಿತ್ರ' ಎಂಬಲ್ಲಿಯೂ ಬಹುವಿಧತ್ವವನ್ನು ಶಕ್ತಿಯಲ್ಲಿ ಹೇಳಿರುವುದರಿಂದ ಮತ್ತು ಶಕ್ತಯಃ ಎಂಬಲ್ಲಿ ಬಹುವಚನವನ್ನು ಹೇಳಿರುವುದರಿಂದ ಶಕ್ತಿಯು ಸ್ವರೂಪಮಾತ್ರಪರವೆಂದು ವಿವಕ್ಷಿಸಬಾರದು.

ವಿವರಣೆ – ಈ ಎಲ್ಲಾ ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟ ಶಕ್ತಿ ಶಬ್ದಕ್ಕೆ ಸ್ವರೂಪ ಎಂದಷ್ಟೇ ಅರ್ಥ ಹೊರತು ವ್ಯಕ್ತಿಗಿಂತ ಅತಿರಿಕ್ತವಾದ ಶಕ್ತಿ ಇದೆ ಎಂದು ಹೇಗೆ ಸಿದ್ಧವಾಗುತ್ತದೆ ?

ವ್ಯಕ್ತಿಗಿಂತಲೂ ಅತಿರಿಕ್ತವಾದ ಶಕ್ತಿಯನ್ನು ಒಪ್ಪಲೇಬೇಕು. ಏಕೆಂದರೆ, ಭೇದಜ್ಞಾಪಕವಾದ ಷಷ್ಠೀವಿಭಕ್ತಿ ಬಹುವ್ರೀಹಿಸಮಾಸ ಮೊದಲಾದವುಗಳಿಂದ ಸ್ವರೂಪವನ್ನೇ ಶಕ್ತಿ ಎಂದು ಹೇಳಲು ಸಾಧ್ಯವಿಲ್ಲ. ಸ್ವರೂಪಕ್ಕಿಂತ ಅತಿರಿಕ್ತವಾದ ಶಕ್ತಿ ಇದೆ ಎಂದು ಸಿದ್ಧವಾಗುತ್ತದೆ.

## ಶಕ್ತಿಶಬ್ದಕ್ಕೆ ಆಗಂತುಕಸಹಕಾರಿ ಎಂದರ್ಥವು ಅಲ್ಲ

**ತರ್ಕತಾಂಡವ – ನಾಪ್ಯಗಂತುಕಸಹಕಾರಿಪರಾ ।**

**'ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ।'**

**ಇತಿ ವಾಕ್ಯಶೇಷೇ ಸಹಕಾರಿನಿಷೇಧಾತ್ ಸ್ವಾಭಾವಿಕತ್ವಾಜಸ್ರತ್ವಯೋರುಕ್ತೇಶ್ಚ ।**

ಶಕ್ತಿಶಬ್ದಕ್ಕೆ ಆಗಂತುಕಸಹಕಾರಿಗಳು ಎಂಬರ್ಥವನ್ನು ಮಾಡಬಾರದು. ಏಕೆಂದರೆ 'ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ' ಎಂಬ ವಾಕ್ಯಶೇಷದಲ್ಲಿ ಬ್ರಹ್ಮನಿಗೆ ಯಾವುದೇ ಸಹಕಾರಿಗಳಿರುವುದಿಲ್ಲವೆಂದು ನಿಷೇಧಮಾಡಲಾಗಿದೆ. ಮತ್ತು ಪರಮಾತ್ಮನಲ್ಲಿರುವ ಶಕ್ತಿಯು ಸ್ವಾಭಾವಿಕವಾಗಿದೆ ಮತ್ತು ಅನಾದಿನಿತ್ಯವಾಗಿದೆಯೆಂದು ಕೂಡ ಶ್ರುತಿಯು ಹೇಳುತ್ತಿದೆ.

ವಿವರಣೆ – ಸ್ವರೂಪವನ್ನೇ ಶಕ್ತಿ ಎಂದು ಹೇಳಲು ಸಾಧ್ಯವಿಲ್ಲದಿದ್ದರೂ ಆಗಂತುಕಸಹಕಾರಿ ಎಂದು ಹೇಳಬಹುದಲ್ಲವೇ? ಪರಮಾತ್ಮನು ಸೃಷ್ಟ್ಯಾದಿಗಳನ್ನು ಮಾಡಲು ಯಾವ ಸಹಕಾರಿಗಳನ್ನು ಉಪಯೋಗಿಸಿಕೊಳ್ಳುತ್ತಾನೋ ಅವುಗಳನ್ನೇ ಶಕ್ತಿ ಎಂದು ಕರೆದರೆ ಏನು ತಪ್ಪು?

ಹೀಗೆ ಪ್ರಶ್ನಿಸಬಾರದು. ಏಕೆಂದರೆ, ಸೃಷ್ಟ್ಯಾದಿವ್ಯಾಪಾರಗಳನ್ನು ಮಾಡುವಾಗ ಪರಮಾತ್ಮನು ಕಾರ್ಯ, ಕಾರಣ ಯಾವುದನ್ನೂ ಕೂಡ ಅಪೇಕ್ಷಿಸಲಾರ ಎಂದು 'ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ' ಎಂಬ ವಾಕ್ಯಶೇಷವು ಹೇಳುತ್ತಿದೆ. ಆದ್ದರಿಂದ ಸಹಕಾರಿಪರವಾಗಿ ಅರ್ಥೈಸಲಾಗದು. ಮತ್ತು ಅದೇ ಶ್ರುತಿಯಲ್ಲಿ ಶಕ್ತಿಯು ಸ್ವಾಭಾವಿಕವೆಂದೂ, ಅನಾದಿನಿತ್ಯವೆಂದೂ ಹೇಳಿದೆ. ಇದೂ ಕೂಡ ಆಗಂತುಕ ಎಂಬ ಸಹಕಾರಿಯಲ್ಲಿ ಯುಕ್ತವಾಗುವುದಿಲ್ಲ.

ನ್ಯಾಯದೀಪ – ಶ್ರುತ್ಯಾದೇರನ್ಯಥೋಪಪತ್ತಿಂ ನಿರಾಹ - ನ ಚೇಯಮಿತ್ಯಾದಿನಾ ॥

ಅನುವಾದ – ಶ್ರುತ್ಯಾದಿಗಳಿಗೆ ಅನ್ಯಥಾವ್ಯಾಖ್ಯಾನವನ್ನು 'ನ ಚೇಯಮ್' ಇತ್ಯಾದಿಯಾಗಿ ನಿರಾಕರಣೆ ಮಾಡುತ್ತಿದ್ದಾರೆ.

ನ್ಯಾಯದೀಪ – ವಾಕ್ಯಶೇಷ ಇತಿ ॥ ಪರಾಸ್ಯ ಶಕ್ತಿರಿತ್ಯಸ್ಯ ಪೂರ್ವವಾಕ್ಯೇ 'ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ' ಇತ್ಯುಕ್ತೇರಿತ್ಯರ್ಥಃ ।

ಅನುವಾದ – 'ವಾಕ್ಯಶೇಷ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - 'ಪರಾಸ್ಯ ಶಕ್ತಿಃ' ಎಂಬ ವಾಕ್ಯದ ಹಿಂದೆ 'ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ' ಎಂದು ಹೇಳಿರುವುದರಿಂದ ಎಂದರ್ಥ.

## ಪ್ರತಿಬಂಧಕಾಭಾವ ಎಂದು ಕೂಡ ಅರ್ಥವಲ್ಲ

ತರ್ಕತಾಂಡವ – ನಾಪಿ ಪ್ರತಿಬಂಧಕಾಭಾವಪರಾ । ಭಾವತ್ವೋಕ್ತೇಃ । 'ಅಚಿಂತ್ಯಜ್ಞಾನಗೋಚರಾಃ' ಇತಿ ಬೀಜಾದಿನಿಷ್ಠಶಕ್ತೇರಪ್ಯತೀಂದ್ರಿಯತ್ವೋಕ್ತೇಶ್ಚ ॥

ಶಕ್ತಿಶಬ್ದಕ್ಕೆ ಪ್ರತಿಬಂಧಕಾಭಾವ ಎಂಬರ್ಥವನ್ನು ಕೂಡ ಹೇಳಬಾರದು. ಏಕೆಂದರೆ ಶಕ್ತಿಯನ್ನು ಭಾವಸ್ವರೂಪವೆಂದು ಅದೇ ಶ್ರುತಿ ಹೇಳುತ್ತಿದೆ. ಮತ್ತು 'ಅಚಿಂತ್ಯಜ್ಞಾನಗೋಚರಾಃ' ಎಂಬುದಾಗಿ ಬೀಜಾದಿನಿಷ್ಠವಾದ ಶಕ್ತಿಯನ್ನು ಕೂಡ ಅತೀಂದ್ರಿಯವೆಂದು ಹೇಳಲಾಗಿದೆ.

ವಿವರಣೆ – ಪ್ರತಿಬಂಧಕಾಭಾವವನ್ನು ಶಕ್ತಿ ಎಂದರೆ, 'ಭಾವಶಕ್ತಯಃ' ಎಂಬ ಮಾತಿನಿಂದ ವಿರೋಧ ಬರುತ್ತದೆ. ಮತ್ತು ಪ್ರತಿಬಂಧಕಾಭಾವವು ಪ್ರತ್ಯಕ್ಷಸಿದ್ಧವೆಂದು ನಾವು ಹೇಳುತ್ತೇವೆ. ಆದರೆ ಶ್ರುತಿಯು ಬೀಜಾದಿಗಳಲ್ಲಿರುವ ಶಕ್ತಿಯು ಅತೀಂದ್ರಿಯವಾಗಿದೆ ಎಂದು ಹೇಳುತ್ತಿದೆ.

## ಶಕ್ತಿಯಲ್ಲಿ ತಾರತಮ್ಯವಿರುವುದರಿಂದ ಪ್ರತಿಬಂಧಕಾಭಾವವಲ್ಲ

**ತರ್ಕತಾಂಡವ – ಅನ್ಯೋನ್ಯಾನಂತರಬಲಾಃ ಕ್ರಮಾದೇವ ಪ್ರಕೀರ್ತಿತಾಃ ॥**
**ಇತ್ಯಾದಿಸ್ಮೃತ್ಯಾ ಇದಮಿಹ ಶಕ್ತಂ, ಇದಂ ಶಕ್ತತರಂ, ಇದಂ ತು ಶಕ್ತತಮಮಿತಿ ಲೋಕವ್ಯವಹಾರೇಣ ಗುರುತ್ವಾದಾವಿವ ಶಕ್ತೌ ತಾರತಮ್ಯಪ್ರತೀತೇಶ್ಚ ॥**

**॥ ಇತಿ ಶಕ್ತೌ ಶ್ರುತ್ಯಾದಿನಿರೂಪಣಮ್ ॥**

ಅನುವಾದ – 'ಅನ್ಯೋನ್ಯಾನಂತರಬಲಾಃ ಕ್ರಮಾದೇವ ಪ್ರಕೀರ್ತಿತಾಃ' ಪರಸ್ಪರವಾಗಿ ಹೆಚ್ಚಿನ ಶಕ್ತಿ ಉಳ್ಳವುಗಳೆಂದು ಕರೆಸಿಕೊಳ್ಳುತ್ತವೆ. ಇವೇ ಮೊದಲಾದ ಸ್ಮೃತಿಯಿಂದ ಇದು ಶಕ್ತವಾಗಿದೆ, ಇದು ಮತ್ತಷ್ಟು ಶಕ್ತವಾಗಿದೆ ಇದು ಇನ್ನಷ್ಟು ಹೆಚ್ಚು ಶಕ್ತಿಯುಳ್ಳದ್ದಾಗಿದೆ ಎಂಬುದಾಗಿ ಲೋಕವ್ಯವಹಾರ ಇರುವುದರಿಂದ ಗುರುತ್ವದಲ್ಲಿ ತಾರತಮ್ಯವಿರುವಂತೆ ಶಕ್ತಿಯಲ್ಲಿಯೂ ಕೂಡ ತಾರತಮ್ಯವಿದೆ ಎಂದು ತಿಳಿಯುತ್ತದೆ.

ಇಲ್ಲಿಗೆ ಶಕ್ತಿವಿಷಯದಲ್ಲಿ ಶ್ರುತ್ಯಾದಿ ನಿರೂಪಣೆಯು ಮುಗಿಯಿತು.

## ಶಕ್ತಿಯಲ್ಲೂ ತಾರತಮ್ಯ

ನ್ಯಾಯದೀಪ – ಇತ್ಯಾದಿಸ್ಮೃತ್ಯೇತಿ ॥

'ಭೀಮಶ್ಚ ಬಲಭದ್ರಶ್ಚ ಮದ್ರರಾಜಶ್ಚ ವೀರ್ಯವಾನ್ ।
ಚತುರ್ಥಃ ಕೀಚಕಸ್ತಸ್ಮಾತ್ ಪಂಚಮಂ ನಾನುಶುಶ್ರುಮಃ' ಇತಿ ॥

ಅನ್ಯೋನ್ಯಾನಂತರೇತಿ॥ ವಿರಾಟಪರ್ವಗತಸ್ಮೃತ್ಯೇತ್ಯರ್ಥಃ। ತಾರತಮ್ಯಪ್ರತೀತೇಶ್ಚೇಯಂ ನಾಭಾವಪರೇತ್ಯನ್ವಯಃ। ಅಭಾವೇ ತಾರತಮ್ಯಾಭಾವಾದಿತಿ ಭಾವಃ ॥

॥ ಇತಿ ಶಕ್ತೌ ಶ್ರುತ್ಯಾದಿನಿರೂಪಣಮ್ ॥

ಅನುವಾದ – 'ಇತ್ಯಾದಿಸ್ಮೃತ್ಯಾ' ಎಂಬಲ್ಲಿ ಸ್ಮೃತಿವಾಕ್ಯವನ್ನು ಪೂರ್ಣವಾಗಿ ಹೀಗೆ ತಿಳಿಯಬೇಕು -

'ಭೀಮಶ್ಚ ಬಲಭದ್ರಶ್ಚ ಮದ್ರರಾಜಶ್ಚ ವೀರ್ಯವಾನ್ ।
ಚತುರ್ಥಃ ಕೀಚಕಃ ತಸ್ಮಾತ್ ಪಂಚಮಂ ನಾನುಶುಶ್ರುಮಃ ।
ಅನ್ಯೋನ್ಯಾನಂತರಬಲಾಃ ಕ್ರಮಾದೇವ ಪ್ರಕೀರ್ತಿತಾಃ ॥'

ಭೀಮ, ಬಲಭದ್ರ, ಮದ್ರರಾಜ, ಕೀಚಕ ಇವರಲ್ಲಿ ಕ್ರಮವಾಗಿ ಹೆಚ್ಚು ಹೆಚ್ಚು ಬಲವು ಇರುತ್ತದೆ. 'ಅನ್ಯೋನ್ಯಾನಂತರಬಲಾಃ' ಎಂಬುದು ವಿರಾಟಪರ್ವದಲ್ಲಿರುವ ಸ್ಮೃತಿವಾಕ್ಯ ಎಂದರ್ಥ. (ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದ ಎರಡನೆಯ ಅಧ್ಯಾಯದಲ್ಲಿ ಈ ಶ್ಲೋಕವನ್ನು ಉಲ್ಲೇಖಿಸಿದ್ದು ಗಮನಾರ್ಹ)

ತಾರತಮ್ಯವು ಹೀಗೆ ಪ್ರತೀತವಾಗುತ್ತಿರುವುದರಿಂದಲೂ ಶಕ್ತಿಯು ಪ್ರತಿಬಂಧಕಾಭಾವವೆಂದು ತಿಳಿಯಬಾರದು. ಏಕೆಂದರೆ ಅಭಾವದಲ್ಲಿ ಸರ್ವಥಾ ತಾರತಮ್ಯವು ಕೂಡುವುದಿಲ್ಲ. ಇಲ್ಲಿಗೆ ಶಕ್ತಿವಿಷಯದಲ್ಲಿ ಶ್ರುತ್ಯಾದಿಪ್ರಮಾಣನಿರೂಪಣೆಯು ಮುಗಿಯಿತು.

## ಕಾರಣತ್ವವು ನಿಯತಪೂರ್ವವೃತ್ತಿತ್ವರೂಪವಲ್ಲ

**ತರ್ಕತಾಂಡವ – ಕಿಂಚ ದಂಡಾದೇರನ್ವಯವ್ಯತಿರೇಕಾಭ್ಯಾಂ ಘಟಾದಿಕಾರಣತ್ವಂ ತಾವದನುಮೀಯತೇ । ತತ್ರ ನ ತಾವತ್ ಪೂರ್ವವೃತ್ತಿತ್ವಮಾತ್ರಂ ಲಿಂಗಮ್ । ರಾಸಭಾದಾವಪಿ ಸತ್ತ್ವಾತ್ ॥**

ಅನುವಾದ – ಘಟವನ್ನು ಕುರಿತು ದಂಡವು ಕಾರಣವೆಂಬುದು ಅನ್ವಯವ್ಯತಿರೇಕದಿಂದ ಸಿದ್ಧವಾಗಿದೆ. ಘಟಾದಿಕಾರಣತ್ವವು ದಂಡಾದಿಗಳಲ್ಲಿ ಇದೆ ಎಂದು ಅನುಮಾನ ಮೂಲಕ ಸಾಧಿಸಲಾಗುತ್ತದೆ. ಈ ಸಂದರ್ಭದಲ್ಲಿ ಪೂರ್ವವೃತ್ತಿತ್ವವನ್ನು ಲಿಂಗವೆಂದು ಪರಿಗಣಿಸಲು ಸಾಧ್ಯವಿಲ್ಲ. ರಾಸಭಾದಿಗಳಲ್ಲಿ ವ್ಯಭಿಚಾರದೋಷವು ಪ್ರಾಪ್ತವಾಗುತ್ತದೆ.

ವಿವರಣೆ – ದಂಡಾದಿಗಳಲ್ಲಿರುವ ಘಟಾದಿಕಾರಣತ್ವವೆಂದರೇನು? ಪೂರ್ವವೃತ್ತಿತ್ವವೋ, ನಿಯತಪೂರ್ವವೃತ್ತಿತ್ವವೋ ಅಥವಾ ಅನನ್ಯಥಾಸಿದ್ಧವಾದ ನಿಯತಪೂರ್ವವೃತ್ತಿತ್ವವೋ? ಪೂರ್ವವೃತ್ತಿತ್ವವೆಂದು ವಿವಕ್ಷಿಸಿದರೆ ವ್ಯಭಿಚಾರದೋಷ ಬರುತ್ತದೆ. ಘಟಾದಿಕಾರಣತ್ವವನ್ನು ದಂಡಾದಿಗಳಲ್ಲಿ ಅನುಮಾನದ ಮೂಲಕ ಹೀಗೆ ಸಮರ್ಥನೆ ಮಾಡಬೇಕು. 'ದಂಡಾದೇಃ ಘಟಾದಿಕಾರಣಂ ಭವಿತುಮರ್ಹತಿ ನಿಯತಪೂರ್ವವೃತ್ತಿತ್ವಾತ್' ಈ ಅನುಮಾನಕ್ಕೆ ರಾಸಭದಲ್ಲಿ ವ್ಯಭಿಚಾರದೋಷವು ಬರುತ್ತದೆ.

## ನ್ಯಾಯಸುಧೆಯಲ್ಲಿ ಹೇಳಿದ ಅರ್ಥಾಪತ್ತಿ

**ನ್ಯಾಯದೀಪ – ಶ್ರುತ್ಯಾದ್ಯನುಗ್ರಾಹಕಾರ್ಥಾಪತ್ತಿರಪಿ ಶಕ್ತೌ ಮಾನತ್ವೇನ ವಿವಕ್ಷುರಾದೌ ಕಾರಣತ್ವಸ್ಯಾನ್ವಯವ್ಯತಿರೇಕಗಮ್ಯತ್ವಾನ್ಯಥಾನುಪಪತ್ತಿರೂಪಾರ್ಥಾಪತ್ತಿಂ ಸುಧೋಕ್ತಾಂ ತಾವದ್ ವ್ಯನಕ್ತಿ – ಕಿಂಚ ದಂಡಾದೇರಿತಿ ॥**

ಅನುವಾದ – ಈ ಹಿಂದೆ ಶಕ್ತಿಯ ವಿಷಯದಲ್ಲಿ ಶ್ರುತಿಸ್ಮೃತಿಗಳನ್ನು ಆಧಾರವನ್ನಾಗಿ ಹೇಳಲಾಯಿತು. ಅದೇ ಶಕ್ತಿಯ ವಿಷಯದಲ್ಲಿ ಈಗ ಅನೇಕ ರೀತಿಯ ಅರ್ಥಾಪತ್ತಿಗಳನ್ನು ಪ್ರಮಾಣವನ್ನಾಗಿ ಹೇಳುತ್ತಾರೆ. ಶ್ರುತಿ ಸ್ಮೃತಿಗಳು ಮುಖ್ಯಪ್ರಮಾಣಗಳಾಗಿದ್ದರೂ ಕೂಡ ಈ ಅರ್ಥಾಪತ್ತಿಗಳು ಶ್ರುತ್ಯಾದಿಗಳಿಗೆ

ಅನುಗ್ರಾಹಕವಾಗಿವೆ. ಆದ್ದರಿಂದ ಇವುಗಳೂ ಕೂಡ ಪ್ರಮಾಣವಾಗಿವೆ ಎಂಬುದನ್ನು ವಿವಕ್ಷಿಸಿ ಮೊದಲು ಕಾರಣತ್ವಕ್ಕೆ ಅನ್ವಯವ್ಯತಿರೇಕಗಮ್ಯತ್ವಾನ್ಯಥಾನುಪಪತ್ತಿರೂಪವಾದ ಅರ್ಥಾಪತ್ತಿಯನ್ನು ಹೇಳುತ್ತಿದ್ದಾರೆ. ಇದನ್ನು ನ್ಯಾಯಸುಧೆಯಲ್ಲಿ ಟೀಕಾಕೃತ್ಪಾದರು ತೋರಿಸಿದ್ದಾರೆ. ಅದನ್ನೇ ಇಲ್ಲಿ ಗ್ರಂಥಕಾರರು ಸ್ಪಷ್ಟಪಡಿಸಿದ್ದಾರೆ 'ಕಿಂಚ ದಂಡಾದೇಃ' ಇತ್ಯಾದಿಯಾಗಿ.

## ಅತೀಂದ್ರಿಯಶಕ್ತಿಗಾಗಿ ಅನುಮಾನ

ನ್ಯಾಯದೀಪ – ಅನುಮೀಯತ ಇತಿ ॥ ತಸ್ಯ ಪ್ರತ್ಯಕ್ಷತ್ವೇ ಘಟಾದಿಪ್ರತ್ಯಕ್ಷಸ್ಯೇವ ಅನ್ವಯಾದ್ಯಪೇಕ್ಷಾ ನ ಸ್ಯಾತ್ । 'ಕಾರಣತ್ವಮೇವ ಶಕ್ತಿಪದಾರ್ಥಃ' ಇತಿ ಕಾರಣತಾವಾದೇ ಮಣಿಕೃದುಕ್ತಾತೀಽಂದ್ರಿಯ-ತ್ವಾವಗತಶ್ಚೇತಿ ಭಾವಃ।

ಅನುವಾದ – ಕಾರಣತ್ವವು ಪ್ರತ್ಯಕ್ಷವಲ್ಲ. ಪ್ರತ್ಯಕ್ಷವಾಗಿದ್ದಲ್ಲಿ ಘಟಾದಿ ಪ್ರತ್ಯಕ್ಷದಂತೆ ಸಿದ್ಧವಾಗುತ್ತಿತ್ತು. ಅನ್ವಯ ವ್ಯತಿರೇಕದ ಅಪೇಕ್ಷೆ ಬರುತ್ತಿರಲಿಲ್ಲ. ಆದ್ದರಿಂದ ಅನುಮೀಯತೇ ಎಂದು ಹೇಳಿದ್ದಾರೆ. ಮತ್ತು ಮಣಿಕಾರನು ಕಾರಣತಾವಾದದಲ್ಲಿ ಕಾರಣತ್ವವನ್ನೇ ಶಕ್ತಿ ಎಂದು ಹೇಳಿದ್ದಾನೆ. ಪ್ರತ್ಯಕ್ಷಸಿದ್ಧವಾಗಿದ್ದಲ್ಲಿ ಕಾರಣತ್ವವೆಂದು ಏಕೆ ಹೇಳುತ್ತಿದ್ದ? ಇದರಿಂದಲೂ ಕೂಡ ಕಾರಣತ್ವವೆಂಬ ಶಕ್ತಿಯು ಅತೀಂದ್ರಿಯವೆಂದು ಸಿದ್ಧವಾಗುತ್ತದೆ. ಅತೀಂದ್ರಿಯವಾದ್ದನ್ನು ಸಮರ್ಥಿಸಲು ಅನುಮಾನ ಮಾಡಲೇಬೇಕು.

## ಕಾರಣತ್ವಕ್ಕೆ ಯಾವುದು ಅನುಮಾಪಕ ?

ನ್ಯಾಯದೀಪ – ಅನ್ವಯವ್ಯತಿರೇಕೋ ನಾಮ ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವರೂಪೋ ಯಸ್ಮಿನ್ ಸತಿ ಯನ್ನಿಯತಂ ಯದಭಾವೇ ಚ ಯದಭಾವೋ ನಿಯತ ಇತ್ಯೇವಂರೂಪತ್ವಾದನ್ವಯವ್ಯತಿರೇಕಯೋಃ । ಏವಂ ಚ ತತ್ರ ಕಾರಣತ್ವಾನುಮಾಪಕಂ ಕಿಂ ವಿಶೇಷ್ಯಮಾತ್ರಂ? ನಿಯಮವಿಶೇಷಿತಂ ವಿಶೇಷ್ಯಂ ವಾ? ಕೃತ್ಸ್ನಂ ವಿಶಿಷ್ಟಂ ವಾ ?

**ಆದ್ಯಯೋಃ ಸಾಧ್ಯಾವಿಶಿಷ್ಟತ್ವದೋಷಾಭಾವೇಪಿ ವ್ಯಭಿಚಾರಾನ್ನ ಲಿಂಗತ್ವಮಿತ್ಯಾಹ – ತತ್ರ ನ ತಾವದಿತಿ॥**

ಅನುವಾದ – ಅನ್ವಯವ್ಯತಿರೇಕದಿಂದ ಕಾರಣತ್ವವು ಅನುಮೇಯ ಎಂದು ಹೇಳಲಾಗುತ್ತಿದೆ. ಅನ್ವಯವ್ಯತಿರೇಕ ಎಂದರೆ ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವ ಎಂದರ್ಥ. 'ಯಸ್ಮಿನ್ ಸತಿ ಯನ್ನಿಯತಂ ಯದಭಾವೇ ಚ ಯದಭಾವಃ' ಎಂಬುದನ್ನು ನಿಯತವಾಗಿ ಹೇಳುವುದೇ 'ಅನ್ವಯವ್ಯತಿರೇಕ' ಎಂದು ಕರೆಸಿಕೊಳ್ಳುತ್ತದೆ. ಆದ್ದರಿಂದ ಇಲ್ಲಿ ಕಾರಣತ್ವಕ್ಕೆ ಅನುಮಾಪಕವಾದದ್ದು ಕೇವಲ ನಿಯಮವಿಶೇಷಿತವಾದ ಪೂರ್ವವೃತ್ತಿತ್ವವೋ ? ಅಥವಾ ಅನನ್ಯಥಾಸಿದ್ಧನಿಯತತ್ವದಿಂದ ವಿಶಿಷ್ಟವಾದ ಕೃತ್ಸ್ನವಾದ ಪೂರ್ವವೃತ್ತಿತ್ವವೋ? ಮೊದಲೆರಡು ಪಕ್ಷದಲ್ಲಿ ಸಾಧ್ಯಾವಿಶಿಷ್ಟತ್ವ ಎಂಬ ದೋಷವು ಇಲ್ಲದಿದ್ದರೂ ವ್ಯಭಿಚಾರ ದೋಷವು ಬರುತ್ತದೆ. ಆದ್ದರಿಂದ ಅದು ಲಿಂಗವಾಗುವುದಿಲ್ಲ ಎಂಬುದನ್ನು ''ತತ್ರ ನ ತಾವತ್'' ಎಂಬುದಾಗಿ ಹೇಳುತ್ತಿದ್ದಾರೆ.

## ನಿಯತಪೂರ್ವವೃತ್ತಿತ್ವವು ಕಾರಣತ್ವವಲ್ಲ

**ತರ್ಕತಾಂಡವ – ನಾಪಿ ನಿಯಮವಿಶೇಷಿತಮ್ । ಅನ್ಯಥಾಸಿದ್ಧೇಪಿ ಸತ್ವಾತ್ ।**

ಅನುವಾದ - ನಿಯತಪೂರ್ವವೃತ್ತಿತ್ವವನ್ನು ಕಾರಣತ್ವವೆಂದು ಹೇಳಲು ಸಾಧ್ಯವಿಲ್ಲ. ಅನ್ಯಥಾಸಿದ್ಧದಲ್ಲಿಯೂ ಈ ಲಿಂಗವು ಬರುತ್ತದೆ.

ವಿವರಣೆ – ಕೇವಲ ಪೂರ್ವವೃತ್ತಿತ್ವವನ್ನು ಲಿಂಗವೆಂದು ಹೇಳಿದರೆ ರಾಸಭದಲ್ಲಿ ವ್ಯಭಿಚಾರ ಬರಬಹುದು. ನಿಯತಪೂರ್ವವೃತ್ತಿತ್ವವನ್ನು ಕಾರಣತ್ವವೆಂದು ಹೇಳುತ್ತೇವೆ. ಇದು ರಾಸಭದಲ್ಲಿ ಇಲ್ಲದ ಕಾರಣ ವ್ಯಭಿಚಾರ ಪರಿಹಾರವಾಯಿತಲ್ಲವೇ?

ಹೌದು. ಆದರೆ ಕುಲಾಲಪಿತೃವಿನಲ್ಲಿ ವ್ಯಭಿಚಾರವು ಬರುತ್ತದೆ. ಕುಲಾಲಪಿತೃ ಘಟದ ಮೊದಲು ನಿಯಮೇನ ಪೂರ್ವವೃತ್ತಿಯಾಗಿರಲೇಬೇಕು. ಆದರೆ ಕುಲಾಲಪಿತೃ ಇಲ್ಲದಿದ್ದರೂ ಕೂಡ ಘಟವು ಹುಟ್ಟುವುದರಿಂದ ಕುಲಾಲಪಿತೃ ಘಟಕ್ಕೆ ಕಾರಣನಲ್ಲ. ಆದ್ದರಿಂದ ನಿಯತಪೂರ್ವವೃತ್ತಿತ್ವವೆಂಬ ಲಿಂಗವು ಅನ್ಯಥಾಸಿದ್ಧವಾದ ಕುಲಾಲಪಿತೃವಿನಲ್ಲಿ ಬರುತ್ತದೆಂದು ವ್ಯಭಿಚಾರ ಪ್ರಾಪ್ತವಾಗುತ್ತದೆ.

## ಅನ್ಯಥಾಸಿದ್ಧವಾದದ್ದು ಯಾವುದು ?

**ನ್ಯಾಯದೀಪ – ಅನ್ಯಥಾಸಿದ್ಧೇಪೀತಿ ॥ ಘಟಾಕಾರಣೇ ತದ್ಗತರೂಪಕಾರಣೇ ಮೃತ್ಪಿಂಡರೂಪ ಇತ್ಯರ್ಥಃ। ಕಾರಣತಾತ್ವೇನೇತಿ ॥**

ಅನುವಾದ– 'ಅನ್ಯಥಾಸಿದ್ಧೇಪಿ' ಎಂದರೆ ಘಟಕ್ಕೆ ಕಾರಣವಲ್ಲದ ಘಟದ ರೂಪಕ್ಕೆ ಕಾರಣವಾದ ಮೃತ್ಪಿಂಡರೂಪವು ಅನ್ಯಥಾಸಿದ್ಧವಾಗಿದೆ. ಇದರಲ್ಲಿಯೂ ಕೂಡ ನಿಯತಪೂರ್ವವೃತ್ತಿತ್ವವೆಂಬ ಕಾರಣತ್ವವು ಇರುತ್ತದೆಂದರ್ಥ.

## ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವರೂಪವಾದ ಲಿಂಗವೇ ಕಾರಣತ್ವ

**ತರ್ಕತಾಂಡವ – ತಸ್ಮಾತ್ ಪ್ರತ್ಯಕ್ಷಸಿದ್ಧಂ ಕಾರಣತಾತ್ವೇನ ತ್ವದಭಿಮತಮ್ ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವಮೇವ ಲಿಂಗಂ ವಾಚ್ಯಮ್ ।**

**ನಚ ತದೇವ ತೇನ ಅನುಮೇಯಮಿತಿ ತದನುಮೇಯಾತೀಂದ್ರಿಯಶಕ್ತಿಸಿದ್ಧಿಃ।**

ಅನುವಾದ – ಆದ್ದರಿಂದ ಪ್ರತ್ಯಕ್ಷಸಿದ್ಧವಾದ ಕಾರಣತಾ ಎಂದು ನಿನಗೆ ಅಭಿಮತವಾದ ಅನನ್ಯಥಾಸಿದ್ಧ ನಿಯತಪೂರ್ವವೃತ್ತಿತ್ವವನ್ನೇ ಲಿಂಗವೆಂದು ನೀನು ಹೇಳಬೇಕು. ಈ ಕಾರಣತಾತ್ವ ಎಂಬ ಲಿಂಗವೇ ಕಾರಣತಾತ್ವದಿಂದ ಅನುಮೇಯವಾಗಲು ಸಾಧ್ಯವಿಲ್ಲ. ಆದ್ದರಿಂದ ತದನುಮೇಯವಾದ ಅತೀಂದ್ರಿಯವಾದ ಶಕ್ತಿ ಎಂಬ ಪದಾರ್ಥವು ಸಿದ್ಧವಾಗುತ್ತದೆ.

**ನ್ಯಾಯದೀಪ – ಕಾರಣತಾತ್ವರೂಪತ್ವೇನೇತ್ಯರ್ಥಃ ॥**

ಅನುವಾದ–'ಕಾರಣತಾತ್ವೇನ' ಎಂದರೆ ಕಾರಣತಾತ್ವರೂಪವೆಂದು ನಿನಗೆ ಅನನ್ಯಥಾಸಿದ್ಧನಿಯತ-ಪೂರ್ವವೃತ್ತಿತ್ವರೂಪವು ಸಿದ್ಧವಾಗಿದೆ ಎಂದರ್ಥ

ವಿವರಣೆ – ಆದ್ದರಿಂದ ಕಾರಣತ್ವವೆಂದರೆ ಪೂರ್ವವೃತ್ತಿತ್ವವೆಂದಾಗಲೀ, ನಿಯತಪೂರ್ವ-ವೃತ್ತಿತ್ವವೆಂದಾಗಲೀ ಹೇಳಲು ಸಾಧ್ಯವಿಲ್ಲ. ಅನನ್ಯಥಾಸಿದ್ಧನಿಯತಪೂರ್ವ-

ವೃತ್ತಿತ್ವವನ್ನೇ ಕಾರಣವೆಂದು ಹೇಳಬೇಕು. ಇದು ಪ್ರತ್ಯಕ್ಷದಿಂದಲೇ ಸಿದ್ಧವಾಗಿದೆ. ಅದನ್ನೇ ನೀನು ಕಾರಣತಾ ಎಂದು ವ್ಯವಹರಿಸಿರುವಿ. ಇದೇ ಲಿಂಗವಾಗಿರುವಾಗ ಇದನ್ನು ಇನ್ನೊಂದರಿಂದ ಅನುಮಾನ ಮಾಡುವುದು ಯುಕ್ತವಲ್ಲ. 'ಪರ್ವತೋ ವಹ್ನಿಮಾನ್ ಧೂಮಾತ್' ಎಂಬಲ್ಲಿ ಪ್ರತ್ಯಕ್ಷಸಿದ್ಧವಾದ ಧೂಮವು ಲಿಂಗವಾಗಿದೆ. ಆ ಧೂಮವನ್ನು ತಿಳಿಯಲು ಮತ್ತೊಂದು ಲಿಂಗವನ್ನು ಅಪೇಕ್ಷಿಸಬೇಕಾಗಿಲ್ಲ. ಅದರಂತೆ ಇಲ್ಲಿಯೂ ಕೂಡ ಕಾರಣತಾತ್ವವೇ ಲಿಂಗವಾಗಿದೆ. ಅದನ್ನು ಇನ್ನೊಂದರಿಂದ ಅನುಮಾನ ಮಾಡಬೇಕಾಗಿಲ್ಲ ಹೊರತಾಗಿ ಇಂತಹ ಕಾರಣತ್ವದಿಂದ ಅನುಮೇಯವಾದದ್ದು ಅತೀಂದ್ರಿಯವಾದ ಶಕ್ತಿಯಿಂದೇ ಹೇಳಬೇಕು. ಅನುಮೇಯವಾದದ್ದು ಮತ್ತು ಕಾರಣವಾದದ್ದು ಒಂದೇ ಆದರೆ ಸಾಧ್ಯಾವಿಶಿಷ್ಟತಾ ಎಂಬ ದೋಷ ಬರುತ್ತದೆ.

## ಸ್ವರೂಪಯೋಗ್ಯತ್ವವು ಕಾರಣತ್ವವಲ್ಲ

**ತರ್ಕತಾಂಡವ–ನಚತತ್ರಸ್ವರೂಪಯೋಗ್ಯತಾರೂಪಂದಂಡತ್ವಮನುಮೇಯಮ್। ತಸ್ಯ ಪ್ರತ್ಯಕ್ಷತ್ವಾತ್ ।**

ಅನುವಾದ – ಸ್ವರೂಪಯೋಗ್ಯತ್ವರೂಪವಾದ ದಂಡತ್ವವನ್ನು ಅನುಮಾನ ಮಾಡಬಹುದಲ್ಲವೇ ಎಂದರೆ ಇದೂ ಕೂಡ ಪ್ರತ್ಯಕ್ಷಸಿದ್ಧವಾಗಿದೆ.

ವಿವರಣೆ – ದಂಡದಲ್ಲಿರುವ ದಂಡತ್ವವನ್ನೇ ತಾರ್ಕಿಕರು ಸ್ವರೂಪಯೋಗ್ಯತಾ ಎನ್ನುತ್ತಾರೆ. ನಮ್ಮ ಮತದಲ್ಲಿ ಸ್ವರೂಪಯೋಗ್ಯತೆಯನ್ನು ಪ್ರತ್ಯೇಕ ಶಕ್ತಿಯೆನ್ನುತ್ತೇವೆ. ಘಟವನ್ನು ಹುಟ್ಟಿಸುವ ಶಕ್ತಿ ದಂಡದಲ್ಲಿದೆ ಎಂದರೂ ಒಂದೇ; ಘಟ ಹುಟ್ಟಿಸುವಲ್ಲಿ ದಂಡವು ಶಕ್ತವಾಗಿದೆ ಎಂದರೂ ಒಂದೇ. ಆದರೆ ತಾರ್ಕಿಕರು ಇದನ್ನು ಪ್ರತ್ಯೇಕವೆನ್ನುತ್ತಾರೆ.

ತಾರ್ಕಿಕರು ಸ್ವರೂಪಯೋಗ್ಯತಾವನ್ನೇ ದಂಡತ್ವವೆಂದು ಹೇಳುತ್ತಿದ್ದಾರೆ. ಸ್ವರೂಪ-ಯೋಗ್ಯತಾರೂಪವಾದ ಕಾರಣತಾವಚ್ಛೇದಕವೇ ದಂಡತ್ವವಾಗಿದೆ. ಇದು ಅನುಮೇಯ-ವಾಗಿದೆ ಎಂದು ತಾರ್ಕಿಕರು ಹೇಳುತ್ತಾರೆ.

ಇದು ತಪ್ಪು. ಸ್ವರೂಪಯೋಗ್ಯತಾರೂಪವಾದ ದಂಡತ್ವವೂ ಕೂಡ ಪ್ರತ್ಯಕ್ಷದಿಂದ ಸಿದ್ಧವಾಗಿರುವಾಗ ಅನುಮಾನದಿಂದ ಸಾಧನೆ ಮಾಡುವ ಆವಶ್ಯಕತೆ ಇರುವುದಿಲ್ಲ. ಹಾಗೆ ಅನುಮಾನ ಮಾಡಿದರೂ ಕೂಡ ಅದು ವ್ಯರ್ಥವೇ ಆಗುತ್ತದೆ.

## ಮೂರು ಆಶಂಕೆಗಳ ನಿರಾಕರಣೆ

ನ್ಯಾಯದೀಪ – ಕಾರಣತ್ವಸ್ಯೋಕ್ತರೂಪಲಿಂಗಾನುಮೇಯಾನ್ಯಥಾನುಪಪತ್ತಿ-ರೂಪಾರ್ಥಾಪತ್ತೇರನ್ಯಥೋಪಪತ್ತಿಂ ತ್ರೇಧಾಽಽಶಂಕ್ಯ ನಿರಾಹ – ನ ಚೇತ್ಯಾದಿನಾ ॥

ಅನುವಾದ – ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವರೂಪವೆಂಬ ಲಿಂಗದಿಂದ ಕಾರಣತ್ವವು ಅನುಮೇಯವೆಂದು ಹಿಂದೆ ಹೇಳಲಾಯಿತು. ಇದರಿಂದ ಕಾರಣತ್ವವು ಅನುಮೇಯವೆಂದು ಸಿದ್ಧವಾಯಿತು. ಆದ್ದರಿಂದಲೇ ಅತೀಂದ್ರಿಯವೆಂದು ತಿಳಿಯುತ್ತದೆ. ಇದನ್ನೇ ಅನ್ಯಥಾನುಪಪತ್ತಿ ಎಂದು ಕರೆದಿದ್ದಾರೆ. ಇದಕ್ಕೆ ಅನ್ಯಥಾ ಅನುಪಪತ್ತಿಯನ್ನು ಮೂರು ವಿಧದಿಂದ ಆಶಂಕಿಸಿ ನಿರಾಕರಣೆ ಮಾಡಲು 'ನಚ' ಇತ್ಯಾದಿ ಗ್ರಂಥವು ಹೊರಟಿದೆ.

## ಫಲೋಪಧಾನತ್ವವು ಕೂಡ ಕಾರಣತ್ವವಲ್ಲ

ತರ್ಕತಾಂಡವ – ನಾಪಿ – ಸಹಕಾರಿಸಮವಧಾನರೂಪಂ ಫಲೋಪಧಾನಮನು-ಮೇಯಮ್ । ದಂಡೇ ಸಹಕಾರ್ಯಸಮವಧಾನೇಽಪಿ ತದ್‌ವ್ಯವಹಾರಾತ್ । ಶಿಲಾದೌ ತತ್ಸಮವಧಾನೇಽಪಿ ಕಾರಣತ್ವಾವ್ಯವಹಾರಾಚ್ಚ ॥

ಅನುವಾದ – ಸಹಕಾರಿಸಮವಧಾನ ಎನಿಸಿದ ಫಲೋಪಧಾನವನ್ನೇ ಕಾರಣತ್ವವೆಂದು ಹೇಳಿ ಇದು ಅನುಮೇಯವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ದಂಡದಲ್ಲಿ ಸಹಕಾರಿಸಮವಧಾನ ಇಲ್ಲದಿದ್ದರೂ ಫಲೋಪಧಾನರೂಪವಾದ ವ್ಯವಹಾರವಿದೆ. ಶಿಲಾದಿಗಳಲ್ಲಿ ಸಹಕಾರಿಸಮವಧಾನವಿದ್ದರೂ ಕಾರಣತ್ವವ್ಯವಹಾರವು ಇರುವುದಿಲ್ಲ.

ವಿವರಣೆ – ಸ್ವರೂಪೋಪಧಾನ ಫಲೋಪಧಾನ ಎಂಬುದಾಗಿ ಕಾರಣತ್ವವು ಎರಡು ವಿಧವಾಗಿದೆ. ಸ್ವರೂಪೋಪಧಾನವು ಎಂದೂ ಕೂಡ ಘಟವನ್ನು ಹುಟ್ಟಿಸದ ದಂಡಾದಿಗಳಲ್ಲಿ ಇರುತ್ತದೆ. ಘಟವನ್ನು ಹುಟ್ಟಿಸುತ್ತಿರುವ ಅವಸ್ಥಾನದಲ್ಲಿ ದಂಡದಲ್ಲಿ ಯಾವ ಕಾರಣತ್ವವಿರುತ್ತದೋ ಅದು ಫಲೋಪಧಾನವೆನಿಸುತ್ತದೆ. ತಾರ್ಕಿಕರು ಅದನ್ನು ಸಹಕಾರಿಸಮವಧಾನವೆಂದು ಕರೆಯುತ್ತಾರೆ. ಪ್ರಕೃತ ಕಾರಣತ್ವವು

ಫಲೋಪಧಾನರೂಪವಾಗಿದೆ ಹೊರತು ಸ್ವರೂಪೋಪಧಾನರೂಪವಲ್ಲ ಎಂಬುದಾಗಿ ಆಕ್ಷೇಪ ಮಾಡುತ್ತಿದ್ದಾರೆ. ಆದರೆ ಇದು ಸರಿಯಲ್ಲ. ಏಕೆಂದರೆ ಫಲೋಪಧಾನತ್ವರೂಪವಾದ ಕಾರಣತ್ವದ ವ್ಯವಹಾರವು ವ್ಯಭಿಚರಿತವಾಗಿದೆ. ಕುಲಾಲನ ಮನೆಯಲ್ಲಿ ಘಟವನ್ನು ಹುಟ್ಟಿಸದ ಒಂದು ದಂಡವು ಇರುತ್ತದೆ. ಅದನ್ನು ತೋರಿಸಿ ಇದು ಘಟವನ್ನು ಹುಟ್ಟಿಸುವ ದಂಡವಾಗಿದೆ ಎಂದು ವ್ಯವಹರಿಸುತ್ತಾರೆ. ಸಹಕಾರಿ ಸಮವಧಾನವಿಲ್ಲದಿದ್ದರೂ ಆ ದಂಡದಲ್ಲಿ ಕಾರಣತ್ವದ ವ್ಯವಹಾರವು ಇರುವುದರಿಂದ ವ್ಯಭಿಚರಿತವಾಯಿತು. ಮತ್ತು ಕುಲಾಲನ ಮನೆಯಲ್ಲಿ ಯಾವ ಸ್ಥಳದಲ್ಲಿ ಘಟವನ್ನು ನಿರ್ಮಾಣ ಮಾಡುತ್ತಾನೋ ಅಲ್ಲಿರುವ ಶಿಲೆಯ ಮೇಲೆ ದಂಡ, ಚಕ್ರ, ಮೊದಲಾದ ಎಲ್ಲಾ ಸಹಕಾರಿಗಳೂ ಇರುತ್ತವೆ. ಸಹಕಾರಿಸಮವಧಾನವು ಆ ಶಿಲಾದಲ್ಲಿದ್ದರೂ ಯಾರೂ ಕೂಡ ಅದನ್ನು ಘಟಕ್ಕೆ ಕಾರಣವೆಂದು ವ್ಯವಹರಿಸುವುದಿಲ್ಲ. ಆದ್ದರಿಂದ, ಕಾರಣತ್ವವಿರುವ ದಂಡದಲ್ಲಿ ಸಹಕಾರಿಸಮವಧಾನವಿಲ್ಲ. ಸಹಕಾರಿಸಮವಧಾನವಿರುವ ಶಿಲಾದಲ್ಲಿ ಕಾರಣತ್ವವೆಂಬ ವ್ಯವಹಾರವಿಲ್ಲ. ಹೀಗೆ ಅನ್ವಯವ್ಯಭಿಚಾರ ಹಾಗೂ ವ್ಯತಿರೇಕವ್ಯಭಿಚಾರ ಎಂಬೆರಡು ದೋಷಗಳು ಪ್ರಾಪ್ತವಾಗುತ್ತವೆ.

ನ್ಯಾಯದೀಪ – ಕಾರಣತಾವಚ್ಛೇದಕಸ್ಯೈವ ಸ್ವರೂಪಯೋಗ್ಯತಾರೂಪತ್ವಾತ್ ದಂಡತ್ವ-ಮಿತ್ಯುಕ್ತಮ್ ।

ಅನುವಾದ – ಕಾರಣತಾವಚ್ಛೇದಕವನ್ನೇ ಸ್ವರೂಪಯೋಗ್ಯತೆಯೆಂದು ತಾರ್ಕಿಕರು ಹೇಳುವುದರಿಂದ ದಂಡತ್ವಂ ಎಂದು ಹೇಳಿದ್ದಾರೆ. ದಂಡತ್ವವು ಕಾರಣತಾವಚ್ಛೇದಕವಾಗಿರುವುದರಿಂದ ಸ್ವರೂಪಯೋಗ್ಯತಾ ರೂಪವಾಗಿದೆ.

## ದಂಡತ್ವವನ್ನು ಪಕ್ಷ ಮಾಡಿದರೂ ಸಾಧ್ಯಾವೈಶಿಷ್ಟ್ಯ ತಪ್ಪಲಿಲ್ಲ

ತರ್ಕತಾಂಡವ – ನಾಪಿ ದಂಡತ್ವಸ್ಯಾನನ್ಯಥಾಸಿದ್ಧಿವಿಶಿಷ್ಟನಿಯಮಾವಚ್ಛೇದಕತ್ವ-ಮನುಮೇಯಮ್ । ತಸ್ಯ ಹೇತುಶರೀರ ಏವ ಪ್ರವೇಶಾತ್ ।

ದಂಡತ್ವಕ್ಕೆ ಅನನ್ಯಥಾಸಿದ್ಧವಿಶಿಷ್ಟನಿಯಮಾವಚ್ಛೇದಕತ್ವವೇ ಅನುಮೇಯವೆಂದು ಹೇಳಬಾರದು. ಇದು ಕೂಡ ಹೇತುಶರೀರದಲ್ಲಿಯೇ ಸೇರಿದೆ.

ವಿವರಣೆ - ದಂಡತ್ವಂ ಅನನ್ಯಥಾಸಿದ್ಧವಿಶಿಷ್ಟನಿಯಮಾವಚ್ಛೇದಕಂ = ಕಾರಣತಾವಚ್ಛೇದಕಂ ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವ-ಅನ್ಯೂನಾನಧಿಕವೃತ್ತಿತ್ವಾತ್ ಎಂದು ಅನುಮಾನ ಮಾಡಬೇಕು. ಇಲ್ಲಿ ಅನುಮೇಯವಾದ ಅನನ್ಯಥಾಸಿದ್ಧವಿಶಿಷ್ಟನಿಯಮಾವಚ್ಛೇದಕತ್ವವು ಹೇತುಶರೀರದಲ್ಲಿಯೇ ಸೇರಿದೆ. ಆದ್ದರಿಂದ ಸಾಧ್ಯಾವಿಶಿಷ್ಟತಾದೋಷವು ಪರಿಹಾರವಾಗಲಿಲ್ಲ.

## ಯಾವುದು ಹೇತು ?

ನ್ಯಾಯದೀಪ – ತಸ್ಯೇತಿ ॥ 'ಉಕ್ತರೂಪಾವಚ್ಛೇದಕಸ್ಯ' ಇತ್ಯರ್ಥಃ। ಅನ್ಯಥಾಸಿದ್ಧಿನಿಯತ-ಪೂರ್ವವೃತ್ತಿತ್ವಾನ್ಯೂನಾನಧಿಕವೃತ್ತಿತ್ವಸ್ಯ ಹೇತುತ್ವೇನ ವಾಚ್ಯತ್ವಾತ್ ತಸ್ಯೈವೋಕ್ತರೂಪಾವಚ್ಛೆದಕತ್ವಾದಿತಿ ಭಾವಃ।

ಅನುವಾದ – 'ತಸ್ಯ' ಎಂದರೆ ಕಾರಣತಾವಚ್ಛೇದಕತ್ವಕ್ಕೆ ಎಂದರ್ಥ. ಅನನ್ಯಥಾಸಿದ್ಧನಿಯತ-ಪೂರ್ವವೃತ್ತಿತ್ವರೂಪವಾದ ಅನ್ಯೂನಾನಧಿಕವೃತ್ತಿತ್ವವೇ ಹೇತುವಾಗಿರುವುದರಿಂದ ಅದನ್ನೇ ಅವಚ್ಛೇದಕತ್ವರೂಪವೆಂದು ಹೇಳಬೇಕು.

ವಿವರಣೆ – ಮೂಲದಲ್ಲಿ 'ದಂಡಃ ಕಾರಣಂ ಭವಿತುಮರ್ಹತಿ ಅನನ್ಯಥಾಸಿದ್ಧನಿಯತ-ಪೂರ್ವವೃತ್ತಿತ್ವಾತ್' ಎಂಬ ಅನುಮಾನವನ್ನು ವಿವಕ್ಷಿಸಿದ್ದಾರೆ. ಆದರೆ ನ್ಯಾಯದೀಪದಲ್ಲಿ ದಂಡತ್ವವನ್ನು ಪಕ್ಷವನ್ನಾಗಿ ಮಾಡಿ ಕಾರಣತಾವಚ್ಛೇದಕತ್ವವನ್ನು ಸಾಧಿಸಿದ್ದಾರೆ. - 'ದಂಡತ್ವಂ ಕಾರಣತಾವಚ್ಛೇದಕಂ ಭವಿತುಮರ್ಹತಿ ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವಾ-ನ್ಯೂನಾನಧಿಕವೃತ್ತಿತ್ವಾತ್' ಎಂದು. ದಂಡವು ಅನನ್ಯಥಾಸಿದ್ಧನಿಯತಪೂರ್ವವೃತ್ತಿಯಾಗಿ ದೆ. ದಂಡತ್ವವು ಇದಕ್ಕೆ ಅನ್ಯೂನಾಧಿಕವೃತ್ತಿಯಾಗಿದೆ. ದಂಡತ್ವವು ಎಲ್ಲಿ ಇರುತ್ತದೋ ಅಲ್ಲಿ ಅನನ್ಯಥಾಸಿದ್ಧನಿಯತಪೂರ್ವಭಾವಿತ್ವವು ಇರುತ್ತದೆ. ಅನನ್ಯಥಾಸಿದ್ಧನಿಯತಪೂರ್ವ-ವೃತ್ತಿತ್ವವು ಎಲ್ಲಿ ಇರುತ್ತದೋ ಅಲ್ಲಿ ದಂಡತ್ವವು ಇರುವುದಿಲ್ಲ. ಹೀಗೆ ಅನನ್ಯಥಾ-ಸಿದ್ಧನಿಯತಪೂರ್ವವೃತ್ತಿತ್ವವು ಅನ್ಯೂನಾಧಿಕವೃತ್ತಿಯಾಗಿರುವುದರಿಂದ ದಂಡತ್ವವೇ ಕಾರಣತಾವಚ್ಛೇದಕವಾಗುತ್ತದೆ. ದಂಡವೇ ಏಕೆ ಘಟಕ್ಕೆ ಕಾರಣವಾಗಬೇಕು? ಎಂದು ವಿಚಾರ ಮಾಡಿದಾಗ ಈ ಅನುಮಾನದ ಮೂಲಕ ದಂಡದಲ್ಲಿರುವ ದಂಡತ್ವವೇ ಕಾರಣತಾವಚ್ಛೇದಕವೆಂದು ತಿಳಿಯಬೇಕು. ದಂಡತ್ವವೇ ಏಕೆ ಕಾರಣತಾವಚ್ಛೇದಕ

ಆಗಬೇಕು? ಎಂದರೆ ಅನ್ಯೂನಾನಧಿಕವೃತ್ತಿಯಾಗಿರುವುದರಿಂದ. ದಂಡವು ಅನನ್ಯಥಾಸಿದ್ಧ-ನಿಯತಪೂರ್ವಭಾವಿಯಾಗಿದೆ. ಈ ದಂಡದಲ್ಲಿ ಸತ್ತಾ, ದ್ರವ್ಯತ್ವ, ಪ್ರಮೇಯತ್ವ ಮೊದಲಾದ ಅನೇಕ ಧರ್ಮಗಳಿವೆ. ಇವುಗಳಲ್ಲಿ ಅನ್ಯೂನಾನಧಿಕವೃತ್ತಿತ್ವವು ಇರುವುದಿಲ್ಲ. ದಂಡತ್ವದಲ್ಲಿ ಮಾತ್ರ ಇರುತ್ತದೆ. ಆದರಿಂದ ದಂಡತ್ವವೇ ಕಾರಣತಾವಚ್ಛೇದಕ ಆಗುತ್ತದೆ. ಘಟಕ್ಕೆ ದಂಡವು ಕಾರಣ ಎಂದು ಅನುಮಾನ ಮಾಡುವುದಕ್ಕಿಂತ ದಂಡತ್ವವು ಕಾರಣತಾವಚ್ಛೇದಕವೆಂದು ಅನುಮಾನ ಮಾಡುವುದರಿಂದ ಘಟಕ್ಕೆ ದಂಡವೇ ಕಾರಣವೆಂದು ನಿರ್ಧಾರವಾಗಿ ಹೇಳಿದಂತಾಗುತ್ತದೆ.

ಕಾರಣತಾವಚ್ಛೇದಕವು ಸಾಧ್ಯವಾಗಿದೆ. ಅನ್ಯೂನಾಧಿಕವೃತ್ತಿತ್ವವು ಹೇತುವಾಗಿದೆ. ಅವಚ್ಛೇದಕಶಬ್ದದ ಅರ್ಥವೇ ಅನ್ಯೂನಾನಧಿಕವೃತ್ತಿತ್ವ. ಆದ್ದರಿಂದ ಅನ್ಯೂನಾತಿರಿಕ್ತವೃತ್ತಿತ್ವ ದಿಂದ ಅನ್ಯೂನಾತಿರಿಕ್ತವೃತ್ತಿತ್ವವನ್ನೇ ಸಾಧನೆ ಮಾಡಿದಂತಾಯಿತು.

## ಶಕ್ತಿಯ ಸಮರ್ಥನೆಗೆ ಸುಧಾದ ಆಧಾರ

**ತರ್ಕತಾಂಡವ – ಏತದೇವಾಭಿಪ್ರೇತ್ಯೋಕ್ತಂ ಸುಧಾಯಮ್ - 'ತತೋಽನ್ವಯ-ವ್ಯತಿರೇಕಸಮಧಿಗಮ್ಯಮತೀಂದ್ರಿಯಮೇವ ಕಿಂಚಿನ್ಮೃದಾದೀನಾಂ ಘಟಾದಿ-ಕಾರಣತ್ವಮಭ್ಯುಪಗಮನೀಯಮ್ । ತದೇವ ಚ ಶಕ್ತಿಃ' ಇತಿ ॥**

ಅನುವಾದ – ಇದೇ ಅಭಿಪ್ರಾಯದಿಂದ ನ್ಯಾಯಸುಧೆಯಲ್ಲಿ ಹೀಗೆ ಹೇಳಿದ್ದಾರೆ- 'ತತೋಽನ್ವಯವ್ಯತಿರೇಕಸಮಧಿಗಮ್ಯಮತೀಂದ್ರಿಯಮೇವ ಕಿಂಚಿನ್ಮೃದಾದೀನಾಂ ಘಟಾದಿ- ಕಾರಣತ್ವ- ಮಭ್ಯುಪಗಮನೀಯಮ್ । ತದೇವ ಚ ಶಕ್ತಿಃ' 'ಅನನ್ಯಥಾಸಿದ್ಧವಾದ ಅನ್ವಯವ್ಯತಿರೇಕದಿಂದ ಸಮಧಿಗಮ್ಯವಾದ ಅತೀಂದ್ರಿಯವಾದ ಘಟಾದಿಕಾರಣತ್ವವನ್ನು ಮೃದಾದಿಗಳಲ್ಲಿ ಅಂಗೀಕಾರ ಮಾಡಬೇಕು. ಅದೇ ಶಕ್ತಿ ಎಂದು ಕರೆಸಿಕೊಳ್ಳುತ್ತದೆ ಎಂದು.

## ಅನುವ್ಯಾಖ್ಯಾನದಲ್ಲಿ ಶಕ್ತಿಯ ಸಮರ್ಥನೆ

ನ್ಯಾಯದೀಪ – ಸುಧಾಯಾಮಿತಿ ॥ 'ಅತ್ತಾ ಚರಾಚರಗ್ರಹಣಾತ್' ಇತ್ಯಧಿಕರಣೇ -

ಇತಿ ಪೈಂಗಿಶ್ರುತಿಶ್ಚಾಹ ಶಕ್ತಿಸದ್ಭಾವ ಏವ ತು ।

ಇತ್ಯಾದಿಶ್ಲೋಕವ್ಯಾಖ್ಯಾನಾವಸರ ಇತಿ ಧ್ಯೇಯಮ್ ॥

ಅನುವಾದ – ಗ್ರಂಥದಲ್ಲಿ ಸುಧಾಯಾಮ್ ಎಂದು ಹೇಳಿದ್ದಾರೆ. ಅತ್ತಾ ಚರಾಚರಗ್ರಹಣಾತ್ ಎಂಬ ಅಧಿಕರಣದ 'ಇತಿ ಪೈಂಗಿಶ್ರುತಿಶ್ಚಾಹ ಶಕ್ತಿಸದ್ಭಾವ ಏವ ತು' ಇತ್ಯಾದಿ ಅನುವ್ಯಾಖ್ಯಾನ ಶ್ಲೋಕಕ್ಕೆ ವ್ಯಾಖ್ಯಾನ ಮಾಡುವ ನ್ಯಾಯಸುಧೆಯಲ್ಲಿ ಎಂದಿದರ ಅರ್ಥ.

## ಶಕ್ತಿಯು ಪ್ರತ್ಯಕ್ಷಸಿದ್ಧವಲ್ಲ

ತರ್ಕತಾಂಡವ – ವ್ಯಾಪ್ತಿಗ್ರಾಹಕಪ್ರತ್ಯಕ್ಷೇಣ ತು ನಿಯಮರೂಪಾ ರಸರೂಪಾದಿ-ಸಾಧಾರಣೀ ವ್ಯಾಪ್ತಿರೇವ ಗೃಹ್ಯತೇ । ನ ತು ಶಕ್ತಿರೂಪಾಕಾರಣತಾ । ತಸ್ಯಾ ನಿತ್ಯಾತೀಂದ್ರಿಯತ್ವಾತ್ ॥

ಅನುವಾದ – ವ್ಯಾಪ್ತಿಗ್ರಾಹಕಪ್ರತ್ಯಕ್ಷದಿಂದ ನಿಯಮೇನ ಜೊತೆಯಲ್ಲಿರುವ ರಸರೂಪಾದಿ-ಸಾಧಾರಣವಾದ ವ್ಯಾಪ್ತಿಯೇ ಗೃಹೀತವಾಗುತ್ತದೆ. ಹೊರತು ಶಕ್ತಿಸ್ವರೂಪವಾದ ಕಾರಣತ್ವವು ಗೃಹೀತವಾಗುವುದಿಲ್ಲ. ಏಕೆಂದರೆ ಈ ಶಕ್ತಿಯು ನಿತ್ಯ ಅತೀಂದ್ರಿಯವಾಗಿದೆ.

ವಿವರಣೆ – ವ್ಯಾಪ್ತಿಯನ್ನು ನಿಶ್ಚಯಿಸಲು 'ಯದಾ ವಹ್ನಿಃ ತದಾ ದಾಹಃ ಯದಾ ವಹ್ನ್ಯಭಾವಃ ತದಾ ದಾಹಾಭಾವಃ' ಎಂಬ ಅನ್ವಯವ್ಯತಿರೇಕವನ್ನು ಗ್ರಹಣ ಮಾಡುವ ಪ್ರತ್ಯಕ್ಷದಿಂದಲೇ ಕಾರಣತ್ವವನ್ನೂ ಕೂಡ ತಿಳಿಯುತ್ತದೆಂದು ತಿಳಿಯಬಹುದು. ಕಾರಣತ್ವವು ಅನುಮೇಯವಾದರೆ ಮಾತ್ರ ಅದು ಶಕ್ತಿರೂಪವೆಂದು ಹೇಳಬಹುದಿತ್ತು.

ವ್ಯಾಪ್ತಿಗ್ರಾಹಕಪ್ರತ್ಯಕ್ಷದಿಂದ ವ್ಯಾಪ್ತಿಯಷ್ಟೇ ತಿಳಿಯುತ್ತದೆ ಹೊರತು ಕಾರಣತ್ವವು ತಿಳಿಯುವುದಿಲ್ಲ. ಕಾರಣತ್ವವನ್ನು ವ್ಯಾಪ್ತಿಯೆಂದು ಹೇಳಲು ಸಾಧ್ಯವೇ ಇಲ್ಲ. ಬೌದ್ಧರು ಕಾರಣತ್ವವನ್ನೇ ವ್ಯಾಪ್ತಿಯೆಂದು ಹೇಳುತ್ತಾರೆ. ತಾದಾತ್ಮ್ಯ ಹಾಗೂ ಕಾರಣತ್ವ ಎರಡನ್ನೂ ಕೂಡ ಅವರು ಹೇಳುತ್ತಾರೆ. ಅವರಂತೆ ಹೇಳಲು ಸಾಧ್ಯವಿಲ್ಲ. ಏಕೆಂದರೆ, 'ಯತ್ರ ರಸಃ ತತ್ರ ರೂಪಂ' ಎಂಬ ವ್ಯಾಪ್ತಿಯನ್ನು ನಾವು ಪ್ರತ್ಯಕ್ಷದಿಂದ ತಿಳಿಯುತ್ತೇವೆ. ಇಲ್ಲಿ ರಸ ಹಾಗೂ ರೂಪಗಳಿಗೆ ಕಾರ್ಯಕಾರಣಭಾವವೇ ಇರುವುದಿಲ್ಲ. ಎಲ್ಲಿ ರಸ ಇರುತ್ತದೋ ಅಲ್ಲಿ ರೂಪ ಇದ್ದೇ ಇರುತ್ತದೆ. ಆದರೆ ರೂಪವಿದ್ದಲ್ಲಿ ರಸ ಇರುವುದಿಲ್ಲ. ಹೀಗೆ ವ್ಯಾಪ್ತಿಯನ್ನು ಗ್ರಹಣ ಮಾಡುತ್ತೇವೆ. ವ್ಯಾಪ್ತಿಯೇ ಕಾರಣತ್ವರೂಪವಾದರೆ ರಸವು ರೂಪಕ್ಕೆ ಕಾರಣವೆಂದು ಅಥವಾ ರೂಪವು ರಸಕ್ಕೆ ಕಾರಣವೆಂದು ಆಗಬೇಕಾಗುತ್ತದೆ. ಆದ್ದರಿಂದ ಆ ವ್ಯಾಪ್ತಿಯು ಯಾವ ಲಿಂಗದಿಂದ ಗ್ರಹಣ ಮಾಡುತ್ತೇವೋ ಆ ಲಿಂಗದಿಂದ ಅನುಮೇಯವಾದ ಕಾರಣತ್ವವನ್ನು ಶಕ್ತಿರೂಪವೆಂದು ನಾವು ಹೇಳುತ್ತಿದ್ದೇವೆ.

## ಕಾರಣತ್ವವೇಕೆ ಅನುಮೇಯ ?

ನ್ಯಾಯದೀಪ – ನನು – 'ವಹ್ನ್ಯಾದೌ ಸತಿ ದಾಹಾದಿಃ, ತದಭಾವೇ ತದಭಾವಃ' ಇತಿ ದಾಹಾದೇರ್ವಹ್ನ್ಯಾದಿನಾ ವ್ಯಾಪ್ತಿಗ್ರಾಹಕಪ್ರತ್ಯಕ್ಷೇಣೈವ ದಾಹಕಾರಣತಾ ಗೃಹ್ಯತ ಇತಿ ಕಥಮನುಮೇಯತೋಕ್ತಿಃ। ಏತದನ್ಯಥಾऽನುಪಪತ್ತ್ಯಾ ಶಕ್ತಿಸಿದ್ಧಿರಿತ್ಯತ ಆಹ – ವ್ಯಾಪ್ತೀತಿ॥

ಅನುವಾದ – 'ವಹ್ನಿ ಇದ್ದರೆ ದಾಹವಾಗುತ್ತದೆ; ವಹ್ನಿ ಇಲ್ಲದಿದ್ದರೆ ದಾಹವಾಗುವುದಿಲ್ಲ' ಎಂಬುದಾಗಿ ದಾಹಾದಿಗಳಿಗೆ ವಹ್ನ್ಯಾದಿಗಳ ಜೊತೆ ವ್ಯಾಪ್ತಿಯು ಪ್ರತ್ಯಕ್ಷಸಿದ್ಧವಾಗಿದೆ. ಇದೇ ಪ್ರತ್ಯಕ್ಷದಿಂದ ಕಾರಣತ್ವವನ್ನು ತಿಳಿಯಬಹುದಲ್ಲವೇ? ಇಂತಹ ಕಾರಣತ್ವವನ್ನು ಅನುಮೇಯವೆಂದು ಏಕೆ ಹೇಳುತ್ತೀರಿ? ಆದ್ದರಿಂದ ಕಾರಣತ್ವದ ಅನ್ಯಥಾನುಪಪತ್ತಿಯಿಂದ ಶಕ್ತಿ ಎಂಬ ಪದಾರ್ಥವು ಕೂಡ ಸಿದ್ಧವಾಗುವುದಿಲ್ಲ ಎಂಬ ಪ್ರಶ್ನೆಗೆ 'ವ್ಯಾಪ್ತಿ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

## ಪ್ರಶ್ನೋತ್ತರಗಳು

ಪ್ರಶ್ನೆ - ಅನ್ವಯವ್ಯತಿರೇಕದಿಂದ ಗಮ್ಯವಾದದ್ದು ಕಾರಣತಾವಚ್ಛೇದಕವೋ ಅಥವಾ ಕಾರಣತಾವಚ್ಛೇದಕತ್ವವೋ ?

ಉತ್ತರ - ಕಾರಣತಾವಚ್ಛೇದಕತ್ವವೇ ಅನ್ವಯವ್ಯತಿರೇಕಗಮ್ಯ; ಕಾರಣತಾವಚ್ಛೇದಕವು ಅನ್ವಯವ್ಯತಿರೇಕಗಮ್ಯವಲ್ಲ.

ಪ್ರಶ್ನೆ - ಅತೀಂದ್ರಿಯವಾದ ಶಕ್ತಿ ಎಂದರೆ ಯಾವುದು ?

ಉತ್ತರ - ಕಾರಣತಾವಚ್ಛೇದಕತ್ವ.

ಪ್ರಶ್ನೆ - ಕಾರಣತಾವಚ್ಛೇದಕ ಎಂದರೆ ಯಾವುದು ? ಕಾರಣತಾವಚ್ಛೇದಕತ್ವ ಎಂದರೆ ಯಾವುದು ?

ಉತ್ತರ - ಕಾರಣತಾವಚ್ಛೇದಕ ಎಂದರೆ ದಂಡತ್ವಾದಿಗಳು. ಅದರಲ್ಲಿರುವ ಶಕ್ತಿಯೇ ಕಾರಣತಾವಚ್ಛೇದಕತ್ವ.

ಪ್ರಶ್ನೆ - ಕಾರಣತಾವಚ್ಛೇದಕತ್ವವನ್ನು ಶಕ್ತಿ ಎಂದು ಏಕೆ ಹೇಳಬೇಕು?

ಉತ್ತರ - ಅತೀಂದ್ರಿಯವಾದ್ದರಿಂದ ಮತ್ತು ಪ್ರಮಾಣಪ್ರಮಿತವಾಗಿರುವುದರಿಂದ ಇದನ್ನು ಶಕ್ತಿ ಎಂದು ಹೇಳಬೇಕು.

ಪ್ರಶ್ನೆ - ತಾರ್ಕಿಕರ ಪ್ರಕಾರ ಕಾರಣತಾವಚ್ಛೇದಕತ್ವ ಯಾವುದು? ಸಹಕಾರಿಸಮವಧಾನವನ್ನು ಏನೆನ್ನುತ್ತಾರೆ?

ಸ್ವರೂಪಯೋಗ್ಯತೆಯನ್ನು ಕಾರಣತಾವಚ್ಛೇದಕವೆನ್ನುತ್ತಾರೆ. ಫಲೋಪಾಧಾನವನ್ನು ಸಹಕಾರಿಸಮವಧಾನವೆನ್ನುತ್ತಾರೆ.

ಪ್ರಶ್ನೆ - ನಮ್ಮ ಪ್ರಕಾರ ಸ್ವರೂಪೋಪಧಾನ ಎಂದರೇನು? ಫಲೋಪಧಾನ ಎಂದರೇನು?

ಉತ್ತರ - ಕಾರ್ಯಜನನಾವಸ್ಥೆಯೇ ಫಲೋಪಧಾನ; ಶಕ್ತಿಯೇ ಸ್ವರೂಪಯೋಗ್ಯತಾ.

ಪ್ರಶ್ನೆ - ಶಕ್ತಿಯು ಎಷ್ಟು ವಿಧ? ಒಂದು ಕಾರ್ಯ ಹುಟ್ಟಲು ಎಷ್ಟು ಶಕ್ತಿಗಳು ಬೇಕು?

ಉತ್ತರ - ಶಕ್ತಿಯು ಅನೇಕ ವಿಧ; ಕಾರ್ಯಹುಟ್ಟಲು ಏನೆಲ್ಲಾ ಬೇಕೋ ಅದೆಲ್ಲವೂ ಶಕ್ತಿ ಎಂದು ಕರೆಸಿಕೊಳ್ಳುತ್ತದೆ. ಸಹಕಾರಿಗಳು, ಕಾರಣ, ಪರಂಪರಾಕಾರಣ, ಕಾರಣತಾವಚ್ಛೇದಕ, ಪ್ರಯೋಜಕ. ಇವುಗಳಿದ್ದಲ್ಲೆಲ್ಲ ಶಕ್ತಿ ಇದ್ದೇ ಇದೆ. ಹೀಗೆ ಶಕ್ತಿಯು ಬಹುವಿಧ.

## ಅವ್ಯಭಿಚರಿತವಾದ ವ್ಯಾಪ್ತಿಗೆ ಅವ್ಯಭಿಚರಿತವಾದ ಸಹಚಾರ ದರ್ಶನವು ಹೇಗೆ ಕಾರಣ?

**ತರ್ಕತಾಂಡವ – ನಚ ವ್ಯಭಿಚರಿತಂ ಸಹಚಾರದರ್ಶನಂ ನಿಯಮರೂಪವ್ಯಾಪ್ತೇರಪಿ ಕಥಂ ಗ್ರಾಹಕಮ್, ಗ್ರಾಹಕಕೋಟೌ ನಿಯಮಪ್ರವೇಶೇ ಚಾತ್ಮಾಶ್ರಯ ಇತಿ ವಾಚ್ಯಮ್ ।**

ಅನುವಾದ – ಕೇವಲ ಸಹಚಾರದರ್ಶನವು ನಿಯಮರೂಪವಾದ ವ್ಯಾಪ್ತಿಗೆ ಗ್ರಾಹಕವಾಗಲು ಸಾಧ್ಯವಿಲ್ಲ. ಏಕೆಂದರೆ, ಕೇವಲ ಸಹಚಾರದರ್ಶನವು ವ್ಯಭಿಚರಿತವೂ ಕೂಡ ಆಗಿರಬಹುದು. ಇನ್ನು ಗ್ರಾಹಕಕೋಟಿಯಲ್ಲಿಯೇ ನಿಯಮವನ್ನು ಪ್ರವೇಶ ಮಾಡಿದರೆ ಆತ್ಮಾಶ್ರಯ ಬರುತ್ತದೆ. (ಅವ್ಯಭಿಚರಿತವಾದ ಸಹಚಾರದರ್ಶನವು ಅವ್ಯಭಿಚರಿತವಾದ ವ್ಯಾಪ್ತಿಗೆ ಗ್ರಾಹಕ ಎಂದು ಹೇಳಿದರೆ ಆತ್ಮಾಶ್ರಯ; ಗ್ರಾಹಕವೂ ಅವ್ಯಭಿಚರಿತವಾಯಿತು. ಗ್ರಾಹ್ಯವೂ ಅವ್ಯಭಿಚರಿತವಾಯಿತು. ಆದ್ದರಿಂದ ಆತ್ಮಾಶ್ರಯ ಬರುತ್ತದೆಂದು ತಿಳಿಯಬೇಕು).

ವಿವರಣೆ – ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವದಿಂದ ಕಾರಣತ್ವವು ಸಿದ್ಧವಾಗುತ್ತದೆ. ಈ ಕಾರಣತ್ವವನ್ನೇ ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವರೂಪವೆಂದು ಹೇಳಿದರೆ ಹೇತು ಸಾಧ್ಯಗಳಿಗೆ ಅವೈಶಿಷ್ಟ್ಯವು ಬರುತ್ತದೆ. ಆದ್ದರಿಂದ ಶಕ್ತಿಯನ್ನು ಅಂಗೀಕಾರ ಮಾಡಬೇಕು.

ಇನ್ನು ಕಾರಣತ್ವವು ಅನುಮೇಯವೇ ಅಲ್ಲ. ಪ್ರತ್ಯಕ್ಷಸಿದ್ಧವೆಂದು ಹೇಳಿದರೆ ಈ ಪ್ರತ್ಯಕ್ಷದಿಂದ ವ್ಯಾಪ್ತಿಯು ಗ್ರಹಣವಾಗಬಹುದೇ ಹೊರತು ಕಾರಣತ್ವವು ತಿಳಿಯುವುದಿಲ್ಲ. ವ್ಯಾಪ್ತಿಗ್ರಹಣವಾದ ಮಾತ್ರಕ್ಕೆ ಕಾರಣತ್ವವು ತಿಳಿಯಿತು ಎಂದು ಹೇಳಲು ಸಾಧ್ಯವಿಲ್ಲ.

ಏಕೆಂದರೆ ರಸಕ್ಕೂ ರೂಪಕ್ಕೂ ನಾವು ವ್ಯಾಪ್ತಿಯನ್ನು ತಿಳಿಯುತ್ತೇವೆ ಎಂದ ಮಾತ್ರಕ್ಕೆ ಕಾರಣತ್ವವನ್ನು ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ 'ವಹ್ನೌ ಸತಿ ದಾಹಃ ವಹ್ನ್ಯಭಾವೇ ದಾಹಾಭಾವಃ' ಎಂಬ ಅನ್ವಯವ್ಯತಿರೇಕದಿಂದ ಕಾರಣತ್ವವು ಸಿದ್ಧವಾಗುವುದಿಲ್ಲ.

ವ್ಯಾಪ್ತಿಗ್ರಾಹಕಪ್ರತ್ಯಕ್ಷದಿಂದ ವ್ಯಾಪ್ತಿಯನ್ನು ತಿಳಿದು ಶಕ್ತಿರೂಪ ಕಾರಣತ್ವವನ್ನು ಅನುಮಾನ ಮಾಡುತ್ತೇವೆಂದು ಹೇಳಿದರೆ

ಪ್ರತ್ಯಕ್ಷವೆಂದರೆ ಸಹಚಾರಿದರ್ಶನ ಎಂದು ಹೇಳಬೇಕು. ಈ ಸಹಚಾರಿದರ್ಶನವು ವ್ಯಾಪ್ತಿಗ್ರಾಹಕ ಆಗಲು ಸಾಧ್ಯವಿಲ್ಲ. ಏಕೆಂದರೆ, ನಿಯತವಾದ ಸಾಹಚರ್ಯದರ್ಶನವೋ? ಅಥವಾ ಕೇವಲ ಸಾಹಚರ್ಯದರ್ಶನವೋ? ಎಂದು ಪ್ರಶ್ನಿಸುತ್ತೇವೆ. ನಿಯತವಾದ ಸಾಹಚರ್ಯವೆಂದು ಹೇಳಲು ಸಾಧ್ಯವಿಲ್ಲ. ಸಾಹಚರ್ಯದರ್ಶನದಿಂದ ಸಾಹಚರ್ಯವು ತಿಳಿಯುತ್ತದೆ ಹೊರತು ನಿಯಮರೂಪವಾದ ಸಾಹಚರ್ಯವು ತಿಳಿಯುವುದಿಲ್ಲ. ನಿಯತಸಾಹಚರ್ಯದರ್ಶನವೇ ವ್ಯಾಪ್ತಿಗ್ರಾಹಕವೆಂದು ಹೇಳಿದರೆ ಆತ್ಮಾಶ್ರಯದೋಷವು ಬರುತ್ತದೆ. ವ್ಯಾಪ್ತಿ ಎಂದರೆ ಅವ್ಯಭಿಚರಿತವಾದ ಸಾಹಚರ್ಯ ಎಂದರ್ಥ. ಅದಕ್ಕೆ ಗ್ರಾಹಕವಾದ್ದನ್ನು ಅದನ್ನೇ ಹೇಳಿದರೆ ಆತ್ಮಾಶ್ರಯ ಬಂದೀತು.

## ವ್ಯಾಪ್ತಿಗ್ರಾಹಕ ಯಾವುದು ?

ನ್ಯಾಯದೀಪ – ನನು ವ್ಯಾಪ್ತಿರೇವ ಗೃಹ್ಯತ ಇತ್ಯಯುಕ್ತಮ್ । ಸಹಚಾರದರ್ಶನಸ್ಯ ವಾ ನಿಯತಸಹಚಾರದರ್ಶನಸ್ಯ ವಾ ತದನಿರ್ಣಾಯಕತ್ವಾದಿತ್ಯಾಶಂಕ್ಯ ಸಮಾಧತ್ತೇ – ನ ಚೇತಿ ॥

ಅನುವಾದ – ಹಿಂದೆ ವ್ಯಾಪ್ತಿಗ್ರಾಹಕಪ್ರತ್ಯಕ್ಷದಿಂದ ರಸ ಹಾಗೂ ರೂಪಗಳಲ್ಲಿ ನಿಯತವಾದ ವ್ಯಾಪ್ತಿಯೇ ತಿಳಿಯುತ್ತಿದೆ. ಇದು ಶಕ್ತಿರೂಪವಾದ ಕಾರಣತ್ವವಲ್ಲ ಎಂದು ಹೇಳಿದರು. ಇಲ್ಲಿ ವ್ಯಾಪ್ತಿರೇವ ಗೃಹ್ಯತೇ ಎಂದು ಹೇಳಿದ್ದೇ ತಪ್ಪು. ಏಕೆಂದರೆ ಸಹಚಾರದರ್ಶನವಾಗಲೀ ನಿಯತವಾದ ಸಹಚಾರದರ್ಶನವಾಗಲೀ ವ್ಯಾಪ್ತಿಗ್ರಾಹಕವಾಗಲು ಸಾಧ್ಯವಿಲ್ಲ ಎಂದು ಆಶಂಕಿಸಿ ಸಮಾಧಾನವನ್ನು 'ನಚ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

## ಸಹಚಾರದರ್ಶನ ಮಾತ್ರ ಹೇತು; ಅವ್ಯಭಿಚರಿತತ್ವವು ಸಹಕಾರಿ

**ತರ್ಕತಾಂಡವ – ತಸ್ಯ ಅಂಜನಾದಿವದ್ವ್ಯಾಪ್ತಿಗ್ರಾಹಕಪ್ರತ್ಯಕ್ಷಸಹಕಾರಿತ್ವೇನಾ-ವ್ಯಭಿಚಾರಾನಪೇಕ್ಷಣಾತ್ ॥**

ಅನುವಾದ – ಸಹಚಾರದರ್ಶನವು ಅಂಜನಾದಿಗಳಂತೆ ವ್ಯಾಪ್ತಿಗ್ರಾಹಕವಾದ ಪ್ರತ್ಯಕ್ಷಕ್ಕೆ ಸಹಕಾರಿಯಾಗಿದೆ. ಆದ್ದರಿಂದ ಅವ್ಯಭಿಚರಿತತ್ವವನ್ನು ವಿಶೇಷಣವನ್ನಾಗಿ ಹೇಳುವುದೇ ಇಲ್ಲ. ಆದ್ದರಿಂದ ಆತ್ಮಾಶ್ರಯ ದೋಷಕ್ಕೆ ಅವಕಾಶವಿಲ್ಲ.

ವಿವರಣೆ – ಕೇವಲ ಸಹಚಾರದರ್ಶನವೇ ವ್ಯಾಪ್ತಿಗೆ ಗ್ರಾಹಕವೆಂದು ಹೇಳುತ್ತೇವೆ. ಅವ್ಯಭಿಚರಿತವಾದ ನಿಯಮವನ್ನು ಸಹಕಾರಿ ಎಂದು ಹೇಳುತ್ತೇವೆ. ಕಣ್ಣಿಗೆ ಕಾಣಿಸದ ಸ್ಥಳದಲ್ಲಿ ಅಗ್ನಿಯನ್ನು ತಿಳಿಯಲು ಅಂಜನಾದಿಗಳು ಹೇಗೆ ಸಹಕಾರಿಯಾಗಿವೆಯೋ ಅದರಂತೆ ಅವ್ಯಭಿಚಾರವೂ ಕೂಡ ಸಹಚಾರದರ್ಶನಕ್ಕೆ ಸಹಕಾರಿಯಾಗಿದೆ.

ನ್ಯಾಯದೀಪ – ತಸ್ಯ 'ಸಹಚಾರದರ್ಶನಸ್ಯ' ಇತ್ಯರ್ಥಃ ॥

ಅನುವಾದ – 'ತಸ್ಯ' ಎಂಬ ಪದಕ್ಕೆ ಸಹಚಾರದರ್ಶನಕ್ಕೆ ಎಂದರ್ಥ.

## ಜಲದಲ್ಲಿರುವ ಪಿಪಾಸೋಪಶಾಮಕತ್ವವು ಕೂಡ ಶಕ್ತಿಯ ವಿಷಯದಲ್ಲಿ ಪ್ರಮಾಣ

ತರ್ಕತಾಂಡವ – ಕಿಂಚ ಜಲಸ್ಯ ಜಲತ್ವೇನ ಪಿಪಾಸೋಪಶಾಮಕತ್ವಂ ತಾವದನುಮೀಯತೇ । ತತ್ರ ಚ ನ ತಾವತ್ ಫಲೋಪಧಾನಮನುಮೇಯಮ್ ।

ಬಾಧಾತ್ ವ್ಯಭಿಚಾರಾಚ್ಚ । ಕಿಂ ತು ಪಿಪಾಸೋಪಶಮನಕಾರಣತ್ವಮಾತ್ರಮ್ । ತಚ್ಚ ನ ತಾವದನ್ಯಥಾಸಿದ್ಧನಿಯತಪೂರ್ವವೃತ್ತಿತ್ವರೂಪಮ್ । ತಸ್ಯ ಪೂರ್ವಮೇವ ಜ್ಞಾತತ್ವಾತ್ । ಕಥಮನ್ಯಥಾ ಜಲತ್ವಸ್ಯ ವ್ಯಾಪ್ತಿಗ್ರಹಃ ॥

ಅನುವಾದ– ಮತ್ತು ಜಲದಲ್ಲಿರುವ ಜಲತ್ವಕ್ಕೆ ಪಿಪಾಸೋಪಶಾಮಕತ್ವವನ್ನು ಅನುಮಾನ ಮಾಡಲಾಗುತ್ತಿದೆ. ಇಲ್ಲಿರುವ ಪಿಪಾಸೋಪಶಾಮಕತ್ವವು ಫಲೋಪಧಾನರೂಪವಾಗಿ ಅನುಮೇಯವಾಗಲು ಸಾಧ್ಯವಿಲ್ಲ. ಏಕೆಂದರೆ, ಬಾಧ ಹಾಗೂ ವ್ಯಭಿಚಾರದೋಷಗಳು ಬರುತ್ತವೆ. ಆದ್ದರಿಂದ ಪಿಪಾಸೋಪಶಮನಕಾರಣತ್ವವೆಂಬ ಪಿಪಾಸೋಪಶಾಮಕತ್ವವು ಅನುಮೇಯವೆಂದು ಹೇಳಬೇಕು. ಈ ಕಾರಣತ್ವವು ಕೂಡ ಅನನ್ಯಥಾಸಿದ್ಧನಿಯತ-ಪೂರ್ವವೃತ್ತಿತ್ವರೂಪವಾದದ್ದನ್ನು ವಿವಕ್ಷಿಸಬೇಕು. ಇದು ಮೊದಲೇ ಜ್ಞಾತವಾಗಿದೆ. ಇಲ್ಲದಿದ್ದರೆ ಜಲತ್ವಕ್ಕೆ ವ್ಯಾಪ್ತಿಗ್ರಹಣವಾದರೂ ಹೇಗೆ ಬರಲು ಸಾಧ್ಯವಾಗುತ್ತಿತ್ತು ?

ವಿವರಣೆ – ದಂಡಾದಿಗಳಲ್ಲಿ ಕಾರಣತ್ವವನ್ನು ಅನ್ವಯವ್ಯತಿರೇಕದಿಂದ ಸಾಧಿಸಲಾಯಿತು. ಕೇವಲ ಅನ್ವಯವ್ಯತಿರೇಕ ಮಾತ್ರ ಉಪಯೋಗವಾಗುವುದಿಲ್ಲ. ನಿಯತವಾದ ಅನ್ವಯವ್ಯತಿರೇಕವನ್ನು ಹೇಳಬೇಕು. ಮತ್ತು ಅದು ಅನನ್ಯಥಾಸಿದ್ಧವಾಗಿರಬೇಕು ಎಂದು ಹೇಳಿದಾಗ ಅನಿವಾರ್ಯವಾಗಿ ಕಾರಣತ್ವವನ್ನು ಶಕ್ತಿರೂಪವಂದೇ ಒಪ್ಪಬೇಕಾಗುತ್ತದೆಂದು ಹೇಳಲಾಯಿತು. ಇದೇ ಕಾರಣತ್ವಾನುಮಾನವನ್ನು ಬೇರೆ ರೀತಿಯಲ್ಲಿಯೂ ಕೂಡ ತಿಳಿಯಬಹುದು. ಉದಾ - 'ಇದಂ ಜಲಂ ಪಿಪಾಸೋಪಶಾಮಕಂ ಜಲತ್ವಾತ್' ಎಂದು. ಇಲ್ಲಿ ಜಲತ್ವ ಎಂಬ ಲಿಂಗದಿಂದ ಪಿಪಾಸೋಪಶಾಮಕತ್ವವನ್ನು ಅನುಮಾನ ಮಾಡುತ್ತೇವೆ. ಉಪಶಾಮಕ ಎಂದರೆ ಉಪಶಮನಕ್ಕೆ ಕಾರಣ ಎಂದರ್ಥ. ಈ ಕಾರಣತ್ವವು ಕೂಡ ಶಕ್ತಿರೂಪವೇ ಆಗಬೇಕೆಂದು ಪರಿಶೇಷದಿಂದ ತೋರಿಸುತ್ತಿದ್ದಾರೆ.

ಪಿಪಾಸೋಪಶಾಮಕತ್ವ ಎಂದರೇನು? ಎಂಬುದನ್ನು ಇಲ್ಲಿಯೂ ಕೂಡ ವಿಚಾರ ಮಾಡಬೇಕು. 'ಪಿಪಾಸೋಪಶಮನವನ್ನು ಮಾಡುವಿಕೆ' ಎಂಬ ಫಲೋಪಧಾನರೂಪ-ವಾದದ್ದೆಂದು ಹೇಳಿದರೆ ವ್ಯಭಿಚಾರದೋಷವು ಪ್ರಾಪ್ತವಾಗುತ್ತದೆ. ಜಲತ್ವವಿರುವ ಜಲವೆಲ್ಲವೂ ಪಿಪಾಸೋಪಶಾಮಕ ಆಗಿರುವುದಿಲ್ಲ. ಯಾರಿಗೂ ಸಿಗದ ಸ್ಥಳದಲ್ಲಿರುವ ನೀರು ಬಾಯಾರಿಕೆಯನ್ನು ಪರಿಹರಿಸುವುದಿಲ್ಲ ಎಂದರ್ಥ. ಆದ್ದರಿಂದ ವ್ಯಭಿಚಾರದೋಷವು ಬರುತ್ತದೆ. ಆದ್ದರಿಂದ ಪಿಪಾಸೋಪಶಮನಕ್ಕೆ ಕಾರಣ ಎಂದಷ್ಟೇ ಅನುಮಾನ ಮಾಡಬೇಕು. ಕಾರಣ ಎಂಬುದಕ್ಕೆ ಅನನ್ಯಥಾಸಿದ್ಧನಿಯತಪೂರ್ವವೃತ್ತಿ ಎಂದರ್ಥ. ಅನುಮಾನ ಮಾಡುವ ಮೊದಲು ವ್ಯಾಪ್ತಿಗ್ರಹ ಆಗಿರಬೇಕು. ಪ್ರಕೃತಜಲಕ್ಕೆ ಪಿಪಾಸೋಪಶಮನವನ್ನು ಕುರಿತು

ಕಾರಣತ್ವವು ಅನುಮಾನಕ್ಕಿಂತ ಮೊದಲೇ ತಿಳಿದಿದೆ. 'ಯತ್ರ ಯತ್ರ ಜಲತ್ವಂ ತತ್ರ ತತ್ರ ಪಿಪಾಸೋಪಶಮನಕಾರಣತ್ವಂ' 'ಜಗತ್ತಿನಲ್ಲಿ ಯಾವುದೆಲ್ಲಾ ಜಲವೋ ಅದೆಲ್ಲವೂ ಪಿಪಾಸೋಪಶಮನಕ್ಕೆ ಅನನ್ಯಥಾಸಿದ್ಧವಾದ ನಿಯತಪೂರ್ವವೃತ್ತಿಯಾಗಿರುತ್ತದೆ' ಎಂಬ ಅರಿವು ಅನುಮಾನಕ್ಕಿಂತ ಮೊದಲೇ ಇರುತ್ತದೆ. ಇದನ್ನು ಅನುಮೇಯ ಎಂದು ತಿಳಿಯಲು ಸಾಧ್ಯವಿಲ್ಲ. ಉದಾಹರಣೆ - ಜಾತಿ ಅಥವಾ ವ್ಯಕ್ತಿಯು ಮೊದಲು ತಿಳಿಯದೇ ಇದ್ದಾಗ ಅನುಮೇಯವೆಂದು ಹೇಳಬಹುದು. ಆದರೆ ಕಾರಣತ್ವವಿಷಯದಲ್ಲಿ ಹಾಗೆ ಹೇಳಲು ಸಾಧ್ಯವಿಲ್ಲ. ವಹ್ನಿಯು ಮೊದಲೇ ತಿಳಿದಿದ್ದರೂ ಪರ್ವತಸಂಶ್ಲಿಷ್ಟವಾಗಿ ತಿಳಿದಿಲ್ಲವೆಂದು ಅನುಮಾನವನ್ನು ಮಾಡಬಹುದು. ಆದರೆ ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವವು ಬೇರೆ ಜಲದಲ್ಲಿ ಸಿದ್ಧವಾಗಿದೆ ಈ ಜಲದಲ್ಲಿ ಸಿದ್ಧವಾಗಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಇದರಲ್ಲಿಯೇ ನಿಯತ ಎಂಬ ಪದವು ಸಕಲ ಜಲಗಳಲ್ಲಿಯೂ ಪೂರ್ವವೃತ್ತಿತ್ವವನ್ನು ಸಾಧಾರಣವಾಗಿ ಹೇಳುತ್ತಿದೆ. ಆದ್ದರಿಂದ ಮೊದಲೇ ಸಿದ್ಧವಾದ ವಿಷಯವನ್ನು ಅನುಮಾನವನ್ನು ಸಾಧನೆ ಮಾಡುವುದಾದರೆ ಸಿದ್ಧಸಾಧನತಾದೋಷವು ಪ್ರಾಪ್ತವಾಗುತ್ತದೆ.

## ಶಕ್ತಿವಿಷಯದಲ್ಲಿ ಅನ್ಯಥಾನುಪಪತ್ತಿ

ನ್ಯಾಯದೀಪ – ಜಲಸ್ಯ ಪಿಪಾಸೋಪಶಾಮಕತ್ವಾನುಮಿತ್ಯನ್ಯಥಾನುಪಪತ್ತಿಶ್ಚ ಶಕ್ತೌ ಮಾನಮಿತಿ ಭಾವೇನಾಹ – ಕಿಂಚೇತಿ ॥

ಅನುವಾದ – ಜಲದಲ್ಲಿರುವ ಪಿಪಾಸೋಪಶಾಮಕತ್ವದ ಅನುಮಿತಿಯ ಅನ್ಯಥಾನುಪಪತ್ತಿಯೂ ಕೂಡ ಶಕ್ತಿವಿಷಯದಲ್ಲಿ ಪ್ರಮಾಣವಾಗುತ್ತದೆಂಬ ಅಭಿಪ್ರಾಯದಿಂದ 'ಕಿಂಚ' ಇತ್ಯಾದಿ ಗ್ರಂಥವು ಹೊರಟಿದೆ.

## ಅರ್ಥಾಪತ್ತಿಯು ಅನ್ಯಥಾ ಉಪಪನ್ನವಲ್ಲ

ನ್ಯಾಯದೀಪ – ಅರ್ಥಾಪತ್ತೇರನ್ಯಥೋಪಪತ್ತಿಂ ನಿರಾಹ – ತತ್ರ ಚೇತಿ ॥ ಕಿಂ ತ್ವಿತ್ಯಾದಿನಾ ವಕ್ಷ್ಯಮಾಣಪಕ್ಷಾಪೇಕ್ಷಯಾ ತಾವಚ್ಛಬ್ದಃ ।

ಅನುವಾದ – ಅರ್ಥಾಪತ್ತಿಗೆ ಅನ್ಯಥೋಪಪತ್ತಿಯನ್ನು 'ತತ್ರ ಚ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. 'ಕಿಂತು' ಇತ್ಯಾದಿಯಾಗಿ ಮುಂದೆ ಹೇಳುವ ದೃಷ್ಟಿಯಿಂದ 'ತಾವತ್' ಶಬ್ದವನ್ನು ಪ್ರಯೋಗಿಸಿದ್ದಾರೆ.

ವಿವರಣೆ – ಅರ್ಥಾಪತ್ತಿಪ್ರಮಾಣದಿಂದ ಶಕ್ತಿಯನ್ನು ಸಮರ್ಥನೆ ಮಾಡುತ್ತಿದ್ದಾರೆ. ಜಲದಲ್ಲಿ ಬಾಯಾರಿಕೆಯನ್ನು ಪರಿಹರಿಸುವ ಶಕ್ತಿ ಇದೆ. ಈ ಶಕ್ತಿಯು ಅನುಮೇಯವಾಗಿದೆ. ಈ ಪಿಪಾಸೋಪಶಾಮಕತ್ವವನ್ನು ಫಲೋಪಧಾನರೂಪವಾಗಲೀ, ಪಿಪಾಸೋಪಶಮನಕಾರಣತ್ವ ರೂಪವಾಗಲೀ, ಸಹಕಾರಿವಿರಹಪ್ರಯುಕ್ತಕಾರ್ಯಾಭಾವರೂಪವಾಗಲೀ, ಸ್ವರೂಪ-ಯೋಗ್ಯತಾರೂಪವಾಗಲೀ ಹೇಳಲು ಸಾಧ್ಯವಿಲ್ಲ. ಅಂತಿಮವಾಗಿ ಶಕ್ತಿಯೆಂದೇ ಒಪ್ಪಬೇಕು. ಈ ಅಭಿಪ್ರಾಯವನ್ನು ತಿಳಿಸಲು ತಾವಚ್ಛಬ್ದವನ್ನು ಪ್ರಯೋಗಿಸಿದ್ದಾರೆ.

## ಗ್ರಂಥದಲ್ಲಿ ಹೇಳಿದ ಬಾಧದೋಷ

ನ್ಯಾಯದೀಪ – ಬಾಧಾದಿತಿ ॥ ತತ್ರಾನುಮಿತ್ಯನಂತರಂ ಪ್ರವೃತ್ತಸ್ಯ ಜಲಪಾನಾನಂತರಮೇವೋದನ್ಯ-ನಿವೃತ್ತಿರೂಪಫಲೋಪಲಂಭಾತ್ ಕ್ವಚಿದಪ್ರವೃತ್ತಿಪಾನಾಭಾವಾಯೋರಪಿ ಸಂಭವಾಚ್ಚೇತಿ ಭಾವಃ।

ಅನುವಾದ – 'ಫಲೋಪಧಾನರೂಪವಾದ ಪಿಪಾಸೋಪಶಾಮಕತ್ವವನ್ನು ವಿವಕ್ಷಿಸಿದರೆ ಬಾಧರೂಪ ದೋಷವು ಬರುತ್ತದೆ. ಅನುಮಿತಿ ಬಂದ ಅನಂತರ ಜಲಪಾನದಲ್ಲಿ ಪ್ರವೃತ್ತಿ ಮಾಡುತ್ತಾನೆ. ಅನಂತರವೇ ಬಾಯಾರಿಕೆ ಪರಿಹಾರವೆಂಬ ಫಲವು ಉಪಲಂಭವಾಗುತ್ತದೆ. ಪ್ರವೃತ್ತಿ ಮಾಡದ ಕಾರಣ ಜಲಪಾನವು ಕೂಡ ಇರುವುದಿಲ್ಲ. ಆದ್ದರಿಂದ ಬಾಧ ಬರುತ್ತದೆಂದು ತಿಳಿಯಬೇಕು.

ವಿವರಣೆ – ಗ್ರಂಥದಲ್ಲಿ ಬಾಧದೋಷವನ್ನು ಹೇಳಿದ್ದಾರೆ. ಅದು ಹೀಗೆ -- ಫಲೋಪಧಾನರೂಪವಾದ ಪಿಪಾಸೋಪಶಾಮಕ ಎಂದರೆ ನೀರನ್ನು ಕುಡಿದು ಬಾಯಾರಿಕೆ ಪರಿಹಾರವಾದ ಅವಸ್ಥೆ ಎಂದರ್ಥ. ಇದು ಅನುಮಿತಿಯ ಮೊದಲಿರಲು ಸಾಧ್ಯವೇ ಇಲ್ಲ. ಅನುಮಿತಿ ಬಂದ ಅನಂತರದಲ್ಲಿ ಜಲಪಾನದಲ್ಲಿ ಪ್ರವೃತ್ತಿಮಾಡಿ ತನ್ನ ಬಾಯಾರಿಕೆಯನ್ನು ಪರಿಹಾರ ಮಾಡಿಕೊಳ್ಳುವ ಅವಸ್ಥೆ ಬರುತ್ತದೆ. ಆದ್ದರಿಂದ ಅನುಮಿತಿಯ ಮೊದಲೇ ಫಲೋಪಧಾನರೂಪವಾದ ಪಿಪಾಸೋಪಶಾಮಕತ್ವವನ್ನು ಸಾಧನೆ ಮಾಡಿದರೆ ಪಕ್ಷದಲ್ಲಿ

ಸಾಧ್ಯವು ಬಾರದ ಕಾರಣ ಬಾಧದೋಷವು ಬರುತ್ತದೆಂದು ತಿಳಿಯಬೇಕು. ಇನ್ನು ಕೆಲವೆಡೆ ಜಲವನ್ನು ನೋಡಿದರೂ ಅದನ್ನು ಕುಡಿಯಲು ಪ್ರವೃತ್ತಿ ಮಾಡುವುದಿಲ್ಲ. ಆಗಲೂ ಕೂಡ ಫಲೋಪಧಾನರೂಪವಾದ ಪಿಪಾಸೋಪಶಾಮಕತ್ವವು ಜಲದಲ್ಲಿ ಬರುವುದಿಲ್ಲ. ಹೀಗೆ ಎರಡು ರೀತಿಯಲ್ಲಿ ಬಾಧದೋಷವನ್ನು ತಿಳಿಯಬೇಕು.

## ಗ್ರಂಥದಲ್ಲಿ ಹೇಳಿದ ವ್ಯಭಿಚಾರದೋಷ

ನ್ಯಾಯದೀಪ – ವ್ಯಭಿಚಾರಾದಿತಿ ॥ ಜಲತ್ವೋಪೇತಸ್ಯಸರ್ವಸ್ಯಾಪ್ಯುಕ್ತಫಲೋಪಧಾನೇ ಮಾನಾಭಾವಾತ್‌ಪ್ರತ್ಯಗ್ರೋತ್ಪನ್ನವಿನಷ್ಟಜಲೇ ಫಲೋಪಧಾನಾಭಾವಾಚ್ಚ ವ್ಯಭಿಚಾರ ಇತಿ ಭಾವಃ ॥

ಅನುವಾದ – ಮತ್ತು ಫಲೋಪಧಾನರೂಪವಾದ ಪಿಪಾಸೋಪಶಾಮಕತ್ವವನ್ನು ವಿವಕ್ಷಿಸಿದರೆ ವ್ಯಭಿಚಾರ ದೋಷವು ಕೂಡ ಬರುತ್ತದೆ. ಜಲತ್ವ ಧರ್ಮವುಳ್ಳ ಎಲ್ಲಾ ನೀರು ಬಾಯಾರಿಕೆಯನ್ನು ಪರಿಹರಿಸುತ್ತದೆಂಬ ವಿಷಯದಲ್ಲಿ ಪ್ರಮಾಣವಿಲ್ಲ. ಮತ್ತು ಆಗ ತಾನೇ ಹುಟ್ಟಿ ನಾಶವಾಗುವ ನೀರಿನಲ್ಲಿ ಫಲೋಪಧಾನ ಬರಲು ಸಾಧ್ಯವಿಲ್ಲ. ಆದ್ದರಿಂದ ಜಲತ್ವರೂಪ ಹೇತುವಿದ್ದರೂ ಫಲೋಪಧಾನರೂಪವಾದ ಪಿಪಾಸೋಪಶಾಮಕತ್ವವೆಂಬ ಸಾಧ್ಯವಿಲ್ಲದ ಕಾರಣ ವ್ಯಭಿಚಾರದೋಷವು ಪ್ರಾಪ್ತವಾಗುತ್ತದೆ.

ವಿವರಣೆ – ಜಗತ್ತಿನಲ್ಲಿರುವ ಎಲ್ಲಾ ನೀರು ಬಾಯಾರಿಕೆಯನ್ನು ಪರಿಹರಿಸುವುದಿಲ್ಲ. ಗುಹೆಯಲ್ಲಿರುವ ನೀರಿನಲ್ಲಿ ಫಲೋಪಧಾನರೂಪವಾದ ಪಿಪಾಸೋಪಶಾಮಕತ್ವವನ್ನು ಹೇಳಲು ಹೇಗೆ ಸಾಧ್ಯ ? ಆದರೆ ಅದರಲ್ಲಿಯೂ ಕೂಡ ಜಲತ್ವವೆಂಬ ಹೇತುವಿದೆ. ಆದ್ದರಿಂದ ವ್ಯಭಿಚಾರ ಬರುತ್ತದೆ ಎಂದಭಿಪ್ರಾಯ.

## ಸಹಕಾರಿವಿರಹಪ್ರಯುಕ್ತಕಾರ್ಯಾಭಾವವತ್ವವನ್ನು ಕಾರಣತ್ವವೆಂದು ಹೇಳಲಾಗದು

ತರ್ಕತಾಂಡವ – ನಾಪಿ ಸಹಕಾರಿವಿರಹಪ್ರಯುಕ್ತಕಾರ್ಯಾಭಾವವತ್ವ-

**ರೂಪಮ್ । ಸಹಕಾರಿಶಬ್ದೇನ ಸ್ವೇತರಕಾರಣಸ್ಯೈವ ವಿವಕ್ಷಣೀಯತ್ವೇ- ನಾತ್ಮಾಽಶ್ರಯಾತ್ । ಭಾವಿಸಹಕಾರಿವಿರಹಶಂಕ್ಯಾ ಫಲಾರ್ಥಿನೋ ನಿಷ್ಕಂಪಪ್ರವೃತ್ತ್ಯಯೋಗಾತ್ ।**

ಅನುವಾದ – ಸಹಕಾರಿವಿರಹಕಾರ್ಯಾಭಾವವತ್ತ್ವವನ್ನು ಕಾರಣತ್ವವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಸಹಕಾರಿಶಬ್ದದಿಂದ ಸ್ವೇತರಕಾರಣವನ್ನೇ ವಿವಕ್ಷಿಸಬೇಕು. ಆಗ ಕಾರಣತ್ವದ ಲಕ್ಷಣದಲ್ಲಿ ಕಾರಣ ಎಂಬ ಶಬ್ದವು ಸೇರಿದ್ದರಿಂದ ಆತ್ಮಾಶ್ರಯದೋಷ ಬರುತ್ತದೆ. ಮತ್ತು ಭಾವಿಸಹಕಾರಿವಿರಹಶಂಕೆಯಿಂದ ಕಾರ್ಯಾರ್ಥಿಯಾದವನಿಗೆ ನಿಷ್ಕಂಪಪ್ರವೃತ್ತಿಯೇ ಆಗದಿರಬೇಕಾದೀತು.

ವಿವರಣೆ - ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವವನ್ನು ಕಾರಣವೆಂದು ಹೇಳಿದಂತೆ ಸಹಕಾರಿವಿರಹಪ್ರಯುಕ್ತಕಾರ್ಯಾಭಾವವತ್ತ್ವವನ್ನು ಕೂಡ ಕಾರಣತ್ವವೆಂದು ಮಣಿಕಾರನು ಹೇಳಿದ್ದಾನೆ. ಜಲತ್ವದಿಂದ ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವರೂಪವಾದ ಕಾರಣತ್ವವನ್ನು ಅನುಮೇಯವೆಂದು ಹೇಳಿದರೆ ಸಿದ್ಧಸಾಧನತಾದೋಷವು ಬರಬಹುದು. ಆದರೆ ಸಹಕಾರಿವಿರಹಕಾರ್ಯಾಭಾವವತ್ತ್ವರೂಪವಾದ ಕಾರಣತ್ವವನ್ನು ಅನುಮೇಯವೆಂದು ಹೇಳಿದಾಗ ಸಿದ್ಧಸಾಧನತಾದೋಷ ಬರುವುದಿಲ್ಲ.

ಸಹಕಾರಿವಿರಹಪ್ರಯುಕ್ತಕಾರ್ಯಾಭಾವವತ್ತ್ವವೆಂಬುದರ ಅಭಿಪ್ರಾಯ ಹೀಗಿದೆ -- ಕಾರಣ ಇದ್ದಮೇಲೆ ಕಾರ್ಯ ಆಗಲೇಬೇಕು.ಕೆಲವೊಮ್ಮೆ ಕಾರಣ ಇದ್ದರೂ ಕಾರ್ಯವು ಆಗುವುದಿಲ್ಲ. ಏಕೆಂದರೆ ಸಹಕಾರಿಗಳು ಇರುವುದಿಲ್ಲ. ಆದ್ದರಿಂದ ಸಹಕಾರಿ ಇಲ್ಲ ಎಂಬ ಕಾರಣದಿಂದಲೇ ಕಾರ್ಯವು ಆಗದಿದ್ದರೆ ಅದನ್ನು ಕಾರಣವೆಂದು ತಿಳಿಯಬೇಕು. ಉದಾಹರಣೆ- ಪಾಷಾಣದಿಂದ ದಾಹವು ಹುಟ್ಟುವುದಿಲ್ಲ. ಪಾಷಾಣದಲ್ಲಿರುವ ಕಾರ್ಯಾಭಾವವು ಸಹಕಾರಿವಿರಹಪ್ರಯುಕ್ತವಲ್ಲ. ಹೊರತು ಸ್ವರೂಪಯೋಗ್ಯತಾವಿರಹಪ್ರಯುಕ್ತವಾಗಿದೆ. ಅಗ್ನಿಯಲ್ಲಿ ದಾಹವು ಉಂಟಾಗದಿರುವು ಸಹಕಾರಿವಿರಹಪ್ರಯುಕ್ತವಾಗಿದೆ.

ಸಹಕಾರಿಶಬ್ದಕ್ಕೆ ಸ್ವೇತರಕಾರಣ ಎಂಬರ್ಥವನ್ನೇ ಹೇಳಬೇಕು. ಕಾರಣಶಬ್ದವನ್ನು ಹೇಳದೇ ಸ್ವೇತರ ಎಂದಷ್ಟೇ ಹೇಳಿದರೆ ಕುಲಾಲನ ಮನೆಯಲ್ಲಿರುವ ಘಟದ ಉತ್ಪತ್ತಿಗೆ ಸಂಬಂಧಪಡದ

ಪದಾರ್ಥಗಳೂ ಸಹಕಾರಿಯಾಗಬೇಕಾಗುತ್ತವೆ. ಆದ್ದರಿಂದ ಸ್ವೇತರಕಾರಣ ಎಂಬರ್ಥವನ್ನೇ ಹೇಳಬೇಕು. ಆಗ ಕಾರಣತ್ವದ ಲಕ್ಷಣದಲ್ಲಿ ಪುನಃ ಕಾರಣತ್ವವೇ ಗರ್ಭಿತವಾಗುವುದರಿಂದ ಆತ್ಮಾಶ್ರಯದೋಷವು ಬರುತ್ತದೆ. ಫಲಾರ್ಥಿಯಾದವನಿಗೆ ನಿಷ್ಕಂಪಪ್ರವೃತ್ತಿಯೇ ಆಗದಿರಬೇಕಾದೀತು. ಏಕೆಂದರೆ ಅವನಿಗೆ ಮುಂದೆ ಸಹಕಾರಿ ಇಲ್ಲದೇ ಇರಬಹುದು ಎಂಬ ಭಾವಿಸಹಕಾರಿವಿರಹಶಂಕೆಯು ಹುಟ್ಟುತ್ತದೆ. ಏಕೆಂದರೆ ಕಾರಣತ್ವ ಎಂಬ ಶಬ್ದಕ್ಕೆ ಸಹಕಾರಿ ಇದ್ದರೆ ಕಾರ್ಯವಾಗುತ್ತದೆ. ಸಹಕಾರಿ ಇಲ್ಲದಿದ್ದರೆ ಕಾರ್ಯವಾಗುವುದಿಲ್ಲ ಎಂಬರ್ಥವನ್ನು ಹೇಳುತ್ತಿದ್ದೀರಿ. ಆದ್ದರಿಂದ ಕಾರ್ಯಾರ್ಥಿಯಾದವನಿಗೆ ಕಾರ್ಯದಲ್ಲಿ ಪ್ರವೃತ್ತಿಯು ಆಗದಿರಬೇಕಾದೀತು.

## ಪ್ರಕಾರಾಂತರದಿಂದ ಪಿಪಾಸೋಪಶಮಕಾರಣತ್ವದ ನಿರಾಕರಣೆ

ನ್ಯಾಯದೀಪ– ಪ್ರಕಾರಾಂತರೇಣ ಪಿಪಾಸೋಪಶಮಕಾರಣತ್ವಸ್ವರೂಪಮಾಶಂಕ್ಯ ನಿರಾಹ – ನಾಪೀತಿ ॥ ಸಹಕಾರಿವಿರಹಪ್ರಯುಕ್ತಃ ಸಹಕಾರಿವಿರಹೇಣೋತ್ತರಸಮಯಸಂಬಂಧ-ವಿಶಿಷ್ಟತಯಾ ಜನ್ಯೋ ಯಸ್ತೃಪ್ತಿರೂಪಕಾರ್ಯಸ್ಯ ಪ್ರಾಗಭಾವಃ ತದ್ವತ್ತ್ವಂ ಪಿಪಾಸೋಪಶಮನ- ಕಾರಣತ್ವಮಿತ್ಯರ್ಥಃ।

ಅನುವಾದ– ಮತ್ತೊಂದು ಪ್ರಕಾರದಿಂದ ಪಿಪಾಸೋಪಶಮಕಾರಣತ್ವದ ಸ್ವರೂಪವನ್ನು ಆಶಂಕಿಸಿ ನಿರಾಕರಣೆ ಮಾಡಲು 'ನಾಪಿ' ಇತ್ಯಾದಿ ಗ್ರಂಥವು ಹೊರಟಿದೆ. 'ಸಹಕಾರಿವಿರಹಪ್ರಯುಕ್ತಕಾರ್ಯಾ-ಭಾವವತ್ತ್ವಂ' ಎಂಬುದಕ್ಕೆ ಹೀಗೆ ಅರ್ಥ - 'ಸಹಕಾರಿವಿರಹಪ್ರಯುಕ್ತಕಾರ್ಯಾಭಾವಃ ಯಃ ಕಾರ್ಯಾಭಾವಃ ತದ್ವತ್ತ್ವಂ' ಎಂದು. ಸಹಕಾರಿವಿರಹದಿಂದ ಉತ್ತರಸಮಯಸಂಬಂಧವಿಶಿಷ್ಟತಯಾ ಜನ್ಯವಾದ ಯಾವ ತೃಪ್ತಿರೂಪವಾದ ಕಾರ್ಯವಿದೆಯೋ ಅದರ ಯಾವ ಪ್ರಾಗಭಾವವಿದೆಯೋ ತದ್ವತ್ತ್ವವೇ ಪಿಪಾಸೋಪಶಮನಕಾರಣತ್ವ ಎಂದು ಕರೆಸಿಕೊಳ್ಳುತ್ತದೆ.

ವಿವರಣೆ – ಸಹಕಾರಿವಿರಹಪ್ರಯುಕ್ತಕಾರ್ಯಾಭಾವವತ್ತ್ವವನ್ನು ಕಾರಣತ್ವವೆಂದು ಗ್ರಂಥದಲ್ಲಿ ಹೇಳಿರುತ್ತಾರೆ. ಇಲ್ಲಿರುವ ಕಾರ್ಯಾಭಾವ ಎಂದರೆ ಯಾವ ಅಭಾವವನ್ನು ವಿವಕ್ಷಿಸಬೇಕು. ಪ್ರಾಗಭಾವವನ್ನೋ, ಪ್ರಧ್ವಂಸಾಭಾವವನ್ನೋ ಅಥವಾ ಅತ್ಯಂತಾಭಾವವನ್ನೋ? ಈ

ಮೂರರಲ್ಲಿ ಪ್ರಾಗಭಾವವನ್ನೇ ವಿವಕ್ಷಿಸಬೇಕು. ಆಗ ಸಹಕಾರಿವಿರಹಪ್ರಯುಕ್ತವಾಗಿ ಕಾರ್ಯಪ್ರಾಗಭಾವವನ್ನು ಜನ್ಯ ಎಂದು ಹೇಳಲು ಹೇಗೆ ಸಾಧ್ಯವಾಗುತ್ತದೆ? ಪ್ರಾಗಭಾವವು ಅನಾದಿಯಾಗಿದೆ ಎಂಬ ಪ್ರಶ್ನೆಗೆ ನ್ಯಾಯದೀಪದಲ್ಲಿ ಸುಂದರವಾಗಿ ಉತ್ತರಿಸಿದ್ದಾರೆ. ದಂಡದಿಂದ ಘಟವು ಹುಟ್ಟಿ ಪ್ರಾಗಭಾವವು ನಾಶವಾಗಬೇಕು. ಹೀಗಿರುವಾಗ ಘಟವು ಹುಟ್ಟುವುದೇ ಇಲ್ಲ. ಏಕೆಂದರೆ ಚಕ್ರ ಎಂಬ ಸಹಕಾರಿ ಇಲ್ಲದ್ದರಿಂದ. ಆ ಸಂದರ್ಭದಲ್ಲಿ ಘಟದ ಪ್ರಾಗಭಾವವು ಸಹಕಾರಿ ಇಲ್ಲದ ಕಾರಣದಿಂದ ಉತ್ತರಸಮಯಸಂಬಂಧದಿಂದ ವಿಶಿಷ್ಟವಾಯಿತು. ಅನಾದಿಕಾಲದಿಂದ ಇರುವ ಪ್ರಾಗಭಾವವು ಸಹಕಾರಿ ಇಲ್ಲದಾಗ ಮಾತ್ರ ಉತ್ತರಸಮಯಸಂಬಂಧದಿಂದ ವಿಶಿಷ್ಟವಾಗುತ್ತದೆ. ಸಹಕಾರಿ ಇದ್ದರೆ ಆಗ ಪ್ರತಿಯೋಗಿಯಾದ ಘಟವು ಹುಟ್ಟುವುದರಿಂದ ತಾನು ನಾಶವಾಗಿ ಉತ್ತರಸಮಯಸಂಬಂಧದಿಂದ ವಿಶಿಷ್ಟವಾಗುತ್ತಿರಲಿಲ್ಲ. ಈ ಸಂದರ್ಭದಲ್ಲಿ ಪ್ರಾಗಭಾವವನ್ನು ಜನ್ಯವೆಂದು ಹೇಳಬಹುದು. ಹೇಗೆಂದರೆ ಸಹಕಾರಿವಿರಹದಿಂದ ಉತ್ತರಸಮಯಸಂಬಂಧವಿಶಿಷ್ಟವಾಗಿರುವುದರಿಂದಲೇ ಜನ್ಯವಾಯಿತು. ಶುದ್ಧವಾದ ಪ್ರಾಗಭಾವವು ಅನಾದಿಯಾಗಿದ್ದರೂ ಕೂಡ ಉತ್ತರಸಮಯಸಂಬಂಧವಿಶಿಷ್ಟವಾದ ಪ್ರಾಗಭಾವವು ಜನ್ಯವೆಂದು ಹೇಳಬಹುದು.

ಪ್ರಕೃತದಲ್ಲಿ ಜಲ ಎಂಬ ಕಾರಣದಿಂದ ಪಿಪಾಸೋಪಶಮನ ಎಂಬ ಕಾರ್ಯವು ಆಗುವುದಿಲ್ಲ. ಏಕೆಂದರೆ, ಸಹಕಾರಿವಿರಹದಿಂದ. ಆದ್ದರಿಂದ ಪಿಪಾಸೋಪಶಮನ ಕಾರ್ಯದ ಪ್ರಾಗಭಾವವು ಉತ್ತರಸಮಯಸಂಬಂಧದಿಂದ ವಿಶಿಷ್ಟವಾಗುತ್ತದೆ. ಹೀಗೆ ಸಹಕಾರಿ ವಿರಹಪ್ರಯುಕ್ತಕಾರ್ಯಾಭಾವವತ್ತ್ವ ಎಂಬ ಕಾರಣತ್ವಕ್ಕೆ ಸಹಕಾರಿವಿರಹಪ್ರಯುಕ್ತವಾದ ಉತ್ತರಸಂಬಂಧವಿಶಿಷ್ಟತಯಾ ಕಾರ್ಯಪ್ರಾಗಭಾವವತ್ತ್ವಂ ಎಂಬರ್ಥವನ್ನು ವಿವಕ್ಷಿಸಿ ಜಲರೂಪಕಾರಣದಲ್ಲಿ ಇರುವುದಿಲ್ಲವೆಂದು ತಿಳಿಯಬೇಕು.

## ಕಾರಣತ್ವನಿರ್ವಚನ ಮಾಡಿದರೆ ಆತ್ಮಾಶ್ರಯ

**ತರ್ಕತಾಂಡವ – ತಾವತಾ ತ್ವದುಕ್ತನಿರ್ವಚನಸ್ಯ ಸಹಕಾರಿವಿರಹಃ ಕಾರ್ಯಪ್ರಾಗಭಾವಸ್ಯೋತ್ತರಕಾಲಸಂಬಂಧಕಾರಣಮಿತ್ಯೇತದರ್ಥಕತಯಾ ಕಾರಣತ್ವಮಜ್ಞಾತ್ವಾ ಕಾರ್ಯಾಭಾವಸ್ಯ ಸಹಕಾರಿವಿರಹಪ್ರಯುಕ್ತತ್ವಸ್ಯ ಜ್ಞಾತುಮಶಕ್ಯತಯಾ ಆತ್ಮಾಶ್ರಯಾಚ್ಚ।**

ಅನುವಾದ– ಕಾರಣತ್ವದ ನಿರ್ವಚನವನ್ನು ನೀನು ಹೀಗೆ ಮಾಡುವಿ. ಕಾರ್ಯಪ್ರಾಗಭಾವಕ್ಕೆ ಸಹಕಾರಿವಿರಹ ಎಂದರೆ ಉತ್ತರಕಾಲಸಂಬಂಧಕಾರಣಂ ಎಂಬರ್ಥವನ್ನು ಹೇಳಿದಾಗ ಕಾರಣತ್ವವನ್ನು ತಿಳಿಯದೇ ಕಾರ್ಯಾಭಾವವು ಸಹಕಾರಿವಿರಹಪ್ರಯುಕ್ತವೆಂದು ತಿಳಿಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಕಾರಣತ್ವಲಕ್ಷಣದಲ್ಲಿಯೇ ಕಾರಣತ್ವವು ಸೇರಿದ್ದರಿಂದ ಆತ್ಮಾಶ್ರಯದೋಷವು ಬರುತ್ತದೆ.

ವಿವರಣೆ– ಕಾರಣತ್ವಲಕ್ಷಣದಲ್ಲಿ ನಿನಗೆ ತಿಳಿಯದಂತೆ ಕಾರಣತ್ವವನ್ನು ಪುನಃ ಸೇರಿಸುತ್ತಿರುವಿ. ಆದ್ದರಿಂದ ಆತ್ಮಾಶ್ರಯದೋಷ ನಿನಗೆ ತಪ್ಪಿದ್ದಲ್ಲ. ಏಕೆಂದರೆ ಕಾರ್ಯಪ್ರಾಗಭಾವವು ಸಹಕಾರಿ ವಿರಹದಿಂದ ಜನ್ಯವಾಗಿದೆ ಎಂದು ಹೇಳಬೇಕು. ಪ್ರಾಗಭಾವವು ಅನಾದಿಯಾಗಿದ್ದರೂ ಕೂಡ ಉತ್ತರಸಮಯಸಂಬಂಧವಿಶಿಷ್ಟವಾದ ಪ್ರಾಗಭಾವವು ಜನ್ಯವಾಗಬಹುದು. ಉತ್ತರಸಮಯಸಂಬಂಧವು ಜನ್ಯವಾದ್ದರಿಂದ ವಿಶೇಷಣಪ್ರಯುಕ್ತವಾಗಿ ವಿಶಿಷ್ಟವು ಜನ್ಯವಾಗುತ್ತದೆ. ಇದಕ್ಕೆ ಜನಕವಾದದ್ದು ಸಹಕಾರಿವಿರಹ. ಆದ್ದರಿಂದ ಪ್ರಾಗಭಾವಕ್ಕೆ ಸಹಕಾರಿಯು ಕಾರಣ ಎಂದು ಹೇಳಿದಂತಾಯಿತು. ಹೀಗೆ ಕಾರಣತ್ವದ ಲಕ್ಷಣದಲ್ಲಿ ಕಾರಣತ್ವವು ಪ್ರವಿಷ್ಟವಾದ್ದರಿಂದ ಯಥಾಪ್ರಕಾರವಾಗಿ ಆತ್ಮಾಶ್ರಯದೋಷವು ತಪ್ಪಿದ್ದಲ್ಲ.

## ಕಾರಣತ್ವಲಕ್ಷಣಕ್ಕೆ ಆತ್ಮಾಶ್ರಯದೋಷ

ನ್ಯಾಯದೀಪ – ತಾವತಾ ತ್ವದುಕ್ತನಿರ್ವಚನಸ್ಯೇತಿ । ಇತ್ಯೇತದರ್ಥಕತಯಾ ಇತ್ಯನ್ವಯಃ । ಆತ್ಮಾಶ್ರಯೇತಿ ॥ ಕಾರಣತ್ವರೂಪನಿರ್ವಚನೇ ಕಾರಣಪದಪ್ರವೇಶಾದಿತ್ಯರ್ಥಃ ।

ಅನುವಾದ – 'ತಾವತಾ ತ್ವದುಕ್ತನಿರ್ವಚನಸ್ಯ' ಎಂಬುದಕ್ಕೆ 'ಇತ್ಯೇತದರ್ಥಕತಯಾ' ಎಂಬಲ್ಲಿ ಅನ್ವಯ. 'ಆತ್ಮಾಶ್ರಯ' ಎಂದರೆ 'ಕಾರಣತ್ವರೂಪನಿರ್ವಚನದಲ್ಲಿ ಕಾರಣಪದವು ಪ್ರವಿಷ್ಟವಾಗಿರುವುದರಿಂದ' ಎಂದರ್ಥ.

## ಕಾರಣತ್ವಲಕ್ಷಣಕ್ಕೆ ಪ್ರಾಗಭಾವದಲ್ಲಿ ಅವ್ಯಾಪ್ತಿ

ತರ್ಕತಾಂಡವ – ಪ್ರಾಗಭಾವೋಽವ್ಯಾಪ್ತೇಶ್ಚ । ಸಹಕಾರಿಸಾಕಲ್ಯಸಮವಧಾನಾ-ದಶಾಯಾಂ ದಂಡಾದೇರಹೇತುತ್ವಾಪಾತಾಚ್ಚ ।

ಅನುವಾದ – ಮತ್ತು ಸಹಕಾರಿವಿರಹಪ್ರಯುಕ್ತಕಾರ್ಯಭಾವವತ್ತ್ವಂ ಎಂಬ ಕಾರಣತ್ವದ ಲಕ್ಷಣವು ಪ್ರಾಗಭಾವವೆಂಬ ಕಾರಣದಲ್ಲಿ ಬರುತ್ತಿಲ್ಲವಾದ್ದರಿಂದ ಅವ್ಯಾಪ್ತಿದೋಷವು ಪ್ರಾಪ್ತವಾಗುತ್ತದೆ. ಮತ್ತು ಸಕಲವಿಧವಾದ ಸಹಕಾರಿಗಳಿರುವಾಗ ದಂಡಾದಿಗಳು ಹೇತುವಲ್ಲ ಎಂದಾಗಬೇಕಾಗುತ್ತದೆ.

ವಿವರಣೆ – ಸಕಲಪ್ರಾಗಭಾವಗಳು ಪ್ರತಿಯೋಗಿಗೆ ಕಾರಣವೆಂದು ಎಲ್ಲರೂ ಒಪ್ಪಿದ್ದಾರೆ. ಆದ್ದರಿಂದ ಪ್ರಾಗಭಾವದಲ್ಲಿಯೂ ಕೂಡ ಈ ಕಾರಣತ್ವದ ಲಕ್ಷಣ ಬರಬೇಕು. ಆದರೆ ಸಹಕಾರಿವಿರಹಪ್ರಯುಕ್ತಕಾರ್ಯಪ್ರಾಗಭಾವವತ್ತ್ವವನ್ನು ಪ್ರಾಗಭಾವದಲ್ಲಿ ಹೇಳಲು ಸಾಧ್ಯವಿಲ್ಲ. ಘಟವುಳ್ಳದ್ದು ದಂಡವುಳ್ಳದ್ದು ಎಂದು ಹೇಳಲು ಹೇಗೆ ಸಾಧ್ಯವಿಲ್ಲವೋ ಅದರಂತೆ ಪ್ರಾಗಭಾವವು ಪ್ರಾಗಭಾವವುಳ್ಳದ್ದು ಎಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಅವ್ಯಾಪ್ತಿದೋಷವು ಬರುತ್ತದೆ.

ಮತ್ತು ಸಹಕಾರಿ ಇಲ್ಲದಿರುವುದು ಕಾರಣ ಆಗುವುದಾದರೆ ಸಹಕಾರವಿರುವುದು ಕಾರಣ ಅಲ್ಲ ಎಂದಾಗಬೇಕಾದೀತು.

## ಘಟಪ್ರಾಗಭಾವದಲ್ಲಿ ಅವ್ಯಾಪ್ತಿ

ನ್ಯಾಯದೀಪ – ಪ್ರಾಗಭಾವ ಇತಿ ॥ ಘಟಾದಿಕಾರಣೀಭೂತಪ್ರಾಗಭಾವಸ್ಯ ಪ್ರಾಗಭಾವಾಂತರಾಭಾವಾತ್ ತತ್ರ ಸಹಕಾರಿವಿರಹಪ್ರಯುಕ್ತಘಟ-ಪ್ರಾಗಭಾವರೂಪಕಾರ್ಯಾಭಾವವತ್ತ್ವರೂಪತ್ವದುಕ್ತಕಾರಣತ್ವಾಭಾವಾತ್ ಘಟಾದಿಪ್ರಾಗಭಾವೇಽವ್ಯಾಪ್ತೇರಿತ್ಯರ್ಥಃ॥

ಅನುವಾದ – ಘಟಾದಿಗಳಿಗೆ ಕಾರಣವಾದ ಪ್ರಾಗಭಾವಕ್ಕೆ ಮತ್ತೊಂದು ಪ್ರಾಗಭಾವ ಇರುವುದಿಲ್ಲ. ಆದ್ದರಿಂದ ಸಹಕಾರಿವಿರಹಘಟಪ್ರಾಗಭಾವರೂಪಕಾರ್ಯಾಭಾವವತ್ತ್ವವನ್ನು ಘಟಪ್ರಾಗಭಾವದಲ್ಲಿ ಹೇಳಲಿಕ್ಕೆ ಸಾಧ್ಯವಿಲ್ಲ. ಆದ್ದರಿಂದ ಕಾರಣತ್ವಲಕ್ಷಣವು ಘಟಪ್ರಾಗಭಾವದಲ್ಲಿ ಬರಲಿಲ್ಲವೆಂದು ಅವ್ಯಾಪ್ತಿದೋಷವು ಪ್ರಾಪ್ತವಾಗುತ್ತದೆ.

ಅನುವಾದ- ಕಾರಣತ್ವದ ನಿರ್ವಚನವನ್ನು ನೀನು ಹೀಗೆ ಮಾಡುವಿ. ಕಾರ್ಯಪ್ರಾಗಭಾವಕ್ಕೆ ಸಹಕಾರಿವಿರಹ ಎಂದರೆ ಉತ್ತರಕಾಲಸಂಬಂಧಕಾರಣಂ ಎಂಬರ್ಥವನ್ನು ಹೇಳಿದಾಗ ಕಾರಣತ್ವವನ್ನು ತಿಳಿಯದೇ ಕಾರ್ಯಾಭಾವವು ಸಹಕಾರಿವಿರಹಪ್ರಯುಕ್ತವೆಂದು ತಿಳಿಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಕಾರಣತ್ವಲಕ್ಷಣದಲ್ಲಿಯೇ ಕಾರಣತ್ವವು ಸೇರಿದ್ದರಿಂದ ಆತ್ಮಾಶ್ರಯದೋಷವು ಬರುತ್ತದೆ.

ವಿವರಣೆ – ಕಾರಣತ್ವಲಕ್ಷಣದಲ್ಲಿ ನಿನಗೆ ತಿಳಿಯದಂತೆ ಕಾರಣತ್ವವನ್ನು ಪುನಃ ಸೇರಿಸುತ್ತಿರುವಿ. ಆದ್ದರಿಂದ ಆತ್ಮಾಶ್ರಯದೋಷ ನಿನಗೆ ತಪ್ಪಿದ್ದಲ್ಲ. ಏಕೆಂದರೆ ಕಾರ್ಯಪ್ರಾಗಭಾವವು ಸಹಕಾರಿ ವಿರಹದಿಂದ ಜನ್ಯವಾಗಿದೆ ಎಂದು ಹೇಳಬೇಕು. ಪ್ರಾಗಭಾವವು ಅನಾದಿಯಾಗಿದ್ದರೂ ಕೂಡ ಉತ್ತರಸಮಯಸಂಬಂಧವಿಶಿಷ್ಟವಾದ ಪ್ರಾಗಭಾವವು ಜನ್ಯವಾಗಬಹುದು. ಉತ್ತರಸಮಯಸಂಬಂಧವು ಜನ್ಯವಾದ್ದರಿಂದ ವಿಶೇಷಣಪ್ರಯುಕ್ತವಾಗಿ ವಿಶಿಷ್ಟವು ಜನ್ಯವಾಗುತ್ತದೆ. ಇದಕ್ಕೆ ಜನಕವಾದದ್ದು ಸಹಕಾರಿವಿರಹ. ಆದ್ದರಿಂದ ಪ್ರಾಗಭಾವಕ್ಕೆ ಸಹಕಾರಿಯು ಕಾರಣ ಎಂದು ಹೇಳಿದಂತಾಯಿತು. ಹೀಗೆ ಕಾರಣತ್ವದ ಲಕ್ಷಣದಲ್ಲಿ ಕಾರಣತ್ವವು ಪ್ರವಿಷ್ಟವಾದ್ದರಿಂದ ಯಥಾಪ್ರಕಾರವಾಗಿ ಆತ್ಮಾಶ್ರಯದೋಷವು ತಪ್ಪಿದ್ದಲ್ಲ.

## ಕಾರಣತ್ವಲಕ್ಷಣಕ್ಕೆ ಆತ್ಮಾಶ್ರಯದೋಷ

ನ್ಯಾಯದೀಪ – ತಾವತಾ ತ್ವದುಕ್ತನಿರ್ವಚನಸ್ಯೇತಿ । ಇತ್ಯೇತದರ್ಥಕತಯಾ ಇತ್ಯನ್ವಯಃ । ಆತ್ಮಾಶ್ರಯೇತಿ ॥ ಕಾರಣತ್ವರೂಪನಿರ್ವಚನೇ ಕಾರಣಪದಪ್ರವೇಶಾದಿತ್ಯರ್ಥಃ ।

ಅನುವಾದ – 'ತಾವತಾ ತ್ವದುಕ್ತನಿರ್ವಚನಸ್ಯ' ಎಂಬುದಕ್ಕೆ 'ಇತ್ಯೇತದರ್ಥಕತಯಾ' ಎಂಬಲ್ಲಿ ಅನ್ವಯ. 'ಆತ್ಮಾಶ್ರಯ' ಎಂದರೆ 'ಕಾರಣತ್ವರೂಪನಿರ್ವಚನದಲ್ಲಿ ಕಾರಣಪದವು ಪ್ರವಿಷ್ಟವಾಗಿರುವುದರಿಂದ' ಎಂದರ್ಥ.

## ಕಾರಣತ್ವಲಕ್ಷಣಕ್ಕೆ ಪ್ರಾಗಭಾವದಲ್ಲಿ ಅವ್ಯಾಪ್ತಿ

ತರ್ಕತಾಂಡವ – ಪ್ರಾಗಭಾವೋಽವ್ಯಾಪ್ತೇಶ್ಚ । ಸಹಕಾರಿಸಾಕಲ್ಯಸಮವಧಾನಾ-ದಶಾಯಾಂ ದಂಡಾದೇರಹೇತುತ್ವಾಪಾತಾಚ್ಚ ।

ಅನುವಾದ – ಮತ್ತು ಸಹಕಾರಿವಿರಹಪ್ರಯುಕ್ತಕಾರ್ಯಭಾವವತ್ತ್ವಂ ಎಂಬ ಕಾರಣತ್ವದ ಲಕ್ಷಣವು ಪ್ರಾಗಭಾವವೆಂಬ ಕಾರಣದಲ್ಲಿ ಬರುತ್ತಿಲ್ಲವಾದ್ದರಿಂದ ಅವ್ಯಾಪ್ತಿದೋಷವು ಪ್ರಾಪ್ತವಾಗುತ್ತದೆ. ಮತ್ತು ಸಕಲವಿಧವಾದ ಸಹಕಾರಿಗಳಿರುವಾಗ ದಂಡಾದಿಗಳು ಹೇತುವಲ್ಲ ಎಂದಾಗಬೇಕಾಗುತ್ತದೆ.

ವಿವರಣೆ – ಸಕಲಪ್ರಾಗಭಾವಗಳು ಪ್ರತಿಯೋಗಿಗೆ ಕಾರಣವೆಂದು ಎಲ್ಲರೂ ಒಪ್ಪಿದ್ದಾರೆ. ಆದ್ದರಿಂದ ಪ್ರಾಗಭಾವದಲ್ಲಿಯೂ ಕೂಡ ಈ ಕಾರಣತ್ವದ ಲಕ್ಷಣ ಬರಬೇಕು. ಆದರೆ ಸಹಕಾರಿವಿರಹಪ್ರಯುಕ್ತಕಾರ್ಯಪ್ರಾಗಭಾವವತ್ತ್ವವನ್ನು ಪ್ರಾಗಭಾವದಲ್ಲಿ ಹೇಳಲು ಸಾಧ್ಯವಿಲ್ಲ. ಘಟವುಳ್ಳದ್ದು ದಂಡವುಳ್ಳದ್ದು ಎಂದು ಹೇಳಲು ಹೇಗೆ ಸಾಧ್ಯವಿಲ್ಲವೋ ಅದರಂತೆ ಪ್ರಾಗಭಾವವು ಪ್ರಾಗಭಾವವುಳ್ಳದ್ದು ಎಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಅವ್ಯಾಪ್ತಿದೋಷವು ಬರುತ್ತದೆ.

ಮತ್ತು ಸಹಕಾರಿ ಇಲ್ಲದಿರುವುದು ಕಾರಣ ಆಗುವುದಾದರೆ ಸಹಕಾರವಿರುವುದು ಕಾರಣ ಅಲ್ಲ ಎಂದಾಗಬೇಕಾದೀತು.

## ಘಟಪ್ರಾಗಭಾವದಲ್ಲಿ ಅವ್ಯಾಪ್ತಿ

ನ್ಯಾಯದೀಪ – ಪ್ರಾಗಭಾವ ಇತಿ ॥ ಘಟಾದಿಕಾರಣೀಭೂತಪ್ರಾಗಭಾವಸ್ಯ ಪ್ರಾಗಭಾವಾಂತರಾಭಾವಾತ್ ತತ್ರ ಸಹಕಾರಿವಿರಹಪ್ರಯುಕ್ತಘಟ-ಪ್ರಾಗಭಾವರೂಪಕಾರ್ಯಾಭಾವವತ್ತ್ವರೂಪತ್ವದುಕ್ತಕಾರಣತ್ವಾಭಾವಾತ್ ಘಟಾದಿಪ್ರಾಗಭಾವೇಽವ್ಯಾಪ್ತೇರಿತ್ಯರ್ಥಃ॥

ಅನುವಾದ–ಘಟಾದಿಗಳಿಗೆ ಕಾರಣವಾದ ಪ್ರಾಗಭಾವಕ್ಕೆ ಮತ್ತೊಂದು ಪ್ರಾಗಭಾವ ಇರುವುದಿಲ್ಲ. ಆದ್ದರಿಂದ ಸಹಕಾರಿವಿರಹಘಟಪ್ರಾಗಭಾವರೂಪಕಾರ್ಯಾಭಾವವತ್ತ್ವವನ್ನು ಘಟಪ್ರಾಗಭಾವದಲ್ಲಿ ಹೇಳಲಿಕ್ಕೆ ಸಾಧ್ಯವಿಲ್ಲ. ಆದ್ದರಿಂದ ಕಾರಣತ್ವಲಕ್ಷಣವು ಘಟಪ್ರಾಗಭಾವದಲ್ಲಿ ಬರಲಿಲ್ಲವೆಂದು ಅವ್ಯಾಪ್ತಿದೋಷವು ಪ್ರಾಪ್ತವಾಗುತ್ತದೆ.

## ದಂಡಾದಿಗಳು ಹೇತುವಾಗದಿರಬೇಕಾದೀತು

ನ್ಯಾಯದೀಪ – ದಂಡಾದೇರಹೇತುತ್ವೇತಿ ॥ ತದಾ ಪ್ರಾಗಭಾವಸತ್ವೇಪಿ ತಸ್ಯ ಸಹಕಾರಿವಿರಹಪ್ರಯುಕ್ತತ್ವಾಭಾವಾತ್ । ನ ಚೇಷ್ಟಾಪತ್ತಿಃ । ಸರ್ವದಾ ತತ್ರ ಹೇತುತ್ವವ್ಯವಹಾರಾದಿತಿ ಭಾವಃ।

ಅನುವಾದ – 'ದಂಡಾದೇರಹೇತುತ್ವಾಪಾತಾಚ್ಚ' ಎಂಬುದರ ಅಭಿಪ್ರಾಯ ಹೀಗಿದೆ - ದಂಡಾದಿಗಳಿರುವ ದಶೆಯಲ್ಲಿ ಪ್ರಾಗಭಾವವಿದ್ದರೂ ಕೂಡ ಅದರಲ್ಲಿ ಸಹಕಾರಿವಿರಹಪ್ರಯುಕ್ತತ್ವವು ಇರುವುದಿಲ್ಲ. ಆ ಕ್ಷಣದಲ್ಲಿ ದಂಡವು ಕಾರಣವಲ್ಲವೆಂಬುದು ಇಷ್ಟಾಪತ್ತಿ ಎಂದು ಹೇಳುತ್ತೇವೆ ಎಂದು ಹೇಳಲಾಗದು. ಎಲ್ಲರೂ ಆ ಕ್ಷಣದಲ್ಲಿ ದಂಡವನ್ನು ಹೇತುವೆಂದೇ ವ್ಯವಹರಿಸುತ್ತಾರೆ.

## ಶಕ್ತಿರೂಪ ಕಾರಣತ್ವವು ಅನುಮೇಯ

ತರ್ಕತಾಂಡವ–ತಸ್ಮಾದತೀಂದ್ರಿಯಂಶಕ್ತಿರೂಪಂಕಾರಣತ್ವಮೇವಾನುಮೇಯಮಿತಿ ಶಕ್ತಿಸಿದ್ಧಿಃ ॥

ಏತದಪ್ಯುಕ್ತಂ ಸುಧಾಯಾಂ – 'ತತೋಽತೀಂದ್ರಿಯಮೇವ' ಇತ್ಯಾದಿನಾ ॥

ಅನುವಾದ – ಆದ್ದರಿಂದ ಶಕ್ತಿರೂಪವಾದ ಕಾರಣತ್ವವೇ ಅನುಮೇಯವೆಂದು ಅಂಗೀಕರಿಸಬೇಕು. ಹೀಗೆ ಶಕ್ತಿ ಎಂಬ ಪದಾರ್ಥವು ಸಿದ್ಧವಾಗಿದೆ. ಇದನ್ನೂ ಕೂಡ ನ್ಯಾಯಸುಧೆಯಲ್ಲಿ 'ತತೋಽತೀಂದ್ರಿಯಮೇವ' ಎಂಬುದಾಗಿ ಹೇಳಿದ್ದಾರೆ.

ನ್ಯಾಯದೀಪ – ತಸ್ಮಾದಿತಿ ॥ 'ಪಿಪಾಸೋಪಶಮನಕಾರಣತ್ವಸ್ಯ ಶಕ್ತಿತೋಽನ್ಯಸ್ಯಾಯೋಗಾತ್' ಇತ್ಯರ್ಥಃ॥

'ತಸ್ಮಾತ್' ಎಂಬುದಕ್ಕೆ 'ಪಿಪಾಸೋಪಶಮನಕಾರಣತ್ವವು ಶಕ್ತಿಗಿಂತ ಬೇರೆ ಸ್ವರೂಪವೆಂದು ಹೇಳಲು ಸಾಧ್ಯವಿಲ್ಲದ ಕಾರಣ' ಎಂದರ್ಥ.

# ಪ್ರಶ್ನೋತ್ತರಗಳು

ಪ್ರಶ್ನೆ - ಶಕ್ತಿಯನ್ನು ಸಾಧಿಸುವ ಎರಡನೆಯ ಅರ್ಥಾಪತ್ತಿ ಯಾವುದು?

ಉತ್ತರ - ಜಲತ್ವೇನ ಲಿಂಗೇನ ಪಿಪಾಸೋಪಶಾಮಕತ್ವಂ ಅನುಮೇಯಂ' ಎಂಬುದರ ಅನ್ಯಥಾನುಪಪತ್ತಿಯಿಂದ ಶಕ್ತಿಯು ಸಿದ್ಧವಾಗುತ್ತದೆ. ಇದೇ ಎರಡನೆಯ ಅರ್ಥಾಪತ್ತಿ.

ಪ್ರಶ್ನೆ - ಜಲತ್ವಲಿಂಗದಿಂದ ಪಿಪಾಸೋಪಶಾಮಕತ್ವವನ್ನು ಅನುಮಾನ ಮಾಡುವುದು ಹೇಗೆ?

ಉತ್ತರ - ಜಲಂ ಪಿಪಾಸೋಪಶಾಮಕಂ ಜಲತ್ವಾತ್ ಎಂದು.

ಪ್ರಶ್ನೆ - ಇದರಿಂದ ಶಕ್ತಿ ಹೇಗೆ ಸಿದ್ಧವಾಗುತ್ತದೆ?

ಉತ್ತರ - ಪಿಪಾಸೋಪಶಾಮಕತ್ವವನ್ನು ಅನಿವಾರ್ಯವಾಗಿ ಅತೀಂದ್ರಿಯವಾದ ಶಕ್ತಿಸ್ವರೂಪವೆಂದೇ ಹೇಳಬೇಕು.

ಪ್ರಶ್ನೆ - ಶಕ್ತಿಯೆಂದು ಹೇಳಬೇಕಾಗಿಲ್ಲ. ಬಾಯಾರಿಕೆಯನ್ನು ಪರಿಹರಿಸಲು ಕಾರಣವಾಗಿದೆ ಎಂದು ಹೇಳಿದರೆ ಸಾಕಲ್ಲವೇ?

ಉತ್ತರ - ಕಾರಣ ಎಂದರೇನು? ಎಂಬ ಪ್ರಶ್ನೆಗೆ ಅನನ್ಯಥಾಸಿದ್ಧನಿಯತ-ಪೂರ್ವವೃತ್ತಿತ್ವವಾಗಲೀ, ಸಹಕಾರಿವಿರಹ ಪ್ರಯುಕ್ತ ಕಾರ್ಯಾಭಾವವತ್ವ ಎಂದಾಗಲೀ ಹೇಳಿದರೆ ಸಿದ್ಧಸಾಧನತಾ, ಆತ್ಮಾಶ್ರಯ ಮೊದಲಾದ ದೋಷಗಳು ಬರುತ್ತವೆ.

ಪ್ರಶ್ನೆ - ಹಾಗಿದ್ದರೆ ಪಿಪಾಸೋಪಶಾಮಕ ಎಂದರೇನರ್ಥ?

ಉತ್ತರ - 'ಬಾಯಾರಿಕೆಯನ್ನು ಪರಿಹರಿಸುವ ಅತೀಂದ್ರಿಯವಾದ ಶಕ್ತಿ ನೀರಿನಲ್ಲಿದೆ'. ಇದೇ ನೀರಿನಲ್ಲಿರುವ ಪಿಪಾಸೋಪಶಮನಕಾರಣತ್ವ' ಎಂದು ಹೇಳಬೇಕು. ಹೀಗೆ ಶಕ್ತಿ ಎಂಬ ಪದಾರ್ಥ ಸಿದ್ಧವಾಗುತ್ತದೆ.

## ದಂಡಾದಿಗಳಲ್ಲಿರುವ ಕಾರಣತ್ವದಿಂದ ಶಕ್ತಿ ಸಮರ್ಥನೆ

**ತರ್ಕತಾಂಡವ – ಕಿಂಚಾನನ್ಯಥಾಸಿದ್ಧಿನಿಯತಪೂರ್ವವೃತ್ತಿತ್ವಮೇವ ಕಾರಣತ್ವಂ ಚೇದ್ ರಾಸಭಾದೌ ತದಭಾವೋ ನ ತಾವದನ್ಯಥಾಸಿದ್ಧ್ಯಾ । ನಿಯತಪದವೈಯರ್ಥ್ಯಾತ್ ॥**

ಅನುವಾದ – ಮತ್ತು ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವವೇ ಕಾರಣತ್ವವೆಂದು ಹೇಳುವುದಾದರೆ ರಾಸಭಾದಿಗಳಲ್ಲಿರುವ ಕಾರಣತ್ವಾಭಾವವು ಯತ್ಪ್ರಯುಕ್ತವಾಗಿದೆ? ಅನ್ಯಥಾಸಿದ್ಧವಾದ್ದರಿಂದ ಎಂದು ಹೇಳುವುದಾದರೆ ನಿಯತಪದಕ್ಕೆ ವೈಯರ್ಥ್ಯವು ಬರುತ್ತದೆ.

ವಿವರಣೆ – ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವವೆಂಬ ಕಾರಣತ್ವವನ್ನು ವಿವಕ್ಷಿಸುವುದಾದರೆ ರಾಸಭದಲ್ಲಿ ಕಾರಣತ್ವಾಭಾವವನ್ನು ಅನ್ಯಥಾಸಿದ್ಧಪ್ರಯುಕ್ತವಾಗಿ ಹೇಳಬೇಕು. ಘಟಕ್ಕೆ ಉಪಯೋಗವಾಗುವ ಮಣ್ಣನ್ನು ರಾಸಭದ ಮೇಲೆ ಇಟ್ಟುಕೊಂಡು ಬರುತ್ತಾರೆ. ಆದ್ದರಿಂದ ಘಟದ ಉತ್ಪತ್ತಿಗೆ ರಾಸಭವು ಕಾರಣವಾಗಿದೆ ಎಂದು ಹೇಳಬೇಕು. ಆದರೆ ರಾಸಭವನ್ನು ಉಪಯೋಗಿಸಿಕೊಳ್ಳದೇ ಹಾಗೆಯೇ ಮಣ್ಣನ್ನು ತಂದು ಘಟವನ್ನು ಸೃಷ್ಟಿ ಮಾಡಿದರೆ ರಾಸಭವು ಅನ್ಯಥಾಸಿದ್ಧವಾಗುತ್ತದೆ. ಆಗ ಅನನ್ಯಥಾಸಿದ್ಧತ್ವವೇ ಬರುವುದಿಲ್ಲವಾದ್ದರಿಂದ ಕಾರಣತ್ವವನ್ನು ರಾಸಭದಲ್ಲಿ ಹೇಳಲು ಸಾಧ್ಯವಾಗುವುದಿಲ್ಲ ಎಂದು ತಾರ್ಕಿಕರು ಹೇಳಬೇಕು. ಆದರೆ ಅನನ್ಯಥಾಸಿದ್ಧತ್ವವಿಲ್ಲವೆಂಬ ಕಾರಣದಿಂದ ರಾಸಭವನ್ನು ವ್ಯಾವೃತ್ತಿ ಮಾಡುವುದಾದರೆ ಕಾರಣತ್ವದಲ್ಲಿರುವ ನಿಯತಪದವು ವ್ಯರ್ಥವಾಗುತ್ತದೆ.

ತಾರ್ಕಿಕರು ಕುಲಾಲಪಿತೃವಿನಲ್ಲಿ ಅನನ್ಯಥಾಸಿದ್ಧತ್ವವನ್ನು ವಿಶೇಷಣವನ್ನಾಗಿ ಹೇಳುತ್ತಾರೆ. ರಾಸಭದಲ್ಲಿ ಅತಿವ್ಯಾಪ್ತಿಯನ್ನು ಪರಿಹರಿಸಲು ನಿಯತತ್ವ ವಿಶೇಷಣವನ್ನು ಹೇಳುತ್ತಾರೆ. ಆದರೆ ಈಗ ಇದನ್ನು ಮರೆತು ಅನನ್ಯಥಾಸಿದ್ಧತ್ವವಿಶೇಷಣಾದಿಂದಲೇ ರಾಸಭದಲ್ಲಿ ಕಾರಣತ್ವವನ್ನು ವ್ಯಾವೃತ್ತಿ ಮಾಡುವುದಾದರೆ ನಿಯತಪದಕ್ಕೆ ವೈಯರ್ಥ್ಯಬರಬೇಕೆಂಬುದು ಗ್ರಂಥಕಾರರ ಅಭಿಪ್ರಾಯ.

## ಅಕಾರಣತ್ವಾನ್ಯಥಾನುಪಪತ್ತಿಯಿಂದ ಶಕ್ತಿಯ ಸಮರ್ಥನೆ

ನ್ಯಾಯದೀಪ – ರಾಸಭಾದೇಕಾರಣತ್ವಾನ್ಯಥಾऽನುಪಪತ್ತ್ಯಾ ಚ ಶಕ್ತಿಸಿದ್ಧಿರಿತಿ ಭಾವೇನಾಹ – ಕಿಂಚಾನನ್ಯಥೇತಿ ॥ 'ಚೇತ್' ಇತ್ಯನಂತರಂ 'ರಾಸಭಾದೇರ್ಘಟಾದಿಕಂ ಪ್ರತಿ ಕಾರಣತ್ವಾಭಾವೋ ನ ಸ್ಯಾತ್' ಇತಿ ಶೇಷಃ । ಕುತೋ ನ ಸ್ಯಾತ್ ? ಇತ್ಯತ ಆಹ – ರಾಸಭಾದಾವಿತ್ಯಾದಿ ॥

ಅನುವಾದ – ರಾಸಭಾದಿಗಳಿಗೆ ಅಕಾರಣತ್ವಾನ್ಯಥಾನುಪಪತ್ತಿಯಿಂದ ಶಕ್ತಿಯು ಸಿದ್ಧವಾಗುತ್ತದೆಂಬ ಅಭಿಪ್ರಾಯದಿಂದ 'ಕಿಂಚಾನನ್ಯಥಾ' ಎಂಬಿತ್ಯಾದಿ ಗ್ರಂಥವು ಹೊರಟಿದೆ. 'ಚೇತ್' ಎಂಬ ಪದದ ಅನಂತರ 'ರಾಸಭಾದೇರ್ಘಟಾದಿಕಂ ಪ್ರತಿ ಕಾರಣತ್ವಾಭಾವೋ ನ ಸ್ಯಾತ್' 'ರಾಸಭಾದಿಗಳಿಗೆ ಘಟಾದಿಗಳನ್ನು ಕುರಿತು ಕಾರಣತ್ವಾಭಾವವು ಕೂಡದಿರಬೇಕಾದೀತು' ಎಂಬ ವಾಕ್ಯವನ್ನು ಶೇಷಪೂರಣೆ ಮಾಡಿಕೊಳ್ಳಬೇಕು. ರಾಸಭಾದಿಗಳಿಗೆ ಕಾರಣತ್ವಾಭಾವವು ಏಕೆ ಇಲ್ಲದಿರಬೇಕಾದೀತು? ಎಂಬ ಪ್ರಶ್ನೆಗೆ 'ರಾಸಭಾದೌ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

## ಶಕ್ತಿ ಒಪ್ಪದೇ ಕಾರಣತ್ವವನ್ನು ಸಮರ್ಥಿಸಲಾಗದು

ತರ್ಕತಾಂಡವ – ನಾಪಿ – ಪೂರ್ವವೃತ್ತಿತ್ವಸ್ಯಾನಿಯತತ್ವೇನ । ವ್ಯಕ್ತ್ಯಪೇಕ್ಷಯಾ ನಿಯಮಸ್ಯ ದಂಡಾದಾವಪ್ಯಭಾವಾತ್ । ಜಾತ್ಯಪೇಕ್ಷಯಾ ನಿಯಮಸ್ಯ ಚ ರಾಸಭೇऽಪಿ ಪ್ರಸಂಗಾತ್। ಸಂಭವತಿ ಹ್ಯನಾದೌ ಸಂಸಾರೇ ಘಟಜಾತೀಯಾದ್ ರಾಸಭಜಾತೀಯಸ್ಯ ಕದಾಚಿದಪಿ ವ್ಯವಹಿತಪೂರ್ವವೃತ್ತಿತ್ವನಿಯಮಃ ॥

ಅನುವಾದ – ಕಾರಣತ್ವಲಕ್ಷಣದಲ್ಲಿರುವ ಪೂರ್ವವೃತ್ತಿತ್ವವು ಅನಿಯತವಾಗಿರುವುದರಿಂದ ರಾಸಭದಲ್ಲಿ ಕಾರಣತ್ವ ಬರುವುದಿಲ್ಲವೆಂದು ಹೇಳಬಾರದು. ಏಕೆಂದರೆ ನಿಯತಪೂರ್ವವೃತ್ತಿತ್ವವನ್ನು ವ್ಯಕ್ತ್ಯಪೇಕ್ಷಯಾ ಹೇಳುವುದಾದರೆ ದಂಡಾದಿಗಳಲ್ಲೂ ಕೂಡ ಕಾರಣತ್ವವು ಬರುವುದಿಲ್ಲ. ಜಾತ್ಯಪೇಕ್ಷಯಾ ಹೇಳುವುದಾದರೆ ರಾಸಭದಲ್ಲಿಯೂ ಕೂಡ

ಕಾರಣತ್ವವು ಬರುತ್ತದೆ. ಮತ್ತು ಅನಾದಿಯಾದ ಸಂಸಾರದಲ್ಲಿ ಘಟಜಾತೀಯಪದಾರ್ಥಕ್ಕಿಂತ ರಾಸಭಜಾತೀಯಪದಾರ್ಥವು ಕೆಲವೊಮ್ಮೆಯಾದರೂ ವ್ಯವಹಿತಪೂರ್ವವೃತ್ತಿತ್ವ-ನಿಯಮವನ್ನು ಹೊಂದಿರುತ್ತದೆ.

ವಿವರಣೆ – ಘಟಕ್ಕೆ ದಂಡವು ಕಾರಣವಾಗಿದೆ. ದಂಡದಲ್ಲಿರುವ ಕಾರಣತ್ವವು ಸ್ವಭಾವಶಕ್ತಿ ಪ್ರಯುಕ್ತವಾಗಿದೆ. ರಾಸಭಾದಿಗಳಲ್ಲಿರುವ ಕಾರಣತ್ವಾಭಾವವು ಶಕ್ತಿವಿರಹಪ್ರಯುಕ್ತವಾಗಿದೆ ಎಂದು ನಾವು ಹೇಳುತ್ತೇವೆ:

ತಾರ್ಕಿಕರಾದ ನೀವು ದಂಡಾದಿಗಳಲ್ಲಿರುವ ಕಾರಣತ್ವವು ಅನನ್ಯಥಾಸಿದ್ಧನಿಯತ-ಪೂರ್ವವೃತ್ತಿತ್ವಪ್ರಯುಕ್ತ ಎಂದು ಹೇಳುತ್ತೀರಿ. ಹಾಗಾದರೆ ರಾಸಭಾದಿಗಳಲ್ಲಿರುವ ಕಾರಣತ್ವಾಭಾವವು ಯತ್ಪ್ರಯುಕ್ತವಾಗಿದೆ ಎಂಬ ಪ್ರಶ್ನೆಗೆ ಉತ್ತರಿಸಬೇಕು. ಅನನ್ಯಥಾಸಿದ್ಧ-ನಿಯತಪೂರ್ವವೃತ್ತಿತ್ವದಲ್ಲಿ ಯಾವ ದಳವೂ ಇಲ್ಲದ ಪ್ರಯುಕ್ತವಾಗಿ ಕಾರಣತ್ವವು ಬರುವುದಿಲ್ಲ. ಪೂರ್ವವೃತ್ತಿತ್ವ ಇಲ್ಲದ ಪ್ರಯುಕ್ತವಾಗಿ ಕಾರಣತ್ವವಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಘಟಾದಿಗಳ ಜನನಕ್ಕಿಂತ ಮೊದಲು ರಾಸಭಾದಿಗಳು ಪೂರ್ವವೃತ್ತಿಯಾಗಿರುವುದು ಸಿದ್ಧವಾಗಿದೆ. ನಿಯತಪೂರ್ವವೃತ್ತಿತ್ವ ಇಲ್ಲವೆಂದು ಉತ್ತರಿಸಬೇಕು. ರಾಸಭವು ಘಟ ಹುಟ್ಟುವ ಮೊದಲು ನಿಯಮೇನ ಹಿಂದಿನ ಕ್ಷಣದಲ್ಲಿ ಇರುವುದಿಲ್ಲವಾದ್ದರಿಂದ ಕಾರಣತ್ವ ಇಲ್ಲವೆಂದು ಉತ್ತರಿಸಬೇಕು. ಆದರೆ ನಿಯತಪೂರ್ವವೃತ್ತಿತ್ವವನ್ನು ವ್ಯಕ್ತ್ಯಪೇಕ್ಷೆಯಿಂದ ಹೇಳುತ್ತೀರೋ ಅಥವಾ ಜಾತ್ಯಪೇಕ್ಷೆಯಿಂದ ಹೇಳುತ್ತೀರೋ? ಎಂಬ ಪ್ರಶ್ನೆಗೆ ಉತ್ತರಿಸಬೇಕು. ವ್ಯಕ್ತ್ಯಪೇಕ್ಷೆಯಿಂದ ಹೇಳುವುದಾದರೆ ಈ ಘಟಕ್ಕೆ ಈ ರಾಸಭವು ಪೂರ್ವವೃತ್ತಿಯಾಗಿಲ್ಲ ಎಂದು ಹೇಳಬೇಕು. ಆದರೆ ಒಂದು ಘಟವ್ಯಕ್ತಿಗೆ ಯಾವುದಾದರೂ ಒಂದು ರಾಸಭವನ್ನು ನಿಯಮೇನ ಪೂರ್ವವೃತ್ತಿಯೆಂದು ಹೇಳಬಹುದು.

ಜಗತ್ತಿನಲ್ಲಿರುವ ಎಲ್ಲಾ ಘಟಗಳಿಗೆ ನಿಯಮೇನ ರಾಸಭವು ಪೂರ್ವವೃತ್ತಿಯಾಗಿಲ್ಲ ; ಆದ್ದರಿಂದ ಕಾರಣತ್ವವಿಲ್ಲ ಎಂದು ಹೇಳಬೇಕು. ಹೀಗೆ ಹೇಳಿದರೆ ದಂಡದಲ್ಲಿಯೂ ಕೂಡ ಕಾರಣತ್ವವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಜಗತ್ತಿನಲ್ಲಿರುವ ಎಲ್ಲಾ ಘಟಗಳ ಅಪೇಕ್ಷೆಯಿಂದ ದಂಡ ಎಂಬುದು ಪೂರ್ವವೃತ್ತಿಯಾಗಿದೆ ಎಂದು ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ವ್ಯಕ್ತ್ಯಪೇಕ್ಷೆಯಿಂದ ನಿಯತಪೂರ್ವವೃತ್ತಿತ್ವವನ್ನು ದಂಡಾದಿಗಳಲ್ಲಿ ಕೂಡ ಹೇಳಲು

ಸಾಧ್ಯವಾಗುವುದಿಲ್ಲ. ಏಕೈಕವ್ಯಕ್ತ್ಯಪೇಕ್ಷೆಯಿಂದ ಹೇಳುವುದಾದರೆ ರಾಸಭಾದಿಗಳಿಗೂ ಕೂಡ ಹೇಳಬಹುದು.

ಘಟತ್ವಾವಚ್ಛಿನ್ನವನ್ನು ಕುರಿತು ದಂಡತ್ವಾವಚ್ಛಿನ್ನವು ನಿಯತಪೂರ್ವವೃತ್ತಿಯಾಗಿದೆ ಎಂದು ಜಾತ್ಯಪೇಕ್ಷಯಾ ಹೇಳುವುದಾದರೆ ರಾಸಭದಲ್ಲಿಯೂ ಕೂಡ ಇದನ್ನು ಹೇಳಬಹುದು. ಅನಾದಿಯಾದ ಸಂಸಾರದಲ್ಲಿ ಯಾವುದೋ ಒಂದು ಘಟಕ್ಕೆ ಯಾವುದೋ ಒಂದು ರಾಸಭವು ಪೂರ್ವವೃತ್ತಿಯಾಗಿರಬಹುದು. ಘಟ ಹುಟ್ಟುವ ಮೊದಲು ರಾಸಭವು ಮೊದಲು ಇದ್ದೇ ಇರುತ್ತದೆ ಎಂದಭಿಪ್ರಾಯ. ಘಟ ಹುಟ್ಟಿದ ಮೇಲೆ ಯಾವ ರಾಸಭವು ಹುಟ್ಟುತ್ತದೋ ಅದು ಮೊದಲೇ ಹುಟ್ಟಿದ ಘಟಕ್ಕಿಂತ ಪೂರ್ವವೃತ್ತಿಯಾಗಿಲ್ಲವಲ್ಲವೇ ? ಎಂದು ಪ್ರಶ್ನಿಸಬಾರದು. ಆ ಘಟಕ್ಕೆ ಮತ್ತೊಂದು ರಾಸಭವು ಪೂರ್ವವೃತ್ತಿಯಾಗಿದೆ. ಅನಂತರ ಹುಟ್ಟುವ ರಾಸಭವೂ ಮುಂದೆ ಹುಟ್ಟುವ ಘಟಕ್ಕೆ ಪೂರ್ವವೃತ್ತಿಯಾಗಿರುತ್ತದೆ. ಅನಾದಿಯಾದ ಸಂಸಾರದಲ್ಲಿ ಘಟಗಳು ಇಲ್ಲದ ಸಮಯ ಹೇಗಿಲ್ಲವೋ ಅದರಂತೆ ರಾಸಭವೂ ಕೂಡ ಇಲ್ಲದ ಸನ್ನಿವೇಶವೇ ಇರುವುದಿಲ್ಲ. ಆದ್ದರಿಂದ ಜಾತ್ಯಪೇಕ್ಷಯಾ ನಿಯತಪೂರ್ವವೃತ್ತಿತ್ವವು ರಾಸಭದಲ್ಲಿಯೂ ಬರುತ್ತದೆ.

## ರಾಸಭದಲ್ಲಿ ಅತಿಪ್ರಸಂಗ

ನ್ಯಾಯದೀಪ – ಪೂರ್ವವೃತ್ತಿತ್ವಸ್ಯಾನಿಯತತ್ವೇನೇತಿ ॥ 'ರಾಸಭಾದೌ ತದಭಾವಃ' ಇತ್ಯನುಷಂಗಃ। 'ಕಿಂ ವ್ಯವಹಿತಪೂರ್ವವೃತ್ತಿತ್ವಸ್ಯಾನೈಯತ್ಯೇನ ರಾಸಭಾದೌ ಕಾರಣತ್ವಾಭಾವೋಽನಭಿಮತ ಉತ ಅವ್ಯವಹಿತಪೂರ್ವವೃತ್ತಿತ್ವಸ್ಯಾನೈಯತ್ಯೇನ' ಇತಿ ॥ ಆದ್ಯೇ ರಾಸಭಾದಾವತಿಪ್ರಸಂಗಂ ವ್ಯನಕ್ತಿ – ಸಂಭವತಿ ಹೀತಿ ॥

ಅನುವಾದ – 'ಪೂರ್ವವೃತ್ತಿತ್ವಸ್ಯ ಅನಿಯತತ್ವೇನ' ಎಂಬ ಪದದ ಅನಂತರ 'ರಾಸಭಾದೌ ತದಭಾವಃ' 'ರಾಸಭಾದಿಗಳಲ್ಲಿ ಇರುವುದಿಲ್ಲ' ಎಂಬುದನ್ನು ಅನುಷಂಗ ಮಾಡಿಕೊಳ್ಳಬೇಕು. ವ್ಯವಹಿತಪೂರ್ವವೃತ್ತಿತ್ವವು ನಿಯತವಾಗಿ ಇರುವುದಿಲ್ಲವಾದ್ದರಿಂದ ಕಾರಣತ್ವಾಭಾವವು ರಾಸಭಾದಿಗಳಲ್ಲಿ ಬರುತ್ತದೆಂದು ಹೇಳುತ್ತಿದ್ದೀರೋ? ಅಥವಾ ಅವ್ಯವಹಿತಪೂರ್ವವೃತ್ತಿತ್ವವು ಅನಿಯತವಾಗಿರುವುದರಿಂದ ಕಾರಣತ್ವಾಭಾವವನ್ನು ಇಲ್ಲವೆಂದು ಹೇಳುತ್ತಿದ್ದೀರೋ?

ಕಾರಣತ್ವವು ಬರುತ್ತದೆ. ಮತ್ತು ಅನಾದಿಯಾದ ಸಂಸಾರದಲ್ಲಿ ಘಟಜಾತೀಯಪದಾರ್ಥಕ್ಕಿಂತ ರಾಸಭಜಾತೀಯಪದಾರ್ಥವು ಕೆಲವೊಮ್ಮೆಯಾದರೂ ವ್ಯವಹಿತಪೂರ್ವವೃತ್ತಿತ್ವ-ನಿಯಮವನ್ನು ಹೊಂದಿರುತ್ತದೆ.

ವಿವರಣೆ – ಘಟಕ್ಕೆ ದಂಡವು ಕಾರಣವಾಗಿದೆ. ದಂಡದಲ್ಲಿರುವ ಕಾರಣತ್ವವು ಸ್ವಭಾವಶಕ್ತಿ ಪ್ರಯುಕ್ತವಾಗಿದೆ. ರಾಸಭಾದಿಗಳಲ್ಲಿರುವ ಕಾರಣತ್ವಾಭಾವವು ಶಕ್ತಿವಿರಹಪ್ರಯುಕ್ತವಾಗಿದೆ ಎಂದು ನಾವು ಹೇಳುತ್ತೇವೆ.

ತಾರ್ಕಿಕರಾದ ನೀವು ದಂಡಾದಿಗಳಲ್ಲಿರುವ ಕಾರಣತ್ವವು ಅನನ್ಯಥಾಸಿದ್ಧನಿಯತ-ಪೂರ್ವವೃತ್ತಿತ್ವಪ್ರಯುಕ್ತ ಎಂದು ಹೇಳುತ್ತೀರಿ. ಹಾಗಾದರೆ ರಾಸಭಾದಿಗಳಲ್ಲಿರುವ ಕಾರಣತ್ವಾಭಾವವು ಯತ್ಪ್ರಯುಕ್ತವಾಗಿದೆ ಎಂಬ ಪ್ರಶ್ನೆಗೆ ಉತ್ತರಿಸಬೇಕು. ಅನನ್ಯಥಾಸಿದ್ಧ-ನಿಯತಪೂರ್ವವೃತ್ತಿತ್ವದಲ್ಲಿ ಯಾವ ದಳವೂ ಇಲ್ಲದ ಪ್ರಯುಕ್ತವಾಗಿ ಕಾರಣತ್ವವು ಬರುವುದಿಲ್ಲ. ಪೂರ್ವವೃತ್ತಿತ್ವ ಇಲ್ಲದ ಪ್ರಯುಕ್ತವಾಗಿ ಕಾರಣತ್ವವಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಘಟಾದಿಗಳ ಜನನಕ್ಕಿಂತ ಮೊದಲು ರಾಸಭಾದಿಗಳು ಪೂರ್ವವೃತ್ತಿಯಾಗಿರುವುದು ಸಿದ್ಧವಾಗಿದೆ. ನಿಯತಪೂರ್ವವೃತ್ತಿತ್ವ ಇಲ್ಲವೆಂದು ಉತ್ತರಿಸಬೇಕು. ರಾಸಭವು ಘಟ ಹುಟ್ಟುವ ಮೊದಲು ನಿಯಮೇನ ಹಿಂದಿನ ಕ್ಷಣದಲ್ಲಿ ಇರುವುದಿಲ್ಲವಾದ್ದರಿಂದ ಕಾರಣತ್ವ ಇಲ್ಲವೆಂದು ಉತ್ತರಿಸಬೇಕು. ಆದರೆ ನಿಯತಪೂರ್ವವೃತ್ತಿತ್ವವನ್ನು ವ್ಯಕ್ತ್ಯಪೇಕ್ಷೆಯಿಂದ ಹೇಳುತ್ತೀರೋ ಅಥವಾ ಜಾತ್ಯಪೇಕ್ಷೆಯಿಂದ ಹೇಳುತ್ತೀರೋ? ಎಂಬ ಪ್ರಶ್ನೆಗೆ ಉತ್ತರಿಸಬೇಕು. ವ್ಯಕ್ತ್ಯಪೇಕ್ಷೆಯಿಂದ ಹೇಳುವುದಾದರೆ ಈ ಘಟಕ್ಕೆ ಈ ರಾಸಭವು ಪೂರ್ವವೃತ್ತಿಯಾಗಿಲ್ಲ ಎಂದು ಹೇಳಬೇಕು. ಆದರೆ ಒಂದು ಘಟವ್ಯಕ್ತಿಗೆ ಯಾವುದಾದರೂ ಒಂದು ರಾಸಭವನ್ನು ನಿಯಮೇನ ಪೂರ್ವವೃತ್ತಿಯೆಂದು ಹೇಳಬಹುದು.

ಜಗತ್ತಿನಲ್ಲಿರುವ ಎಲ್ಲಾ ಘಟಗಳಿಗೆ ನಿಯಮೇನ ರಾಸಭವು ಪೂರ್ವವೃತ್ತಿಯಾಗಿಲ್ಲ ; ಆದ್ದರಿಂದ ಕಾರಣತ್ವವಿಲ್ಲ ಎಂದು ಹೇಳಬೇಕು. ಹೀಗೆ ಹೇಳಿದರೆ ದಂಡದಲ್ಲಿಯೂ ಕೂಡ ಕಾರಣತ್ವವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಜಗತ್ತಿನಲ್ಲಿರುವ ಎಲ್ಲಾ ಘಟಗಳ ಅಪೇಕ್ಷೆಯಿಂದ ದಂಡ ಎಂಬುದು ಪೂರ್ವವೃತ್ತಿಯಾಗಿದೆ ಎಂದು ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ವ್ಯಕ್ತ್ಯಪೇಕ್ಷೆಯಿಂದ ನಿಯತಪೂರ್ವವೃತ್ತಿತ್ವವನ್ನು ದಂಡಾದಿಗಳಲ್ಲಿ ಕೂಡ ಹೇಳಲು

ಸಾಧ್ಯವಾಗುವುದಿಲ್ಲ. ಏಕೈಕವ್ಯಕ್ತ್ಯಪೇಕ್ಷೆಯಿಂದ ಹೇಳುವುದಾದರೆ ರಾಸಭಾದಿಗಳಿಗೂ ಕೂಡ ಹೇಳಬಹುದು.

ಘಟತ್ವಾವಚ್ಛಿನ್ನವನ್ನು ಕುರಿತು ದಂಡತ್ವಾವಚ್ಛಿನ್ನವು ನಿಯತಪೂರ್ವವೃತ್ತಿಯಾಗಿದೆ ಎಂದು ಜಾತ್ಯಪೇಕ್ಷಯಾ ಹೇಳುವುದಾದರೆ ರಾಸಭದಲ್ಲಿಯೂ ಕೂಡ ಇದನ್ನು ಹೇಳಬಹುದು. ಅನಾದಿಯಾದ ಸಂಸಾರದಲ್ಲಿ ಯಾವುದೋ ಒಂದು ಘಟಕ್ಕೆ ಯಾವುದೋ ಒಂದು ರಾಸಭವು ಪೂರ್ವವೃತ್ತಿಯಾಗಿರಬಹುದು. ಘಟ ಹುಟ್ಟುವ ಮೊದಲು ರಾಸಭವು ಮೊದಲು ಇದ್ದೇ ಇರುತ್ತದೆ ಎಂದಭಿಪ್ರಾಯ. ಘಟ ಹುಟ್ಟಿದ ಮೇಲೆ ಯಾವ ರಾಸಭವು ಹುಟ್ಟುತ್ತದೋ ಅದು ಮೊದಲೇ ಹುಟ್ಟಿದ ಘಟಕ್ಕಿಂತ ಪೂರ್ವವೃತ್ತಿಯಾಗಿಲ್ಲವಲ್ಲವೇ ? ಎಂದು ಪ್ರಶ್ನಿಸಬಾರದು. ಆ ಘಟಕ್ಕೆ ಮತ್ತೊಂದು ರಾಸಭವು ಪೂರ್ವವೃತ್ತಿಯಾಗಿದೆ. ಅನಂತರ ಹುಟ್ಟುವ ರಾಸಭವೂ ಮುಂದೆ ಹುಟ್ಟುವ ಘಟಕ್ಕೆ ಪೂರ್ವವೃತ್ತಿಯಾಗಿರುತ್ತದೆ. ಅನಾದಿಯಾದ ಸಂಸಾರದಲ್ಲಿ ಘಟಗಳು ಇಲ್ಲದ ಸಮಯ ಹೇಗಿಲ್ಲವೋ ಅದರಂತೆ ರಾಸಭವೂ ಕೂಡ ಇಲ್ಲದ ಸನ್ನಿವೇಶವೇ ಇರುವುದಿಲ್ಲ. ಆದ್ದರಿಂದ ಜಾತ್ಯಪೇಕ್ಷಯಾ ನಿಯತಪೂರ್ವವೃತ್ತಿತ್ವವು ರಾಸಭದಲ್ಲಿಯೂ ಬರುತ್ತದೆ.

## ರಾಸಭದಲ್ಲಿ ಅತಿಪ್ರಸಂಗ

ನ್ಯಾಯದೀಪ – ಪೂರ್ವವೃತ್ತಿತ್ವಸ್ಯಾನಿಯತತ್ವೇನೇತಿ ॥ 'ರಾಸಭಾದೌ ತದಭಾವಃ' ಇತ್ಯನುಷಂಗಃ। 'ಕಿಂ ವ್ಯವಹಿತಪೂರ್ವವೃತ್ತಿತ್ವಸ್ಯಾನೈಯತ್ಯೇನ ರಾಸಭಾದೌ ಕಾರಣತ್ವಾಭಾವೋಽನಭಿಮತ ಉತ ಅವ್ಯವಹಿತಪೂರ್ವವೃತ್ತಿತ್ವಸ್ಯಾನೈಯತ್ಯೇನ' ಇತಿ ॥ ಆದ್ಯೇ ರಾಸಭಾದಾವತಿಪ್ರಸಂಗಂ ವ್ಯನಕ್ತಿ – ಸಂಭವತಿ ಹೀತಿ ॥

ಅನುವಾದ – 'ಪೂರ್ವವೃತ್ತಿತ್ವಸ್ಯ ಅನಿಯತತ್ವೇನ' ಎಂಬ ಪದದ ಅನಂತರ 'ರಾಸಭಾದೌ ತದಭಾವಃ' 'ರಾಸಭಾದಿಗಳಲ್ಲಿ ಇರುವುದಿಲ್ಲ' ಎಂಬುದನ್ನು ಅನುಷಂಗ ಮಾಡಿಕೊಳ್ಳಬೇಕು. ವ್ಯವಹಿತಪೂರ್ವವೃತ್ತಿತ್ವವು ನಿಯತವಾಗಿ ಇರುವುದಿಲ್ಲವಾದ್ದರಿಂದ ಕಾರಣತ್ವಾಭಾವವು ರಾಸಭಾದಿಗಳಲ್ಲಿ ಬರುತ್ತದೆಂದು ಹೇಳುತ್ತಿದ್ದೀರೋ? ಅಥವಾ ಅವ್ಯವಹಿತಪೂರ್ವವೃತ್ತಿತ್ವವು ಅನಿಯತವಾಗಿರುವುದರಿಂದ ಕಾರಣತ್ವಾಭಾವವನ್ನು ಇಲ್ಲವೆಂದು ಹೇಳುತ್ತಿದ್ದೀರೋ?

ಪ್ರಥಮಪಕ್ಷದಲ್ಲಿ ರಾಸಭಾದಿಗಳಲ್ಲಿ ಅತಿಪ್ರಸಂಗಾದಿಗಳನ್ನು 'ಸಂಭವತಿ ಹಿ' ಎಂಬುದಾಗಿ ತೋರಿಸುತ್ತಿದ್ದಾರೆ.

ಅನಾದಿಯಾದ ಸಂಸಾರದಲ್ಲಿ ರಾಸಭಕ್ಕೆ ಯಾವುದೋ ಒಂದು ಘಟದ ಅಪೇಕ್ಷೆಯಿಂದ ವ್ಯವಹಿತವಾದ ಪೂರ್ವವೃತ್ತಿತ್ವವನ್ನು ಹೇಳಬಹುದು ಎಂದಭಿಪ್ರಾಯ.

## ಅವ್ಯವಹಿತಪೂರ್ವವೃತ್ತಿತ್ವಕ್ಕೆ ಅನಿಯತತ್ವವನ್ನು ಕೂಡ ಹೇಳಲಾಗದು.

ತರ್ಕತಾಂಡವ– ನಾಪ್ಯವ್ಯವಹಿತಪೂರ್ವವೃತ್ತಿತ್ವಸ್ಯಾನಿಯತತ್ವೇನ। ವ್ಯವಹಿತನಿಯತ-ಪೂರ್ವವರ್ತಿನೋ ಯಾಗಾದೇಃ ಸ್ವರ್ಗಾದ್ಯಹೇತುತ್ವಾಪಾತಾತ್ । ಸಾಪೂರ್ವಸ್ಯ ಯಾಗಸ್ಯಾವ್ಯವಹಿತತ್ವಮಸ್ತೀತಿ ಚೇನ್ನ।

ಪೂರ್ವಂ ಪ್ರತೀತೇನ ಯಾಗಸ್ಯ ಸ್ವರ್ಗಹೇತುತ್ವೇನ ಪಶ್ಚಾದಪೂರ್ವಸ್ಯ ಕಲ್ಪನೀಯತಯಾ ತದವ್ಯವಹಿತತ್ವಸ್ಯ ಕಾರಣತ್ವಶರೀರೇ ಪ್ರವೇಶಾಯೋಗಾತ್ । ಅನ್ಯಥಾಽಪೂರ್ವಂ ವಾಚ್ಯಂ ಸ್ಯಾತ್ ॥

ಅನುವಾದ – ಅವ್ಯಹಿತಪೂರ್ವವೃತ್ತಿತ್ವವು ಅನಿಯತವಾಗಿರುವುದರಿಂದ ರಾಸಭವು ಕಾರಣವಲ್ಲವೆಂದು ಹೇಳಬಹುದೆಂದು ಕೂಡ ಸಮರ್ಥಿಸಲು ಸಾಧ್ಯವಿಲ್ಲ. ಹಾಗಾದಲ್ಲಿ ವ್ಯವಹಿತವಾಗಿ ನಿಯತಪೂರ್ವವೃತ್ತಿಯಾದ ಯಾಗಾದಿಗಳಿಗೂ ಕೂಡ ಕಾರಣತ್ವ ಇಲ್ಲವೆಂದಾಗುತ್ತದೆ. ಸಾಪೂರ್ವವಾದ ಯಾಗಕ್ಕೆ ಅವ್ಯವಹಿತತ್ವ ಇದೆಯಲ್ಲವೇ ? ಎಂದು ಪ್ರಶ್ನಿಸಬಾರದು.

ಮೊದಲೇ ಪ್ರತೀತವಾದ ಯಾಗಕ್ಕೆ ಸ್ವರ್ಗಹೇತುತ್ವದಿಂದ ಅನಂತರ ಕಲ್ಪನೆ ಮಾಡುವ ಅಪೂರ್ವಕ್ಕೆ ಅವ್ಯವಹಿತತ್ವವನ್ನು ಹೇಳಿ, ಕಾರಣತ್ವಶರೀರದಲ್ಲಿ ಸೇರಿಸುವುದು ಅಯುಕ್ತವಾಗುತ್ತದೆ. ಹೀಗೊಪ್ಪದಿದ್ದರೆ ಅಪೂರ್ವವು ಲಿಙಾದಿಗಳಿಂದ ವಾಚ್ಯವೆಂದು ಹೇಳಬೇಕಾದೀತು.

ವಿವರಣೆ – ಯತ್ಕಿಂಚಿತ್ ಘಟಜಾತೀಯವನ್ನು ಕುರಿತು ಯತ್ಕಿಂಚಿತ್ ರಾಸಭಜಾತಿಯು ವ್ಯವಹಿತವಾಗಿ ಪೂರ್ವವೃತ್ತಿ ಆಗಿರಬಹುದು. ಆದರೆ ಅವ್ಯವಹಿತವಾಗಿ ಪೂರ್ವವೃತ್ತಿಯಾಗಿರಬೇಕೆಂದು ಹೇಳುತ್ತೇವೆ. ಹಾಗಾದರೆ ಯಾಗವು ಸ್ವರ್ಗಕ್ಕೂ ಕೂಡ ಕಾರಣ ಅಲ್ಲವೆಂದಾಗಬೇಕಾದೀತು! ಏಕೆಂದರೆ ಯಾವುದು ಅವ್ಯವಹಿತವಾಗಿ ಪೂರ್ವವೃತ್ತಿಯಾಗಿದೆಯೋ ಅದು ಮಾತ್ರ ಕಾರಣ ಎನ್ನುವುದಾದರೆ, ಯಾಗವೂ ಕೂಡ ಸ್ವರ್ಗಕ್ಕಿಂತ ವ್ಯವಹಿತವಾಗಿ ಪೂರ್ವವೃತ್ತಿಯಾಗಿದೆ ಹೊರತು ಅವ್ಯವಹಿತವಾಗಿ ಪೂರ್ವವೃತ್ತಿಯಾಗಿರುವುದಿಲ್ಲ. ಯಾಗದಿಂದ ಅಪೂರ್ವವು ಹುಟ್ಟಿ ಅಪೂರ್ವದಿಂದ ಸ್ವರ್ಗವು ದೊರೆಯುತ್ತದೆ. ಮಧ್ಯದಲ್ಲಿ ಅಪೂರ್ವವನ್ನು ಅಪೇಕ್ಷಿ ಪಡುವುದರಿಂದಲೇ ಯಾಗವು ವ್ಯವಹಿತವಾಗಿ ಪೂರ್ವವೃತ್ತಿಯಾಗಿದೆ. ಈಗ ಅವ್ಯವಧಾನದಿಂದ ಪೂರ್ವವೃತ್ತಿಯಾಗಿರಬೇಕೆಂದು ಹೇಳಿದರೆ ಮಧ್ಯದಲ್ಲಿ ಅಪೂರ್ವವನ್ನೇ ಕಲ್ಪನೆ ಮಾಡದೆ ನೇರವಾಗಿ ಕಾರಣತ್ವವನ್ನು ಹೇಳಬೇಕಾಗುತ್ತದೆ.

ಕೇವಲ ಯಾಗವು ವ್ಯವಹಿತವಾಗಿ ಪೂರ್ವವೃತ್ತಿಯಾಗಿರಬಹುದು. ಸಾಪೂರ್ವವಾದ ಯಾಗವು ಅವ್ಯವಹಿತವಾಗಿ ಪೂರ್ವವೃತ್ತಿಯಾಗಿದೆಯಲ್ಲವೇ?

ಇದು ತಪ್ಪು. ಅಪೂರ್ವವನ್ನು ಕಾರಣತ್ವಶರೀರದಲ್ಲಿ ಸೇರಿಸಲು ಸಾಧ್ಯವಿಲ್ಲ. ಏಕೆಂದರೆ ಈ ಅಪೂರ್ವವವು ಲಿಙ್ ಲಕಾರದಿಂದ ವಾಚ್ಯವೋ ಅಥವಾ ಕಲ್ಪ್ಯವೋ? ನಮ್ಮ ಮತದಲ್ಲಿ ಇಷ್ಟಸಾಧನತ್ವವೇ ವಾಚ್ಯವಾಗಿರುವುದರಿಂದ ಅಪೂರ್ವವನ್ನು ಕಲ್ಪ್ಯ ಎಂದು ಹೇಳುತ್ತೇವೆ. ಮೀಮಾಂಸಕರು ಅಪೂರ್ವವನ್ನು ವಾಚ್ಯ ಎಂದು ಹೇಳುತ್ತಾರೆ. ನೈಯಾಯಿಕರು ಅಪೂರ್ವವನ್ನು ವಾಚ್ಯವೆಂದು ಹೇಳುವುದಿಲ್ಲ. ಕಲ್ಪ್ಯವೆಂದೇ ಹೇಳುತ್ತಾರೆ. ತಾರ್ಕಿಕರ ಅಭಿಪ್ರಾಯ ಹೀಗಿದೆ - ಯಾಗವು ಇಷ್ಟಸಾಧನವೆಂದು ಕೃತಿಯಿಂದ ತಿಳಿಯುತ್ತದೆ. ಈ ಕಾರಣತ್ವವನ್ನು ಕೂಡಿಸಬೇಕೆಂದರೆ ಮಧ್ಯದಲ್ಲಿ ಅಪೂರ್ವವನ್ನು ಕಲ್ಪನೆ ಮಾಡಬೇಕು. ಯಾಗದ ಕಾರಣತ್ವವೇ ಅಪೂರ್ವಕ್ಕೆ ಕಲ್ಪಕವಾಗಿದೆ. ಆದರೆ ಈಗ ಕಾರಣತ್ವಶರೀರದಲ್ಲಿ ಅಪೂರ್ವತ್ವವನ್ನು ಸೇರಿಸಿದರೆ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಏಕೆಂದರೆ ಕಾರಣತ್ವವು ಪ್ರತೀತವಾದರೆ ಅದರ ಬಲದಿಂದ ಅಪೂರ್ವತ್ವವು ಸಿದ್ಧವಾಗುತ್ತದೆ. ಅಪೂರ್ವವು ಕಲ್ಪಿತವಾದ ಮೇಲೆ ಅಪೂರ್ವವಾದ ಯಾಗಕ್ಕೆ ಕಾರಣತ್ವವು ಸಿದ್ಧವಾಗುತ್ತದೆ. ಅಪೂರ್ವವನ್ನು ಕಲ್ಪನೆ ಮಾಡದ ಯಾಗಕ್ಕೆ ಕಾರಣತ್ವವೇ ಸಿದ್ಧವಾಗುವುದಿಲ್ಲ. ಯಾಗಕ್ಕೆ ಕಾರಣತ್ವ ಸಿದ್ಧವಾಗದೇ ಅಪೂರ್ವತ್ವವು ಸಿದ್ಧವಾಗುವುದಿಲ್ಲ. ಹೀಗೆ ಅನ್ಯೋನ್ಯಾಶ್ರಯದೋಷವು ಬರುತ್ತದೆ.

## ತಾರ್ಕಿಕನಿಗೆ ಅಪಸಿದ್ಧಾಂತ

**ನ್ಯಾಯದೀಪ – ಅಂತ್ಯಂ ನಿರಾಹ ನ್ಯಾಯದೀಪ – ನಾಪೀತಿ ॥ 'ಅನಿಯತತ್ವೇನ' ಇತ್ಯನಂತರಂ ಪೂರ್ವವದನುಷಂಗಃ । ಸಾಪೂರ್ವಸ್ಯೇತಿ ॥ 'ಅಪೂರ್ವಸಹಿತಸ್ಯ' ಇತ್ಯರ್ಥಃ । ತದಿತಿ॥ 'ಅಪೂರ್ವವ್ಯವಹಿತಸ್ಯ' ಇತ್ಯರ್ಥಃ । ವಾಚ್ಯಂ ಸ್ಯಾದಿತಿ ॥ 'ತ್ವನ್ಮತ ಇಷ್ಟಸಾಧನತ್ವಸ್ಯೈವ ಲಿಂಗಾದಿವಾಚ್ಯತಯಾ ಗುರುಮತ ಇವಾಪೂರ್ವಸ್ಯ ಲಿಂಗಾದಿವಾಚ್ಯತ್ವಾಭಾವಾತ್ । ಸಾಪೂರ್ವಸ್ಯ ಸ್ವರ್ಗಾವ್ಯವಹಿತಪೂರ್ವವೃತ್ತಿತ್ವರೂಪಕಾರಣತ್ವಸ್ಯ ಯಾಗನಿಷ್ಠಸ್ಯ ವಿಧ್ಯರ್ಥತ್ವೇಽಪೂರ್ವಮಪಿ ಲಿಙಾದಿವಾಚ್ಯಮ್ ಸ್ಯಾತ್ ನ ತ್ವರ್ಥಾಪತ್ತಿಕಲ್ಪ್ಯಮ್' ಇತ್ಯಪಸಿದ್ಧಾಂತ ಇತಿ ಭಾವಃ।**

ಅನುವಾದ – ಅವ್ಯವಹಿತಪೂರ್ವವೃತ್ತಿತ್ವವು ಅನಿಯತವಾಗಿದೆಯೆಂಬ ಎರಡನೆಯ ಪಕ್ಷವನ್ನು 'ನಾಪಿ' ಎಂಬುದರಿಂದ ನಿರಾಕರಣೆ ಮಾಡುತ್ತಿದ್ದಾರೆ. 'ಅನಿಯತತ್ವ' ಎಂಬ ಪದದ ನಂತರ 'ರಾಸಭಾದೌ ತದಭಾವಃ' ಎಂಬುದನ್ನು ಅನುಷಂಗ ಮಾಡಿಕೊಳ್ಳಬೇಕು. 'ಸಾಪೂರ್ವಸ್ಯ' ಎಂದರೆ 'ಅಪೂರ್ವದಿಂದ ಕೂಡಿರುವ' ಎಂದರ್ಥ. ತದವ್ಯವಹಿತತ್ವಸ್ಯ ಎಂಬುದಕ್ಕೆ ಅಪೂರ್ವದಿಂದ ಅವ್ಯವಹಿತವಾದ ಎಂದರ್ಥ. ವಾಚ್ಯಂ ಸ್ಯಾತ್ - ಎಂಬುದರ ಅಭಿಪ್ರಾಯ ಹೀಗಿದೆ. ತಾರ್ಕಿಕನಾದ ನಿನ್ನ ಮತದಲ್ಲಿ ಇಷ್ಟಸಾಧನತ್ವವೇ ಲಿಙ್‌ಪ್ರತ್ಯಯದಿಂದ ವಾಚ್ಯವೆಂದು ಹೇಳುವಿ. ಗುರುಮತದಲ್ಲಿ ಅಪೂರ್ವವು ಲಿಙ್‌ಪ್ರತ್ಯಯದಿಂದ ವಾಚ್ಯವೆಂದು ಹೇಳಿದಂತೆ ನೀನು ಹೇಳುವುದಿಲ್ಲ. ಅಪೂರ್ವದಿಂದ ಸಹಿತವಾದ ಯಾಗಕ್ಕೆ ಸ್ವರ್ಗಅವ್ಯವಹಿತ-ಪೂರ್ವವೃತ್ತಿತ್ವರೂಪ ಕಾರಣತ್ವವು ಇರುತ್ತದೆ. ಇದನ್ನೇ ವಿಧಿಪ್ರತ್ಯಯದ ಅರ್ಥವೆಂದು ಹೇಳುವುದಾದರೆ ಅಪೂರ್ವವು ಕೂಡ ಲಿಙ್ ಎಂಬ ವಿಧಿಪ್ರತ್ಯಯದಿಂದ ವಾಚ್ಯವಾಯಿತು. ಆದರೆ ನೀನು ಲಿಙ್‌ಪ್ರತ್ಯಯದಿಂದ ವಾಚ್ಯವೆಂದು ಹೇಳುವುದಿಲ್ಲ. ಅರ್ಥಾಪತ್ತಿಯಿಂದ ಕಲ್ಪ್ಯವೆಂದು ಹೇಳುವಿ. ಆದರಿಂದ ನಿನಗೆ ಅಪಸಿದ್ಧಾಂತದೋಷ ಬರುತ್ತದೆ ಎಂದಭಿಪ್ರಾಯ.

## ಅತೀಂದ್ರಿಯವಾದ ಶಕ್ತಿಗೆ ವ್ಯಾಪಕವಾದದ್ದು ಫಲ ಅವ್ಯವಧಾನ

**ತರ್ಕತಾಂಡವ – ತಸ್ಮಾದತೀಂದ್ರಿಯಶಕ್ತಿರೇವ ಕಾರಣತ್ವಮ್ । ತಾಂ ಚ**

ಪ್ರತಿ ಸ್ವಾಶ್ರಯಜಾತೀಯಸ್ಯ ಫಲಾವ್ಯವಧಾನಂ ವ್ಯಾಪಕಮ್ । ಯಾಗಸ್ಯ ಚ ಭೋಜನಾದೇಸ್ತೃಪ್ತಿಂ ಪ್ರತೀವ ಸ್ವರ್ಗಂ ಪ್ರತಿ ಸ್ವರೂಪೇಣಾವ್ಯವಧಾನಂ ನ ಸಂಭವತೀತ್ಯನುಭವಸ್ಯ ಸ್ಮೃತಿಂ ಪ್ರತೀವ ವ್ಯಾಪಾರದ್ವಾರಾऽವ್ಯವಧಾನಂ ವಕ್ತವ್ಯಮಿತ್ಯಪೂರ್ವಕಲ್ಪನಾ ಯುಕ್ತಾ ॥

ಏತದಪ್ಯುಕ್ತಂ ಸುಧಾಯಾಮ್ ಅತೀಂದ್ರಿಯಮೇವೇತ್ಯಾದಿನಾ ॥

ಅನುವಾದ - ಆದ್ದರಿಂದ ಅತೀಂದ್ರಿಯಶಕ್ತಿಯನ್ನೇ ಕಾರಣತ್ವವೆಂದು ಹೇಳಬೇಕು. ಇಂತಹ ಶಕ್ತಿಯನ್ನು ಕುರಿತು ಸ್ವಾಶ್ರಯಜಾತೀಯಕ್ಕೆ ಫಲ ಅವ್ಯವಧಾನವು ವ್ಯಾಪಕವಾಗಿದೆ. ಭೋಜನಾದಿಗಳು ತೃಪ್ತಿಯನ್ನು ಕುರಿತು ಸ್ವರೂಪತಃ ಅವ್ಯವಧಾನೇನ ಕಾರಣವಾಗುವಂತೆ ಯಾಗಕ್ಕೆ ಸ್ವರ್ಗವನ್ನು ಕುರಿತು ಸ್ವರೂಪತಃ ಅವ್ಯವಧಾನವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಸ್ಮೃತಿಯನ್ನು ಕುರಿತು ಅನುಭವವು ಹೇಗೆ ವ್ಯಾಪಾರದ್ವಾರಾ ಅವ್ಯವಧಾನವಾಗಿ ಕಾರಣವಾಗುತ್ತದೋ ಅದೇ ರೀತಿಯಲ್ಲಿ ಯಾಗವೂ ಕೂಡ ಸ್ವರ್ಗಕ್ಕೆ ವ್ಯಾಪಾರದ್ವಾರಾ ಕಾರಣವಾಗುತ್ತದೆ. ಆ ವ್ಯಾಪಾರವನ್ನೇ ಅಪೂರ್ವವೆಂದು ಕಲ್ಪನೆ ಮಾಡಬೇಕು. ಇದನ್ನೂ ಕೂಡ ನ್ಯಾಯಸುಧೆಯಲ್ಲಿ ಅತೀಂದ್ರಿಯಮೇವ ಇತ್ಯಾದಿಯಾಗಿ ಹೇಳಿದ್ದಾರೆ.

ವಿವರಣೆ – ಆದ್ದರಿಂದ ಅತೀಂದ್ರಿಯವಾದ ಶಕ್ತಿಯೇ ಕಾರಣತ್ವವೆಂದು ಹೇಳಬೇಕು. ಈ ಶಕ್ತಿಯನ್ನು ತಿಳಿಯಲು ಲಿಂಗಗಳು ಅನೇಕವಿರಬಹುದು. ಆದರೆ ದಂಡಾದಿಗಳನ್ನು ಕಾರಣ ಎಂದು ವ್ಯವಹರಿಸಲು ಶಕ್ತಿ ಇರುವುದೇ ಕಾರಣ. ರಾಸಭಾದಿಗಳಲ್ಲಿ ಶಕ್ತಿ ಇಲ್ಲದಿರುವುದೇ ಕಾರಣ. ರಾಸಭದಲ್ಲಿ ಶಕ್ತಿ ಇಲ್ಲವೆಂದು ದಂಡಾದಿಗಳಲ್ಲಿ ಶಕ್ತಿ ಇದೆ ಎಂಬುದು ಹೇಗೆ ತಿಳಿಯುತ್ತದೆ ಎಂದರೆ ದಂಡದಲ್ಲಿ ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವವು ಇದೆ ರಾಸಭದಲ್ಲಿ ಇಲ್ಲದಿರುವುದರಿಂದ ತಿಳಿಯುತ್ತದೆಂದು ಹೇಳಿದಾಗ ಯಾವ ದೋಷಗಳಿಗೂ ಅವಕಾಶವಿಲ್ಲ.

ಯಾಗವು ಸ್ವರ್ಗಕ್ಕೆ ಕಾರಣವೆಂದು ಶ್ರುತಿ ಹೇಳುತ್ತಿದೆ. ಹಾಗಾದರೆ ನಿಮ್ಮ ಪ್ರಕಾರ ಯಾಗದಲ್ಲಿ ಶಕ್ತಿಯನ್ನು ಒಪ್ಪಬೇಕಾಯಿತು. ಹಾಗಾದರೆ ಯಾಗದಿಂದ ಕೂಡಲೇ ಸ್ವರ್ಗವು ಏಕೆ ದೊರಕುತ್ತಿಲ್ಲ ಎಂಬ ಪ್ರಶ್ನೆಗೆ ನಿಮ್ಮಲ್ಲಿ ಏನು ಉತ್ತರ?

ಶಕ್ತಿಗೆ ಆಶ್ರಯವಾದದ್ದು ಯಾವುದು ಇದೆಯೋ ತಜ್ಜಾತೀಯವಾದ ಫಲ ಅವ್ಯವಧಾನವನ್ನೇ ವ್ಯಾಪಕ ಎಂದು ಹೇಳುತ್ತೇವೆ. ಉದಾ - ಶಕ್ತಿಗೆ ಆಶ್ರಯವಾದ ದಂಡತ್ವಾವಚ್ಛಿನ್ನವಾದ ಎಲ್ಲಾ ದಂಡಾದಿಗಳಿಗೆ ಫಲ ಅವ್ಯವಧಾನ ಎಂಬುದು ವ್ಯಾಪಕವಾಗಿದೆ. 'ಯತ್ರ ಶಕ್ತಿಃ ತತ್ರ ಫಲಸ್ಯ ಅವ್ಯವಧಾನಂ' ಎಂದು. ಎಲ್ಲಿ ಶಕ್ತಿ ಇರುತ್ತದೋ ಅಲ್ಲಿ ಫಲದ ಅವ್ಯವಧಾನವು ಇದ್ದೇ ಇರುತ್ತದೆ. ಯಾಗದಲ್ಲಿ ಮಾತ್ರ ವ್ಯಾಪಾರದ್ವಾರಾ ಅವ್ಯವಧಾನವನ್ನು ಹೇಳುತ್ತೇವೆ. ಸ್ವರೂಪತಃ ಯಾಗವು ಸ್ವರ್ಗಕ್ಕೆ ಅವ್ಯವಹಿತವಾಗಿದೆಯೆಂದು ಹೇಳಲು ಸಾಧ್ಯವಿಲ್ಲ. ಎಲ್ಲಿ ಸ್ವರೂಪತಃ ಅವ್ಯವಧಾನವನ್ನು ಹೇಳಲು ಬರುವುದಿಲ್ಲವೋ ಅಲ್ಲಿ ವ್ಯಾಪಾರದ್ವಾರಾ ಅವ್ಯವಧಾನವನ್ನು ಹೇಳಬೇಕು. ಚಕ್ರಭ್ರಮಣವು ಘಟಕ್ಕೆ ಕಾರಣವಾದಂತೆ ತಿಳಿಯಬೇಕು. ಭೋಜನಕ್ಕೆ ತೃಪ್ತಿರೂಪಫಲವನ್ನು ಕುರಿತು ಸ್ವರೂಪತಃ ಅವ್ಯವಧಾನವನ್ನು ಹೇಳಬಹುದು. ಈ ರೀತಿಯ ಅವ್ಯವಧಾನವನ್ನು ಯಾಗಕ್ಕೆ ಹೇಳಲು ಸಾಧ್ಯವಿಲ್ಲದ ಕಾರಣ ವ್ಯಾಪಾರದ್ವಾರಾ ಅವ್ಯವಧಾನವನ್ನು ಹೇಳಬೇಕು.

## ರಾಸಭದಲ್ಲಿ ಕಾರಣತ್ವ ಇಲ್ಲದಿರಲು ಅತೀಂದ್ರಿಯಶಕ್ತಿಯೇ ಕಾರಣ

**ನ್ಯಾಯದೀಪ – ಶಕ್ತಿರೇವೇತಿ ॥ ತಥಾ ಚ ರಾಸಭಾದೌ ತದಭಾವಾದೇವ ಕಾರಣತ್ವಾಭಾವ ಇತಿ ನಾತಿಪ್ರಸಂಗ ಇತಿ ಭಾವಃ। ನಾಪಿ ಯಾಗಾದಾವವ್ಯಾಪ್ತಿಪ್ರಸಂಗಾದಿತ್ಯತ ಆಹ – ತಾಂ ಚೇತಿ ॥ ಶಕ್ತಿಂ ಚೇತ್ಯರ್ಥಃ। 'ಸ್ವಾಶ್ರಯಸ್ಯ' ಇತ್ಯೇವೋಕ್ತೌ ಅರಣ್ಯಸ್ಥದಂಡೇ ವ್ಯಭಿಚಾರಃ ಸ್ಯಾತ್ ಅತಃ 'ಸ್ವಾಶ್ರಯಜಾತೀಯಸ್ಯ' ಇತ್ಯುಕ್ತಿಃ । ಏತದಪೀತಿ ॥ 'ರಾಸಭಾದೇಶ್ಚ ಅಕಾರಣತ್ವಾನ್ಯಥಾನುಪಪತ್ತ್ಯಾಽಪಿ ಅತೀಂದ್ರಿಯಶಕ್ತಿಸಿದ್ಧಿರಿತ್ಯೇತದಪಿ' ಇತ್ಯರ್ಥಃ ॥**

ಆದ್ದರಿಂದ ರಾಸಭಾದಿಗಳಲ್ಲಿ ಅತೀಂದ್ರಿಯವಾದ ಶಕ್ತಿಯು ಇಲ್ಲದ ಕಾರಣದಿಂದಲೇ ಕಾರಣತ್ವ ಇರುವುದಿಲ್ಲ. ಆದ್ದರಿಂದ ಅತಿಪ್ರಸಂಗಕ್ಕೆ ಅವಕಾಶವಿಲ್ಲ. ಯಾಗದಲ್ಲಿ ಅವ್ಯವಹಿತವಾದ ಕಾರಣತ್ವವು ಇಲ್ಲದ ಕಾರಣ ಅವ್ಯಾಪ್ತಿ ಬರುತ್ತದಲ್ಲವೇ ? ಎಂಬ ಪ್ರಶ್ನೆಗೆ 'ತಾಂ ಚ' ಎಂಬುದರಿಂದ ಉತ್ತರಿಸಿದ್ದಾರೆ. 'ತಾಂ ಚ' ಎಂದರೆ 'ಶಕ್ತಿಂ ಚ' ಎಂದರ್ಥ. 'ಸ್ವಾಶ್ರಯಜಾತೀಯಸ್ಯ ಫಲಾವ್ಯವಧಾನಂ ವ್ಯಾಪಕಂ' ಸ್ವಂ = ಶಕ್ತಿ, ತದಾಶ್ರಯ = ಕಾರಣತ್ವ, ತಜ್ಜಾತೀಯ ಎಂದರೆ ಕಾರಣತ್ವಜಾತೀಯ ಎಂದರ್ಥ. ಇದು

ಫಲಾವ್ಯವಧಾನವಾದ ಶಕ್ತಿಗೆ ವ್ಯಾಪಕವಾಗಿದೆ. ಸ್ವಾಶ್ರಯಸ್ಯ ಎಂದಷ್ಟೇ ಹೇಳಿದರೆ ಅರಣ್ಯದಲ್ಲಿರುವ ದಂಡದಲ್ಲಿ ವ್ಯಭಿಚಾರ ಬರುತ್ತದೆ. ಅದಕ್ಕಾಗಿ ಸ್ವಾಶ್ರಯಜಾತೀಯಸ್ಯ ಎಂದು ಹೇಳಿದ್ದಾರೆ. 'ಏತದಪಿ' ಎಂಬುದಕ್ಕೆ ರಾಸಭಾದಿಗಳಿಗೆ ಅಕಾರಣತ್ವಾನ್ಯಥಾನುಪಪತ್ಯಾ ಅತೀಂದ್ರಿಯಶಕ್ತಿಯು ಸಿದ್ಧವಾಯಿತು, ಇದನ್ನೂ ಕೂಡ ಎಂದರ್ಥ.

ವಿವರಣೆ – ಯಾವುದಾದರೂ ಒಂದು ದಂಡವನ್ನು ವಿವಕ್ಷಿಸಿ ವ್ಯಕ್ತ್ಯಪೇಕ್ಷಯಾ ಅನಿಯಮವನ್ನು ಹೇಳಬಹುದು. ಈ ದಂಡವು ಜಗತ್ತಿನಲ್ಲಿರುವ ಎಲ್ಲಾ ಘಟಗಳಿಗೆ ಕಾರಣವಾಗಲು ಸಾಧ್ಯವಿಲ್ಲ. ಆದ್ದರಿಂದ ನಿಯತಪೂರ್ವವೃತ್ತಿತ್ವವು ಈ ದಂಡದಲ್ಲಿ ಬರಲಿಲ್ಲವೆಂಬ ಅತಿಪ್ರಸಂಗ ಬರುತ್ತದೆ. ಇದನ್ನು ಪರಿಹಾರ ಮಾಡುವುದಕ್ಕಾಗಿ ಜಾತೀಯಶಬ್ದವನ್ನು ವಿವಕ್ಷಿಸಿದ್ದಾರೆ. ದಂಡತ್ವಜಾತೀಯವಾದ ಯಾವುದೇ ದಂಡ ಇದ್ದರೂ ಸಾಕು ಕಾರಣತ್ವವನ್ನು ಹೇಳಬಹುದೆಂಬುದು ಇದರ ಅಭಿಪ್ರಾಯ.

## ಕಾರಣತ್ವರೂಪವಾದ ಶಕ್ತಿ ಕಾರಣವಾಗಲು ಹೇಗೆ ಸಾಧ್ಯ?

**ತರ್ಕತಾಂಡವ – ನನ್ವೇವಂ ಶಕ್ತಿಃ ಕಾರಣತ್ವಂ ಚೇತ್ ಸಾ ಕಾರಣಂ ನ ಸ್ಯಾತ್ । ತಥಾಚ ಶಕ್ತಿರ್ದಾಹಾನುಕೂಲಾ ನ ಸ್ಯಾದಿತಿ ಚೇನ್ನ।**

ಅನುವಾದ – ಶಕ್ತಿಯನ್ನು ಕಾರಣತ್ವರೂಪವೆನ್ನುವುದಾದರೆ ಕಾರಣವಲ್ಲ ಎಂದಾಯಿತು. ಆಗ ಶಕ್ತಿಯು ದಾಹಕ್ಕೆ ಅನುಕೂಲವೇ ಆಗುವುದಿಲ್ಲವಲ್ಲ. ಹೀಗೆ ಪ್ರಶ್ನಿಸಬಾರದು.

ವಿವರಣೆ – ಶಕ್ತಿಯನ್ನು ಕಾರಣತ್ವರೂಪವೆಂದು ಹೇಳುತ್ತಿದ್ದೀರಿ. ಯಾವುದು ಕಾರಣತ್ವವೋ ಅದು ಕಾರಣವಾಗುವುದಿಲ್ಲ. ಘಟತ್ವವನ್ನು ಘಟಕಾರಣವೆಂದು ಯಾರೂ ಕೂಡ ಕರೆಯುವುದಿಲ್ಲ. 'ಆಗಲಿ ಶಕ್ತಿಯನ್ನು ಕಾರಣವೆಂದು ಹೇಳುವುದಿಲ್ಲ' ಎನ್ನಬಾರದು. ಶಕ್ತಿಯು ದಾಹಕ್ಕೆ ಅನುಕೂಲವಾಗಿದೆ ಎನ್ನುತ್ತಾರೆ. ಅನುಕೂಲಶಬ್ದಕ್ಕೆ ಕಾರಣ ಎಂದರ್ಥ. ಈಗ ನೀವು ಶಕ್ತಿಯನ್ನು ಕಾರಣತ್ವ ಎನ್ನುತ್ತಿದ್ದೀರಿ. ಈ ಶಕ್ತಿಯನ್ನು ದಾಹಾನುಕೂಲ ಎಂದು ಹೇಳಿದರೆ ಶಕ್ತಿಯನ್ನೇ ಕಾರಣ ಎಂದು ಹೇಳಿದಂತಾಯಿತು. ಇದು ಹೇಗೆ ಸಾಧ್ಯ?

ನ್ಯಾಯದೀಪ – ಶಕ್ತೇಃ ಕಾರಣತ್ವರೂಪತ್ವೇ ಬಾಧಕಮಾಶಂಕ್ಯ ನಿರಾಹ – ನನ್ವೇವಮಿತಿ ॥

ಅನುವಾದ – ಶಕ್ತಿಯು ಕಾರಣತ್ವರೂಪ ಎಂದು ಹೇಳಿದರೆ ಬಾಧಕವನ್ನು ಆಶಂಕಿಸಿ ನಿರಾಕರಣೆ ಮಾಡಲು 'ನನ್ವೇವಮಪಿ' ಎಂಬ ಗ್ರಂಥ ಹೊರಟಿದೆ.

## ಅನುಕೂಲತ್ವದ ಪರಿಷ್ಕಾರ

ತರ್ಕತಾಂಡವ – ಕಾರಣತ್ವಸ್ಯಾಪಿ ಕಾರಣಸ್ಯೇವಕಾರ್ಯಪ್ರಾಗಭಾವವ್ಯಾಪ್ಯ-ಪ್ರಾಗಭಾವಪ್ರತಿಯೋಗಿತ್ವರೂಪಾನುಕೂಲತಾಶ್ರಯತ್ವಾತ್ ॥

ಅನುವಾದ – ಕಾರಣತ್ವವು ಕೂಡ ಕಾರಣದಂತೆ ಕಾರ್ಯಪ್ರಾಗಭಾವವ್ಯಾಪ್ಯಪ್ರಾಗಭಾವ-ಪ್ರತಿಯೋಗಿತ್ವರೂಪವಾದ ಅನುಕೂಲತ್ವಾಶ್ರಯತ್ವರೂಪವಾಗಿದೆ. ಆದ್ದರಿಂದ ದೋಷವಿಲ್ಲ.

ವಿವರಣೆ – ಅನುಕೂಲತ್ವ ಎಂದರೆ ಕಾರ್ಯಪ್ರಾಗಭಾವವ್ಯಾಪ್ಯಪ್ರಾಗಭಾವ-ಪ್ರತಿಯೋಗಿತ್ವ ಎಂದರ್ಥ. ಕಾರಣವು ಹೇಗೆ ಕಾರ್ಯಪ್ರಾಗಭಾವವ್ಯಾಪ್ಯಪ್ರಾಗಭಾವಪ್ರತಿ ಯೋಗಿಯೋ, ಅದರಂತೆ ಕಾರಣತ್ವವು ಕೂಡ ದಂಡಕಾರಣವಾಗಿದೆ. ದಂಡತ್ವ ದಾರ್ಢ್ಯ ಮೊದಲಾದವುಗಳು ಕಾರಣತಾವಚ್ಛೇದಕವಾಗಿವೆ. ಇವುಗಳು ಕಾರ್ಯಕ್ಕೆ ಅನುಕೂಲವಾಗಿವೆ. ಘಟದ ಉತ್ಪತ್ತಿಗೆ ದಂಡವು ಎಷ್ಟು ಮುಖ್ಯವೋ ದಂಡದಲ್ಲಿರುವ ದಾರ್ಢ್ಯ, ದಂಡತ್ವ ಇವುಗಳು ಕೂಡ ಅಷ್ಟೇ ಮುಖ್ಯವಾಗಿವೆ. ಆದ್ದರಿಂದ ದಂಡವು ಕಾರಣವಾದಂತೆ ದಂಡತ್ವವು ಕಾರಣತಾವಚ್ಛೇದಕವಾಗುತ್ತದೆ.

ಅದೇ ರೀತಿ ಪ್ರಕೃತದಲ್ಲಿಯೂ ಅಗ್ನಿಯು ದಾಹಕ್ಕೆ ಕಾರಣವಾಗಿದೆ. ಅಗ್ನಿಯಲ್ಲಿರುವ ಶಕ್ತಿಯು ದಾಹಕ್ಕೆ ಅನುಕೂಲವಾಗಿದೆ. ಅನುಕೂಲತ್ವ ಎಂದರೆ ಕಾರ್ಯಪ್ರಾಗಭಾವ-ವ್ಯಾಪ್ಯಪ್ರಾಗಭಾವಪ್ರತಿಯೋಗಿತ್ವಂ. ಯದಾ ಶಕ್ತಿಪ್ರಾಗಭಾವಃ ತದಾ ದಾಹಪ್ರಾಗಭಾವಃ' ಎಂದು ಹೇಳಬಹುದು. ಯಾವಾಗ ಅಗ್ನಿಯೇ ಹುಟ್ಟಿಲ್ಲವೋ ಆಗ ಅಗ್ನಿಯಲ್ಲಿ ಶಕ್ತಿಯೂ ಕೂಡ ಇರುವುದಿಲ್ಲ ಹೊರತು ಶಕ್ತಿಯ ಪ್ರಾಗಭಾವವಿರುತ್ತದೆ. ಆದ್ದರಿಂದ 'ಯದಾ ಕಾರ್ಯಪ್ರಾಗಭಾವಃ ತದಾ ಶಕ್ತಿಪ್ರಾಗಭಾವಃ'. ಹೀಗೆ ಹೇಳಿದಾಗ ಕಾರ್ಯಪ್ರಾಗಭಾವಕ್ಕೆ ಶಕ್ತಿಪ್ರಾಗಭಾವವು ವ್ಯಾಪ್ಯವಾಯಿತು. ಇಲ್ಲಿ ಪ್ರತಿಯೋಗಿಯಾದದ್ದು ಶಕ್ತಿ. ಆದ್ದರಿಂದ

ಇಂತಹ ಅನುಕೂಲತ್ವವನ್ನು ಕಾರಣತಾವಚ್ಛೇದಕವಾದ ಎಲ್ಲಾ ಧರ್ಮಗಳಲ್ಲಿ ಕೂಡ ಹೊಂದಿಸಬಹುದು.

ನ್ಯಾಯದೀಪ – ವ್ಯಾಪ್ಯೇತಿ ॥ ವ್ಯಾಪ್ತಿಃ ಕಾಲಿಕೀ ಧ್ಯೇಯಾ । ದಂಡಾದೇಃ ಕಾರಣಸ್ಯೇವ ತಚ್ಛಕ್ತೇರಪಿ ತಾದೃಶಪ್ರಾಗಭಾವಪ್ರತಿಯೋಗಿತ್ವಾದಿತಿ ಭಾವಃ ।

ಅನುವಾದ–'ವ್ಯಾಪ್ಯ' ಎಂಬಲ್ಲಿ ವ್ಯಾಪ್ತಿಯನ್ನು ಕಾಲಿಕವಾಗಿ ತಿಳಿಯಬೇಕು. ದಂಡಾದಿಕಾರಣಗಳಲ್ಲಿ ಕಾರ್ಯಪ್ರಾಗಭಾವವ್ಯಾಪ್ಯಪ್ರಾಗಭಾವಪ್ರತಿಯೋಗಿತ್ವವಿರುವಂತೆ ದಂಡಾದಿಗಳಲ್ಲಿರುವ ಶಕ್ತಿಯಲ್ಲಿಯೂ ಕೂಡ ಅಂತಹ ಪ್ರಾಗಭಾವಪ್ರತಿಯೋಗಿತ್ವ ಇರುತ್ತದೆಂದಭಿಪ್ರಾಯ.

ವಿವರಣೆ – ಕಾರಣತ್ವವು ಕೆಲವು ಪದಾರ್ಥಗಳಿಗಷ್ಟೇ ಇರುತ್ತದೆ. ಅನುಕೂಲತ್ವವು ಹೆಚ್ಚು ಪದಾರ್ಥಗಳಲ್ಲಿರುತ್ತದೆ. ಆದ್ದರಿಂದ ಕಾರಣತ್ವವು ಸಂಕುಚಿತವಾಗಿದೆ. ಅನುಕೂಲತ್ವವು ವ್ಯಾಪಕವಾಗಿದೆ. ಇಲ್ಲಿ ಯತ್ರ ಶಕ್ತಿಪ್ರಾಗಭಾವಃ ತತ್ರ ಘಟಪ್ರಾಗಭಾವಃ ಎಂದು ದೈಶಿಕವಾದ ವ್ಯಾಪ್ತಿಯನ್ನು ವಿವಕ್ಷಿಸಲು ಸಾಧ್ಯವಿಲ್ಲ. ಏಕೆಂದರೆ ಘಟಪ್ರಾಗಭಾವವು ಉಪಾದಾನವಾದ ಕಪಾಲದಲ್ಲಿರುತ್ತದೆ ಹೊರತು,ಶಕ್ತಿಪ್ರಾಗಭಾವಕ್ಕೆ ಆಶ್ರಯವಾದ ದಂಡದಲ್ಲಿರಲು ಸಾಧ್ಯವಿಲ್ಲ. ಆದ್ದರಿಂದ 'ಯದಾ ಶಕ್ತಿಪ್ರಾಗಭಾವಃ ತದಾ ಕಾರ್ಯಪ್ರಾಗಭಾವಃ ಎಂಬುದಾಗಿ ಕಾಲಿಕವಾದ ವ್ಯಾಪ್ತಿಯನ್ನು ವಿವಕ್ಷಿಸಬೇಕು. ಅಥವಾ 'ಯದಾ ಅಗ್ನಿಪ್ರಾಗಭಾವಃ ತದಾ ದಾಹಪ್ರಾಗಭಾವಃ' ಎಂಬುದಾಗಿ ತಿಳಿಯಬೇಕು.

## ತಾರ್ಕಿಕರಿಗೆ ಕಲ್ಪನಾಗೌರವದೋಷ

ತರ್ಕತಾಂಡವ – ಕೇಚಿತ್ತು – ಪ್ರತಿಬಂಧಕಾಭಾವತ್ವೇನ ಕಾರಣತ್ವೇಽನ್ಯೋನ್ಯಾಶ್ರಯಾನ್ಮಣ್ಯಾದ್ಯಭಾವಕೂಟಸ್ಯ ಕಾರಣತಾ ತ್ವಯೋಕ್ತಾ । ತಥಾಚಾನನುಗತಾನಾಂ ತಾವದಭಾವಾನಾಂ ಕಾರಣತಾತತ್ತದನಂತನಿಷ್ಠಾನಂತಧರ್ಮಾಣಾಂ ಕಾರಣತಾವಚ್ಛೇದಕತ್ವಮಿತಿ ಕಲ್ಪನಾತ್ ವರಂ ಶಕ್ತಿಕಲ್ಪನಮ್ । ಅನ್ಯಥಾತವಾಪಿಸಮವಾಯೋ ನಸಿಧ್ಯೇತ್। ಕ್ಲೃಪ್ತೈರನಂತೈಃಸ್ವರೂಪಸಂಬಂಧೈರೇವ ವಿಶಿಷ್ಟಪ್ರತೀತ್ಯುಪಪತ್ತೇರಿತ್ಯಾಹುಃ ॥

ಅನುವಾದ – ಕೆಲವರು ಹೀಗೆ ಹೇಳುತ್ತಾರೆ - ಪ್ರತಿಬಂಧಕಾಭಾವತ್ವೇನ ಕಾರಣತ್ವವನ್ನು ಹೇಳುವುದಾದರೆ ಮಣ್ಯಾದ್ಯಭಾವಕೂಟಕ್ಕೆ ಕಾರಣತ್ವವನ್ನು ತಾರ್ಕಿಕರಾದ ನೀವು ಹೇಳುತ್ತೀರಿ. ಆಗ ಅನನುಗತವಾದ ಅಭಾವಗಳಲ್ಲಿ ಕಾರಣತ್ವವನ್ನು ಅವುಗಳಲ್ಲಿರುವ ಅನಂತಧರ್ಮಗಳಿಗೆ ಕಾರಣತಾವಚ್ಛೇದಕತ್ವವನ್ನು ಕಲ್ಪನೆ ಮಾಡುವುದಕ್ಕಿಂತ ಕೇವಲ ಶಕ್ತಿಯನ್ನು ಕಲ್ಪನೆ ಮಾಡುವುದೇ ಶ್ರೇಷ್ಠವಾಗಿದೆ. ಇಲ್ಲದಿದ್ದರೆ ನಿಮ್ಮ ಮತದಲ್ಲಿಯೂ ಸಮವಾಯವೆಂಬುದೇ ಸಿದ್ಧವಾಗದಿರಬೇಕಾದೀತು. ಕ್ಲೃಪ್ತವಾದ ಅನಂತವಾದ ಸ್ವರೂಪಸಂಬಂಧಗಳಿಂದಲೇ ವಿಶಿಷ್ಟಪ್ರತೀತಿಯು ಉಪಪನ್ನವಾಗುವುದರಿಂದ ಎಂದು.

ವಿವರಣೆ – ತಾರ್ಕಿಕರು ದಾಹಕ್ಕೆ ಪ್ರತಿಬಂಧಕಾಭಾವವನ್ನು ಕಾರಣವೆಂದು ಹೇಳುತ್ತಾರೆ. ಅದಕ್ಕಿಂತ ಶಕ್ತಿಯನ್ನು ಕಲ್ಪನೆ ಮಾಡಿದರೆ ಲಾಘವವಿದೆ ಎಂದು ಕೇಚಿತ್ತು ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಬೇರೆ ವಾದಿಗಳ ಅಭಿಪ್ರಾಯವನ್ನು ಕೇಚಿತ್ತು ಇತ್ಯಾದಿಯಾಗಿ ಹೇಳುತ್ತಿಲ್ಲ. ತಮ್ಮ ಅಭಿಪ್ರಾಯವನ್ನೇ ಮತ್ತೊಂದು ಭಂಗಿಯಲ್ಲಿ ಸಮರ್ಥಿಸಲು ಈ ಗ್ರಂಥವು ಹೊರಟಿದೆ.

ತಾರ್ಕಿಕರು ಪ್ರತಿಬಂಧಕಾಭಾವವನ್ನು ಕಾರಣವೆಂದು ಹೇಳುವ ಕ್ರಮ ಹೀಗಿದೆ - ಮಣಿ, ಮಂತ್ರ, ಔಷಧಿ ಮೊದಲಾದವುಗಳು ಪ್ರತಿಬಂಧಕಗಳಾಗಿವೆ. ಇವುಗಳನ್ನು ಅಗ್ನಿಯಲ್ಲಿಟ್ಟಾಗ ದಾಹವುಂಟಾಗುವುದಿಲ್ಲ. ಇವುಗಳನ್ನು ತೆಗೆದಾಗ ದಾಹವುಂಟಾಗುತ್ತದೆ. ಆದ್ದರಿಂದ ಪ್ರತಿಬಂಧಕಾಭಾವವನ್ನೇ ಕಾರಣವೆಂದು ಹೇಳಬೇಕು. ಮಣ್ಯಭಾವ, ಮಂತ್ರಾಭಾವ, ಔಷಧ್ಯಭಾವಗಳು ಪ್ರತಿಬಂಧಕಾಭಾವತ್ವೇನ ದಾಹಕ್ಕೆ ಕಾರಣವೆಂದು ಹೇಳಿದರೆ ಅನ್ಯೋನ್ಯಾಶ್ರಯದೋಷವು ಬರುತ್ತದೆಂದು ಈ ಹಿಂದೆಯೇ ಹೇಳಿದ್ದೇವೆ. ಪ್ರತಿಬಂಧಕತ್ವ ಎಂದರೆ ಕಾರಣೀಭೂತಾಭಾವಪ್ರತಿಯೋಗಿತ್ವ ಎಂದರ್ಥ. ಮಣ್ಯಾದ್ಯಭಾವಗಳಿಗೆ ಕಾರಣತ್ವವು ಸಿದ್ಧವಾದರೆ ಅದಕ್ಕೆ ಪ್ರತಿಯೋಗಿಯಾದ ಮಣ್ಯಾದಿಗಳಿಗೆ ಪ್ರತಿಬಂಧಕತ್ವವು ಸಿದ್ಧವಾಗುತ್ತದೆ. ಮಣ್ಯಾದಿಗಳಿಗೆ ಪ್ರತಿಬಂಧಕತ್ವವು ಸಿದ್ಧವಾದರೆ ಮಾತ್ರ ತದಭಾವತ್ವೇನ ಮಣ್ಯಾದ್ಯಭಾವಗಳಿಗೆ ಕಾರಣತ್ವವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯ ದೋಷವನ್ನು ಈ ಹಿಂದೆ ಹೇಳಲಾಗಿತ್ತು. ಇದನ್ನು ಪರಿಹರಿಸಿಕೊಳ್ಳಲು ತತ್ತ್ವಚಿಂತಾಮಣಿಯಲ್ಲಿ ಪ್ರತಿಬಂಧಕಾಭಾವಕೂಟವನ್ನು ಕಾರಣವೆಂದು ಹೇಳಿದ್ದನು. ಜಗತ್ತಿನಲ್ಲಿ ಎಷ್ಟು

ಮಂತ್ರಗಳಿವೆಯೋ, ಎಷ್ಟು ಮಣಿಗಳಿವೆಯೋ, ಎಷ್ಟು ಓಷಧಿಗಳಿವೆಯೋ ಆ ಎಲ್ಲಾ ಪ್ರತಿಬಂಧಕಗಳ ಅಭಾವಗಳ ಗುಂಪು ದಾಹಕ್ಕೆ ಕಾರಣವೆಂದು ಹೇಳಿದ್ದನು.

ತಾರ್ಕಿಕರ ಈ ವಾದ ಅಸಾಧುವಾಗಿದೆ. ಏಕೆಂದರೆ ಪ್ರತಿಬಂಧಕಗಳು ಅನಂತವಾಗಿರುವುದರಿಂದ ಪ್ರತಿಬಂಧಕಾಭಾವಗಳು ಕೂಡ ಅನಂತವಾಗಿವೆ. ಅನಂತವಾದ ಮಣಿಗಳ ಅಭಾವ, ಅನಂತವಾದ ಮಂತ್ರಗಳಅಭಾವ, ಅನಂತವಾದ ಔಷಧಿಗಳ ಅಭಾವ ಇವುಗಳನ್ನು ಕಲ್ಪನೆ ಮಾಡಬೇಕು. ಇದಕ್ಕಿಂತ ಒಂದು ಶಕ್ತಿಯನ್ನು ಕಾರಣವೆಂದು ಹೇಳುವುದರಲ್ಲಿ ಲಾಘವವಿದೆ. ಪ್ರತಿಬಂಧಕತ್ವ ಎಂದರೆ ಕಾರಣನಿಷ್ಠಕಾರ್ಯಾನುಕೂಲಶಕ್ತಿವಿಘಟಕತ್ವಂ ಹೀಗೆ ಹೇಳಿದಾಗ ಅನ್ಯೋನ್ಯಾಶ್ರಯದೋಷಕ್ಕೂ ಅವಕಾಶವಿಲ್ಲ. ಅನಂತಪ್ರತಿಬಂಧಕಾಭಾವವನ್ನು ಕಲ್ಪನೆ ಮಾಡುವುದಕ್ಕಿಂತ ಒಂದೇ ಶಕ್ತಿಯನ್ನು ಒಪ್ಪಿ ಅಂತಹ ಶಕ್ತಿವಿಘಟಕತ್ವವನ್ನು ಪ್ರತಿಬಂಧಕತ್ವವೆಂದು ಒಪ್ಪಬೇಕು.

ಸ್ವತಃ ತಾರ್ಕಿಕರಾದ ನೀವು ಕೂಡ ಕಲ್ಪನಾಗೌರವವನ್ನು ಸಹಿಸುವುದಿಲ್ಲ. ಏಕೆಂದರೆ ಅನಂತವಾದ ಸ್ವರೂಪಸಂಬಂಧವನ್ನು ಒಪ್ಪಿ ವಿಶಿಷ್ಟಪ್ರತೀತಿಯನ್ನು ನಿರ್ವಾಹ ಮಾಡುವುದಕ್ಕಿಂತ ಒಂದೇ ಸಮವಾಯ ಸಂಬಂಧವನ್ನು ಒಪ್ಪುವುದರಿಂದ ಲಾಘವವಿದೆಯೆಂದು ನೀವು ಹೇಳುತ್ತೀರಿ. ಅದರಂತೆ ಇಲ್ಲಿಯೂ ಕೂಡ ಹೇಳಿರಿ ಎಂದಭಿಪ್ರಾಯ.

## ತಾರ್ಕಿಕರಿಗೆ ಅನ್ಯೋನ್ಯಾಶ್ರಯದೋಷ

**ನ್ಯಾಯದೀಪ – ಪ್ರಕಾರಾಂತರೇಣ ಶಕ್ತಿಸಿದ್ಧಿಮನ್ಯಾಪದೇಶೇನಾಹ – ಕೇಚಿತ್ತ್ವಿತಿ॥ ಅನ್ಯೋನ್ಯೇತಿ॥ 'ಮಣ್ಯಾದ್ಯಭಾವಾನಾಂ ಪ್ರತಿಬಂಧಕಾಭಾವತ್ವೇ ಜ್ಞಾತೇ ತದಭಾವಾನಾಂ ಕಾರಣತ್ವಜ್ಞಾನಂ ಕಾರಣತ್ವಜ್ಞಾನೇ ಚ ಸತಿ ಕಾರಣೀಭೂತಾಭಾವ ಪ್ರತಿಯೋಗಿತ್ವರೂಪಪ್ರತಿಬಂಧಕತ್ವಜ್ಞಾನಂ ಸತಿ ಚ ತಸ್ಮಿನ್ ಪ್ರತಿಬಂಧಕಾಭಾವತ್ವೇನ ತದಭಾವಾನಾಂ ಕಾರಣತ್ವಜ್ಞಾನಮ್' ಇತ್ಯನ್ಯೋನ್ಯಾಶ್ರಯಾದ್ದೇತೋರಭಾವಕೂಟಸ್ಯ ಕಾರಣತಾ ತ್ವಯೋಕ್ತೇತ್ಯರ್ಥಃ॥**

ಅನುವಾದ – ಅನ್ಯೋನ್ಯಾಶ್ರಯದೋಷವನ್ನು ಹೀಗೆ ತಿಳಿಯಬೇಕು - ಮಣ್ಯಾದ್ಯಭಾವಗಳಿಗೆ ಪ್ರತಿಬಂಧಕಾಭಾವತ್ವವು ತಿಳಿದರೆ ತದಭಾವಗಳಿಗೆ ಕಾರಣತ್ವಜ್ಞಾನವು ಬರುತ್ತದೆ. ಕಾರಣತ್ವಜ್ಞಾನ ಬಂದರೆ ಕಾರಣೀಭೂತವಾದ ಅಭಾವಪ್ರತಿಯೋಗಿತ್ವರೂಪವಾದ ಪ್ರತಿಬಂಧಕತ್ವದ ಜ್ಞಾನವು ಬರುತ್ತದೆ. ಪ್ರತಿಬಂಧಕಜ್ಞಾನತ್ವವು ಬಂದರೆ ಪ್ರತಿಬಂಧಕಾಭಾವತ್ವೇನ ತದಭಾವಗಳಿಗೆ ಕಾರಣತ್ವಜ್ಞಾನವು ಬರುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷ ಬರುವುದರಿಂದ ಅಭಾವಕೂಟಕ್ಕೆ ಕಾರಣತ್ವವನ್ನು ನೀವು ಹೇಳಿರುತ್ತೀರಿ ಎಂದರ್ಥ.

## ಪ್ರತಿಬಂಧಕಾಭಾವಗಳ ಕೂಟವೇ ಕಾರಣತ್ವವಲ್ಲ

ನ್ಯಾಯದೀಪ – ತತಶ್ಚ ಕಿಮ್ ? ಇತ್ಯತಃ ಸ್ವಾಭಿಮತಸಾಧ್ಯಮಾಹ – ತಥಾಚೇತಿ ॥ 'ಅಭಾವಕೂಟಸ್ಯಕಾರಣತ್ವೇಸತಿ' ಇತ್ಯರ್ಥಃ॥ ಅನ್ಯಥಾಕಲ್ಪನಾಗೌರವಾನಾದರಇತ್ಯರ್ಥಃ॥ ತವಾಪೀತಿ ॥ 'ಜಾತಿಗುಣಕ್ರಿಯಾವಿಶಿಷ್ಟಪ್ರತೀತಯೋ ವಿಶೇಷಣಸಂಬಂಧನಿಮಿತ್ತಕಾ ಇತ್ಯಾದಿರೂಪೇಣ ಸಮವಾಯಮನುಮಿಮಾನಸ್ಯ ತವ' ಇತ್ಯರ್ಥಃ।

ಅನುವಾದ – ತಾರ್ಕಿಕರು ಪ್ರತಿಬಂಧಕಾಭಾವಗಳ ಕೂಟವನ್ನೇ ಕಾರಣತ್ವ ಎನ್ನುತ್ತಾರೆ ಇದರಿಂದೇನಾಯಿತು ಎಂದರೆ ತಮಗೆ ಸಮ್ಮತವಾದ ಸಾಧ್ಯವನ್ನು 'ತಥಾ ಚ' ಎಂಬುದರಿಂದ ಹೇಳುತ್ತಿದ್ದಾರೆ. ತಥಾ ಚ ಎಂಬ ಪದಕ್ಕೆ 'ಅಭಾವಕೂಟವನ್ನು ಒಪ್ಪಿದರೆ ಎಂದರ್ಥ. 'ಅನ್ಯಥಾ' ಎಂಬ ಪದಕ್ಕೆ ಕಲ್ಪನಾಗೌರವವನ್ನು ಅನಾದರ ಮಾಡಿದರೆ ಎಂದರ್ಥ. ತವಾಪಿ ಎಂಬುದರ ಅಭಿಪ್ರಾಯ ಹೀಗಿದೆ - 'ಜಾತಿಗುಣವಿಶಿಷ್ಟಪ್ರತೀತಯಃ ವಿಶೇಷಣಸಂಬಂಧನಿಮಿತ್ತಕಾಃ ಅಬಾಧಿತವಿಶಿಷ್ಟಪ್ರತ್ಯಯತ್ವಾತ್ ಇಹ ಕುಂಡೇ ಬದರಾಣಿ ಇತಿ ಪ್ರತ್ಯಯವತ್' ಎಂಬುದಾಗಿ ಸಮವಾಯವನ್ನು ಅನುಮಾನ ಮಾಡುವ ನಿಮಗೂ ಕೂಡ ಎಂದರ್ಥ. 'ಇಯಂ ಗೌಃ ಎಂಬುದು ಜಾತಿವಿಶಿಷ್ಟಪ್ರತೀತಿ. ಘಟಃ ರೂಪವಾನ್ ಎಂಬುದು ಗುಣವಿಶಿಷ್ಟಪ್ರತೀತಿ. 'ಘಟಃ ಚಲತಿ' ಎಂಬುದು ಕ್ರಿಯಾವಿಶಿಷ್ಟಪ್ರತೀತಿ. ಈ ಎಲ್ಲಾ ಪ್ರತೀತಿಗಳಲ್ಲಿ ವಿಶೇಷಣವಿಶೇಷ್ಯಗಳಿಗೆ ಸಂಬಂಧವು ಇರಬೇಕು. ಏಕೆಂದರೆ ಅಬಾಧಿತಪ್ರತೀತಿಯಾಗಿರುವುದರಿಂದ ಎಂಬುದು ಅನುಮಾನದ ಅಭಿಪ್ರಾಯ. ಆ ಸಂಬಂಧವನ್ನು ಲಾಘವ ಇರುವುದರಿಂದ ಸಮವಾಯ ಎಂದೇ ಒಪ್ಪಬೇಕು ಎಂದು ತಾರ್ಕಿಕರು ಹೇಳುತ್ತಾರೆ.

## ಕೇಚಿತ್‌ಕಾರರ ಪಕ್ಷದಲ್ಲಿ ಅಸ್ವಾರಸ್ಯ

ನ್ಯಾಯದೀಪ - ಅತ್ರ ಪಕ್ಷೇऽರುಚಿಬೀಜಂ ತು 'ಪ್ರತಿಬಂಧಕಾಭಾವಾನಾಂ ವಕ್ಷ್ಯಮಾಣದಿಶಾ ವಿಶಿಷ್ಟವಿಧಿತ್ವಾದಿನಾऽನುಗತಿಪಕ್ಷೇऽಸ್ಯ ದೋಷಸ್ಯಾಭಾವಾತ್ ಅನ್ಯಥಾನುಪಪತ್ತ್ಯಾ ಶಕ್ತಿಕಲ್ಪನಾನವಕಾಶಃ' ಇತಿ ಬೋಧ್ಯಮ್ । ತಥಾऽಪಿ ತತ್ಪರರೀತ್ಯಾ ಪರಸ್ಯಾಪಾದನಸಂಭವಾದೇ- ತತ್ಪಕ್ಷಾವತಾರ ಇತ್ಯದೋಷಃ ॥

ಅನುವಾದ – 'ಕೇಚಿತ್ತು' ಎಂಬ ಈ ಪಕ್ಷದಲ್ಲಿ ಅಸ್ವಾರಸ್ಯಕ್ಕೆ ಕಾರಣವನ್ನು ಹೀಗೆ ತಿಳಿಯಬೇಕು - ಪ್ರತಿಬಂಧಕಾಭಾವಗಳಿಗೆ ಮುಂದೆ ಹೇಳುವಂತೆ ವಿಶಿಷ್ಟವಿರೋಧಿತ್ವವನ್ನು ಕಾರಣತಾವಚ್ಛೇದಕವನ್ನಾಗಿ ತಾರ್ಕಿಕನು ಸಮರ್ಥನೆ ಮಾಡುತ್ತಾನೆ. ಆಗ ಅನುಗತಿ ಪಕ್ಷದಲ್ಲಿ ದೋಷವನ್ನು ಹೇಳಲು ಸಾಧ್ಯವಾಗುವುದಿಲ್ಲ. ಅನ್ಯಥಾನುಪಪತ್ತಿಯಿಂದ ಶಕ್ತಿಕಲ್ಪನೆಗೆ ಅವಕಾಶವು ಕೂಡ ಇರುವುದಿಲ್ಲ. ಆದರೂ ಕೂಡ ಅವರ ಪ್ರಕಾರವೇ ಅವರನ್ನು ಆಪಾದನೆ ಮಾಡುವುದಕ್ಕಾಗಿ ಗ್ರಂಥಕಾರರು ಕೇಚಿತ್ಕಾರರ ಈ ಪಕ್ಷವನ್ನು ಸ್ವೀಕರಿಸಿದ್ದಾರೆ. ಆದ್ದರಿಂದ ಕೇಚಿತ್ಕಾರರ ಈ ಪಕ್ಷವನ್ನು ಉಲ್ಲೇಖಿಸಿದ್ದು ತಪ್ಪಲ್ಲ.

ವಿವರಣೆ – ಕೇಚಿತ್ಕಾರರು ಅನಂತ ಕಾರಣಗಳನ್ನು ಕಲ್ಪನೆ ಮಾಡಬೇಕು; ಅನಂತ ಕಾರಣತಾವಚ್ಛೇದಕಗಳನ್ನು ಕಲ್ಪನೆ ಮಾಡಬೇಕು, ಅನುಗತವಾದ ಕಾರಣತಾವಚ್ಛೇದಕವೇ ಇರುವುದಿಲ್ಲ ಇತ್ಯಾದಿ ದೋಷಗಳನ್ನು ಹೇಳಿದ್ದಾರೆ. ಈ ಎಲ್ಲಾ ದೋಷಗಳನ್ನು ಮಣಿಕಾರನು ಮುಂದೆ ಪರಿಹರಿಸುತ್ತಾನೆ. ಹೇಗೆಂದರೆ ಮಣ್ಯಾದ್ಯಭಾವಗಳು ಕಾರಣವೆಂದೇ ಹೇಳುತ್ತೇವೆ. ಪ್ರತಿಬಂಧಕಾಭಾವತ್ವವನ್ನು ಕಾರಣತಾವಚ್ಛೇದಕವೆಂದು ಹೇಳುವುದಿಲ್ಲ. ವಿಶಿಷ್ಟವಿರೋಧಿತ್ವವನ್ನು ಅನುಗತ ಅವಚ್ಛೇದಕವನ್ನಾಗಿ ಹೇಳುತ್ತೇವೆ. ಇದರ ಅಭಿಪ್ರಾಯ ಹೀಗಿದೆ - ಉತ್ತೇಜಕಾಭಾವವಿಶಿಷ್ಟವಾದ ಮಣ್ಯಾದಿಗಳು ಪ್ರತಿಬಂಧಕಗಳಾಗಿವೆ. ಉತ್ತೇಜಕಾಭಾವವಿಶಿಷ್ಟವಾದ ಮಣ್ಯಾದ್ಯಭಾವಗಳು ಅನೇಕವಾಗಿದ್ದರೂ ಪ್ರತಿಯೋಗಿಗೆ ವಿರುದ್ಧವಾಗಿವೆ. ಪ್ರತಿಬಂಧಕಾಭಾವತ್ವೇನ ಕಾರಣವೆಂದು ಹೇಳಿದರೆ ಅನ್ಯೋನ್ಯಾಶ್ರಯ ಬರುತ್ತಿತ್ತು. ವಿಶಿಷ್ಟವಿರೋಧಿತ್ವೇನ ಕಾರಣವೆಂದು ಹೇಳಿದಾಗ ಅನ್ಯೋನ್ಯಾಶ್ರಯದೋಷವು ಬರುವುದಿಲ್ಲ. ಹೀಗೆ ವಿಶಿಷ್ಟವಿರೋಧಿತ್ವ ಎಂಬ ಕಾರಣತಾವಚ್ಛೇದಕವನ್ನು ಮುಂದೆ

ಸಮರ್ಥಿಸುತ್ತಾನೆ. ಆಗ ಕೇಚಿತ್ಕಾರರು ಹೇಳಿದ ದೋಷವನ್ನು ಮಣಿಕಾರನು ಪರಿಹರಿಸಿಕೊಂಡಂತಾಗುತ್ತದೆ. ಆದ್ದರಿಂದ ಕೇಚಿತ್ಕಾರರು ಹೇಳಿದ ದೋಷ ಅಸ್ವರಸವಾಗಿದೆ.

ಹಾಗಾದರೆ ಕೇಚಿತ್ಕಾರರ ಈ ಪಕ್ಷವನ್ನು ಗ್ರಂಥಕಾರರು ಏಕೆ ಉಲ್ಲೇಖ ಮಾಡಿದ್ದಾರೆ? ಎಂದರೆ ತಾರ್ಕಿಕನು ವಿಶಿಷ್ಟವನ್ನೇ ಒಪ್ಪುವುದಿಲ್ಲ. ವಿಶಿಷ್ಟವಿರೋಧಿತ್ವವನ್ನು ಹೇಳಲು ಅವನಿಗೆ ಸಾಧ್ಯವಾಗುವುದಿಲ್ಲ. ಹೀಗೆ ಅವನ ಪ್ರಕಾರವೇ ಅವನಿಗೆ ದೋಷವನ್ನು ತೋರಿಸುವುದಕ್ಕಾಗಿ ಗ್ರಂಥಕಾರರು ಇಲ್ಲಿ ಅನುವಾದ ಮಾಡಿದ್ದಾರೆ.

## ಗೋಷ್ಠಿಯ ವಿಚಾರ

ಆಕ್ಷೇಪ - ಶಕ್ತಿಯು ಕಾರಣವಲ್ಲ; ಕಾರಣತ್ವವೆಂದು ಏಕೆ ಹೇಳುವಿರಿ?

ಸಮಾಧಾನ - ಶಕ್ತಿಯು ಕಾರಣವೆಂದರೆ ಅನವಸ್ಥಾ ಬರುತ್ತದೆ.

ಆಕ್ಷೇಪ - ಹೇಗೆ?

ಸಮಾಧಾನ - ದಾಹಕ್ಕೆ ಅಗ್ನಿಯು ಕಾರಣ ಅದರಂತೆ ಅಗ್ನಿಯಲ್ಲಿರುವ ಶಕ್ತಿಯೂ ಕಾರಣ; ಆ ಶಕ್ತಿಗೆ ಮತ್ತೊಂದು ಶಕ್ತಿ ಕಾರಣ; ಅದಕ್ಕೆ ಇನ್ನೊಂದು ಶಕ್ತಿ ಕಾರಣ ಎಂದು.

ಆಕ್ಷೇಪ - ಕಾರಣತ್ವವೆಂದು ಒಪ್ಪಿದರೆ ಅನವಸ್ಥಾ ಬರುವುದಿಲ್ಲವೇ?

ಸಮಾಧಾನ - ಶಕ್ತಿಯು ಕಾರಣತ್ವವೆಂದು ಹೇಳಿದಾಗ ದಾಹಕ್ಕೆ ಅಗ್ನಿಯು ಮಾತ್ರ ಕಾರಣವಾಗುತ್ತದೆ. ಶಕ್ತಿಯು ಅಗ್ನಿಯಲ್ಲಿರುವ ಅತೀಂದ್ರಿಯವಾದ ಒಂದು ಪದಾರ್ಥ ಮಾತ್ರ. ಇದು ದಾಹಕ್ಕೆ ಅನುಕೂಲ ಹೊರತು ಕಾರಣವಲ್ಲ.

ಆಕ್ಷೇಪ - ಹಾಗಾದರೆ ಕುಲಾಲಪಿತನೂ ಕೂಡ ಘಟಕ್ಕೆ ಅನುಕೂಲವೆಂದಾಯಿತಲ್ಲವೇ?

ಸಮಾಧಾನ - ಹೌದು; ದಂಡ ಬಿಟ್ಟು ಉಳಿದ ಸಾಮಗ್ರಿಗಳೆಲ್ಲವೂ ಕೂಡ ಅನುಕೂಲಗಳೇ.

ಆಕ್ಷೇಪ - ಹಾಗಿದ್ದರೆ ಶಕ್ತಿಯನ್ನು ಮಾತ್ರ ಅನುಕೂಲವಲ್ಲವೆನ್ನಲು ಸಾಧ್ಯವಾಯಿತು.

ಸಮಾಧಾನ - ಹೌದು; ಒಂದು ಕಾರ್ಯವು ಹುಟ್ಟಬೇಕೆಂದರೆ ಅದಕ್ಕೆ ಎಷ್ಟು ಸಾಮಗ್ರಿಗಳು ಬೇಕೋ ಅವೆಲ್ಲವೂ ಅನುಕೂಲವೆಂದೇ ಕರೆಸಿಕೊಳ್ಳುತ್ತವೆ. ಅನುಕೂಲತ್ವವು ಕಾರಣತ್ವಕ್ಕಿಂತ ಅಧಿಕದೇಶವೃತ್ತಿಯಾದ ಧರ್ಮವಾಗಿದೆ.

## ಅಪೂರ್ವಪ್ರತಿಬಂದಿಯಿಂದ ಶಕ್ತಿಯ ಸಮರ್ಥನೆ

ತರ್ಕತಾಂಡವ - ಕಿಂಚೈವಮುತ್ತೇಜಕಾಭಾವವಿಶಿಷ್ಟಮಣ್ಯಭಾವಸ್ಯ ಹೇತುತ್ವಂ ಸ್ವೀಕೃತ್ಯ ಶಕ್ತ್ಯಪಲಾಪೇ ಪ್ರಾಯಶ್ಚಿತ್ತಾಭಾವಸಹಕೃತಸಂಧ್ಯಾವಂದನಾದ್ಯಕರಣಸ್ಯ ನರಕಹೇತುತ್ವಸಂಭವಾತ್ ತತ್ ನಿವರ್ತ್ಯಮಪಿ ದೂರಿತಾಪೂರ್ವಂ ನ ಸಿಧ್ಯೇತ್ ॥

ಅನುವಾದ - ಉತ್ತೇಜಕಾಭಾವವಿಶಿಷ್ಟವಾದ ಮಣ್ಯಭಾವವು ದಾಹಕ್ಕೆ ಕಾರಣ ಎಂದು ಸ್ವೀಕರಿಸಿ ಶಕ್ತಿಯನ್ನು ಅಪಲಾಪ ಮಾಡುವುದಾದರೆ ಪ್ರಾಯಶ್ಚಿತ್ತಾಭಾವಸಹಕೃತವಾದ ಸಂಧ್ಯಾವಂದನಾದ್ಯಕರಣಕ್ಕೆ ನರಕಹೇತುತ್ವವು ಇರುವುದರಿಂದ ತನ್ನಿವರ್ತ್ಯವಾದ ದುರಿತಾಪೂರ್ವವೂ ಕೂಡ ಸಿದ್ಧವಾಗದಿರಬೇಕಾದೀತು.

ವಿವರಣೆ– ಪ್ರಾಯಶ್ಚಿತ್ತಾಭಾವಸಹಕೃತಸಂಧ್ಯಾವಂದನಾದ್ಯಕರಣಸ್ಯ ಎಂಬುದಕ್ಕೆ ಪ್ರಾಯಶ್ಚಿತ್ತ-ಪ್ರಾಗಭಾವವಿಶಿಷ್ಟಸಂಧ್ಯಾವಂದನಾದ್ಯಕರಣಸ್ಯ ಎಂದರ್ಥ. ಸಂಧ್ಯಾವಂದನಾದ್ಯಕರಣವು ನರಕಕ್ಕೆ ಹೇತುವಾಗಿದೆ. ಕೇವಲ ಸಂಧ್ಯಾವಂದನಾದ್ಯಕರಣವು ನರಕಹೇತುವಲ್ಲ. ಪ್ರಾಯಶ್ಚಿತಪ್ರಾಗಭಾವವಿಶಿಷ್ಟವಾದ ಸಂಧ್ಯಾವಂದನಾದ್ಯಕರಣವು ನರಕಕ್ಕೆ ಹೇತುವಾಗಿದೆ. ಪ್ರಾಯಶ್ಚಿತ್ತಪ್ರಾಗಭಾವವಿಶಿಷ್ಟವಾದ ಸಂಧ್ಯಾವಂದನಾದ್ಯಕರಣವು ಪ್ರಾಯಶ್ಚಿತ್ತ ಮಾಡಿದಾಗ ಬರುವುದಿಲ್ಲ. ಪ್ರಾಯಶ್ಚಿತ್ತವೆಂಬ ವಿಶೇಷಣವೇ ಇರುವುದರಿಂದ ವಿಶೇಷಣಾಭಾವದಿಂದ ವಿಶೇಷ್ಯವು ವಿಶಿಷ್ಟವಾಗುವುದಿಲ್ಲ. ಆದ್ದರಿಂದ ಸಂಧ್ಯಾವಂದನಾದ್ಯಕರಣವಿದ್ದರೂ ಪ್ರಾಯಶ್ಚಿತ್ತಪ್ರಾಗಭಾವವಿಶಿಷ್ಟವಾದ ಸಂಧ್ಯಾವಂದನಾದ್ಯಕರಣವು ಇಲ್ಲದ ಕಾರಣ ನರಕವು ಆಗುವುದಿಲ್ಲ. ಹೀಗೆಯೇ ಕೂಡಿಸಲು ಬರುವಾಗ ದುರಿತಾಪೂರ್ವವನ್ನು ಏಕೆ ಕಲ್ಪನೆ ಮಾಡಬೇಕು. ಪ್ರಾಯಶ್ಚಿತ್ತವಿಧ್ಯನ್ಯಥಾನುಪಪತ್ತಿಯಿಂದ ದುರಿತಾಪೂರ್ವವನ್ನು ನೀವು ಕಲ್ಪನೆ

ಮಾಡಿದ್ದೀರಿ. ಅದನ್ನು ಬೇರೆ ರೀತಿಯಲ್ಲಿಯೇ ಕೂಡಿಸಲು ಬರುವಾಗ ದುರಿತಾಪೂರ್ವವನ್ನು ಕಲ್ಪನೆ ಮಾಡಬೇಕಾಗಿಲ್ಲ ಎಂಬುದು ಆಕ್ಷೇಪದ ಅಭಿಪ್ರಾಯ.

ನ್ಯಾಯದೀಪ– ಅಪೂರ್ವಪ್ರತಿಬಂದ್ಯಾಽಪಿ ಶಕ್ತಿಂ ಸಾಧಯತಿ– ಕಿಂಚೈವಮಿತಿ॥ ಪೂರ್ವತ್ರ ಶ್ರುತ್ಯಾದಿನಿರೂಪಣವಾದೇ 'ಅತ್ರ ನೈಯಾಯಿಕಾಃ' ಇತ್ಯಾದಿನೋಕ್ತರೀತ್ಯೈವಶಬ್ದಾರ್ಥಃ॥

ಅನುವಾದ – ಅಪೂರ್ವಪ್ರತಿಬಂದಿಯಿಂದ ಶಕ್ತಿಯನ್ನು ಸಾಧನೆ ಮಾಡುತ್ತಿದ್ದಾರೆ 'ಕಿಂಚೈವಮ್' ಇತ್ಯಾದಿಯಾಗಿ. 'ಹಿಂದೆ ಶ್ರುತ್ಯಾದಿನಿರೂಪಣವಾದದಲ್ಲಿ 'ಅತ್ರ ನೈಯಾಯಿಕಾಃ' ಇತ್ಯಾದಿ ಗ್ರಂಥದಿಂದ ಹೇಳಿದ ಪ್ರಕಾರ' ಎಂಬುದು 'ಏವಂ' ಎಂಬ ಪದದ ಅರ್ಥ.

## ದುರಿತಾಪೂರ್ವದಂತೆ ಸುಕೃತಾಪೂರ್ವವೂ ಕೂಡ ಸಿದ್ಧವಾಗದಿರಬೇಕಾದೀತು

ತರ್ಕತಾಂಡವ – (ಏವಂ ಜ್ಯೋತಿಷ್ಟೋಮಾದಿಜನ್ಯಮ್) ಅಪೂರ್ವಮಪಿ ನ ಸಿಧ್ಯೇತ್ । ಅನ್ವಯವ್ಯತಿರೇಕಾಭ್ಯಾಂ ಸಾಂಗಯಾಗಪ್ರಾಗಭಾವವಿಶಿಷ್ಟಾತ್ಮಾಭಾವಸ್ಯೈವ ಸ್ವರ್ಗಾದಿಫಲಹೇತುತ್ವೋಪಪತ್ತೇಃ । ಆತ್ಮನಃ ಸ್ಥಾಯಿತ್ವೇನ ವಿಶೇಷ್ಯಾಭಾವಾಭಾವೇಪಿ ಪ್ರಾಗಭಾವರೂಪವಿಶೇಷಣಾಭಾವೇನ ವಿಶಿಷ್ಟಾಭಾವಸಂಭವಾತ್ ॥

ಅನುವಾದ – ಇದರಂತೆ ಜ್ಯೋತಿಷ್ಟೋಮಾದಿಯಾಗಗಳಿಂದ ಜನ್ಯವಾದ ಅಪೂರ್ವವೂ ಕೂಡ ಸಿದ್ಧವಾಗದೇ ಹೋಗಬೇಕಾದೀತು. ಏಕೆಂದರೆ ಅನ್ವಯವ್ಯತಿರೇಕಗಳಿಂದ ಸಾಂಗಯಾಗಪ್ರಾಗಭಾವವಿಶಿಷ್ಟಾತ್ಮಾಭಾವವೆ ಸ್ವರ್ಗಾದಿಫಲಹೇತುವೆಂದು ಕೂಡಿಸಬಹುದು. ಆತ್ಮನು ಸ್ಥಾಯಿಯಾದ್ದರಿಂದ ವಿಶೇಷ್ಯಾಭಾವವನ್ನು ಹೇಳಲು ಬಾರದಿದ್ದರೂ ಪ್ರಾಗಭಾವರೂಪವಾದ ವಿಶೇಷಣಾಭಾವದಿಂದ ವಿಶಿಷ್ಟಾಭಾವವನ್ನು ಹೇಳಬಹುದು.

ವಿವರಣೆ – ದುರಿತಾಪೂರ್ವವು ಸಿದ್ಧವಾಗದಿರಬೇಕಾದೀತು ಎಂಬ ದೋಷವಿದ್ದಂತೆ ಅಪೂರ್ವವು ಕೂಡ ಸಿದ್ಧವಾಗದಿರಬೇಕೆಂಬ ಮತ್ತೊಂದು ದೋಷವು ಬರುತ್ತದೆ.

ಆತ್ಮನು ಯಾಗ ಮಾಡುವುದಕ್ಕಿಂತ ಮೊದಲು ಸಾಂಗಯಾಗಪ್ರಾಗಭಾವವಿಶಿಷ್ಟನಾಗಿದ್ದನು. ಸಾಂಗವಾಗಿ ಯಾಗವನ್ನು ಮಾಡಿದ ಅನಂತರ ಸಾಂಗಯಾಗಪ್ರಾಗಭಾವವಿಶಿಷ್ಟನಾದ ಆತ್ಮನು ಧ್ವಂಸನಾದನು. ಈಧ್ವಂಸವು ಸ್ಥಾಯಿಯಾಗಿರುವುದರಿಂದ ಸ್ವರ್ಗವಾಗುತ್ತದೆ. ಹೀಗೆಯೇ ಹೇಳಿ ಯಾಗವು ಸ್ವರ್ಗಕ್ಕೆ ಕಾರಣವೆಂದು ಹೇಳಲು ಬರುವಾಗ ಮಧ್ಯದಲ್ಲಿ ಸುಕೃತಾಪೂರ್ವವನ್ನು ಕಲ್ಪನೆ ಮಾಡಬೇಕಾಗಿಲ್ಲ.

ಆತ್ಮನು ಸ್ಥಾಯಿಯಾಗಿರುವುದರಿಂದ ಅವನಿಗೆ ಧ್ವಂಸವನ್ನು ಹೇಳಲು ಹೇಗೆ ಸಾಧ್ಯ ? ಎಂದರೆ ವಿಶೇಷ್ಯನಾದ ಆತ್ಮನು ಸ್ಥಾಯಿಯಾಗಿರುವುದರಿಂದ ಅವನಿಗೆ ಯಾವುದೇ ರೀತಿಯ ಅಭಾವವನ್ನು ಹೇಳಲು ಬರುವುದಿಲ್ಲ. ಆದರೂ ಸಹ ಸಾಂಗಯಾಗಪ್ರಾಗಭಾವವೆಂಬ ವಿಶೇಷಣವನ್ನು ಆತ್ಮನಲ್ಲಿ ಇಲ್ಲವೆಂದು ಹೇಳಬಹುದು. ವಿಶೇಷಣಾಭಾವದಿಂದ ವಿಶಿಷ್ಟಾಭಾವವನ್ನು ಹೇಳಬಹುದು.

ನ್ಯಾಯದೀಪ – ಅಪೂರ್ವಮಪೀತಿ ॥ 'ಯಾಗಜನ್ಯಾಪೂರ್ವಮಪಿ' ಇತ್ಯರ್ಥಃ। 'ಕಥಂ ತರ್ಹಿ ಚಿರಧ್ವಸ್ತಯಾಗಾದೇಃ ಸ್ವರ್ಗಾದಿಹೇತುತಾ' ಇತ್ಯತ ಆಹ - ಅನ್ವಯೇತಿ ॥

ಅನುವಾದ – 'ಅಪೂರ್ವಮಪಿ' ಎಂದರೆ ಯಾಗಜನ್ಯವಾದ ಅಪೂರ್ವ ಎಂದರ್ಥ. ಹಾಗಾದರೆ ಬಹಳ ಹಿಂದೆ ಮಾಡಿದ ಯಾಗವು ಸ್ವರ್ಗಕ್ಕೆ ಹೇಗೆ ಕಾರಣವಾಯಿತು ? ಎಂಬ ಪ್ರಶ್ನೆಗೆ ಅನ್ವಯವ್ಯತಿರೇಕಾಭ್ಯಾಂ ಎಂಬ ವಾಕ್ಯವು ಉತ್ತರಿಸುತ್ತಿದೆ.

ವಿವರಣೆ – ಮುದ್ರಿತಪುಸ್ತಕಗಳಲ್ಲಿ ಜ್ಯೋತಿಷ್ಟೋಮಾದಿಜನ್ಯಮಪೂರ್ವಮಪಿ ಎಂಬ ಪಾಠವಿದೆ. ಆದರೆ ನ್ಯಾಯದೀಪದಲ್ಲಿ ಅಪೂರ್ವಮಪಿ ಎಂದಷ್ಟೇ ಪ್ರತೀಕವನ್ನು ಗ್ರಹಣಮಾಡಿ ಯಾಗಜನ್ಯಮಪೂರ್ವಮಪಿ ಎಂಬರ್ಥವನ್ನು ಬರೆದಿದ್ದಾರೆ. ಹೀಗೆ ಅರ್ಥವನ್ನು ಬರೆದಿದ್ದರಿಂದಲೇ ಮೂಲದಲ್ಲಿ ಅಪೂರ್ವಮಪಿ ಎಂಬ ಪಾಠವನ್ನಷ್ಟೇ ವಿವಕ್ಷಿಸಬೇಕೆಂದು ತಿಳಿಯುತ್ತದೆ. ಆದ್ದರಿಂದ ಜ್ಯೋತಿಷ್ಟೋಮಾದಿಜನ್ಯಂ ಎಂಬುದು ನ್ಯಾಯದೀಪಕ್ಕೆ ಸಮ್ಮತವಲ್ಲದ ಪಾಠವೆಂದು ತಿಳಿಯಬೇಕು.

## ಸ್ಥಾಯಿಯಾದ ಆತ್ಮನಲ್ಲಿ ವಿಶಿಷ್ಟಾಭಾವ ಹೇಗೆ ?

ನ್ಯಾಯದೀಪ – ಉಪಪತ್ತೇರಿತ್ಯೇತದ್ವ್ಯನಕ್ತಿ – ಆತ್ಮನ ಇತಿ ॥ ಇಷ್ಟಾಪೂರ್ತಾದಿಕಾರಿಣೋ ಯಜಮಾನಾತ್ಮನಃ ಸ್ಥಾಯಿತ್ವೇಽಪಿ ತಸ್ಯ ಕೃತಯಾಗಾದಿತ್ವೇನ ತತ್ರ ತತ್ಪ್ರಾಗಭಾವಾಭಾವಾತ್ ವಿಶೇಷಣಾಭಾವಪ್ರಯುಕ್ತೋ ವಿಶಿಷ್ಟಭಾವಃ ಸುಲಭ ಏವ, ಮಣ್ಯಾದಿಸತ್ತ್ವದಶಾಯಾಮುತ್ತೇಜಕೇ ಸತಿ ಉತ್ತೇಜಕಾಭಾವವಿಶಿಷ್ಟಮಣ್ಯಾದ್ಯಭಾವಸತ್ವವದಿತಿ ಭಾವಃ ॥

ಅನುವಾದ – 'ಸ್ವರ್ಗಾದಿಫಲಹೇತುತ್ವೋಪಪತ್ತೇಃ' ಎಂದು ಹೇಳಿದರು. ಈ ಉಪಪತ್ತಿಯನ್ನೇ 'ಆತ್ಮನಃ' ಎಂಬ ಮುಂದಿನ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಯಜ್ಞಯಾಗಾದಿ ಇಷ್ಟಗಳನ್ನು ಕೆರೆ ಭಾವಿಗಳನ್ನು ತೋಡಿಸುವ ಮೂಲಕ ಪೂರ್ತಾದಿಗಳನ್ನು ಆಚರಣೆ ಮಾಡುವ ಯಜಮಾನನೆಂಬ ಆತ್ಮನು ಸ್ಥಾಯಿಯಾಗಿದ್ದಾನೆ. ಆದರೆ ಅವನು ಆಚರಿಸಿದ ಯಾಗವು ಧ್ವಂಸವಾಗಿದೆ. ಯಾಗವು ಧ್ವಸ್ತವಾಗಿರುವುದರಿಂದ ಯಾಗದ ಪ್ರಾಗಭಾವವು ಇರುವುದಿಲ್ಲ. ಆದ್ದರಿಂದ ವಿಶೇಷಣಾಭಾವಪ್ರಯುಕ್ತವಾಗಿ ವಿಶಿಷ್ಟಾಭಾವವು ಸುಲಭವಾಗಿ ಬರುತ್ತದೆ. ಹೇಗೆಂದರೆ ಮಣಿ ಇದ್ದಾಗಲೇ ಉತ್ತೇಜಕವಿದ್ದರೆ ಉತ್ತೇಜಕಾಭಾವವಿಶಿಷ್ಟ-ಮಣ್ಯಾದ್ಯಭಾವವನ್ನು ತಾರ್ಕಿಕರು ಹೇಳುವಂತೆ ಇಲ್ಲಿಯೂ ತಿಳಿಯಬೇಕು.

## ವಿಶೇಷಣಾಭಾವ ಪ್ರಯುಕ್ತವಾಗಿ ವಿಶಿಷ್ಟಾಭಾವ

ನ್ಯಾಯದೀಪ – ನನು ಯಾಗಸ್ಯೈವ ಪ್ರಾಗಭಾವವಿರೋ ತಯಾಽಽಶುತರವಿನಾಶಿ-ಯಾಗನಾಶೇ ಪ್ರಾಗಭಾವೋನ್ಮಜ್ಜನ್ನಾನ್ನವಿಶೇಷಣಾಭಾವಸಂಭ ವ ಇತಿ ಚೇನ್ನ । ಯಾಗಸ್ಯೇವ ತದ್ ಧ್ವಂಸಸ್ಯಾಪಿ ತತ್ಪ್ರಾಗ್ಭಾವವಿರೋಧಿತ್ವಾತ್ ॥

ಅನುವಾದ – ಪ್ರಾಗಭಾವಕ್ಕೆ ಪ್ರತಿಯೋಗಿಯಾದ ಯಾಗವಷ್ಟೇ ವಿರೋಧಿಯಾಗಿದೆ. ಆ ಯಾಗವಾದರೋ ಆಶುತರವಿನಾಶಿಯಾಗಿರುವುದರಿಂದ ಪುನಃ ಪ್ರಾಗಭಾವವು

ಹುಟ್ಟಿಕೊಳ್ಳಬೇಕಾದೀತು! ಆದ್ದರಿಂದ ವಿಶೇಷಣಾಭಾವವನ್ನೇ ಹೇಳುವುದು ಅಸಂಭಾವಿತವಾಗುತ್ತದೆ ಎಂದು ಪ್ರಶ್ನಿಸಬಾರದು. ಯಾಗದಂತೆ ಯಾಗದ ಧ್ವಂಸವೂ ಕೂಡ ಪ್ರಾಗಭಾವಕ್ಕೆ ವಿರೋಧಿಯಾಗಿದೆ.

ವಿಶೇಷವಿಚಾರ – ಘಟವು ಹುಟ್ಟುವ ಮೊದಲು ಅದರ ಪ್ರಾಗಭಾವವಿರುತ್ತದೆ. ಘಟ ಹುಟ್ಟಿದ ಮೇಲೆ ಪ್ರಾಗಭಾವನಾಶವಾಗುತ್ತದೆ. ಅದೇ ಘಟ ನಾಶವಾದ ಮೇಲೆ ಮೊದಲಿರುವ ಘಟವು ಪುನಃ ಉನ್ಮಜ್ಜನವಾಗಲಿ (ಹುಟ್ಟಿಕೊಳ್ಳಲಿ) ಎಂಬುದು ಆಕ್ಷೇಪದ ಅಭಿಪ್ರಾಯ.

ಪ್ರಾಗಭಾವಕ್ಕೆ ಪ್ರತಿಯೋಗಿಯು ಹೇಗೆ ವಿರೋಧಿಯೋ ಅದರಂತೆ ಪ್ರತಿಯೋಗಿಧ್ವಂಸವೂ ಕೂಡ ವಿರೋಧಿಯಾಗಿದೆ. ಆದ್ದರಿಂದ ಪ್ರತಿಯೋಗಿಯಿದ್ದಾಗ ಪ್ರಾಗಭಾವವು ಇಲ್ಲದಿರುವಂತೆ ಅದರ ಧ್ವಂಸವಿದ್ದಾಗಲೂ ಪ್ರಾಗಭಾವವಿರಲು ಸಾಧ್ಯವಿಲ್ಲ ಎಂಬುದು ಸಮಾಧಾನದ ಅಭಿಪ್ರಾಯ.

## ನಿತ್ಯವಾದ ಕಾರಣದಿಂದ ಅನಿತ್ಯವಾದ ಫಲ ಹುಟ್ಟಬಹುದು

**ತರ್ಕತಾಂಡವ – ನಚಾಸ್ಯ ವಿಶಿಷ್ಟಾಭಾವಸ್ಯಾನಂತತ್ವೇನ ಫಲಾನಂತ್ಯಂ ಸ್ಯಾದಿತಿ ಶಂಕ್ಯಮ್ । ಸಾವಧಿಕಫಲಬೋಧಕಶ್ರುತಿಬಲಾದಪೂರ್ವಸ್ಯೇವೋಕ್ತಸ್ಯ ವಿಶಿಷ್ಟಾಭಾವಸ್ಯಾಪಿ ಸಾವಧಿಕಫಲಜನಕತ್ವಸ್ವಭಾವಕಲ್ಪನಾತ್ ॥**

ಅನುವಾದ – ವಿಶಿಷ್ಟಾಭಾವರೂಪವಾದ ಆತ್ಮಪ್ರಧ್ವಂಸಾಭಾವವು ನಿತ್ಯವಾಗಿರುವುದರಿಂದ ಸ್ವರ್ಗರೂಪವಾದ ಫಲವೂ ಕೂಡ ನಿತ್ಯವಾಗಬೇಕಾದೀತು ಎಂದು ಆಶಂಕಿಸಬಾರದು. ಸಾವಧಿಕವಾದ ಫಲವನ್ನು ಬೋಧಿಸುವ ಶ್ರುತಿಯ ಬಲದಿಂದ ಫಲವು ನಿತ್ಯವಲ್ಲವೆಂದು ಕಲ್ಪನೆ ಮಾಡುತ್ತೇವೆ. ಅಪೂರ್ವವನ್ನು ಒಪ್ಪುವವರೂ ಕೂಡ ಶ್ರುತಿಬಲದಿಂದಲೇ ಫಲಕ್ಕೆ ಸಾವಧಿಕತ್ವವನ್ನು ಒಪ್ಪಬೇಕು. ನಾವೂ ಕೂಡ ಅದೇ ರೀತಿ ಹೇಳುತ್ತೇವೆ. ವಿಶಿಷ್ಟಾಭಾವವೂ ಕೂಡ ಸಾವಧಿಕಫಲಜನಕತ್ವಸ್ವಭಾವವನ್ನು ಹೊಂದಿರುತ್ತದೆಂದು ಕಲ್ಪನೆ ಮಾಡಬಹುದು.

ವಿವರಣೆ – ಸ್ವರ್ಗಕ್ಕೆ ಯಾಗಪ್ರಾಗಭಾವವಿಶಿಷ್ಟನಾದ ಆತ್ಮಾಭಾವವು ಕಾರಣವೆಂದು ಹೇಳಿದಂತಾಯಿತು. ಆತ್ಮಾಭಾವ ಎಂದರೆ ಆತ್ಮಪ್ರಧ್ವಂಸಾಭಾವ ಎಂದರ್ಥ. ಈ

ಪ್ರಧ್ವಂಸಾಭಾವವು ನಿತ್ಯವಾಗಿದೆ. ಧ್ವಂಸವು ನಿತ್ಯವಾಗಿರುವುದರಿಂದ ಫಲರೂಪವಾದ ಸ್ವರ್ಗವೂ ಕೂಡ ನಿತ್ಯ ಎಂದಾಗಬೇಕಾದೀತು. ಒಮ್ಮೆ ಯಾಗ ಮಾಡಿ ಸ್ವರ್ಗಕ್ಕೆ ಹೋದ ಮೇಲೆ ಪುನಃ ಮರ್ತ್ಯಲೋಕದ ಪ್ರವೇಶವೇ ಇಲ್ಲದಂತಾಗಬೇಕಾದೀತು.

ಅಪೂರ್ವವನ್ನು ಒಪ್ಪಿದಾಗ ಈ ದೋಷವಿಲ್ಲ. ಏಕೆಂದರೆ ಈ ಅಪೂರ್ವವು ಫಲೈಕನಾಶ್ಯವಾಗಿದೆ. ಫಲವನ್ನು ಅನುಭವಿಸಿದ ಮೇಲೆ ಅಪೂರ್ವವು ನಾಶವಾಗುತ್ತದೆ. ಆದರೆ ಧ್ವಂಸದ ವಿಷಯದಲ್ಲಿ ಹಾಗೆ ಹೇಳಲು ಸಾಧ್ಯವಿಲ್ಲ.

ಆತ್ಯಧ್ವಂಸಾಭಾವವು ನಿತ್ಯವಾಗಿದ್ದರೂ ಕೂಡ ಅದು ಸಾವಧಿಕವಾದ ಫಲವನ್ನು ಹುಟ್ಟಿಸಬಹುದು. 'ಯತ್ಕಾರಣಂ ನಿರವಧಿಕಂ ತತ್ಕಾರ್ಯಮಪಿ ನಿರವಧಿಕಂ' ಎಂಬುದಾಗಿ ವ್ಯಾಪ್ತಿಯು ಇರುವುದಿಲ್ಲ. ಶ್ರುತಿಯ ಆಧಾರದಿಂದ ಸಾವಧಿಕವೆಂದು ಹೇಳುವ ಶ್ರುತಿಯ ಬಲದಿಂದ ಇದನ್ನು ಕಲ್ಪನೆ ಮಾಡುತ್ತೇವೆ.

ನ್ಯಾಯದೀಪ – ಪ್ರತಿಬಂಧಕಾಭಾವವೈಷಮ್ಯಮಾಶಂಕ್ಯ ನಿರಾಹ – ನ ಚೇತಿ ॥ ಸಾವಧಿಕೇತಿ॥ 'ಅಮೃತೋ ವಾ ವ ಸೋಮಪೋ ಭವತಿ ಯಾವದಿಂದ್ರೋ ಯಾವನ್ಮನುರ್ಯಾವದಾದಿತ್ಯಃ' ಇತ್ಯಾದಿಶ್ರುತೀತ್ಯರ್ಥಃ।

ಅನುವಾದ – ಪ್ರತಿಬಂಧಕಾಭಾವದಲ್ಲಿ ವೈಷಮ್ಯವಿದೆಯೆಂದು ಆಶಂಕಿಸಿ ನಿರಾಕರಣೆ ಮಾಡಲು 'ನಚ' ಇತ್ಯಾದಿ ಗ್ರಂಥವು ಹೊರಟಿದೆ. 'ಸಾವಧಿಕಫಲಬೋಧಕಶ್ರುತಿ' ಎಂದರೆ 'ಅಮೃತೋ ವಾ ವ ಸೋಮಪೋ ಭವತಿ ಯಾವದಿಂದ್ರೋ ಯಾವನ್ಮನುರ್ಯಾವದಾದಿತ್ಯಃ' ಎಂಬ ಶ್ರುತಿ ಎಂದರ್ಥ.

ವಿಶೇಷವಿಚಾರ – 'ಭಾಕ್ತಂ ವಾ ಅನಾತ್ಮವಿತ್ತ್ವಾತ್ ತಥಾ ಹಿ ದರ್ಶಯತಿ' ಎಂಬ ಸೂತ್ರದಲ್ಲಿ 'ಅಮೃತೋ ವಾ ವ' ಎಂಬ ಶ್ರುತಿಯನ್ನು ಉಲ್ಲೇಖ ಮಾಡುತ್ತಾರೆ. ಯಾಗಶೇಷವಾದ ಸೋಮವನ್ನು ಯಾರು ಪಾನ ಮಾಡುತ್ತಾನೋ ಅವನು ಮರಣರಹಿತರಾಗುತ್ತಾನೆಂದು ಶ್ರುತಿಯ ಅರ್ಥ. ಮರಣರಹಿತನಾಗುತ್ತಾನೆಂಬುದಕ್ಕೆ ಅನಂತಕಾಲದ ತನಕ ಎಂದರ್ಥವಲ್ಲ. ಎಲ್ಲಿಯ ತನಕ ಇಂದ್ರನಿರುತ್ತಾನೋ ಅಥವಾ ಮನು ಇರುವ ತನಕ ಅಥವಾ ಆದಿತ್ಯ ಇರುವ ತನಕ ಮರಣರಹಿತನಾಗುತ್ತಾನೆ ಎಂದಷ್ಟೇ ಅರ್ಥ. ಹೀಗೆ ಶ್ರುತಿಯು ಅವಧಿಯನ್ನು ಹೇಳುವ ಮೂಲಕ ಮರಣದಿಂದ ಉಪಲಕ್ಷಿತವಾದ ದುಃಖಾದಿಗಳ ರಾಹಿತ್ಯವನ್ನು ಹೇಳಿದೆ.

## ಅನುಭವಕ್ಕೆ ಸ್ಮರಣಹೇತುತ್ವವನ್ನು ಕೂಡಿಸಲು ಸಂಸ್ಕಾರವನ್ನು ಕೂಡ ಒಪ್ಪಬೇಕಾಗಿಲ್ಲ

**ತರ್ಕತಾಂಡವ** – ಅಪಿ ಚ ಯತ್ರ ದೇವದತ್ತಾದಿಶರೀರಂ ಪ್ರತ್ಯಕ್ಷೇಣ ಗೃಹೀತಂ ಪ್ರತ್ಯಕ್ಷಾಂತರೇಣಾನುಮಾನಾದಿನಾ ವಾ ಪುನರ್ನಾನುಭೂತಂ ತತ್ರಾಪಿ ತಚ್ಛರೀರ- ಸ್ಮೃತಿಸ್ತಾವದ್ಯುತ್ಪದ್ಯತೇ । ತಾಂ ಚ ಸ್ಮೃತಿಂ ಪ್ರತ್ಯನ್ವಯವ್ಯತಿರೇಕಾಭ್ಯಾಂ ತದನುಭವ- ಪ್ರಾಗಭಾವವಿಶಿಷ್ಟಾತ್ಮವಿರಹಃ ಸ್ಮೃತಿಪರ್ಯಂತಸ್ಥಾಯೀ ಕಾರಣಮಸ್ತು । ಕೃತಮನುಭವಸ್ಯ ಸ್ಮೃತಿಹೇತುತ್ವಮಂಗೀಕೃತ್ಯ ತನ್ನಿರ್ವಾಹಾಯ ಸಂಸ್ಕಾರಕಲ್ಪನಯಾ॥

ಅನುವಾದ – ಮತ್ತು ಎಲ್ಲಿ ದೇವದತ್ತಾದಿ ಶರೀರವು ಪ್ರತ್ಯಕ್ಷದಿಂದ ಗೃಹೀತವಾಗಿದೆಯೋ ಅನಂತರ ಪ್ರತ್ಯಕ್ಷಾಂತರದಿಂದಾಗಲೀ ಅನುಮಾನದಿಂದಾಗಲೀ ಪುನಃ ಅದೇ ಶರೀರದ ಅನುಭವವು ಪ್ರಾಪ್ತವಾಗಿಲ್ಲವೋ ಅಂತಹ ಸ್ಥಳದಲ್ಲಿಯೂ ಕೂಡ ದೇವದತ್ತನ ಶರೀರದ ಸ್ಮರಣೆಯು ಒಮ್ಮೆ ಬರುತ್ತದೆ. ಇಂತಹ ಸ್ಮರಣೆಗೆ ಅನ್ವಯವ್ಯತಿರೇಕಗಳಿಂದ ತದನುಭವಪ್ರಾಗಭಾವವಿಶಿಷ್ಟ ಆತ್ಮಧ್ವಂಸವನ್ನೇ ಸ್ಮೃತಿಪರ್ಯಂತವಾಗಿ ಸ್ಥಾಯಿಯಾದ ಕಾರಣವೆಂದು ಒಪ್ಪಬೇಕಾದೀತು. ಅನುಭವಕ್ಕೆ ಸ್ಮರಣಹೇತುತ್ವವನ್ನು ಅಂಗೀಕರಿಸಿ ಅದನ್ನು ನಿರ್ವಹಣೆ ಮಾಡುವುದಕ್ಕಾಗಿ ಸಂಸ್ಕಾರವನ್ನು ಕಲ್ಪನೆ ಮಾಡುವ ಅವಶ್ಯಕತೆ ಇರುವುದಿಲ್ಲ.

ವಿವರಣೆ – ಆತ್ಮನ ಪ್ರತ್ಯಕ್ಷ ಬರಲು ಸಾಧ್ಯವಿಲ್ಲ. ಅದಕ್ಕಾಗಿ 'ದೇವದತ್ತಾದಿಶರೀರಂ' ಎಂದು ಹೇಳಿದ್ದಾರೆ. ಒಮ್ಮೆ ದೇವದತ್ತನ ಶರೀರವನ್ನು ಪ್ರತ್ಯಕ್ಷದಿಂದ ನೋಡುತ್ತಾನೆ. ಅನಂತರ ಮುಂದೆ ಎಂದೂ ಕೂಡ ಮತ್ತೊಂದು ಪ್ರತ್ಯಕ್ಷದಿಂದ ನೋಡಲಿಲ್ಲ. ಅಥವಾ ಅನುಮಾನದಿಂದಲೂ ಕೂಡ ಅದನ್ನು ತಿಳಿಯಲಿಲ್ಲ. ಸಾಮಾನ್ಯವಾಗಿ ಮೊದಲು ಅನುಭವ ಬರುತ್ತದೆ; ಅನಂತರ ಸ್ಮರಣೆಯು ಬರುತ್ತದೆ. ಸ್ಮರಣೆಗೆ ಅನುಭವವೇ ಕಾರಣವೆಂದು

ಹೇಳುತ್ತಾರೆ. ಅನ್ವಯವ್ಯತಿರೇಕಗಳಿಂದ ಸ್ಮೃತಿಗೆ ಅನುಭವವೇ ಕಾರಣವೆಂದು ಲೋಕದಲ್ಲಿ ಕಂಡಿದೆ. ಸ್ಮೃತಿ ಮತ್ತು ಅನುಭವಗಳಿಗೆ ಕಾಲವ್ಯವಧಾನವು ಬಹಳವಾಗಿರುತ್ತದೆ. ಆದ್ದರಿಂದ ಕಾರ್ಯಕಾರಣಭಾವವನ್ನು ಹೇಗೆ ಹೇಳುವಿರಿ? ಎಂದು ಪ್ರಶ್ನಿಸಿದರೆ ಅನುಭವದ ಅನಂತರ ಸಂಸ್ಕಾರವು ಹುಟ್ಟುತ್ತದೆ. ಅನಂತರ ಈ ಸಂಸ್ಕಾರವು ಬಹಳ ದಿವಸಗಳ ಕಾಲ ಇರುವುದರಿಂದ ಆ ಸಂಸ್ಕಾರದಿಂದ ಸ್ಮರಣೆಯು ಹುಟ್ಟುತ್ತದೆಂದು ಹೇಳಬಹುದು. ಪ್ರಕೃತ ಸಂಸ್ಕಾರವು ಕೂಡ ಸ್ಮರಣೆಗೆ ಕಾರಣವಾಗುವುದು ಬೇಡ. ಹೊರತಾಗಿ ತದನುಭವಪ್ರಾಗಭಾವವಿಶಿಷ್ಟ ಆತ್ಮವಿರಹವೇ ಕಾರಣವಾಗಲಿ.

ತದನುಭವಪ್ರಾಗಭಾವವಿಶಿಷ್ಟ ಆತ್ಮವಿರಹದ ಅಭಿಪ್ರಾಯ ಹೀಗಿದೆ. ಯಾವಾಗ ಅನುಭವ ಬರುತ್ತದೋ ಆಗ ಅನುಭವದ ಪ್ರಾಗಭಾವವು ನಾಶವಾಗುತ್ತದೆ. ಅನುಭವಪ್ರಾಗಭಾವವೆಂಬ ವಿಶೇಷಣವು ಹಾಗೂ ತದ್ವಿಶಿಷ್ಟವಾದ ಆತ್ಮನು ನಾಶನಾಗುತ್ತಾನೆ. ಆದ್ದರಿಂದ ತದನುಭವಪ್ರಾಗಭಾವವಿಶಿಷ್ಟ ಆತ್ಮಧ್ವಂಸವು ಸ್ಥಾಯಿಯಾದ ಪದಾರ್ಥ. ಈ ಆತ್ಮಧ್ವಂಸದಿಂದ ನಮಗೆ ಸ್ಮರಣೆಯು ಬರುತ್ತದೆ. ಆದ್ದರಿಂದ ಅನುಭವವು ನಾಶವಾದರೂ ಕೂಡ ಆತ್ಮಧ್ವಂಸವು ಇರುವುದರಿಂದ ಇದರಿಂದ ಸ್ಮರಣೆಯು ಹುಟ್ಟುತ್ತದೆ. ಹೀಗೆ ಕಲ್ಪನೆ ಮಾಡುವುದರಿಂದ ಸ್ಮರಣೆಗೆ ಅನುಭವವು ಕಾರಣವೆಂದು ಹೇಳುವುದಕ್ಕಾಗಿ ಮಧ್ಯದಲ್ಲಿ ಸಂಸ್ಕಾರವನ್ನು ಒಪ್ಪುವ ಅವಶ್ಯಕತೆ ಇರುವುದಿಲ್ಲ.

ತದನುಭವಪ್ರಾಗಭಾವವಿಶಿಷ್ಟವಾದ ಆತ್ಮವಿರಹವೇ ಸ್ಮೃತಿಗೆ ಕಾರಣವೆಂದು ಹೇಳಿದರೆ ದೇವದತ್ತನ ಶರೀರದ ಅನುಭವ ಒಮ್ಮೆ ಆಗಿ ಪುನಃ ಇನ್ನೊಮ್ಮೆ ಆದಾಗ ತದನುಭವ ಪ್ರಾಗಭಾವವಿಶಿಷ್ಟ ಆತ್ಮನ ಧ್ವಂಸವನ್ನು ಮತ್ತೊಂದು ಒಪ್ಪಬೇಕಾಗುತ್ತದೆ. ಅದಕ್ಕಾಗಿ ಗ್ರಂಥಕಾರರು ದೇವದತ್ತನ ಶರೀರವನ್ನು ಪ್ರತ್ಯಕ್ಷದಿಂದ ಒಮ್ಮೆ ಜ್ಞಾನ ಬಂದಾಗ ಪುನಃ ಇನ್ನೊಮ್ಮೆ ಜ್ಞಾನ ಬರುವುದಿಲ್ಲವೆಂದು ಹೇಳಿದ್ದಾರೆ. ಹೀಗೆ ಹೇಳದಿದ್ದರೆ ಪ್ರತ್ಯಕ್ಷದಿಂದ ಒಂದು ಅನುಭವ ಹುಟ್ಟಿದ ಮೇಲೆ ಆ ಅನುಭವದ ಪ್ರಾಗಭಾವವು ನಾಶವಾಯಿತು. ನಾಳೆ ಇನ್ನೊಂದು ಅನುಭವವು ಬರುತ್ತದಾದ್ದರಿಂದ ಅದರ ಪ್ರಾಗಭಾವವು ಇವತ್ತಿನ ದಿವಸ ಇರುತ್ತದೆ. ಪ್ರತಿಯೊಂದು ಅನುಭವವೂ ಹುಟ್ಟುವ ಮೊದಲು ಅನುಭವಪ್ರಾಗಭಾವವಿಶಿಷ್ಟನಾದ ಆತ್ಮನೇ ಇರುತ್ತಾನೆ. ಆಗ ಅನುಭವಪ್ರಾಗಭಾವವಿಶಿಷ್ಟನಾದ ಆತ್ಮನೇ ಇರುತ್ತಾನೆಂದು ಹೇಳಿದಂತಾಗುತ್ತದೆ. ಅನುಭವಪ್ರಾಗಭಾವವಿಶಿಷ್ಟ ಆತ್ಮಧ್ವಂಸವನ್ನೇ ಹೇಳುವುದು

ಕಷ್ಟವಾಗುತ್ತಿತ್ತು. ಆದಕ್ಕೋಸ್ಕರ ಒಮ್ಮೆ ಅನುಭವವಾಗಿದೆ. ಇನ್ನೊಮ್ಮೆ ಯಾವುದರಿಂದಲೂ ಅನುಭವವಾಗಿಲ್ಲವೆಂದು ಗ್ರಂಥಕಾರರು ಹೇಳಿದ್ದಾರೆ.

ಆಕ್ಷೇಪ – ಮೊದಲನೆಯ ಅನುಭವಪ್ರಾಗಭಾವವಿಶಿಷ್ಟನಾದ ಆತ್ಮನು ಧ್ವಂಸನಾದ ಮೇಲೆ ಎರಡನೆಯ ಅನುಭವದ ಪ್ರಾಗಭಾವವಿರಲಿ. ಆದರೆ ಮೊದಲನೆಯ ಅನುಭವಪ್ರಾಗಭಾವ-ವಿಶಿಷ್ಟಆತ್ಮಧ್ವಂಸವೇ ಸ್ಮೃತಿಗೆ ಕಾರಣವೆಂದು ಹೇಳಬಹುದು. ಆದ್ದರಿಂದ ಒಂದು ಅನುಭವದ ಧ್ವಂಸವನ್ನು ಒಪ್ಪಿದರೆ ಸಾಕು ಸರ್ವಾನುಭವಧ್ವಂಸವನ್ನು ಒಪ್ಪುವ ಅವಶ್ಯಕತೆಯಿಲ್ಲ. ಹೀಗಿರುವಾಗ ಗ್ರಂಥದಲ್ಲಿ ದೇವದತ್ತನ ಶರೀರವು ಪ್ರತ್ಯಕ್ಷದಿಂದ ಒಮ್ಮೆ ಗೃಹೀತವಾಗಿದೆ. ಪುನಃ ಇನ್ನೊಮ್ಮೆ ಗೃಹೀತವಾಗಿಲ್ಲವೆಂದು ಹೇಳುವ ಅವಶ್ಯಕತೆ ಏನು?

ಸಮಾಧಾನ – 'ಅನುಭವವಿಶಿಷ್ಟಪ್ರಾಗಭಾವವಿಶಿಷ್ಟಆತ್ಮವಿರಹಃ' ಎಂಬಲ್ಲಿ ಅನುಭವತ್ವಾವಚ್ಛಿನ್ನ ಸಕಲ ಅನುಭವಗಳನ್ನು ವಿವಕ್ಷಿಸಬೇಕು. ಅನೇಕ ಅನುಭವಗಳಿದ್ದಾಗ ಯಾವ ಅನುಭವವನ್ನು ತೆಗೆದುಕೊಳ್ಳಬೇಕು ಎಂಬುದೇ ಗೊಂದಲವಾಗುತ್ತದೆ. ಆಗ ಅನೇಕ ಅನುಭವಗಳಿದ್ದಾಗ ಪ್ರಾಥಮಿಕ ಎಂಬುದಾಗಿ ವಿಶೇಷಣವನ್ನು ಕೊಡಬೇಕಾಗುತ್ತದೆ.

ಮತ್ತು ಪ್ರಾಥಮಿಕ ಎಂಬುದಾಗಿ ವಿಶೇಷಣವನ್ನು ಕೊಟ್ಟು ನಿರ್ವಹಣೆ ಮಾಡಬಹುದು. ಆದರೆ ಹಾಗೆ ಉಪಪಾದನೆ ಮಾಡುವುದರಲ್ಲಿ ಬಹಳ ಕ್ಲೇಶವಿದೆ. ಸುಲಭವಾಗಿ ಅರ್ಥ ಮಾಡಿಸುವುದಕ್ಕಾಗಿ ಇಂತಹ ಸ್ಥಳವನ್ನು ಗ್ರಂಥಕಾರರು ಸ್ವೀಕರಿಸಿದ್ದಾರೆ.

## ಮತ್ತೊಂದು ಪ್ರತಿಬಂಧಿ

ನ್ಯಾಯದೀಪ – ಯಥಾ ಫಲಾನಂತ್ಯಶಂಕಾ ನಾಸ್ತಿ ತಥಾ ಪ್ರತಿಬಂಧ್ಯಂತರಮಾಹ – ಅಪಿ ಚೇತಿ ॥ ಅನುಭವಪ್ರಾಗಭಾವರೂಪವಿಶೇಷಣಸ್ಯಾಭಾವೋಽಪಪಾದನಾ-ಯೋಕ್ತಮ್ ಪ್ರತ್ಯಕ್ಷಾಂತರೇಣಾ- ನುಮಾನಾದಿನಾ ವಾ ಪುನರ್ನಾನುಭೂತಮಿತಿ ॥ ಕೃತಮಿತಿ ॥ ಅಲಮಿತ್ಯರ್ಥಃ।

ಫಲಾನಂತ್ಯಶಂಕೆಯು ಹೇಗೆ ಬರುವುದಿಲ್ಲವೋ ಹಾಗೆ ಮತ್ತೊಂದು ಪ್ರತಿಬಂದಿಯನ್ನು 'ಅಪಿ ಚ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಅನುಭವಪ್ರಾಗಭಾವ ಎಂಬ ವಿಶೇಷಣದ ಅಭಾವವನ್ನು

ಉಪಪಾದನೆ ಮಾಡುವುದಕ್ಕಾಗಿ 'ಪ್ರತ್ಯಕ್ಷಾಂತರೇಣ ಅನುಮಾನಾದಿನಾ ವಾ ಪುನರ್ನಾನುಭೂತಂ' ಎಂದು ಹೇಳಿದ್ದಾರೆ. 'ಕೃತಂ' ಎಂಬ ಪದಕ್ಕೆ 'ಅಲಂ' ಎಂದರ್ಥ.

## ಸ್ಮೃತಿ ಎಂಬ ಫಲದ ಸಾತತ್ಯಶಂಕೆಗೆ ಅವಕಾಶವಿಲ್ಲ

**ತರ್ಕತಾಂಡವ – ನ ಚಾತ್ರ ಸ್ಮೃತಿರೂಪಫಲಸಾತತ್ಯಶಂಕಾऽವಕಾಶೋಽಸ್ತಿ । ಸಂಸ್ಕಾರಕಲ್ಪನಾಪಕ್ಷ ಇವ ಸದೃಶಾದೃಷ್ಟಚಿಂತಾಸಹಕಾರಿವೈಕಲ್ಯಾದೇವ ಫಲಾಭಾವೋಪಪತ್ತೇः ॥**

ಅನುವಾದ – ಸ್ಮೃತಿರೂಪವಾದ ಫಲದ ಸಾತತ್ಯಶಂಕೆಯನ್ನು ಮಾಡಲು ಅವಕಾಶವಿಲ್ಲ. ಏಕೆಂದರೆ ಸಂಸ್ಕಾರವನ್ನು ಕಲ್ಪನೆ ಮಾಡುವ ಪಕ್ಷದಲ್ಲಿಯೂ ಈ ಆಶಂಕೆಯು ಸಮಾನವಾಗಿದೆ. ಆದ್ದರಿಂದ ನೀವುಗಳು ಸದೃಶ, ಅದೃಷ್ಟ, ಚಿಂತಾ ಮೊದಲಾದ ಸಹಕಾರಿಗಳು ಇಲ್ಲದಿರುವುದರಿಂದಲೇ ಸ್ಮೃತಿ ಎಂಬ ಫಲ ಹುಟ್ಟುವುದಿಲ್ಲ ಎಂದು ಉತ್ತರಿಸಬೇಕು. ನಾವೂ ಕೂಡ ಅದೇ ಉತ್ತರವನ್ನು ಹೇಳುತ್ತೇವೆ.

ವಿವರಣೆ – ಅನುಭವ ಹುಟ್ಟಿದ ಎರಡನೆಯ ಕ್ಷಣದಲ್ಲಿಯೇ ಅನುಭವವು ನಾಶವಾಯಿತು. ಅಲ್ಲಿಂದ ಪ್ರಾರಂಭಿಸಿ ಅನುಭವಪ್ರಾಗಭಾವವಿಶಿಷ್ಟಾತ್ಮಧ್ವಂಸವಿದೆ. ಆದ್ದರಿಂದ ಸ್ಮೃತಿಯೂ ಕೂಡ ನಿರಂತರವಾಗಿ ಇರಬೇಕಾದೀತಲ್ಲವೇ?

ಹೀಗೆ ಸ್ಮೃತಿಸಾತತ್ಯಾಶಂಕೆಯನ್ನು ಮಾಡಬಾರದು. ಏಕೆಂದರೆ, ಮೊದಲನೆಯ ಕ್ಷಣದಲ್ಲಿ ಅನುಭವ ಹುಟ್ಟಿ ಎರಡನೆಯ ಕ್ಷಣದಲ್ಲಿ ನಾಶವಾದಾಗ ಸಂಸ್ಕಾರವು ಹುಟ್ಟಿದೆ. ಯಾವ ಕ್ಷಣದಲ್ಲಿ ಸಂಸ್ಕಾರವು ಹುಟ್ಟಿತೋ ಅಲ್ಲಿಂದ ಪ್ರಾರಂಭಮಾಡಿ ಸ್ಮೃತಿಯ ತನಕ ಸಂಸ್ಕಾರವು ಸತತವಾಗಿ ಇರಬೇಕೆಂದು ನೀನೂ ಕೂಡ ಹೇಳಬೇಕು. ಸಂಸ್ಕಾರವು ಸತತವಾಗಿರುವುದರಿಂದ ಸ್ಮೃತಿಯೂ ಕೂಡ ನಿರಂತರವಾಗಿ ಇರಬೇಕಾದೀತು ಎಂಬ ಆಪಾದನೆ ನಿನಗೂ ಕೂಡ ಸಮಾನವಾಗಿದೆ. ಈ ಆಕ್ಷೇಪವನ್ನು ಪರಿಹರಿಸಿಕೊಳ್ಳಬೇಕಾದರೆ ನೀನು ಸದೃಶ, ಅದೃಷ್ಟ, ಚಿಂತಾ ಮೊದಲಾದ ಇವುಗಳನ್ನು ಸಹಕಾರಿ ಎಂದು ಹೇಳಬೇಕು. ಈ ಸಹಕಾರಿ ಇರುವುದರಿಂದ ಸ್ಮೃತಿ ಬರುವುದಿಲ್ಲವೆಂದು ಹೇಳಬೇಕು. ಇದೇ ಸಮಾಧಾನವನ್ನು ನಾವು ಕೂಡ ಹೇಳುತ್ತೇವೆ.

ಅನುಭವವಿಶಿಷ್ಟಪ್ರಾಗಭಾವಾತ್ಮವಿರಹವೇ ಸ್ಮೃತಿಗೆ ಕಾರಣ ಆದರೂ ಸ್ಮೃತಿಯು ನಿರಂತರವಾಗಿ ಬರುವುದಿಲ್ಲ. ಏಕೆಂದರೆ ಈ ಸಹಕಾರಿಗಳು ನಿರಂತರವಾಗಿ ಇರುವುದಿಲ್ಲ. ಯಾವಾಗ ಸಹಕಾರಿಗಳು ಇರುತ್ತವೋ ಆಗ ಮಾತ್ರ ಸ್ಮರಣೆಯು ಬರುತ್ತದೆಂದು ಉತ್ತರಿಸುತ್ತೇವೆ.

ನ್ಯಾಯದೀಪ – ಪ್ರಾಗುಕ್ತದೋಷೋಽತ್ರ ನೇತ್ಯಾಹ – ನ ಚಾತ್ರೇತಿ ॥

ಅನುವಾದ – ಹಿಂದೆ ಹೇಳಿದ ದೋಷಕ್ಕೆ ಇಲ್ಲಿ ಅವಕಾಶವಿಲ್ಲವೆಂದು 'ನ ಚಾತ್ರ' ಎಂಬ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

## ತಾರ್ಕಿಕರ ಬಾಯಿಯಿಂದಲೇ ಉತ್ತರವನ್ನು ಹೇಳಿಸಿದಂತಾಯಿತು

ತರ್ಕತಾಂಡವ – ಯದಿ ಚ ತತ್ರ ಸ್ವರ್ಗಸ್ಮರಣಾದೌ ಕ್ಲೃಪ್ತಕಾರಣಭಾವಸ್ಯ ಯಾಗಾನುಭವಾದೇರೇವ ಲಾಘವೇನ ಭಾವರೂಪಾಪೂರ್ವಸಂಸ್ಕಾರದ್ವಾರಾ ಕಾರಣತ್ವಂ ವ್ಯವಸ್ಥಾಪ್ಯ ತದಭಾವಾತ್ ಕಾರ್ಯಾಭಾವೋಪಪಾದನಂ; ತರ್ಹಿಹಾಪಿ ದಾಹೇ ಕ್ಲೃಪ್ತಕಾರಣಭಾವಸ್ಯ ವಹ್ನೇರೇವ ಲಾಘವಾತ್ ಭಾವರೂಪಶಕ್ತ್ಯಾ ಕಾರಣತ್ವಂ ನಿರ್ವಾಹ್ಯ ತದಭಾವಾತ್ ಕಾರ್ಯಾಭಾವ ಉಪಪಾದ್ಯತಾಮ್ । ಕೃತಮುತ್ತಂಭಕಾ- ಭಾವವಿಶಿಷ್ಟಪ್ರತಿಬಂಧಕಾಭಾವಸ್ಯ ಹೇತುತ್ವಕಲ್ಪನಯಾ ॥

ಅನುವಾದ – ಒಂದು ವೇಳೆ ಈ ಎರಡು ಸ್ಥಳಗಳಲ್ಲಿ ಸ್ವರ್ಗಕ್ಕೆ ಯಾಗವು ಕಾರಣವೆಂಬುದು ಕ್ಲೃಪ್ತವಾಗಿರುವುದರಿಂದ ಸ್ಮರಣೆಗೆ ಅನುಭವವು ಕಾರಣವೆಂಬುದು ಕ್ಲೃಪ್ತವಾಗಿರುವುದರಿಂದ ಭಾವರೂಪವಾದ ಅಪೂರ್ವದ ಮೂಲಕವೇ ಯಾಗವು ಸ್ವರ್ಗಕ್ಕೆ ಕಾರಣವಾಗುತ್ತದೆಂದು ಹೇಳುವಲ್ಲಿ ಲಾಘವವಿದೆ; ಮತ್ತು ಸಂಸ್ಕಾರದ ಮೂಲಕವಾಗಿ ಅನುಭವವು ಸ್ಮರಣೆಗೆ ಕಾರಣವಾಗುತ್ತದೆಂದು ಹೇಳುವುದರಲ್ಲಿಯೂ ಲಾಘವವಿದೆ. ಈ ಎರಡು ಅಪೂರ್ವ ಹಾಗೂ ಸಂಸ್ಕಾರಗಳು ಇಲ್ಲದಿದ್ದಾಗ ಕಾರ್ಯವು ಹುಟ್ಟುವುದಿಲ್ಲವೆಂದು ಸುಲಭವಾಗಿ

ನಿರ್ವಹಣೆಯನ್ನು ಮಾಡಬಹುದು. ಹೀಗೆ ತಾರ್ಕಿಕರು ಉತ್ತರ ನೀಡಬೇಕು. ಇದೇ ಉತ್ತರವನ್ನು ನಾವು ಕೂಡ ಪ್ರಕೃತದಲ್ಲಿ ಹೇಳುತ್ತಿದ್ದೇವೆ. ದಾಹಕ್ಕೆ ವಹ್ನಿಯು ಕಾರಣವೆಂದು ಅನುಭವಸಿದ್ಧವಾಗಿದೆ. ಈ ದಾಹವನ್ನು ಶಕ್ತಿ ಎಂಬ ಕಾರಣತ್ವದಿಂದಲೇ ನಿರ್ವಹಣೆ ಮಾಡಿದಾಗ ಲಾಘವವಿದೆ. ಮತ್ತು ಭಾವರೂಪವೂ ಆಗಿದೆ. ಶಕ್ತಿ ಎಂಬ ಕಾರಣತ್ವವು ಇಲ್ಲದಿದ್ದಾಗ ದಾಹವೆಂಬ ಕಾರ್ಯವು ಹುಟ್ಟುವುದಿಲ್ಲ ಎಂದು ಸುಲಭವಾಗಿ ನಿರ್ವಹಣೆ ಮಾಡಬಹುದು. ಆದ್ದರಿಂದ ಉತ್ತಂಭಕಾಭಾವವಿಶಿಷ್ಟಪ್ರತಿಬಂಧಕಾಭಾವಕ್ಕೆ ಹೇತುತ್ವವನ್ನು ಕಲ್ಪನೆ ಮಾಡುವುದು ವ್ಯರ್ಥವೇ ಆಗಿದೆ.

ವಿವರಣೆ – ಕ್ಲೃಪ್ತಕಾರಣಭಾವಸ್ಯ ಎಂಬ ಪದವು ಬಹುವ್ರೀಹಿಸಮಾಸದಲ್ಲಿದೆ. 'ಕ್ಲೃಪ್ತಃ ಕಾರಣಭಾವಃ ಯಸ್ಯ ಸಃ ಕ್ಲೃಪ್ತಕಾರಣಭಾವಃ, ತಸ್ಯ ಕ್ಲೃಪ್ತಕಾರಣಭಾವಸ್ಯ' ಎಂದು. ಕಾರಣಭಾವ ಎಂದರೆ ಕಾರಣತ್ವ ಎಂದರ್ಥ. ಸ್ವರ್ಗಕ್ಕೆ ಯಾಗವು ಕಾರಣವೆಂಬುದು ಕ್ಲೃಪ್ತವಾಗಿದೆ. ಸ್ಮರಣೆಗೆ ಅನುಭವವು ಕಾರಣವೆಂಬುದು ಕ್ಲೃಪ್ತವಾಗಿದೆ ಎಂದರ್ಥ. ಸ್ವರ್ಗಕ್ಕೆ ಯಾಗವು ಕಾರಣವೆಂಬುದು ಶ್ರುತಿಯಿಂದ ಸಿದ್ಧವಾಗಿದೆ. ಸ್ಮರಣೆಯನ್ನು ಕುರಿತು ಅನುಭವವು ಕಾರಣವೆಂದು ಅನುಭವ ಸಿದ್ಧವಾಗಿದೆ. ಇವೆರಡನ್ನು ನಿರ್ವಹಣೆ ಮಾಡುವುದಕ್ಕಾಗಿ ಮಧ್ಯದಲ್ಲಿ ಅಪೂರ್ವವನ್ನು ಹಾಗೂ ಸಂಸ್ಕಾರವನ್ನು ಹೇಳುವುದೇ ಸಾಧುವಾಗಿದೆ. ಏಕೆಂದರೆ ಅಪೂರ್ವ ಹಾಗೂ ಸಂಸ್ಕಾರ ಇವೆರಡರಲ್ಲಿ ಲಾಘವವಿದೆ. ಹಾಗೂ ಭಾವರೂಪವಾಗಿವೆ. ಇದನ್ನೇ ಇಟ್ಟುಕೊಂಡು ಕಾರಣತ್ವವನ್ನು ನಿರ್ವಹಣೆ ಮಾಡಲು ಬರುತ್ತಿರುವಾಗ ಅಭಾವರೂಪವಾದ ಗುರುಭೂತವಾದ ವಿಶೇಷಣವಿಶಿಷ್ಟವಾದ ಆತ್ಮಧ್ವಂಸವನ್ನು ಕಾರಣವೆಂದು ಹೇಳಿದರೆ ಕಲ್ಪನಾಗೌರವವು ಬರುತ್ತದೆ. ಹೀಗೆ ತಾರ್ಕಿಕರು ಸಮಾಧಾನವನ್ನು ಹೇಳುತ್ತಾರೆ.

ಇದೇ ಸಮಾಧಾನವನ್ನು ನಾವೂ ಕೂಡ ಪ್ರಕೃತದಲ್ಲಿ ಹೇಳುತ್ತಿದ್ದೇವೆ. ದಾಹವನ್ನು ಕುರಿತು ಅಗ್ನಿಯು ಕಾರಣವಾಗಿದೆ ಎಂಬುದು ಕೂಡ ಕ್ಲೃಪ್ತವಾಗಿದೆ. ಅದರಂತೆ ಕರತಲಾನಲ-ಸಂಯೋಗವು ಕಾರಣತ್ವವು ಕ್ಲೃಪ್ತವಾಗಿದೆ. ದಾಹಕ್ಕೆ ವಹ್ನಿಯು ಹೇಗೆ ಕಾರಣವಾಗಿದೆ? ಎಂದರೆ ದಾಹಾನುಕೂಲವಾದ ಶಕ್ತಿಯು ಇರುವುದರಿಂದ ಎಂದು ಉತ್ತರಿಸುತ್ತೇವೆ. ಈ ಶಕ್ತಿಯು ಭಾವರೂಪವಾಗಿರುವುದರಿಂದ ಲಘುಭೂತವಾಗಿದೆ. ಹೀಗೆ ಸುಲಭವಾಗಿ ಭಾವರೂಪವಾದ ಶಕ್ತಿಯಿಂದಲೇ ಕಾರಣತ್ವವನ್ನು ನಿರ್ವಹಣೆಯನ್ನು ಮಾಡಿ, ಪ್ರತಿಬಂಧಕವಿದ್ದಾಗ ಇದೇ

ಶಕ್ತಿಯು ಇಲ್ಲದ ಕಾರಣದಿಂದಲೇ ದಾಹವೆಂಬ ಕಾರ್ಯವು ಉಂಟಾಗುವುದಿಲ್ಲವೆಂಬುದನ್ನೂ ಕೂಡ ಸುಲಭವಾಗಿಯೇ ನಿರ್ವಹಣೆ ಮಾಡಬಹುದು. ಇದನ್ನು ಬಿಟ್ಟು ಉತ್ತಂಭಕಾಭಾವ-ವಿಶಿಷ್ಟಪ್ರತಿಬಂಧಕಾಭಾವಕ್ಕೆ ಹೇತುತ್ವವನ್ನು ಕಲ್ಪನೆ ಮಾಡುವುದು ವ್ಯರ್ಥವೇ ಆಗಿದೆ.

## ಅತೀಂದ್ರಿಯಶಕ್ತಿಯು ಸಿದ್ಧವಾಯಿತು

**ತರ್ಕತಾಂಡವ–ತಸ್ಮಾತ್ ಪ್ರತಿಬಂಧಕಾಭಾವೋನಹೇತುರಿತಿಪ್ರತಿಬಂಧಕಸಮಯೇ ಶಕ್ತ್ಯಭಾವಾದೇವ ದಾಹಾಭಾವೋ ವಕ್ತವ್ಯ ಇತಿ ಶಕ್ತಿಸಿದ್ಧಿಃ ॥**

ಅನುವಾದ – ಆದ್ದರಿಂದ ಪ್ರತಿಬಂಧಕಾಭಾವವು ದಾಹಕ್ಕೆ ಕಾರಣವಲ್ಲ. ಪ್ರತಿಬಂಧಕ ಸಮಯದಲ್ಲಿ ಶಕ್ತಿ ಇಲ್ಲದಿರುವುದರಿಂದಲೇ ದಾಹವು ಹುಟ್ಟಲಿಲ್ಲ ಎಂದು ಹೇಳಬೇಕು. ಹೀಗೆ ಅತೀಂದ್ರಿಯವಾದ ಶಕ್ತಿ ಎಂಬ ಪದಾರ್ಥವು ಸಿದ್ಧವಾಯಿತು.

ನ್ಯಾಯದೀಪ – ಪ್ರತಿಬಂದೀದ್ವಯೇ ಪರಮುಖೇನೈವ ಸಮಾಧಿಂ ವಾಚಯಿತ್ವಾತ್ರಾಪಿ ತಥೇತ್ಯಾಹ – ಯದಿ ಚೇತಿ ॥

ಅನುವಾದ – ಎರಡು ಬಗೆಯ ಪ್ರತಿಬಂದಿಗಳಿಗೆ ತಾರ್ಕಿಕರ ಮುಖದಿಂದಲೇ ಸಮಾಧಾನವನ್ನು ಹೇಳಿಸಿ, ಪ್ರಕೃತದಲ್ಲಿಯೂ ಅದು ಸಮಾನವೆಂದು 'ಯದಿ ಚ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

## ನಮ್ಮ ಮತವನ್ನೇ ಪ್ರವೇಶ ಮಾಡುತ್ತಿದ್ದೀರೆಂದು ತಾರ್ಕಿಕರ ಆಕ್ಷೇಪ

**ತರ್ಕತಾಂಡವ – ನನು – ಶಕ್ತಿಪಕ್ಷೇ ಪೂರ್ವಸ್ಯಾಃ ಶಕ್ತೇರ್ನಾಶಾತ್ ಪ್ರತಿಬಂಧಕಾಪನಯೇ ವೋತ್ತೇಜಕಸಮವಧಾನೇ ವಾ ಕಥಂ ಪುನರ್ದಾಹಃ? ಯದಿ ಚ ತಾಭ್ಯಾಂ ಶಕ್ತ್ಯಂತರೋ- ತ್ಪಾದಸ್ತದಾऽನನುಗತಸ್ಯಾಪಿ ಪ್ರತಿಬಂಧಕಾಭಾವಸ್ಯ ಹೇತುತ್ವಂ ತವಾಪಿ ಸಮಾನಮಿತಿ ಚೇನ್ನ ।**

ಅನುವಾದ – ಆಕ್ಷೇಪ - ಶಕ್ತಿಪಕ್ಷದಲ್ಲಿ ಪ್ರತಿಬಂಧಕವು ಇದ್ದಾಗ ಮೊದಲಿರುವ ಶಕ್ತಿಯು ನಾಶವಾಗುತ್ತದೆ. ಪ್ರತಿಬಂಧಕವು ಧ್ವಂಸವಾದಾಗ ಆ ಸಮಯದಲ್ಲಿ ಉತ್ತೇಜಕವಿದ್ದರೆ ಪುನಃ ದಾಹವು ಹೇಗೆ ಹುಟ್ಟುತ್ತದೆ? ಎಂದು ಪ್ರಶ್ನಿಸುತ್ತೇವೆ. ಒಂದು ವೇಳೆ ಪ್ರತಿಬಂಧಕದ ಧ್ವಂಸ ಮತ್ತು ಉತ್ತೇಜಕದ ಸಮವಧಾನ ಇವೆರಡೂ ಇದ್ದರೆ ಮತ್ತೊಂದು ಶಕ್ತಿಯು ಹುಟ್ಟುತ್ತದೆಂದು ಉತ್ತರಿಸಿದರೆ ಆಗ ಅನನುಗತವಾದರೂ ಕೂಡ ಪ್ರತಿಬಂಧಕಾಭಾವವು ಶಕ್ತಿಗೆ ಕಾರಣವೆಂದು ಹೇಳಿದಂತಾಯಿತು. ಆಗ ನೀವು ಕೂಡ ನಮ್ಮ ಮತವನ್ನು ಪ್ರವೇಶಿಸಿದಂತಾಯಿತು.

ಹೀಗೆ ಆಕ್ಷೇಪ ಮಾಡಬಾರದು.

ವಿವರಣೆ – ದಾಹಕ್ಕೆ ಅನುಕೂಲವಾದ ಶಕ್ತಿಯು ಇಲ್ಲದಿದ್ದಾಗ ದಾಹವು ಉಂಟಾಗುವುದಿಲ್ಲವೆಂದು ನಾವು ಹೇಳಿದೆವು. ಇದರ ಮೇಲೆ ಈಗ ಪೂರ್ವಪಕ್ಷಿಯು ಆಕ್ಷೇಪ ಮಾಡುತ್ತಿದ್ದಾನೆ. ಪ್ರತಿಬಂಧಕ ಇರುವ ಸಮಯದಲ್ಲಿ ಶಕ್ತ್ಯಭಾವವು ಇರುವುದರಿಂದ ದಾಹವು ಉಂಟಾಗುವುದಿಲ್ಲ ಎಂಬ ನಮ್ಮ ಮಾತಿಗೆ ಶಕ್ತಿಯು ಧ್ವಂಸವಾಗುತ್ತದೆಂಬ ಅಪಾರ್ಥವನ್ನು ತಿಳಿದ ಪೂರ್ವಪಕ್ಷಿಯು ಇಲ್ಲಿ ಆಕ್ಷೇಪವನ್ನು ಮಾಡುತ್ತಿದ್ದಾನೆ.

ಈ ಆಕ್ಷೇಪಕ್ಕೆ ಗ್ರಂಥಕಾರರು ಅನೇಕ ದೃಷ್ಟಾಂತಗಳನ್ನು ನೀಡುವ ಮೂಲಕ ನಿರಾಕರಣೆ ಮಾಡುತ್ತಿದ್ದಾರೆ.

ಪ್ರತಿಬಂಧಕವು ಇದ್ದಾಗ ಮೊದಲಿರುವ ಶಕ್ತಿಯು ನಾಶವಾಗುತ್ತದೆ. ಪ್ರತಿಬಂಧಕವು ಹೋದ ಮೇಲೆ ಉತ್ತೇಜಕವಿದ್ದಾಗ ಪುನಃ ದಾಹವು ಹೇಗೆ ಉಂಟಾಗುತ್ತದೆ? ಉತ್ತೇಜಕವು ಬಂದಾಗ ಹೊಸದಾದ ಶಕ್ತಿಯು ಹುಟ್ಟುತ್ತದೆ. ಪ್ರತಿಬಂಧಕವು ಬಂದಾಗ ಆ ಶಕ್ತಿಯು ನಾಶವಾಯಿತು ಎಂದು ನೀವು ಉತ್ತರಿಸಬೇಕು. ಆಗ ನಮ್ಮ ಮತವನ್ನೇ ನೀವೂ ಕೂಡ ಅಂಗೀಕಾರ ಮಾಡಿದಂತಾಯಿತು. ಏಕೆಂದರೆ ಪ್ರತಿಬಂಧಕವಿದ್ದ ಸಮಯದಲ್ಲಿ ಶಕ್ತಿಯು ನಾಶವಾಯಿತು. ಪ್ರತಿಬಂಧಕವು ಹೋದಾಗ ಶಕ್ತಿಯು ಹುಟ್ಟಿತು. ಎಂದು ಹೇಳಬೇಕು. ಪ್ರತಿಬಂಧಕವು ಹೋಗುವುದು ಎಂದರೆ ಪ್ರತಿಬಂಧಕವು ಧ್ವಂಸವಾಗುವುದು ಎಂದರ್ಥ. ಪ್ರತಿಬಂಧಕಧ್ವಂಸವು ಆದಾಗ ಶಕ್ತಿಯು ಹುಟ್ಟುತ್ತದೆ ಎಂದು ಹೇಳಿದಾಗ ಪ್ರತಿಬಂಧಕಾಭಾವವನ್ನು ಕೂಡ ನೀವು ಕಾರಣ ಎಂದು ಹೇಳಿದಂತಾಯಿತು. ಹೊಸ ಶಕ್ತಿಯು ಬರುವುದಕ್ಕೆ ಪ್ರತಿಬಂಧಕಧ್ವಂಸವೇ ಕಾರಣವೆಂದು ಒಪ್ಪಿದಂತಾಯಿತು. ಅನನುಗತವಾಗಿದ್ದರೂ ಕೂಡ ಪ್ರತಿಬಂಧಕಧ್ವಂಸವು

ಕಾರಣವೆಂದು ನಮ್ಮಂತೆ ನೀವು ಹೇಳಿದಂತಾಯಿತು. ನಾವು ದಾಹಕ್ಕೆ ಪ್ರತಿಬಂಧಕಧ್ವಂಸವು ಕಾರಣವೆಂದು ಹೇಳುತ್ತೇವೆ. ನೀವು ಶಕ್ತಿಗೆ ಕಾರಣವೆಂದು ಹೇಳುತ್ತಿದ್ದೀರಿ. ಇಷ್ಟು ಮಾತ್ರ ವ್ಯತ್ಯಾಸ. ಹೀಗೆ ಪೂರ್ವಪಕ್ಷಿಯು ಆಕ್ಷೇಪ ಮಾಡುತ್ತಿದ್ದಾನೆ.

ನ್ಯಾಯದೀಪ - ಶಕ್ತಿಪಕ್ಷೇ ಬಾಧಕಮಾಶಂಕ್ಯಾನೇಕದೃಷ್ಟಾಂತಪೂರ್ವಂ ನಿರಾಹ - ನನ್ವಿತ್ಯಾದಿನಾ ॥

ಅನುವಾದ – ಶಕ್ತಿಪಕ್ಷದಲ್ಲಿ ಬಾಧಕವನ್ನು ಆಶಂಕಿಸಿ ಅನೇಕ ದೃಷ್ಟಾಂತಪೂರ್ವಕವಾಗಿ ಬಾಧಕವನ್ನು ನಿರಾಕರಣೆ ಮಾಡಲು 'ನನು' ಇತ್ಯಾದಿ ಗ್ರಂಥವು ಹೊರಟಿದೆ.

## ಶಕ್ತಿಗೆ ನಾಶವಿಲ್ಲ ಕುಂಠೀಭಾವವಿದೆ

ತರ್ಕತಾಂಡವ - ಸತ್ಯೇವ ಕುಠಾರೇ ಕದಾಚಿತ್ ಕುಂಠತ್ವವತ್ ಸತ್ಯೇವ ಸಂಸ್ಕಾರೇ ಕದಾಚಿದನುದ್ಬೋಧವತ್ ಸತ್ಯಾಮೇವಾನುಮಿತಿಸಾಮಗ್ರ್ಯಾಂ ಸಂಶಯೋತ್ತರಪ್ರತ್ಯಕ್ಷಸ್ಥಳೇ ಅನುಮಿತ್ಯಭಾವವತ್ ಸತ್ಯೇವಾಪೂರ್ವೇ ಕದಾಚಿದವಿಪಾಕವಚ್ಚ ಸತ್ಯಾಮೇವ ಶಕ್ತೌ ತಸ್ಯಾಃ ಕದಾಚಿತ್ ಕುಂಠೀಭಾವಲಕ್ಷಣಾವಸ್ಥಾವಿಶೇಷಸ್ಯ ಕಲ್ಪನಾತ್ ॥

ಅನುವಾದ – ಶಕ್ತಿಯ ನಾಶವನ್ನಾಗಲೀ ಉತ್ಪತ್ತಿಯನ್ನಾಗಲೀ ನಾವು ಹೇಳುವುದಿಲ್ಲ. ಅಭಿವ್ಯಕ್ತಿ ಹಾಗೂ ಕುಂಠೀಭಾವಗಳನ್ನು ನಾವು ಹೇಳುತ್ತೇವೆ. ಇದು ಅನೇಕ ದೃಷ್ಟಾಂತಗಳಿಂದ ಸಿದ್ಧವಾಗುತ್ತದೆ -

ಕುಠಾರವಿದ್ದರೂ ಕೂಡ ಕೆಲವೊಮ್ಮೆ ಛೇದನಕ್ರಿಯೆಯು ಕುಂಠೀಭಾವವಾಗುತ್ತದೆ. ಸಂಸ್ಕಾರವಿದ್ದರೂ ಕೆಲವೊಮ್ಮೆ ಸ್ಮರಣೆಯು ಬರುವುದೇ ಇಲ್ಲ. ಅನುಮಿತಿ ಸಾಮಗ್ರಿಗಳಿದ್ದರೂ ಸಂಶಯೋತ್ತರಪ್ರತ್ಯಕ್ಷಸ್ಥಳದಲ್ಲಿ ಅನುಮಿತಿಯೇ ಹುಟ್ಟುವುದಿಲ್ಲ. ಅಪೂರ್ವವಿದ್ದರೂ ಕೆಲವೊಮ್ಮೆ ಕಾರ್ಯವೇ ಆಗುವುದಿಲ್ಲ.

ಇವುಗಳನ್ನೆಲ್ಲಾ ಕೂಡಿಸಬೇಕೆಂದರೆ ಶಕ್ತಿಯಿದ್ದರೂ ಕೂಡ ಆ ಶಕ್ತಿಯು ಕುಂಠೀಭಾವ ಹೊಂದಿರುತ್ತದೆ ಎಂದೇ ಹೇಳಬೇಕು. ಕುಂಠೀಭಾವವೆಂದರೆ ತಾನಿದ್ದರೂ ಕೆಲಸವಾಗದ ಅವಸ್ಥಾವಿಶೇಷ. ಹೀಗೆ ಕಲ್ಪನೆ ಮಾಡಿದಾಗ ಮೇಲಿನ ಎಲ್ಲಾ ದೃಷ್ಟಾಂತಗಳನ್ನು ಕೂಡಿಸಬಹುದು.

ವಿವರಣೆ – ಶಕ್ತಿಗೆ ನಾವು ನಾಶವನ್ನು ಹೇಳುವುದಿಲ್ಲ. ಕುಂಠೀಭಾವವನ್ನು ಹೇಳುತ್ತೇವೆಂದು ಗ್ರಂಥಕಾರರು ಅನೇಕ ದೃಷ್ಟಾಂತಗಳಿಂದ ಸಮರ್ಥಿಸುತ್ತಿದ್ದಾರೆ. ಅಗ್ನಿಯಲ್ಲಿ ದಾಹವನ್ನು ಹುಟ್ಟಿಸುವ ಶಕ್ತಿಯು ಇರುತ್ತದೆ. ಆ ಶಕ್ತಿಯು ಪ್ರತಿಬಂಧಕವು ಬಂದಾಗ ನಾಶವಾಗುವುದಿಲ್ಲ ಹೊರತು ಕುಂಠೀಭಾವವನ್ನು ಹೊಂದುತ್ತದೆ. ಕುಂಠಿತತ್ವ ಎಂಬುದು ತಾನು ಇದ್ದರೂ ಕಾರ್ಯವು ಹುಟ್ಟುವುದಿಲ್ಲ ಎಂಬ ಅವಸ್ಥಾವಿಶೇಷ.

1. ಮೊದಲನೆಯ ದೃಷ್ಟಾಂತ ಹೀಗಿದೆ - ಕುಠಾರ ಇದ್ದಾಗಲೂ ಕೂಡ ಕುಂಠಿತತ್ವವು ಇದ್ದಾಗ ಛೇದನಕ್ರಿಯೆಯು ಆಗುವುದಿಲ್ಲ.

2. ಸಂಸ್ಕಾರವಿದ್ದಾಗಲೂ ಕೂಡ ಉದ್ಬೋಧವಾಗದಿದ್ದರೆ ಸ್ಮರಣೆಯು ಬರುವುದಿಲ್ಲ.

3. ಅಂಧಕಾರದಲ್ಲಿ ಊರ್ಧ್ವತ್ವವಿಶಿಷ್ಟವಾದ ಒಂದು ಪದಾರ್ಥವನ್ನು ನೋಡಿದಾಗ ಪುರುಷತ್ವವ್ಯಾಪ್ಯವಾದ ಕರಚರಣಾದಿಗಳು ಕಾಣಿಸುವುದಿಲ್ಲ. ಸ್ಥಾಣುತ್ವವ್ಯಾಪ್ಯವಾದ ವಕ್ರಕೋಟರಾದಿಗಳು ಕೂಡ ಕಾಣಿಸುವುದಿಲ್ಲ. ಆ ಸಂದರ್ಭದಲ್ಲಿ 'ಸ್ಥಾಣುರ್ವಾ ಪುರುಷೋ ವಾ' ಎಂಬ ಸಂಶಯವು ಬಂದಿತು. ಆ ಸಂಶಯವು ಬಂದ ಮೇಲೆ ಕರಚರಣಾದಿಗಳನ್ನು ನೋಡಿದನು. ಈ ಕರಚರಣಾದಿಗಳು ಪುರುಷತ್ವಕ್ಕೆ ವ್ಯಾಪ್ಯವಾಗಿವೆ. 'ಯತ್ರ ಕರಚರಣಾದಿಕಂ ತತ್ರ ಪುರುಷತ್ವಂ' ಎಂಬ ಜ್ಞಾನವು ಬಂದ ಮೇಲೆ 'ಅಯಂ ಪುರುಷ ಏವ ನ ಸ್ಥಾಣುಃ' ಎಂಬ ಜ್ಞಾನವು ಅವನಿಗೆ ಬರುತ್ತದೆ. ಈ ಜ್ಞಾನವು ಪ್ರತ್ಯಕ್ಷವೋ ಅಥವಾ ಅನುಮಿತಿಯೋ? ಎಂಬುದನ್ನು ಈಗ ವಿಚಾರ ಮಾಡಬೇಕು. ಅಗ್ನಿಗೆ ವ್ಯಾಪ್ಯವಾದ ಧೂಮವನ್ನು ನೋಡಿದ ಮೇಲೆ 'ಪರ್ವತೋ ವಹ್ನಿಮಾನ್' ಎಂಬುದನ್ನು ಅನುಮಿತಿ ಎಂದು ಕರೆಯುತ್ತೇವೆ. ಇಲ್ಲಿಯೂ ಪುರುಷತ್ವವ್ಯಾಪ್ಯವಾದ ಕರಚರಣಾದಿಗಳನ್ನು ತಿಳಿದ ಮೇಲೆ 'ಅಯಂ ಪುರುಷಃ' ಎಂಬ ಜ್ಞಾನವು ಕೂಡ ಅನುಮಿತಿಯೆಂದೇ ಹೇಳಬೇಕು.

ಆದರೆ ಈ ಪುರುಷತ್ವಜ್ಞಾನವನ್ನು ಅನುಮಿತಿಯೆಂದು ಯಾವ ವಾದಿಗಳು ಕೂಡ ಒಪ್ಪುವುದಿಲ್ಲ. ಏಕೆಂದರೆ ಪುರುಷತ್ವ ಎಂಬುದು ಜಾತಿವಿಶೇಷ. ಅಂಧಕಾರಾದಿಗಳೆಂಬ ಪ್ರತಿಬಂಧವಿದ್ದಾಗ ಸನ್ನಿಕರ್ಷವಾಗುವುದಿಲ್ಲ. ಆಲೋಕಾದಿಗಳ ಸಹಕಾರದಿಂದ ಪುರುಷತ್ವ ವ್ಯಾಪ್ಯವಾದ ಕರಚರಣಾದಿಗಳ ಸನ್ನಿಕರ್ಷವಾಗುತ್ತದೆ. ಹೀಗೆ ಪುರುಷಜ್ಞಾನವು ಸನ್ನಿಕರ್ಷವೆಂಬ ಪ್ರತ್ಯಕ್ಷದಿಂದಲೇ ಬಂದಿದೆಯೆಂದು ಹೇಳಬೇಕು. ಪುರುಷತ್ವವ್ಯಾಪ್ಯವಾದ ಕರಚರಣಾದಿಗಳ ಜ್ಞಾನವು ಈ ಪ್ರತ್ಯಕ್ಷಜ್ಞಾನಕ್ಕೆ ಕೇವಲ ಸಹಕಾರಿಯಾಗಿದೆ.

4. ಸತ್ಯೇವ ಕಲ್ಪನೇ ಕದಾಚಿದವಿಪಾಕಾಚ್ಚ - ವಿಪಾಕ ಎಂದರೆ ಕಾರ್ಯೋನ್ಮುಖವಾಗಿರುವಿಕೆ ಎಂದರ್ಥ. ಅವಿಪಾಕ ಎಂದರೆ ಕಾರ್ಯೋನ್ಮುಖವಾಗದಿರುವಿಕೆ ಎಂದರ್ಥ. ಯಾವುದೇ ಕೆಲಸವು ಕಾರ್ಯೋನ್ಮುಖವಾಗಬೇಕಾದರೆ ಸುಕೃತಾಪೂರ್ವವು ಇರಬೇಕು. ಕೆಲವೊಮ್ಮೆ ಕಾರ್ಯೋನ್ಮುಖವಾಗುವ ಅಪೂರ್ವವಿದ್ದರೂ ಕೂಡ ಕಾರ್ಯೋನ್ಮುಖವಾಗುವುದಿಲ್ಲ.

ಈ ಎಲ್ಲಾ ದೃಷ್ಟಾಂತಗಳಂತೆ ಶಕ್ತಿ ಇದ್ದರೂ ಕೂಡ ಕೆಲವೊಮ್ಮೆ ಕುಂಠೀಭಾವರೂಪವಾದ ಅವಸ್ಥಾವಿಶೇಷವನ್ನು ಒಪ್ಪಲೇಬೇಕು.

## ನ್ಯಾಯಸುಧೆಯಲ್ಲಿ ಇದನ್ನು ಹೇಳಿದ್ದಾರೆ

**ತರ್ಕತಾಂಡವ– ಉಕ್ತಂ ಹಿ ಸುಧಾಯಾಂ– 'ವ್ಯಕ್ತಿಶಬ್ದೇನ ಶಕ್ತೇರೇವಾವಸ್ಥಾವಿಶೇಷಸ್ಯ ವಿವಕ್ಷಿತತ್ವಾತ್' ಇತಿ ॥**

ಅನುವಾದ – ಇದನ್ನೇ ನ್ಯಾಯಸುಧೆಯಲ್ಲಿ 'ವ್ಯಕ್ತಿಶಬ್ದೇನ ಶಕ್ತೇರೇವಾವಸ್ಥಾವಿಶೇಷಸ್ಯ ವಿವಕ್ಷಿತತ್ವಾತ್' 'ಶಕ್ತಿಯ ಅವಸ್ಥಾವಿಶೇಷವನ್ನೇ ವ್ಯಕ್ತಿ ಶಬ್ದದಿಂದ ವಿವಕ್ಷಿಸಿದ್ದೇವೆ' ಎಂದು ಹೇಳಿದ್ದಾರೆ.

ನ್ಯಾಯದೀಪ – ಉಕ್ತಂ ಹೀತಿ ॥ ಅತ್ತಾ ಚರಾಚರೇತ್ಯಾಧಿಕರಣಸುಧಾಯಾಮ್ ಶಕ್ತೇರವಸ್ಥಾವಿಶೇಷ ಏವ ನ ತು ಶಕ್ತ್ಯಂತರಮಿತ್ಯೇತದುಕ್ತಮಿತ್ಯರ್ಥಃ । ಶಕ್ತಿರ್ವ್ಯಕ್ತ್ಯಾತ್ಮನಾಽಸ್ತೀತ್ಯುಕ್ತೌ ಕಾ ನಾಮ ವ್ಯಕ್ತಿಃ ? ಇತಿ ಪೃಷ್ಟಸ್ಯೋತ್ತರಂ ವಕ್ತಿ – ವ್ಯಕ್ತಿಶಬ್ದೇನೇತ್ಯಾದಿನಾ ॥

ಅನುವಾದ – 'ಅತ್ತಾ ಚರಾಚರಗ್ರಹಣಾತ್' ಎಂಬ ಸೂತ್ರದ ವ್ಯಾಖ್ಯಾನವನ್ನು ಮಾಡುವ ನ್ಯಾಯಸುಧೆಯಲ್ಲಿ 'ಶಕ್ತಿಯ ಅವಸ್ಥಾವಿಶೇಷವೇ ವ್ಯಕ್ತಿಯಾಗಿದೆ; ಹೊರತು ಮತ್ತೊಂದು ಶಕ್ತಿಯಲ್ಲ' ಎಂದು ಹೇಳಿದ್ದಾರೆ. ಶಕ್ತಿಯು ವ್ಯಕ್ತ್ಯಾತ್ಮನಾ ಇರುತ್ತದೆಂದು ಹೇಳಿದಾಗ ವ್ಯಕ್ತಿ ಎಂಬುದಕ್ಕೆ ಏನರ್ಥ? ಎಂಬ ಪ್ರಶ್ನೆಗೆ 'ವ್ಯಕ್ತಿಶಬ್ದೇನ ಶಕ್ತೇರೇವ ಅವಸ್ಥಾವಿಶೇಷಸ್ಯ ವಿವಕ್ಷಿತತ್ವಾತ್' ಎಂದು ಹೇಳಿರುತ್ತಾರೆ.

ವಿವರಣೆ – ಭಗವಂತನಲ್ಲಿರುವ ಎಲ್ಲಾ ಗುಣಗಳೂ ನಿತ್ಯವಾಗಿವೆ ಎಂದು ಹೇಳಿದಾಗ ಸಂಹಾರಮಾಡುವಿಕೆ ಎಂಬ ಧರ್ಮವು ಕೂಡ ನಿತ್ಯವಾಗಿದೆಯೆಂದು ಹೇಳಿದಂತಾಯಿತು. ಆಗ ನಿರಂತರವಾಗಿ ಭಗವಂತನು ಜಗತ್ತನ್ನು ಸಂಹಾರ ಮಾಡುತ್ತಲೇ ಇರುತ್ತಾನೆಂದು ಹೇಳಬೇಕಲ್ಲವೇ? ಈ ಪ್ರಶ್ನೆಗೆ 'ಅತ್ತಾ ಚರಾಚರಗ್ರಹಣಾತ್' ಎಂಬ ಸೂತ್ರದ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಉತ್ತರವನ್ನು ಹೇಳಿದ್ದಾರೆ. ಭಗವಂತನಲ್ಲಿರುವ ಗುಣಗಳು ಶಕ್ತಿ, ಹಾಗೂ ವ್ಯಕ್ತಿ ಎಂಬ ಎರಡು ರೂಪಗಳಿಂದ ಇರುತ್ತವೆ. ಯಾವಾಗ ಆ ಗುಣಗಳು ವ್ಯಕ್ತಿರೂಪದಲ್ಲಿರುತ್ತವೋ ಆಗ ಕಾರ್ಯಕಾರಿ ಆಗುತ್ತವೆ. ಶಕ್ತಿರೂಪದಿಂದಿದ್ದಾಗ ಕಾರ್ಯಕಾರಿ ಆಗಿರುವುದಿಲ್ಲ. ಆದ್ದರಿಂದ ಸಂಹಾರಕ್ರಿಯೆಯು ಸಂಹಾರ ಮಾಡದೇ ಇರುವ ಉಳಿದ ಸಂದರ್ಭದಲ್ಲಿ ಶಕ್ತಿರೂಪದಿಂದ ಇದೆ ಎಂದು ಹೇಳಬೇಕು. ಹೀಗೆ ನ್ಯಾಯಸುಧೆಯಲ್ಲಿ ಶಕ್ತಿಗೆ ಎರಡು ಅವಸ್ಥೆಗಳನ್ನು ತೋರಿಸಿದ್ದಾರೆ.

## ಗೋಷ್ಠಿಯವಿಚಾರಗಳು

ಆಕ್ಷೇಪ - ಅನುಮಿತಿಗೆ ಸಾಮಗ್ರಿ ಎನಿಸಿದ ಲಿಂಗಜ್ಞಾನ ವ್ಯಾಪ್ತಿಜ್ಞಾನ ಎಲ್ಲವೂ ಇದ್ದರೂ ಕೂಡ ಅನುಮಿತಿಯು ಬರುವುದಿಲ್ಲವೆಂದು ಹೇಳುವುದು ಹೇಗೆ ಸರಿ?

ಸಮಾಧಾನ - ಪುರುಷತ್ವಸಾಕ್ಷಾತ್ಕಾರಕ್ಕೆ ಸಾಮಗ್ರಿಯೆನಿಸಿದ ಸಂಯುಕ್ತಸಮವಾಯ ಎಂಬ ಸನ್ನಿಕರ್ಷವು ಆಲೋಕಸಮವಧಾನ ಎಂಬ ಸಾಮಗ್ರಿಯು ಇರುವುದರಿಂದ ಅನುಮಿತಿಯ ಸಾಮಗ್ರಿಗಳು ಕುಂಠಿತವಾಗಿವೆ. ಕಾರ್ಯವನ್ನು ಮಾಡಲಾರವು.

ಆಕ್ಷೇಪ - ಹಾಗಾದರೆ ಲಿಂಗಜ್ಞಾನ, ವ್ಯಾಪ್ತಿಜ್ಞಾನವು ಬಂದಿಲ್ಲವೆಂದೇ ಹೇಳಬಹುದಲ್ಲವೇ?

ಸಮಾಧಾನ - ಲಿಂಗಜ್ಞಾನ ಹಾಗೂ ವ್ಯಾಪ್ತಿಜ್ಞಾನಗಳು ಬಂದಿರುವುದು ಅನುಭವಸಿದ್ಧವಾಗಿರುವುದರಿಂದ ಬಂದಿಲ್ಲವೆಂದು ಅಪಲಾಪ ಮಾಡಬಾರದು.

ಆಕ್ಷೇಪ - ಲಿಂಗಜ್ಞಾನ, ವ್ಯಾಪ್ತಿಜ್ಞಾನಗಳಿಂದಲೇ 'ಅಯಂ ಪುರುಷಃ' ಎಂಬ ಜ್ಞಾನವು ಬಂದಿರುವಾಗ ಇದನ್ನು ಪ್ರತ್ಯಕ್ಷವೆಂದು ತಿಳಿಯುವುದು ಅನುಭವವಿರುದ್ಧವಲ್ಲವೇ?

ಸಮಾಧಾನ - ಜಾತಿಯು ಆಕೃತಿಯಿಂದ ವ್ಯಂಗ್ಯವಾಗುತ್ತದೆ. ಕರಚರಣಾದಿಗಳೆಲ್ಲವೂ ಆಕೃತಿ ಎನಿಸುತ್ತದೆ. ವ್ಯಂಜಕವಾದದ್ದು ಸಹಕಾರಿಯಾಗುತ್ತದೆ ಹೊರತು ಅನುಮಿತಿಜನಕವಲ್ಲವೆಂದು ತಾರ್ಕಿಕರು ಕೂಡ ಹೇಳುತ್ತಾರೆ. ಉದಾ – ಭೂಗತವಾದ ನಿಧಿಯನ್ನು ನೋಡಲು ಅಂಜನವು ಸಹಕಾರಿಯಾಗುತ್ತದೆ. ದೂರದಲ್ಲಿರುವ ಗಂಧಕ್ಕೆ ಘೃತವು ವ್ಯಂಜಕ. ಅದರಂತೆ ಆಕೃತಿಯ ದರ್ಶನವು ಜಾತಿಪ್ರತ್ಯಕ್ಷಬರಲು ಕೇವಲ ಸಹಕಾರಿಯಾಗಿದೆ. ಒಂದು ವೇಳೆ ಆಕೃತಿಯನ್ನು ಅನುಮೇಯ ಎಂದು ತಿಳಿದರೆ ಜಾತಿಯ ಪ್ರತ್ಯಕ್ಷವೇ ಇಲ್ಲವೆಂದು ಹೇಳಬೇಕಾಗುತ್ತದೆ.

ಪ್ರತ್ಯಕ್ಷಸಾಮಗ್ರಿ, ಅನುಮಿತಿಸಾಮಗ್ರಿಗಳು ಒಂದೇ ವಿಷಯದಲ್ಲಿ ಇದ್ದಾಗ ಪ್ರತ್ಯಕ್ಷಸಾಮಗ್ರಿಯೇ ಪ್ರಬಲವಾಗುತ್ತದೆ. ಅದೇ ಮೊದಲು ಬರುತ್ತದೆ. ಅನಂತರ ಲಿಂಗವು ಸಿದ್ಧವಾದದ್ದನ್ನೇ ಸಿಷಾಧಯಿಷತ್ವಪ್ರಯುಕ್ತವಾಗಿ ಅನುಮಿತಿಯನ್ನು ಹುಟ್ಟಿಸುತ್ತದೆ. ಉದಾಹರಣೆ - ಎದುರಿನಲ್ಲಿ ಬೆಂಕಿಯು ಉರಿಯುತ್ತಿರುವಾಗ ಪ್ರತ್ಯಕ್ಷದಿಂದಲೇ 'ಪರ್ವತೋ ವಹ್ನಿಮಾನ್' ಎಂಬ ಜ್ಞಾನವು ಬರುತ್ತದೆ. ಆಗ ಒಬ್ಬನು 'ಪರ್ವತೋ ವಹ್ನಿಮಾನ್ ಧೂಮಾತ್' ಎಂಬ ಪ್ರಯೋಗವನ್ನು ಮಾಡಿದರೆ ಅದರಿಂದ ಬರುವ ಜ್ಞಾನವು ಸಿದ್ಧವಾದದ್ದನ್ನೇ ತಿಳಿಸುತ್ತದೆ. ಅದರಂತೆ ಇಲ್ಲಿಯೂ ಕೂಡ ಸಂಯುಕ್ತಸಮವಾಯ ಎಂಬ ಸನ್ನಿಕರ್ಷವಿದ್ದರೂ ಕೂಡ ಏಕೆ 'ಅಯಂ ಪುರುಷಃ' ಎಂಬ ಜ್ಞಾನವು ಬರಲಿಲ್ಲ. ಎಂದರೆ ಸಹಕಾರಿಯಾದ ಆಲೋಕ ಹಾಗೂ ಕರಚರಣಾದಿ ದರ್ಶನವು ಇರಲಿಲ್ಲವೆಂದು ಹೇಳಬೇಕು. ಕರಚರಣಾದಿಗಳ ಜ್ಞಾನವು ಕಥಂಚಿತ್ ಬಂದಾಗ ಅದು ಪ್ರತ್ಯಕ್ಷವೇ ಆಗುತ್ತದೆ. ಅದರಿಂದ ಬಂದ ಜ್ಞಾನವು ಅನುಮಿತಿಯಾಗಲು ಸಾಧ್ಯವೇ ಇಲ್ಲ.

## ಪ್ರತಿಬಂಧಕತ್ವಾನ್ಯಥಾನುಪಪತ್ತಿಯಿಂದ ಶಕ್ತಿಯ ಸಮರ್ಥನೆ

ತರ್ಕತಾಂಡವ – ಕಿಂಚಾಸ್ತು ತ್ವಯಾ ವಕ್ಷ್ಯಮಾಣೇ ಪಕ್ಷಚತುಷ್ಟಯೇ ತ್ವದನಭಿಮತೇ ವಿಶಿಷ್ಟಂ ಪದಾರ್ಥಾಂತರಮಿತಿ ಪಕ್ಷೇ ಚ ಕಥಂಚಿತ್ ವಿಶಿಷ್ಟಾಭಾವಸ್ಯ ಅನುಗಮಃ ಕಾರಣತಾ ಚ । ತಥಾऽಪಿ ಮಣ್ಯಾದೇರ್ಲೋಕಸಿದ್ಧಂ ಕಾರ್ಯಾನುಕೂಲ

**ಕಿಂಚಿದ್ಧರ್ಮವಿಘಟಕತ್ವರೂಪಂ ಪ್ರತಿಬಂಧಕತ್ವಂ ನ ಸ್ಯಾದಿತಿ ಮಣ್ಯಾದೇಃ ಪ್ರತಿಬಂಧಕತ್ವಾನ್ಯಥಾಽನುಪಪತ್ತ್ಯಾ ಶಕ್ತಿಸಿದ್ಧಿಃ ॥**

ಅನುವಾದ – ಮತ್ತು ತಾರ್ಕಿಕನಾದ ನೀನು ಮುಂದೆ ನಾಲ್ಕು ಪ್ರಕಾರಗಳನ್ನು ಒಪ್ಪಿ ದಾಹಕಾರಣತ್ವವನ್ನು ಸಮರ್ಥನೆ ಮಾಡುವಿ. ಆದರೆ ಕೊನೆಯಲ್ಲಿ ನಿನಗೆ ಅಭಿಮತವಲ್ಲದ ವಿಶಿಷ್ಟವನ್ನು ಪದಾರ್ಥಾಂತರವೆಂಬ ಪಕ್ಷದಲ್ಲಿ ಕಥಂಚಿತ್ ವಿಶಿಷ್ಟಾಭಾವವು ಅನುಗಮವಾಗುತ್ತದೆ. ಕಾರಣತ್ವವು ಕೂಡುತ್ತದೆ. ಆದರೂ ಕೂಡ ಮಣ್ಯಾದಿಗಳಿಗೆ ಲೋಕಸಿದ್ಧವಾದ ಕಾರ್ಯಾನುಕೂಲಕಿಂಚಿದ್ಧರ್ಮವಿಘಟಕತ್ವರೂಪವಾದ ಪ್ರತಿಬಂಧಕತ್ವವು ಶಕ್ತಿಯನ್ನೊಪ್ಪದೇ ಕೂಡಲು ಸಾಧ್ಯವೇ ಇಲ್ಲ. ಆದ್ದರಿಂದ ಮಣ್ಯಾದಿಗಳ ಪ್ರತಿಬಂಧಕತ್ವಾನ್ಯಥಾನುಪಪತ್ತಿಯಿಂದ ಶಕ್ತಿಯೆಂಬ ಪದಾರ್ಥವು ಸಿದ್ಧವಾಗುತ್ತದೆ.

ವಿವರಣೆ – ತಾರ್ಕಿಕನು ವಿಶಿಷ್ಟವನ್ನು ಪದಾರ್ಥಾಂತರವೆಂದು ಒಪ್ಪಿರುವುದಿಲ್ಲ. ಇರುವ ಆರು ಭಾವಪದಾರ್ಥದಲ್ಲಿ ವಿಶಿಷ್ಟ ಎಂಬ ಪದಾರ್ಥವನ್ನು ಎಲ್ಲಿಯೂ ಅಂತರ್ಭಾವ ಮಾಡಲು ಅವನಿಂದ ಸಾಧ್ಯವಾಗಲಿಲ್ಲ. ಆದ್ದರಿಂದ ವಿಶಿಷ್ಟವು ಪದಾರ್ಥಾಂತರ ಎಂಬುದು ಅವನಿಗೆ ಅನಭಿಮತವಾಗಿದೆ. ಆದರೆ ಅವನು ಸಮರ್ಥನೆ ಮಾಡಿರುವುದು ನಾಲ್ಕು ಪಕ್ಷಗಳನ್ನು ಮಾತ್ರ. ಕೊನೆಯಲ್ಲಿ ಅವನು ಸಮರ್ಥನೆ ಮಾಡಿರುವುದು ವಿಶಿಷ್ಟವನ್ನು ಪದಾರ್ಥಾಂತರವೆಂದು ಒಪ್ಪದೇ ಇರುವ ಐದನೆಯ ಪಕ್ಷವನ್ನು ಒಪ್ಪಿ ತದಭಾವವನ್ನು ಕಾರಣವೆಂದು ಸಮರ್ಥಿಸುತ್ತಾನೆ. ಆದರೆ ಲೋಕಸಿದ್ಧವಾದ ಪ್ರತಿಬಂಧಕತ್ವ ಎಂದರೆ ಕಾರ್ಯಾನುಕೂಲಕಿಂಚಿದ್ಧರ್ಮವಿಘಟಕತ್ವ ಎಂಬುದು. ಲೋಕಸಿದ್ಧವಾದ ಈ ಪ್ರತಿಬಂಧಕದ ಅನ್ಯಥಾನುಪಪತ್ತಿಯಿಂದ ತಾರ್ಕಿಕನಾದ ನೀನು ಶಕ್ತಿಯನ್ನು ಒಪ್ಪಲೇಬೇಕು.

ಕಾರಣೀಭೂತ ಅಭಾವಪ್ರತಿಯೋಗಿತ್ವಂ ಎಂದು ಅಥವಾ ಕಾರ್ಯಾನುತ್ಪತ್ತಿವ್ಯಾಪ್ಯತ್ವಂ ಎಂಬ ಪ್ರತಿಬಂಧಕತ್ವವನ್ನು ನಾನು ಒಪ್ಪಿರುತ್ತೇನೆ. ಆದ್ದರಿಂದ ನೀವು ಹೇಳಿದ ಪ್ರತಿಬಂಧಕತ್ವವನ್ನು ವಿವಕ್ಷಿಸಿ ಶಕ್ತಿಯನ್ನು ಏಕೆ ಒಪ್ಪಬೇಕು? ಎಂದು ತಾರ್ಕಿಕನು ಪ್ರಶ್ನೆ ಮಾಡುವಂತಿಲ್ಲ. ಏಕೆಂದರೆ ಲೋಕದಲ್ಲಿ ಯಾರೂ ಕೂಡ ನೀನುಹೇಳಿದ ಪ್ರತಿಬಂಧಕತ್ವವನ್ನು ಒಪ್ಪಿರುವುದಿಲ್ಲ. ಆದ್ದರಿಂದ ಲೋಕಸಿದ್ಧವಾದ ಕಾರ್ಯಾನುಕೂಲಕಿಂಚಿದ್ಧರ್ಮವೆಂದರೆ ಅದು ಶಕ್ತಿಯೇ ಆಗಬೇಕು.

## ದಾಹಕಾರಣತ್ವವಿಷಯದಲ್ಲಿ ತಾರ್ಕಿಕ ಹೇಳಿದ ನಾಕು ಪಕ್ಷಗಳು

ನ್ಯಾಯದೀಪ – ಮಣ್ಯಾದೇಃ ಪ್ರತಿಬಂಧಕತ್ವಾನ್ಯಥಾऽನುಪಪತ್ತ್ಯಾ ಚ ಶಕ್ತಿಸಿದ್ಧಿರಿತ್ಯಾಹ – ಕಿಂಚೇತಿ ॥ ವಕ್ಷ್ಯಮಾಣ ಇತಿ ॥ 'ವಿಶೇಷಣವಿಶೇಷ್ಯತತ್ ಸಂಬಂಧಾನಾಮಭಾವತ್ರಯಂ ವಾ ವಿದ್ಯಮಾನಸ್ಯಾಪಿ ಪ್ರತಿಬಂಧಕರೂಪವಿಶೇಷ್ಯಸ್ಯೈವ ಪ್ರತಿಯೋಗಿತಾವಚ್ಛೇದಕಭೇದೇನಾ-ಭಾವೋ ವಾ ದೇಶಾಂತರಸ್ಥಾನಾಮುತ್ತಂಭಕಾಭಾವವಿಶಿಷ್ಟಾನಾಂ ಮಣ್ಯಾದೀನಾಮ್ ಅತ್ರತ್ಯಾಭಾವೋ ವಾ ವಿಶೇಷಣವಿಶೇಷ್ಯಯೋರ್ಯಃ ಸಂಬಂಧಸ್ತದಭಾವೋ ವಾ ಕಾರಣಮ್' ಇತ್ಯುತ್ತರಭಂಗೇ ವಕ್ಷ್ಯಮಾಣ ಇತ್ಯರ್ಥಃ।

ಅನುವಾದ – ಮಣ್ಯಾದಿಗಳಿಗೆ ಪ್ರತಿಬಂಧಕಾಭಾವ ಅನ್ಯಥಾನುಪಪತ್ತಿಯಿಂದ ಶಕ್ತಿಯು ಸಿದ್ಧವಾಗುತ್ತದೆಂಬುದನ್ನು ಕಿಂಚ ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ. ವಕ್ಷ್ಯಮಾಣೇ ಪಕ್ಷ ಚತುಷ್ಟಯೇ ಎಂಬುದಕ್ಕೆ ಮುಂದೆ ಹೇಳುವ ನಾಕು ಪಕ್ಷಗಳು ಎಂದರ್ಥ. ಅವುಗಳು ಹೀಗಿವೆ -

೧. ವಿಶೇಷಣ, ವಿಶೇಷ್ಯ ಅವುಗಳ ಸಂಬಂಧ ಈ ಮೂರರ ಅಭಾವವು ದಾಹಕ್ಕೆ ಕಾರಣವಾಗುತ್ತದೆ;

೨. ಪ್ರತಿಬಂಧಕರೂಪವಾದ ವಿಶೇಷ್ಯವಿದ್ದರೂ ಕೂಡ ಪ್ರತಿಯೋಗಿತಾವಚ್ಛೇದಕವನ್ನು ಬೇರೆಯನ್ನಾಗಿ ಇಟ್ಟುಕೊಂಡು ಅದರ ಅಭಾವಪ್ರಯುಕ್ತವಾಗಿ ದಾಹವನ್ನು ಹೇಳಬಹುದು.

೩. ಬೇರೆ ದೇಶದಲ್ಲಿರುವ ಉತ್ತೇಜಕಾಭಾವವಿಶಿಷ್ಟವಾದ ಮಣ್ಯಾದಿಗಳು ಪ್ರಕೃತ ಸ್ಥಳದಲ್ಲಿ ಇರುವುದಿಲ್ಲ; ಈ ರೀತಿಯಾದ ಅಭಾವವು ದಾಹಕ್ಕೆ ಕಾರಣವಾಗುತ್ತದೆ.

೪. ವಿಶೇಷಣ ಹಾಗೂ ವಿಶೇಷ್ಯಗಳ ಯಾವ ಸಂಬಂಧವಿದೆಯೋ ಅದರ ಅಭಾವವು ದಾಹಕ್ಕೆ ಕಾರಣವಾಗುತ್ತದೆ.

ಹೀಗೆ ಮುಂದಿನ ಭಂಗದಲ್ಲಿ ಹೇಳುತ್ತೇವೆ ಎಂದರ್ಥ.

ವಿವರಣೆ – ಪ್ರತಿಬಂಧಕಾಭಾವವು ಹೇತುವೆಂದು ಸಮರ್ಥಿಸಲು ನಾಲ್ಕು ಪಕ್ಷಗಳನ್ನು ಮುಂದೆ ಸಮರ್ಥಿಸಲಾಗುತ್ತದೆ. ಅದನ್ನೇ ಸಂಕ್ಷೇಪವಾಗಿ ಇಲ್ಲಿ ಹೀಗೆ ತಿಳಿಯಬೇಕು -

ಮಣ್ಯಭಾವವು ದಾಹಕ್ಕೆ ಕಾರಣವೆಂದು ತಾರ್ಕಿಕನು ಹೇಳಿದನು. ಇದಕ್ಕೆ ಗ್ರಂಥಕಾರರು ಹಿಂದೆ ವ್ಯತಿರೇಕವ್ಯಭಿಚಾರವನ್ನು ಹೇಳಿದರು. ಉತ್ತೇಜಕವಿರುವಾಗ ಮಣಿ ಇದ್ದರೂ ಕೂಡ ದಾಹವೇ ಉಂಟಾಗುತ್ತದೆ ಎಂದು. ಈ ವ್ಯಭಿಚಾರವನ್ನು ತಾರ್ಕಿಕನು ಕೇವಲ ಮಣಿಯು ಪ್ರತಿಬಂಧಕವಲ್ಲ ಉತ್ತೇಜಕಾಭಾವವಿಶಿಷ್ಟವಾದ ಮಣಿಯೇ ಪ್ರತಿಬಂಧಕವೆಂದು ಉತ್ತರವನ್ನು ನೀಡಿದನು. ಉತ್ತೇಜಕಾಭಾವವಿಶಿಷ್ಟವಾದ ಮಣ್ಯಭಾವವು ದಾಹಕ್ಕೆ ಕಾರಣವೆಂದು ಹೇಳಿದಾಗ ತಾರ್ಕಿಕನಿಗೆ ದೊಡ್ಡ ಸಮಸ್ಯೆಯೇ ಎದುರಾಯಿತು. ಏನೆಂದರೆ ವಿಶಿಷ್ಟವನ್ನು ಪ್ರತ್ಯೇಕ ಪದಾರ್ಥವೆಂದು ತಾರ್ಕಿಕನು ಒಪ್ಪಿರುವುದಿಲ್ಲ. ವಿಶೇಷಣ ವಿಶೇಷ್ಯ ಸಂಸರ್ಗ ಇವುಗಳೇ ವಿಶಿಷ್ಟ ಎಂದು ಕರೆಸಿಕೊಳ್ಳುತ್ತವೆ. ಯಾವಾಗ ವಿಶಿಷ್ಟವು ಪದಾರ್ಥಾಂತರವು ಆಗುವುದಿಲ್ಲವೋ ಆಗ ವಿಶಿಷ್ಟಾಭಾವ ಎಂದು ಹೇಳಿದರೆ ವಿಶೇಷಣಾಭಾವ, ವಿಶೇಷ್ಯಾಭಾವ ಸಂಸರ್ಗಾಭಾವ ಎಂಬುದಾಗಿ ಮೂರು ಅಭಾವಗಳನ್ನು ಹೇಳಿದಂತಾಗುತ್ತದೆ. ಆಗ ದಾಹಕ್ಕೆ ಮೂರು ಅಭಾವಗಳು ಕಾರಣವೆಂದು ಹೇಳಿದಂತಾಗುತ್ತದೆ. ಹೀಗೆ ಹೇಳಿದರೆ ಅನನುಗಮ ದೋಷವು ಪ್ರಾಪ್ತವಾಗುತ್ತದೆ.

ಪ್ರಕೃತ ಪ್ರತಿಬಂಧಕಾಭಾವವನ್ನು ದಾಹಕ್ಕೆ ಕಾರಣವೆಂದು ಹೇಳಿದರೆ ಈಗಾಗಲೇ ಮಣ್ಯಭಾವ, ಮಂತ್ರಾಭಾವ, ಓಷಧ್ಯಭಾವ ಮೊದಲಾದ ಅನೇಕ ಅಭಾವಗಳನ್ನು ಕಾರಣವೆಂದು ಹೇಳಿದ್ದಾಗಿದೆ.

ಮೊದಲನೆಯ ಪ್ರಕಾರ ಹೀಗಿದೆ -

(1) ವಿಶೇಷಣಾಭಾವ, ವಿಶೇಷ್ಯಾಭಾವ, ತತ್ಸಂಬಂಧಾಭಾವ ಮೂರನ್ನೂ ಕೂಡ ಇರಲೇಬೇಕೆಂದು ಹೇಳುವುದಿಲ್ಲ. ಒಂದೊಂದೇ ಅಭಾವಗಳೂ ಕೂಡ ಪ್ರತ್ಯೇಕವಾಗಿ ಕಾರಣವೆಂದು ಹೇಳುತ್ತೇವೆ. ಮಣಿಯನ್ನು ಇಟ್ಟಾಗ ಉತ್ತೇಜಕವಿದ್ದರೆ ಉತ್ತೇಜಕಾಭಾವವೆಂಬ ವಿಶೇಷಣಾಭಾವದಿಂದ ದಾಹವನ್ನು ಕೂಡಿಸಬೇಕು. ಅಥವಾ ಉತ್ತೇಜಕಾಭಾವವಿದ್ದು ಪ್ರತಿಬಂಧಕವಾದ ಮಣಿ ಇಲ್ಲದಿರುವಾಗ ದಾಹ ಆಗುವುದಿಲ್ಲ. ಉತ್ತೇಜಕಾಭಾವವೆಂಬ ವಿಶೇಷಣವಿದೆ. ಮಣಿ ಎಂಬ ವಿಶೇಷ್ಯವಿಲ್ಲ. ಈ ಸಂದರ್ಭದಲ್ಲಿ ವಿಶೇಷ್ಯಾಭಾವದಿಂದ ದಾಹಾಭಾವವನ್ನು ಹೇಳಬೇಕು. ಇನ್ನು ಉತ್ತೇಜಕಾಭಾವವೇ ಒಂದು ಕಡೆ ಮಣಿಯೇ ಇನ್ನೊಂದು ಕಡೆ ಇದ್ದಾಗ ಆಗ ಸಂಸರ್ಗವು ಇರುವುದಿಲ್ಲ. ಈ ಸಂದರ್ಭದಲ್ಲಿ ವಿಶೇಷಣವು ಇರುತ್ತದೆ; ವಿಶೇಷ್ಯವೂ ಇರುತ್ತದೆ. ಆದರೆ ಸಂಸರ್ಗಾಭಾವಪ್ರಯುಕ್ತವಾಗಿ ದಾಹವು

ಆಗುತ್ತದೆಂದು ತಿಳಿಯಬೇಕು. ಆದ್ದರಿಂದ ದಾಹಕ್ಕೆ ವಿಶೇಷಣಾಭಾವ, ವಿಶೇಷ್ಯಾಭಾವ, ಹಾಗೂ ತತ್ಸಂಬಂಧಾಭಾವಗಳು ಅನ್ಯ ಅನಪೇಕ್ಷಿತವಾಗಿ ಪ್ರತ್ಯೇಕವಾಗಿಯೇ ದಾಹಕ್ಕೆ ಕಾರಣಗಳಾಗುತ್ತವೆಂದುಹೇಳಬೇಕು. ಮೂರುಅಭಾವಗಳಲ್ಲಿಯೂವಿಶಿಷ್ಟವಿರೋಧಿತ್ವಎಂಬ ಧರ್ಮವು ಅನುಗತವಾಗಿದೆ. ಆದ್ದರಿಂದ ಮೂರು ಅಭಾವಗಳಲ್ಲಿ ಅನನುಗಮದೋಷವು ಬರುವುದಿಲ್ಲ. ಇದು ಮೊದಲನೆಯ ಪಕ್ಷ. ಇದನ್ನೇ 'ವಿಶೇಷಣವಿಶೇಷ್ಯತತ್ಸಂಬಂಧಾನಾಂ ಅಭಾವತ್ರಯಂ' ಎಂಬುದರಿಂದ ಹೇಳಿದ್ದಾರೆ.

(2) 'ವಿದ್ಯಮಾನಸ್ಯಾಪಿ ಪ್ರತಿಬಂಧಕತ್ವರೂಪವಿಶೇಷ್ಯಸ್ಯೈವ ಪ್ರತಿಯೋಗಿತಾವಚ್ಛೇದಕಭೇದೇನ ಅಭಾವಃ'. ಇದನ್ನು ವ್ಯಧಿಕರಣಧರ್ಮಾವಚ್ಛಿನ್ನಪ್ರತಿಯೋಗಿತಾಕ ಅಭಾವ ಎಂದು ಕರೆಯುತ್ತಾರೆ. ಘಟ ಇದ್ದಾಗಲೇ ಅದರ ಅಭಾವವನ್ನು ಹೇಳಬಹುದೆಂದು ಇದರ ಅಭಿಪ್ರಾಯ. ಘಟವು ಘಟತ್ವೇನ ರೂಪೇಣ ಭೂತಲದಲ್ಲಿದ್ದರೂ ಪಟತ್ವೇನ ರೂಪೇಣ ಭೂತಲದಲ್ಲಿಲ್ಲ ಎಂದು ಹೇಳಬಹುದು. ಅಥವಾ 'ಸಮವಾಯೇನ ಘಟೋ ನಾಸ್ತಿ' ಎಂದು ಹೇಳಬಹುದು. ಹೀಗೆ ಪ್ರತಿಯೋಗಿತಾವಚ್ಛೇದಕಸಂಬಂಧವು ವ್ಯಧಿಕರಣಸಂಬಂಧವಾಗಿದ್ದರೆ ಅಥವಾ ಪ್ರತಿಯೋಗಿತಾವಚ್ಛೇದಕವಾದ ಧರ್ಮವು ತತ್ಪ್ರತಿಯೋಗಿತಾಕವಾದ ಅಭಾವವನ್ನು ಘಟ ಇದ್ದಾಗಲೂ ಕೂಡ ಹೇಳಬಹುದು ಎಂದಭಿಪ್ರಾಯ. ಪ್ರಕೃತ ಅಗ್ನಿಯಲ್ಲಿ ಉತ್ತೇಜಕವೂ ಇದೆ ಮಣಿಯೂ ಇದೆ. ಇಂತಹ ಸಂದರ್ಭದಲ್ಲಿ ಮಣ್ಯಭಾವವನ್ನು ಹೇಳಬಹುದು. ಹೇಗೆಂದರೆ ಮಣಿ ಇದ್ದರೂ ಕೂಡ ಉತ್ತೇಜಕಾಭಾವಸಹಿತತ್ವೇನ ರೂಪೇಣ ಮಣಿಯು ಇರುವುದಿಲ್ಲ. ಘಟವು ಹೇಗೆ ಪಟತ್ವೇನ ಇಲ್ಲವೆಂದು ಹೇಳುತ್ತೇವೋ ಅದರಂತೆ ಮಣಿಯು ಕೂಡ ಉತ್ತೇಜಕವಿಶಿಷ್ಟವಾಗಿ ಇದೆಯೇ ಹೊರತು ಉತ್ತೇಜಕಾಭಾವಸಹಿತತ್ವೇನ ರೂಪೇಣ ಇರುವುದಿಲ್ಲ. ಈ ಪಕ್ಷದಲ್ಲಿ ವಿಶೇಷ್ಯಾಭಾವವೇ ದಾಹಕ್ಕೆ ಕಾರಣವಾಗಿದೆ. ಇಲ್ಲಿ ವಿಶೇಷ್ಯವಾದ ಮಣಿಯು ಪ್ರತಿಯೋಗಿ, ಪ್ರತಿಯೋಗಿತಾ ಮಣಿನಿಷ್ಠಾ; ಪ್ರತಿಯೋಗಿತಾಯಾಂ ಅವಚ್ಛೇದಕಧರ್ಮ ಎಂದರೆ ಉತ್ತೇಜಕಾಭಾವಸಹಕೃತತ್ವ ಎಂಬ ಧರ್ಮ ಎಂದು ತಿಳಿಯಬೇಕು.

(3) 'ದೇಶಾಂತರಸ್ಥಾನಾಮುತ್ತಂಭಕಾಭಾವವಿಶಿಷ್ಟಾನಾಂ ಮಣ್ಯಾದೀನಾಂ ಅತ್ರತ್ಯಾಭಾವಃ' ಎಂಬುದು ಮೂರನೆಯ ಪ್ರಕಾರ. ನೈಯಾಯಿಕರ ಮತದಲ್ಲಿ ದೇಶಾಂತರಸ್ಥವಾದ ಪದಾರ್ಥವು ಪೂರ್ವವೃತ್ತಿಯಾದ ಅಭಾವಕ್ಕೆ ಪ್ರತಿಯೋಗಿಯೆಂದು ಹೇಳಬಹುದು.

ಪ್ರಕೃತ ಉತ್ತೇಜಕಾಭಾವ ಹಾಗೂ ಮಣಿ ಈ ಎರಡರ ಅಭಾವವನ್ನು ಹೇಳುವಾಗ ಅತ್ಯಂತಾಭಾವರೂಪವಾಗಿ ವಿವಕ್ಷಿಸಬೇಕು. ಬೇರೆ ದೇಶದಲ್ಲಿರುವ ಮಣಿ ಹಾಗೂ ಉತ್ತೇಜಕಾಭಾವ ಹಾಗೂ ಸಂಸರ್ಗ ಈ ಮೂರರ ಅಭಾವವು ದಾಹಕ್ಕೆ ಕಾರಣವಾಗಿದೆ. ಹೀಗೆ ಬೇರೆ ದೇಶದಲ್ಲಿರುವ ಮಣಿ ಉತ್ತೇಜಕಾಭಾವ ಹಾಗೂ ಅವುಗಳ ಸಂಸರ್ಗ ಇವುಗಳ ಅಭಾವವಿಶಿಷ್ಟವಾದ ಮಣ್ಯಾದಿಗಳ ಅತ್ಯಂತಾಭಾವವು ದಾಹಕ್ಕೆ ಕಾರಣವೆಂದು ಹೇಳಬಹುದು.

(4) 'ವಿಶೇಷಣವಿಶೇಷ್ಯಯೋಃ ಯಃ ಸಂಬಂಧಃ ತದಭಾವಃ ಕಾರಣಂ' ಎಂಬುದು ನಾಲ್ಕನೆಯ ಪ್ರಕಾರ. ವಿಶೇಷಣ ಹಾಗೂ ವಿಶೇಷ್ಯ ಇವುಗಳ ಸಂಬಂಧಾಭಾವವು ದಾಹಕ್ಕೆ ಕಾರಣ. ವಿಶೇಷಣ ವಿಶೇಷ್ಯಗಳ ಸಂಬಂಧವನ್ನೇ ವಿಶಿಷ್ಟ ಎಂದು ಕರೆಯುತ್ತೇವೆ. ವಿಶೇಷ್ಯವಿಲ್ಲದೇ ವಿಶೇಷಣ ಮಾತ್ರವಿದ್ದರೂ ಸಂಸರ್ಗವು ಇರುವುದಿಲ್ಲ. ವಿಶೇಷ್ಯಮಾತ್ರವಿದ್ದು ವಿಶೇಷಣವಿಲ್ಲದಿದ್ದರೂ ಸಂಸರ್ಗವಿರುವುದಿಲ್ಲ. ಹೀಗೆ ಸಂಸರ್ಗಾಭಾವವನ್ನು ದಾಹಕ್ಕೆ ಕಾರಣವೆಂದು ಹೇಳುತ್ತೇವೆ. (ಇದು ಮಣಿಕಾರನಿಗೆ ಸಮ್ಮತವಾದ ಪಕ್ಷ)

ನಾಲ್ಕನೆಯ ಪಕ್ಷದಲ್ಲಿ ಸಂಸರ್ಗಾಭಾವವೇ ದಾಹಕ್ಕೆ ಕಾರಣ; ಮೊದಲನೆಯ ಪಕ್ಷದಲ್ಲಿ ವಿಶೇಷಣಾಭಾವ, ವಿಶೇಷ್ಯಾಭಾವ, ಸಂಸರ್ಗಾಭಾವ ಹೀಗೆ ಮೂರು ಕಾರಣಗಳಿವೆ. ಮೊದಲನೆಯ ಪಕ್ಷಕ್ಕೂ ನಾಕನೆಯ ಪಕ್ಷಕ್ಕೂ ವ್ಯತ್ಯಾಸವನ್ನು ತಿಳಿಯಬೇಕು.

## ಪ್ರತಿಬಂಧರೂಪವಾದ ಮಣಿಯನ್ನು ಪ್ರತಿಬಂಧಕ ಎನ್ನುವುದು ವ್ಯಾಕರಣವಿರುದ್ಧವಲ್ಲ.

ತರ್ಕತಾಂಡವ – ನಚ ಮಣೇಃ ಕಾರ್ಯಾನುಕೂಲವಿಘಟನರೂಪಃ ಪ್ರತಿಬಂಧ ಏವ, ನ ತು ಪ್ರತಿಬಂಧಕಃ, ತತ್ಪ್ರಯೋಕ್ತಾ ಪುರುಷ ಏವ ತು ಪ್ರತಿಬಂಧಕಃ, ಮಣೌ ಪ್ರತಿಬಂಧಕವ್ಯವಹಾರಸ್ತು ಉಪಚಾರಾದ್ವಾ ಸ್ವಾರ್ಥೇ ಅಕಪ್ರತ್ಯಯಾಶ್ರಯಣಾದ್ವೇತಿ ವಾಚ್ಯಮ್ । ಮುಖ್ಯೇ ಬಾಧಕಾಭಾವಾತ್ । 'ಮಣಿನಾ ಪ್ರತಿಬದ್ಧಃ' ಇತಿ ವ್ಯವಹಾರಾನುಸಾರೇಣ 'ಪ್ರತಿಬಂಧಕಃ' ಇತ್ಯತ್ರಾಪಿ ಕರ್ತರ್ಥಕಪ್ರತ್ಯಯಸ್ಯೈವೌಚಿತ್ಯಾಚ್ಚ।

ಅನುವಾದ – ಮಣಿಯು ಕಾರ್ಯಾನುಕೂಲವಿಘಟನರೂಪವಾಗಿ ಪ್ರತಿಬಂಧ ಆಗುತ್ತದೆ ಹೊರತು ಪ್ರತಿಬಂಧಕ ಆಗುವುದಿಲ್ಲ. ಇದರ ಪ್ರಯೋಕ್ತೃವಾದ ಪುರುಷನಷ್ಟೇ ಪ್ರತಿಬಂಧಕ ಆಗುತ್ತಾನೆ. ಆದರೆ ಮಣಿಯಲ್ಲಿ ಪ್ರತಿಬಂಧಕ ಎಂಬ ವ್ಯವಹಾರವನ್ನು ಔಪಚಾರಿಕವಾಗಿ ಕೂಡಿಸಬೇಕು. ಅಥವಾ ಸ್ವಾರ್ಥದಲ್ಲಿ ಅಕಪ್ರತ್ಯಯವನ್ನು ಆಶ್ರಯಿಸಿ ವ್ಯವಹಾರವನ್ನು ಕೂಡಿಸಬೇಕು.

ಇದು ತಪ್ಪು. ಮುಖ್ಯಾರ್ಥವನ್ನು ವಿವಕ್ಷಿಸಿದರೆ ಯಾವುದೇ ಬಾಧಕವಿರುವುದಿಲ್ಲ. ಕರ್ತರ್ಥಕವಾದ ಮಣಿನಾ ಪ್ರತಿಬದ್ಧಃ ಎಂಬ ವ್ಯವಹಾರಕ್ಕೆ ಅನುಸಾರಿಯಾಗಿ ಪ್ರತಿಬಂಧಕಃ ಎಂಬಲ್ಲಿಯೂ ಕೂಡ ಕರ್ತರ್ಥದಲ್ಲಿಯೇ ಅಕಪ್ರತ್ಯಯವನ್ನು ವಿವಕ್ಷಿಸುವುದು ಉಚಿತವಾಗಿದೆ.

ವಿವರಣೆ – ಶಿಷ್ಯಪ್ರಶ್ನೆ - ಕಾರ್ಯಾನುಕೂಲವಾದ ಶಕ್ತಿಯು ಕಾರಣದಲ್ಲಿರುತ್ತದೆ. ಈ ಶಕ್ತಿಯ ವಿಘಟನರೂಪವಾಗಿದೆ ಮಣಿ ಹೊರತು ಪ್ರತಿಬಂಧಕ ಎಂದು ಹೇಳಬಾರದು. ಅದನ್ನು ಪ್ರಯೋಗ ಮಾಡುವ ಪುರುಷನನ್ನೇ ಪ್ರತಿಬಂಧಕ ಎಂದು ಕರೆಯಬಹುದು. ಏಕೆಂದರೆ, ವ್ಯಾಕರಣದ ಪ್ರಕಾರ ಪ್ರತಿಬಂಧಕ ಎಂಬ ಶಬ್ದವು ಪ್ರಯೋಕ್ತೃವಿನಲ್ಲಷ್ಟೇ ಸಾಧುವಾಗುತ್ತದೆ. ಅದು ಹೀಗೆ -- 'ಬಧ ಬಂಧನೇ' ಎಂಬ ಧಾತುವಿನ ಮೇಲೆ ಣ್ವುಲ್‌ಪ್ರತ್ಯಯವು ಬಂದು ಅನಂತರ ಣಕಾರ ಲಕಾರ ಎರಡೂ ಲೋಪವಾಗಿ 'ವ್' ಎಂಬುದಕ್ಕೆ 'ಯುವೋರನಾಕೌ' ಎಂಬ ಸೂತ್ರದಿಂದ ಅಕ ಎಂಬ ಆದೇಶವು ಬಂದರೆ ಪ್ರತಿಬಂಧಕ ಎಂಬ ರೂಪವು ನಿಷ್ಪನ್ನವಾಗುತ್ತದೆ. ಕರ್ತರ್ಥದಲ್ಲಿಯೇ ಣ್ವುಲ್ ಪ್ರತ್ಯಯವು ಬರುತ್ತದೆ. ಮಂತ್ರವನ್ನು ಪ್ರಯೋಗ ಮಾಡಿದವನು, ಮಣಿಯನ್ನು ಹಾಕಿದವನು, ಅಥವಾ ಔಷಧಿಯನ್ನು ಪ್ರಯೋಗ ಮಾಡಿದವನನ್ನು ಪ್ರತಿಬಂಧಕ ಎಂದು ಕರೆಯಬಹುದು.

ಔಪಚಾರಿಕಪ್ರತ್ಯಯವನ್ನು ಕೂಡಿಸಬಹುದು. 'ಹಂತಾ ರಾಮಶರಃ' ಎಂಬಲ್ಲಿ ಕರಣದಲ್ಲಿ ಕರ್ತೃತ್ವವನ್ನು ಔಪಚಾರಿಕವಾಗಿ ಪ್ರಯೋಗಿಸುವಂತೆ ಇಲ್ಲಿಯೂ ಕೂಡ ಮಣ್ಯಾದಿಗಳನ್ನು ಪ್ರಯೋಗಿಸುವ ಪುರುಷನೇ ಪ್ರತಿಬಂಧದಲ್ಲಿ ಕರ್ತೃವಾಗಿದ್ದಾನೆ. ಮಣ್ಯಾದಿಗಳು ಪ್ರತಿಬಂಧನ ರೂಪವೇ ಆಗಿವೆ. ಆದರೂ ಈ ಪ್ರತಿಬಂಧನ ಎಂಬರ್ಥದಲ್ಲಿಯೇ ಪ್ರತಿಬಂಧಕ

ಎಂಬ ಪ್ರಯೋಗವನ್ನು ಔಪಚಾರಿಕವಾಗಿ ವಿವಕ್ಷಿಸಬಹುದು. ಅಥವಾ ಕರ್ತರ್ಥದಲ್ಲಿ ಅಕಪ್ರತ್ಯಯವನ್ನು ವಿವಕ್ಷಿಸದೇ ಸ್ವಾರ್ಥದಲ್ಲಿ ಅಕಪ್ರತ್ಯಯವನ್ನು ವಿವಕ್ಷಿಸುವುದರಿಂದಲೂ ಪ್ರತಿಬಂಧಕ ಎಂಬ ಪ್ರಯೋಗವನ್ನು ಕೂಡಿಸಬಹುದು. ಹೀಗೆ ಉತ್ತರವನ್ನು ಹೇಳಬೇಕಲ್ಲವೇ?

ಉತ್ತರ - ಜಡವಾದ ಪದಾರ್ಥದಲ್ಲಿ ಕರ್ತೃತ್ವವನ್ನು ವಿವಕ್ಷಿಸಲು ಯಾವುದೇ ಬಾಧಕವಿಲ್ಲ. ಕರ್ತೃತ್ವಶಬ್ದಕ್ಕೆ 'ಜ್ಞಾನೇಚ್ಛಾಕೃತಿಮತ್ವಂ' ಎಂಬರ್ಥವನ್ನು ವಿವಕ್ಷಿಸಿದರೆ ಮಾತ್ರ ಜಡಪದಾರ್ಥದಲ್ಲಿ ಇದನ್ನು ವಿವಕ್ಷಿಸಲು ಬರುವುದಿಲ್ಲ. ಆದರೆ ಕ್ರಿಯಾಶ್ರಯತ್ವ ಎಂಬ ಕರ್ತೃತ್ವವನ್ನು ಅಥವಾ ಕ್ರಿಯಾಯಾಂ ಸ್ವಾತಂತ್ರ್ಯಂ ಎಂಬ ಕರ್ತೃತ್ವವನ್ನು ಜಡವಾದ ಮಣ್ಯಾದಿಗಳಲ್ಲಿ ವಿವಕ್ಷಿಸಲು ಯಾವುದೇ ತೊಂದರೆಯಿಲ್ಲ. 'ರಥಃ ಗಚ್ಛತಿ' 'ವೃಕ್ಷಃ ತಿಷ್ಠತಿ' ಇತ್ಯಾದಿ ಪ್ರಯೋಗಗಳಲ್ಲಿ ಇದು ಕಂಡಿದೆ.

ಮತ್ತು 'ಮಣಿನಾ ದಾಹಃ ಪ್ರತಿಬದ್ಧಃ' ಎಂಬ ಪ್ರಯೋಗವು ಕೂಡ ಕಂಡಿದೆ. 'ಕರ್ತೃಕರಣಯೋಸ್ತೃತೀಯಾ' ಎಂಬ ಸೂತ್ರದಂತೆ ಕರ್ತರ್ಥದಲ್ಲಿ ತೃತೀಯಾವಿಭಕ್ತಿಯು ಬರುವುದರಿಂದ ಪ್ರಕೃತದಲ್ಲಿಯೂ ಕರ್ತರ್ಥದಲ್ಲಿಯೇ ಅಕಪ್ರತ್ಯಯವು ಬಂದಿದೆಯೆಂದು ತಿಳಿಯಬೇಕು.

ನ್ಯಾಯದೀಪ – ಕರ್ತ್ರರ್ಥಕಪ್ರತ್ಯಯಸ್ಯೇತಿ ॥ 'ಣ್ವುಲ್ತೃಚೌ' ಇತಿ ಕರ್ತರಿ ವಿಹಿತಣ್ವುಲ್ ಪ್ರತ್ಯಯಸ್ಯ ಇತ್ಯರ್ಥಃ ॥

ಅನುವಾದ – 'ಣ್ವುಲ್‌ತೃಚೌ' ಎಂಬ ಸೂತ್ರದಿಂದ ಕರ್ತರ್ಥದಲ್ಲಿ ವಿಹಿತವಾದ ಣ್ವುಲ್ ಪ್ರತ್ಯಯವನ್ನು ಕರ್ತರ್ಥಕ ಪ್ರತ್ಯಯವೆಂದು ಹೇಳಿದ್ದಾರೆ.

## ಮಣ್ಯಾದ್ಯಭಾವವು ದಾಹಕ್ಕೆ ಕಾರಣವೆನ್ನುವ ತಾರ್ಕಿಕನು ಮಣಿಯು ಕಾರಣಾಭಾವವೆಂದು ಹೇಳಬೇಕಾದೀತು

ತರ್ಕತಾಂಡವ – ಕಿಂಚ ಮಣ್ಯಾದ್ಯಭಾವಸ್ಯ ಕಾರಣತ್ವೇ ಮಣೇಃ ಪ್ರತಿಬಂಧಕತ್ವಮಪಿ ನ ಸ್ಯಾತ್ । ಲೋಕೇ ಕಾರಣಾಭಾವರೂಪೇ ದಂಡಾಭಾವಾದೌ

**ಪ್ರತ್ಯವಾಯಕಾರಣೀಭೂತವಿಹಿತಾಕರಣಸ್ಯಾಭಾವರೂಪೇ ವಿಹಿತಕರಣೇ ಚ ಪ್ರತಿಬಂಧಕವ್ಯವಹಾರಾಭಾವಾತ್ ॥**

ಅನುವಾದ – ಮತ್ತು ಮಣ್ಯಾದ್ಯಭಾವವನ್ನು ದಾಹಕ್ಕೆ ಕಾರಣವೆಂದು ಹೇಳುವುದಾದರೆ ಮಣಿಯು ಕಾರಣಾಭಾವವೆಂದಾಗುತ್ತದೆ. ಆದರೆ ಲೋಕದಲ್ಲಿ ಎಲ್ಲರೂ ಕೂಡ ಮಣಿಯನ್ನು ಪ್ರತಿಬಂಧಕ ಎನ್ನುತ್ತಾರೆ. ಇದು ಕೂಡದಿರಬೇಕಾದೀತು. ಮತ್ತು ಲೋಕದಲ್ಲಿ ಕಾರಣಾಭಾವರೂಪವಾದ ದಂಡಾಭಾವವನ್ನು ಪ್ರತಿಬಂಧಕವೆಂದು ಯಾರೂ ವ್ಯವಹರಿಸುವುದಿಲ್ಲ. ಆದರಂತೆ ಪ್ರತ್ಯವಾಯಕ್ಕೆ ಕಾರಣವಾದ ವಿಹಿತ ಅಕರಣದ ಅಭಾವರೂಪವಾದ ವಿಹಿತಕರಣದಲ್ಲಿಯೂ ಪ್ರತಿಬಂಧಕ ಎಂಬ ವ್ಯವಹಾರವನ್ನು ಯಾರೂ ಮಾಡುವುದಿಲ್ಲ.

ವಿವರಣೆ – ಮಣಿ, ಮಂತ್ರ, ಓಷಧ ಇವುಗಳು ದಾಹಕ್ಕೆ ಪ್ರತಿಬಂಧಕವೆಂದು ತಾರ್ಕಿಕರಾದ ನೀವು ಕೂಡ ಹೇಳುತ್ತೀರಿ. ಮತ್ತು ಇವುಗಳ ಅಭಾವವು ದಾಹಕ್ಕೆ ಕಾರಣವೆಂದು ಕೂಡ ಹೇಳುತ್ತೀರಿ. ಒಂದು ವೇಳೆ ಈ ಅಭಾವಗಳು ಕಾರ್ಯಕ್ಕೆ ಕಾರಣವೆಂದು ಹೇಳುವುದಾದರೆ ಪ್ರತಿಬಂಧಕವನ್ನು ಕಾರಣಾಭಾವ ಎಂದೇ ಕರೆಯಬೇಕಾಗುತ್ತದೆ. ಪ್ರತಿಬಂಧಕ ಎಂದು ಕರೆಯುವುದು ತಪ್ಪಾಗುತ್ತದೆ. ಏಕೆಂದರೆ, ಜಗತ್ತಿನಲ್ಲಿ ಕಾರಣವಿಲ್ಲದೆ ಕಾರ್ಯವಾದಾಗ ಕಾರ್ಯದ ಹುಟ್ಟದಿರುವಿಕೆಗೆ ಕಾರಣ ಇಲ್ಲದಿರುವುದನ್ನೇ ಎಂದೇ ಎಲ್ಲರು ಹೇಳುತ್ತಾರೆ. ಪ್ರತಿಬಂಧಕವಿರುವುದರಿಂದ ಕಾರ್ಯವು ಆಗಲಿಲ್ಲವೆಂದು ಯಾರೂ ಹೇಳುವುದಿಲ್ಲ. ಪ್ರಕೃತ ನಿಮ್ಮ ಸಿದ್ಧಾಂತದಲ್ಲಿ ಪ್ರತಿಬಂಧಕಾಭಾವವನ್ನೇ ಕಾರಣವೆನ್ನುವುದಾದರೆ ಪ್ರತಿಬಂಧಕಾಭಾವವು ಕಾರಣಾಭಾವರೂಪವಾಯಿತು. ಏಕೆಂದರೆ ಪ್ರತಿಬಂಧಕಾಭಾವವು ಕಾರಣವಾದಾಗ ಪ್ರತಿಬಂಧಕಾಭಾವದ ಅಭಾವವು ಕಾರಣದ ಅಭಾವರೂಪವಾಯಿತು. ಪ್ರತಿಬಂಧಕಾಭಾವಾಭಾವ ಎಂದರೆ ಅದು ಪ್ರತಿಬಂಧಕಸ್ವರೂಪವೇ ಆಗಿದೆ. ಆದ್ದರಿಂದ ಪ್ರತಿಬಂಧಕ ಇರುವುದರಿಂದ ಕಾರ್ಯವು ಆಗುವುದಿಲ್ಲ ಎಂಬ ವ್ಯವಹಾರವೇ ಜಗತ್ತಿನಲ್ಲಿ ಇಲ್ಲವೆಂದಾಗಬೇಕಾದೀತು.

ಲೋಕದಲ್ಲಿ ದಂಡವು ಕಾರಣವಾಗಿದೆ. ದಂಡಾಭಾವವು ಕಾರಣಾಭಾವರೂಪವಾಗಿದೆ. ಕಾರಣಾಭಾವರೂಪವಾದ ದಂಡಾಭಾವವೆಂದು ಯಾರೂ ಕೂಡ ಪ್ರತಿಬಂಧಕವೆಂದು ಕರೆಯುವುದಿಲ್ಲ.

ಸಂಧ್ಯಾವಂದನೆಯನ್ನು ಮಾಡದಿದ್ದರೆ ಪ್ರತ್ಯವಾಯವು ಬರುತ್ತದೆ. ಇದಕ್ಕೆ ಕಾರಣವಾದದ್ದು ವಿಹಿತಕರಣಾಭಾವ. ಇದರ ಅಭಾವ ಎಂದರೆ ವಿಹಿತಕರಣ. ವಿಹಿತವಾದ ಸಂಧ್ಯಾವಂದನೆಯನ್ನು ಮಾಡಿದರೆ ಪ್ರತ್ಯವಾಯವು ಹುಟ್ಟುವುದಿಲ್ಲ. ಪ್ರತ್ಯವಾಯವು ಬರುವುದಕ್ಕೆ ಸಂಧ್ಯಾವಂದನೆಯು ಪ್ರತಿಬಂಧಕವಲ್ಲ. ಏಕೆಂದರೆ, ಪ್ರತ್ಯವಾಯಕ್ಕೆ ಕಾರಣವಾದದ್ದು ವಿಹಿತ ಅಕರಣ. ಇದರ ಅಭಾವ ಎಂದರೆ ವಿಹಿತಕರಣ. ಆದ್ದರಿಂದ ವಿಹಿತಕರಣವು ಪ್ರತ್ಯವಾಯಕ್ಕೆ ಕಾರಣ ಹೊರತು ಪ್ರತಿಬಂಧಕವಲ್ಲ. ಆದ್ದರಿಂದ ಪ್ರತ್ಯವಾಯ ಬರಲು ಯಾವುದೇ ಕಾರಣವಿಲ್ಲ ಎಂಬುದಾಗಿ ಕಾರಣವಿಲ್ಲದ ಪ್ರಯುಕ್ತ ಕಾರ್ಯವು ಇಲ್ಲವೆಂದೇ ಎಲ್ಲರೂ ಹೇಳುತ್ತಾರೆ. ವಿಹಿತಕರಣವು ಪ್ರತ್ಯವಾಯಕ್ಕೆ ಪ್ರತಿಬಂಧಕವೆಂದು ಯಾರೂ ಹೇಳುವುದಿಲ್ಲ. ಪ್ರಕೃತದಲ್ಲಿ ಮಣಿ, ಮಂತ್ರ,ಔಷಧಿಗಳು ದಾಹಕ್ಕೆ ಪ್ರತಿಬಂಧಕ ಎಂದಾಗುವುದಾದಲ್ಲಿ ಮಣ್ಯಾದಿಗಳು ಕಾರಣಾಭಾವರೂಪವಾಗುತ್ತವೆ.

## ಶಕ್ತಿ ಒಪ್ಪದೇ ಪ್ರತಿಬಂಧಕತ್ವವನ್ನೂ ಒಪ್ಪಲಾಗದು

ನ್ಯಾಯದೀಪ – ನನು – ಕಾರಣೀಭೂತಸ್ವಾಭಾವಪ್ರತಿಯೋಗಿತ್ವರೂಪಪ್ರತಿಬಂಧಕತ್ವಮೇವ ಮಣ್ಯಾದೇರಿತಿ ಮತೇ ಶಕ್ತಿಸಿದ್ಧಿರ್ನೇತ್ಯತಃ ಶಕ್ತಿಂ ವಿನಾ ತದೇವಾಯುಕ್ತಮಿತ್ಯಾಹ – ಕಿಂಚೇತಿ ॥

ಅನುವಾದ – ಕಾರಣೀಭೂತಸ್ವಾಭಾವಪ್ರತಿಯೋಗಿತ್ವರೂಪವಾದ ಪ್ರತಿಬಂಧಕತ್ವವು ಮಣ್ಯಾದಿಗಳಲ್ಲಿದೆ ಎಂಬ ಮತದಲ್ಲಿ ಶಕ್ತಿಯನ್ನು ಏಕೆ ಒಪ್ಪಬೇಕು? ಎಂದುಪ್ರಶ್ನಿಸಿದರೆ ಶಕ್ತಿಯನ್ನೊಪ್ಪದೇ ಪ್ರತಿಬಂಧಕತ್ವವೇ ಕೂಡುವುದಿಲ್ಲ ಎಂಬುದನ್ನು ಕಿಂಚ ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

ನ್ಯಾಯದೀಪ – ತಥಾ ಚ ಕಾರಣೀಭೂತಶಕ್ತಿವಿಘಟನರೂಪತ್ವಾದಿನೈವ ಪ್ರತಿಬಂಧಕತ್ವಂ ತ್ವಯಾಽಪಿ ವಾಚ್ಯಮ್ ।

ಅನುವಾದ – ಆದ್ದರಿಂದ ಕಾರಣೀಭೂತಶಕ್ತಿವಿಘಟನರೂಪತ್ವದಿಂದಲೇ ಪ್ರತಿಬಂಧಕತ್ವವನ್ನು ತಾರ್ಕಿಕನು ಒಪ್ಪಬೇಕು. ಇದರಿಂದ ಶಕ್ತಿಯು ಸಿದ್ಧವಾಯಿತು.

## ಐದು ಬಗೆಯ ಅರ್ಥಾಪತ್ತಿಗಳೂ

ತರ್ಕತಾಂಡವ – ತಸ್ಮಾದ್ ದೃಷ್ಟಾನ್ವಯವ್ಯತಿರೇಕಾಭ್ಯಾಂ ಕಾರಣತ್ವಾನುಮಿತ್ಯ-ನ್ಯಥಾऽನುಪಪತ್ತ್ಯಾ ರಾಸಭಾದೇರಕಾರಣತ್ವಾನ್ಯಥಾऽನುಪಪತ್ತ್ಯಾऽಪೂರ್ವಾದಿ-ಪ್ರತಿಬಂದ್ಯಾ ಮಣ್ಯಾದೇರ್ಲೋಕಸಿದ್ಧಪ್ರತಿಬಂಧಕತ್ವಾನ್ಯಥಾऽನುಪಪತ್ತ್ಯಾ ತ್ವದಭಿಮತಪ್ರತಿಬಂಧಕತ್ವಾನ್ಯಥಾऽನುಪಪತ್ತ್ಯಾ ಚ ಶಕ್ತಿಸಿದ್ಧಿಃ ॥

॥ ಇತಿ ಶಕ್ತಾವರ್ಥಾಪತ್ತಿಪಂಚಕಮ್ ॥6॥

ಅನುವಾದ – ಐದು ಬಗೆಯ ಅನ್ಯಥಾನುಪಪತ್ತಿಗಳನ್ನು ಹೇಳಿದಂತಾಯಿತು. (೧) ದೃಷ್ಟಾನ್ವಯವ್ಯತಿರೇಕಾಭ್ಯಾಂ ಕಾರಣತ್ವಾನುಮಿತ್ಯನ್ಯಥಾನುಪಪತ್ತಿಃ (೨) 'ರಾಸಭಾದೇರ- ಕಾರಣತ್ವಾನ್ಯಥಾನುಪಪತ್ತಿಃ' (೩) 'ಅಪೂರ್ವಾದಿಪ್ರತಿಬಂದಿಃ' (೪) 'ಮಣ್ಯಾದೇಃ ಲೋಕಸಿದ್ಧಪ್ರತಿಬಂಧಕತ್ವಾನ್ಯಥಾನುಪಪತ್ತಿಃ' (೫) 'ತ್ವದಭಿಮತ 'ಪ್ರತಿಬಂಧಕತ್ವಾನ್ಯಥಾನುಪಪತ್ತಿಃ' ಈ ಐದರಿಂದ ಶಕ್ತಿ ಎಂಬ ಪದಾರ್ಥವು ಸಿದ್ಧವಾಯಿತು.

ಇಲ್ಲಿಗೆ ಶಕ್ತಿಯಲ್ಲಿ ಅರ್ಥಾಪತ್ತಿಪಂಚಕಪ್ರಕರಣವು ಸಮಾಪ್ತವಾಯಿತು.

ನ್ಯಾಯದೀಪ – ಪ್ರಾಗುಕ್ತಂ ಸರ್ವಂ ನಿಷ್ಕೃಷ್ಯಾನುವದನ್ನುಪಸಂಹರತಿ – ತಸ್ಮಾದಿತಿ ॥ 'ಅಪೂರ್ವಾದಿ' ಇತ್ಯಾದಿ ಪದೇನ ಸಂಗ್ರಹಃ । 'ಕೇಚಿತ್' ಇತ್ಯಾದಿನೋಕ್ತಕಲ್ಪನಾಲಾಘವಸ್ಯಾರುಚಿಗ್ರಸ್ತತ್ವಾನ್ನ ತಸ್ಯ ಸಂಗ್ರಹಃ ಕೃತಃ ॥

ಅನುವಾದ – ಇದುವರೆಗೂ ಹೇಳಿದ ಐದು ಅನ್ಯಥಾನುಪಪತ್ತಿಗಳನ್ನು ಅನುವಾದಿಸಿ ಉಪಸಂಹಾರ ಮಾಡುತ್ತಿದ್ದಾರೆ 'ತಸ್ಮಾತ್' ಎಂಬಿತ್ಯಾದಿ ಗ್ರಂಥದಿಂದ. ''ಅಪೂರ್ವಾದಿ'' ಎಂಬಲ್ಲಿರುವ ಆದಿಪದದಿಂದ ಹಿಂದೆ ಹೇಳಿದ ಸಂಸ್ಕಾರವನ್ನೂ ಕೂಡ ಸಂಗ್ರಹಿಸಬೇಕು.

ಹಿಂದೆ ಕೇಚಿತ್ಕಾರರ ಪಕ್ಷವನ್ನು ಉಲ್ಲೇಖ ಮಾಡಿ ಕಲ್ಪನಾಲಾಘವವನ್ನು ಶಕ್ತಿಪಕ್ಷದಲ್ಲಿ ಸಮರ್ಥಿಸಲಾಗಿತ್ತು. ಇದನ್ನು ಗ್ರಂಥಕಾರರು ಏಕೆ ಸಂಗ್ರಹಿಸಿಲ್ಲ? ಎಂದರೆ ಅದರಲ್ಲಿ ಅಸ್ವಾರಸ್ಯ ಇರುವುದರಿಂದಲೇ ಇಲ್ಲಿ ಸಂಗ್ರಹ ಮಾಡಿಲ್ಲವೆಂದು ತಿಳಿಯಬೇಕು. ಅವರ ಪಕ್ಷದಲ್ಲಿರುವ ಅಸ್ವಾರಸ್ಯವನ್ನು ಈ ಹಿಂದೆಯೇ ತೋರಿಸಲಾಗಿತ್ತು.

ಇಲ್ಲಿಗೆ ಅರ್ಥಾಪತ್ತಿಪಂಚಕಪ್ರಕರಣದಲ್ಲಿ ನ್ಯಾಯದೀಪದ ಅನುವಾದವು ಸಮಾಪ್ತವಾಯಿತು.

ಇಲ್ಲಿಯ ತನಕ ಐದು ಅನ್ಯಥಾನುಪಪತ್ತಿಗಳನ್ನು ಸಮರ್ಥಿಸಿದ್ದಾಯಿತು. ಅವು ಹೀಗಿವೆ -

(1) 'ದೃಷ್ಟಾನ್ವಯವ್ಯತಿರೇಕಾಭ್ಯಾಂ ಕಾರಣತ್ವಾನುಮಿತ್ಯನ್ಯಥಾನುಪಪತ್ತಿಃ' ದಂಡ ಇದ್ದರೆ ಘಟ ಹುಟ್ಟುತ್ತದೆ. ದಂಡ ಇಲ್ಲದಿದ್ದರೆ ಘಟ ಹುಟ್ಟುವುದಿಲ್ಲ ಎಂಬ ಅನ್ವಯವ್ಯತಿರೇಕಗಳಿಂದ ದಂಡಕ್ಕೆ ಕಾರಣತ್ವವು ಸಿದ್ಧವಾಗುತ್ತದೆ. ಅನುಮಾನ ಮಾಡಿದಾಗ ಅಲ್ಲಿರುವ ಕಾರಣತ್ವವನ್ನು ಪುನಃ ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವ ಎಂದು ಹೇಳಿದರೆ ಸಾಧ್ಯಾವೈಶಿಷ್ಟ್ಯದೋಷವು ಬರುತ್ತದೆ. ಆದ್ದರಿಂದ ಕಾರಣತ್ವವನ್ನು ಶಕ್ತಿರೂಪತ್ವವೆಂದೇ ಹೇಳಬೇಕು.

(2) 'ರಾಸಭಾದೇರಕಾರಣತ್ವಾನ್ಯಥಾನುಪಪತ್ತಿಃ' - ಒಂದು ವೇಳೆ ಅನನ್ಯಥಾಸಿದ್ಧನಿಯತ-ಪೂರ್ವವೃತ್ತಿತ್ವವನ್ನೇ ಕಾರಣತ್ವವೆಂದು ಹೇಳುವುದಾದರೆ ರಾಸಭದಲ್ಲಿಯೂ ಕೂಡ ಈ ಕಾರಣತ್ವ ಲಕ್ಷಣ ಬರುವುದರಿಂದ ರಾಸಭವೂ ಘಟಕ್ಕೆ ಕಾರಣವಾಗಲಿ. ಆದರೆ ಯಾರೂ ಕೂಡ ರಾಸಭವನ್ನು ಘಟಕ್ಕೆ ಕಾರಣವೆಂದು ಕರೆಯುವುದಿಲ್ಲ. ಇದನ್ನು ಕೂಡಿಸಬೇಕೆಂದರೆ, ಶಕ್ತಿ ಇಲ್ಲ ಎಂಬ ಕಾರಣವನ್ನೇ ಹೇಳಬೇಕು. ಹೀಗೆ ರಾಸಭಾದಿಗಳಿಗೆ ಅಕಾರಣತ್ವವನ್ನು ಕೂಡಿಸಬೇಕೆಂದರೆ ಶಕ್ತಿ ಎಂಬ ಪದಾರ್ಥವನ್ನು ಒಪ್ಪಲೇಬೇಕು.

(3) 'ಅಪೂರ್ವಾದಿಪ್ರತಿಬಂದಿಃ' - ದುರಿತ ಅಪೂರ್ವ, ಸುಕೃತ ಅಪೂರ್ವ ಎರಡೂ ಬೇಡ ಪ್ರಾಗಭಾವವಿಶಿಷ್ಟವಾದ ಆತ್ಮಧ್ವಂಸವೇ ಕಾರಣವೆಂದಾಗಬೇಕಾದೀತು. ಒಂದು ವೇಳೆ ಶ್ರುತಿಯಲ್ಲಿ ಕಾರ್ಯಕಾರಣಭಾವವು ಪ್ರಮಿತವಾಗಿರುವುದರಿಂದ ಅಪೂರ್ವವನ್ನು

ನೀವುಕಲ್ಪನೆ ಮಾಡುವುದಾದರೆ ಇಲ್ಲಿಯೂ ಕೂಡ ದಾಹಕ್ಕೆ ಕಾರಣತ್ವರೂಪವಾದ ಶಕ್ತಿಯನ್ನು ಒಪ್ಪಬೇಕಾಗುತ್ತದೆ. ಇದಕ್ಕೆ ಲಾಘವ ಎಂಬ ಯುಕ್ತಿಯೇ ಮುಖ್ಯಕಾರಣ.

(4) 'ಮಣ್ಯಾದೇಃ ಲೋಕಸಿದ್ಧಪ್ರತಿಬಂಧಕತ್ವಾನ್ಯಥಾನುಪಪತ್ತಿಃ' ಲೋಕದಲ್ಲಿ ಎಲ್ಲರೂ ಕೂಡ ಮಣ್ಯಾದಿಗಳನ್ನು ಪ್ರತಿಬಂಧಕ ಎಂದು ವ್ಯವಹರಿಸುತ್ತಾರೆ. ನಾಲ್ಕು ರೀತಿಯಲ್ಲಿ ನೀನು ಪ್ರತಿಬಂಧಕಾಭಾವಗಳನ್ನು ನಿರ್ವಚನ ಮಾಡುವುದಾದರೂ ಮಣ್ಯಾದಿಗಳಿಗೆ ಪ್ರತಿಬಂಧಕತ್ವಾದಿ ವ್ಯವಹಾರವನ್ನಂತೂ ನಾವು ಹೇಳುವಂತೆಯೇ ಕೂಡಿಸಬೇಕು. ಇದನ್ನು ಕೂಡಿಸಬೇಕೆಂದರೆ ಶಕ್ತಿಯನ್ನು ಒಪ್ಪಬೇಕು. ಆದ್ದರಿಂದ ಶಕ್ತಿಯನ್ನು ಒಪ್ಪದೇ ಮಣ್ಯಾದಿಗಳಿಗೆ ಲೋಕಸಿದ್ಧವಾದ ಪ್ರತಿಬಂಧಕತ್ವವನ್ನು ಕೂಡಿಸಲು ಸಾಧ್ಯವಾಗುವುದಿಲ್ಲ.

(5) 'ತ್ವದಭಿಮತಪ್ರತಿಬಂಧಕತ್ವಾನ್ಯಥಾನುಪಪತ್ತಿಃ' ನಿನಗೆ ಅಭಿಮತವಾದ ಕಾರಣೀಭೂತ ಅಭಾವಪ್ರತಿಯೋಗಿತ್ವ ಎಂಬ ಪ್ರತಿಬಂಧಕತ್ವವನ್ನು ಕೂಡಿಸಬೇಕೆಂದರೂ ಶಕ್ತಿಯನ್ನು ಒಪ್ಪಬೇಕು. ಏಕೆಂದರೆ ಮಣಿಯನ್ನು ಪ್ರತಿಬಂಧಕವೆಂದು ನಿನಗೆ ಸಮರ್ಥಿಸಲು ಸಾಧ್ಯವಾಗುವುದಿಲ್ಲ. ಅದು ಕಾರಣಾಭಾವರೂಪವೆಂದೇ ಹೇಳಬೇಕಾಗುತ್ತದೆ. ಶಕ್ತಿಯನ್ನು ಒಪ್ಪಿದಾಗ ಮಾತ್ರ ನಿನಗೆ ಅಭಿಮತವಾದ ಪ್ರತಿಬಂಧಕತ್ವವನ್ನು ಕೂಡಿಸಲು ಸಾಧ್ಯವಾಗುತ್ತದೆ.

ಹೀಗೆ ಐದು ಬಗೆಯ ಅನ್ಯಥಾನುಪಪತ್ತಿಗಳಿಂದ ಶಕ್ತಿ ಎಂಬ ಪದಾರ್ಥವು ಸಿದ್ಧವಾಗುತ್ತದೆ

ಇಲ್ಲಿಗೆ ಶಕ್ತಿವಿಷಯದಲ್ಲಿ ಅರ್ಥಾಪತ್ತಿಪಂಚಕ ಪ್ರಕರಣವು ಸಮಾಪ್ತವಾಯಿತು

॥ ಪ್ರಾಣಸ್ಥಶ್ರೀಲಕ್ಷ್ಮೀನರಸಿಂಹಾರ್ಪಣಮಸ್ತು ॥

# 60
# ಮುಖ್ಯಾಂಶಗಳನ್ನು ನೆನೆಪಿಡಿ

1. 'ಕಾರ್ಯಜನನಾನುಕೂಲಃ ಕಾರಣನಿಷ್ಠಃ ಧರ್ಮವಿಶೇಷಃ ಶಕ್ತಿಃ' ಶಕ್ತಿ ಎಂದರೆ ಕಾರ್ಯವು ಉಂಟಾಗುವುದಕ್ಕೆ ಅನುಕೂಲವಾದ ಕಾರಣಗಳಲ್ಲಿ ಇರಬಹುದಾದ ವಿಶೇಷವಾದ ಅದೃಷ್ಟಧರ್ಮ.
2. 'ಕಾರಣನಿಷ್ಠಕಾರ್ಯಜನನಾನುಕೂಲಶಕ್ತಿವಿಘಟಕತ್ವಂ ಪ್ರತಿಬಂಧಕತ್ವಮ್' ಪ್ರತಿಬಂಧಕತ್ವ ಎಂದರೆ ಕಾರಣದಲ್ಲಿ ಇರುವ ಕಾರ್ಯಜನನಕ್ಕೆ ಅನುಕೂಲವಾಗುವ ಶಕ್ತಿ ಏನಿದೆಯೋ ಅದನ್ನು ತಡೆಹಿಡಿಯುವಂತದ್ದು. ಅಥವಾ 'ಸತಿ ಪುಷ್ಕಲಕಾರಣೇ ಕಾರ್ಯಾನುತ್ಪಾದಪ್ರಯೋಜಕತ್ವಂ ಪ್ರತಿಬಂಧಕತ್ವಮ್'. ಪ್ರತಿಬಂಧಕತ್ವ ಎಂದರೆ ಎಲ್ಲಾ ಕಾರಣಗಳು ಇದ್ದಾಗಲೂ ಕಾರ್ಯವು ಉಂಟಾಗದೇ ಇರುವುದಕ್ಕೆ ಯಾವುದು ಪ್ರಯೋಜಕವಾಗುತ್ತದೋ ಅದೇ ಪ್ರತಿಬಂಧಕ.
3. ತಾರ್ಕಿಕರು ಶಕ್ತಿಯನ್ನು ಪ್ರತ್ಯೇಕ ಪದಾರ್ಥವೆಂದು ಒಪ್ಪುವುದಿಲ್ಲ. ಅಗ್ನಿಯಲ್ಲಿ ಸುಡುವ ಶಕ್ತಿಯು ಕೂಡ ಇರುವುದಿಲ್ಲ ಎನ್ನುವರು.
4. ಅಗ್ನಿಯಲ್ಲಿ ಸುಡುವ ಶಕ್ತಿಯು ಮಣ್ಯಭಾವದಿಂದ ಸಿದ್ಧವಾಗುತ್ತದೆ.

5. ಪ್ರತಿಬಂಧಕಾಭಾವವನ್ನೇ ಕಾರಣವೆನ್ನುವ ತಾರ್ಕಿಕರು ಸೋಲನ್ನೊಪ್ಪಿ ಕೂಟಘಟಿತ ಲಕ್ಷಣವನ್ನು ಮಾಡುತ್ತಾರೆ. ಪ್ರತಿಬಂಧಕ ಎಂದರೆ ಕಾರ್ಯ ಅನುತ್ಪತ್ತಿವ್ಯಾಪ್ಯ ಎಂದರ್ಥ. ಎಲ್ಲಿ ಪ್ರತಿಬಂಧಕವಿರುತ್ತದೋ ಅಲ್ಲಿ ಕಾರ್ಯದ ಅನುತ್ಪತ್ತಿ ಇರುತ್ತದೆಂದು ಇದರ ಅರ್ಥ.
6. ಮಂತ್ರವು ಧ್ವನ್ಯಾತ್ಮಕವಾದ ಶಬ್ದವಾಗಿರುವುದರಿಂದ ಏಕಕ್ಷಣಾವಸ್ಥಾಯಿ.
7. ಮಂತ್ರಪ್ರಯೋಗ ಮಾಡಿದಾಗ ಅನೇಕ ಗಂಟೆಗಳ ಕಾಲ ಅಗ್ನಿಯು ಸುಡುವುದಿಲ್ಲ. ಇದಕ್ಕೆ ಕಾರಣ ಮಂತ್ರವಲ್ಲ; ಮಂತ್ರವನ್ನು ಪ್ರಯೋಗಿಸಿದ ಪುರುಷನ ಅಭಿಪ್ರಾಯಕ್ಕೆ ವಿಷಯವಾದ ಕಾಲ.
8. ಕಾರಣತ್ವವೇ ಶಕ್ತಿ.
9. ತಾರ್ಕಿಕರು ಕಾರಣತ್ವವನ್ನು ಒಪ್ಪುತ್ತಾರೆ. ಅದನ್ನು ಶಕ್ತಿರೂಪವೆಂದು ಒಪ್ಪುವುದಿಲ್ಲ.
10. ಶಕ್ತಿ ಎಂದರೆ ಸ್ವರೂಪವಲ್ಲ. ಆಗಂತುಕ ಸಹಕಾರಿಯೂ ಅಲ್ಲ; ಪ್ರತಿಬಂಧಕಾಭಾವವಂತೂ ಅಲ್ಲವೇ ಅಲ್ಲ.
11. ಪರಮಾತ್ಮನಲ್ಲಿ ಮಾತ್ರವಲ್ಲ, ಜಡಪದಾರ್ಥಗಳಲ್ಲೂ ಕೂಡ ಅನಂತಶಕ್ತಿಗಳಿವೆ.
12. ಶಕ್ತಿ ಇಲ್ಲದ ಪದಾರ್ಥವೇ ಜಗತ್ತಿನಲ್ಲಿಲ್ಲ.
13. ಆಯಾ ಪದಾರ್ಥಗಳ ಯೋಗ್ಯತೆಗೆ ತಕ್ಕಂತೆ ಶಕ್ತಿಯಲ್ಲಿಯೂ ತಾರತಮ್ಯವಿದೆ.
14. ಅನುಮಾನದಲ್ಲಿ ಸಾಧ್ಯಾವಿಶಿಷ್ಟತಾ ಎಂಬ ದೋಷವು ಪರಿಹಾರಬೇಕೆಂದರೆ ಅತೀಂದ್ರಿಯವಾದ ಕಾರಣತಾ-ವಚ್ಛೇದಕವನ್ನು ಒಪ್ಪಲೇ ಬೇಕು. ಇದೇ ಶಕ್ತಿ.

15. ಯಾವುದು ಪ್ರಯೋಜಕವೋ ಅದರಲ್ಲಿ ಶಕ್ತಿ ಇರುತ್ತದೆ. ಯಾವುದು ಕಾರಣವೋ ಅಲ್ಲಿಯೂ ಶಕ್ತಿ ಇರುತ್ತದೆ. ಪ್ರಯೋಜಕ ಹಾಗೂ ಕಾರಣಗಳೇ ಶಕ್ತಿಯಲ್ಲ.

16. ಬೌದ್ಧರು ವ್ಯಾಪ್ತಿಯನ್ನು ತಾದಾತ್ಮ್ಯರೂಪ, ಕಾರಣತ್ವ-ರೂಪವೆನ್ನುತ್ತಾರೆ. ಪ್ರಮಾಣಪದ್ಧತಿಯಲ್ಲಿ ಇದನ್ನು ಖಂಡನೆ ಮಾಡಿದ್ದಾರೆ.

17. ನೈಯಾಯಿಕರು ಕಾರಣತಾವಚ್ಛೇದಕವೇ ಸ್ವರೂಪಯೋಗ್ಯತೆ ಎನ್ನುತ್ತಾರೆ. ನಾವು ಅದನ್ನೇ ಶಕ್ತಿ ಎನ್ನುತ್ತೇವೆ.

18. ನೈಯಾಯಿಕರು ಸಹಕಾರಿಸಮವಧಾನವನ್ನು ಫಲೋಪಧಾನ ಎನ್ನುತ್ತಾರೆ. ನಾವು ಕಾರ್ಯಜನನಾವಸ್ಥೆ ಎನ್ನುತ್ತೇವೆ.

19. ಅನ್ವಯವ್ಯತಿರೇಕಸಮಧಿಗಮ್ಯವಾದ ನಿತ್ಯಅತೀಂದ್ರಿಯವಾದ ಸ್ವರೂಪ- ಯೋಗ್ಯತಾರೂಪವಾದ ಪದಾರ್ಥವೇ ಶಕ್ತಿ.

20. ಜಲತ್ವಲಿಂಗದಿಂದ ಪಿಪಾಸೋಪಶಾಮಕತ್ವವನ್ನು ಅನುಮಾನ ಮಾಡಬೇಕು. ಇದರ ಅನ್ಯಥಾನುಪಪತ್ತಿಯಿಂದ ಶಕ್ತಿ ಎಂಬ ಪದಾರ್ಥವು ಸಿದ್ಧವಾಗುತ್ತದೆ.

21. ನೀರಿನಲ್ಲಿ ಬಾಯಾರಿಕೆಯನ್ನು ಪರಿಹರಿಸಲು ಅತೀಂದ್ರಿಯವಾದ ಒಂದು ಕಾರಣತ್ವವಿದೆ. ಅದೇ ಶಕ್ತಿ.

22. ಶಕ್ತಿಯ ವಿಷಯದಲ್ಲಿ ಮೊದಲನೆಯ ಅರ್ಥಾಪತ್ತಿಪ್ರಮಾಣ - ಕಾರಣತ್ವಸ್ಯ ಅನ್ವಯವ್ಯತಿರೇಕಗಮ್ಯತ್ವಾನ್ಯಥಾನುಪಪತ್ತಿಃ ಎಂಬುದು .

23. ಎರಡನೆಯ ಅರ್ಥಾಪತ್ತಿ - 'ಜಲಸ್ಯ ಪಿಪಾಸೋಪಶಮನ-ಕಾರಣತ್ವಾನುಮಾನಾನ್ಯಥಾನುಪಪತ್ತಿ'

24. ಮೂರನೆಯ ಅರ್ಥಾಪತ್ತಿ - ರಾಸಭಸ್ಯ ಅಕಾರಣತ್ವಾನ್ಯಥಾನುಪಪತ್ತಿ

25. ಭಾಟ್ಟರು 'ಜ್ಯೋತಿಷ್ಟೋಮೇನ ಸ್ವರ್ಗಂ ಭಾವಯೇತ್' ಎಂದು ಹೇಳುತ್ತಾರೆ. ಇಲ್ಲಿ ಭಾವನಾ ಎಂದರೆ ಪ್ರಯತ್ನ ಎಂದರ್ಥ.

26. ಪ್ರಾಭಾಕರರು 'ಜ್ಯೋತಿಷ್ಟೋಮೇನ ಸ್ವರ್ಗಸಾಧನಾಪೂರ್ವಂ ಸಾಧಯೇತ್' ಎನ್ನುತ್ತಾರೆ. ಇಲ್ಲಿರುವ ಭಾವನಾ ಎಂದರೆ ಅಪೂರ್ವ.

27. ನೈಯಾಯಿಕರು 'ಜ್ಯೋತಿಷ್ಟೋಮಯಾಗಃ ಸ್ವರ್ಗಸಾಧನಂ' ಎನ್ನುತ್ತಾರೆ. ಆದರೆ ಕೃತಿಸಾಧ್ಯತ್ವ, ಬಲವದನಿಷ್ಟಾನನುಬಂಧಿತ್ವ ಮೊದಲಾದವುಗಳನ್ನು ಕೂಡ ಲಿಙರ್ಥ ಎನ್ನುತ್ತಾರೆ.

28. 'ತತ್ವವಾದಿಗಳಾದ ನಾವು ಜ್ಯೋತಿಷ್ಟೋಮಯಾಗಃ ಸ್ವರ್ಗಸಾಧನಂ' ಎಂದಷ್ಟೇ ಹೇಳುತ್ತೇವೆ. ಆದರೆ ಕೃತಿಸಾಧ್ಯತ್ವಾದಿಗಳನ್ನು ಹೇಳುವುದಿಲ್ಲ.

29. ಕಾರಣತ್ವವು ಶಕ್ತಿ ಹೊರತು ಕಾರಣವು ಶಕ್ತಿಯಲ್ಲ

30. ಕಾರಣವಾದದ್ದನ್ನು ಅನುಕೂಲವೆನ್ನಬಹುದು; ಅನುಕೂಲ-ವಾದದ್ದನ್ನೆಲ್ಲ ಕಾರಣವೆಂದು ಹೇಳಲಾಗದು.

31. ಅನುಕೂಲತ್ವವು ಕಾರಣದಲ್ಲಿಯೂ ಇದೆ, ಕಾರಣತ್ವರೂಪವಾದ ಶಕ್ತಿಯಲ್ಲಿಯೂ ಇದೆ.

32. ಕಾರಣವು ಶಕ್ತಿಗೆ ಆಶ್ರಯವಾಗಿರುತ್ತದೆ. ಶಕ್ತಿಯು ಕಾರಣತ್ವರೂಪವಾಗಿರುತ್ತದೆ.

33. ಕಾರ್ಯಪ್ರಾಗಭಾವವ್ಯಾಪ್ಯಪ್ರಾಗಭಾವಪ್ರತಿಯೋಗಿಯಾದದ್ದು ಅನುಕೂಲ ಎಂದು ಕರೆಸಿಕೊಳ್ಳುತ್ತದೆ.

34. ಪ್ರಯೋಜಕ,ಅನುಕೂಲ ಇವೆರಡು ಪರ್ಯಾಯಶಬ್ದಗಳು. ಆದರೆ ಉತ್ತೇಜಕವೇ ಬೇರೆ; ಅನುಕೂಲವೇ ಬೇರೆ.

35. ಪ್ರತಿಬಂಧಕತ್ವ ಎಂದರೆ ಕಾರಣನಿಷ್ಠಕಾರ್ಯಾನುಕೂಲ-ಶಕ್ತಿವಿಘಟಕತ್ವ.

36. ಸಂಧ್ಯಾವಂದನೆಯನ್ನು ಮಾಡದಿರುವಿಕೆಯಿಂದ ದುರಿತಾಪೂರ್ವ ಹುಟ್ಟುತ್ತದೆ. ಯಾಗಾದಿಗಳನ್ನು ಮಾಡುವಿಕೆಯಿಂದ ಸುಕೃತಾಪೂರ್ವ ಹುಟ್ಟುತ್ತದೆ.

37. ಸಂಧ್ಯಾವಂದನಲೋಪೇ ತು ದಿನಮೇಕಮಭೋಜನಮ್' 'ಒಂದು ಬಾರಿ ಸಂಧ್ಯಾವಂದನೆಯು ಲೋಪವಾದರೆ ಒಂದು ದಿವಸ ಉಪವಾಸ ಮಾಡಬೇಕು' ಎಂಬುದಾಗಿ ಧರ್ಮಶಾಸ್ತ್ರವು ಪ್ರಾಯಶ್ಚಿತ್ತವನ್ನು ಹೇಳುತ್ತದೆ. ಈ ಪ್ರಾಯಶ್ಚಿತ್ತದಿಂದ ದುರಿತಾಪೂರ್ವವು ನಿವರ್ತ್ಯವಾಗುತ್ತದೆ.

38. ದಾಹಕ್ಕೆ ಉತ್ತೇಜಕಾಭಾವವಿಶಿಷ್ಟಮಣ್ಯಭಾವ ಹಾಗೂ ಕರತಲಾನಲಸಂಯೋಗ ಎಂಬೆರಡು ಕಾರಣಗಳಿವೆ.

39. ಸ್ವರ್ಗಕ್ಕೆ ಮಾತ್ರ ಅಪೂರ್ವವೊಂದೇ ಕಾರಣವಾಗಿದೆ.

40. ಚಿರಧ್ವಸ್ತವಾದ ಯಾಗವು ಸ್ವರ್ಗಕ್ಕೆ ಸಾಧನವೆಂದು ಯಾರೂ ಕೂಡ ಒಪ್ಪಿರುವುದಿಲ್ಲ.

41. ಭಾವರೂಪವಾದ ಶಕ್ತಿಯು ದಾಹಕ್ಕೆ ಕಾರಣವಲ್ಲವೆಂದರೆ ಸ್ವರ್ಗಕ್ಕೆ ಭಾವರೂಪವಾದ ಅಪೂರ್ವವೂ ಕೂಡ ಕಾರಣವಾಗುವುದು ಬೇಡ.

42. ದಾಹಕ್ಕೆ ಉತ್ತಂಭಕಾಭಾವವಿಶಿಷ್ಟಪ್ರತಿಬಂಧಕಾಭಾವವೇ ಕಾರಣ ಎಂದಾದರೆ ಸ್ವರ್ಗಕ್ಕೂ ಕೂಡ ಸಾಂಗಯಾಗಪ್ರಾಗಭಾವವಿಶಿಷ್ಟ ಆತ್ಮಾಭಾವವೇ ಕಾರಣವಾಗಬೇಕಾದೀತು.

43. ಸ್ಮರಣೆಗೆ ಅನುಭವವೆಂಬ ಭಾವಪದಾರ್ಥವು ಕಾರಣವಾಗುವುದು ಬೇಡ. ತದನುಭವಪ್ರಾಗಭಾವವಿಶಿಷ್ಟವಾದ ಆತ್ಮಧ್ವಂಸವೇ ಕಾರಣವಾಗಬೇಕಾದೀತು.

44. ಸ್ವರ್ಗ ಹಾಗೂ ಸ್ಮರಣೆಗೆ ಅಪೂರ್ವ ಹಾಗೂ ಸಂಸ್ಕಾರಗಳನ್ನೇ ಕಾರಣವೆಂದು ಹೇಳುವುದರಲ್ಲಿ ಲಾಘವವಿದೆಯೆಂದು ತಾರ್ಕಿಕರು ಉತ್ತರಿಸಿದರೆ, ದಾಹಕ್ಕೂ ಕೂಡ ಶಕ್ತಿಯನ್ನು ಕಾರಣವೆಂದು ಒಪ್ಪುವುದರಿಂದ ಲಾಘವವಿದೆಯೆಂದು ನಾವು ಉತ್ತರಿಸುತ್ತೇವೆ.

45. ಅತೀಂದ್ರಿಯವಾದ ಶಕ್ತಿಗೆ ನಾಶವಿಲ್ಲ. ಕುಂಠೀಭಾವವಿದೆ.

46. ಪ್ರತ್ಯಕ್ಷಸಾಮಗ್ರಿ, ಅನುಮಿತಿಸಾಮಗ್ರಿಗಳು ಒಂದೇ ವಿಷಯದಲ್ಲಿರುವಾಗ ಅನುಮಿತಿ ಬರುವುದಿಲ್ಲ. ಪ್ರತ್ಯಕ್ಷವೇ ಬರುತ್ತದೆ.

47. ಸುಕೃತಾಪೂರ್ವವಿದ್ದರೂ ಅನುಭವಿಸಲು ಸಾಧ್ಯವಾಗುವುದಿಲ್ಲ. ಅದಕ್ಕೆ ದೇವರ ಅನುಗ್ರಹವೇ ಬೇಕು.

48. ಶಕ್ತಿಯ ಅವಸ್ಥಾವಿಶೇಷವೇ ಕುಂಠೀಭಾವ.

49. ಪ್ರತಿಬಂಧಕ ಎಂದರೆ ಕಾರ್ಯಾನುಕೂಲಕಿಂಚಿದ್ಧರ್ಮವಿಘಟಕತ್ವ ಎಂದರ್ಥ. ಇಲ್ಲಿರುವ ಕಿಂಚಿದ್ಧರ್ಮವು ಶಕ್ತಿಯೇ ಆಗಬೇಕು.

50. ವಾಸ್ತವಿಕವಾಗಿ ಮಣಿಯು ಪ್ರತಿಬಂಧರೂಪವಾಗುತ್ತದೆ ಹೊರತು ಪ್ರತಿಬಂಧಕವಲ್ಲ.

51. ರಥವು ಹೋಗುತ್ತದೆ ಇತ್ಯಾದಿ ಪ್ರಯೋಗದಂತೆ ಮಣಿಯು ಪ್ರತಿಬಂಧಕವಾಗುತ್ತದೆಂದು ಇಲ್ಲಿ ಪ್ರಯೋಗಿಸಲಾಗಿದೆ.

52. ಜಡದಲ್ಲಿ ಕ್ರಿಯಾಶ್ರಯತ್ವರೂಪವಾದ ಕರ್ತೃತ್ವವನ್ನು ವಿವಕ್ಷಿಸಬೇಕು. ಜ್ಞಾನೇಚ್ಛಾಕೃತಿಮತ್ವಂ ಎಂಬ ಕರ್ತೃತ್ವವನ್ನು ವಿವಕ್ಷಿಸಬಾರದು.

53. ದಾಹಕ್ಕೆ ಮಣ್ಯಭಾವವು ಕಾರಣವೆಂದು ತಾರ್ಕಿಕನು ಹೇಳುವುದಾದರೆ ಮಣಿಯನ್ನು ಕಾರಣಾಭಾವವೆಂದು ಹೇಳಬೇಕಾಗುತ್ತದೆ.
54. ಈ ಆಕ್ಷೇಪವನ್ನು ಸತ್ಯನಾಥತೀರ್ಥರು ಅಭಿನವತಾಂಡವದಲ್ಲಿ ಪ್ರಾರಂಭದಲ್ಲಿಯೇ ಹೇಳಿದ್ದಾರೆ.
55. ಯುಕ್ತಿಮಲ್ಲಿಕಾದ ಗುಣಸೌರಭದಲ್ಲಿಯೂ ರಾಜರು ಬಲು ಸುಂದರವಾಗಿ ತಾರ್ಕಿಕರಿಗೆ ಈ ದೋಷವನ್ನು ಹೇಳಿದ್ದಾರೆ.
56. ಕಾರಣಾಭಾವವು ಪ್ರತಿಬಂಧಕವೆನ್ನುವುದಾದರೆ ದಂಡಾಭಾವವು ಕೂಡ ಪ್ರತಿಬಂಧಕವಾಗಬೇಕಾದೀತು.
57. ಪರಮಾತ್ಮನೊಬ್ಬನೇ ಅನಂತಶಕ್ತಿಯುಳ್ಳವನು. ಉಳಿದದ್ದೆಲ್ಲವೂ ಅಲ್ಪಶಕ್ತಿವುಳ್ಳವುಗಳು.
58. 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಇತ್ಯಾದಿ ಶ್ರುತಿಯಿಂದ, 'ತತ್ರ ತತ್ರ ಸ್ಥಿತೋ ವಿಷ್ಣುಂ ತತ್ತಚ್ಛಕ್ತಿಃ ಪ್ರಬೋಧಕಃ' ಎಂಬ ಇತ್ಯಾದಿ ಸ್ಮೃತಿಗಳಿಂದ ಅತೀಂದ್ರಿಯವಾದ ಶಕ್ತಿಯು ಸಿದ್ಧವಾಗುತ್ತದೆ.
59. ಅಭಿವ್ಯಕ್ತವಾದ ಶಕ್ತಿಯೇ ಕಾರ್ಯಜನಕ. ಶಕ್ತಿಯು ಅನಭಿವ್ಯಕ್ತವಾದಾಗ ಶಕ್ತಿಯನ್ನು ಇಲ್ಲವೆಂದು ಅಪಲಾಪ ಮಾಡಬಾರದು.
60. ತೃಣದಿಂದ ಆರಂಭಿಸಿ ಬ್ರಹ್ಮದೇವರ ಪರ್ಯಂತ ತರತಮಭಾವದಿಂದ ಶಕ್ತಿಯು ಇರುತ್ತದೆ. ಸರ್ವಶ್ರೇಷ್ಠನಾದ ಪರಮಾತ್ಮನಲ್ಲಿ ಸ್ವತಂತ್ರವಾದ ಅಪರಿಮಿತವಾದ ಅನಂತಶಕ್ತಿಯಿದೆ. ಹೀಗೆ ಪರಮಾತ್ಮನನ್ನು ಅನಂತಶಕ್ತಿಯುಳ್ಳವರೆಂದು ಉಪಾಸನೆಗೈದು ಧನ್ಯರಾಗೋಣ.

॥ ಶ್ರೀಮಧ್ವೇಶಾರ್ಪಣಮಸ್ತು ॥

# ಪೂರ್ವಪಕ್ಷತಾಂಡವ

## ಪ್ರಕರಣಗಳು

೧. ಉದಯನಾಚಾರ್ಯಪ್ರಣೀತ-ನ್ಯಾಯಕುಸುಮಾಂಜಲಿ

೨. ಭಾಸ್ಕರಾಚಾರ್ಯಪ್ರಣೀತ-ನ್ಯಾಯಲೀಲಾವತಿ

೩. ವರ್ಧಮಾನ ಉಪಾಧ್ಯಾಯ ವಿರಚಿತ - ನ್ಯಾಯಲೀಲಾವತಿ ಪ್ರಕಾಶ

೩. ಗಂಗೇಶೋಪಾಧ್ಯಾಯಪ್ರಣೀತ-ತತ್ವಚಿಂತಾಮಣಿ

೪. ರುಚಿದತ್ತಪ್ರಣೀತ-ಪ್ರಕಾಶ

*****

ಅನುವಾದ

ವಿದ್ವಾನ್. ಪಿ.ಎಸ್. ಶೇಷಗಿರಿ ಆಚಾರ್ಯರು

ಮೈಸೂರು.

## ಉದನಾಚಾರ್ಯ ವಿರಚಿತ

# ನ್ಯಾಯಕುಸುಮಾಂಜಲಿ

## ಶಕ್ತಿವಾದ

### ವಿಜಾತೀಯವಾದ ಕಾರಣಗಳಿಂದ ಏಕಜಾತೀಯಕಾರ್ಯಕಾರಣಶಕ್ತಿಯು ಸ್ವೀಕಾರಾರ್ಹವಲ್ಲ

**कथं तर्हि तृणारणिमणिभ्यो भवन्नाशुशुक्षणिकरेकजातीयः? एक शक्तिमत्त्वादिति चेन्न । यदि हि विजातीयेष्वप्येकजातीय-कार्यकारणशक्तिः समवेयात्, न कार्यात्कारणविशेषः क्वाप्यनुमीयेत । कारणव्यावृत्त्या च न तज्जातीयस्यैव कार्यस्य व्यावृत्तिरवसीयेत। तदभावेऽपि तज्जातीयशक्तिमतोऽन्यस्मादपि तदुत्पत्तिसम्भवात्। यावद्दर्शनं व्यवस्था भविष्यतीति चेन्न । निमित्तस्यादर्शनात् । दृष्टस्य चानिमित्तत्वात् ।**

ವಿಜಾತೀಯ ಕಾರಣಗಳಿಂದ ಏಕಜಾತೀಯ ಕಾರ್ಯವು ಉಂಟಾಗದಿದ್ದರೆ, ತೃಣಾರಣಿಮಣಿಗಳಿಂದ ಉಂಟಾಗುವ ಕಾರ್ಯಗಳು ಹೇಗೆ ಏಕಜಾತೀಯವಾಗಿರುತ್ತದೆ? ತೃಣಾರಣಿಮಣಿಗಳಲ್ಲಿ ಒಂದೇ ವಿಧವಾದ ಶಕ್ತಿ ಇರುವ ಕಾರಣದಿಂದ ಎಂಬ ಉತ್ತರವು ಸರಿಯಲ್ಲ. ವಿಜಾತೀಯವಾದ ವಸ್ತುಗಳಲ್ಲಿಯೂ ಏಕಜಾತೀಯವಾದ ಕಾರ್ಯಕರಣಶಕ್ತಿ ಇರುವುದಾದರೆ ಕಾರ್ಯದಿಂದ ಕಾರಣವಿಶೇಷವನ್ನು ಅನುಮಾನ ಮಾಡಲು ಎಂದೂ ಸಾಧ್ಯವಿಲ್ಲ. ಮತ್ತು ಒಂದು

ಕಾರಣವು ನಿವೃತ್ತವಾದರೆ ತಜ್ಜಾತೀಯವಾದ ಕಾರ್ಯದ ನಿವೃತ್ತಿಯನ್ನೂ ನಿರ್ಧಾರ ಮಾಡಲು ಸಾಧ್ಯವಿಲ್ಲ. ಏಕೆಂದರೆ ಆ ಕಾರಣವಿಲ್ಲದಿದ್ದರೂ ತಜ್ಜಾತೀಯ ಶಕ್ತಿಯುಳ್ಳ ಇನ್ನೊಂದು ಕಾರಣದಿಂದ ಆ ಕಾರ್ಯವು ಉಂಟಾಗುವ ಸಾಧ್ಯತೆ ಇದೆ.

ಅನುಭವಕ್ಕೆ ಅನುಗುಣವಾಗಿ ಕಾರ್ಯಕಾರಣಭಾವವನ್ನು ವ್ಯವಸ್ಥೆ ಮಾಡುತ್ತೇವೆ ಎಂದು ಹೇಳುವುದೂ ಸರಿಯಲ್ಲ. ಏಕೆಂದರೆ ದೃಷ್ಟವಾದ ತೃಣಾದಿಗಳು ನಿಮಿತ್ತವಲ್ಲ. ತೃಣವಿಲ್ಲದಿದ್ದರೂ ಮಣಿಯಿಂದ ವಹ್ನಿ ಉಂಟಾಗುತ್ತದೆ. ಮತ್ತು ಬೇರೆ ಅನುಗತವಾದ ನಿಮಿತ್ತದ ದರ್ಶನವಿಲ್ಲ.

## ತೃಣಾರಣಿಮಣಿಗಳಲ್ಲಿ ಅತೀಂದ್ರಿಯಜಾತಿ ಇಲ್ಲ

**एतेन सूक्ष्मजातीयादति निरस्तम्, अवह्नेरपि तत्सौक्ष्म्यात् धूमोत्पत्त्यापत्तेः ।**

ಹೀಗೆ ಹೇಳಿದುದರಿಂದಲೇ ತೃಣಾರಣಿಮಣಿಗಳಲ್ಲಿ ಅತೀಂದ್ರಿಯವಾದ ಒಂದು ಜಾತಿಯನ್ನು ಒಪ್ಪಿ ಅದರಿಂದ ವಹ್ನಿರೂಪವಾದ ಕಾರ್ಯವನ್ನು ವ್ಯವಸ್ಥೆ ಮಾಡುತ್ತೇವೆ ಎಂಬುದೂ ನಿರಸ್ತವಾಗುತ್ತದೆ. ಅಂತಹ ಜಾತಿಯು ಅತೀಂದ್ರಿಯವಾಗುವುದಾದರೆ ಅದು ತೃಣಾರಣಿಮಣಿಗಳಲ್ಲಿಯೇ ಇರುತ್ತದೆಂದು ನಿಯಮನ ಮಾಡಲು ಸಾಧ್ಯವಿಲ್ಲ. ಅದು ಬೇರೆ ಕಡೆಯಲ್ಲಿಯೂ ಇರಬಹುದು. ಅಲ್ಲದೇ, ವಹ್ನಿಯು ಧೂಮಕ್ಕೆ ಕಾರಣವೆಂದು ಸಿದ್ಧವಾಗಿದೆ. ವಹ್ನಿಯಲ್ಲಿ ಒಂದು ಅತೀಂದ್ರಿಯವಾದ ಜಾತಿಯನ್ನು ಒಪ್ಪಿ ಧೂಮರೂಪಕಾರ್ಯವನ್ನು ಕೂಡಿಸುವುದಾದರೆ ಆ ಅತೀಂದ್ರಿಯ ಜಾತಿಯು ವಹ್ನಿ ಭಿನ್ನದಲ್ಲಿಯೂ ಇರಬಹುದಾದ್ದರಿಂದ ವಹ್ನಿಭಿನ್ನದಿಂದಲೂ ಧೂಮದ ಉತ್ಪತ್ತಿಯಾಗಲಿ ಎಂಬ ಆಪತ್ತಿಯು ಬರುತ್ತದೆ.

## ಕಾರ್ಯಜಾತಿಭೇದಾಭೇದಗಳು ಸಮವಾಯಿಭೇದಾಭೇದಗಳಿಗೆ ಮಾತ್ರ ಅಧೀನವಲ್ಲ

**कार्यजातिभेदाभेदयोः समवायिभेदाभेदावेव तन्त्रम्, न निमित्तासमवायिनी इति चेन्न; तयोरकारणत्वप्रसङ्गात् ।**

ತೃಣಾದಿಗಳಲ್ಲಿ ಒಂದೇ ಜಾತಿಯಿಲ್ಲದಿದ್ದರೂ ತೊಂದರೆಯಿಲ್ಲ. ಏಕೆಂದರೆ ಅವು ಅಗ್ನಿಯನ್ನು ಕುರಿತು ನಿಮಿತ್ತಕಾರಣ. ಸಮವಾಯಿ ಕಾರಣದಲ್ಲಿರುವ ಸಾಜಾತ್ಯ ವೈಜಾತ್ಯವೇ ಕಾರ್ಯದಲ್ಲಿರುವ ಸಾಜಾತ್ಯ ವೈಜಾತ್ಯಗಳನ್ನು ಕುರಿತು ಪ್ರಯೋಜಕವಾದವುಗಳು ಹೊರತು ನಿಮಿತ್ತಕಾರಣ ಮತ್ತು ಅಸಮವಾಯಿ ಕಾರಣಗಳ ಸಾಜಾತ್ಯ ವೈಜಾತ್ಯಗಳು ಪ್ರಯೋಜಕವಲ್ಲ ಎಂಬ ಶಂಕೆಯೂ ಸರಿಯಲ್ಲ. ಏಕೆಂದರೆ ಹಾಗಿದ್ದ ಪಕ್ಷದಲ್ಲಿ ತತ್ತತ್ಕಾರಣ ಅಜನ್ಯವ್ಯಕ್ತಿಗಳಲ್ಲಿಯೂ ಸಹ ಕಾರ್ಯತಾವಚ್ಛೇದಕವಿರುವುದರಿಂದ ತೃಣಾದಿಗಳಿಗೆ ಕಾರಣತ್ವವೇ ಸಿದ್ಧವಾಗುವುದಿಲ್ಲ.

ಇದು ಒಂದು ಜಾತಿಯನ್ನು ಕಲ್ಪನೆ ಮಾಡುವವರ ಅಭಿಪ್ರಾಯ. 'ಲೋಕದಲ್ಲಿ ಶಕ್ತಿಯು ಪ್ರತಿಬಂಧಕದಿಂದ ವಿನಾಶ್ಯವೆಂದೂ, ಆಶ್ರಯನಾಶದಿಂದ ನಾಶವನ್ನು ಹೊಂದುವುದೆಂದೂ, ಪ್ರತಿವ್ಯಕ್ತಿ ಭಿನ್ನವಾಗಿದೆ ಎಂದೂ ಮತ್ತು ಅನಂತವೆಂದೂ ಸಿದ್ಧವಾಗಿದೆ. ಆದ್ದರಿಂದ ಶಕ್ತಿಯಲ್ಲಿ ಏಕತ್ವವಿದೆ ಎಂದರೆ ಏಕಜಾತೀಯತ್ವವಿದೆ ಎಂದೇ ಪರ್ಯವಸಾನವಾಗುತ್ತದೆ. ಹೀಗೆ ಅನಂತಶಕ್ತಿಗಳನ್ನು ಮತ್ತು ಆ ಶಕ್ತಿಗಳಲ್ಲಿರುವ ಜಾತಿವಿಶೇಷಗಳನ್ನು ಕಲ್ಪನೆಮಾಡುವುದಕ್ಕಿಂತ ತೃಣಾದಿಗಳಲ್ಲಿಯೇ ಶಕ್ತಿಯನ್ನು ಕಲ್ಪನೆ ಮಾಡುವುದನ್ನು ಬಿಟ್ಟು ಅದರ ಸ್ಥಾನದಲ್ಲಿ ನಿತ್ಯವಾದ ಒಂದು ಜಾತಿಯನ್ನು ಕಲ್ಪನೆ ಮಾಡುವುದು ಒಳ್ಳೆಯದು. ಆ ಜಾತಿಯು ಅತೀಂದ್ರಿಯವಾದುದರಿಂದ ಶಕ್ತಿಯಂತೆ ಅದು ಅಪ್ರತ್ಯಕ್ಷವಾಗುತ್ತದೆ' ಎಂದು. ಹೀಗೆ ಜಾತಿಯನ್ನು ಕಲ್ಪನೆ ಮಾಡುವ ಪಕ್ಷದಲ್ಲಿ ಲಾಘವವಿದ್ದರೂ ಅದನ್ನು ಅತೀಂದ್ರಿಯವೆಂದು ಕಲ್ಪನೆ ಮಾಡಿದರೆ ಅದು ತೃಣಾದಿಗಳಲ್ಲಿ ಮಾತ್ರ ಇದೆ ಎಂದು ಹೇಳುವುದಕ್ಕೆ ಯಾವ ಪ್ರಮಾಣವೂ ಇಲ್ಲದಿರುವುದರಿಂದ ಆ ಜಾತಿಯಿರುವ ಇನ್ನೊಂದು ಪದಾರ್ಥದಿಂದಲೂ ಅಗ್ನಿಯ ಉತ್ಪತ್ತಿಯಾಗಲಿ ಎಂಬ ಪ್ರಸಂಗವು ಬಂದು ಮೊದಲು ಹೇಳಿದ ಎರಡು ಅನುಮಾನಾಭಾವ ಪ್ರಸಂಗ ರೂಪವಾದ ದೋಷವು ಇದ್ದೇ ಇದೆ. ಆದ್ದರಿಂದ ದೃಷ್ಟವಾದ ಕಾರಣತಾವಚ್ಛೇದಕವನ್ನು ತ್ಯಾಗಮಾಡುವುದಾದರೆ ಧೂಮಜನಕತಾವಚ್ಛೇದಕವಾದ ಅಗ್ನಿತ್ವಕ್ಕೂ ಕಾರಣತಾವಚ್ಛೇದಕತ್ವವನ್ನು ತ್ಯಾಗಮಾಡಿ ಅಗ್ನಿಯಲ್ಲಿ ಒಂದು ಅತೀಂದ್ರಿಯ ಜಾತಿಯನ್ನು ಜನಕತಾವಚ್ಛೇದಕವೆಂದು ಒಪ್ಪಿದರೆ ಅಗ್ನಿಭಿನ್ನವಾದುದರಿಂದಲೂ ಧೂಮೋತ್ಪತ್ತಿಯಾಗಲಿ ಎಂಬ ಆಪತ್ತಿಯು ಇದ್ದೇ ಇದೆ.

## ಕಾರ್ಯವೈಜಾತ್ಯಕ್ಕೆ ಸಾಮಗ್ರಿಯೇ ಪ್ರಯೋಜಕ

**न हि सति भावमात्रं तत् । किन्तु सत्येव भावः ।न च जातिनियमे समवायिकारणमात्रं निबन्धनम्, अपि तु सामग्री। अन्यथा द्रव्यगुणकर्मणामेकोपादानकत्वे विजातीयत्वं न स्यात् । न च कार्यद्रव्यस्यैषा रीतिरिति युक्तम् । आरब्धदुग्धैरेवावयवैर्दध्यारम्भदर्शनात् ।**

ಕಾರಣವಿದ್ದರೆ ಕಾರ್ಯವು ಉಂಟಾಗುತ್ತದೆ ಎಂಬ ಅನ್ವಯವು ಮಾತ್ರ ಕಾರಣತ್ವಕ್ಕೆ ಪ್ರಯೋಜಕವಾದುದಲ್ಲ. ಆದರೆ ಕಾರಣವು ಇದ್ದರೆ ಮಾತ್ರ ಕಾರ್ಯವು ಉಂಟಾಗುತ್ತದೆ ಎಂಬ ಏವಕಾರ ಸಿದ್ಧವಾದ ವ್ಯತಿರೇಕಾಂಶವು ಸಹ ಕಾರಣತ್ವವನ್ನು ಕುರಿತು ಪ್ರಯೋಜಕವಾದುದು. ಪ್ರಕೃತದಲ್ಲಿ ತೃಣವಿಲ್ಲದಿದ್ದರೂ ಅಗ್ನಿ ಉಂಟಾಗುವುದರಿಂದ ತೃಣಕ್ಕೆ ಕಾರಣತ್ವವೇ ಕೂಡಲಾರದು ಮತ್ತು ಕಾರ್ಯವೈಜಾತ್ಯವನ್ನು ಕುರಿತು ಸಮವಾಯಿವೈಜಾತ್ಯ ಒಂದೇ ಪ್ರಯೋಜಕವಲ್ಲ. ಸಕಲ ಕಾರಣ ಸಮಾವೇಶ ರೂಪವಾದ ಸಾಮಗ್ರಿಯೇ ಪ್ರಯೋಜಕವಾದುದು. ಇಲ್ಲದಿದ್ದರೆ ದ್ರವ್ಯಗುಣಕರ್ಮ ಈ ಮೂರಕ್ಕೂ ದ್ರವ್ಯ ಒಂದೇ ಸಮವಾಯಿಕಾರಣವಾಗಿರುವುದರಿಂದ ಸಮವಾಯಿ ಕಾರಣದ ವೈಜಾತ್ಯವಿಲ್ಲದಿರುವುದರಿಂದ ದ್ರವ್ಯಗುಣಕರ್ಮಗಳಿಗೆ ವೈಜಾತ್ಯವೇ ಸಿದ್ಧವಾಗಲಾರದು. ಇನ್ನು ಕಾರ್ಯವೈಜಾತ್ಯವೆಲ್ಲ ಸಮವಾಯಿಕಾರಣ ಅಧೀನವಲ್ಲ. ಆದರೆ ಕಾರ್ಯವಾದ ದ್ರವ್ಯದ ವೈಜಾತ್ಯವು ಮಾತ್ರ ಸಮವಾಯಿಕಾರಣ ಅಧೀನವಾದುದು ಎಂಬ ಶಂಕೆಯೂ ಸರಿಯಲ್ಲ.

ಕ್ಷೀರಾರಂಭಕ ಪರಮಾಣುಗಳಿಂದಲೇ ದಧಿ ದ್ರವ್ಯವು ಆರಂಭವಾಗುತ್ತದೆ.ಅಲ್ಲಿ ಸಮವಾಯಿ ಕಾರಣ ಭೇದವಿಲ್ಲ. ಆದರೆ ಕಾರ್ಯದಲ್ಲಿ ವೈಜಾತ್ಯವಿದೆ. ಆದ್ದರಿಂದ ಕಾರ್ಯವೈಜಾತ್ಯವನ್ನು ಕುರಿತು ಸಾಮಗ್ರಿಯೇ ಪ್ರಯೋಜಕವೆಂದು ಹೇಳಬೇಕು. ಹೊರತಾಗಿ ಸಮವಾಯಿ ಕಾರಣ ಅಸಮವಾಯಿ ಕಾರಣ, ನಿಮಿತ್ತಕಾರಣ ಒಂದೊಂದನ್ನೇ ಪ್ರಯೋಜಕವೆಂದು ಹೇಳಬಾರದು.

## ಅಪೋಹವಾದ ನಿರಾಸ ಮತ್ತು ವ್ಯಕ್ತಿಯ ಅಪೇಕ್ಷೆಯಿಂದಲೇ ಕಾರ್ಯಕಾರಣಭಾವ ಎಂಬ ಶಂಕಾ

**एतेन अपोहवादे नियमो निरस्तः; 'कार्यकारणभावाद्वा' इत्यादिविप्लवप्रसङ्गात् । तस्मान्नियतजातीयतास्वभावभङ्गेन व्यक्त्यपेक्षयैव नियम इति –**

ಇದರಿಂದ ಬೌದ್ಧರಿಗೆ ಸಮ್ಮತವಾದ ಅಪೋಹವಾದವು ನಿರಸ್ತವಾಯಿತು. 'ಅಪೋಹವೆಂದರೆ ಅತದ್ವ್ಯಾವೃತ್ತಿ. ಘಟದ ಅಪೋಹವೆಂದರೆ ಅಘಟವ್ಯಾವೃತ್ತಿ. ಹೀಗೆ ಸರ್ವಸಮ್ಮತವಾದ ಅಪೋಹದಿಂದಲೇ ವ್ಯವಹಾರವನ್ನು ನಿರ್ವಾಹಮಾಡಲು ಬರುವಾಗ ಜಾತಿಯನ್ನು ಕಲ್ಪನೆಮಾಡಬೇಕಾದುದಿಲ್ಲ. ವಹ್ನಿತ್ವರೂಪಜಾತಿ ಇಲ್ಲದಿರುವುದರಿಂದ ಧೂಮವನ್ನು ಕುರಿತು ವಹ್ನಿಗೆ ಅವಹ್ನಿವ್ಯಾವೃತ್ತಿರೂಪದಿಂದ ಎಂದರೆ ವಹ್ನಿ ಭಿನ್ನಭಿನ್ನತ್ವರೂಪದಿಂದ ಕಾರಣತ್ವವಿದೆ' ಎಂದು ಬೌದ್ಧರು ಹೇಳುತ್ತಾರೆ. ಅವರು ವಹ್ನಿತ್ವರೂಪದಿಂದ ಎಲ್ಲ ವಹ್ನಿಗಳನ್ನೂ ಸಂಗ್ರಹಿಸಲು ಸಾಧ್ಯವಿಲ್ಲವಾದ್ದರಿಂದ ಎಷ್ಟು ಸ್ಥಳಗಳಲ್ಲಿ ಧೂಮದರ್ಶನವಾಗಿದೆಯೋ ಅಷ್ಟು ಸ್ಥಳದಲ್ಲಿ ವಹ್ನಿ ವ್ಯಕ್ತಿಗಳಿಗೆ ತಾವದನ್ಯಾನ್ಯತ್ವ ರೂಪದಿಂದ ಕಾರಣತ್ವವನ್ನು ಸ್ವೀಕರಿಸಿದರೂ ಅನ್ಯವಹ್ನಿ ವ್ಯಕ್ತಿಯ ಸಂಗ್ರಹವಿಲ್ಲದಿರುವುದರಿಂದ ಅನ್ಯವಹ್ನಿ ವ್ಯಕ್ತಿಯಿಂದ ಧೂಮವು ಉತ್ಪತ್ತಿಯಾಗದಿರಲಿ ಎಂಬ ಪ್ರಸಂಗವು ಬರುತ್ತದೆ. ಆದ್ದರಿಂದ ಧೂಮ ಮತ್ತು ವಹ್ನಿಗಳಿಗೆ ಕಾರ್ಯಕಾರಣ ಭಾವವೇ ಸಿದ್ಧವಾಗುವುದಿಲ್ಲ.

ಏಕಜಾತೀಯವಾದ ಧೂಮವಹ್ನಿಗಳಿಗೂ ಕಾರ್ಯಕಾರಣಭಾವವು ಸಿದ್ಧವಾಗದಿದ್ದರೆ ಇನ್ನು ಭಿನ್ನಜಾತೀಯವಾದ ತೃಣಾರಣಿ ಮಣಿಗಳಿಗೂ ಮತ್ತು ವಹ್ನಿಗೂ ಕಾರ್ಯಕಾರಣಭಾವವು ಸಿದ್ಧವಾಗುವುದಿಲ್ಲ. ಆದ್ದರಿಂದ ಕಾರ್ಯಕಾರಣಭಾವವೇ ಉಚ್ಛೇದವನ್ನು ಹೊಂದುತ್ತದೆ. ಬೌದ್ಧರು ಕಾರ್ಯಕಾರಣಭಾವವಿರುವ ಕಡೆಯಲ್ಲಿ ಮತ್ತು ತಾದಾತ್ಮ್ಯವಿರುವ ಕಡೆಯಲ್ಲಿ ಮಾತ್ರ ಅನುಮಾನದ ಪ್ರವೃತ್ತಿಯನ್ನು ಅಂಗೀಕರಿಸುತ್ತಾರೆ. ಉದಾಹರಣೆಗೆ 'ಅಗ್ನಿಮಾನ್ ಧೂಮಾತ್' ಎಂಬಲ್ಲಿಯೂ 'ಅಯಂ ವೃಕ್ಷಃ ಶಿಂಶಪಾಯಾಃ' ಎಂಬಲ್ಲಿಯೂ ಅವರಿಗೆ ಅನುಮಾನವು ಪ್ರವೃತ್ತವಾಗುತ್ತದೆ. ತಾದಾತ್ಮ್ಯವೂ ಸಹ ಕಾರ್ಯಕಾರಣಭಾವವನ್ನು ಅವಲಂಬಿಸಿದೆ ಎಂದು ಮುಂದೆ ಹೇಳುವವರಿದ್ದೇವೆ. ಆದ್ದರಿಂದ ಕಾರ್ಯಕಾರಣ ಭಾವವು ಮತ್ತು ತಾದಾತ್ಮ್ಯವು ಎರಡೂ ಸಿದ್ಧವಾಗದಿದ್ದರೆ ಅಪೋಹವಾದದಲ್ಲಿ ಅನುಮಾನಮಾತ್ರೋಚ್ಛೇದ ಪ್ರಸಂಗವು ಉಂಟಾಗುತ್ತದೆ.

ಆದ್ದರಿಂದ ಎಂದರೆ ಏಕಶಕ್ತಿ ಪಕ್ಷವಾಗಲೀ, ಏಕಜಾತಿಪಕ್ಷವಾಗಲೀ ಅಥವಾ ಅಪೋಹ ಪಕ್ಷವಾಗಲೀ ಅಯುಕ್ತವಾದುದರಿಂದ ಕಾರ್ಯಸಾಮಾನ್ಯವನ್ನು ಕುರಿತು ಕಾರಣಸಾಮಾನ್ಯಕ್ಕೆ ಕಾರ್ಯಕಾರಣಭಾವವನ್ನು ಹೇಳುವುದು ದುಸ್ಸಾಧ್ಯವಾದುದರಿಂದ ಅನುಭವಕ್ಕೆ ಅನುಗುಣವಾಗಿ ಒಂದು ಕಾರ್ಯವ್ಯಕ್ತಿಯನ್ನು ಕುರಿತು ಒಂದು ಕಾರಣವ್ಯಕ್ತಿಯು ಕಾರಣ ಎಂದೇ ಹೇಳಬೇಕು. ಆದ್ದರಿಂದ ಕಾರ್ಯಸಾಮಾನ್ಯವನ್ನು ಕುರಿತು ಕಾರಣಸಾಮಾನ್ಯವನ್ನು ಕಾರಣ ಎಂದು ಹೇಳುವುದು ಸರಿಯಲ್ಲ ಎಂಬ ಶಂಕೆ ಇದೆ.

## ಸಾಮಾನ್ಯಾಪೇಕ್ಷೆಯಿಂದಲೇ ಕಾರ್ಯಕಾರಣಭಾವವಿದೆ

**न । फूत्कारेण तृणादेरेव, निर्मन्थनेनारणेरेव प्रतिफलिततरणिकिरणैर्मणैरेवेति प्रकारनियमवत् तेनैव व्यज्यमानस्य कार्यजातिभेदस्य भावात् । दृश्यते च पावकात्वाविशेषेऽपि प्रदीपः प्रासादोदरव्यापकमालोकमारभते; न तथा ज्वालाजालजटिलोऽपि दारुदहनः, नतराञ्च कारीषः ।**

ಹಿಂದೆ ಹೇಳಿದ ಶಂಕೆಯು ಸರಿಯಲ್ಲ. ಫೂತ್ಕಾರದಿಂದ ತೃಣದಿಂದಲೇ ಅಗ್ನಿ ಉಂಟಾಗುತ್ತದೆ. ನಿರ್ಮಥನದಿಂದ ಅರಣಿಯಿಂದಲೇ ಉಂಟಾಗುತ್ತದೆ. ಸೂರ್ಯಕಿರಣಗಳಿಂದ ಮಣಿಯಿಂದಲೇ ಉಂಟಾಗುತ್ತದೆ ಎಂಬ ಸಹಕಾರಿ ನಿಯಮವಿರುವುದರಿಂದ ಅದರಿಂದ ವ್ಯಜ್ಯಮಾನವಾದ ಕಾರ್ಯವೈಜಾತ್ಯವೂ ಇದೆ. ಮತ್ತು ಅಗ್ನಿಯಲ್ಲಿ ಕಾರ್ಯವೈಜಾತ್ಯವು ಅನುಭವಸಿದ್ಧವಾಗಿದೆ. ದೀಪರೂಪವಾದ ಅಗ್ನಿಯಿಂದ ಮನೆಯ ಒಳಭಾಗವನ್ನೆಲ್ಲಾ ವ್ಯಾಪಿಸಿರುವ ಪ್ರಕಾಶವುಂಟಾಗುತ್ತದೆ. ಬಹಳವಾಗಿ ಉರಿಯುವ ಕಟ್ಟಿಗೆಯ ಬೆಂಕಿಯಿಂದ ಅಂತಹ ಪ್ರಕಾಶವು ಉಂಟಾಗುವುದಿಲ್ಲ. ಬೆರಣಿಯಿಂದ ಉಂಟಾಗುವ ಅಗ್ನಿಯಿಂದ ಅದಕ್ಕಿಂತ ಕಡಿಮೆ ಪ್ರಕಾಶವೇ ಉಂಟಾಗುತ್ತದೆ. ಆದ್ದರಿಂದ ವಹ್ನಿಯಲ್ಲಿ ವೈಜಾತ್ಯವಿದೆ.

**यस्तुतंनाकलयेत्, सकार्यसामान्येनकारणमात्रमनुमिनुयादिति किमनुपपन्नम् ।**

## ಅಪೋಹವಾದ ನಿರಾಸ ಮತ್ತು ವ್ಯಕ್ತಿಯ ಅಪೇಕ್ಷೆಯಿಂದಲೇ ಕಾರ್ಯಕಾರಣಭಾವ ಎಂಬ ಶಂಕಾ

**एतेन अपोहवादे नियमो निरस्तः; 'कार्यकारणभावाद्वा' इत्यादिविप्लवप्रसङ्गात् । तस्मान्नियतजातीयतास्वभावभङ्गेन व्यक्त्यपेक्षयैव नियम इति –**

ಇದರಿಂದ ಬೌದ್ಧರಿಗೆ ಸಮ್ಮತವಾದ ಅಪೋಹವಾದವು ನಿರಸ್ತವಾಯಿತು. 'ಅಪೋಹವೆಂದರೆ ಅತದ್ವ್ಯಾವೃತ್ತಿ. ಘಟದ ಅಪೋಹವೆಂದರೆ ಅಘಟವ್ಯಾವೃತ್ತಿ. ಹೀಗೆ ಸರ್ವಸಮ್ಮತವಾದ ಅಪೋಹದಿಂದಲೇ ವ್ಯವಹಾರವನ್ನು ನಿರ್ವಾಹಮಾಡಲು ಬರುವಾಗ ಜಾತಿಯನ್ನು ಕಲ್ಪನೆಮಾಡಬೇಕಾದುದಿಲ್ಲ. ವಹ್ನಿತ್ವರೂಪಜಾತಿ ಇಲ್ಲದಿರುವುದರಿಂದ ಧೂಮವನ್ನು ಕುರಿತು ವಹ್ನಿಗೆ ಅವಹ್ನಿವ್ಯಾವೃತ್ತಿರೂಪದಿಂದ ಎಂದರೆ ವಹ್ನಿ ಭಿನ್ನಭಿನ್ನತ್ವರೂಪದಿಂದ ಕಾರಣತ್ವವಿದೆ' ಎಂದು ಬೌದ್ಧರು ಹೇಳುತ್ತಾರೆ. ಅವರು ವಹ್ನಿತ್ವರೂಪದಿಂದ ಎಲ್ಲ ವಹ್ನಿಗಳನ್ನೂ ಸಂಗ್ರಹಿಸಲು ಸಾಧ್ಯವಿಲ್ಲವಾದ್ದರಿಂದ ಎಷ್ಟು ಸ್ಥಳಗಳಲ್ಲಿ ಧೂಮದರ್ಶನವಾಗಿದೆಯೋ ಅಷ್ಟು ಸ್ಥಳದಲ್ಲಿ ವಹ್ನಿ ವ್ಯಕ್ತಿಗಳಿಗೆ ತಾವದನ್ಯಾನ್ಯತ್ವ ರೂಪದಿಂದ ಕಾರಣತ್ವವನ್ನು ಸ್ವೀಕರಿಸಿದರೂ ಅನ್ಯವಹ್ನಿ ವ್ಯಕ್ತಿಯ ಸಂಗ್ರಹವಿಲ್ಲದಿರುವುದರಿಂದ ಅನ್ಯವಹ್ನಿ ವ್ಯಕ್ತಿಯಿಂದ ಧೂಮವು ಉತ್ಪತ್ತಿಯಾಗದಿರಲಿ ಎಂಬ ಪ್ರಸಂಗವು ಬರುತ್ತದೆ. ಆದ್ದರಿಂದ ಧೂಮ ಮತ್ತು ವಹ್ನಿಗಳಿಗೆ ಕಾರ್ಯಕಾರಣ ಭಾವವೇ ಸಿದ್ಧವಾಗುವುದಿಲ್ಲ.

ಏಕಜಾತೀಯವಾದ ಧೂಮವಹ್ನಿಗಳಿಗೂ ಕಾರ್ಯಕಾರಣಭಾವವು ಸಿದ್ಧವಾಗದಿದ್ದರೆ ಇನ್ನು ಭಿನ್ನಜಾತೀಯವಾದ ತೃಣಾರಣಿ ಮಣಿಗಳಿಗೂ ಮತ್ತು ವಹ್ನಿಗೂ ಕಾರ್ಯಕಾರಣಭಾವವು ಸಿದ್ಧವಾಗುವುದಿಲ್ಲ. ಆದ್ದರಿಂದ ಕಾರ್ಯಕಾರಣಭಾವವೇ ಉಚ್ಛೇದವನ್ನು ಹೊಂದುತ್ತದೆ. ಬೌದ್ಧರು ಕಾರ್ಯಕಾರಣಭಾವವಿರುವ ಕಡೆಯಲ್ಲಿ ಮತ್ತು ತಾದಾತ್ಮ್ಯವಿರುವ ಕಡೆಯಲ್ಲಿ ಮಾತ್ರ ಅನುಮಾನದ ಪ್ರವೃತ್ತಿಯನ್ನು ಅಂಗೀಕರಿಸುತ್ತಾರೆ. ಉದಾಹರಣೆಗೆ 'ಅಗ್ನಿಮಾನ್ ಧೂಮಾತ್' ಎಂಬಲ್ಲಿಯೂ 'ಅಯಂ ವೃಕ್ಷಃ ಶಿಂಶಪಾಯಾಃ' ಎಂಬಲ್ಲಿಯೂ ಅವರಿಗೆ ಅನುಮಾನವು ಪ್ರವೃತ್ತವಾಗುತ್ತದೆ. ತಾದಾತ್ಮ್ಯವೂ ಸಹ ಕಾರ್ಯಕಾರಣಭಾವವನ್ನು ಅವಲಂಬಿಸಿದೆ ಎಂದು ಮುಂದೆ ಹೇಳುವವರಿದ್ದೇವೆ. ಆದ್ದರಿಂದ ಕಾರ್ಯಕಾರಣ ಭಾವವು ಮತ್ತು ತಾದಾತ್ಮ್ಯವು ಎರಡೂ ಸಿದ್ಧವಾಗದಿದ್ದರೆ ಅಪೋಹವಾದದಲ್ಲಿ ಅನುಮಾನಮಾತ್ರೋಚ್ಛೇದ ಪ್ರಸಂಗವು ಉಂಟಾಗುತ್ತದೆ.

ಆದ್ದರಿಂದ ಎಂದರೆ ಏಕಶಕ್ತಿ ಪಕ್ಷವಾಗಲೀ, ಏಕಜಾತಿಪಕ್ಷವಾಗಲೀ ಅಥವಾ ಅಪೋಹ ಪಕ್ಷವಾಗಲೀ ಅಯುಕ್ತವಾದುದರಿಂದ ಕಾರ್ಯಸಾಮಾನ್ಯವನ್ನು ಕುರಿತು ಕಾರಣಸಾಮಾನ್ಯಕ್ಕೆ ಕಾರ್ಯಕಾರಣಭಾವವನ್ನು ಹೇಳುವುದು ದುಸ್ಸಾಧ್ಯವಾದುದರಿಂದ ಅನುಭವಕ್ಕೆ ಅನುಗುಣವಾಗಿ ಒಂದು ಕಾರ್ಯವ್ಯಕ್ತಿಯನ್ನು ಕುರಿತು ಒಂದು ಕಾರಣವ್ಯಕ್ತಿಯು ಕಾರಣ ಎಂದೇ ಹೇಳಬೇಕು. ಆದ್ದರಿಂದ ಕಾರ್ಯಸಾಮಾನ್ಯವನ್ನು ಕುರಿತು ಕಾರಣಸಾಮಾನ್ಯವನ್ನು ಕಾರಣ ಎಂದು ಹೇಳುವುದು ಸರಿಯಲ್ಲ ಎಂಬ ಶಂಕೆ ಇದೆ.

## ಸಾಮಾನ್ಯಾಪೇಕ್ಷೆಯಿಂದಲೇ ಕಾರ್ಯಕಾರಣಭಾವವಿದೆ

**न । फूत्कारेण तृणादेरेव, निर्मन्थनेनारणेरेव प्रतिफलिततरणिकिरणैर्मणैरेवेति प्रकारनियमवत् तेनैव व्यज्यमानस्य कार्यजातिभेदस्य भावात् । दृश्यते च पावकात्वाविशेषेऽपि प्रदीपः प्रासादोदरव्यापकमालोकमारभते; न तथा ज्वालाजालजटिलोऽपि दारुदहनः, नतराञ्च कारीषः ।**

ಹಿಂದೆ ಹೇಳಿದ ಶಂಕೆಯು ಸರಿಯಲ್ಲ. ಫೂತ್ಕಾರದಿಂದ ತೃಣದಿಂದಲೇ ಅಗ್ನಿ ಉಂಟಾಗುತ್ತದೆ. ನಿರ್ಮಥನದಿಂದ ಅರಣಿಯಿಂದಲೇ ಉಂಟಾಗುತ್ತದೆ. ಸೂರ್ಯಕಿರಣಗಳಿಂದ ಮಣಿಯಿಂದಲೇ ಉಂಟಾಗುತ್ತದೆ ಎಂಬ ಸಹಕಾರಿ ನಿಯಮವಿರುವುದರಿಂದ ಅದರಿಂದ ವ್ಯಜ್ಯಮಾನವಾದ ಕಾರ್ಯವೈಜಾತ್ಯವೂ ಇದೆ. ಮತ್ತು ಅಗ್ನಿಯಲ್ಲಿ ಕಾರ್ಯವೈಜಾತ್ಯವು ಅನುಭವಸಿದ್ಧವಾಗಿದೆ. ದೀಪರೂಪವಾದ ಅಗ್ನಿಯಿಂದ ಮನೆಯ ಒಳಭಾಗವನ್ನೆಲ್ಲಾ ವ್ಯಾಪಿಸಿರುವ ಪ್ರಕಾಶವುಂಟಾಗುತ್ತದೆ. ಬಹಳವಾಗಿ ಉರಿಯುವ ಕಟ್ಟಿಗೆಯ ಬೆಂಕಿಯಿಂದ ಅಂತಹ ಪ್ರಕಾಶವು ಉಂಟಾಗುವುದಿಲ್ಲ. ಬೆರಣಿಯಿಂದ ಉಂಟಾಗುವ ಅಗ್ನಿಯಿಂದ ಅದಕ್ಕಿಂತ ಕಡಿಮೆ ಪ್ರಕಾಶವೇ ಉಂಟಾಗುತ್ತದೆ. ಆದ್ದರಿಂದ ವಹ್ನಿಯಲ್ಲಿ ವೈಜಾತ್ಯವಿದೆ.

**यस्तुतंनाकलयेत्, सकार्यसामान्येनकारणमात्रमनुमिनुयादिति किमनुपपन्नम् ।**

ಯಾರಿಗೆ ಈ ವೈಜಾತ್ಯದ ಜ್ಞಾನವಿಲ್ಲವೋ ಅವನು ಕಾರ್ಯಸಾಮಾನ್ಯದಿಂದ ಕಾರಣವನ್ನು ಮಾತ್ರ ಅನುಮಾನ ಮಾಡುತ್ತಾನೆ. ಕಾರಣವಿಶೇಷವನ್ನು ಅನುಮಾನ ಮಾಡುವುದಿಲ್ಲ. ಇದರಲ್ಲಿ ಯಾವ ಅನುಪಪತ್ತಿಯಿದೆ?

## ಧೂಮಸಾಮಾನ್ಯದಿಂದ ವಹ್ನಿಸಾಮಾನ್ಯಾನುಮಾನ. ಶಂಕಾ ಮತ್ತು ಸಮಾಧಾನ

**एवं तर्हि धूमादावपि कश्चिदनुपलक्षणीयो विशेषः स्यात्, यस्य दहनापेक्षेति, न धूमादिसामान्याद् वह्निसामान्यादिसिद्धिः ।**

ಹಾಗಾದರೆ ಅಗ್ನಿಯಲ್ಲಿ ಅನುಭವಕ್ಕೆ ಬರದಿರುವ ವೈಜಾತ್ಯವನ್ನು ಸ್ವೀಕರಿಸಿ ಅದಕ್ಕೆ ತೃಣಾಪೇಕ್ಷೆಯನ್ನು ಹೇಳುವುದಾದರೆ ಧೂಮದಲ್ಲಿಯೂ ಅವಾಂತರವಿಶೇಷವನ್ನು ಅಂಗೀಕರಿಸಿ ಅದಕ್ಕೆ ವಹ್ನಿಯ ಅಪೇಕ್ಷೆಯನ್ನು ಹೇಳಬಹುದಾದ್ದರಿಂದ ಧೂಮ ಸಾಮಾನ್ಯದಿಂದ ಅಗ್ನಿಯನ್ನು ಅನುಮಾನಮಾಡುವುದು ಸಾಧ್ಯವಾಗದಿರಲಿ.

ಅದರಂತೆಯೇ ಅಗ್ನ್ಯಭಾವದಿಂದ ಧೂಮಾಭಾವವನ್ನು ಸಾಧನೆ ಮಾಡುವ ಅನುಮಾನವೂ ಸಿದ್ಧಿಸುವುದಿಲ್ಲ. ಆದ್ದರಿಂದ ಕಾರ್ಯಕಾರಣಭಾವವನ್ನೇ ನಿರ್ಣಯಿಸಲು ಸಾಧ್ಯವಿಲ್ಲವಾದುದರಿಂದ ಅನುಮಾನ ಪ್ರಮಾಣವೇ ಲುಪ್ತವಾದೀತು. ಕಾರ್ಯಕಾರಣಭಾವವಿಲ್ಲದಿದ್ದರೂ ತಾದಾತ್ಮ್ಯಶಬ್ದ-ವಾಚ್ಯವಾದ ಸ್ವಭಾವಬಲದಿಂದ ಅನುಮಾನವು ಪ್ರವೃತ್ತವಾಗಲಿ ಎಂದು ಶಂಕಿಸಬಾರದು. ಏಕೆಂದರೆ ಅಲ್ಲಿಯೂ ಕಾರ್ಯಕಾರಣಭಾವದ ಅಪೇಕ್ಷೆ ಇದ್ದೇ ಇದೆ.

ಅದು ಹೇಗೆಂದರೆ– 'ಅಯಂ ವೃಕ್ಷಃ ಶಿಂಶುಪಾಯಾಃ' (ಇದು ವೃಕ್ಷ ಶಿಂಶುಪವಾದ್ದರಿಂದ) ಎಂಬುದು ತಾದಾತ್ಮ್ಯ ಅನುಮಾನ. ಇಲ್ಲಿ ಹೇತುವಿರಲಿ ಸಾಧ್ಯವು ಬೇಡ ಎಂದು ಅಪ್ರಯೋಜಕ ಶಂಕೆಯನ್ನು ಮಾಡಿದರೆ ವಿಪಕ್ಷದಲ್ಲಿ ಬಾಧಕವನ್ನು ಹೇಳಬೇಕು. ಅದನ್ನು ಹೀಗೆ ಹೇಳಬೇಕು. ಶಿಂಶಪವು ವೃಕ್ಷಸಾಮಗ್ರೀಜನ್ಯವಾದ್ದರಿಂದ ಶಿಂಶಪವಿರುವಾಗ ವೃಕ್ಷಸಾಮಗ್ರಿಯು ಇದ್ದೇ ಇದೆ. ಆದ್ದರಿಂದ ವೃಕ್ಷವೂ ಇದ್ದೇ ಇದೆ. ಇಲ್ಲದಿದ್ದರೆ ಕಾರ್ಯಕಾರಣಭಾವಕ್ಕೆ ಭಂಗಬರುತ್ತದೆ.

## ಕಾರ್ಯಾನುಪಲಬ್ಧಿಲಿಂಗವು ಭಂಗವಾದರೆ ಬಾಧಕತರ್ಕ ಹೇಳಲಾಗದು

**एतेन व्यतिरेको व्याख्यातः । कार्यानुपलब्धिलिङ्गभङ्गे स्वभावस्याप्यसिद्धेर्गतमनुमानेनेति चेत् – न ।**

ಅಥವಾ ವೃಕ್ಷಕಾರಣದ ಅನುಪಲಬ್ಧಿ ಇರುವಾಗ ಶಿಂಶುಪದ ಅಭಾವ ಕೂಡುವುದರಿಂದ ಶಿಂಶುಪವಿರುವಾಗ ವೃಕ್ಷವನ್ನು ಅವಶ್ಯಕವಾಗಿ ಅಂಗೀಕರಿಸಬೇಕು. ಇವುಗಳಲ್ಲಿ ಮೊದಲನೆಯದು ಕಾರ್ಯದಿಂದ ಕಾರಣಾನುಮಾನ ಮೂಲಕವಾದುದು. ಎರಡನೆಯದು ಕಾರಣದ ಅನುಪಲಬ್ಧಿಯಿಂದ ಕಾರ್ಯಾಭಾವಾನುಮಾನ ಮೂಲಕವಾದುದು. ಮತ್ತು ಬೌದ್ಧರು ಅಭಾವಸಾಧಕ ಅನುಪಲಬ್ಧಿಗಳಲ್ಲಿ ಕಾರ್ಯಾನುಪಲಬ್ಧಿಯನ್ನೂ ಕಾರಣಾನುಪಲಬ್ಧಿಯನ್ನೂ ಸೇರಿಸುತ್ತಾರೆ.

'ಇಲ್ಲಿ ಅಪ್ರತಿಬದ್ಧ ಸಾಮರ್ಥ್ಯವುಳ್ಳ ಧೂಮಕಾರಣಗಳು ಇಲ್ಲ. ಧೂಮವು ಕಾಣದಿರುವುದರಿಂದ' ಎಂಬುದು ಕಾರ್ಯಾನುಪಲಬ್ಧಿಗೆ ಉದಾಹರಣೆ. 'ಇಲ್ಲಿ ಧೂಮವಿಲ್ಲ ಅಗ್ನಿ ಇಲ್ಲದಿರುವುದರಿಂದ' ಎಂಬುದು ಕಾರಣಾನುಪಲಬ್ಧಿಗೆ ಉದಾಹರಣೆ. ಆದ್ದರಿಂದ ಪ್ರಕೃತದಲ್ಲಿ ವೃಕ್ಷವಿಲ್ಲದಿದ್ದರೆ ವೃಕ್ಷಸಾಮಗ್ರಿಯ ಅಭಾವ, ವೃಕ್ಷಸಾಮಗ್ರಿಯು ಇಲ್ಲದಿದ್ದರೆ ಶಿಂಶಪಾಭಾವ ಎಂಬುದಾಗಿ ಕಾರ್ಯಾನುಪಲಬ್ಧಿಯನ್ನೇ ಪರಂಪರಯಾ ಸ್ವಭಾವಸಿದ್ಧಿಗೆ ಲಿಂಗವಾಗಿ ಹೇಳುತ್ತಾರೆ.

ಹೀಗೆ ಕಾರ್ಯರೂಪವಾದ ಲಿಂಗದ ಕಾರಣಾನುಪಲಬ್ಧಿ ರೂಪವಾದ ಲಿಂಗದ ಮತ್ತು ಕಾರ್ಯಾನುಪಲಬ್ಧಿ ಲಿಂಗದ ಭಂಗವುಂಟಾದರೆ ತಾದಾತ್ಮ್ಯಾನುಮಾನದಲ್ಲಿ ವಿಪಕ್ಷದಲ್ಲಿ ಬಾಧಕತರ್ಕವನ್ನು ಹೇಳಲು ಸಾಧ್ಯವಿಲ್ಲವಾದ್ದರಿಂದ ಸ್ವಭಾವ (ತಾದಾತ್ಮ್ಯ)ವೇ ಅಸಿದ್ಧವಾಗುತ್ತದೆ.

## ಬೌದ್ಧರ ಶಿರಸ್ಸಿಗೆ ಮಾತ್ರ ಈ ಪ್ರಹಾರ

**प्रत्यक्षानुपलम्भगोचरो जातिभेदो न कार्यप्रयोजक इति वदतो बौद्धस्य शिरस्यैष प्रहारः ।**

ಕಾರ್ಯಕಾರಣಭಾವ ಮತ್ತು ಸ್ವಭಾವ ಇವೆರಡು ಸ್ಥಳಗಳನ್ನು ಬಿಟ್ಟು ಬೇರೆಯ ಸ್ಥಳದಲ್ಲಿ ಬೌದ್ಧರು ಅನುಮಾನಪ್ರವೃತ್ತಿಯನ್ನೇ ಅಂಗೀಕರಿಸುವುದಿಲ್ಲವಾದ್ದರಿಂದ ಅನುಮಾನಪ್ರಮಾಣವೇ

ಉಚ್ಛೇದವನ್ನು ಹೊಂದುತ್ತದೆ. ಈ ರೀತಿಯ ಆಪಾದನೆಯು ಬೌದ್ಧರನ್ನು ಕುರಿತು ಮಾಡಲು ಮಾತ್ರ ಸಾಧ್ಯ.

ಬೌದ್ಧನಾದರೂ ಯಾವುದಿದ್ದರೆ ಕಾರ್ಯವುಂಟಾಗುತ್ತದೆಯೋ ಯಾವುದು ಇಲ್ಲದಿದ್ದರೆ ಕಾರ್ಯವುಂಟಾಗುವುದಿಲ್ಲವೋ ಅಂತಹ ಅನ್ವಯವ್ಯತಿರೇಕಲಬ್ಧವಾದ ಬೀಜತ್ವಾದಿಗಳಿಗೆ ಕಾರಣತಾವಚ್ಛೇದಕವನ್ನು ಒಪ್ಪದೇ ಅಪ್ರಾಮಾಣಿಕವಾದ ಕುರ್ವದ್ ರೂಪತ್ವವು ಕಾರಣತಾವಚ್ಛೇದಕವೆಂದು ಕಲ್ಪನೆ ಮಾಡುತ್ತಾನೆ.

(ಒರಳಿನಲ್ಲಿ ಹಾಕಿದ ಕಲಮಬೀಜದಿಂದ ಅಂಕುರ ಉಂಟಾಗುವುದಿಲ್ಲ. ಭೂಮಿಯಲ್ಲಿ ಹಾಕಿದ ಕಲಮ ಬೀಜದಿಂದ ಅಂಕುರ ಉಂಟಾಗುತ್ತದೆ. ಆದ್ದರಿಂದ ಬೀಜತ್ವವು ಕಾರಣತಾವಚ್ಛೇದಕವಲ್ಲ. ಅದು ಕಾರಣವಲ್ಲದಿರುವ ಒರಳಿನಲ್ಲಿರುವ ಬೀಜದಲ್ಲಿಯೂ ಇದೆ. ಆದ್ದರಿಂದ ಅಂಕುರಜನಕವಾದ ಬೀಜತ್ವವ್ಯಾಪ್ಯವಾದ ಅಪ್ರತ್ಯಕ್ಷವಾದ ಒಂದು ಅವಾಂತರ ಜಾತಿಯನ್ನು ಬೀಜದಲ್ಲಿ ಒಪ್ಪಿ ಅದನ್ನು ಕುರ್ವದ್ರೂಪ ಎಂದು ಕರೆಯುತ್ತಾರೆ. ಕುರ್ವದ್ರೂಪತ್ವವೇ ಕಾರಣತಾವಚ್ಛೇದಕವೆಂದು ಹೇಳುತ್ತಾರೆ.

ತಥಾಚ ಅವರ ಮತದಲ್ಲಿ ಅಸಂಭಾವಿತವಾದ ಕಾರಣತಾವಚ್ಛೇದಕವನ್ನು ಕಲ್ಪನೆಮಾಡುವಂತೆ ಅಸಂಭಾವಿತವಾದ ಕಾರ್ಯತಾವಚ್ಛೇದಕವನ್ನು ಕಲ್ಪನೆ ಮಾಡಬಹುದಾದ್ದರಿಂದ ದೃಶ್ಯಮಾನವಾದ ಅಗ್ನಿತ್ವ, ಧೂಮತ್ವಾದಿ ಸಾಮಗ್ರಿಗಳಿಗೆ ಪ್ರಯೋಜ್ಯ ಪ್ರಯೋಜಕ ಭಾವವು ಸಿದ್ಧವಾಗುವುದಿಲ್ಲ. ಆದ್ದರಿಂದ ಧೂಮಾದಿಗಳಿಂದ ವಹ್ನ್ಯಾದಿಗಳ ಅನುಮಾನವನ್ನು ಮಾಡಲು ಸಾಧ್ಯವಿಲ್ಲವಾದ್ದರಿಂದ ಅನುಮಾನ ಪ್ರಮಾಣವೇ ಲುಪ್ತವಾಗುತ್ತದೆ.

## ವೈಶೇಷಿಕರಿಗೆ ಯಾವುದೇ ದೋಷವಿಲ್ಲ

**अस्माकं तु यत्सामान्याक्रान्तयोर्ययोरन्वययतिरेकवत्ता, तयोस्तथैव हेतुहेतुमद्भावनिश्चयः । तथा चावान्तर विशेषसद्भावेऽपि न नो विरोधः ।**

ವೈಶೇಷಿಕರಾದ ನಾವಾದರೂ ದೃಷ್ಟವಾದ ಅನೇಕ ಕಾರಣತಾವಚ್ಛೇದಕ ಅನುಸಾರವಾಗಿ ಕೆಲವು ಕಡೆ ಕಾರ್ಯವೈಜಾತ್ಯವನ್ನು ಊಹಿಸುತ್ತೇವೆ. ಬೌದ್ಧರಂತೆ ಅದೃಷ್ಟವಾದ ಧರ್ಮವನ್ನು ತೆಗೆದುಕೊಂಡು

ಕಾರ್ಯಕಾರಣ ಭಾವವನ್ನೇ ನಿರಾಕರಿಸುವುದಿಲ್ಲ. ಆದ್ದರಿಂದ ಧೂಮಸಾಮಾನ್ಯಕ್ಕೂ ಮತ್ತು ಅಗ್ನಿಸಾಮಾನ್ಯಕ್ಕೂ ಅನ್ವಯ ವ್ಯತಿರೇಕಗಳಿಗೆ ಭಂಗವಿಲ್ಲದಿರುವುದರಿಂದ ಮೊದಲು ಆಪಾದನೆ ಮಾಡಿದಂತೆ ಧೂಮದಲ್ಲಿ ಅಪ್ರಾಮಾಣಿಕವಾದ ಅವಾಂತರ ವಿಶೇಷವನ್ನು ಕಲ್ಪನೆ ಮಾಡಬೇಕಾದ ಅಗತ್ಯವಿಲ್ಲ. ಆದ್ದರಿಂದ ಕೆಲವು ಸ್ಥಳದಲ್ಲಿ ಅವಾಂತರ ವಿಶೇಷವು ಪ್ರಮಾಣದಿಂದ ಸಿದ್ಧವಾದರೂ ಸರ್ವತ್ರ ಅವಾಂತರ ವಿಶೇಷವೇ ಸಿದ್ಧವಾಗಲಿ ಎಂಬ ಆಪತ್ತಿ ಬರುವ ಪ್ರಸಂಗವಿಲ್ಲ.

ವೈಶೇಷಿಕರಾದ ನಾವು ತಾದಾತ್ಮ್ಯಸ್ಥಳದಲ್ಲಿ ಕಲ್ಪನೆ ಮಾಡುವಂತೆ ಕಾರ್ಯಕಾರಣಭಾವ ಸ್ಥಳದಲ್ಲಿ ಕಲ್ಪನೆ ಮಾಡುವಂತೆ ಇವೆರಡಕ್ಕಿಂತ ಭಿನ್ನವಾದ ಸ್ಥಳದಲ್ಲಿಯೂ ಅನುಮಾನ ಪ್ರವೃತ್ತಿಯನ್ನು ಅಂಗೀಕರಿಸುತ್ತೇವೆ. ಆದ್ದರಿಂದ ನಮ್ಮನ್ನು ಕುರಿತು ಅನುಮಾನ ಮಾತ್ರವೇ ಉಚ್ಛೇದವನ್ನು ಹೊಂದುತ್ತದೆ ಎಂಬ ಆಕ್ಷೇಪವನ್ನು ಮಾಡಲು ಸಾಧ್ಯವಿಲ್ಲ.

## ವಹ್ನಿಸಾಮಾನ್ಯವನ್ನು ಕುರಿತು ಕಾರಣ ನಿರೂಪಣೆ

**किं पुनस्तार्णादौ दहनसामान्यस्य प्रयोजकम्; तृणादीनां विशेष एव नियतत्वादिति चेत् – न । तेजोमात्रोत्पत्तौ पवनो निमित्तम्; अवयवसंयोगोऽसमवायी; तेजोऽवयवास्समवायिनः ।**

ತೃಣಾದಿಗಳು ವಹ್ನಿವಿಶೇಷವನ್ನೇ ಕುರಿತು ಕಾರಣವಾಗುವುದಾದರೆ ತೃಣಾದಿ ಜನ್ಯವಾದ ವಹ್ನಿಸಾಮಾನ್ಯಕ್ಕೆ ಯಾವುದು ಪ್ರಯೋಜಕ ಎಂಬ ಪ್ರಶ್ನೆಗೆ ಹೀಗೆ ಉತ್ತರವನ್ನು ಹೇಳುತ್ತೇವೆ. ಯಾವುದೇ ಅಗ್ನಿಯ ಉತ್ಪತ್ತಿಗೆ ವಾಯುವು ಒಂದು ನಿಮಿತ್ತ ಕಾರಣ. ಅಗ್ನಿಯ ಅವಯವಗಳ ಸಂಯೋಗವು ಅಸಮವಾಯಿ ಕಾರಣ. ಅಗ್ನಿಯ ಅವಯವಗಳೇ ಸಮವಾಯಿ ಕಾರಣ ಎಂದು ಹೇಳುತ್ತೇವೆ.

**इयमेव सामग्री गुरुत्ववद्द्रव्यसहिता पिण्डितस्य । इयमेव तेजोगतमुद्भूतस्पर्शमपेक्ष्य दहनं, तत्रापि जलं प्राप्य दिव्यं, पार्थिवं प्राप्य भौमम्, उभयं प्राप्योदर्यमारभत इति स्वयमूहनीयम् ।**

ಇದೇ ಸಾಮಗ್ರಿಯ ಜೊತೆಯಲ್ಲಿ ಗುರುತ್ವವುಳ್ಳ ದ್ರವ್ಯವು ಸೇರಿದರೆ ಅದು ಸುವರ್ಣರೂಪವಾದ ತೇಜಸ್ಸಿಗೆ ಕಾರಣವಾಗುತ್ತದೆ. ಇದೇ ಸಾಮಗ್ರಿಯೇ ತೇಜಸ್ಸಿನಲ್ಲಿರುವ ಉದ್ಭೂತಸ್ಪರ್ಶದ ನಿಮಿತ್ತ ದಹನವೆಂದು ಕರೆಸಿಕೊಳ್ಳಲ್ಪಡುತ್ತದೆ. ಜಲವನ್ನು ಸೇರಿದರೆ ದಿವ್ಯ (ಅತೀಂದ್ರಿಯ-ವಿದ್ಯುದಾದಿ) ಎಂದು ಕರೆಸಿಕೊಳ್ಳಲ್ಪಡುತ್ತದೆ. ಪಾರ್ಥಿವ ಪದಾರ್ಥವನ್ನು ಸೇರಿದರೆ ಭೌಮ ಎಂದು ಕರೆಸಿಕೊಳ್ಳಲ್ಪಡುತ್ತದೆ. ಜಲ ಮತ್ತು ಪಾರ್ಥಿವ ಎರಡರ ಜೊತೆಯಲ್ಲೂ ಸೇರಿದರೆ ಔದರ್ಯಕ್ಕೆ (ಜಾಠರಾಗ್ನಿಗೆ) ಕಾರಣವಾಗುತ್ತದೆ ಇತ್ಯಾದಿಗಳನ್ನು ಊಹಿಸಬೇಕು.

## ಎಲ್ಲ ಕಾರ್ಯಗಳಿಗೂ ಒಂದೇ ಕಾರಣ ಎಂಬ ಶಂಕೆ ಮತ್ತು ಸಮಾಧಾನ

**तथाऽप्येकमेकजातीयमेव वा किञ्चित्कारणमस्तु कृतं विचित्रेण। दृश्यते ह्यविलक्षणमपि विलक्षणानेककार्यकारि । यथा प्रदीप एक एव तिमिरापहारी वर्तिविकारकारी रूपान्तरव्यवहारकारीति चेन्न – वैचित्र्यात् कार्यस्य ।।**

'ಕಾರ್ಯಗಳಲ್ಲಿ ವೈಚಿತ್ರ್ಯವಿದ್ದರೂ ಒಂದೇ ಜಾತಿಗೆ ಸೇರಿದ ಅಥವಾ ಒಂದೇ ಆದ ಒಂದು ಕಾರಣವನ್ನು ಅಂಗೀಕರಿಸೋಣ. ವಿಚಿತ್ರ ಕಾರಣಗಳನ್ನು ಏಕೆ ಅಂಗೀಕರಿಸಬೇಕು? ಒಂದೇ ದೀಪವು ಅವಿಲಕ್ಷಣವಾದರೂ ವಿಲಕ್ಷಣವಾದ ಅನೇಕ ಕಾರ್ಯಗಳನ್ನು ಉಂಟುಮಾಡುತ್ತದೆ. ಹೇಗೆಂದರೆ ಒಂದೇ ದೀಪವು ಕತ್ತಲೆಯನ್ನು ನಾಶಮಾಡುತ್ತದೆ. ಉರಿಯುವ ಬತ್ತಿಯನ್ನು ನಾಶಮಾಡುತ್ತದೆ ಮತ್ತು ರೂಪಾಂತರ ವ್ಯವಹಾರವನ್ನು ಉಂಟುಮಾಡುತ್ತದೆ' ಎಂಬ ಈ ಶಂಕೆಯು ಸರಿಯಲ್ಲ. ಏಕೆಂದರೆ ಕಾರ್ಯದಲ್ಲಿ ವೈಚಿತ್ರ್ಯವಿದೆ.

## ಸಹಕಾರಿ ನಿರಪೇಕ್ಷವಾದ ಒಂದು ಕಾರಣಕ್ಕೆ ಕ್ರಮವುಳ್ಳ ಕಾರ್ಯಜನಕತ್ವವಿಲ್ಲ

**एकस्य न क्रमः कापि वैचित्र्यं च समस्य न ।**
**शक्तिभेदो न चाभिन्नः स्वभावो दुरतिक्रमः ।।७।।**

ಸಹಕಾರಿನಿರಪೇಕ್ಷವಾದ ಒಂದು ವಸ್ತುವಿಗೆ ಕ್ರಮಿಕ ಕಾರ್ಯಜನಕತ್ವವಿಲ್ಲ. ಅವಿಚಿತ್ರಕಾರಣದಿಂದ ವಿಚಿತ್ರಕಾರ್ಯವು ಉಂಟಾಗುವುದಿಲ್ಲ. ಶಕ್ತಿವಿಶೇಷವು ಧರ್ಮಿಯಿಂದ ಅಭಿನ್ನವಲ್ಲ. ಸ್ವಭಾವವನ್ನು ಮೀರಲು ಸಾಧ್ಯವಿಲ್ಲ.

**न तावदेकस्मादनपेक्षादनेकम्, अक्रमात् क्रमवत् कार्यानुपपत्तेः।**

'ಏಕಸ್ಯ ನ ಕ್ರಮಃ ಕ್ವಾಪಿ'. ಸಹಕಾರ್ಯಂತರ ನಿರಪೇಕ್ಷವಾದ ಒಂದೇ ಕಾರಣದಿಂದ ಕಾರ್ಯಗಳಲ್ಲಿ ಕ್ರಮವು ಎಂದೂ ಕಂಡುಬಂದಿಲ್ಲ. ಸಹಕಾರಿಯ ಅಪೇಕ್ಷೆಯಿದೆ ಎಂದರೆ ಸಹಕಾರಿಗಳು ಭಿನ್ನಭಿನ್ನವಾದ್ದರಿಂದ ಸಾಮಗ್ರಿಗಳು ಕ್ರಮವಾಗಿ ಉತ್ಪತ್ತಿಯಾಗುವುದರಿಂದ ಕಾರ್ಯದಲ್ಲಿಯೂ ಕ್ರಮವು ಉಂಟಾಗುತ್ತದೆ. ಹಾಗಿಲ್ಲದಿದ್ದರೆ ಕ್ರಮಪ್ರಸಕ್ತಿಯಿಲ್ಲದ ಕಾರಣದಿಂದ ಬೇರೆ ಯಾವುದೂ ಅಪೇಕ್ಷಿತವಲ್ಲವಾದ್ದರಿಂದ ಕಾರ್ಯದಲ್ಲಿ ಕ್ರಮವು ಉಂಟಾಗಲು ಸಾಧ್ಯವಿಲ್ಲ. 'ಕಾರಣಕ್ಕೆ ಅಷ್ಟು ಕಾರ್ಯಗಳನ್ನು ಕ್ರಮವಾಗಿ ಉತ್ಪಾದಿಸುವ ಸ್ವಭಾವವು ಉಂಟು. ಆದ್ದರಿಂದ ಕಾರ್ಯಗಳು ಕ್ರಮವುಳ್ಳದ್ದಾಗುತ್ತದೆ.

ಹೇಗೆ ದೀಪವು ಒಂದೇ ಸಲ ಮೂರು ಕಾರ್ಯಗಳನ್ನು ಮಾಡಿ ಕಾರ್ಯದಲ್ಲಿ ಯೌಗಪದ್ಯವನ್ನು ತರುವುದರಿಂದ ಅಂತಹ ಸ್ವಭಾವವುಳ್ಳದ್ದಾಗುತ್ತದೆಯೋ ಅದರಂತೆ ಕಾರ್ಯದಲ್ಲಿ ಅಯೌಗಪದ್ಯವನ್ನು ತರುವುದು ಇನ್ನೊಂದು ಕಾರಣದ ಸ್ವಭಾವ ಎಂದು ಕಲ್ಪನೆ ಮಾಡುತ್ತೇವೆ' ಎಂದು ಹೇಳಿದರೆ ಆ ಕಾರಣವು ಪ್ರಥಮ ಕಾರ್ಯವನ್ನು ಉತ್ಪಾದಿಸುವಾಗ ಆ ಕಾರಣಕ್ಕೆ ದ್ವಿತೀಯ ಕಾರ್ಯಜನನಸ್ವಭಾವವು ಇದೆಯೋ ಅಥವಾ ಇಲ್ಲವೋ ಎಂದು ಪ್ರಶ್ನೆ.

**क्रमवत्तावत्कार्य(क)कारणस्वभावात् तस्य, तत् तथा; यौगपद्यवदिति चेत् –**

ದ್ವಿತೀಯ ಕಾರ್ಯಜನನ ಸ್ವಭಾವವು ಇರುವುದಾದರೆ ಪ್ರಥಮ ಕಾರ್ಯವು ಉತ್ಪತ್ತಿಯಾದಂತೆ ಆ ಕ್ಷಣದಲ್ಲಿಯೇ ದ್ವಿತೀಯ ಕಾರ್ಯವು ಉತ್ಪತ್ತಿಯಾಗಲಿ ಎಂಬ ಆಪತ್ತಿಯಿದೆ. ಆಗ ದ್ವಿತೀಯ ಕಾರ್ಯಜನನ ಸ್ವಭಾವವಿಲ್ಲವೆಂದು ಹೇಳಿದರೆ ಅದು ಸರಿಯಲ್ಲ. ಏಕೆಂದರೆ ಸ್ವಭಾವವು ಒಂದು ವಸ್ತುವಿನಿಂದ ಎಂದೂ ಹೊರಟುಹೋಗುವುದಿಲ್ಲ. ಆದ್ದರಿಂದ ವಸ್ತುವು ಇರುವಾಗ ಅದರ ಸ್ವಭಾವವು ನಾಶವಾಗುವುದಿಲ್ಲವಾದ್ದರಿಂದ ಆ ಸ್ವಭಾವವಿಲ್ಲವೆಂದು ಹೇಳಿದರೆ ವಸ್ತುವೇ ಇಲ್ಲವೆಂದಾಗುತ್ತದೆ.

**अयमपि च क्षणभङ्गे परिहारो न तु सहकारिवादे। पूर्वपूर्वानपेक्षायां क्रमस्यैव व्याहतेः । क्रमनियमे त्वनपेक्षानुपपत्तेः ।**

ಇದು ಕ್ಷಣಭಂಗವಾದಿಗಳಾದ ಬೌದ್ಧರಿಗೆ ಇಷ್ಟವಾದುದು. ಕಾರಣಗಳು ಸ್ಥಿರವೆಂದು ಅಂಗೀಕರಿಸುವ ನಮ್ಮ ಪಕ್ಷದಲ್ಲಿ ಹೀಗೆ ಹೇಳಲು ಬರುವುದಿಲ್ಲ. ಆದ್ದರಿಂದ ಸ್ಥಿರವಾದ ಒಂದೇ ಕಾರಣವನ್ನು ಅಂಗೀಕರಿಸುವ ನೀವೂ ಸಹ ನಿಮಗೆ ಇಷ್ಟವಿಲ್ಲದಿದ್ದರೂ ಸಹಕಾರಿ ವಾದವನ್ನು ಸ್ವೀಕರಿಸಬೇಕಾಗುತ್ತದೆ. ಅಂತಹ ಸ್ವಭಾವವುಳ್ಳ ಆ ಕಾರಣವು ತೃತೀಯಕ್ಷಣದಲ್ಲಿ ಒಂದು ಕಾರ್ಯವನ್ನು ಉತ್ಪಾದನೆ ಮಾಡಲು ದ್ವಿತೀಯ ಕ್ಷಣವನ್ನು ಅಪೇಕ್ಷಿಸುವುದಿಲ್ಲವೆಂದಾರೆ, ತೃತೀಯ ಕ್ಷಣದಲ್ಲಿ ಉಂಟಾಗುವ ಕಾರ್ಯವು ದ್ವಿತೀಯಕ್ಷಣದಲ್ಲಿಯೇ ಉಂಟಾಗಲಿ ಎಂದು ಆಪತ್ತಿಯು ಬರುವುದರಿಂದ ಕ್ರಮಭಂಗವುಂಟಾಗುತ್ತದೆ. ಕ್ರಮವು ಅಪೇಕ್ಷಿತವಾಗುವುದಾದರೆ ಕ್ರಮವುಳ್ಳ ಕಾರ್ಯಗಳ ಜನನದಲ್ಲಿ ಕಾರಣಕ್ಕೆ ಪೂರ್ವಪೂರ್ವ ಕ್ಷಣಗಳ ಅಪೇಕ್ಷೆ ಇರುವ ಕಾರಣ, ಕಾರಣಗಳ ಬಹುತ್ವವು ಮತ್ತು ಸಹಕಾರಿ ವಾದವು ಊರ್ಜಿತವಾಗುತ್ತದೆ.

## ಅವಿಚಿತ್ರಕಾರಣದಿಂದ ವಿಚಿತ್ರಕಾರ್ಯಗಳು ಉಂಟಾಗುವುದಿಲ್ಲ

**नाप्यनेकमविचित्रम् । यदि ह्यनूनमनतिरिक्तं वा दहनकारणमदहनस्यापि हेतुः; नासावदहनो दहनो वा स्यात्; उभयात्मको वा स्यात् ।**

ಅನೇಕ ಕಾರಣಗಳು ಇರಲಿ. ಆದರೆ ಅದು ಏಕೆ ಇನ್ನೊಂದು ಕಾರ್ಯದ ಕಾರಣಕ್ಕಿಂತಲೂ ವಿಚಿತ್ರವಾಗಿರಬೇಕು ಎಂಬಪ್ರಶ್ನೆಗೆ 'ವೈಚಿತ್ರ್ಯಂ ಚ ಸಮಸ್ಯನ' ಎಂಬ ಅಂಶದಿಂದ ಉತ್ತರವನ್ನು ಹೇಳುತ್ತಾರೆ.

ಕಾರಣವು ಸಜಾತೀಯ ವಾದರೆ ಕಾರ್ಯದಲ್ಲಿ ವೈಚಿತ್ರ್ಯವು ಉಂಟಾಗಲು ಸಾಧ್ಯವಿಲ್ಲ. ಆದ್ದರಿಂದ ಅನೇಕ ಕಾರಣಗಳನ್ನು ವಿಚಿತ್ರವಾಗಿಯೇ ಎಂದರೆ ಇನ್ನೊಂದು ಕಾರ್ಯದ ಕಾರಣಗಳಿಗಿಂತಲೂ ಭಿನ್ನವಾಗಿಯೇ ತಮ್ಮ ಕಾರ್ಯವನ್ನು ಕುರಿತು ಕಾರಣವೆಂದು ಅಂಗೀಕರಿಸಬೇಕು.

ವೈಚಿತ್ರ್ಯವಿಲ್ಲದ ಕಾರಣಗಳಿಂದ ವಿಚಿತ್ರಕಾರ್ಯಗಳು ಉಂಟಾಗುತ್ತವೆ ಎಂದು ಹೇಳುವ ವಾದಿಯು ದಹನವನ್ನು ಕುರಿತು ಎಷ್ಟು ಕಾರಣಗಳಿವೆಯೋ, ಅದಹನವನ್ನು ಕುರಿತು ಅಷ್ಟೇ ಕಾರಣಗಳನ್ನು ಒಪ್ಪಬೇಕಾಗುತ್ತದೆ. ದಹನತ್ವ ಮತ್ತು ಅದಹನತ್ವಕ್ಕೆ ವಿರೋಧ ಇರುವುದರಿಂದ ಆ ಕಾರಣವು ಪರಸ್ಪರ ವಿರೋಧಿ ಸಾಮಗ್ರೀ ರೂಪವಾಗಿದೆ. ಆದ್ದರಿಂದ ಆ ಕಾರಣದಿಂದ ಉಂಟಾಗುವ ಕಾರ್ಯವು ದಹನವಾಗಲೀ ಅಥವಾ ಅದಹನವಾಗಲೀ ಆಗಬೇಕು. ದಹನತ್ವ ಮತ್ತು ಅದಹನತ್ವಗಳಿಗೆ ವಿರೋಧವಿಲ್ಲದಿದ್ದರೆ ಆ ಕಾರ್ಯವು ದಹನಾದಹನ ಉಭಯಾತ್ಮಕವಾಗಬೇಕು ಎಂಬ ಆಪತ್ತಿಯು ಬರುತ್ತದೆ.

**न चैवम् । शक्तिभेदादयमदोष इति चेन्न – धर्मिभेदाभेदाभ्यां तस्यानुपपत्तेः ।**

ಆ ಕಾರಣದಲ್ಲಿ ದಹನಶಕ್ತಿ ಮತ್ತು ಅದಹನಶಕ್ತಿ ಎರಡೂ ಇವೆ. ದಹನಶಕ್ತಿಯಿಂದ ದಹನವೂ ಅದಹನಶಕ್ತಿಯಿಂದ ಅದಹನವೂ ಉಂಟಾಗುತ್ತದೆ ಎಂದು ಹೇಳುವುದಾದರೆ ಅದಕ್ಕೆ ಉತ್ತರವನ್ನು 'ಶಕ್ತಿಭೇದೋ ನಚಾಭಿನ್ನಃ' ಎಂಬ ಕಾರಿಕೆ ಭಾಗದಿಂದ ಹೇಳುತ್ತಾರೆ. ಆ ಶಕ್ತಿವಿಶೇಷವು ಧರ್ಮಿಯಿಂದ ಭಿನ್ನವೋ ಅಭಿನ್ನವೋ ಎಂದು ಪ್ರಶ್ನೆ. ಧರ್ಮಿಯಿಂದ ಅಭಿನ್ನವಾದರೆ ದಹನ ಮತ್ತು ಅದಹನಗಳು ಒಂದೇ ಕ್ಷಣದಲ್ಲಿ ಉತ್ಪತ್ತಿಯಾಗಲಿ ಮೊದಲಾದ ಹಿಂದೆ ಹೇಳಿದ ದೋಷಗಳು ಇದ್ದೇ ಇವೆ. ಆದ್ದರಿಂದ ಶಕ್ತಿಗೆ ಧರ್ಮಿಯಿಂದ ಭೇದವನ್ನು ಅಂಗೀಕರಿಸಬೇಕು. ಆದ್ದರಿಂದ ವಿಭಿನ್ನಶಕ್ತಿಯ ಸಮಾವೇಶವುಳ್ಳ ಸಾಮಗ್ರಿಗಳು ಭಿನ್ನಭಿನ್ನವೆಂದೇ ಅಂಗೀಕರಿಸುವುದು ಅನಿವಾರ್ಯವಾಗುತ್ತದೆ.

**असङ्कीर्णोभयजननस्वभावत्वादयमदोष इति चेन्न – न हि स्वाधीनमस्यादहनत्वम्; अपि तु तज्जनकस्वभावाधीनम् । तथा च तदायत्तत्वाद्दहनस्यापि तत्त्वं केन वारणीयम् । न हि तस्मिन् जनयितव्ये नासौ तत्स्वभावः ।**

ಇನ್ನು ಶಕ್ತಿಯನ್ನು ಅಂಗೀಕರಿಸುವುದು ಬೇಡ. ಆ ಕಾರಣವೇ ಅಸಂಕೀರ್ಣವಾದ ಎರಡು ವಿಧವಾದ ಕಾರ್ಯಜನನ ಸ್ವಭಾವವನ್ನು ಹೊಂದಿದೆ. ಆದ್ದರಿಂದ ದಹನ ಮತ್ತು ಅದಹನಗಳನ್ನು ಪ್ರತ್ಯೇಕವಾಗಿಯೇ ಉಂಟುಮಾಡುತ್ತದೆ ಎಂದು ಹೇಳುವುದಾದರೆ ಅದಕ್ಕೆ 'ಸ್ವಭಾವೋ ದುರತಿಕ್ರಮಃ'

ಎಂಬ ಕಾರಿಕೆಯಭಾಗದಿಂದ ಉತ್ತರವನ್ನು ಹೇಳುತ್ತಾರೆ. ಆ ಕಲ್ಪದಲ್ಲಿಯೂ ಕೂಡ ಉತ್ಪತ್ತಿಯಾದ ದಹನಕ್ಕೆ ಏಕೆ ಅದಹನತ್ವವು ಇಲ್ಲ ಎಂದು ಪ್ರಶ್ನೆಮಾಡಿದರೆ ಅದಹನಸಾಮಗ್ರೀಜನ್ಯತ್ವವು ಇಲ್ಲದಿರುವುದರಿಂದ ಎಂದೇ ಉತ್ತರವನ್ನು ಕೊಡಬೇಕಾಗುತ್ತದೆ. ಅದನ್ನು ಕೂಡಿಸಲು ದಹನೋತ್ಪತ್ತಿ ಕಾಲದಲ್ಲಿ ಅದಹನಜನನ ಸ್ವಭಾವವಿಲ್ಲ ಅನಂತರ ಬರುತ್ತದೆ ಎಂದು ಸ್ವೀಕರಿಸಿದರೆ ಅದಹನ ಜನನವು ಆ ಕಾರಣದ ಸ್ವಭಾವವೆಂಬುದು ಭಗ್ನವಾಗುತ್ತದೆ.

ಅದನ್ನು ಪರಿಹಾರ ಮಾಡಲು ಕಾಲಭೇದದಿಂದ ವಸ್ತುವಿನ ಸ್ವಭಾವವು ಭಿನ್ನಭಿನ್ನವಾಗುತ್ತದೆ ಎಂದು ಅಂಗೀಕರಿಸಿದರೆ ಕ್ಷಣಭಂಗಾಪತ್ತಿಯು ಬರುತ್ತದೆ. ಆದ್ದರಿಂದ ಸ್ವಭಾವವನ್ನು ಎಂದೂ ಮೀರಲು ಸಾಧ್ಯವಿಲ್ಲದಿರುವುದರಿಂದ ದಹನಜನನಕಾಲದಲ್ಲಿಯೂ ಅದಹನಜನನ ಸ್ವಭಾವವಿರುವುದರಿಂದ ದಹನಕ್ಕೆ ಅದಹನತ್ವವು ಹೇಗೆ ಉಂಟಾಗುವುದಿಲ್ಲ ಎಂಬ ಪ್ರಶ್ನೆ ಉಳಿದೇ ಉಳಿಯುತ್ತದೆ.

## ಕಾರ್ಯವೈಚಿತ್ರ್ಯವು ಕಾರಣವೈಚಿತ್ರ್ಯಪ್ರಯುಕ್ತ

**तस्माद् विचित्रत्वात् कार्यस्य कारणेनापि विचित्रेण भवितव्यम्। न च तत् स्वभावतस्तथा। ततः सहकारिवैचित्र्यानुप्रवेशः। न तु(च) क्षणोऽपि तदनपेक्षस्तथा भवितुमर्हतीति ।।**

ಆದ್ದರಿಂದ ಎಲ್ಲ ಕಡೆಗಳಲ್ಲಿಯೂ ಕಾರ್ಯವೈಚಿತ್ರ್ಯವು ಕಾರಣವೈಚಿತ್ರ್ಯ ಪ್ರಯುಕ್ತವಾದುದು. ಆ ಕಾರಣವಾದರೂ ಸಹಕಾರಿ ಸಮಾವೇಶವಿಲ್ಲದಿದ್ದರೆ ತಾನಾಗಿಯೇ ವಿಚಿತ್ರವಾದ ಕಾರ್ಯವನ್ನು ಉಂಟುಮಾಡುವುದಿಲ್ಲ ಎಂಬ ಕಾರಣದಿಂದ ಭಿನ್ನಭಿನ್ನ ಸಹಕಾರಿ ಸಂಬಂಧವನ್ನು ಅಂಗೀಕರಿಸಬೇಕು. ಬೌದ್ಧರೂ ಸಹ ಸಹಕಾರಿ ಅಪೇಕ್ಷೆಯನ್ನು ಅಂಗೀಕರಿಸಬೇಕಾಗುತ್ತದೆ. ಇಲ್ಲದಿದ್ದರೆ ಕುಸೂಲದಲ್ಲಿದ್ದ ಬೀಜವು ಏಕೆ ಅಂಕುರವನ್ನು ಉಂಟುಮಾಡುವುದಿಲ್ಲ ಎಂಬ ಪ್ರಶ್ನೆಗೆ ಅವರಲ್ಲಿ ಉತ್ತರವಿಲ್ಲ. ಅದೂ ಅಲ್ಲದೇ ಪ್ರತ್ಯಕ್ಷ ಸ್ಥಳದಲ್ಲಿ ಅವರು ಇಂದ್ರಿಯಕ್ಕೆ ಆಲೋಕಾದಿ ಸಹಕಾರಿ ಅಪೇಕ್ಷೆಯಿದೆ ಎಂದು ಒಪ್ಪಿದ್ದಾರೆ.

## ದೃಷ್ಟಕಾರಣ ಸಾಮಗ್ರಿಯೇ ಸಾಕು ಅದೃಷ್ಟವು ಬೇಡ ಎಂಬ ಶಂಕೆಗೆ ಸಮಾಧಾನ

**अस्तु दृष्टमेव सहकारिचक्रम्; किमपूर्वकल्पनयेति चेन्न – विश्ववृत्तितः ।**

ದೃಷ್ಟವಾದ ಕಾರಣಕಲಾಪದಿಂದಲೇ ಕಾರ್ಯದ ಉತ್ಪತ್ತಿಯಾಗುತ್ತದೆ. ಅಪೂರ್ವವನ್ನು ಕಲ್ಪನೆಮಾಡಬೇಕಾದ ಅಗತ್ಯವಿಲ್ಲ ಎಂಬ ಶಂಕೆಯು ಸರಿಯಲ್ಲ. ಅದೃಷ್ಟವು ಇಲ್ಲದಿದ್ದರೆ ವಿಶ್ವದ ಮಹಾಜನಗಳ ಪರಲೋಕಾದಿ ಸಾಧನ ಪ್ರವೃತ್ತಿಯು ಉಪಪನ್ನವಾಗುವುದಿಲ್ಲ. ಆದ್ದರಿಂದ ಅದೃಷ್ಟವನ್ನು ಕಾರಣವೆಂದು ಕಲ್ಪಿಸಬೇಕು.

## ಪರಲೋಕ ಸಾಧನೆಯು ನಿಷ್ಫಲವಲ್ಲ

**विफला विश्ववृत्तिर्नो न दुःखैकफलाऽपि वा ।**
**दृष्टलाभफला नापि विप्रलम्भोऽपि नेदृशः ।।८।।**

ವಿಶ್ವಮಹಾಜನರ ಪರಲೋಕಾದಿ ಸಾಧನಪ್ರವೃತ್ತಿಯು ನಿಷ್ಫಲವಾದುದಲ್ಲ. ದುಃಖಮಾತ್ರ ಫಲವುಳ್ಳದ್ದೂ ಅಲ್ಲ. ದೃಷ್ಟವಾದ ಲಾಭಾದಿ ಫಲವುಳ್ಳದ್ದೂ ಅಲ್ಲ. ಮತ್ತು ವಿಪ್ರಲಂಭವು ಈ ರೀತಿಯಾಗಿ ಇರುವುದಿಲ್ಲ.

ವಿಚಿತ್ರಕಾರಣಕಲಾಪವನ್ನು ಒಪ್ಪಿದರೂ ದೃಷ್ಟವಾದ ಸಹಕಾರಿಯಿಂದಲೇ ಎಲ್ಲವನ್ನೂ ನಿರ್ವಾಹ ಮಾಡಲುಬರುವಾಗ ಅದೃಷ್ಟವನ್ನು ಒಪ್ಪುವುದು ಬೇಡ ಎಂಬುದು ಸರಿಯಲ್ಲ. ಮಹಾಜನಗಳ ಪರಲೋಕಾದಿ ಸಾಧನಪ್ರವೃತ್ತಿಯಿಂದ ಅದೃಷ್ಟವು ಸಿದ್ಧವಾಗುತ್ತದೆ. ಅದು ಹೇಗೆಂದರೆ– ಈ ವಿಶ್ವಪ್ರವೃತ್ತಿಗೆ ಫಲವಿಲ್ಲವೇ ಅಥವಾ ಇದೆಯೇ? ಫಲವಿರುವುದಾದರೂ ದುಃಖಮಾತ್ರವೇ ಅದಕ್ಕೆ ಫಲವೋ ಅಥವಾ ಸುಖವು ಫಲವೋ? ಸುಖವು ಫಲವೆಂದು ಅಂಗೀಕರಿಸಿದರೂ ಅದು ದ್ರವ್ಯಾದಿ ಲಾಭಜನ್ಯವಾದ ಸುಖಫಲವೋ ಅಥವಾ ವಿಪ್ರಲಂಭ (ಮೋಸ ಮಾಡುವುದರಿಂದ ಉಂಟಾದ) ಸುಖಫಲವೋ ಅಥವಾ ವಿಲಕ್ಷಣವಾದ ಸುಖಫಲವುಳ್ಳದ್ದೋ? ಎಂಬ ಪ್ರಶ್ನೆಗಳಿವೆ.

**यदि हि पूर्वपूर्वभूतपरिणतिपरम्परामात्रमेवोत्तरोत्तर-निबन्धनम्, न परलोकार्थी कश्चिदिष्टापूर्तयोः प्रवर्तेत । न हि निष्फले दुःखैकफले वा कश्चिदेकोऽपि प्रेक्षापूर्वकारी घटेत; प्रागेव जगत् ।**

ಮೊದಲನೆಯದಾಗಿ ನಿಷ್ಫಲವಲ್ಲ.ಪೃಥಿವಿಯಲ್ಲಿ ಓಷಧಗಳು, ಓಷಧಿಗಳಿಂದ ಅನ್ನ, ಅನ್ನದಿಂದ ಪುರುಷ ಹೀಗೆ ದೃಷ್ಟವಾದ ಕಾರ್ಯಪರಂಪರೆಯನ್ನೇ ಸ್ವೀಕರಿಸುತ್ತೇವೆ. ಪರಲೋಕಾದಿಪ್ರವೃತ್ತಿಗಳಿಗೆ ಯಾವ ಪ್ರಯೋಜನವೂ ಕಂಡುಬರುವುದಿಲ್ಲ ಎಂದು ಹೇಳುವುದಾದರೆ ಪರಲೋಕವನ್ನು ಉದ್ದೇಶಿಸಿ ಯಾವನೂ ಯಾಗ ಹೋಮಾದಿ ಇಷ್ಟಗಳಲ್ಲಿಯೂ, ತಟಾಕ ನಿರ್ಮಾಣಾದಿ ಪೂರ್ತಗಳಲ್ಲಿಯೂ ಪ್ರವೃತ್ತಿಯನ್ನು ಮಾಡಲಾರ. ಮಂದನಾದರೂ ಪ್ರಯೋಜನವನ್ನು ಉದ್ದೇಶಿಸಿಯೇ ಪ್ರವೃತ್ತಿಮಾಡುತ್ತಾನೆ.

ಇನ್ನು ದುಃಖಮಾತ್ರ ಫಲವೆಂಬುದೂ ಸರಿಯಲ್ಲ. ಪರಲೋಕ ಸಾಧನದಲ್ಲಿ ಕಾಯಕ್ಲೇಶಾದಿ ದುಃಖವು ಇರುವುದಾದರೂ ಅದು ಪಾಕಾದಿಗಳಿಗೆ ನಾಂತರೀಯಕವಾದ (ಅವರ್ಜನೀಯವಾದ) ಧೂಮಪಾನಾದಿಗಳಂತೆ ಫಲವೇ ಅಲ್ಲ. ಮತ್ತು ಆಗಲೂ ದುಃಖಮಾತ್ರವೇ ಫಲವೆಂದು ಹೇಳಲು ಬರುವುದಿಲ್ಲ. ಆದ್ದರಿಂದ ಅಂತಹ ವಿಷಯದಲ್ಲಿ ವಿವೇಕಿಯಾದವನು ಯಾವನೂ ಪ್ರವೃತ್ತನಾಗಲಾರ. ಇನ್ನು ಸಾಮಾನ್ಯಜಗತ್ತಂತೂ ಎಂದೂ ಪ್ರವೃತ್ತವಾಗುವುದಿಲ್ಲ.

## ಲಾಭಾದಿಗಳು ವಿಶ್ವಪ್ರವೃತ್ತಿಯ ಫಲವಲ್ಲ

**लाभपूजाख्यात्यर्थमिति चेत् – लाभादय एव किन्निबन्धनाः? न हीयं प्रवृत्तिः स्वरूपत एव तद्धेतुः । यतो वानेन लब्धव्यं यो वैनं पूजयिष्यति, स किमर्थम्? ख्यात्यर्थमनुरागार्थं च ।**

ಇನ್ನು ಆ ಪ್ರವೃತ್ತಿಯು ಲಾಭ, ಪೂಜೆ (ಸನ್ಮಾನ) ಮತ್ತು ಕೀರ್ತಿಗಳಿಗಾಗಿ ಎಂಬ ಪಕ್ಷವೂ ಸರಿಯಲ್ಲ. ಏಕೆಂದರೆ ಕೃಷಿಗೂ ಮತ್ತು ಸಸ್ಯಗಳಿಗೂ ಕಾರ್ಯಕಾರಣಭಾವವು ಸಿದ್ಧವಾಗಿರುವಂತೆ ಯಾಗ ಮತ್ತು ಲಾಭಗಳಿಗೆ ಕಾರ್ಯಕಾರಣಭಾವವು ಸಿದ್ಧವಾಗಿಲ್ಲ. ಯಾಗವನ್ನು ಮಾಡುವುದರಿಂದಲೇ

ಸ್ವತಃ ಲಾಭವಾಗಲೀ, ಪೂಜೆಯಾಗಲೀ ಉಂಟಾಗುವುದಿಲ್ಲ. ಅವೆರಡಕ್ಕೂ ಇನ್ನೊಂದು ಪುರುಷನ ಅಪೇಕ್ಷೆಯಿರುವುದರಿಂದ ಕೇವಲ ಯಾಗದಿಂದ ಉಂಟಾಗಲಾರದು. ಹಾಗಾದರೆ ಇನ್ನೊಬ್ಬ ಪುರುಷನ ದ್ವಾರದಿಂದಲೇ ಯಾಗವು ಲಾಭಾದಿಜನಕ ಎಂದು ಹೇಳುವುದೂ ಸರಿಯಲ್ಲ. ಆ ಯಾವ ಇನ್ನೊಬ್ಬ ಪುರುಷನು ಯಾಗ ಮಾಡುವವನಿಗೆ ಏಕೆ ದಾನವನ್ನು ಕೊಡುತ್ತಾನೆ ಅಥವಾ ಪೂಜೆಯನ್ನು ಮಾಡುತ್ತಾನೆ? ಆದರಿಂದ ತನಗೆ ಏನೂ ಫಲವಿಲ್ಲದಿದ್ದರೆ ಸುಮ್ಮನೆ ಇರುತ್ತಾನೆ.

## 'ಜನಾನುರಾಗಪ್ರಭವಾ ಹಿ ಸಂಪದಃ'

**जनो दातरि मानयितरि च रज्यते । 'जनानुरागप्रभवा हि सम्पदः'। इति चेन्न । नीतिनर्मसचिवेष्वेव तदर्थं दानादिव्यवस्थापनात् ।**

ದಾನವನ್ನು ಕೊಟ್ಟರೆ ಕೀರ್ತಿಯೂ, ದಾನವನ್ನು ಸ್ವೀಕರಿಸುವವನಿಂದ ಪ್ರೀತಿಯೂ ಮತ್ತು ಆ ಪ್ರೀತಿಯಿಂದ ದಾನಪೂಜಾಫಲಗಳೂ ಉಂಟಾಗುತ್ತವೆ. ಆದ್ದರಿಂದ ಎಲ್ಲಾ ಕ್ರಿಯೆಗಳೂ ಲಾಭ, ಪೂಜೆ, ಜನಾನುರಾಗ ಮತ್ತು ಸಂಪತ್ತುಗಳಲ್ಲೇ ಪರ್ಯವಸಾನವನ್ನು ಹೊಂದುತ್ತವೆ ಎಂಬುದೂ ಸರಿಯಲ್ಲ. ರಾಜ್ಯದ ಅಧಿಕಾರವನ್ನು ಹೊತ್ತಿರುವ ನೀತಿ ಸಚಿವರಿಗೆ ಮತ್ತು ರಾಜನನ್ನು ಸಂತೋಷಪಡಿಸಲು ಮೀಸಲಾಗಿರುವ ನರ್ಮಸಚಿವರಿಗೆ ದಾನವನ್ನು ಕೊಡುವುದು ವ್ಯವಸ್ಥಿತವಾಗಿದೆ. ಅವರಿಗೆ ತನ್ನಲ್ಲಿ ಪ್ರೀತಿ ಉಂಟಾಗಲಿ ಎಂಬುದು ರಾಜನ ಉದ್ದೇಶ. ವನವಾಸಾದಿಗಳಾದ ತಪಸ್ವಿಗಳಿಗೆ ಕೊಡುವ ದಾನಕ್ಕೆ ಅಂತಹ ಉದ್ದೇಶವಿರಲು ಸಾಧ್ಯವಿಲ್ಲ.

## ತಪಸ್ವಿಗಳು ಮೋಸಗಾರರಲ್ಲ

**त्रैविद्यतपस्विनो धूर्तबकाः एवेति चेन्न – तेषां दृष्टसम्पदं प्रत्यनुपयोगात् ।**

ಆ ಧನದಿಂದ ತಪಸ್ವಿಗಳು ಯಾಗಗಳನ್ನು ಮಾಡುವುದರಿಂದ ಖ್ಯಾತಿವುಂಟಾಗುತ್ತದೆ ಎಂಬುದೂ ಸರಿಯಲ್ಲ. ಏಕೆಂದರೆ ಖ್ಯಾತಿಯು ಸ್ವಯಂ ಫಲವಲ್ಲ. ಆದ್ದರಿಂದ ದೃಷ್ಟವಾದ ಸಂಪತ್ತಿನ ಲಾಭವನ್ನೇ ಫಲವೆಂದು ಹೇಳಬೇಕು. ತಪಸ್ವಿಗಳಿಗೆ ದಾನವನ್ನು ಕೊಡುವುದರಿಂದ ಅಂತಹ ದೃಷ್ಟವಾದ ಸಂಪತ್ತು ಯಾರಿಗೂ ಬರುವುದಿಲ್ಲ.

ಇನ್ನು ತಪಸ್ವಿಗಳೆಲ್ಲರೂ ಮೋಸಗಾರರು ಮತ್ತು ಧನಕಾಮನೆಯುಳ್ಳವರು. ಅವರು ಹೇಗೋ ಪಟ್ಟಣಕ್ಕೆ ಬಂದು ದಾನವನ್ನು ತೆಗೆದುಕೊಳ್ಳುತ್ತಾರೆ ಎನ್ನುವುದೂ ಸರಿಯಲ್ಲ. ಅವರನ್ನು ಧೂರ್ತರೆಂದು ಒಪ್ಪಿದರೂ ವಿವೇಕಿಗಳಾದ ಪುರವಾಸಿಗಳು ಆ ದಾನಕೊಡುವುದರಿಂದ ತಮಗೆ ಏನೂ ಫಲವಿಲ್ಲದಿರುವುದರಿಂದ ಅಂತಹ ದಾನದಲ್ಲಿ ಪ್ರವೃತ್ತರಾಗಲಾರರು.

ದಾನವನ್ನು ಕೊಡದಿದ್ದರೆ ತಪಸ್ವಿಗಳು ಅನರ್ಥವನ್ನುಂಟುಮಾಡುತ್ತಾರೆಂದು ವಿವೇಕಿಗಳು ದಾನವನ್ನು ಕೊಡುತ್ತಾರೆ ಎಂಬ ಸಮಾಧಾನವೂ ಸರಿಯಲ್ಲ. ಏಕೆಂದರೆ ಈ ದಾನದಿಂದ ತಪಸ್ವಿಗಳಿಗೆ ಆಗಬೇಕಾದ ಯಾವ ದೃಷ್ಟಪ್ರಯೋಜನವೂ ಇಲ್ಲ. ಅವರು ಆ ಧನವನ್ನೆಲ್ಲಾ ಯಾಗದಲ್ಲಿ ವ್ಯಯವನ್ನೇ ಮಾಡುತ್ತಾರೆ. ತಾವು ಸ್ವತಃ ವಸ್ತ್ರಭೂಷಣದ ಆಡಂಬರಕ್ಕೆ ಹೋಗದೆ ನಾರುಮಡಿಯನ್ನುಟ್ಟು ಕಂದಮೂಲಫಲಗಳಿಂದ ಜೀವಿಸುತ್ತಾರೆ. ಆದ್ದರಿಂದ ದಾತೃಗಳಾದ ವಿವೇಕಿಗಳಿಗಾಗಲೀ, ಪ್ರತಿಗೃಹೀತೃಗಳಾದ ತಪಸ್ವಿಗಳಿಗಾಗಲೀ ದೃಷ್ಟವಾದ ಸಂಪತ್ತಿಗೆ ಉಪಯೋಗವಿಲ್ಲವಾದ್ದರಿಂದ ದಾನಪ್ರಸಕ್ತಿಯೇ ಉಂಟಾಗುವುದಿಲ್ಲ.

## ಸುಖಪ್ರಾಪ್ತಿಗಾಗಿ ಪ್ರವೃತ್ತಿ ಎಂಬುದರ ನಿರಾಕರಣೆ

**सुखार्थं तथा करोतीति चेन्न – नास्तिकैरपि तथा करणप्रसङ्गात्, सम्भोगवत् । लोकव्यवहारसिद्धत्वादफलमपि क्रियते, वेदव्यवहारसिद्धत्वात् सन्ध्योपासनवदिति चेत् –**

ಸುಖದ ಪ್ರಾಪ್ತಿಗಾಗಿ ದಾನವನ್ನು ಕೊಡುತ್ತಾರೆ. ಸುಖಪ್ರಾಪ್ತಿಯೇ ಆ ವಿಶ್ವಪ್ರವೃತ್ತಿಯ ಪ್ರಯೋಜನ ಎಂಬುದೂ ಸರಿಯಲ್ಲ. ಹಾಗಾಗುವುದಿದ್ದರೆ ನಾಸ್ತಿಕರೂ ಸಹ ಸುಖಪ್ರಾಪ್ತಿಗಾಗಿ ಸಂಭೋಗವನ್ನು ಮಾಡಿದಂತೆ ಪರಲೋಕ ಸಾಧನವನ್ನೂ ಆಚರಿಸಬೇಕಾದೀತು. 'ಫಲವಿಲ್ಲದಿದ್ದರೆ ಬೇಡ ನಿಷ್ಫಲವಾದುದರಲ್ಲಿಯೇ ಪ್ರವೃತ್ತಿ ಉಂಟಾಗುತ್ತದೆ. ಪ್ರವೃತ್ತಿಯನ್ನು ಕುರಿತು ಕಾರ್ಯತಾಜ್ಞಾನವು ಕಾರಣ. ಇಷ್ಟ ಸಾಧನತ್ವ ಜ್ಞಾನವಿಲ್ಲದಿದ್ದರೂ ಕಾರ್ಯತ್ವಜ್ಞಾನದಿಂದ ಪ್ರವೃತ್ತಿ ಉಂಟಾಗುತ್ತದೆ. ಕಾರ್ಯತಾ ಜ್ಞಾನವು ಇಷ್ಟಸಾಧನತ್ವ ಜ್ಞಾನದಿಂದಲೂ ಬರುತ್ತದೆ. ಬೇರೆಯ ಪ್ರಮಾಣದಿಂದಲೂ ಉಂಟಾಗುತ್ತದೆ. ಆದ್ದರಿಂದಲೇ ಸಂಧ್ಯೋಪಾಸನೆಯಲ್ಲಿ ಇಷ್ಟಸಾಧನತಜ್ಞಾನವಿಲ್ಲದಿದ್ದರೂ ವೇದದಿಂದ ಕಾರ್ಯತ್ವವು ತಿಳಿಯುವುದರಿಂದ ಪ್ರವೃತ್ತಿಯನ್ನು ಮಾಡುತ್ತಾರೆ. ಅದರಂತೆ

ಲೋಕಾಚಾರ ಬಲದಿಂದಲೇ ಪರಲೋಕ ಸಾಧನದಲ್ಲಿ ಕಾರ್ಯತ್ವಜ್ಞಾನವು ಉಂಟಾಗಿ ಪ್ರವೃತ್ತಿಯು ಉಂಟಾಗುತ್ತದೆ' ಎಂಬ ಶಂಕೆಯೂ ಸರಿಯಲ್ಲ.

**गुरुमेतत्, न गुरोर्मतम् । ततो नेदमनवसर एव वक्तुमुचितम्।**

ಇದು ಮೀಮಾಂಸಕನಾದ ಪ್ರಾಭಾಕರನ ಮತವೇ ಹೊರತಾಗಿ ನಮ್ಮ ಗುರುಗಳ ಮತವಲ್ಲ (ಯಾವ ಪೂಜ್ಯರ ಮತವೂ ಅಲ್ಲ). ಯಾವ ಆಚಾರ್ಯರು ನಿಷ್ಫಲವಾದುದರಲ್ಲಿಯೂ ಪ್ರವೃತ್ತಿಯನ್ನು ಮಾಡು ಎಂದು ಹೇಳಲು ಸಾಧ್ಯ? ಆದ್ದರಿಂದ ವೇದವು ಕಾರ್ಯತ್ವವನ್ನು ಹೇಳಿದಂತೆ ಇಷ್ಟಸಾಧನತ್ವವನ್ನೂ ಹೇಳುವುದರಿಂದಲೇ ಪ್ರವೃತ್ತಿ ಉಂಟಾಗುತ್ತದೆ. ನಿತ್ಯನೈಮಿತ್ತಿಕ ಕರ್ಮಗಳಿಗೆ ಪಾಪಕ್ಷಯವು ಕಂಠತಃ ಹೇಳಲ್ಪಟ್ಟಿದೆ. ಆದ್ದರಿಂದ ಪ್ರಾಭಾಕರರ ಪಕ್ಷವನ್ನು ಅವಲಂಬಿಸಿ ಮಾಡುವ ಈ ಆಕ್ಷೇಪವನ್ನು ನಿಷ್ಫಲ ಎಂಬ ಪ್ರಥಮ ಪಕ್ಷದಲ್ಲಿ ಮಾಡಬೇಕೇ ಹೊರತು ಫಲವನ್ನು ಅಂಗೀಕರಿಸುವ ಪಕ್ಷದಲ್ಲಿ ಮಾಡಬಾರದು.

## ಪ್ರತಾರಣವೂ ವಿಶ್ವಪ್ರವೃತ್ತಿಗೆ ಫಲವಲ್ಲ

**वृद्धैर्विप्रलब्धत्वाद्बालानामिति चेन्न – वृद्धानामपि प्रवृत्तेः। न च विप्रलम्भकाः स्वात्मानमपि विप्रलम्भन्ते । तेऽपि वृद्धतरैरित्येवमनादिरिति चेत् – न तर्हि विप्रलिप्सुः कश्चिदत्र, यतः प्रतारणशङ्का स्यात् ।**

ಹಿರಿಯರು ಮೋಸಮಾಡಿರುವುದರಿಂದ ಬಾಲಕರೂ ಹಾಗೆಯೇ ಅನುಷ್ಠಾನ ಮಾಡುತ್ತಾರೆ ಎಂಬುದೂ ಸರಿಯಲ್ಲ. ಏಕೆಂದರೆ ಹಿರಿಯರೂ ಅನುಷ್ಠಾನವನ್ನು ಮಾಡುತ್ತಾರೆ. ಮೋಸಮಾಡುವವರು ತಮಗೆ ತಾವೇ ಮೋಸಮಾಡಿಕೊಳ್ಳುವುದಿಲ್ಲವಷ್ಟೆ? ಹಿರಿಯರು ಅವರಿಗಿಂತ ಹಿರಿಯರಿಂದ ಮೋಸಕ್ಕೆ ಒಳಗಾಗಿದ್ದಾರೆ. ಹೀಗೆ ಇದು ಅನಾದಿ ಕಾಲದಿಂದ ನಡೆದಿದೆ ಎನ್ನುವುದಾದರೆ ಹಾಗಾದರೆ ಈಗ ಯಾರೂ ವಿಪ್ರಲಂಭಕರು (ಮೋಸಗಾರರು) ಇಲ್ಲ. ಆದ್ದರಿಂದ ಅವರಲ್ಲಿ ಮೋಸದ ಶಂಕೆಯು ಬರಲು ಸಾಧ್ಯವಿಲ್ಲ. ಏಕೆಂದರೆ ಎಲ್ಲರೂ ಹಿಂದಿನವರ ಉಪದೇಶದಂತೆಯೇ ಮಾಡಿಕೊಂಡು ಬಂದಿದ್ದಾರೆ. ಹಾಗಲ್ಲದೇ ಯಾವನೋ ಒಬ್ಬನು ಒಂದು

ಉಪದೇಶವನ್ನು ಸೃಷ್ಟಿಮಾಡಿ ತಾನು ಆಚರಿಸದಿದ್ದರೆ ಯಾರೂ ಆಚರಿಸುವುದಿಲ್ಲವೆಂದು ತಿಳಿದು ತಾನೂ ಆಚರಿಸಿ ಉಳಿದವರನ್ನು ಮೋಸಗೊಳಿಸಿದ್ದಾನೆ.

## ನೀನೊಬ್ಬನೇ ಲೋಕೋತ್ತರ ಪ್ರಜ್ಞೆಯುಳ್ಳವನೆಂದು ಹೇಗೆ ನಿರ್ಧರಿಸುವಿ

**इदम्प्रथम एव कश्चिदनुष्ठायापि धूर्तः परान् अनुष्ठापयतीति चेत् – किमसौ सर्वलोकोत्तर एव; यः सर्वस्वदक्षिणया सर्वबन्धुपरित्यागेन सर्वसुखविमुखो ब्रह्मचर्येण तपसा श्रद्धया वा केवलपरवञ्चनकुतूहली यावज्जीवमात्मानमवसादयति । कथं चैनमेकं प्रेक्षापूर्वकारिणोऽप्यनुविदध्युः? केन वा चिह्नेनायमीदृशस्त्वया लोकोत्तरप्रज्ञेन प्रतारक इति निर्णीतः?**

ಆಗಿನಿಂದಲೇ ಅನಾದಿಯಲ್ಲದಿದ್ದರೂ ಈ ಪ್ರವಾಹವು ಆರಂಭವಾಗಿದೆ ಎಂದು ಹೇಳುವುದಾದರೆ ಆ ಪ್ರತಾರಕನು ಸರ್ವಲೋಕ ವಿಲಕ್ಷಣನೆಂದು ನೀನು ಹೇಗೆ ಊಹಿಸಿದೆ ಎಂದು ಪ್ರಶ್ನೆ. ಏಕೆಂದರೆ ಅವನು ಯಾಗವನ್ನು ಮಾಡಿ ಸರ್ವಸ್ವ ದಕ್ಷಿಣೆಯನ್ನು ಕೊಟ್ಟು, ಎಲ್ಲ ಬಂಧುಗಳನ್ನೂ ಪರಿತ್ಯಾಗಮಾಡಿ, ಎಲ್ಲ ಸುಖಗಳನ್ನೂ ಬಿಟ್ಟು ಬ್ರಹ್ಮಚರ್ಯ, ತಪಸ್ಸು ಮತ್ತು ಶ್ರದ್ಧೆಗಳಿಂದ ತನ್ನನ್ನು ಬದುಕಿರುವವರೆಗೂ ದುಃಖಕ್ಕೆ ಈಡು ಮಾಡಿಕೊಂಡು ಕೇವಲ ಇನ್ನೊಬ್ಬರನ್ನು ಮೋಸಮಾಡುವ ಕುತೂಹಲ ಉಳ್ಳವನಾಗಬೇಕಷ್ಟೆ! ಲೋಕದಲ್ಲಿ ಯಾವನೂ ಇಂತಹ ಕೆಲಸವನ್ನು ಮಾಡುವುದಿಲ್ಲ. ಇನ್ನು ಇಂತಹ ಪ್ರತಾರಕನನ್ನು ವಿವೇಕಿಗಳೂ ಕೂಡ ಹೇಗೆ ಅನುಸರಿಸುತ್ತಾರೆ? ಲೋಕೋತ್ತರ ಪ್ರಜ್ಞೆಯುಳ್ಳ ನೀನಾದರೂ ಅವನನ್ನು ಹೇಗೆ ಪ್ರತಾರಕನೆಂದು ನಿರ್ಣಯಿಸಿದ್ದೀಯೆ?

## ಬೇರೊಬ್ಬರನ್ನು ಮೋಸ ಮಾಡುವುದರಲ್ಲೇನು ಸುಖ ?

**न ह्येतावतो दुःखराशेः प्रतारणसुखं गरीयः यतः पाखण्डाभिमतेष्वप्येवं दृश्यत इति चेन्न । हेतुदर्शनादर्शनाभ्यां विशेषात् ।**

ಪರಲೋಕಸಾಧನದಲ್ಲಿ ಉಂಟಾಗುವ ದುಃಖರಾಶಿಗಿಂತ ಇನ್ನೊಬ್ಬರನ್ನು ಮೋಸಮಾಡುವುದರಿಂದ ಉಂಟಾಗುವ ಸುಖವು ದೊಡ್ಡದಲ್ಲವಷ್ಟೆ? ಪಾಖಂಡಿಗಳಾದ ಬೌದ್ಧರೂ ಮತ್ತು ಜೈನರೂ ಸಹ ಹೀಗೆ 'ಪ್ರತಾರಣವನ್ನು ಮಾಡುವುದು ಕಂಡಿದೆ. ಆದ್ದರಿಂದ ಬೇರೆ ಕಡೆಗಳಲ್ಲಿಯೂ ಹಾಗೆಯೇ ಅನುಮಾನ ಮಾಡುತ್ತೇವೆ. ಇಲ್ಲದಿದ್ದರೆ ಇದೇ ಯುಕ್ತಿಯನ್ನು ಹೇಳಿ ಬೌದ್ಧಾದಿಗಳ ಆಚಾರವು ಪ್ರಮಾಣಿಕವಾದುದು ಎಂದು ಒಪ್ಪಬೇಕಾಗುತ್ತದೆ ಎಂದು ಹೇಳುವುದೂ ಸರಿಯಲ್ಲ.

ಆಚಾರವನ್ನು ಬಿಟ್ಟರೆ ಕರ್ಮಲಾಘವವೇ ಉಂಟಾಗುತ್ತದೆ' ಎಂದು ಬೌದ್ಧರಿಗೆ ಉಪದೇಶದಲ್ಲಿ ಅಪ್ರಾಮಾಣಿಕತೆಯನ್ನು ಸಾಧನೆ ಮಾಡಲು ಒಂದು ಹೇತುವು ದೊರಕುತ್ತದೆ. ಇಲ್ಲಿ ವೈದಿಕ ಆಚಾರದಲ್ಲಿ ಅಂತಹ ಹೇತುವು ಇಲ್ಲ ಎಂಬುದೇ ನಿರ್ಣಾಯಕವಾದುದು.

## ಅದೃಷ್ಟಫಲವು ಸಿದ್ಧವಾಯಿತು

**अनादौ चैवं भूतेऽनुष्ठाने प्रतायमाने प्रकारान्तरमाश्रित्यापि बहुवित्तव्ययायासोपदेशमात्रेण प्रतारणा स्यात्; नत्वनुष्ठानागोचरेण कर्मणा । अन्यथा प्रमाणविरोधमन्तरेण पाखण्डित्वप्रसिद्धिरपि न स्यात् ।**

ಮತ್ತು ಹಿಂದೆನಡೆದ ಒಂದು ಕರ್ಮವನ್ನು ಮಾಡಿ ಅದರಿಂದ ಇನ್ನೊಬ್ಬರನ್ನು ಪ್ರತಾರಣೆ ಮಾಡಬೇಕು. ಅನಾದಿಯಿಂದ ಒಂದು ಕರ್ಮಾನುಷ್ಠಾನವೇ ನಡೆದುಕೊಂಡು ಬರದಿದ್ದರೆ ಅಂತಹ ಕರ್ಮವನ್ನು ಉಪದೇಶಮಾಡಿ ಪ್ರತಾರಣ ಮಾಡಲು ಸಾಧ್ಯವಿಲ್ಲ. ಅಥವಾ ಪ್ರತಾರಣ ಮಾಡುವವನು ಕೇವಲ ಉಪದೇಶದಿಂದ ಪ್ರತಾರಣೆ ಮಾಡಬಹುದೇ ಹೊರತು ತನ್ನ ಅನುಷ್ಠಾನದಿಂದ ಯಾವನೂ ಪ್ರತಾರಣ ಮಾಡುವುದಿಲ್ಲ.

ಬೌದ್ಧರಿಗೆ ಪಾಖಂಡಿಗಳೆಂದು ಪ್ರಸಿದ್ಧಿಯಿದೆ. ಪ್ರಮಾಣ ವಿರುದ್ಧವಾದುದರ ಪ್ರತಿಪಾದನೆ ಮಾಡುವವರೇ ಪಾಖಂಡಿಗಳು ಎಂಬುದು ಪ್ರಸಿದ್ಧವಾಗಿದೆ. ಆದ್ದರಿಂದ ಅವರ ಆಚಾರವು ಅಪ್ರಾಮಾಣಿಕ ಮತ್ತು ಪ್ರತಾರಕವೆಂದು ಸಿದ್ಧವಾಗುತ್ತದೆ. ವೈದಿಕ ಆಚಾರದಲ್ಲಿ ಮಾತ್ರ ಬೇರೆಯ

ಫಲವನ್ನು ಊಹಿಸಲು ಸಾಧ್ಯವಿಲ್ಲದಿರುವುದರಿಂದ ಇಲ್ಲಿ ವಿಲಕ್ಷಣವಾದ ಅದೃಷ್ಟರೂಪವಾದ ಫಲವೇ ಸಿದ್ಧವಾಗುತ್ತದೆ.

## ದಾನಾದಿ ವ್ಯತಿರಿಕ್ತವಾದ ಅಪೂರ್ವವೇ ಜಗದ್ವೈಚಿತ್ರ್ಯಕ್ಕೆ ಕಾರಣ

**चिरध्वस्तं फलायाऽलं न कर्मातिशयं विना ।**
**सम्भोगो निर्विशेषाणां न भूतैः संस्कृतैरपि ।।९।।**

ಬಹಳ ಹಿಂದೆಯೇ ನಷ್ಟವಾದ ಕರ್ಮವು ತಾನು ಒಂದು ಅತಿಶಯವನ್ನು ಉಂಟುಮಾಡಿರದಿದ್ದರೆ ಫಲಜನಕವಾಗಲು ಸಾಧ್ಯವಿಲ್ಲ. ಆತ್ಮನಲ್ಲಿ ಅತಿಶಯವನ್ನು ಒಪ್ಪದಿದ್ದರೆ ಭೂತಗಳು ಸಂಸ್ಕಾರ ವಿಶಿಷ್ಟವಾದರೂ ಪ್ರತಿಯೊಬ್ಬ ಆತ್ಮರಲ್ಲಿ ನಿಯತವಾದ ಭೋಗದ ವ್ಯವಸ್ಥೆಯನ್ನು ಮಾಡಿಕೊಡುವುದಿಲ್ಲ.

**अस्तु दानाध्ययनादिरेव विचित्रो हेतुर्जगद्वैचित्र्यस्येति चेन्न । क्षणिकत्वात् । अपेक्षितस्य कालान्तरभावित्वात् । तस्मादस्त्यतिशयः कश्चित् ।**

ವಿಶ್ವಪ್ರವೃತ್ತಿಗೆ ಸಫಲತ್ವವು ಇರಲಿ. ಆದರೂ ದಾನಾಧ್ಯಯನಾದಿಗಳಿಂದಲೇ ಅವುಗಳ ಫಲವು ಉಂಟಾಗಬಹುದಾದ್ದರಿಂದ ಅದೃಷ್ಟವನ್ನು ಏಕೆ ಕಲ್ಪನೆಮಾಡಬೇಕು ಎಂದು ಪ್ರಶ್ನೆ ಮಾಡಿದರೆ, ದಾನಾದಿಗಳು ಶೀಘ್ರವಾಗಿ ನಾಶವನ್ನು ಹೊಂದುತ್ತವೆ. ಫಲವು ಕಾಲಾಂತರಭಾವಿಯಾದುದು. ಆದ್ದರಿಂದ ದಾನಾದಿಗಳಿಗೆ ಮಧ್ಯದಲ್ಲಿ ಒಂದು ವ್ಯಾಪಾರವನ್ನು ಕಲ್ಪನೆಮಾಡಬೇಕು. ಬಹಳ ಹಿಂದೆಯೇ ನಷ್ಟವಾದ ಕರ್ಮವು ಸ್ವಜನ್ಯವಾದ ಅದೃಷ್ಟವಿಲ್ಲದೆ ಫಲವನ್ನು ಉಂಟುಮಾಡಲಾರದು. ಆದ್ದರಿಂದ ಅದೃಷ್ಟವನ್ನು ಕಲ್ಪನೆ ಮಾಡಬೇಕು ಎಂದು ಉತ್ತರ.

ಅದೃಷ್ಟವನ್ನು ಕಲ್ಪನೆಮಾಡೋಣ. ಅದನ್ನು ಸಂಸ್ಕೃತವಾದ ಭೂತ (ಭೌತಿಕಪದಾರ್ಥ)ಗಳಲ್ಲಿಯೇ ಕಲ್ಪನೆಮಾಡೋಣ ಎಂಬ ಶಂಕೆಯು ಸರಿಯಲ್ಲ. ಮೀಮಾಂಸಕ ಮತ್ತು ವೈಶೇಷಿಕ ಎರಡು ಮತಗಳಲ್ಲಿಯೂ ಆತ್ಮನು ನಿರ್ವಿಶೇಷನಾದುದರಿಂದ ಭೂತಗಳಲ್ಲಿ ಅತಿಶಯವನ್ನು ಒಪ್ಪಿದರೂ

ಚೈತ್ರನ ಭೋಗವು ಮೈತ್ರನಿಗೆ ಇಲ್ಲ, ಮೈತ್ರನ ಭೋಗವು ಚೈತ್ರನಿಗೆ ಇಲ್ಲ ಎಂಬ ವ್ಯವಸ್ಥೆಯನ್ನು ಮಾಡಲು ಸಾಧ್ಯವಿಲ್ಲ. ಆದ್ದರಿಂದ ಪ್ರತಿ ಆತ್ಮನಲ್ಲಿರುವ ಭೋಗವು ಭಿನ್ನಭಿನ್ನವಾಗಿರುವುದರಿಂದ ಆತ್ಮನಲ್ಲಿಯೇ ಅದೃಷ್ಟರೂಪವಾದ ಅತಿಶಯವನ್ನು ಕಲ್ಪನೆಮಾಡಬೇಕು.

**ईदृशान्येवैतानि स्वहेतुबलाऽऽयातानि, येन नियतभोगसाधनानीति चेत्, तदिदममीषामतीन्द्रियं रूपं सहकारिभेदो वा? न तावत् ऐन्द्रियकस्यातीन्द्रियं रूपम्, व्याघातात् । द्वितीये त्वपूर्वसिद्धिः ।**

ಯಾವ ಅತಿಶಯದಿಂದ ಭೂತಗಳು ನಿಯತಭೋಗಸಾಧನ ಆಗುತ್ತವೆಯೋ ಅಂತಹ ಅತಿಶಯವುಳ್ಳವುಗಳಾಗಿಯೇ ಭೂತಗಳು ತಮ್ಮ ಕಾರಣಗಳಿಂದ ಹುಟ್ಟುತ್ತವೆ ಎಂದು ಶಂಕೆಮಾಡುವುದಾದರೆ ಈ ಅತೀಂದ್ರಿಯವಾದ ಅತಿಶಯವು ಕಾರಣ ಮತ್ತು ಕಾರಣತಾವಚ್ಛೇದಕ ಜಾತಿ ಇದರ ಅನ್ಯತರ ರೂಪವೋ ಅಥವಾ ಭೂತಗಳಿಗೆ ಸಹಕಾರಿರೂಪವೋ ಎಂದು ಪ್ರಶ್ನೆ.

ಮೊದಲನೆಯ ಕಲ್ಪವನ್ನು ಅಂಗೀಕರಿಸಲು ಸಾಧ್ಯವಿಲ್ಲ. ಭೂತಗಳು ಇಂದ್ರಿಯಗ್ರಾಹ್ಯವಾದ್ದರಿಂದ ಅವುಗಳಲ್ಲಿರುವ ಅತಿಶಯವು ಅತೀಂದ್ರಿಯವಾಗಲಾರದು. ಎರಡನೆಯ ಪಕ್ಷದಲ್ಲಿ ಅನ್ಯನಿಷ್ಠವಾದ ಅತಿಶಯವು ಆತ್ಮನಿಷ್ಠವಾದ ಭೋಗವೈಚಿತ್ರ್ಯರೂಪಕಾರ್ಯಕ್ಕೆ ಸಹಕಾರಿಯಾಗಲು ಸಾಧ್ಯವಿಲ್ಲವಾದ್ದರಿಂದ ಅದೃಷ್ಟವನ್ನು ಆತ್ಮನಿಷ್ಠವೆಂದೇ ಅಂಗೀಕರಿಸಬೇಕು.

### ಅಪೂರ್ವವು ಭೂತಧರ್ಮ ಎಂಬ ಶಂಕೆ ಮತ್ತು ಶಕ್ತಿಯು ಪದಾರ್ಥಾಂತರ ಎಂಬ ಶಂಕೆ

**सिद्ध्यतु भूतधर्म एव गुरुत्वादिवदतीन्द्रियः । अवश्यं तथाऽप्येतदङ्गीकरणीयम् । कथमन्यथा मन्त्रादिभिः प्रतिबन्धः। तथाहि – करतलानलसंयोगात् यादृशादेव दाहो दृष्टः, तादृशादेव मन्त्रादिप्रतिबन्धे सति दाहो न जायते; असति तु जायते । तत्र न दृष्टवैगुण्यमुपलभामहे ।**

ಈ ಕರ್ಮಜನ್ಯವಾದ ಅತಿಶಯವು ಭೂತಗಳಲ್ಲಿಯೇ ಇರಲಿ. ಭೂತಗಳಲ್ಲಿರುವ ಗುರುತ್ವ ಮತ್ತು ಶಕ್ತಿಗಳು ಹೇಗೆ ಅತೀಂದ್ರಿಯವೋ ಅದರಂತೆ ಈ ಅದೃಷ್ಟವೂ ಅತೀಂದ್ರಿಯವಾಗಲಿ. ಯದ್ಯಪಿ ಭೂತವು ಸರಿಯಾದ ದೃಷ್ಟಾಂತವಲ್ಲ. ಏಕೆಂದರೆ ಅದು ಅವಯವಗುಣ ಮಾತ್ರ ಜನ್ಯವಾದುದು ಮತ್ತು ಯಾವದಾಶ್ರಯ ಭಾವಿವಾದುದು. (ಆಶ್ರಯವಿರುವವರೆಗೂ ಇರುವಂತಹದು) ಅದೃಷ್ಟವು ಅವಯವಗುಣಜನ್ಯವೂ ಅಲ್ಲ ಮತ್ತು ಯಾವಿದಾತ್ಮಭಾವವೂ ಅಲ್ಲ. ಆದರೂ ಶಕ್ತಿಯು ಸರಿಯಾದ ದೃಷ್ಟಾಂತವಾಗುತ್ತದೆ. ಆದ್ದರಿಂದ ಮಂತ್ರಾದಿಗಳಿಂದ ಉಂಟಾಗುವ ದಾಹಪ್ರತಿಬಂಧದ ಅನ್ಯಥಾನುಪಪತ್ತಿಯಿಂದ ನೀನಾದರೂ ಅಗ್ನಿಯಲ್ಲಿ ಶಕ್ತಿಯನ್ನು ಸ್ವೀಕಾರಮಾಡುತ್ತೀಯೆ. ಅದರಂತೆ ನಾವು ಅಗ್ನಿಯಲ್ಲಿಯೇ ಅದೃಷ್ಟವನ್ನು ಕಲ್ಪನೆಮಾಡುತ್ತೇವೆ. ಅಲ್ಲಿಯೂ ಕೂಡ ಶಕ್ತಿಯನ್ನು ಸ್ವೀಕಾರಮಾಡದೆ ಕೇವಲ ಅದೃಷ್ಟರೂಪವಾದ ಕಾರಣವಿಲ್ಲದಿರುವುದರಿಂದಲೇ ದಾಹವು ಉಂಟಾಗುವುದಿಲ್ಲ ಎಂದು ಹೇಳಲು ಬರುವುದಿಲ್ಲ.

## ಮಣ್ಯಭಾವ ಕಾರಣವೆಂದರೆ ವ್ಯಭಿಚಾರ

**नापि दृष्टसाद्गुण्येऽदृष्टवैगुण्यं सम्भावनीयम्; तस्यैतावन्मात्रार्थत्वात् । अन्यथा, कर्मण्यपि विभागः कदाचिन्न जायेत । नच प्रतिबन्धकाभावविशिष्टा सामग्री कारणम्; अभावस्याकारणत्वात् । तुच्छो ह्यसौ । प्रतिबन्धकोत्तम्भकप्रयोगकाले च तेन विनाऽपि कार्योत्पत्तेः ।**

ಏಕೆಂದರೆ ಅದೃಷ್ಟವು ಸಕಲದೃಷ್ಟಕಾರಣಗಳ ಸಮುದಾಯವನ್ನು ಕಲ್ಪಿಸಿಕೊಡುವುದರಿಂದ ಎಲ್ಲಾ ದೃಷ್ಟಕಾರಣಗಳ ಸಮುದಾಯವು ಇರುವಾಗ ದಾಹಾಭಾವವನ್ನು ಉಪಪಾದನೆ ಮಾಡಲು ಬರುವುದಿಲ್ಲ. ಇಲ್ಲದಿದ್ದರೆ ಕರ್ಮವಿದ್ದರೂ ಕರ್ಮಜನ್ಯವಾದ ವಿಭಾಗವು ಒಮ್ಮೊಮ್ಮೆ ಇಲ್ಲದೇ ಹೋಗಲಿ ಎಂಬ ಆಪತ್ತಿಯು ಬರುತ್ತದೆ.

ಇನ್ನು ಮಣಿಯ ಅಭಾವವೇ ಕಾರಣವೆಂದು ಹೇಳುವುದಕ್ಕೆ ಆಗುವುದಿಲ್ಲ. ಏಕೆಂದರೆ ಅಭಾವವು ತುಚ್ಛವಸ್ತುವಾದುದರಿಂದ ಅದು ಯಾವುದಕ್ಕೂ ಕಾರಣವೇ ಅಲ್ಲ ಮತ್ತು ಪ್ರತಿಬಂಧಕ ಮತ್ತು

ಉತ್ತೇಜಕಗಳು ಎರಡೂ ಇರುವಾಗ ದಾಹವುಂಟಾಗುವುದರಿಂದ ದಾಹವನ್ನು ಕುರಿತು ಮಣಿಯ ಅಭಾವವು ಕಾರಣ ಎಂದು ಹೇಳಿದರೆ ವ್ಯಭಿಚಾರವು ಉಂಟಾಗುತ್ತದೆ.

## ಅನ್ಯಥಾನುಪಪತ್ತಿಯಿಂದ ಶಕ್ತಿಸಮರ್ಥನೆ

**प्राक्प्रध्वंसादिविकल्पेन चानियतहेतुकत्वापातात् । अकिञ्चित्करस्य प्रतिबन्धकत्वायोगात्, किञ्चित्करत्वे चातीन्द्रियशक्तेः स्वीकारात् ।**

ಇನ್ನು ಮಣಿಯ ಅಭಾವ ಕಾರಣವೆಂದು ಹೇಳಿದರೆ ಅದು ಪ್ರಾಗಭಾವ, ಪ್ರಧ್ವಂಸ ಅಥವಾ ಅತ್ಯಂತಾಭಾವಗಳಾಗಬೇಕು. ಮೂರೂ ಪ್ರತ್ಯೇಕವಾಗಿ ದಾಹವನ್ನು ಕುರಿತು ಕಾರಣವೆಂದು ಹೇಳಿದರೆ ಒಂದು ಅಭಾವವು ಇರುವಾಗ ಇನ್ನೊಂದು ಅಭಾವವು ಇಲ್ಲದಿರುವುದರಿಂದ ಕಾರ್ಯಕಾರಣಭಾವಕ್ಕೆ ವ್ಯಭಿಚಾರವು ಬರುತ್ತದೆ ಮತ್ತು ಮಣಿಯು ಪ್ರತಿಬಂಧರೂಪವಾದ ಕಿಂಚಿತ್ ಕಾರ್ಯವನ್ನು ಉಂಟುಮಾಡುತ್ತದೆಯೋ ಅಥವಾ ಇಲ್ಲವೋ ಎಂದು ಪ್ರಶ್ನೆ. ಮಾಡುವುದಿಲ್ಲವೆಂದು ಹೇಳಿದರೆ ಮಣಿಗೆ ಪ್ರತಿಬಂಧಕತ್ವವೇ ಕೂಡುವುದಿಲ್ಲ. ಮಾಡುತ್ತದೆಂದು ಹೇಳಿದರೆ ಪ್ರತಿಬಂಧವೆಂದರೆ ಅದು ಶಕ್ತಿನಾಶರೂಪವಾದುದರಿಂದ ಆ ನಾಶಕ್ಕೆ ಪ್ರತಿಯೋಗಿಯಾದ ಶಕ್ತಿಯನ್ನು ಅಂಗೀಕರಿಸಲೇಬೇಕಾಗುತ್ತದೆ. ಆದ್ದರಿಂದ ಅಭಾವಕ್ಕೆ ಕಾರಣತ್ವವು ಕೂಡುವುದಿಲ್ಲವಾದ್ದರಿಂದಲೂ ಮತ್ತು ಪ್ರತಿಬಂಧಕತ್ವದ ಅನ್ಯಥಾ ಅನುಪಪತ್ತಿಯಿಂದಲೂ ಶಕ್ತಿಯು ಸಿದ್ಧವಾಗುತ್ತದೆ.

**मन्त्रादिप्रयोगे चेतरेतराभावस्य सत्त्वेऽपि कार्यानुदयात्। अतोऽतीन्द्रियं किञ्चिद्दाहानुगुणमनुग्राहकमग्नेरुन्नीयते, यस्यापकुर्वतां प्रतिबन्धकत्वमुपपद्यते; यस्मिन्नविकले कार्यं जायते यस्यैकजातीयत्वादनियतहेतुकत्वं निरस्यत इति ।।**

ಪ್ರಾಗಭಾವಾದಿಗಳನ್ನು ಅಭಾವತ್ವೇನ ಅನುಗಮ ಮಾಡಿ ಅಂತಹ ಮಣಿಯ ಅಭಾವಕ್ಕೆ ದಾಹಕಾರಣತ್ವವನ್ನು ಸ್ವೀಕಾರಮಾಡಿದರೆ ಮಣಿಯು ಇರುವಾಗ ವಹ್ನಿಯಲ್ಲಿ ಮಣಿಯ ಭೇದರೂಪವಾದ ಅನ್ಯೋನ್ಯಾಭಾವವಿರುವುದರಿಂದ ಅಭಾವತ್ವೇನ ಅದರ ಸಂಗ್ರಹವೂ

ಆಗುವುದರಿಂದ ಆಗಲೂ ದಾಹವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಆದ್ದರಿಂದ ಅಗ್ನಿಗೆ ಯಾವುದೋ ಸಹಕಾರಿಯು ಇದೆ ಎಂದೂ ಕಲ್ಪನೆಮಾಡಬೇಕು.

ಪ್ರತಿಬಂಧಕ ಪದ ವಾಚ್ಯವಾದವು ಆ ಸಹಕಾರಿಯನ್ನು ನಾಶಮಾಡುತ್ತವೆ ಎಂದೂ ಆ ಸಹಕಾರಿಯು ಇದ್ದಾಗ ಮಾತ್ರ ದಾಹವುಂಟಾಗುವುದೆಂದೂಅಂಗೀಕರಿಸಬೇಕು. ಆ ಸಹಕಾರಿಯೇ ಶಕ್ತಿಪದಾರ್ಥ. ಆ ಶಕ್ತಿಗೆ ಉತ್ಪತ್ತಿ ನಾಶಗಳಿದ್ದು ಒಂದೇ ವಹ್ನಿಯಲ್ಲಿ ಉಂಟಾಗುವ ಅನೇಕ ಶಕ್ತಿಗಳು ಭಿನ್ನಭಿನ್ನವಾದರೂ ಶಕ್ತಿತ್ವೇನ ಅವುಗಳನ್ನು ಅನುಗಮಮಾಡಿ ದಾಹಕಾರಣತ್ವವನ್ನು ಹೇಳಿದರೆ ವ್ಯಭಿಚಾರವು ಬರುವುದಿಲ್ಲ. ಆದ್ದರಿಂದ ಅದೇ ನ್ಯಾಯದಿಂದ ಯಾಗಾದಿ ಜನ್ಯವಾದ ಅತಿಶಯವೂ ಸಹ ಭೂತಗಳಲ್ಲಿಯೇ ಇದೆ ಎಂದು ಒಪ್ಪಬೇಕು (ಎಂದು ಶಂಕಾ).

## ಅತಿರಿಕ್ತಶಕ್ತಿಯಲ್ಲಿ ಪ್ರಮಾಣವಿಲ್ಲ

**अत्रोच्यते –**

**भावो यथा तथाऽभावः कारणं कार्यवन्मतः ।**
**प्रतिबन्धो विसामग्री तद्धेतुः प्रतिबन्धकः ॥१०॥**

ಹಿಂದೆ ಹೇಳಿದ ಈ ಶಂಕೆಗೆ ಸಮಾಧಾನವನ್ನು ಹೇಳುತ್ತೇವೆ.

ಭಾವವು ಹೇಗೆ ಕಾರಣವಾಗುತ್ತದೆಯೋ ಅದರಂತೆ ಅಭಾವವೂ ಕಾರಣವಾಗುತ್ತದೆ. ಪ್ರತಿಬಂಧವು ಸಾಮಗ್ರೀವಿರಹರೂಪವಾದುದು. ಪ್ರತಿಬಂಧಕ್ಕೆ ಕಾರಣವಾದುದು ಪ್ರತಿಬಂಧಕವೆನಿಸುತ್ತದೆ.

## ಅಭಾವವು ಕಾರಣವಾಗುತ್ತದೆ

**न ह्यभावस्याकारणत्वे प्रमाणमस्ति ।**

ನೀವು ಹೇಳಿದ ದೃಷ್ಟಾಂತವು ಸಂಪ್ರತಿಪನ್ನವಲ್ಲ. ಅನ್ವಯ ವ್ಯತಿರೇಕಗಳಿಂದ ಭಾವಕ್ಕೆ ಹೇಗೆ ಕಾರಣತ್ವವು ಸಿದ್ಧವಾಗುತ್ತದೆಯೋ ಅದೇ ಅನ್ವಯವ್ಯತಿರೇಕಗಳಿಂದ ಅಭಾವಕ್ಕೂ ಕಾರಣತ್ವವು ಸಿದ್ಧವಾಗುತ್ತದೆ. ತುಚ್ಛವಾದರೂ ಅಭಾವವು ಹೇಗೆ ಕಾರ್ಯವಾಗುತ್ತದೆಯೋ ಹಾಗೆಯೇ ಕಾರಣವೂ ಆಗುತ್ತದೆ. ಪ್ರತಿಬಂಧಕತ್ವದ ಅನುಪಪತ್ತಿಯಿಲ್ಲ. ಏಕೆಂದರೆ ನಾವು ಮಣಿಯನ್ನು

ಪ್ರತಿಬಂಧಕವೆಂದು ಹೇಳುವುದಿಲ್ಲ. ಮತ್ತೇನೆಂದರೆ ಮಣಿಯೇ ಪ್ರತಿಬಂಧರೂಪವಾದುದು. ಪ್ರತಿಬಂಧವೆಂದರೆ ಸಾಮಗ್ರಿಯ ವಿರಹ. ಪ್ರತಿಬಂಧಕವೆಂದರೆ ಸಾಮಗ್ರೀವಿರಹಕ್ಕೆ ಹೇತು ಎಂದು ಅರ್ಥ. ಅಂತಹ ಪ್ರತಿಬಂಧಕತ್ವವು ಮಣಿಯನ್ನು ಪ್ರಯೋಗಿಸುವ ಪುರುಷರಲ್ಲಿ ಮಾತ್ರ ಇದೆ. ಆದ್ದರಿಂದ ಶಕ್ತಿಯು ಸಿದ್ಧವಾಗುವುದಿಲ್ಲ. ಅಭಾವವು ಕಾರಣವಲ್ಲ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ.

## ಕಾರಣವು ಭಾವತ್ವವ್ಯಾಪ್ಯವಲ್ಲ

**न हि विधिरूपेणासौ तुच्छ इति स्वरूपेणापि तथा; निषेधरूपाभावे विधेरपि(रेव) तुच्छत्वप्रसङ्गात् । कारणत्वस्य भावत्वेन व्याप्तत्वात्तन्निवृत्तौ तदपि निवर्तत इति चेन्न – परिवर्तप्रसङ्गात् ।**

ವಿಧಿರೂಪದಿಂದ ಅದು ತುಚ್ಛವಾಗಿದೆ ಎಂಬ ಕಾರಣದಿಂದ ಸ್ವರೂಪದಿಂದಲೂ ತುಚ್ಛವಾಗಿದೆ ಎಂದು ಹೇಳಲು ಬರುವುದಿಲ್ಲ. ಹಾಗೆ ಹೇಳುವುದಾದರೆ ಭಾವವು ನಿಷೇಧರೂಪವಿಲ್ಲದಿರುವುದರಿಂದ ನಿಷೇಧರೂಪದಿಂದ ತುಚ್ಛವಾಗುವುದರಿಂದ ವಿಧಿರೂಪದಿಂದಲೂ ತುಚ್ಛವಾಗಲಿ ಎಂಬ ಆಪತ್ತಿಯು ಉಂಟಾಗುತ್ತದೆ. ಕಾರಣತ್ವವು ಭಾವತ್ವ ವ್ಯಾಪ್ಯವಾದುದರಿಂದ ವ್ಯಾಪಕವಾದ ಭಾವತ್ವವು ನಿವೃತ್ತವಾದರೆ ವ್ಯಾಪ್ಯವಾದ ಕಾರಣತ್ವವೂ ನಿವೃತ್ತವಾಗುತ್ತದೆ ಎಂದು ಹೇಳುವುದಾದರೆ ಅದನ್ನು ತಿರುಗಿಸಿ ಕಾರಣತ್ವವು ಅಭಾವತ್ವವ್ಯಾಪ್ಯವಾಗಿದೆ. ವ್ಯಾಪಕವಾದ ಅಭಾವತ್ವವು ಭಾವದಿಂದ ನಿವೃತ್ತವಾದರೆ ವ್ಯಾಪ್ಯವಾದ ಕಾರಣತ್ವವೂ ನಿವೃತ್ತವಾಗುತ್ತದೆ ಎಂಬ ಆಪತ್ತಿಯನ್ನು ಹೇಳಲು ಬರುತ್ತದೆ.

## ಭಾವದಂತೆ ಅಭಾವಕ್ಕೂ ಕಾರ್ಯದ ಜೊತೆ ಅನ್ವಯವ್ಯತಿರೇಕವಿದೆ

**अन्वयव्यतिरेकानुविधानस्य च कारणत्वनिश्चयहेतो र्भाववदभावेऽपि तुल्यत्वात् । अभावस्यावर्जनीयतया सन्निधिः, न तु हेतुत्वेनेति चेत् – तुल्यम् । प्रतियोगिन-**

**मुत्सारयतस्तस्यान्यप्रयुक्तः सन्निधिरिति चेत् – तुल्यम् । भावस्याभावोत्सारणं स्वरूपमेवेति चेत् – अभावस्यापि भावोत्सारणं स्वरूपान्नातिरिच्यते । तस्मात् तथा 'भावस्यैव भावो जनक' इति नियमोऽनुपपन्नः, तथा 'भाव एव जनक' इत्यपि । को ह्यनयोर्विशेषः?**

ಕಾರಣತ್ವನಿಶ್ಚಾಯಕವಾದ ಅನ್ವಯವ್ಯತಿರೇಕಾನುವಿಧಾನವು ಭಾವಕ್ಕೆ ಇರುವಂತೆ ಅಭಾವಕ್ಕೂ ಇದ್ದೇ ಇದೆ. ಕಾರ್ಯಸ್ಥಳದಲ್ಲಿ ಅಭಾವವು ಅವರ್ಜನೀಯ ಸನ್ನಿಧಿಯಾಗಿದೆ, ಹೇತುವಾಗಿ ಸನ್ನಿಹಿತವಾಗಿಲ್ಲ. ಎಂದರೆ ಮಣ್ಯಭಾವವು ಮಣಿರೂಪ ಪ್ರತಿಯೋಗಿಯ ಅಪನಯನಕ್ಕೋಸ್ಕರ ಸನ್ನಿಧಿಯನ್ನು ಹೊಂದಿದೆ ಹೊರತು ದಾಹದ ಉತ್ಪತ್ತಿಗಾಗಿ ಹೊಂದಿಲ್ಲ ಎಂದು ಹೇಳುವುದಾದರೆ ಭಾವಕ್ಕೂ ಸಹ ತನ್ನ ಅಭಾವದ ಅಪನಯನಕ್ಕಾಗಿ ಸನ್ನಿಧಿ ಇದೆ. ಏಕೆಂದರೆ ತನ್ನ ಅಭಾವವಿದ್ದಾಗ ಕಾರ್ಯವು ಉಂಟಾಗುವುದಿಲ್ಲ. ಹೊರತು ಕಾರ್ಯೋತ್ಪಾದನಕ್ಕಾಗಿ ಸನ್ನಿಧಿಯಿಲ್ಲ ಎಂದು ಹೇಳಬಹುದು. ಭಾವಕ್ಕೆ ಅಭಾವದ ಅಪನಯನವು ಸ್ವರೂಪವೇ ಎಂದು ಹೇಳಿದರೆ ಅಭಾವಕ್ಕೂ ಸಹ ಭಾವದ ಅಪನಯವು ಸ್ವರೂಪವೇ ಎಂದು ಹೇಳಬಹುದು.

ಆದ್ದರಿಂದ ಭಾವವು ಭಾವಕ್ಕೆ ಮಾತ್ರ ಜನಕ ಎಂಬ ನಿಯಮವು ಹೇಗೆ ಅನುಪಪನ್ನವಾಗಿದೆಯೋ ಅದರಂತೆ ಭಾವವು ಮಾತ್ರ ಕಾರಣವಾದುದು ಎಂಬ ನಿಯಮವೂ ಅನುಪಪನ್ನವಾದುದು. ಕಾರಣತ್ವದ ವಿಷಯದಲ್ಲಿ ಭಾವ ಮತ್ತು ಅಭಾವಗಳಿಗೆ ಯಾವ ವ್ಯತ್ಯಾಸವಿದೆ?

ಆದ್ದರಿಂದ ಭಾವವು ಭಾವಕ್ಕೆ ಮಾತ್ರ ಜನಕ ಎಂಬ ನಿಯಮವು ಹೇಗೆ ಅನುಪಪನ್ನವಾಗಿದೆಯೋ ಅದರಂತೆ ಭಾವವು ಮಾತ್ರ ಕಾರಣವಾದುದು ಎಂಬ ನಿಯಮವೂ ಅನುಪಪನ್ನವಾದುದು. ಕಾರಣತ್ವದ ವಿಷಯದಲ್ಲಿ ಭಾವ ಮತ್ತು ಅಭಾವಗಳಿಗೆ ಯಾವ ವ್ಯತ್ಯಾಸವಿದೆ?

## ಉತ್ತೇಜಕಾಭಾವವಿಶಿಷ್ಟ ಮಣ್ಯಭಾವವೇ ದಾಹವನ್ನು ಕುರಿತು ಕಾರಣ

**प्रतिबन्धकोत्तम्भकप्रयोगकाले तु व्यभिचारस्तदा स्यात्; यदि यादृशे सति कार्यानुदयः, तादृश एव सति उत्पादः स्यात् ।**

**न त्वेवम्; तदाऽपि प्रतिपक्षस्याभावात् । असत्प्रतिपक्षो हि प्रतिबन्धकाभिमतो मन्त्रः प्रतिपक्षः ।**

**स च तादृशो नास्त्येव । यस्त्वस्ति, नासौ प्रतिपक्षः ।**

**तथापि विशेष्ये सत्येव विशेषणमात्राभावस्तत्र; स चोत्तम्भकमन्त्र एवेत्यन्यैव सामग्रीति चेत् – न, विशिष्टस्याप्यभावात् । न हि दण्डिनि सति अदण्डानामन्येषां नाभावः, किन्तु दण्डाभावस्यैव केवलस्येति युक्तम् ।**

ಮಣಿ ಮತ್ತು ಉತ್ತೇಜಕ ಎರಡೂ ಇರುವಾಗ ದಾಹವು ಉಂಟಾಗುವುದರಿಂದ ಮಣ್ಯಭಾವವು ಕಾರಣವಲ್ಲ ಎಂಬ ಆಕ್ಷೇಪವು ಸರಿಯಲ್ಲ. ಎಂತಹ ಮಣಿಗೆ ದಾಹ ವಿರೋಧಿತ್ವವು ಇಷ್ಟವಾಗಿದೆಯೋ ಅಂತಹ ಮಣಿ ಇರುವಾಗಲೇ ದಾಹವು ಉಂಟಾದರೆ ವ್ಯಭಿಚಾರವು ಬರುತ್ತದೆ. ಉತ್ತೇಜಕವಿರುವಾಗ ದಾಹವು ಉಂಟಾಗುವ ಸ್ಥಳದಲ್ಲಿ ಅಂತಹ ಮಣಿಯು ಇಲ್ಲ. ನೀವು ಪ್ರತಿಬಂಧಕವೆಂದು ಹೇಳುವ, ನಾವು ಪ್ರತಿಬಂಧವೆಂದು ಹೇಳುವ ವಸ್ತುವು ಕೇವಲ ಮಣ್ಯಾದಿಗಳಲ್ಲ. ಆದರೆ ತನ್ನ ವಿರೋಧಿ ಯಿಂದ ಸಮವಹಿತವಲ್ಲದ ಮಣ್ಯಾದಿಗಳು. ಮಣಿಗೆ ಉತ್ತೇಜಕವು ವಿರೋಧಿಯಾದುದು. ಉತ್ತೇಜಕಾಭಾವ ವಿಶಿಷ್ಟ ಮಣಿಯೇ ಪ್ರತಿಬಂಧರೂಪವಾದುದು. ಮಣಿ ಮತ್ತು ಉತ್ತೇಜಕ ಎರಡರ ಪ್ರಯೋಗವಿರುವ ಕಾಲದಲ್ಲಿ ಉತ್ತೇಜಕಾಭಾವವಿಶಿಷ್ಟ ಮಣಿಯು ಇಲ್ಲವಾದ್ದರಿಂದ ದಾಹವು ಉಂಟಾಗುತ್ತದೆ.

'ಉತ್ತೇಜಕಾಭಾವ ವಿಶಿಷ್ಟ ಮಣಿಯ ಅಭಾವವು ಕಾರಣವೆಂದು ಹೇಳಿದರೆ ಉತ್ತೇಜಕ ಮತ್ತು ಮಣಿಯು ಎರಡೂ ಇರುವಾಗ ಉತ್ತೇಜಕಾಭಾವ ವಿಶಿಷ್ಟ್ಯಮಣ್ಯಭಾವವು ಉತ್ತೇಜಕಾಭಾವರೂಪವಾದ ವಿಶೇಷಣದ ಅಭಾವರೂಪವಾದುದು. ಉತ್ತೇಜಕಾಭಾವಾ-ಭಾವವೆಂದರೆ ಅದು ಉತ್ತೇಜಕರೂಪವಾದುದಷ್ಟೆ? ಹಾಗಾಗಿ ದಾಹವನ್ನು ಕುರಿತು ಕೆಲವು ವೇಳೆ ಉತ್ತೇಜಕವು ಕಾರಣ, ಕೆಲವು ವೇಳೆ ಮಣ್ಯಭಾವವು ಕಾರಣವೆಂದು ಎರಡು ಸಾಮಗ್ರಿಯನ್ನು

ಕಲ್ಪನೆ ಮಾಡಬೇಕಾಗುತ್ತದೆ. ಒಂದು ಸಾಮಗ್ರಿ ಇಲ್ಲದಿರುವುದರಿಂದ ಅನುಗತವಾದ ಕಾರ್ಯಕಾರಣಭಾವವನ್ನು ಹೇಳಲು ಬರುವುದಿಲ್ಲ' ಎಂಬ ಶಂಕೆಯೂ ಸರಿಯಲ್ಲ.

ಏಕೆಂದರೆ ಎರಡು ಸಾಮಗ್ರಿಗಳಿಲ್ಲ, ಒಂದೇ ಸಾಮಗ್ರಿ. ವಿಶಿಷ್ಟಾಭಾವವು ವಿಶೇಷಣಾಭಾವರೂಪವೇ ಅಲ್ಲ. ಹಾಗಾಗುವುದಾದರೆ ದಂಡಾಭಾವವಿಶಿಷ್ಟ ಪುರುಷಾಭಾವವೂ ಸಹ ದಂಡಾಭಾವಾಭಾವರೂಪ ಎಂದು ಅಂಗೀಕರಿಸಬೇಕಾಗುತ್ತದೆ. ಅದು ಸರಿಯಲ್ಲ. ದಂಡವಿಶಿಷ್ಟ ಪುರುಷನು ಇರುವಾಗ ತೋರುವ ದಂಡಾಭಾವ ವಿಶಿಷ್ಟ ಪುರುಷನ ಅಭಾವದಲ್ಲಿ ಪ್ರತಿಯೋಗಿ ಕೋಟಿಯಲ್ಲಿ ದಂಡಾಭಾವವು ತೋರುವಂತೆ ದಂಡಾಭಾವವಿಶಿಷ್ಟ ಪುರುಷರೂ ಸಹ ಪ್ರತಿಯೋಗಿಯಾಗಿ ಸ್ಪಷ್ಟವಾಗಿ ತೋರುವುದರಿಂದ ಇದು ಕೇವಲ ದಂಡಾಭಾವದ ಅಭಾವವೇ ಹೊರತು ಅದಂಡಿ ಪುರುಷರ ಅಭಾವವಲ್ಲ ಎಂದು ಹೇಳುವುದು ಯುಕ್ತವಾಗುವುದಿಲ್ಲ. ಆದ್ದರಿಂದ ಕೇವಲ ಪುರುಷಾಭಾವ ಎಂದರೆ ದಂಡಾಭಾವವಿಶಿಷ್ಟ ಪುರುಷಾಭಾವ.

## ದಾಹಕ್ಕೆ ಯಾವುದು ಕಾರಣ ?

**यथा हि केवलदण्डसद्भावे, उभयसद्भावे, द्वयाभावे वा केवलपुरुषाभावः सर्वत्राविशिष्टः, तथा केवलोत्तम्भकसद्भावे, प्रतिबन्धकोत्तम्भकसद्भावे, द्वयाभावे वा केवलप्रतिबन्धका-भावोऽविशिष्ट इत्यवधार्यताम् ।**

ಇದು ಕೇವಲ ದಂಡವಿರುವಾಗ ವಿಶೇಷಣವಾದ ದಂಡಾಭಾವದ ಮತ್ತು ವಿಶೇಷ್ಯವಾದ ಪುರುಷನ ಅಭಾವದ ಪ್ರಯುಕ್ತವಾಗಿ ಉಂಟಾಗುತ್ತದೆ. ದಂಡ ಮತ್ತು ಪುರುಷ ಇಬ್ಬರೂ ಇರುವಲ್ಲಿ ದಂಡಾಭಾವರೂಪವಾದ ವಿಶೇಷಣದ ಅಭಾವದಿಂದ ಮಾತ್ರ ಉಂಟಾಗುತ್ತದೆ. ದಂಡಾಭಾವ ಮತ್ತು ಪುರುಷ ಎರಡೂ ಇಲ್ಲದಿದ್ದಲ್ಲಿ ಕೇವಲ ವಿಶೇಷ್ಯಾಭಾವದಿಂದ ಉಂಟಾಗುತ್ತದೆ.ಹೀಗೆ ಅನೇಕ ಕಡೆಗಳಲ್ಲಿ ತೋರುವ ವಿಶಿಷ್ಟಾಭಾವದಲ್ಲಿರುವ ವಿಶಿಷ್ಟಾಭಾವತ್ವವು ವಿಶೇಷಣಮಾತ್ರಾಭಾವದಲ್ಲಿರುವ ಧರ್ಮಕ್ಕಿಂತ ಭಿನ್ನವಾದುದು ಎಂದು ನಿಶ್ಚಯಿಸಲು ಸಾಧ್ಯವಾಗುತ್ತದೆ. ಅದರಂತೆ ಉತ್ತೇಜಕಾಭಾವ ವಿಶಿಷ್ಟಮಣ್ಯಭಾವತ್ವವು ಅತಿರಿಕ್ತವಾದುದು ಮತ್ತು ಆರೂಪದಿಂದಲೇ ಮಣ್ಯಭಾವಕ್ಕೆ ಕಾರಣತ್ವವು

ಉಪಪನ್ನವಾಗುತ್ತದೆ. ಇಷ್ಟು ಕ್ಲೇಶವನ್ನು ಏಕೆ ಪಡಬೇಕು? ವಿಶೇಷಣಾಭಾವ, ವಿಶೇಷ್ಯಾಭಾವ ಮತ್ತು ಉಭಯಾಭಾವಗಳಿಗೆ ಪ್ರತ್ಯೇಕವಾಗಿಯೇ ದಾಹವನ್ನು ಕುರಿತು ಕಾರಣತ್ವವನ್ನು ಹೇಳಬಹುದು ಎಂಬ ಶಂಕೆಯು ಸರಿಯಲ್ಲ.

## ಶಕ್ತಿಯನ್ನು ಅಂಗೀಕರಿಸಿದರೆ ಹಾನಿ

**अथैवम्भूतसामग्रीत्रयमेव किं नेष्यते? कार्यस्य तद्व्यभिचारात्; जातिभेदकल्पनायां च प्रमाणाभावात्; यथोक्तेनैव उपपत्तेः । भावे वा काममसावस्तु; का नो हानिः।**

ದಾಹತ್ವರೂಪ ಕಾರ್ಯತಾವಚ್ಛೇದಕವು ಒಂದೇ ಇರುವುದರಿಂದ ಹೀಗೆ ಮೂರು ಕಾರಣಗಳನ್ನು ಒಪ್ಪಿದರೆ ವ್ಯಭಿಚಾರವು ಬರುತ್ತದೆ. ತೃಣಾರಣಿಮಣಿಸ್ಥಳದಲ್ಲಿ ಕಲ್ಪನೆ ಮಾಡುವಂತೆ ದಾಹರೂಪಕಾರ್ಯದಲ್ಲಿಯೇ ವೈಜಾತ್ಯವನ್ನು ಕಲ್ಪನೆಮಾಡಿ ಎಂಬ ಶಂಕೆಯೂ ಸರಿಯಲ್ಲ. ತೃಣಾದಿಗಳಲ್ಲಿ ಅನುಗತವಾದ ಅನತಿಪ್ರಸಕ್ತವಾದ ಧರ್ಮವು ಸಿಗದಿರುವುದರಿಂದ ಅಲ್ಲಿ ವ್ಯಭಿಚಾರವನ್ನು ಪರಿಹಾರ ಮಾಡುವುದಕ್ಕಾಗಿ ಕಾರ್ಯದಲ್ಲಿ ವೈಜಾತ್ಯವನ್ನು ಕಲ್ಪನೆಮಾಡುತ್ತೇವೆ. ದಾಹಸ್ಥಳದಲ್ಲಿ ಅನುಗತವಾದ ಮತ್ತು ಅನತಿ ಪ್ರಸಕ್ತವಾದ ವಿಶಿಷ್ಟಾಭಾವತ್ವರೂಪವಾದ ಧರ್ಮವು ದೊರೆಯುವುದರಿಂದ ಕಾರ್ಯದಲ್ಲಿ ವೈಜಾತ್ಯವನ್ನು ಕಲ್ಪನೆ ಮಾಡುವುದಿಲ್ಲ. ಅಥವಾ ಅಭ್ಯುಪೇತ್ಯವಾದದಿಂದ ಹೇಳುವುದಾದರೆ ಪ್ರಮಾಣವಿರುವುದಾದರೆ ದಾಹದಲ್ಲಿಯೂ ವೈಜಾತ್ಯವನ್ನು ಕಲ್ಪನೆ ಮಾಡಿ. ಆದರೂ ಶಕ್ತಿಯು ಸಿದ್ಧವಾಗುವುದಿಲ್ಲವಾದ್ದರಿಂದ ನಮಗೆ ಯಾವ ಹಾನಿಯೂ ಇಲ್ಲ. ಶಕ್ತಿಯನ್ನು ಅಂಗೀಕಾರ ಮಾಡುವವರಿಗೇ ಹಾನಿಯಾಗುತ್ತದೆ.

## ಪ್ರತಿಬಂಧಕಾಭಾವವು ಸಂಸರ್ಗಾಭಾವರೂಪವಾದುದು

**प्राक्प्रध्वंसविकल्पोऽपि नानियतहेतुकत्वापादकः, यस्मिन् सति कार्यं न जायते, तस्मिन्नसत्येव जायत इति, अत्र संसर्गाभावस्यैव प्रयोजकत्वात् ।**

ಪ್ರತಿಬಂಧಕಾಭಾವವು ಪ್ರಾಗಭಾವವೋ, ಪ್ರಧ್ವಂಸವೋ ಅಥವಾ ಅತ್ಯಂತಾಭಾವವೋ ಎಂದು ವಿಕಲ್ಪವನ್ನು ಮಾಡಿ ಎಲ್ಲ ಪಕ್ಷದಲ್ಲಿಯೂ ವ್ಯಭಿಚಾರವು ಬಂದೇ ಬರುತ್ತದೆ ಎಂದು ಹೇಳುವುದು ಸರಿಯಲ್ಲ. 'ಅತ್ರ ನಾಸ್ತಿ - ಇಲ್ಲಿ ಇಲ್ಲ' ಎಂಬ ಪ್ರತೀತಿಗಮ್ಯವಾದ ಸಂಸರ್ಗಾಭಾವತ್ವೇನ ಮೂರು ಅಭಾವಗಳನ್ನೂ ಅನುಗಮ ಮಾಡಿ ಕಾರಣತ್ವವನ್ನು ಸ್ವೀಕರಿಸುತ್ತೇವೆ.

**यस्तु संसर्गाभावतादात्म्यनिषेधयोर्विशेषमनाकलयन्नितरेतरा भावेन प्रत्यवतिष्ठते, स प्रतिबोधनीयः ।**

ಯಾವನು ಹೀಗೆ ಸಂಸರ್ಗಾಭಾವವನ್ನು ಆಕ್ಷೇಪ ಮಾಡುತ್ತಾನೆಯೋ - ಸಂಸರ್ಗಾಭಾವವೆಂದರೆ ಸಂಬಂಧ ಪ್ರತಿಯೋಗಿಕ ಅಭಾವವೆಂದಾಗಲೀ, ಸಂಬಂಧಾವಚ್ಛಿನ್ನಪ್ರತಿಯೋಗಿಕ ಅಭಾವವೆಂದಾಗಲೀ ಹೇಳಲು ಬರುವುದಿಲ್ಲ. ಏಕೆಂದರೆ ಧ್ವಂಸ ಮತ್ತು ಪ್ರಾಗಭಾವಗಳು ಅಂತಹ ಅಭಾವಗಳಲ್ಲ ಮತ್ತು ಅನ್ಯೋನ್ಯಾಭಾವವೂ ಸಹ ತಾದಾತ್ಮ್ಯಸಂಬಂಧಾವಚ್ಛಿನ್ನ ಪ್ರತಿಯೋಗಿಕವಾದ್ದರಿಂದ ಅತಿಪ್ರಸಂಗವು ಬರುತ್ತದೆ. ಆದ್ದರಿಂದ ಪ್ರಾಗಭಾವಾದಿ ಸಾಧಾರಣವಾದ ಸಂಸರ್ಗಾಭಾವತ್ವವು ಕೇವಲ ಅಭಾವತ್ವರೂಪವಾದುದು ಎಂದು ಹೇಳಬೇಕು. ಹಾಗೆ ಹೇಳಿದರೆ ಮಣಿ ಇರುವಾಗ ವಹ್ನಿಯಲ್ಲಿ ಮಣಿಯ ಭೇದರೂಪವಾದ ಅನ್ಯೋನ್ಯಾಭಾವವು ಇರುವುದರಿಂದ ಅದು ಅಭಾವತ್ವರೂಪ ಧರ್ಮವನ್ನು ಹೊಂದಿರುವುದರಿಂದ ದಾಹವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ -

ಅಂತಹವನನ್ನು ಕುರಿತು ಸಂಸರ್ಗಾಭಾವತ್ವವು ಅನ್ಯೋನ್ಯಾಭಾವದಲ್ಲಿ ಇಲ್ಲ ಎಂದು ಬೋಧಿಸಬೇಕಾಗುತ್ತದೆ.

ಅದು ಹೀಗೆ. ಲೋಕದಲ್ಲಿ ವೃತ್ತಿನಿಯಾಮಕ ಸಂಬಂಧವನ್ನೇ ಸ್ವರಸವಾಗಿ ಸಂಸರ್ಗವೆಂದು ವ್ಯವಹರಿಸುತ್ತಾರೆ. ತಾದಾತ್ಮ್ಯವು ವೃತ್ತಿನಿಯಾಮಕ ಸಂಬಂಧವಲ್ಲ. ವೃತ್ತಿನಿಯಾಮಕ ಸಂಬಂಧವಾದರೂ ಆಧಾರಾಧೇಯ ಭಾವಪ್ರತಿಪಾದಕವಾದ ಸಪ್ತಮ್ಯಂತ ಪದದಿಂದಲೂ ಮತ್ತು ಅಸ್ತಿ ಎಂಬ ಪದದಿಂದಲೂ ತಿಳಿಯುತ್ತದೆ.

ಉದಾಹರಣೆಗೆ 'ಅತ್ರ ಘಟೋಸ್ತಿ (ಇಲ್ಲಿ ಘಟವಿದೆ)' ಎಂಬಂತೆ. ಹೀಗೆ ಸಪ್ತಮೀ ನಿರ್ದೇಶ ಮೊದಲಾದವುಗಳಿಂದ ಹೇಳಲ್ಪಡುವ ಅಭಾವವು ಸಂಸರ್ಗಾಭಾವ. ಅದು ಪ್ರಾಗಭಾವ, ಪ್ರಧ್ವಂಸ ಮತ್ತು ಅತ್ಯಂತಾಭಾವರೂಪವಾದುದು. ಏಕೆಂದರೆ ಮೂರು ಸ್ಥಳಗಳಲ್ಲಿಯೂ 'ಅತ್ರ ಘಟೋ ನಾಸ್ತಿ' ಎಂಬ ಪ್ರತೀತಿಯು ಏಕರೂಪವಾಗಿ ಬರುತ್ತದೆ. ಅನ್ಯೋನ್ಯಾಭಾವವಾದರೂ 'ಇದಂ ಇದಂ ನ ಭವತಿ' ಇದು ಇದಲ್ಲ ಎಂದು ತಿಳಿಸಲ್ಪಡುತ್ತದೆ. ಆದ್ದರಿಂದ ಸಂಸರ್ಗಬೋಧಕವಾದ ಪದನಿರ್ದೇಶ ಪ್ರಯೋಜಕವಾದ ಅಭಾವತ್ವವು ಸಂಸರ್ಗಾಭಾವತ್ವ. ತಾದಾತ್ಮ್ಯ-ಅನವಚ್ಛಿನ್ನ ಪ್ರತಿಯೋಗಿಕವಾದ ಅಭಾವತ್ವವು ಸಂಸರ್ಗಾಭಾವತ್ವ ಎಂಬುದು ಪ್ರಸಿದ್ಧವಾಗಿದೆ. ಆದ್ದರಿಂದ ಯಾವ ದೋಷವೂ ಇಲ್ಲ.

**तथाऽप्यभावेषु जातेरभावात् कथं त्रयाणामुपग्रहः स्यात्; अनुपगृहीतानां च कथं कारणत्वावधारणमिति चेत् – मा भूज्जातिः । न हि तदुपगृहीतानामेव व्यवहाराङ्गत्वम् । सर्वत्रोपाधिमद्व्यवहारविलोपप्रसङ्गात् ।**

'ಆದರೂ ದ್ರವ್ಯಗುಣಕರ್ಮಗಳಲ್ಲಿ ಮಾತ್ರ ಜಾತಿ ಇರುವುದರಿಂದ ನಿರುಕ್ತವಾದ ಸಂಸರ್ಗಾಭಾವತ್ವವು ಜಾತಿಯಲ್ಲವಾದ್ದರಿಂದ ಮೂರು ಅಭಾವಗಳನ್ನು ಸಂಸರ್ಗಾಭಾವತ್ವೇನ ಸಂಗ್ರಹ ಮಾಡಲು ಸಾಧ್ಯವಿಲ್ಲ' ಎಂಬ ಆಕ್ಷೇಪವು ಸರಿಯಲ್ಲ. ಭೂತತ್ವಮೂರ್ತತ್ವಗಳು ಜಾತಿಯಲ್ಲದಿದ್ದರೂ ಆ ರೂಪದಿಂದ ಅನುಗತ ವ್ಯವಹಾರವನ್ನು ಮಾಡುವುದು ಕಂಡಿರುವುದರಿಂದ ಸಂಸರ್ಗಾಭಾವತ್ವವು ಜಾತಿಯಲ್ಲದಿದ್ದರೂ ಅನುಗತವಾದ ವ್ಯವಹಾರವನ್ನು ಕುರಿತು ಪ್ರಯೋಜಕವಾಗುವುದರಲ್ಲಿ ಯಾವ ದೋಷವೂ ಇಲ್ಲ.

## ಕಾರಣವಾದ ಪ್ರತಿಬಂಧಕಾಭಾವವು ಪ್ರತಿಬಂಧಕಸಾಮಾನ್ಯಾಭಾವ-ರೂಪವಾದುದು

**एते(अने)न 'प्रतिबन्धके सत्यपि तज्जातीयान्यस्याभाव सम्भवात् कार्योत्पादप्रसङ्गः, अनुत्पादे वा ततोऽप्यधिकं**

**किञ्चिदपेक्षणीयमस्ती'ति निरस्तम् । यथा हि 'तज्जातीये सति कार्यं जायते, अर्थात् असति न जायते' इति स्थिते तद्भावेऽपि तज्जातीयान्तराभावान्न भवितव्यं कार्येणेति न तथैतदपि; अनुकूलवत् प्रतिकूलेऽपि सति तज्जातीयान्तराभावानामकिञ्चित्करत्वादिति ।**

ಒಂದು ಮಣಿಯಿರುವಾಗಲೂ ಅದೇ ಜಾತಿಯ ಇನ್ನೊಂದು ಮಣಿ ಇಲ್ಲದಿರುವುದರಿಂದ ದಾಹವು ಉಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಅಲ್ಲಿ ದಾಹವುಂಟಾಗದಿದ್ದರೆ ಮಣ್ಯಭಾವಕ್ಕಿಂತ ಅತಿರಿಕ್ತವಾದ ಶಕ್ತಿಯು ಸಿದ್ಧವಾಗುತ್ತದೆ ಎಂಬ ಶಂಕೆಯೂ ಸರಿಯಲ್ಲ. 'ಅತ್ರ ಮಣಿರ್ನಾಸ್ತಿ' ಎಂಬ ಪ್ರತೀತಿ ಸಿದ್ಧವಾದ ಮಣ್ಯಭಾವವೇ ದಾಹವನ್ನು ಕುರಿತು ಕಾರಣ. ಒಂದು ಮಣಿಯು ಇರುವಾಗ ಇನ್ನೊಂದು ಮಣಿಯ ಅಭಾವವಿದ್ದರೂ ಇಂತಹ ಪ್ರತೀತಿಯು ಬರುವುದಿಲ್ಲ. ಆದ್ದರಿಂದ ದಾಹಕ್ಕೆ ಕಾರಣವಾದ ಮಣಿ ಸಾಮಾನ್ಯಾಭಾವವು ಇಲ್ಲದಿರುವುದರಿಂದ ದಾಹವು ಉಂಟಾಗುವುದಿಲ್ಲ. ಆದ್ದರಿಂದ ಶಕ್ತಿಯನ್ನು ಕಲ್ಪನೆಮಾಡುವ ಅಗತ್ಯವಿಲ್ಲ.

ಒಂದೇ ದಂಡವ್ಯಕ್ತಿ ಇರುವಾಗ ಇನ್ನೊಂದು ದಂಡವ್ಯಕ್ತಿಯು ಇಲ್ಲದಿದ್ದರೂ ಹೇಗೆ ದಂಡಕ್ಕೆ ಕಾರಣತ್ವವು ಉಪಪನ್ನವಾಗುತ್ತದೆಯೋ, ಅದರಂತೆ ಒಂದು ಪ್ರತಿಬಂಧಕವಿರುವಾಗ ಇನ್ನೊಂದು ಪ್ರತಿಬಂಧಕವಿಲ್ಲದಿದ್ದರೂ ಪ್ರತಿಬಂಧಕತ್ವವು ಉಪಪನ್ನವಾಗುತ್ತದೆ. ಕಪಾಲವಿದ್ದರೆ ಘಟವು ಉತ್ಪತ್ತಿಯಾಗುತ್ತದೆ ಎಂದು ಹೇಳಿದರೆ ಕಪಾಲವಿಲ್ಲದಿದ್ದರೆ ಘಟವು ಉತ್ಪತ್ತಿಯಾಗುವುದಿಲ್ಲ ಎಂಬ ವ್ಯತಿರೇಕವು ಅರ್ಥಾತ್ ಸಿದ್ಧವಾಗುತ್ತದೆ. ಹೀಗಿರುವಾಗ ಒಂದು ಕಪಾಲವಿದ್ದರೂ ಇನ್ನೊಂದು ಕಪಾಲವು ಇಲ್ಲದಿರುವುದರಿಂದ ಘಟವು ಉಂಟಾಗದಿರಲಿ ಎಂಬ ಪ್ರಶ್ನೆಯು ಹೇಗೆ ಬರುವುದಿಲ್ಲವೋ ಅದರಂತೆ, ಒಂದು ಪ್ರತಿಬಂಧಕವಿದ್ದರೂ ಇನ್ನೊಂದು ಪ್ರತಿಬಂಧಕವು ಇಲ್ಲದಿರುವುದರಿಂದ ಕಾರ್ಯವು ಉಂಟಾಗಲಿ ಎಂಬ ಆಪತ್ತಿಯೂ ಬರುವುದಿಲ್ಲ. ಒಂದುಕಾರಣವಿರುವಾಗ ಇನ್ನೊಂದು ಕಾರಣದ ಅಭಾವವು ಹೇಗೆ ಅಪ್ರಯೋಜಕವೋ, ಅದರಂತೆ ಒಂದು ಪ್ರತಿಬಂಧಕವು ಇರುವಾಗ ಇನ್ನೊಂದು ಪ್ರತಿಬಂಧಕದ ಅಭಾವವು ದಾಹವನ್ನು ಕುರಿತು ಅಪ್ರಯೋಜಕವಾದುದು. ಆದ್ದರಿಂದ 'ಅತ್ರ ಪ್ರತಿಬಂಧಕಂ ನಾಸ್ತಿ' ಎಂಬ ಪ್ರತೀತಿ ವಿಷಯವಾದ ಪ್ರತಿಬಂಧಕ ಸಾಮಾನ್ಯಾಭಾವವೇ ದಾಹವನ್ನು ಕುರಿತು ಕಾರಣ ಎಂದು ಸಿದ್ಧವಾಗುತ್ತದೆ.

## ಮಂತ್ರಪ್ರಯೋಕ್ತೃಗಳೇ ಪ್ರತಿಬಂಧಕ ಪದಾರ್ಥ

**यत्तु 'अकिञ्चित्करस्य' इति – तदप्यसत् । सामग्रीवैकल्यं प्रतिबन्धपदार्थो मुख्यः । स चात्र मन्त्रादिरेव । न त्वसौ प्रतिबन्धकः । ततः किं तस्याकिञ्चित्करत्वेन?**

ಶಕ್ತಿಯನ್ನು ಸ್ವೀಕಾರಮಾಡಿದ್ದರೆ ಮಂತ್ರಾದಿಗಳಿಗೆ ಪ್ರತಿಬಂಧಕತ್ವವೇ ಕೂಡುವುದಿಲ್ಲವೆಂಬುದು ನಮಗೆ ಇಷ್ಟವಾದುದೇ. ಏಕೆಂದರೆ ಸಾಮಗ್ರೀ ವಿರಹವೇ ಪ್ರತಿಬಂಧಶಬ್ದದ ಮುಖ್ಯವಾದ ಅರ್ಥ. ಪ್ರಕೃತದಲ್ಲಿ ಮಣ್ಯಭಾವವಿರಹರೂಪವಾದ ಪ್ರತಿಬಂಧವು ಮಣಿರೂಪವೇ ಆಗಿದೆ. ಪ್ರತಿಬಂಧಕತ್ವವು ಮಾತ್ರ ಮಣ್ಯಾದಿಗಳನ್ನು ಪ್ರಯೋಗಿಸುವ ಪುರುಷರಿಗೇ ಇದೆ. ಅವರು ಮಣಿಯ ಸನ್ನಿಧಾನವನ್ನು ಉಂಟು ಮಾಡುವುದರಿಂದ ಕಿಂಚಿತ್ಕರರಾಗುತ್ತಾರೆ. ಆದ್ದರಿಂದ ಮಣ್ಯಾದಿಗಳು ಅಕಿಂಚಿತ್ಕರವಾದರೂ ಏನು ತೊಂದರೆ?

## ಕಾರ್ಯ ಅನುತ್ಪಾದವು ಪ್ರತಿಬಂಧಕವಲ್ಲ

**तत्प्रयोक्तारस्तु प्रतिबन्धारः, ते च किञ्चित्करा एवेति किमसमञ्जसम् । ये तु व्युत्पादयन्ति 'कार्यानुत्पाद एव प्रतिबन्धः' इति – तैः प्रतिबन्धमकुर्वन्त एव प्रतिबन्धकाः' इत्युक्तं भवति ।**

ಇನ್ನು ಕೆಲವರು ಪ್ರತಿಬಂಧಕವೆಂದರೆ ಕಾರ್ಯಾನುತ್ಪಾದ. ಪ್ರತಿಬಂಧಕತ್ವವು ಕಾರ್ಯಾನುತ್ಪಾದ ಪ್ರಯೋಜಕತ್ವ ರೂಪವಾದುದು. ಮಣ್ಯಾದಿಗಳಿಗೆ ಅಂತಹ ಪ್ರತಿಬಂಧಕತ್ವವಿದೆ ಎಂದು ಹೇಳುತ್ತಾರೆ. ಅದೂ ಸರಿಯಲ್ಲ. ಆಗಲೂ ಮಣ್ಯಾದಿಗಳಿಗೆ ಮುಖ್ಯವಾದ ಪ್ರತಿಬಂಧಕತ್ವವನ್ನು ಒಪ್ಪಲು ಬರುವುದಿಲ್ಲ. ಅಮುಖ್ಯವಾದ ಪ್ರತಿಬಂಧಕತ್ವವನ್ನೇ ಆಶ್ರಯಿಸಬೇಕಾಗುತ್ತದೆ.

## ಕಾರ್ಯ ಅನುತ್ಪಾದ ಎಂದರೇನು ?

**तथाहि – कार्यस्यानुत्पादः प्रागभावो वा स्यात्, तस्य कालान्तरप्राप्तिर्वा । न पूर्वः, तस्यानुत्पाद्यत्वात् । न द्वितीयः, कालस्य स्वरूपतोऽभेदात् । तदुपाधेस्तु मन्त्रमन्तरेणापि स्वकारणाधीनत्वात् ।**

ಅದು ಹೇಗೆಂದರೆ – ಕಾರ್ಯಾನುತ್ಪಾದವೆಂದರೆ ಕಾರ್ಯಪ್ರಾಗಭಾವವೋ ಅಥವಾ ಕಾರ್ಯಪ್ರಾಗಭಾವಕ್ಕೆ ಉತ್ತರಕಾಲಸಂಬಂಧವೋ ಎಂದು ಪ್ರಶ್ನೆ ಮಾಡುತ್ತೇವೆ. ಮೊದಲನೆಯ ಪಕ್ಷದಲ್ಲಿ ಪ್ರಾಗಭಾವವು ಅನಾದಿಯಾದ್ದರಿಂದ ಮಣಿಗೆ ತಜ್ಜನಕತ್ವವು ಇಲ್ಲದಿರುವುದರಿಂದ ಅಪ್ರತಿಬಂಧಕತ್ವವೇ ಸಿದ್ಧವಾಗುತ್ತದೆ. ಎರಡನೆಯ ಪಕ್ಷದಲ್ಲಿ ಕಾಲಶಬ್ದ ಮುಖ್ಯಾರ್ಥವಾದ ಮಹಾಕಾಲವು ಒಂದೇ ಆಗಿರುವುದರಿಂದ ಕಾಲಾಂತರ ಎಂಬುವುದೇ ಅನುಪಪನ್ನವಾಗುತ್ತದೆ. ಕಾಲವು ವಸ್ತುತಃ ಒಂದೇ ಆದರೂ ಕಾಲದ ಉಪಾಧಿಗಳು ಭಿನ್ನವಾದುದರಿಂದ ಕಾಲಾಂತರ ಪ್ರಾಪ್ತಿ ಎಂದರೆ ಪೂರ್ವೋಪಾಧಿ ಭಿನ್ನವಾದ ಉಪಾಧಿಯ ಸಂಬಂಧ ಎಂದು ಹೇಳುವುದಾದರೆ ಉಪಾಧಿಯ ಸಂಬಂಧವೂ ಸಹ ಕಾಲಿಕ ಸ್ವರೂಪ ಸಂಬಂಧವಾದ್ದರಿಂದ ಅದು ಉಪಾಧಿಸ್ವರೂಪವೇ ಆಗಿದೆ. ಆದ್ದರಿಂದ ಪ್ರತಿಬಂಧಕತ್ವವೆಂದರೆ ಅಂತಹ ಉಪಾಧಿಜನಕತ್ವವೆಂದು ಹೇಳಬೇಕು. ಆದರೆ ಹಾಗೆ ಹೇಳಲು ಸಾಧ್ಯವಿಲ್ಲ. ಏಕೆಂದರೆ ಆ ಉಪಾಧಿಗಳು ಸೂರ್ಯಪರಿಸ್ಪಂದಾದಿ ರೂಪವಾದುದು. ಅದಕ್ಕೆ ಸೂರ್ಯನೇ ಕಾರಣ ಹೊರತಾಗಿ ಪ್ರಕೃತವಾದ ಮಣಿಮಂತ್ರಾದಿಗಳು ಕಾರಣವಲ್ಲ.

## ಉಪಾಧಿತ್ವವು ಕಾರ್ಯತಾವಚ್ಛೇದಕವಲ್ಲ

**प्रागभावावच्छेदककालोपाधिस्तदपेक्ष इति चेन्न – मन्त्रात् पूर्वमपि तस्य भावात् ।**

ಇನ್ನು ಆ ಪರಿಸ್ಪಂದಾದಿಗಳು ಪರಿಸ್ಪಂದತ್ವ ರೂಪದಿಂದ ಮಣ್ಯಾದಿಜನ್ಯವಾಗದಿದ್ದರೂ ಎಂತಹ ಕಾಲೋಪಾಧ್ಯವಚ್ಛೇದೇನ ದಾಹ ಪ್ರಾಗಭಾವವಿದೆಯೋ ಅಂತಹ ಪ್ರಾಗಭಾವಾವಚ್ಛೇದಕ ಉಪಾಧಿತ್ವರೂಪದಿಂದ ಮಣ್ಯಾದಿಜನ್ಯವಾಗುತ್ತದೆ ಎಂದು ಹೇಳಿದರೆ ಮಣಿಪ್ರಯೋಗಕ್ಕಿಂತ

ಪೂರ್ವದಲ್ಲಿಯೂ ದಾಹಪ್ರಾಗಭಾವಾವಚ್ಛೇದಕ ಉಪಾಧಿಯು ಇರುವುದರಿಂದ ಅತಿಪ್ರಸಕ್ತವಾದ ಅಂತಹ ಉಪಾಧಿತ್ವವು ಕಾರ್ಯತಾವಚ್ಛೇದಕವಾಗುವುದಿಲ್ಲ.

## ಮಣಿಯು ಪ್ರತಿಬಂಧ, ಪುರುಷನು ಪ್ರತಿಬಂಧಕ

**तस्मात् सामग्रीतत्कार्ययोः पौर्वापर्यनियमात् तदभावयोरपि पूर्वापरभाव उपचर्यते; वस्तुतस्तु तुल्यकालत्वमेवेति नान्यं पन्थाः ।।**

ಆದ್ದರಿಂದ ಮಣ್ಯಾದ್ಯಭಾವವು ದಾಹವನ್ನು ಕುರಿತು ಕಾರಣವಾದ್ದರಿಂದ ದಾಹ ಮತ್ತು ಮಣ್ಯಾದ್ಯಭಾವಗಳಿಗೆ ಇರುವ ಕಾರ್ಯಕಾರಣಭಾವವೇ ಅವುಗಳ ಅಭಾವರೂಪವಾದ ದಾಹಾಭಾವ ಮತ್ತು ಮಣಿಗಳಲ್ಲಿ ಆರೋಪಿಸಲ್ಪಡುತ್ತದೆ. ಹೀಗೆ ಆರೋಪಿಸಿ ಮಣ್ಯಭಾವಾಭಾವದಿಂದ ದಾಹಾಭಾವ ಎಂದು ವ್ಯವಹರಿಸಲ್ಪಡುತ್ತದೆ. ಕಾರಣಾಭಾವದಿಂದ ಕಾರ್ಯಾಭಾವ ಎಂಬ ವ್ಯವಹಾರವು ಸರ್ವತ್ರ ಹೀಗೆಯೇ ಉಂಟಾಗುತ್ತದೆ. ಏಕೆಂದರೆ ಕಾರ್ಯಾಭಾವವು ಕಾರಣಾಭಾವ ಕಾಲದಲ್ಲಿ ಅವೃತ್ತಿಯಲ್ಲ (ಇಲ್ಲಿ ಆರೋಪ ಎಂದರೆ ಉಪಚರಿತಪ್ರಯೋಗ ಎಂದು ಅರ್ಥ). ಆದ್ದರಿಂದ ಮಣ್ಯಭಾವಾಭಾವರೂಪವಾದ ಮಣಿಯಲ್ಲಿ ಪ್ರಾಗಭಾವಾತ್ಮಕವಾದ ದಾಹಾನುತ್ಪಾದದ ಜನಕತ್ವವು ಔಪಚಾರಿಕವಾದ್ದರಿಂದ ಆಗಲೂ ಮುಖ್ಯವಾದ ಪ್ರತಿಬಂಧಕತ್ವವಿಲ್ಲ. ಆದ್ದರಿಂದ ಮಣಿಯು ಪ್ರತಿಬಂಧ, ಮಣಿಯನ್ನು ಪ್ರಯೋಗಿಸುವ ಪುರುಷನು ಪ್ರತಿಬಂಧಕ ಎಂಬುದೇ ಸರಿಯಾದ ಮಾರ್ಗ.

## ಶಕ್ತಿಸ್ವೀಕಾರಪಕ್ಷದಲ್ಲಿಯೂ ಅನುಪಪತ್ತಿಗಳು

**न चेदेवं शक्तिस्वीकारेऽपि कः प्रतीकारः? तथा हि प्रतिबन्धकेन शक्तिर्वा विनाश्यते, तद्धर्मो वा, धर्मान्तरं वा जन्यते, न जन्यते वा किमपीति पक्षाः ।**

ಮೀಮಾಂಸಕರು ಮಂತ್ರಾದಿಗಳಿಗೆ ಅಮುಖ್ಯಪ್ರತಿಬಂಧಕತ್ವವನ್ನು ಮತ್ತು ಮಣ್ಯಾದ್ಯಭಾವಕ್ಕೆ ಕಾರಣತ್ವವನ್ನು ಒಪ್ಪದೇ ಶಕ್ತಿಯನ್ನೇ ಸ್ವೀಕರಿಸಿದರೂ ಅನಿಯತ ಹೇತುಕತ್ವಪ್ರಯುಕ್ತವಾದ

ವ್ಯಭಿಚಾರವು ಬಂದೇ ಬರುತ್ತದೆ. ಅದು ಹೇಗೆಂದರೆ – ಪ್ರತಿಬಂಧಕತ್ವವೆಂದರೆ ವಹ್ನಿಯಲ್ಲಿರುವ ದಾಹಾನುಕೂಲಶಕ್ತಿಯ ನಾಶಜನಕತ್ವವೋ ಅಥವಾ ಅಂತಹ ಶಕ್ತಿಯಲ್ಲಿರುವ ದಾಹಾನುಕೂಲತ್ವರೂಪವಾದ ಧರ್ಮನಾಶಕತ್ವವೋ ಅಥವಾ ದಾಹಪ್ರತಿಕೂಲವಾದ ಧರ್ಮಜನಕತ್ವವೋ ಅಥವಾ ಯಾವ ಜನಕತ್ವವಿಲ್ಲದಿದ್ದರೂ ಔಪಚಾರಿಕವಾದ ದಾಹಾನುತ್ಪಾದ ಪ್ರಯೋಜಕತ್ವವೋ ಎಂದು ಪ್ರಶ್ನೆ ಮಾಡುತ್ತೇವೆ.

## ಅನುಗತವಾದ ಸಂಸರ್ಗಾಭಾವತ್ವದ ಸ್ವೀಕಾರ ಅನಿವಾರ್ಯ

**तत्राकिञ्चित्करस्य प्रतिबन्धकत्वानुपपत्तेः विपरीतधर्मान्तर-जनने, तदभावे सत्येव कार्यमित्यभावस्य कारणत्वस्वीकारः, प्रागभावादिविकल्पावकाशश्च ।**

ಅದರಲ್ಲಿ ನಾಲ್ಕನೆಯ ಪಕ್ಷದಲ್ಲಿ ಪ್ರತಿಬಂಧಕತ್ವವು ಅಮುಖ್ಯವಾದುದು. ಆದ್ದರಿಂದ ಅಕಿಂಚಿತ್ಕರವಾದಕಾರಣಮುಖ್ಯಪ್ರತಿಬಂಧಕತ್ವವು ಕೂಡುವುದಿಲ್ಲವಾದ್ದರಿಂದ ನಾಲ್ಕನೆಯ ಪಕ್ಷವನ್ನು ಪರಿತ್ಯಾಗಮಾಡಿ ತೃತೀಯ ಪಕ್ಷವಾದ ವಿಪರೀತ ಧರ್ಮಜನಕತ್ವವನ್ನು ಅಂಗೀಕಾರಮಾಡಿದರೆ ಅಂತಹ ಪ್ರತಿಕೂಲ ಧರ್ಮವು ಇರುವಾಗ ದಾಹಾಭಾವ, ಪ್ರತಿಕೂಲಧರ್ಮವಿಲ್ಲದಿದ್ದರೆ ದಾಹ ಎಂಬ ಅನ್ವಯ ವ್ಯತಿರೇಕಗಳಿಂದ ದಾಹವನ್ನು ಕುರಿತು ಪ್ರತಿಕೂಲಧರ್ಮಾಭಾವವು ಅಪೇಕ್ಷಿತವಾದ್ದರಿಂದ ಪ್ರತಿಕೂಲಧರ್ಮಾಭಾವಕ್ಕೆ ಕಾರಣತ್ವವು ಉಂಟಾಗುತ್ತದೆಯೇ ಹೊರತು ಶಕ್ತಿಗೆ ಕಾರಣತ್ವವು ಸಿದ್ಧವಾಗುವುದಿಲ್ಲ. ಆ ಅಭಾವವಾದರೋ ಪ್ರಾಗಭಾವವೋ, ಪ್ರಧ್ವಂಸವೋ ಅಥವಾ ಅತ್ಯಂತಾಭಾವವೋ ಎಂದು ವಿಕಲ್ಪ ಮಾಡಿ ಪುನಃ ವ್ಯಭಿಚಾರವು ಬರುವುದರಿಂದ ಅನುಗತವಾದ ಸಂಸರ್ಗಾಭಾವತ್ವವನ್ನು ಸ್ವೀಕಾರ ಮಾಡದೆ ಬೇರೆ ಗತಿಯೇ ಇಲ್ಲ.

## ಮೊದಲೆರಡು ಪಕ್ಷಗಳನ್ನು ವಿವಕ್ಷಿಸಿದಾಗ

**तद्विनाशे तद्धर्मविनाशे वा पुनरुत्तम्भकेन तज्जननेऽनियत-हेतुकत्वम्; पूर्वं स्वरूपोत्पादकात् इदानीमुत्तम्भकादुत्पत्तेः ।**

ಆದ್ದರಿಂದ ಮೂರನೆಯ ಪಕ್ಷವನ್ನು ಬಿಟ್ಟು ಶಕ್ತಿವಿನಾಶ ಅಥವಾ ಶಕ್ತಿಯ ಧರ್ಮವಿನಾಶ ಎಂಬ ಮೊದಲನೆಯ ಎರಡುಪಕ್ಷಗಳನ್ನು ಅವಲಂಬಿಸಿದರೆ ಮಣಿಯ ಸಮವಧಾನವಿರುವಾಗ ಶಕ್ತಿಯು ನಾಶವನ್ನು ಹೊಂದುವುದರಿಂದ ಪುನಃ ಉತ್ತೇಜಕವನ್ನು ತಂದರೂ ದಾಹವು ಉಂಟಾಗದಿರಲಿ ಎಂಬ ಆಪತ್ತಿಯು ಬರುತ್ತದೆ. ನಷ್ಟವಾದ ಶಕ್ತಿಯು ಉತ್ತೇಜಕ ಪ್ರಯೋಗದಿಂದ ಉತ್ಪನ್ನವಾಗುತ್ತದೆ ಎಂದು ಹೇಳುವುದಾದರೆ ಉತ್ತೇಜಕವನ್ನು ತರುವುದಕ್ಕಿಂತ ಮೊದಲು ವಹ್ನಿಸ್ವರೂಪೋತ್ಪಾದಕ ಸಾಮಗ್ರಿಯಿಂದಲೇ ಶಕ್ತಿಯ ಉತ್ಪಾದ.

## ಅನಿಯತಹೇತುಕತ್ವ ದೋಷವು ತಪ್ಪಿದ್ದಲ್ಲ

**न च समानशक्तिकतया तुल्यजातीयत्वान्नैवमिति साम्प्रतम्; विजातीयेषु समानशक्तिनिषेधात् ।**

ಈಗ ಮಂತ್ರಾದಿಗಳಿಂದ ಶಕ್ತಿಯ ನಾಶವಾದ ಮೇಲೆ ಉತ್ತೇಜಕದಿಂದ ಶಕ್ತಿಯ ಉತ್ಪಾದ ಎಂದು ಅನಿಯತಹೇತುಕತ್ವರೂಪವಾದ ದೋಷವು ಬಂದೇ ಬರುತ್ತದೆ. ವಹ್ನಿಸಾಮಗ್ರಿಯಲ್ಲಿಯೂ ಮತ್ತು ಉತ್ತೇಜಕದಲ್ಲಿಯೂ ಅನುಗತವಾದ ಏಕಶಕ್ತಿಯನ್ನು ಅಂಗೀಕರಿಸುವುದರಿಂದ ವ್ಯಭಿಚಾರವಿಲ್ಲ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ತೃಣಾರಣಿಮಣಿಗಳನ್ನು ವಿಚಾರಮಾಡುವಾಗಲೇ ವಿಜಾತೀಯವಾದವುಗಳಲ್ಲಿ ಅನುಗತವಾದ ಒಂದು ಶಕ್ತಿಯಿಲ್ಲ ಎಂದು ನಿರಾಸಮಾಡಿದ್ದೇವೆ. ಉತ್ತೇಜಕವು ಪ್ರತಿಬಂಧಕದಲ್ಲಿರುವ ಶಕ್ತಿಯನ್ನು ಮಾತ್ರ ನಾಶಮಾಡುತ್ತದೆ ಹೊರತಾಗಿ ವಹ್ನಿಯಲ್ಲಿ ಶಕ್ತಿಯನ್ನು ಉತ್ಪಾದನೆ ಮಾಡುವುದಿಲ್ಲ ಎಂಬುದು ಸರಿಯಲ್ಲ. ಹಾಗಿದ್ದರೆ ಉತ್ತೇಜಕವಿರುವಾಗ ವಹ್ನಿಯಲ್ಲಿ ಶಕ್ತಿರೂಪವಾದ ಕಾರಣವು ಇಲ್ಲದಿರುವುದರಿಂದ ದಾಹವು ಉಂಟಾಗದಿರಲಿ ಎಂಬ ಆಪತ್ತಿಯು ಬರುತ್ತದೆ. ಅಲ್ಲಿ ಉತ್ತೇಜಕ ಸಮವಧಾನ ಕಾಲವೇ ದಾಹವನ್ನು ಕುರಿತು ಕಾರಣ ಎಂದು ಹೇಳುವುದಾದರೆ ಕೆಲವೊಮ್ಮೆ ದಾಹವನ್ನು ಕುರಿತು ಶಕ್ತಿಯು ಕಾರಣ, ಕೆಲವೊಮ್ಮೆ ಉತ್ತೇಜಕಸಮವಧಾನ ಕಾಲವು ಕಾರಣ ಎಂದು ಅನಿಯತಹೇತುಕತ್ವದೋಷವು ಬಂದೇ ಬರುತ್ತದೆ.

## ಮೂರು ಮತ್ತು ನಾಕನೆಯ ಪಕ್ಷಗಳೇ ಅಂಗೀಕಾರಾರ್ಹ

**न च प्रतिबन्धकशक्तिमेवोत्तम्भको विरुणद्धि, न तु भावशक्तिमुत्पादयतीति साम्प्रतम्; तदनुत्पादप्रसङ्गात् ।**

कालविशेषात् तदुत्पादे तदेवानियतहेतुकत्वमिति ।।

ಆದ್ದರಿಂದ ಶಕ್ತಿಸ್ವೀಕಾರ ಪಕ್ಷದಲ್ಲಿ ಅನಿಯತಹೇತುಕತ್ವದೋಷವು ಬರುವುದರಿಂದ ಪ್ರಥಮ, ದ್ವಿತೀಯಪಕ್ಷಗಳನ್ನುಪರಿತ್ಯಜಿಸಿತೃತೀಯಚತುರ್ಥಪಕ್ಷಗಳನ್ನೇಅಂಗೀಕರಿಸುವುದುಶ್ರೇಷ್ಠವಾದುದು. ಆದ್ದರಿಂದ ಅಭಾವಕಾರಣತ್ವವು ಮತ್ತು ಮಣ್ಯಾದಿಗಳಿಗೆ ಅಮುಖ್ಯ ಪ್ರತಿಬಂಧಕತ್ವವು ಸಿದ್ಧವಾಗುತ್ತದೆ. ಮುಖ್ಯಪ್ರತಿಬಂಧಕತ್ವವನ್ನು ಕೂಡಿಸುವುದಕ್ಕೋಸ್ಕರ ಅದರಲ್ಲಿ ಮೂರನೆಯ ಪಕ್ಷವನ್ನೇ ಅಂಗೀಕರಿಸುತ್ತೇವೆ ಎಂಬುದೂ ಸರಿಯಲ್ಲ. ಪ್ರತಿಬಂಧಕ ಜನ್ಯವಾದ ವಿಪರೀತಧರ್ಮದಲ್ಲಿಯೂ ಕೆಲವೊಮ್ಮೆ ಪ್ರತಿಬಂಧಕತ್ವ ವ್ಯವಹಾರವನ್ನು ಮಾಡುವುದರಿಂದ ಅಲ್ಲಿ ಮಾಡಿದಂತೆ ಮಂತ್ರಾದಿಗಳಲ್ಲಿಯೂ ಅಮುಖ್ಯವಾದ ಪ್ರತಿಬಂಧಕತ್ವ ವ್ಯವಹಾರವೇ ಉಪಪನ್ನವಾಗುವುದರಿಂದ ಅತೀಂದ್ರಿಯ ಧರ್ಮದ ಕಲ್ಪನೆಯನ್ನು ಮಾಡಿದರೆ ಗೌರವವು ಉಂಟಾಗುತ್ತದೆ. ಆದ್ದರಿಂದ ನಾಲ್ಕನೆಯ ಪಕ್ಷವೇ ಶ್ರೇಷ್ಠವಾದುದು ಎಂದು ನಿರ್ಣಯಿಸಲ್ಪಡುತ್ತದೆ.

ಇಲ್ಲಿಗೆ ಉದಯನಾಚಾರ್ಯವಿರಚಿತವಾದ ನ್ಯಾಯಕುಸುಮಾಂಜಲಿಯಲ್ಲಿ
ಶಕ್ತಿವಾದವು ಮುಗಿಯಿತು

## ವಲ್ಲಭಾಚಾರ್ಯವಿರಚಿತ
# ನ್ಯಾಯಲೀಲಾವತಿ

# ಶಕ್ತಿವಾದ

### ಶಕ್ತಿಯು ಪದಾರ್ಥಾಂತರವಲ್ಲ

न्यायलीलावती – शक्तिरपि न (न च शक्तिरपि - पा) पदार्थान्तरम् । प्रमाणाभावात् । अर्थापत्तिस्तत्र मानमिति चेन्न, अन्यथैवोपपत्तेः । मणिमन्त्रादिना दाहप्रतिपक्षभूतस्य क्षेत्रज्ञसमवायिनोऽदृष्टभेदस्योत्पादनात् । अग्न्यन्तरेणापि तर्हि तस्य पुरुषस्य दाहो न स्यादिति चेन्न । प्रतिनियताग्निसाध्य दाहप्रतिपक्षभूतस्यैवादृष्टस्य जननात् । औषधिलिप्तकाष्ठादिषु कथमदाहः ? इति चेन्न । तत्राप्यौषधलेपकारिपुरुषसमवेतादृष्टस्य दाहप्रतिपक्षभूतस्योत्पादनात् । प्रतिपक्षसन्निधानोत्पादकादृष्ट-विशेषस्य वा दाहप्रातिकूल्यम् । अदृष्टविशेषार्जितकरतलानल-संयोगस्य वा दाहप्रतिपक्षत्वम् । स च विशेषो दाहादाहाभ्यामेव कल्पयिष्यते ।

ಶಕ್ತಿಯು ಕೂಡ ಒಂದು ಪದಾರ್ಥಾಂತರವಲ್ಲ. ಏಕೆಂದರೆ ಆ ವಿಷಯದಲ್ಲಿ ಪ್ರಮಾಣವಿಲ್ಲ. ಶಕ್ತಿಯ ವಿಷಯದಲ್ಲಿ ಅರ್ಥಾಪತ್ತಿಯು ಪ್ರಮಾಣ ಎಂದು ಹೇಳಲು ಬರುವುದಿಲ್ಲ. ಏಕೆಂದರೆ

ಅರ್ಥಾಪತ್ತಿಗೆ ಅನ್ಯಥೈವ ಉಪಪತ್ತಿ ಎಂಬ ದೋಷವು ಬರುತ್ತದೆ. ಏಕೆಂದರೆ ಮಣಿ, ಮಂತ್ರ, ಔಷಧಿಗಳಿಂದ ದಾಹಕ್ಕೆ ವಿರೋಧಿಯಾದ ಒಂದುಅದೃಷ್ಟವು ಪುರುಷನಲ್ಲಿ ಸಮವಾಯ ಸಂಬಂಧೇನ ಹುಟ್ಟುತ್ತದೆ. ಹಾಗಾದರೆ ಇನ್ನೊಂದುಅಗ್ನಿಯಿಂದಲೂ ಆ ಪುರುಷನಿಗೆ ಆಗ ದಾಹವುಂಟಾಗುವುದು ಬೇಡ ಎಂಬ ಆಪಾದನೆ ಸರಿಯಲ್ಲ. ಏಕೆಂದರೆ, ಮಣಿಮಂತ್ರಾದಿಗಳು ಒಂದು ನಿರ್ದಿಷ್ಟವಾದ ಅಗ್ನಿಯಿಂದ ಉಂಟಾಗುವ ದಾಹಕ್ಕೆ ಮಾತ್ರ ವಿರೋಧಿಯಾದ ಅದೃಷ್ಟವನ್ನು ಉಂಟು ಮಾಡುತ್ತವೆ. ಹಾಗಾದರೆ ಔಷಧಿಯಿಂದ ಲೇಪಿಸಲ್ಪಟ್ಟ ಕಾಷ್ಠಗಳಿಂದ ಏಕೆ ದಾಹವು ಉಂಟಾಗುವುದಿಲ್ಲ? ಎಂಬ ಪ್ರಶ್ನೆಯು ಸರಿಯಲ್ಲ. ಏಕೆಂದರೆ, ಅಲ್ಲಿಯೂ ಔಷಧವನ್ನು ಕಾಷ್ಠಕ್ಕೆ ಲೇಪಿಸಿದ ಪುರುಷನಲ್ಲಿಯೇ ದಾಹಕ್ಕೆ ವಿರೋಧಿಯಾದ ಅದೃಷ್ಟವು ಸಮವಾಯಸಂಬಂಧದಿಂದ ಉಂಟಾಗುತ್ತದೆ. ಅಥವಾ ದಾಹವಿರೋಧಿಯನ್ನು ಸನ್ನಿಧಾನಗೊಳಿಸುವ ಎಂದರೆ ದಾಹವಿರೋಧಿಸಂಯೋಗಕ್ಕೆ ಕಾರಣವಾದ ಅದೃಷ್ಟವಿಶೇಷದಿಂದಲೇ ದಾಹವು ಪ್ರತಿಬದ್ಧವಾಗುತ್ತದೆ ಎಂದು ಹೇಳಬಹುದು. ಅಥವಾ ಅದೃಷ್ಟವಿಶೇಷದಿಂದ ಉಂಟಾದ ಕರತಲ ಮತ್ತು ಅಗ್ನಿಯ ಸಂಯೋಗವಿಶೇಷವೇ ದಾಹಕ್ಕೆ ಪ್ರತಿಕೂಲವಾದುದು ಎಂದು ಹೇಳಬಹುದು. ಸಂಯೋಗದಲ್ಲಿರುವ ಆವಿಶೇಷವನ್ನಾದರೂ ದಾಹ ಮತ್ತು ಅದಾಹಗಳಿಂದಲೇ ಅನುಮಾನದಿಂದ ತಿಳಿಯಲ್ಪಡುತ್ತವೆ.

## ಶಕ್ತಿಯು ಅನುಮಾನದಿಂದಲೂ ಸಿದ್ಧವಾಗುವುದಿಲ್ಲ

**न्यायलीलावती – विवादास्पदं स्वरूपमात्रसम्बन्धसापेक्षं जनकत्वात् आत्मवदिति चेन्न । अत एव संस्कारादृष्टसापेक्षत वप्रसङ्गात् । तत्रात्मत्वमुपाधिरिति चेत् । तुल्यं प्रकृतेऽपि ।**

ವಿವಾದಾಸ್ಪದವಾದುದು ಸ್ವರೂಪಮಾತ್ರ ಸಂಬಂಧವುಳ್ಳ ವಸ್ತುವಿನ ಅಪೇಕ್ಷೆಯುಳ್ಳದ್ದಾಗಿದೆ, ಜನಕವಾಗಿರುವುದರಿಂದ ಆತ್ಮನಂತೆ' ಎಂಬ ಅನುಮಾನದಿಂದಲೂ ಶಕ್ತಿಯನ್ನು ಸಾಧಿಸಲು ಸಾಧ್ಯವಿಲ್ಲ. ಏಕೆಂದರೆ, ಇದೇ ಜನಕತ್ವಹೇತುವಿನಿಂದಲೇ ಸಂಸ್ಕಾರಸಾಪೇಕ್ಷತ್ವ ಮತ್ತು ಅದೃಷ್ಟಸಾಪೇಕ್ಷತ್ವವು ಸಿದ್ಧಿಯಾಗುವ ಪ್ರಸಂಗವಿದೆ. ಜನಕತ್ವ ಹೇತುವಿನಿಂದ ಸಂಸ್ಕಾರ ಅಥವಾ ಅದೃಷ್ಟವನ್ನು ಸಾಧನೆ ಮಾಡುವುದಾದರೆ ಅಲ್ಲಿ ಆತ್ಮತ್ವವು ಉಪಾಧಿಯೆಂದು ಹೇಳಲು ಬರುವುದಿಲ್ಲ. ಶಕ್ತಿಯನ್ನು ಸಾಧನೆ ಮಾಡುವಾಗಲೂ ಅದೇ ಆತ್ಮತ್ವವು ಉಪಾಧಿಯೆಂದು ಹೇಳಬಹುದು.

## ಶಕ್ತಿಘಟಿತ ಪರಿಷ್ಕಾರವೇ ಅಸಾಧ್ಯ

न्यायलीलावती – शक्तेरपि शक्त्यन्तरापेक्षायामनवस्थितः। अनपेक्षत्वे तयैव व्यभिचारात् । जननशक्तियोग्यत्वं जनकत्वमिति चेन्न। असिद्धेः। तस्माद्विवादाध्यासितं न निजरूपमात्रसम्बद्धातीन्द्रियसापेक्षं प्रमाणेन तथानुपलभ्यमानत्वात्। यत्प्रमाणेन यथा नोपलभ्यते न तत्तथाभूतं, यथा नीलं न पीतं रूपम् ।।

ಇನ್ನು ಶಕ್ತಿಗೆ ಶಕ್ತ್ಯಂತರದ ಅಪೇಕ್ಷೆ ಇದೆಯೋ ಇಲ್ಲವೋ ಎಂಬ ಪ್ರಶ್ನೆ. ಶಕ್ತ್ಯಂತರದ ಅಪೇಕ್ಷೆ ಇಲ್ಲದಿದ್ದರೆ ಶಕ್ತಿಯಲ್ಲಿ ಜನಕತ್ವವಿದೆ; ಶಕ್ತ್ಯಂತರಾಪೇಕ್ಷೆ ಇಲ್ಲ ಎಂಬ ಕಾರಣದಿಂದ ವ್ಯಭಿಚಾರವು ಬರುತ್ತದೆ. ಜನಕತ್ವವೆಂದರೆ ಜನನಶಕ್ತಿಯೋಗ್ಯತ್ವ ಎಂದುಹೇಳಲು ಬರುವುದಿಲ್ಲ. ಏಕೆಂದರೆ ಶಕ್ತಿಯನ್ನೇ ಒಪ್ಪದಿರುವವನನ್ನು ಕುರಿತು ಶಕ್ತಿಘಟಿತವಾದ ಒಂದು ಪರಿಷ್ಕಾರವನ್ನೇ ಮಾಡಲು ಬರುವುದಿಲ್ಲ.

ಆದ್ದರಿಂದ ವಿವಾದಾಸ್ಪದವಾದುದು ಸ್ವರೂಪಮಾತ್ರಸಂಬದ್ಧವಾದ ಅತೀಂದ್ರಿಯವಾದ ವಸ್ತುವಿನ ಅಪೇಕ್ಷೆಯನ್ನು ಹೊಂದುವುದಿಲ್ಲ. ಪ್ರಮಾಣದಿಂದ ಹಾಗೆ ತೋರುವುದಿಲ್ಲವಾದ್ದರಿಂದ. ಯಾವುದು ಪ್ರಮಾಣದಿಂದ ಹೇಗೆ ತೋರುವುದಿಲ್ಲವೋ ಆ ವಸ್ತುವು ಹಾಗೆ ಇರುವುದಿಲ್ಲ. ಪ್ರಮಾಣದಿಂದ ಪೀತರೂಪವಾಗಿ ತೋರದಿರುವ ನೀಲರೂಪವು ಪೀತರೂಪವಾಗದಿದ್ದಂತೆ ಎಂಬ ಅನುಮಾನದಿಂದ ಶಕ್ತಿಯನ್ನು ನಿರಾಸಮಾಡುತ್ತೇವೆ.

ವಲ್ಲಭಾಚಾರ್ಯವಿರಚಿತ ನ್ಯಾಯಲೀಲಾವತಿಯಲ್ಲಿ ಶಕ್ತಿವಾದವು ಮುಗಿಯಿತು.

* * * * *

# ವರ್ಧಮಾನಉಪಾಧ್ಯಾಯವಿರಚಿತ
# ಪ್ರಕಾಶ

## (ನ್ಯಾಯಲೀಲಾವತೀಯ ಟಿಪ್ಪಣಿ)

### ಶಕ್ತಿವಾದ

### ಮಾನಾಭಾವಾತ್ ಎಂಬ ಹೇತುವಿಗೆ ಆಶ್ರಯಾಸಿದ್ಧಿ, ವ್ಯಧಿಕರಣಸಿದ್ಧಿಗಳು ಇರುವುದಿಲ್ಲ

**न्यायलीलावतीप्रकाशः – शक्तिरपीति ।। यद्यपि मानाभावादिति हेतुराश्रयासिद्धो व्यधिकरणश्च तथापि कारणानि न स्वजन्यानुकूलाद्विष्ठातीन्द्रियभावभूतधर्मवन्ति तथात्वेनाप्रमीयमाणत्वादिति विवक्षितम् । आत्मनि तादृशादृष्टप्रसिद्धेः ।**

ಅನುವಾದ - ಶಕ್ತಿರಪಿ ಇತಿ।। – ಯದ್ಯಪಿ ಮಾನಾಭಾವಾದ್ ಎಂಬ ಹೇತುವು ಶಕ್ತಿಯೇ ಸಿದ್ಧವಾಗಿಲ್ಲದಿರುವಾಗ ಆಶ್ರಯಾಸಿದ್ಧವಾಗುತ್ತದೆ ಮತ್ತು ಪ್ರಮಾಣಾಭಾವವು ಪುರುಷನಿಷ್ಠವಾದುದರಿಂದ ವ್ಯಧಿಕರಣವೂ ಆಗುತ್ತದೆ. ಆದರೂ ಕಾರಣಗಳು ತಮ್ಮಿಂದ ಹುಟ್ಟುವ ಕಾರ್ಯಕ್ಕೆ ಅನುಕೂಲವಾದ ಎರಡು ವಸ್ತುಗಳನ್ನು ಆಶ್ರಯಿಸದ ಅತೀಂದ್ರಿಯವಾದ ಭಾವರೂಪವಾದ ಧರ್ಮವನ್ನು ಉಳ್ಳದ್ದಾಗಿವೆ. ಆ ರೀತಿಯಾಗಿ ಪ್ರಮಾಣಗಳಿಂದ ತಿಳಿದು ಬರುವುದಿಲ್ಲ ಎಂಬ ಅನುಮಾನವು ಇಲ್ಲಿ ವಿವಕ್ಷಿತವಾಗಿದೆ. ಅಂತಹ ಅನಿಷ್ಟರೂಪವಾದ ಧರ್ಮವು ಆತ್ಮನಲ್ಲಿ ಪ್ರಸಿದ್ಧವಾಗಿದೆ.

### ಪ್ರತಿಬಂಧಕಾಭಾವವನ್ನು ಕಾರಣವೆನ್ನಬಹುದೇ ?

**न्यायलीलावतीप्रकाशः – अर्थापत्तिरिति ।। यादृशादेव करतलानलसंयोगादेकदा**

दाहो दृष्टस्तादृशादेव मण्यादिसमवधाने दाहाभावो दाहप्रयोजकाभावं विनाऽनुपपद्यमानस्तं कल्पयति, तेन विना तदभावानुपपत्तेरित्यर्थः । न च प्रतिबन्धकाभावेनान्यथोपपत्तिः। उत्तेजके सति प्रतिबन्धकसत्त्वेन तद्व्यभिचारात् ।

''ಅರ್ಥಾಪತ್ತಿರಿತಿ ॥'' – ಕರತಲ ಮತ್ತು ಅಗ್ನಿಗಳ ಎಂತಹ ಸಂಯೋಗದಿಂದ ಒಮ್ಮೆ ದಾಹವು ಕಂಡುಬರುತ್ತದೆಯೋ ದಾಹಪ್ರತಿಬಂಧಕವಾದ ಮಣಿಯು ಇದ್ದಾಗ ಅಂತಹದೇ ಕರತಲ ಮತ್ತು ಅಗ್ನಿಗಳ ಸಂಯೋಗವಿದ್ದರೂ ದಾಹವು ಉಂಟಾಗುವುದಿಲ್ಲ. ಈ ದಾಹದ ಅಭಾವವು ದಾಹಕ್ಕೆ ಪ್ರಯೋಜಕವಾದ ವಸ್ತುವಿನ ಅಭಾವವಿಲ್ಲದೇ ಉಪಪನ್ನವಾಗುವುದಿಲ್ಲ. ಆದ್ದರಿಂದ ಕಾರಣದಲ್ಲಿ ಅಂತಹ ಧರ್ಮವನ್ನು ಕಲ್ಪಿಸಿಕೊಳ್ಳುತ್ತದೆ. ಅಂತಹ ಶಕ್ತಿರೂಪವಾದ ಧರ್ಮವನ್ನು ಅಂಗೀಕಾರ ಮಾಡದಿದ್ದಲ್ಲಿ ದಾಹಾಭಾವವನ್ನು ಸಮರ್ಥಿಸಲು ಬರುವುದಿಲ್ಲ. ಪ್ರತಿಬಂಧಕಾಭಾವದಿಂದಲೇ ಈ ಅರ್ಥಾಪತ್ತಿಯು ಅನ್ಯಥೋಪಪನ್ನವಾಗುತ್ತದೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ, ಉತ್ತೇಜಕವು ಇರುವಾಗ ಪ್ರತಿಬಂಧಕವೇ ಇದ್ದರೂ ದಾಹವು ಉಂಟಾಗುತ್ತದೆ. ಆದ್ದರಿಂದ ದಾಹವನ್ನುಕುರಿತು ಪ್ರತಿಬಂಧಕಾಭಾವವು ಕಾರಣವೆಂದು ಹೇಳಲು ಬರುವುದಿಲ್ಲ.

## ಉತ್ತೇಜಕಾಭಾವವಿಶಿಷ್ಟ ಪ್ರತಿಬಂಧಕಾಭಾವವೂ ಕೂಡ ದಾಹಕಾರಣವಲ್ಲ

**न्यायलीलावतीप्रकाशः** – न चोत्तेजकाभावविशिष्टप्रतिबन्धकाभावः कारणं तस्य विशेषणविशेष्यतदुभयाभावेष्वनुगतत्वादिति वाच्यम्, विशिष्टस्यातिरिक्तस्यानभ्युपगमेनाननुगमात् । न च विशिष्टविरोधित्वमनुगतम् । विरोधो हि न परस्पराभावव्याप्यत्वं तदाक्षेपकं वा । विशेषणाद्यभावस्य विशिष्टाभावत्वे तदव्याप्यत्वादतदाक्षेपकत्वाच्च । अभेदे तयोरभावात् ।

ಉತ್ತೇಜಕಾಭಾವವಿಶಿಷ್ಟವಾದ ಪ್ರತಿಬಂಧಕದ ಅಭಾವವು ದಾಹವನ್ನು ಕುರಿತು ಕಾರಣ ಎಂದು ಹೇಳಲು ಬರುವುದಿಲ್ಲ. ಹೀಗೆ ಹೇಳುವವರಿಗೆ ವಿಶಿಷ್ಟಾಭಾವವು ವಿಶೇಷಣಾಭಾವ, ವಿಶೇಷ್ಯಾಭಾವ ಮತ್ತು ಉಭಯಾಭಾವಗಳಲ್ಲಿ ಅನುಗತವಾಗಿರುತ್ತದೆ ಎಂದುಅಭಿಪ್ರಾಯವಿರುತ್ತದೆ. ಆದರೆ, ವಿಶೇಷಣಾಭಾವ, ವಿಶೇಷ್ಯಾಭಾವ ಮತ್ತು ಉಭಯಾಭಾವ ಇವುಗಳಿಂದ ಅತಿರಿಕ್ತವಾಗಿ ಒಂದು ವಿಶಿಷ್ಟಾಭಾವವೇ ಇಲ್ಲವೆಂದು ಹೇಳುವ ಪಕ್ಷದಲ್ಲಿ ಈ ಮೂರು ಅಭಾವಗಳು

ಅನುಗತವಾಗುವುದಿಲ್ಲವಾದ್ದರಿಂದ ವಿಶಿಷ್ಟಾಭಾವವನ್ನು ಕಾರಣ ಎಂದು ಹೇಳಲು ಬರುವುದಿಲ್ಲ. ಈ ಮೂರುಅಭಾವಗಳಲ್ಲಿಯೂ ವಿಶಿಷ್ಟವಿರೋಧಿತ್ವ ಇರುವುದರಿಂದ ವಿಶಿಷ್ಟವಿರೋಧಿತ್ವರೂಪದಿಂದ ಅವುಗಳನ್ನು ಅನುಗಮ ಮಾಡಬಹುದು ಎಂಬುದೂ ಸರಿಯಲ್ಲ. ಏಕೆಂದರೆ, ಪರಸ್ಪರ ಅಭಾವವ್ಯಾಪ್ಯತ್ವವನ್ನಾಗಲೀ ಪರಸ್ಪರಾಭಾವ ಆಕ್ಷೇಪತ್ವವನ್ನಾಗಲೀ ಈ ಮೂರು ಅಭಾವಗಳಿಗೂ ಮತ್ತು ವಿಶಿಷ್ಟಾಭಾವಕ್ಕೂ ಹೇಳಲು ಬರುವುದಿಲ್ಲ. ಏಕೆಂದರೆ ಈ ಮೂರು ಅಭಾವಗಳು ಮತ್ತು ವಿಶಿಷ್ಟಾಭಾವವು ಅಭಿನ್ನ ಎಂದು ಹೇಳುವವರಿಗೆ ಭೇದಸಾಪೇಕ್ಷವಾದ ವ್ಯಾಪ್ಯತ್ವವಾಗಲೀ ಅಥವಾ ಆಕ್ಷೇಪಕತ್ವವಾಗಲೀ ಸಮ್ಮತವಾಗುವುದಿಲ್ಲ.

## ವಿಶಿಷ್ಟಾಭಾವವು ವ್ಯತಿರಿಕ್ತವಲ್ಲ

**न्यायलीलावतीप्रकाशः** – न च व्यासज्यप्रतियोगिकोऽन्य एवाऽभावः । क्लृप्तेनैवोपपत्तेस्तादृशाभावानभ्युपगमादित्युक्तम् । अभ्युपगमे वा केवलप्रतिबन्धकसत्त्वेऽपि तदभावाद्दाहापत्तेः । न हि यत्रैकमेव तत्र त्रयमिह नास्तीति न प्रतीयते, तस्य समुदाय-विरोधिनो यावत् समुदायिसद्भाव एव विरहादिति भावः ।

ಅಥವಾ ವಿಶಿಷ್ಟಾಭಾವವು ವ್ಯಾಸಜ್ಯವೃತ್ತಿಪ್ರತಿಯೋಗಿತಾಕವಾದ ಇನ್ನೊಂದು ಅಭಾವ. ಅದು ಈ ಮೂರು ಅಭಾವಗಳಿಂದಲೂ ವ್ಯತಿರಿಕ್ತವಾಗಿದೆ ಎಂದು ಹೇಳಲೂ ಬರುವುದಿಲ್ಲ. ಏಕೆಂದರೆ, ಕ್ಲೃಪ್ತವಾದ ಮೂರು ಅಭಾವಗಳಿಂದಲೇ ಎಲ್ಲವನ್ನೂ ಕೂಡಿಸಲು ಬರುವಾಗ ಅತಿರಿಕ್ತವಾದ ವ್ಯಾಸಜ್ಯಪ್ರತಿಯೋಗಿತಾಕವಾದ ಇನ್ನೊಂದು ಅಭಾವವನ್ನು ಒಪ್ಪಿದರೆ ಗೌರವವು ಬರುತ್ತದೆ. ಮತ್ತು ವ್ಯಾಸಜ್ಯ ಪ್ರತಿಯೋಗಿಕವಾದ ಅಂತಹ ಅಭಾವವನ್ನು ಒಪ್ಪಿದರೂ ಕೇವಲ ಪ್ರತಿಬಂಧಕವು ಒಂದೇ ಇರುವಾಗ ವ್ಯಾಸಜ್ಯಪ್ರತಿಯೋಗಿಕವಾದ ಅಭಾವವು ಇದ್ದೇ ಇರುವುದರಿಂದ ಆಗ ದಾಹವು ಉಂಟಾಗಲಿ ಎಂದು ಆಪಾದನೆ ಮಾಡಲು ಬರುತ್ತದೆ. ಏಕೆಂದರೆ ಒಂದೇ ವಸ್ತುವಿರುವ ಸ್ಥಳದಲ್ಲಿ ಅದನ್ನು ಸೇರಿಸಿದ ಎರಡು ವಸ್ತುಗಳಿಲ್ಲ ಎಂದು ಹೇಳಲು ಬರುತ್ತದೆ. ಇಂತಹ ಸಮುದಾಯ ವಿರೋಧಿಯಾದ ಅಭಾವವು ಆ ಸಮುದಾಯಕ್ಕೆ ಸೇರಿದ ಎಲ್ಲ ವ್ಯಕ್ತಿಗಳೂ ಇರುವಲ್ಲಿ ಮಾತ್ರ ಬರುವುದಿಲ್ಲ ಎಂದು ಅಭಿಪ್ರಾಯ.

## 'ಅನ್ಯಥೈವ' ಎಂಬಲ್ಲೇಕೆ ಏವಕಾರ ?

**न्यायलीलावतीप्रकाशः – अन्यथैवेति ।।** न च शक्तावप्रतीतावेवकारव्यवच्छेद्याभावः, वक्ष्यमाणादृष्टविशेषाभावेनोपपत्तेरित्येवं परत्वात् । मणिमन्त्रादिनेति ।। उत्तेजके च सति दाहस्तज्जन्यादृष्टेन समानाधिकरणेन दाहप्रतिपक्षादृष्टनाशात् । न तु तदभाव विशिष्टदाहप्रतिपक्षादृष्टाभावः कारणम् । विशिष्टाभावकारणत्वे बाधस्योक्तत्वादिति भावः ।

ಅನ್ಯಥೈವೇತಿ ॥ ಶಕ್ತಿಯೇ ಸಿದ್ಧವಾಗಿಲ್ಲದಿರುವಾಗ ಶಕ್ತಿಯನ್ನು ವ್ಯಾವೃತ್ತಿ ಮಾಡಲು ಅನ್ಯಥೈವ ಎಂದು ಏವಕಾರವನ್ನು ಹೇಗೆ ಉಪಯೋಗಿಸಿದ್ದಾರೆ ಎಂಬ ಪ್ರಶ್ನೆ ಸರಿಯಲ್ಲ. ಏಕೆಂದರೆ ಏವಕಾರವನ್ನು ಉಪಯೋಗಿಸಿರುವುದು ಶಕ್ತಿಯ ವ್ಯವಚ್ಛೇದಕ್ಕಾಗಿ ಅಲ್ಲ. ಆದರೆ ಮುಂದೆ ಹೇಳುವಂತೆ ಅದೃಷ್ಟವಿಶೇಷಾಭಾವದಿಂದಲೇ ಎಲ್ಲವೂ ಉಪಪನ್ನವಾಗುತ್ತದೆ ಎಂಬ ಅಭಿಪ್ರಾಯದಿಂದ ಏವಕಾರವನ್ನು ಉಪಯೋಗಿಸಿದ್ದಾರೆ.

ಮಣಿಮಂತ್ರಾದಿನೇತಿ ॥ ಉತ್ತೇಜಕವು ಇರುವಾಗ ಪ್ರತಿಬಂಧಕವಾದ ಮಣಿ ಇದ್ದರೂ ದಾಹವು ಉಂಟಾಗುತ್ತದೆ. ಏಕೆಂದರೆ ಉತ್ತೇಜಕದಿಂದ ಉತ್ಪನ್ನವಾಗುವ ಅದೃಷ್ಟವು ಅದೇ ಪುರುಷನಲ್ಲಿರುವ (ಸಮಾನಾಧಿಕರಣವಾದ) ದಾಹವಿರೋಧಿಯಾದ ಅದೃಷ್ಟವನ್ನು ನಾಶ ಮಾಡುತ್ತದೆ ಹೀಗೆ ಹೇಳಬೇಕೇ ಹೊರತು ಉತ್ತೇಜಕಾಭಾವವಿಶಿಷ್ಟವಾದ ದಾಹವಿರೋಧಿಯಾದ ಅದೃಷ್ಟದ ಅಭಾವವು ಕಾರಣ ಎಂದು ಹೇಳಬಾರದು. ಏಕೆಂದರೆ ಮೊದಲೇ ತಿಳಿಸಿದಂತೆ ವಿಶಿಷ್ಟಾಭಾವವು ವಿಶೇಷಣಾಭಾವಾದಿ ಮೂರು ಅಭಾವಗಳಿಂದ ಭಿನ್ನವೇ ಆಗದಿರುವುದರಿಂದ ಬಾಧವು ಉಂಟಾಗುತ್ತದೆ.

## ಉತ್ತೇಜಕಮಣಿಯು ಅದೃಷ್ಟೋತ್ಪಾದಕವಾಗಬಹುದೇ ?

**न्यायलीलावतीप्रकाशः – तत्रापीति ।।** स्वयमौषधलिप्तकाष्ठादावदाहश्चादाह-प्रयोजनिनामदृष्टादिति भावः । ननु मण्यादिसंसर्गस्यादृष्टजनकत्वे मानाभावः, भावे वा तज्जनकशौचाचमनादेः साधारणकारणस्याप्यन्वयः स्यात् । न चाशुचेरेव तत्कर्तव्यं शौचे सति तदभावापत्तेः । शौचाशौचयोरन्यतरानन्वयश्चासम्भावित

एव । अधर्मरूपत्वे च तत्र प्रेक्षावतामप्रवृत्तिः स्यादत आह – **प्रतिपक्षेति** ।। सर्वो
ऽत्पत्तिमतामदृष्टजन्यत्वात् पूर्वशौचे सत्येव तस्योत्पादनाच्च नोक्तदोष इत्यर्थः ।

ತತ್ರಾಪೀತಿ ॥ ಔಷಧಿಯಿಂದ ಲೇಪಿಸಲ್ಪಟ್ಟ ಕಾಷ್ಠದಿಂದ ದಾಹವಾಗದಿರುವಿಕೆಯು ಅಂತಹ ಅದಾಹವನ್ನು ಹೊಂದುವ ಯೋಗ್ಯತೆಯುಳ್ಳ ಪುರುಷನ ಅದೃಷ್ಟದಿಂದ ಉಂಟಾಗುತ್ತದೆ ಎಂದು ಅಭಿಪ್ರಾಯ. ಇನ್ನು ಉತ್ತೇಜಕಮಣಿಯ ಸಂಬಂಧದಿಂದ ಅದೃಷ್ಟವು ಉಂಟಾಗುತ್ತದೆ ಎಂಬ ವಿಷಯದಲ್ಲಿ ಪ್ರಮಾಣವಿದ್ದರೂ ಆ ಅದೃಷ್ಟವನ್ನು ಕುರಿತು ಶೌಚಾಚಮನಾದಿಗಳು ಕಾರಣವಾಗ ಬೇಕಾಗುತ್ತದೆ. ಅಶುಚಿಯಾದವನೇ ಉತ್ತೇಜಕಮಣಿಯನ್ನು ಇಡಬೇಕೆಂಬ ನಿಯಮವಿಲ್ಲ. ಏಕೆಂದರೆ ಅವನು ಶುಚಿಯಾಗಿದ್ದರೆ ಅದೃಷ್ಟ ಉಂಟಾಗದೇ ಹೋಗಬೇಕಾಗುತ್ತದೆ. ಅದೃಷ್ಟಜನಕವಾದ ಎಲ್ಲಾ ಕ್ರಿಯೆಗಳಲ್ಲೂ ಶೌಚ ಅಥವಾ ಅಶೌಚದ ಅನ್ವಯ ಇದ್ದೇ ಇರುತ್ತದೆ. ಉತ್ತೇಜಕಮಣಿಯಿಂದ ಅಧರ್ಮರೂಪವಾದ ಅದೃಷ್ಟವು ಉಂಟಾಗುವುದಾದರೆ ವಿವೇಕಿಗಳಾದವರಿಗೆ ಅದರಲ್ಲಿ ಪ್ರವೃತ್ತಿಯಾಗಲು ಸಾಧ್ಯವಿಲ್ಲ ಎಂಬ ಶಂಕೆಯೂ ಸರಿಯಲ್ಲವೆಂದು ''ಪ್ರತಿಪಕ್ಷ'' ಎಂದು ಪ್ರಾರಂಭವಾಗುವ ಪ್ರತಿಪಕ್ಷಭೂತಸ್ಯೈವ ಅದೃಷ್ಟಸ್ಯ ಎಂಬ ಪದಗಳಿಂದನಿರಾಕರಣೆ ಮಾಡುತ್ತಾರೆ. ಪ್ರತಿಪಕ್ಷೇತಿ ॥ ಉತ್ಪತ್ತಿಯನ್ನು ಹೊಂದುವ ವಸ್ತುವೆಲ್ಲವೂ ಅದೃಷ್ಟದಿಂದಲೇ ಉಂಟಾಗುತ್ತದೆ. ಪೂರ್ವಶೌಚವು ಇದ್ದರೆ ಮಾತ್ರ ಅದೃಷ್ಟವು ಉತ್ಪತ್ತಿಯಾಗುತ್ತದೆ. ಆದ್ದರಿಂದ ಅದು ಅಧರ್ಮರೂಪವಲ್ಲ. ಆದ್ದರಿಂದ ಹಿಂದೆ ಹೇಳಿದ ದೋಷವಿಲ್ಲ.

## ಅದೃಷ್ಟೋತ್ಪಾದಕವಾದಾಗ ದಾಹೋತ್ಪಾದ ಆಗದಿರಲಿ

**न्यायलीलावतीप्रकाशः** – नन्वेवमपि तादृशाददृष्टान्मण्याद्यप्रयोगेऽपि दाहानापत्तिः । न ह्यदृष्टे सत्यवश्यं प्रतिपक्षसन्निधिरिति नियमः, अग्रिमकाल एव प्रतिपक्षसन्निधिदर्शनात् तदसिद्धेरभावादित्यत आह – **अदृष्टविशेषार्जितेति**।। संयोगे योग्यानुपलम्भात् तदभावः योग्यव्यक्तिवृत्तित्वेन जातेर्योग्यत्वादित्यत आह – **स चेति** ।। सत्यपि योग्यत्वे व्यञ्जकाग्रहात् तदग्रह इत्यर्थः ।

ಹಾಗಾದರೆ ಪುರುಷನಲ್ಲಿಅಂತಹ ಅದೃಷ್ಟ ಉಂಟಾದಾಗ ಉತ್ತೇಜಕಮಣಿಯನ್ನು ಪ್ರಯೋಗಿಸಿದ್ದರೂ ದಾಹವಾಗದೇ ಇರಲಿ. ಅದೃಷ್ಟವಿದ್ದಾಗಲೆಲ್ಲ ದಾಹವಿರೋಧಿಯಾದ ವಸ್ತುವಿನ

ಸನ್ನಿಧಾನವು ಇರಲೇಬೇಕೆಂಬ ನಿಯಮವಿಲ್ಲವಷ್ಟೇ. ಮುಂದಿನ ಕ್ಷಣದಲ್ಲಿಯೇ ಅಂತಹ ಉತ್ತೇಜಕ ಮಣಿಯ ಸನ್ನಿಧಾನವು ಉಂಟಾಗುವುದರಿಂದ ಹಿಂದಿನ ಕ್ಷಣದಲ್ಲಿ ಅಂತಹ ಅದೃಷ್ಟವು ಸಿದ್ಧವಾಗುತ್ತದೆ ಎಂಬ ಶಂಕೆಗೆ ಅದೃಷ್ಟವಿಶೇಷ ಎಂಬ ಪದಗಳಿಂದ ಸಮಾಧಾನವನ್ನು ಹೇಳುತ್ತಾರೆ.

ಅದೃಷ್ಟವಿಶೇಷೇತಿ ॥ ಕರತಲಾನಲಸಂಯೋಗದಲ್ಲಿ ಒಂದು ವಿಶೇಷವಾದ ಜಾತಿಇರುವುದಾದರೆ ಯೋಗ್ಯವ್ಯಕ್ತಿವೃತ್ತಿಯಾದ ಜಾತಿಯು ಯೋಗ್ಯವಾದುದರಿಂದ ಅಂತಹ ಜಾತಿಯ ಪ್ರತ್ಯಕ್ಷವಾಗಬೇಕು. ಅಂತಹ ಜಾತಿಯ ಪ್ರತ್ಯಕ್ಷವಿಲ್ಲವಾದ್ದರಿಂದ ಸಂಯೋಗದಲ್ಲಿ ಅಂತಹ ವಿಶೇಷವನ್ನು ಒಪ್ಪಲು ಬರುವುದಿಲ್ಲ. ಎಂಬ ಶಂಕೆಗೆ ಸಚೇತಿ ಎಂಬ ವಾಕ್ಯದಿಂದ ಸಮಾಧಾನವನ್ನು ಹೇಳುತ್ತಾರೆ. – ಸಚೇತಿ ॥ ಯೋಗ್ಯವಾದ ಸಂಯೋಗದಲ್ಲಿರುವ ಜಾತಿಯು ಯೋಗ್ಯವಾದರೂ ಸಹ ಜಾತಿಗೆ ವ್ಯಂಜಕವಾದುದು ತೋರದಿರುವುದರಿಂದ ಜಾತಿಯ ಜ್ಞಾನವು ಉಂಟಾಗುವುದಿಲ್ಲ ಎಂದು ಅಭಿಪ್ರಾಯ.

## ದಾಹಕ್ಕೆ ಕರತಲಾನಲಸಂಯೋಗವಿಶೇಷವೇ ಪ್ರತಿಬಂಧಕ

**न्यायलीलावतीप्रकाशः – न चैवमसत्यपि प्रतिबन्धके क्वचिद् दाहः स्यात् सत्यपि चोत्तेजके दाहो न स्यादिति वाच्यम्, कार्यदर्शनमानकत्वे तस्य सत्येव प्रतिबन्धके उत्तेजकाभावे च तत्कल्पनात् । 'प्रहरं मा दह' इत्यत्र च मन्त्रप्रयोक्त्रभिमतः काल एव प्रतिबन्धकः । यद्वा संयोगभेद एव तत्रापि कल्प्यत इत्यर्थः ।**

ಈ ರೀತಿಯಾಗಿ ದಾಹವಿರೋಧಿಯಾದ ಅದೃಷ್ಟವಿಶೇಷವನ್ನಾಗಲೀ ಅಥವಾ ಅಂತಹ ಅದೃಷ್ಟವಿಶೇಷದಿಂದ ಸಂಪಾದಿಸಲ್ಪಟ್ಟ ಕರತಲಾನಲಸಂಯೋಗವನ್ನಾಗಲೀ ದಾಹವಿರೋಧಿ ಯೆಂದು ಹೇಳುವುದಾದರೆ ಒಮ್ಮೊಮ್ಮೆ ಪ್ರತಿಬಂಧಕವಿಲ್ಲದಿರುವಾಗಲೂ ದಾಹವುಂಟಾಗಲೀ ಹಾಗೆಯೇ ಉತ್ತೇಜಕವಿರುವಾಗಲೀ ದಾಹವುಂಟಾಗಲೀ ಎಂಬ ಆಕ್ಷೇಪ ಸರಿಯಲ್ಲ. ಏಕೆಂದರೆ ಕಾರ್ಯದರ್ಶನದಿಂದಲೇ ಅದೃಷ್ಟವನ್ನು ಕಲ್ಪನೆ ಮಾಡುವುರಿಂದ ಅಂತಹ ಅದೃಷ್ಟವನ್ನು ಉತ್ತೇಜಕವಿಲ್ಲದೇ ಕೇವಲ ಪ್ರತಿಬಂಧಕವಿರುವಾಗ ಕಲ್ಪನೆ ಮಾಡುತ್ತೇವೆ. ಉತ್ತೇಜಕ ವಿರುವ ಸಂದರ್ಭದಲ್ಲಿಅಥವಾ ಪ್ರತಿಬಂಧಕವಿಲ್ಲದಿರುವ ಸಂದರ್ಭದಲ್ಲಿ ಆ ಅದೃಷ್ಟವನ್ನೇ ಕಲ್ಪನೆ ಮಾಡುವುದರಿಂದ ಹಿಂದೆ ಹೇಳಿದ ಆಪತ್ತಿಯು ಬರುವುದಿಲ್ಲ. 'ಒಂದು ಯಾಮದ ವರೆಗೆ

ದಹಿಸಬೇಡ' ಎಂಬ ಮಂತ್ರಪ್ರಯೋಗವನ್ನು ಮಾಡಿದ ಸ್ಥಳದಲ್ಲಿ ಮಂತ್ರವನ್ನು ಉಚ್ಚರಿಸುವ ಪುರುಷನಿಗೆ ಅಭಿಮತವಾದ ಕಾಲವೇ ದಾಹಕ್ಕೆ ಪ್ರತಿಬಂಧಕವಾಗಿರುತ್ತದೆ. ಅಥವಾ ಅಲ್ಲಿಯೂ ಕೂಡ ಕರತಲಾನಲಸಂಯೋಗವಿಶೇಷವೇ ದಾಹಕ್ಕೆ ಪ್ರತಿಬಂಧಕ ಎಂದುಕಲ್ಪನೆ ಮಾಡಬಹುದು.

## ಸಿದ್ಧಸಾಧನತಾ ದೋಷದ ಜೊತೆ ಮತ್ತೊಂದು ದೋಷ

**न्यायलीलावतीप्रकाशः – स्वरूपमात्रेति ।। 'एकवृत्ती' इत्यर्थः । तेनादृष्टवदात्मसंयोगेन नार्थान्तरं कार्यानुकूलत्वेन साध्यविशेषणाच्च स्पन्दानुकूलस्थितिस्थापकेनार्थान्तरम्, अतीन्द्रियत्वेन विशेषणाच्चोष्णस्पर्शेनार्थान्तरम् । अत्रादृष्टापेक्षत्वेन सिद्धसाधनम् । अदृष्टं ह्यात्मनि स्वरूपमात्रसम्बद्धमपेक्षणीयं च कारणैः पक्ष एव तथासम्बद्धोऽप्रसिद्ध एवेति दूषणे सत्येवाह – अत एवेति ।।**

ಸ್ವರೂಪಮಾತ್ರೇತಿ ॥ ಸ್ವರೂಪಮಾತ್ರಸಂಬಂಧ ಎಂದರೆ ಒಂದೇ ವೃತ್ತಿಯಲ್ಲಿರುವ ಎಂದರ್ಥ. ಆದ್ದರಿಂದ ಅದೃಷ್ಟಾಶ್ರಯನಾದ ಆತ್ಮನ ಸಂಯೋಗವನ್ನು ತೆಗೆದುಕೊಂಡು ಅರ್ಥಾಂತರವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಸಂಯೋಗವು ದ್ವಿಷ್ಠವಾಗಿರುತ್ತದೆ. ಸ್ವರೂಪಮಾತ್ರ ಸಂಬಂಧಸಾಪೇಕ್ಷ ಎಂಬಲ್ಲಿ ಸ್ವರೂಪಮಾತ್ರ ಸಂಬಂಧವುಳ್ಳ ಕಾರ್ಯಾನುಕೂಲವುಳ್ಳದ್ದರ ಅಪೇಕ್ಷೆಯುಳ್ಳದ್ದು ಎಂದು ಕಾರ್ಯಾನುಕೂಲತ್ವವನ್ನು ಸಾಧ್ಯಕ್ಕೆ ವಿಶೇಷಣವನ್ನಾಗಿ ಕೊಡುತ್ತೇವೆ. ಆದ್ದರಿಂದ ಸ್ಯಂದನಕ್ಕೆ ಅನುಕೂಲವಾದ ಸ್ಥಿತಿಸ್ಥಾಪಕತ್ವವನ್ನು ತೆಗೆದುಕೊಂಡು ಅರ್ಥಾಂತರವನ್ನುಹೇಳಲು ಬರುವುದಿಲ್ಲ. ಏಕೆಂದರೆ ಸ್ಥಿತಿಸ್ಥಾಪಕತ್ವವು ದಾಹಕ್ಕೆ ಅನುಕೂಲವಾಗಿರುವುದಿಲ್ಲ. ಹಾಗೆಯೇ ಸಾಧ್ಯದಲ್ಲಿ ಅತೀಂದ್ರಿಯ ಎಂಬ ವಿಶೇಷಣವನ್ನು ಕೊಡುತ್ತೇವೆ. ಹಾಗೆಯೇ ಉಷ್ಣಸ್ಪರ್ಶವನ್ನು ತೆಗೆದುಕೊಂಡು ಅರ್ಥಾಂತರವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಉಷ್ಣಸ್ಪರ್ಶವು ಅತೀಂದ್ರಿಯವಲ್ಲ. ಈ ಅನುಮಾನಕ್ಕೆ ಅದೃಷ್ಟವನ್ನು ತೆಗೆದುಕೊಂಡು ಸಿದ್ಧಸಾಧನವು ಬರುತ್ತದೆ. ಏಕೆಂದರೆ ಅದೃಷ್ಟವು ಆತ್ಮನಲ್ಲಿ ಏಕಮಾತ್ರವೃತ್ತಿಯಾಗಿದೆ ಮತ್ತು ಕಾರಣಗಳಿಗೆ ಅಥವಾ ಕಾರಣಗಳಿಂದ ಅಪೇಕ್ಷಿತವೂ ಆಗಿದೆ. ಆದ್ದರಿಂದ ಪಕ್ಷದಲ್ಲಿ ಅಂತಹ ಸಂಬಂಧವುಳ್ಳ ವಸ್ತು ಪ್ರಸಿದ್ಧವಾಗಿರುವುದರಿಂದ ಸಿದ್ಧಸಾಧನತಾ

ದೋಷವು ಬರುತ್ತದೆ ಎಂಬ ದೋಷವಿದ್ದರೂ ಅತ ಏವ ಎಂದು ದೋಷಾಂತರವನ್ನು ಹೇಳುತ್ತಾರೆ - ಅತ ಏವೇತಿ ॥

## ದ್ರವ್ಯತ್ವವು ಉಪಾಧಿ

**न्यायलीलावतीप्रकाशः** – **तुल्यं प्रकृतेऽपीति ।। नन्वात्मत्वं नोपाधिः । बीजादौ सर्वत्रादृष्टापेक्षया साध्याव्यापकत्वात् । अत्राहुः । अत्र यदि द्रव्यं पक्षस्तदाऽवयविनि स्पन्दानुकूलस्थितिस्थापकेन नित्यद्रव्ये च योगिसाक्षात्कारानुकूलविशेषपदार्थेन सिद्धसाधनं गुणपक्षत्वे च द्रव्यत्वमुपाधिः ।**

ತುಲ್ಯಂ ಪ್ರಕೃತೇಪೀತಿ ॥ ಈ ಅದೃಷ್ಟವನ್ನು ಸಾಧನೆ ಮಾಡುವ ಅನುಮಾನಕ್ಕೆ ಆತ್ಮತ್ವವು ಉಪಾಧಿಯಾಗುವುದಿಲ್ಲ. ಏಕೆಂದರೆ, ಬೀಜಾದಿಗಳಲ್ಲಿ ಎಲ್ಲ ಕಡೆಯಲ್ಲಿಯೂ ಅದೃಷ್ಟಾಪೇಕ್ಷತ್ವವು ಇದೆ. ಆದರೆ ಆತ್ಮತ್ವವಿಲ್ಲ. ಆದ್ದರಿಂದ ಉಪಾಧಿಗೆ ಸಾಧ್ಯವ್ಯಾಪಕತ್ವವು ಬರುವುದಿಲ್ಲವಾದ್ದರಿಂದ ಆತ್ಮತ್ವವು ಉಪಾಧಿಯಾಗುವುದಿಲ್ಲ. ಈ ದೋಷವನ್ನು ಪರಿಹಾರ ಮಾಡಲು ಹೀಗೆ ಹೇಳುತ್ತಾರೆ. ಈ ಅನುಮಾನದಲ್ಲಿ ಒಂದು ಪಕ್ಷ ದ್ರವ್ಯವು ಪಕ್ಷವಾದರೆ ಅವಯವಿ ದ್ರವ್ಯದಲ್ಲಿ ಸ್ಯಂದನಾನುಕೂಲಸ್ಥಿತಿಸ್ಥಾಪಕತ್ವದಿಂದ ಸಿದ್ಧಸಾಧನವು ಬರುತ್ತದೆ. ಮತ್ತು ನಿತ್ಯದ್ರವ್ಯದಲ್ಲಿ ಯೋಗಿ ಸಾಕ್ಷಾತ್ಕಾರಕ್ಕೆ ಅನುಕೂಲವಾದ ವಿಶೇಷಪದಾರ್ಥವನ್ನು ತೆಗೆದುಕೊಂಡು ಸಿದ್ಧಸಾಧನವು ಬರುತ್ತದೆ. ಗುಣವನ್ನು ಪಕ್ಷ ಮಾಡಿದರೆ ಆಗ ದ್ರವ್ಯತ್ವವು ಉಪಾಧಿಯಾಗುತ್ತದೆ ಎಂದು ಅಭಿಪ್ರಾಯ.

## ಅನುಮಾನವು ಅಪ್ರಯೋಜಕವಾಗಿದೆ

**न्यायलीलावतीप्रकाशः**–**यद्वा, पूर्वापरितोषेणाह–शक्तेरपीति ।। अपसिद्धान्तश्चेति शेषः । तयैवेति ।। ननु सापेक्षत्वं तज्जन्यज१नकत्वं तच्च शक्तावस्त्येव, न हि शक्तिजन्यजनकत्वं न शक्तौ विरोधात् । किञ्च शक्तिस्वीकारोऽनेनैव प्रमाणेन । तथा च शक्त्या तद्दूषणे उपजीव्यविरोधः । मैवम्, प्रतिपक्षादृष्टाभावेनान्यथोपपत्तेरनुमानमप्रयोजकम् ।.**

ಅಥವಾ ಈ ಅಸಮಾಧಾನದಿಂದಲೇ ಶಕ್ತೇರಪಿ ಎಂದು ದೋಷಾಂತರವನ್ನು ಹೇಳುತ್ತಾರೆ. - ಶಕ್ತೇರಪೀತಿ ॥ ಅಪಸಿದ್ಧಾಂತದೋಷವೂ ಬರುತ್ತದೆ ಎಂದು ತೆಗೆದುಕೊಳ್ಳಬೇಕು. ತಯ್ಯೆವೇತಿ ॥ ನೀವು ಶಕ್ತಿಯಲ್ಲಿಯೇ ವ್ಯಭಿಚಾರವನ್ನು ಹೇಳಿದಿರಿ. ಅದು ಸರಿಯಲ್ಲ. ಶಕ್ತಿಯಲ್ಲಿ ಜನಕತ್ವವೂ ಇದೆ ಶಕ್ತಿ ಸಾಪೇಕ್ಷತ್ವವು ಇದೆ. ಏಕೆಂದರೆ ಸಾಪೇಕ್ಷತ್ವ ಎಂದರೆ ತಜ್ಜನ್ಯಜನಕತ್ವರೂಪವಾದುದು. ಅದು ಶಕ್ತಿಯಲ್ಲಿ ಇದ್ದೇ ಇದೆ. ಶಕ್ತಿಜನ್ಯವಾದುದಕ್ಕೆ ಶಕ್ತಿಯು ಜನಕವಲ್ಲವೆಂದು ಹೇಳುವುದಾದರೆ ವಿರೋಧವುಂಟಾಗುವುದಷ್ಟೇ. ಅದಲ್ಲದೇ ಶಕ್ತಿಯ ಸಿದ್ಧಿಯೂ ಕೂಡ ಈ ಅನುಮಾನದಿಂದಲೇ ಉಂಟಾಗಬೇಕು. ಹಾಗೆ ಸಿದ್ಧವಾದ ಶಕ್ತಿಯನ್ನು ತೆಗೆದುಕೊಂಡು ಅನುಮಾನವನ್ನು ದೂಷಿಸುವುದಾದರೆ ಉಪಜೀವ್ಯವಿರೋಧ ಬರುತ್ತದೆ ಎಂಬ ಈ ಶಂಕೆಯೂ ಸರಿಯಲ್ಲ. ಪ್ರತಿಯೋಗಿ ಅದೃಷ್ಟ ಅಥವಾ ವಿರೋಧಿ ಅದೃಷ್ಟಾಭಾವದಿಂದಲೇ ಕೆಲವನ್ನು ಕೂಡಿಸಲು ಬರುವಾಗ ಅನುಮಾನವುಅಪ್ರಯೋಜಕ ಎಂದುನಮ್ಮ ಅಭಿಪ್ರಾಯ.

## ಶಕ್ತಿಯ ವಿಷಯದಲ್ಲಿ ಸಾಧಕಪ್ರಮಾಣವೇ ಇಲ್ಲ

**न्यायलीलावतीप्रकाशः –** यद्वा याऽनुमितिः स्वहेतुव्याप्तिविरोधिनमर्थं साधयति सा न प्रमा इत्यनुमितेरेवाप्रमात्वमनेनोद्भाव्यत इति भावः । शक्तौ मानाभावेऽपि साधक-बाधकमानाभावात् संशयः स्यादिति बाधकमाह **– तस्मादिति ।।**

ಅಥವಾ ಯಾವ ಅನುಮಿತಿಯು ತನ್ನ ಹೇತು ಮತ್ತು ವ್ಯಾಪ್ತಿಗಳಿಗೆ ವಿರೋಧಿಯಾದ ಅರ್ಥವನ್ನು ಸಾಧಿಸಿಕೊಡುತ್ತದೆಯೋ ಆ ಅನುಮಿತಿಯು ಪ್ರಮಾಣವಲ್ಲ ಎಂದು ಈ ಅನುಮಿತಿಯ ಅಪ್ರಾಮಾಣ್ಯವನ್ನು ಇಲ್ಲಿ ಹೇಳುತ್ತಿದ್ದೇವೆ ಎಂದು ಅಭಿಪ್ರಾಯ.ಶಕ್ತಿಯಲ್ಲಿ ಪ್ರಮಾಣವಿಲ್ಲದಿದ್ದರೂ ಸಾಧಕತ್ವ ಅಥವಾ ಬಾಧಕತ್ವಪ್ರಮಾಣವು ಇಲ್ಲದಿರುವುದರಿಂದ ಶಕ್ತಿಯ ವಿಷಯದಲ್ಲಿ ಸಂಶಯವು ಉಂಟಾಗಬಹುದು ಎಂದು ಶಂಕಿಸಿದರೆ ಬಾಧಕಪ್ರಮಾಣವನ್ನು ತಸ್ಮಾತ್ ಎಂಬ ವಾಕ್ಯದಿಂದ ಹೇಳುತ್ತಾರೆ. ತಸ್ಮಾದಿತಿ ॥

## ಸಪ್ತಪದಾರ್ಥಗಳಿಗಿಂತ ಅತಿರಿಕ್ತವಾದ ಶಕ್ತಿಯು ಅನಾವಶ್ಯಕ

**न्यायलीलावतीप्रकाशः –** ननु हेतुः स्वरूपासिद्धः । न ह्यत्र न प्रमाणमिति

परेणाभ्युपेयते त्वया वा साधयितुं शक्यते । अन्यथैवं सर्वं सर्वत्र बाध्येत । मैवम् । प्रतिबन्धकसत्त्वे सति यदभावात् कार्याभावः स न सप्तपदार्थबहिर्भूतः कार्यजनकत्वात् सम्प्रतिपन्नवदिति विवक्षितत्वात् ।

ಈ ಹೇತುವು ಸ್ವರೂಪಾಸಿದ್ಧವಷ್ಟೇ. ಏಕೆಂದರೆ, ಪರನು ಈ ವಿಷಯದಲ್ಲಿ ಪ್ರಮಾಣವಿಲ್ಲ ಎಂದು ಅಂಗೀಕರಿಸುವುದಿಲ್ಲ. ಅಥವಾ ಅನುಮಾನವನ್ನು ಪ್ರಯೋಗಿಸುವ ನೀನಾಗಲೀ ಪ್ರಮಾಣವಿಲ್ಲವೆಂದು ಸಾಧಿಸಲು ಶಕ್ಯವಿಲ್ಲ. ಇಲ್ಲದಿದ್ದರೆ ಯಾರು ಯಾವ ಅನುಮಾನವನ್ನು ಪ್ರಯೋಗಮಾಡಿದರೂ ಇಂತಹ ಪ್ರತಿಪಕ್ಷಅನುಮಾನವನ್ನು ಮಾಡಬಹುದು ಎಂಬ ಈ ಶಂಕೆಯು ಸರಿಯಲ್ಲ. ಏಕೆಂದರೆ ಇದು ನಮ್ಮ ಅಭಿಪ್ರಾಯ. ಪ್ರತಿಬಂಧಕವಿರುವಾಗ ಯಾವ ವಸ್ತುವು ಇಲ್ಲದಿರುವುದರಿಂದ ಕಾರ್ಯವು ಉಂಟಾಗುವುದಿಲ್ಲವೋ ಅದು ಸಪ್ತಪದಾರ್ಥಗಳಿಗಿಂತ ಬಹಿರ್ಭೂತವಾದುದಲ್ಲ. (ಸಪ್ತಪದಾರ್ಥಗಳಲ್ಲಿಯೇ ಅಂತರ್ಭಾವವನ್ನು ಹೊಂದುತ್ತದೆ). ಕಾರ್ಯಜನಕವಾದುದರಿಂದ ಸಂಪ್ರತಿಪನ್ನವಾದ ಕಾರ್ಯಜನಕದಂತೆ ಎಂಬ ಅನುಮಾನವುನಮಗೆ ಅಭಿಪ್ರೇತವಾದುದು.

## ಶಕ್ತಿಯ ವಿಷಯದಲ್ಲಿ ಕೆಲವರ ಅಭಿಪ್ರಾಯ

**न्यायलीलावतीप्रकाशः –** अत्र वदन्ति । मण्यादिप्रयोग-जन्यादृष्टं प्रतिबन्धकमिति न युक्तं किन्तु मण्यादिरेव तथा प्रथमोपस्थितत्वादुपजीव्यत्वाल्लाघवाच्च । नच प्रतिबद्धान्यस्य कारणस्य तत्त्वमिति कारणतावच्छेदकत्वादकारणमेव मण्याद्यभावः। सामान्येनान्वयव्यतिरेकवत्तया गृहीते सति कार्यानुत्पत्तौ सहकारिभेदस्य कल्पनात् तद्विशेषस्याकल्पनाद् उपजीव्यविरोधात् सहकारिप्रत्याख्यानापत्तेश्च व्यक्त्यैक्ये चासम्भवात् ।

ಇಲ್ಲಿ ಕೆಲವರು ಹೀಗೆ ಹೇಳುತ್ತಾರೆ. ಮಣ್ಯಾದಿಪ್ರಯೋಗಜನ್ಯವಾದ ಅದೃಷ್ಟವು ಪ್ರತಿಬಂಧಕವೆಂದು ಹೇಳುವುದಕ್ಕಿಂತ ಮಣ್ಯಾದಿಗಳೇ ಪ್ರತಿಬಂಧಕವೆಂದು ಹೇಳುವುದು ಸೂಕ್ತ. ಏಕೆಂದರೆ ಮಣಿಪ್ರಯೋಗಜನ್ಯ ಅದೃಷ್ಟಕ್ಕಿಂತಲೂ ಮೊದಲು ಮಣಿಯು ಉಪಸ್ಥಿತವಾಗುತ್ತದೆ.

ಅಂತಹ ಅದೃಷ್ಟವನ್ನು ಕುರಿತು ಮಣಿಯು ಉಪಜೀವ್ಯವಾಗುತ್ತದೆ. ಮತ್ತು ಕೇವಲ ಮಣಿಯನ್ನು ಪ್ರತಿಬಂಧಕವೆಂದು ಹೇಳಿದರೆ ಶರೀರಕೃತಲಾಭವೂ ಇದೆ. ಪ್ರತಿಬದ್ಧವಲ್ಲದ ಕಾರಣಕ್ಕೆ ಎಂದರೆ ಪ್ರತಿಬಂಧಕಾಭಾವವಿಶಿಷ್ಟಕಾರಣಕ್ಕೆ ಕಾರಣತ್ವವಿರುವುದರಿಂದ ಪ್ರತಿಬಂಧಕಾರೂಪವಾದ ಮಣ್ಯಭಾವವು ಕಾರಣತಾವಚ್ಛೇದಕವಾಗುತ್ತದೆ. ಆದ್ದರಿಂದ ಮಣ್ಯಾದ್ಯಭಾವವು ಕಾರಣವಲ್ಲ. ಆದರೆ ಈ ಅಭಿಪ್ರಾಯವೂ ಸರಿಯಲ್ಲ. ಸಾಮಾನ್ಯವಾಗಿ ಕಾರ್ಯವನ್ನು ಕುರಿತು ಒಂದು ವಸ್ತುವಿಗೆ ಅನ್ವಯವ್ಯತಿರೇಕವು ಗೃಹೀತವಾದಾಗ ಆ ವಸ್ತು ಇರುವಾಗಲೂ ಕಾರ್ಯ ಉತ್ಪತ್ತಿಯಾಗದಿದ್ದರೆ ಸಹಕಾರಿಭೇದವನ್ನು ಕಲ್ಪನೆ ಮಾಡುತ್ತೇವೆ. ವಿಶಿಷ್ಟವಾದ ಸಹಕಾರಿಭೇದವನ್ನು ಕಲ್ಪನೆ ಮಾಡುವುದಿಲ್ಲ. ಕಾರ್ಯಾನುತ್ಪತ್ತಿಯಿಂದ ನಾವು ಸಹಕಾರಿಯನ್ನು ಕಲ್ಪನೆ ಮಾಡುವುದರಿಂದ ಸಹಕಾರಿಯನ್ನೇ ಕಲ್ಪನೆ ಮಾಡದಿದ್ದಲ್ಲಿ ಕಾರ್ಯಾನುತ್ಪತ್ತಿಯೇ ಅನುಪಪನ್ನವಾಗುವುದರಿಂದ ಉಪಜೀವ್ಯವಿರೋಧವು ಬರುತ್ತದೆ. ಮತ್ತು ಸಹಕಾರಿಯನ್ನು ಎಲ್ಲೂ ಕಲ್ಪನೆ ಮಾಡಬೇಕಾದುದಿಲ್ಲ ಎಂಬ ಆಪತ್ತಿಯೂ ಬರುತ್ತದೆ. ಒಂದೇ ವ್ಯಕ್ತಿ ಇರುವಾಗ ಅದಕ್ಕೆ ಕಾರಣತ್ವವನ್ನು ಮತ್ತು ಸಹಕಾರಿತ್ವವನ್ನೂ ಅಂಗೀಕಾರ ಮಾಡಲು ಬರುವುದಿಲ್ಲ. ಆದ್ದರಿಂದ ಕಾರಣವು ಸಹಕಾರವು ಭಿನ್ನವೆಂದು ಅಂಗೀಕರಿಸಬೇಕು.

## ಮಣ್ಯಾದಿಸಂಸರ್ಗಾಭಾವವು ದಾಹಕ್ಕೆ ಕಾರಣವಲ್ಲ

**न्यायलीलावतीप्रकाशः** – अथ मण्यादिसंसर्गाभावो न हेतुः । न हि करादौ मण्याद्यत्यन्ताभावो नास्ति संयोगात्यन्ताभावो वा मणेः स्वावयववृत्तित्वात्, संयोगस्य चाव्याप्यवृत्तित्वादिति चेन्न ।

ಇನ್ನು ಮಣ್ಯಾದಿಸಂಸರ್ಗಾಭಾವವು ದಾಹವನ್ನು ಕುರಿತು ಹೇತುವಲ್ಲ. ಏಕೆಂದರೆ ಮಣ್ಯಾದಿಸಂಸರ್ಗಾಭಾವವೆಂದರೆ ಅದನ್ನು ಕರದಲ್ಲಿ ಮಣಿಯ ಅತ್ಯಂತಾಭಾವವೆಂದಾಗಲೀ ಅಥವಾ ಮಣಿಯ ಸಂಯೋಗದ ಅತ್ಯಂತಾಭಾವವೆಂದಾಗಲೀ ಎಂದು ಒಪ್ಪಬೇಕು. ಮಣಿಯು ತನ್ನಅವಯವಗಳಲ್ಲಿರುವುದರಿಂದ ಹಸ್ತದಲ್ಲಿ ಮಣಿಯ ಅತ್ಯಂತಾಭಾವವು ಇದ್ದೇ ಇದೆ. ಸಂಯೋಗವು ಅವ್ಯಾಪ್ಯವೃತ್ತಿಯಾದುದರಿಂದ ಹಸ್ತದಲ್ಲಿ ಮಣ್ಯಸಂಯೋಗಾತ್ಯಂತಾಭಾವವು ಇದೆ. ಆದ್ದರಿಂದ ಮಣಿ ಇರುವಾಗಲೂ ದಾಹವುಂಟಾಗಲಿ ಎಂಬ ಆಪತ್ತಿ ಬರುತ್ತದೆ ಎಂಬ ಈ ಶಂಕೆಯೂ ಸರಿಯಲ್ಲ.

## ದಾಹಕ್ಕೆ ಕಾರಣವಾದ ಅಭಾವದ ಬಗ್ಗೆ

**न्यायलीलावतीप्रकाशः** – इह भूतले घटो नास्तीतिवत् संसर्गावच्छिन्न-प्रतियोगिकस्याभावविशेषस्य सति प्रतिबन्धके तत्राभावात् । स च समयविशेषावच्छेदेन संसर्गितयाऽत्यन्ताभाव एव अतिरिक्त एव वेत्यन्यदेतत् ।

ಇಲ್ಲಿ ಭೂತಲದಲ್ಲಿ ಘಟವಿಲ್ಲ ಎಂಬ ಪ್ರತೀತಿಯು ಹೇಗೆ ಸಂಸರ್ಗಾವಚ್ಛಿನ್ನಪ್ರತಿಯೋಗಿಕವಾದ ಅಭಾವವಿಶೇಷವೋ ಹಾಗೆ. 'ಇಹ ಹಸ್ತೇ ಮಣಿರ್ನಾಸ್ತಿ' ಎಂಬ ಸಂಸರ್ಗಾವಚ್ಛಿನ್ನವಾದ ಅಭಾವವಿಶೇಷವು ಹಸ್ತದಲ್ಲಿ ಮಣಿಯಿರುವಾಗ ಅಲ್ಲಿ ಇರುವುದಿಲ್ಲ. ಆದ್ದರಿಂದ ದಾಹವು ಉಂಟಾಗುತ್ತದೆ. ಈ ಅಭಾವವನ್ನು ನಾಮೈಕವಾದ ಅಭಾವವೆಂದು ಹೇಳಬೇಕೋ ಅಥವಾ ಅತಿರಿಕ್ತವಾದ ಅಭಾವವೆಂದು ಹೇಳಬೇಕೋ? ಅದು ಬೇರೆಯದೇ ಆದ ವಿಷಯ.

## ಮಣ್ಯಾದ್ಯಭಾವಕೂಟತ್ವೇನ ಕಾರಣತ್ವವನ್ನು ಒಪ್ಪಬೇಕು

**न्यायलीलावतीप्रकाशः** – न चैवं प्रतिबन्धके सति तज्जातीय॰ यत्त्यन्तराभावमादाय कार्योत्पत्तिप्रसङ्गः । सामान्याभावस्य कारणत्वात् । तस्य च यत्किञ्चित्प्रतियोगिसत्त्वे विरहात् । तावतामभावानां कूटस्यैव वा कारणत्वात्। अत एव 'न प्रतिबन्धकाभावत्वेन कारणत्वम् अन्योन्याश्रयात् कारणीभूताभाव-प्रतियोगिन एव प्रतिबन्धकत्वात्' इत्यपास्तम्, मण्याद्यभावकूटत्वेन कारणत्वात्। न च विशिष्टाभावानिरुक्तिः । विशेषणावच्छिन्नप्रति-योगिकस्य विशेष्याभावस्य तदुभयसम्बन्धाभावस्य वा विशिष्टाभावत्वात् । प्रतीतिवैलक्षण्यात् तस्य केवलविशेषणविशेष्याभावे तदुभयाभावे च साधारणत्वात्।

एतेन कारणानि स्वजन्यजनकाद् विशिष्टातीन्द्रियभाव-भूतधर्मवन्ति कारणत्वादात्मवत् । तत्रादृष्टं तथा सिद्धमिति सामान्यतः । भट्टमतेऽनुपलब्धिगम्यत्वात् तदभावोऽप्यतीन्द्रिय इति तद्व्यावृत्त्यर्थं भावभूतेति विशेषणम् । विशिष्य तु वह्निर्दाहानुकूलातीन्द्रियाद्विष्टधर्मसमवायवान्

दाहजनकत्वादात्मवत् । अनुकूलत्वं च कार्याभावव्याप्याभावप्रतियोगित्वं कारणतदवच्छेदकसाधारणमिति नासिद्धिः स्वतः परतो वा । न चात्मत्वमुपाधिः सामान्यानुमाने अन्त्यशब्दध्वंसकारणकालाकाशयोः साध्याव्यापकत्वात्। विशेषे दाहानुकूलौष्ण्यवति तेजोद्व्यणुके साध्याव्यापकत्वादित्यनुमानं शक्तिसाधकमित्यपास्तम्, प्रतिबन्धकाभावेनान्यथोपपत्तेर्भावभूतेति विशेषणवैयर्थ्यात् । अन्यथा शक्तिसिद्ध्यनन्तरं शक्तिभिन्नत्वेन साध्यविशेषणात्, तत एव शक्तिभिन्नधर्मसिद्ध्यापत्तेरिति सङ्क्षेपः । विस्तरस्तु – कुसुमाञ्जलिप्रकाशे ।।

ಹಾಗಾದರೆ ಒಂದು ಪ್ರತಿಬಂಧಕವಿರುವಾಗ ಆ ಜಾತಿಗೆ ಸೇರಿದ ಇನ್ನೊಂದು ಪ್ರತಿಬಂಧಕ ಇಲ್ಲದಿರುವಾಗ ಕಾರ್ಯ ಉಂಟಾಗಲಿ ಎಂಬ ಆಪತ್ತಿಯು ಸರಿಯಲ್ಲ. ಏಕೆಂದರೆ, ಪ್ರತಿಬಂಧಕಸಾಮಾನ್ಯಾಭಾವವೇ ಕಾರ್ಯವನ್ನು ಕುರಿತು ಕಾರಣ ಎಂದು ಹೇಳುತ್ತೇವೆ. ಯಾವುದಾದರೊಂದು ಪ್ರತಿಯೋಗಿಯು ಇರುವಾಗ ಸಾಮಾನ್ಯಾಭಾವವು ಬರುವುದಿಲ್ಲವಷ್ಟೇ. ಅಥವಾ ಒಂದೊಂದು ಅಭಾವಗಳ ಕೂಟವನ್ನು ತೆಗೆದುಕೊಂಡುಪ್ರತಿಬಂಧಕಾಭಾವ ಕೂಟವು ಕಾರಣವೆಂದುಹೇಳುತ್ತೇವೆ. ಆದ್ದರಿಂದಲೇ 'ಪ್ರತಿಬಂಧಕಾಭಾವತ್ವೇನ ಕಾರಣತ್ವವಿಲ್ಲ; ಏಕೆಂದರೆ ಅನ್ಯೋನ್ಯಾಶ್ರಯ ಬರುತ್ತದೆ. ಏಕೆಂದರೆ ಕಾರಣೀಭೂತ ಅಭಾವಪ್ರತಿಯೋಗಿಯನ್ನೇ ಪ್ರತಿಬಂಧಕವೆಂದು ಹೇಳುತ್ತೇವೆ' ಎಂಬ ಆಕ್ಷೇಪವು ನಿರಸ್ತವಾಯಿತು. ಏಕೆಂದರೆ ಪ್ರತಿಬಂಧಕಾಭಾವ ಕೂಟತ್ವೇನ ಕಾರಣವನ್ನು ಹೇಳುವುದಿಲ್ಲ. ಮಣ್ಯಾದ್ಯಭಾವಕೂಟತ್ವೇನ ಕಾರಣವನ್ನು ಹೇಳುತ್ತೇವೆ.

ವಿಶಿಷ್ಟಾಭಾವವನ್ನೇ ನಿರ್ವಚನ ಮಾಡಲು ಬರುವುದಿಲ್ಲ. ವಿಶೇಷಣಾವಚ್ಛಿನ್ನಪ್ರತಿಯೋಗಿಕವಾದ ವಿಶೇಷ್ಯಾಭಾವವನ್ನಾಗಲೀ ಅಥವಾ ವಿಶೇಷಣವಿಶೇಷ್ಯ ಉಭಯಸಂಬಂಧಾಭಾವವನ್ನಾಗಲೀ ವಿಶಿಷ್ಟಾಭಾವವೆಂದು ಹೇಳಬಹುದು. ಈ ಅಭಾವವು ಕೇವಲ ವಿಶೇಷ್ಯಾಭಾವ ವಿಶೇಷಣಾಭಾವಗಳಿಂದ ಭಿನ್ನವಾಗಿರುವುದರಿಂದ ವಿಶಿಷ್ಟಾಭಾವವನ್ನು ನಿರ್ವಚನ ಮಾಡಲು ಬರುತ್ತದೆ.

ವರ್ಧಮಾನ ಉಪಾಧ್ಯಾಯವಿರಚಿತ ನ್ಯಾಯಲೀಲಾವತೀಪ್ರಕಾಶದಲ್ಲಿ
ಶಕ್ತಿವಾದವು ಮುಗಿಯಿತು

# ಗಂಗೇಶೋಪಾಧ್ಯಾಯ ವಿರಚಿತ
## ತತ್ವಚಿಂತಾಮಣಿ
# ಶಕ್ತಿವಾದ

### ಅನ್ವಯವ್ಯತಿರೇಕದಿಂದ ಶಕ್ತಿಯನ್ನು ಒಪ್ಪಬೇಕಲ್ಲವೇ?

**तत्वचिन्तामणौ शक्तिवादः**

**स्यादेतत् ईश्वरवत् कार्येणैव शक्तिरप्यनुमीयेत । तथाहि । यादृशादेव करतलानलसंयोगाद्दाहो जायते तादृशादेव सति प्रतिबन्धके न जायते । अतो यदभावात् कार्याभावस्तद्वह्न्यादावभ्युपेयम् । तेन विना तदभावायत्तदाहाभावानुपपत्तेर्व्यतिरेकमुखेन शक्तिसिद्धिः ।**

ಈ ಮುಂದಿನ ಆಕ್ಷೇಪವು ಉಪಪನ್ನವಾಗುತ್ತದೆ. ಈಶ್ವರನನ್ನು ಕಾರ್ಯದಿಂದ ಅನುಮಾನ ಮಾಡಿದಂತೆ ಶಕ್ತಿಯನ್ನು ಅನುಮಾನದಿಂದ ತಿಳಿಯಬಹುದು. ಅದು ಈ ರೀತಿ. ಎಂತಹ ಕರತಲ ಮತ್ತು ಅಗ್ನಿಯ ಸಂಯೋಗದಿಂದ ದಾಹವು ಉಂಟಾಗುತ್ತದೆಯೋ, ಪ್ರತಿಬಂಧಕವಾದ ಮಣ್ಯಾದಿಗಳು ಇದ್ದರೆ ಅಂತಹದೇ ಸಂಯೋಗದಿಂದ ದಾಹವು ಉಂಟಾಗುವುದಿಲ್ಲ. ಆದ್ದರಿಂದ ಯಾವುದು ಇಲ್ಲದಿರುವುದರಿಂದ ದಾಹರೂಪವಾದ ಕಾರ್ಯವು ಉಂಟಾಗಲಿಲ್ಲವೋ, ಅಂತಹ ಒಂದು ಪದಾರ್ಥವನ್ನು ಅಗ್ನಿಯಲ್ಲಿ ಅಂಗೀಕರಿಸಬೇಕು. ಅದು ಇಲ್ಲದಿದ್ದರೆ ಅದರ ಅಭಾವಪ್ರಯುಕ್ತವಾದ ದಾಹಾಭಾವವು ಅನುಪಪನ್ನವಾಗುತ್ತದೆ. ಹೀಗೆ ವ್ಯತಿರೇಕಮುಖದಿಂದ ಶಕ್ತಿಯು ಸಿದ್ಧವಾಗುತ್ತದೆ.

### ಅದೃಷ್ಟವೈಗುಣ್ಯದಿಂದ ದಾಹಾಭಾವವನ್ನು ಕೂಡಿಸಬಹುದೇ ?

**न चादृष्टवैगुण्यम् । दृष्टसाद्गुण्ये तदभावात्, तस्य तदर्थत्वात् ।**

**अन्यथा दृढदण्डनुन्नमपि चक्रं न भ्राम्येत् । अथादृष्टविलम्बादपि विलम्बो यथा वन्ध्यास्त्रीसम्प्रयोगे परमाणुकर्मणि अध्ययनतुल्यत्वेऽपि एकत्र फलाभावे चेति चेन्न ।**

ಅದೃಷ್ಟವೈಗುಣ್ಯದಿಂದ ದಾಹಾಭಾವವು ಉಂಟಾಯಿತು ಎಂದು ಹೇಳಲು ಬರುವುದಿಲ್ಲ. ಏಕೆಂದರೆ ದೃಷ್ಟವಾದ ಸಾಧನ-ಸಾಮಗ್ರಿಗಳಿರುವಾಗ ಅದೃಷ್ಟ ವೈಗುಣ್ಯವನ್ನು ಹೇಳಲು ಬರುವುದಿಲ್ಲ. ಅದೃಷ್ಟವು ದೃಷ್ಟಸಾಮಗ್ರಿಯನ್ನು ಸಂಪಾದನೆ ಮಾಡಿಯೇ ಕಾರ್ಯವನ್ನುಂಟುಮಾಡುವುದಷ್ಟೆ. ಹಾಗಿಲ್ಲದಿದ್ದರೆ ಬಲವಾದ ದಂಡದಿಂದ ತಿರುಗಿಸಲ್ಪಟ್ಟ ಚಕ್ರವೂ ಸಹ ತಿರುಗದೇ ಇರಬೇಕಾದೀತು. ಇನ್ನು ಅದೃಷ್ಟವೈಗುಣ್ಯವಿಲ್ಲದಿದ್ದರೂ ಅದೃಷ್ಟವಿಲಂಬದಿಂದ ಕಾರ್ಯವಿಲಂಬವು ಉಂಟಾಯಿತು. ವಂಧ್ಯಾಸ್ತ್ರೀ ಸಮಾಗಮದಲ್ಲಿ, ಖಂಡಪ್ರಳಯದಲ್ಲಿ ದ್ವ್ಯಣುಕಕಾರಣವಾದ ಸಂಯೋಗ ಅನಾರಂಭಕವಾದ ಪರಮಾಣುಕರ್ಮದಲ್ಲಿ ಮತ್ತು ಸಮಾನವಾದ ಅಧ್ಯಯನವಿದ್ದರೂ ಒಬ್ಬನಿಗೆ ವಿಶೇಷವಾದ ಜ್ಞಾನರೂಪವಾದ ಫಲ ಮತ್ತು ಇನ್ನೊಬ್ಬನಿಗೆ ಅಂತಹ ಫಲದ ಅಭಾವವು ಕಂಡಿರುವುದರಿಂದ ಹೀಗೆ ಶಂಕೆಯನ್ನು ಮಾಡಬಹುದು ಎಂಬುದೂ ಸರಿಯಲ್ಲ.

## ಅದೃಷ್ಟವಿಲಂಬ ಎಂದರೇನು ?

**अदृष्टविलम्बो हि न तन्नाशानुत्पादौ । मण्यपसरणानुपदं दाहाभावप्रसङ्गात् । किञ्च 'नियमतो मणिसद्भावे कार्याभावस्तदभावे कार्यम्' इति दृष्टत्वात् मण्याद्यभाव एव कारणम् । अन्यथा कदाचित् मण्याद्यभावेऽपि तदभावान्न कार्यं स्यात् ।**

ಏಕೆಂದರೆ ಅದೃಷ್ಟವಿಲಂಬವೆಂದರೆ ಅದೃಷ್ಟನಾಶ ಎಂದಾಗಲೀ, ಅಥವಾ ಅದೃಷ್ಟದ ಅನುತ್ಪತ್ತಿ ಎಂದಾಗಲೀ ಹೇಳಲು ಬರುವುದಿಲ್ಲ. ಏಕೆಂದರೆ ಮಣಿಯನ್ನು ತೆಗೆದರೂ ಅದೃಷ್ಟವು ಹಾಗೆಯೇ ಇರುವುದರಿಂದ ದಾಹವು ಉಂಟಾಗದಿರಲಿ ಎಂಬ ಆಪತ್ತಿಯು ಬರುತ್ತದೆ ಮತ್ತು ಮಣಿಯು ಇದ್ದಾಗ ನಿಯಮೇನ ದಾಹಾಭಾವ ಮತ್ತು ಮಣಿಯು ಇಲ್ಲದಿರುವಾಗ ನಿಯಮೇನ ದಾಹರೂಪಕಾರ್ಯವು

ಕಂಡುಬರುವುದರಿಂದ ಮಣ್ಯಾದ್ಯಭಾವವೇ ದಾಹವನ್ನು ಕುರಿತು ಕಾರಣವೆಂದು ಹೇಳಬೇಕು. ಇಲ್ಲದಿದ್ದರೆ, ಎಂದರೆ ಮಣ್ಯಾದ್ಯಭಾವವನ್ನು ಬಿಟ್ಟು ದಾಹವನ್ನು ಕುರಿತು ಬೇರೆ ಇನ್ನೊಂದು ಕಾರಣವಿದ್ದರೆ ಮಣ್ಯಾದ್ಯಭಾವವು ಇದ್ದರೂ ಆ ಇನ್ನೊಂದು ಕಾರಣವು ಇಲ್ಲದಿರುವುದರಿಂದ ದಾಹವು ಉಂಟಾಗದಿರಲಿ ಎಂಬ ಆಪತ್ತಿಯು ಬರುತ್ತದೆ.

## ಅದೃಷ್ಟವಿಲಂಬವೇ ಕಾರ್ಯವಿಲಂಬಕ್ಕೆ ಕಾರಣ

**वन्ध्यासम्प्रयोगे तु दृष्टव्यभिचाराददृष्टविलम्बादेव विलम्बः । अदृष्टश्च क्वचित् साक्षाज्जनकम्, अन्यथा परम्परया हेतुरपि न स्यात् । नच समप्रज्ञयोः समश्च निरपवादमभ्यस्यतोरेकः प्रगल्भी नापर इति दृश्यते ।**

ವಂಧ್ಯಾಸಮಾಗಮದಲ್ಲಿ ಮಾತ್ರ ದೃಷ್ಟವಾದ ಸಾಮಗ್ರಿ ಇದ್ದರೂ ಫಲವ್ಯಭಿಚಾರವಿರುವುದರಿಂದ ಅಲ್ಲಿ ಅದೃಷ್ಟವಿಲಂಬವೇ ಕಾರ್ಯವಿಲಂಬವನ್ನು ಕುರಿತು ಕಾರಣ ಎಂದು ಕಲ್ಪನೆ ಮಾಡಬೇಕು. ಅದೃಷ್ಟವಾದರೂ ಕೆಲವು ಸ್ಥಳದಲ್ಲಿ ಸಾಕ್ಷಾಜ್ಜನಕವಾಗುತ್ತದೆ. ಇಲ್ಲದಿದ್ದರೆ ಅದಕ್ಕೆ ಪರಂಪರಯಾ ಜನಕತ್ವವೂ ಉಂಟಾಗಲಾರದು. ಪರಂಪರಯಾ ಜನಕವೆಂದರೆ ಫಲಜನಕಜನಕ ಎಂದು ಇಷ್ಟೇ ಅರ್ಥವಷ್ಟೆ? ಸಮವಾದ ಮೇಧಾಶಕ್ತಿಯುಳ್ಳ ಸಮಾನವಾಗಿ ನಿರಂತರವಾಗಿ ಅಧ್ಯಯನ ಮಾಡುವ ಇಬ್ಬರಲ್ಲಿ ಒಬ್ಬನು ಪ್ರಗಲ್ಭನಾದವನು ಇನ್ನೊಬ್ಬನು ಮೂಢನಾದವನು ಎಂಬ ವಿಷಯವು ಕಂಡುಬರುವುದಿಲ್ಲವಷ್ಟೆ.

## ಅದೃಷ್ಟವೇ ನಿಮಿತ್ತಕಾರಣ

**नच सर्वोत्पत्तिमतामदृष्टं निमित्तकारणम् । अगम्यागमनसाध्ये सुखे तदभावात् । तद्धि नोऽधर्मात् सुखत्वात् नापि धर्मात्। तेन अगम्यागमनमुत्पाद्य सुखमुत्पादनीयम् । तथा चागम्यागमनकारणत्वेन न स धर्मः, श्येनापूर्ववन्निषिद्ध-फलकत्वेन अनर्थकत्वात् ।**

ಇನ್ನು ಉತ್ಪತ್ತಿಯುಳ್ಳ ಎಲ್ಲ ಪದಾರ್ಥಗಳಿಗೂ ಅದೃಷ್ಟವೇ ನಿಮಿತ್ತಕಾರಣ. ಆದ್ದರಿಂದ ದಾಹಾಭಾವರೂಪವಾದ ಕಾರ್ಯವನ್ನು ಕುರಿತು ಅದೃಷ್ಟವೇ ಕಾರಣವೆಂದು ಹೇಳೋಣ ಎಂದೂ ಶಂಕಿಸಬಾರದು. ಏಕೆಂದರೆ ಅಗಮ್ಯಾಗಮನ ಸಾಧ್ಯವಾದ ಸುಖವೂ ಕೂಡ ಉತ್ಪತ್ತಿ ಉಳ್ಳ ಒಂದು ಪದಾರ್ಥ. ಅದರಲ್ಲಿ ಅದೃಷ್ಟಜನ್ಯತ್ವವು ಇಲ್ಲ. ಏಕೆಂದರೆ ಅದೃಷ್ಟವು ಧರ್ಮ ಅಥವಾ ಅಧರ್ಮರೂಪವಾದುದು. ಅಗಮ್ಯಾಗಮನ ಜನ್ಯವಾದುದು ಸುಖವಾದ ಕಾರಣದಿಂದಲೇ ಸುಖವು ಎಂದೂ ಅಧರ್ಮದ ಕಾರ್ಯವಲ್ಲವಾದ್ದರಿಂದ ಆ ಸುಖವು ಅಧರ್ಮರೂಪವಾದ ಅದೃಷ್ಟದಿಂದ ಉಂಟಾದುದಲ್ಲ.

ಹಾಗೆಯೇ ಆ ಸುಖವು ಧರ್ಮದಿಂದಲೂ ಉಂಟಾದುದಲ್ಲ. ಆ ಧರ್ಮವಾದರೂ ಅಗಮ್ಯಾಗಮನವನ್ನು ಉತ್ಪತ್ತಿಮಾಡಿ ಅದರಿಂದ ಸುಖವನ್ನು ಉತ್ಪತ್ತಿ ಮಾಡಬೇಕು. ಆದರೆ ಯಾವುದು ಅಗಮ್ಯಾಗಮನಕ್ಕೆ ಕಾರಣವಾಗುತ್ತದೆಯೋ ಅದು ಎಂದೂ ಧರ್ಮವೇ ಆಗುವುದಿಲ್ಲ. ಶ್ಯೇನಯಾಗಜನ್ಯ ಅದೃಷ್ಟವು ಶ್ಯೇನಯಾಗದ ಫಲವು ನಿಷಿದ್ಧವಾದುದರಿಂದ ಹೇಗೆ ಧರ್ಮವಾಗುವುದಿಲ್ಲವೋ ಅದರಂತೆ.

## ಪ್ರತಿಪಕ್ಷಾದೃಷ್ಟವನ್ನು ಕಲ್ಪಿಸಬೇಕು

**दाहप्रतिकूलादृष्टादेव दाहाभावः इति चेन्न । तस्य उत्तेजकाभावसहितमण्यजन्यत्वेतत्राऽदाहार्थिनोऽप्रवृत्ति प्रसङ्गात्। तज्जन्यत्वेऽपि तदुत्पादकादेव दाहाभाव इति किमदृष्टेन? प्रथमोपस्थितत्वादुपजीव्यत्वाच्च ।**

ದಾಹವಿರೋಧಿಯಾದ ಅದೃಷ್ಟವೇ ದಾಹಾಭಾವವನ್ನು ಕುರಿತು ಕಾರಣ ಎಂದು ಹೇಳಲು ಬರುವುದಿಲ್ಲ. ಅಂತಹ ಪ್ರತಿಪಕ್ಷಾದೃಷ್ಟವು (ದಾಹವಿರೋಧಿಯಾದ ಅದೃಷ್ಟವು) ಉತ್ತೇಜಕಾಭಾವಸಹಿತವಾದ ಮಣಿಯ ಕಾರ್ಯವಾಗದಿದ್ದರೆ, ದಾಹಾಭಾವವನ್ನು ಅಪೇಕ್ಷಿಸುವವನು ಉತ್ತೇಜಕಾಭಾವ ಸಹಿತ ಮಣಿಯ ವಿಷಯದಲ್ಲಿ ಪ್ರವೃತ್ತಿಯನ್ನು ಮಾಡದಿರಲಿ

ಎಂಬ ಪ್ರಸಂಗವು ಬರುತ್ತದೆ. ಉತ್ತೇಜಕಾಭಾವ ಸಹಿತ ಮಣಿಯಿಂದ ಆ ಅದೃಷ್ಟವು ಉಂಟಾಗುತ್ತದೆ ಎಂದು ಅಂಗೀಕರಿಸಿದರೆ ಅದೃಷ್ಟಕ್ಕೆ ಕಾರಣವಾದ ಉತ್ತೇಜಕಾಭಾವ ಸಹಿತ ಮಣಿಯಿಂದಲೇ ದಾಹಾಭಾವರೂಪವಾದ ಕಾರ್ಯವು ಉಪಪನ್ನವಾಗುವುದರಿಂದ ದಾಹವಿರೋಧಿಯಾದ ಅದೃಷ್ಟವನ್ನು ಏಕೆ ಕಲ್ಪನೆ ಮಾಡಬೇಕು? ದಾಹವಿರೋಧಿ ಅದೃಷ್ಟವನ್ನು ಕಲ್ಪನೆ ಮಾಡುವುದಕ್ಕಿಂತ ಮೊದಲು ಉತ್ತೇಜಕಾಭಾವ ಸಹಿತ ಮಣಿಯ ಉಪಸ್ಥಿತಿಯಾಗುತ್ತದೆ ಮತ್ತು ಅದನ್ನು ಉಪಜೀವಿಸಿಕೊಂಡೇ ಪ್ರತಿಪಕ್ಷಾದೃಷ್ಟವನ್ನು ಕಲ್ಪನೆ ಮಾಡಬೇಕು.

## ಪ್ರತಿಬಂಧಕಾಭಾವವನ್ನು ಮೀಮಾಂಸಕರು ಕಾರಣವೆನ್ನುತ್ತಾರೆ

**प्रतिबन्धकाभावहेतुत्वस्य तेनाभ्युपगमात् अदृष्टोत्पत्तौ शौचाचमनादेः साधारणस्यात्राप्यन्वयः स्यात्, अशुचेरेव तदुत्पत्तौ शौचे सति तदभावापत्ते, प्रतिपक्षसन्निधापकादृष्टस्यैव प्रतिबन्धकत्वे सति मण्यप्रयोगेऽपि दाहानापत्तिः । अग्रिमकाल एव सन्निधिदर्शनेन तदसिद्ध्यभावात् ।**

ಪ್ರತಿಬಂಧಕಾಭಾವವು ಕಾರಣವೆಂದು ಮೀಮಾಂಸಕರೂ ಒಪ್ಪುತ್ತಾರೆ. ಅಂತಹ ಅದೃಷ್ಟದ ಉತ್ಪತ್ತಿಯನ್ನು ಅಂಗೀಕರಿಸಿದರೆ ಎಲ್ಲ ಅದೃಷ್ಟಗಳಿಗೂ ಕಾರಣವಾದ ಶೌಚ, ಆಚಮನಾದಿಗಳನ್ನು ಅಲ್ಲಿಯೂ ಅಂಗೀಕರಿಸಬೇಕಾಗುತ್ತದೆ. ಅಶುಚಿಯಾದವನಿಗೆ ಅಂತಹ ಅದೃಷ್ಟವು ಉತ್ಪತ್ತಿಯಾಗುತ್ತದೆ ಎಂದು ಅಂಗೀಕರಿಸಿದರೆ ಶುಚಿಯಾದವನಿಗೆ ದಾಹವಿರೋಧಿಯಾದ ಅದೃಷ್ಟವು ಉಂಟಾಗುವುದಿಲ್ಲವಾದ್ದರಿಂದ ದಾಹಾಭಾವವು ಉಪಪನ್ನವಾಗದೆ ದಾಹವೇ ಉಂಟಾಗಬೇಕಾಗುತ್ತದೆ.

ಪ್ರತಿಪಕ್ಷವಾದ ಮಣಿಯ ಸನ್ನಿಧಾನಕ್ಕೆ ಕಾರಣವಾದ ಅದೃಷ್ಟವೇ ಪ್ರತಿಬಂಧಕವೆಂದು ಹೇಳುವುದಾದರೆ ಮಣಿಪ್ರಯೋಗಕ್ಕಿಂತ ಪೂರ್ವಕಾಲದಲ್ಲಿ ಅದೃಷ್ಟವು ಇರುವುದರಿಂದ ಮಣಿ ಪ್ರಯೋಗವಿಲ್ಲದಿರುವಾಗಲೂ ದಾಹವುಂಟಾಗದಿರಲಿ ಎಂಬ ಆಪತ್ತಿಯು ಬರುತ್ತದೆ. ಅವ್ಯವಹಿತ ಉತ್ತರಕ್ಷಣದಲ್ಲಿಯೇ ಮಣಿಯ ಪ್ರಯೋಗವು ಉಂಟಾಗುವುದರಿಂದ ಅದಕ್ಕಿಂತ ಹಿಂದಿನ ಕ್ಷಣದಲ್ಲಿ ಅದೃಷ್ಟವು ಇಲ್ಲ ಎಂದು ಹೇಳಲು ಬರುವುದಿಲ್ಲ.

## ಉತ್ತೇಜಕಾಭಾವಸಹಕೃತ ಪ್ರತಿಬಂಧಕಾಭಾವವು ದಾಹಕ್ಕೆ ಕಾರಣವೇ?

**अस्तु तर्हि उत्तेजकाभावसहकृतप्रतिबन्धकाभावस्यान्वयव्यतिरेकाभ्यां हेतुत्वम् । एवं केवलोत्तेजकसद्भावे उभयसत्त्वे उभयाभावे च विशिष्टभावोऽनुगतो हेतुः ।**

ಹಾಗಾದರೆ, ಅನ್ವಯವ್ಯತಿರೇಕಗಳ ಬಲದಿಂದ ಉತ್ತೇಜಕಾಭಾವ ಸಹಕೃತವಾದ ಪ್ರತಿಬಂಧಕದ ಅಭಾವವೇ ದಾಹವನ್ನು ಕುರಿತು ಕಾರಣ ಎಂದು ಹೇಳೋಣ. ಈ ರೀತಿಯಾಗಿ ಕೇವಲ ಉತ್ತೇಜಕವಿದ್ದರೂ ಅಥವಾ ಉತ್ತೇಜಕ ಮತ್ತು ಪ್ರತಿಬಂಧಕ ಎರಡೂ ಇದ್ದರೂ ಅಥವಾ ಉತ್ತೇಜಕ ಮತ್ತು ಪ್ರತಿಬಂಧಕ ಎರಡೂ ಇಲ್ಲದೇ ಇದ್ದರೂ ಉತ್ತೇಜಕಾಭಾವ ಸಹಕೃತವಾದ ಪ್ರತಿಬಂಧಕಾಭಾವವು ಅನುಗತವಾಗುತ್ತದೆ. ಅದೇ ದಾಹವನ್ನು ಕುರಿತು ಕಾರಣವಾಗುತ್ತದೆ.

## ಪ್ರತಿಬಂಧಕತ್ವದ ಪರಿಷ್ಕಾರ

**प्रतिबन्धकत्वञ्च कारणीभूताभावप्रतियोगित्वम् । तच्च मण्याद्यभावत्वेन न तु प्रतिबन्धकाभावत्वेनेति नान्योन्याश्रयः।**

ಪ್ರತಿಬಂಧಕತ್ವವೆಂದರೆ ಕಾರಣೀಭೂತ ಅಭಾವಪ್ರತಿಯೋಗಿತ್ವ. ಮಣ್ಯಭಾವಕ್ಕೆ ಪ್ರತಿಬಂಧಕಾಭಾವತ್ವೇನ ದಾಹಕಾರಣತ್ವವನ್ನು ಹೇಳುವುದಿಲ್ಲ. ಹಾಗೆ ಹೇಳಿದರೆ ಅನ್ಯೋನ್ಯಾಶ್ರಯವು ಬರುತ್ತದೆ. ಆದರೆ ಮಣ್ಯಾದ್ಯಭಾವತ್ವೇನ ಕಾರಣತ್ವವನ್ನು ಹೇಳುತ್ತೇವೆ.

## ಮಣ್ಯಾದ್ಯಭಾವಕೂಟವೇ ಕಾರಣ

**अत एव प्रतिबन्धकत्वाभिमतमण्यादीनामभावकूट एव कारणम् । तेन मणिसद्भावे मन्त्राद्यभावेऽपि न कार्यम् । अनतिरिक्ताभाववादिमते च व्यवहारार्थं तत्स्थानाभिषिक्तस्य हेतुत्वम् ।**

ಅಥವಾ ಪ್ರತಿಬಂಧಕತ್ವೇನ ಅಭಿಮತವಾದ ಮಣ್ಯಾದಿಗಳ ಅಭಾವಕೂಟವೇ ಕಾರಣವೆಂದೂ ಹೇಳಬಹುದು. ಆದ್ದರಿಂದ ಮಂತ್ರರೂಪ ಪ್ರತಿಬಂಧಕವಿಲ್ಲದಿದ್ದರೂ ಮಣಿರೂಪವಾದ ಪ್ರತಿಬಂಧಕವಿರುವಾಗ ದಾಹರೂಪವಾದ ಕಾರ್ಯವು ಉಂಟಾಗುವುದಿಲ್ಲ. ಅಭಾವವು ಅನತಿರಿಕ್ತವಾದುದು ಎಂದು ಹೇಳುವ ವಾದಿಗಳ ಮತದಲ್ಲಿ ವ್ಯವಹಾರದ ಸಲುವಾಗಿ ಅಂತಹ ಅಭಾವಸ್ಥಾನಾಭಿಷಿಕ್ತವಾದ ವಸ್ತುವನ್ನೇ ಹೇತುವೆಂದು ಅಂಗೀಕರಿಸಬೇಕು.

## ಅಭಾವಕ್ಕೆ ಕಾರಣತ್ವವಿದೆ

**नचाभावो न कारणम् । भाववत् तद्ग्राहकतौल्यात् । दृष्टश्च कुड्यसंयोगाभावस्य गतौ, अनुपलम्भस्याभावविज्ञाने, विहिताकरणस्य प्रत्यवाये, निर्दोषत्वस्य वेदप्रामाण्ये जनकत्वमिति प्राञ्चः।**

ಇನ್ನು ಅಭಾವಕ್ಕೆ ಕಾರಣತ್ವವೇ ಇಲ್ಲ ಎಂದು ಹೇಳಲು ಬರುವುದಿಲ್ಲ. ಭಾವ ಪದಾರ್ಥಕ್ಕೆ ಕಾರಣತ್ವವನ್ನು ಸಾಧಿಸಿಕೊಡುವ ಪ್ರಮಾಣವಿದ್ದಂತೆ ಅಭಾವಕ್ಕೂ ಕಾರಣತ್ವಗ್ರಾಹಕವಾದ ಪ್ರಮಾಣವು ಇದೆ.

ಮತ್ತು ಕುಡ್ಯ (ಗೋಡೆ) ಸಂಯೋಗವು ಗಮನವನ್ನು ಕುರಿತು, ಅನುಪಲಂಭವು ಅಭಾವಜ್ಞಾನವನ್ನು ಕುರಿತು, ವಿಹಿತಕರಣಾಭಾವವು ಪ್ರತ್ಯವಾಯವನ್ನು ಕುರಿತು, ದೋಷಾಭಾವವು ವೇದಪ್ರಾಮಾಣ್ಯವನ್ನು ಕುರಿತು, ಕಾರಣವಾಗಿದೆ ಎಂಬುದು ಎಲ್ಲ ಪ್ರಾಚೀನರೂ ಒಪ್ಪಿರುವ ವಿಷಯ. (ಇದು ದೀರ್ಘವಾದ ಶಂಕೆ).

## ವಿಶಿಷ್ಟವು ಪದಾರ್ಥಾಂತರವಲ್ಲ

**मैवम् । विशिष्टं हि नार्थान्तरं येन तदभावोऽनुगतः स्यात्। किन्तु विशेषणविशेष्यसम्बन्धा इति तेषां प्रत्येकाभावस्य हेतुत्वे क्वचित् विशेष्यमण्यभावः क्वचिदुत्तेजकाभावरूपविशे**

**षणाभावः, क्वचिदुभयं कारणम् इति व्यभिचारान्नैकमपि हेतुः स्यात् ।**

ಹೀಗೆ ಆಕ್ಷೇಪ ಮಾಡುವುದು ಸರಿಯಲ್ಲ. ವಿಶಿಷ್ಟವು ಒಂದು ಪದಾರ್ಥಾಂತರವಾಗಿದ್ದರೆ ಅದರ ಅಭಾವವು ಅನುಗತವಾಗಿರುತ್ತಿದ್ದಿತು. ಆದರೆ ವಿಶಿಷ್ಟವು ಪದಾರ್ಥಾಂತರವಲ್ಲ. ಅದು ವಿಶೇಷಣ ವಿಶೇಷ್ಯ ತತ್ಸಂಬಂಧರೂಪವಾದುದು. ಆದ್ದರಿಂದ ವಿಶಿಷ್ಟಾಭಾವವು ಕಾರಣವೆಂದು ಹೇಳಿದರೆ ಅದು ಕೆಲವು ಕಡೆ ವಿಶೇಷಣಾಭಾವರೂಪವಾಗುತ್ತದೆ, ಕೆಲವು ಕಡೆ ವಿಶೇಷ್ಯಾಭಾವರೂಪವಾಗುತ್ತದೆ.

ಕೆಲವು ಕಡೆ ತತ್ಸಂಬಂಧಾಭಾವರೂಪವಾಗುತ್ತದೆ. ಮಣಿಯು ವಿಶೇಷ್ಯ, ಉತ್ತೇಜಕಾಭಾವವು ವಿಶೇಷಣ. ಆದ್ದರಿಂದ ಉತ್ತೇಜಕಾಭಾವವಿದ್ದರೂ ಮಣ್ಯಭಾವದಿಂದ ಎಲ್ಲಿ ದಾಹವುಂಟಾಗುತ್ತದೆಯೋ ಅಲ್ಲಿ ವಿಶೇಷಣಾಭಾವವಿಲ್ಲ.

ವಿಶೇಷ್ಯವಾದ ಮಣಿಯ ಅಭಾವವು ಮಾತ್ರ ಇದೆ. ಉತ್ತೇಜಕಾಭಾವರೂಪ ವಿಶೇಷಣಾಭಾವದಿಂದ ಎಲ್ಲಿ ದಾಹವುಂಟಾಗುತ್ತದೆಯೋ ಅಲ್ಲಿ ವಿಶೇಷ್ಯವಾದ ಮಣಿಯ ಅಭಾವವಿಲ್ಲ.

ಎಲ್ಲಿ ಉತ್ತೇಜಕಾಭಾವವೂ ಇಲ್ಲವೋ ಮತ್ತು ಮಣಿಯೂ ಇಲ್ಲವೋ ಅದು ಇನ್ನೊಂದು ಮೂರನೆಯ ಸ್ಥಳ. ಅಲ್ಲೂ ದಾಹರೂಪ ಕಾರ್ಯವು ಉಂಟಾಗುತ್ತದೆ. ಆದ್ದರಿಂದ ವಿಶಿಷ್ಟಾಭಾವವು ಕಾರಣವೆಂದು ಹೇಳಿದರೆ ಈ ಮೂರು ಅಭಾವಗಳಿಗೆ ಕಾರ್ಯವನ್ನು ಕುರಿತು ವ್ಯಭಿಚಾರವು ಬರುವುದರಿಂದ ಯಾವುದೂ ಕಾರಣವಾಗುವುದಿಲ್ಲ ಎಂಬ ಪ್ರಸಂಗವು ಬರುತ್ತದೆ.

## ಅಭಾವದಲ್ಲಿ ವೈವಿಧ್ಯ

**स्यादेतत् । प्रतियोगिभेदादिवत् प्रतियोगितावच्छेदक-विशेषणभेदेऽप्यभावो भिद्यते । अन्यथा पृथिव्यादित्रयप्रत्येक-रूपाभावेऽवगतेऽपि वायौ रूपसंशयो न स्यात् ।**

ಈ ಮುಂದಿನ ಆಕ್ಷೇಪವು ಕೂಡುತ್ತದೆ. ಪ್ರತಿಯೋಗಿಭೇದದಿಂದ ಅಭಾವವು ಭಿನ್ನವಾದಂತೆ ಪ್ರತಿಯೋಗಿತಾವಚ್ಛೇದಕವಾದ ವಿಶೇಷಣದ ಭೇದದಿಂದಲೂ ಅಭಾವವು ಭಿನ್ನವಾಗುತ್ತದೆ.

ಇಲ್ಲದಿದ್ದರೆ ವಾಯುವಿನಲ್ಲಿ ಪಾರ್ಥಿವರೂಪದ ಅಭಾವದ ಆಪ್ಯರೂಪದ ಅಭಾವದ, ತೇಜೋರೂಪದ ಅಭಾವದ ಜ್ಞಾನವಿದ್ದರೂ ಸಹ ವಾಯುವಿನಲ್ಲಿ ರೂಪವಿದೆಯೋ ಇಲ್ಲವೋ ಎಂಬ ಸಂಶಯವು ಬರದಿರಲಿ ಎಂಬ ಆಪತ್ತಿಯು ಬರುತ್ತದೆ.

## ವಿಶಿಷ್ಟಾಭಾವದ ಬಗ್ಗೆ

**एवञ्च यथा केवलदण्डसद्भावे दण्डपुरुषसद्भावे द्वयाभावे च विशेषणविशेष्योभयाभावप्रयुक्तः केवलपुरुषाभावोऽबाधितानुगतव्यवहारबलात् प्रतीतिसिद्धः तथा विशेष्यस्य प्रतिबन्धकस्याभावे विशेषणस्योत्तेजकाभावस्याभावे द्वयाभावे च केवलप्रतिबन्धकाभावो विशेष्यविशेषणोभयाभावव्यापकोऽनुगत एव दाहकारणमस्तु ।**

ಹೀಗಾಗಿ ಹೇಗೆ ಕೇವಲ ದಂಡವಿದ್ದರೂ, ದಂಡ ಮತ್ತು ಪುರುಷ ಇಬ್ಬರೂ ಇದ್ದರೂ, ಮತ್ತು ದಂಡ ಮತ್ತು ಪುರುಷ ಇಬ್ಬರೂ ಇಲ್ಲದೇ ಇದ್ದರೂ ವಿಶೇಷಣ-ವಿಶೇಷ್ಯ ಉಭಯಾಭಾವ ಪ್ರಯುಕ್ತವಾಗಿ ಕೇವಲ ಪುರುಷಾಭಾವವು (ಶುದ್ಧಪುರುಷಾಭಾವವು) ಅಬಾಧಿತವಾದ ಅನುಗತವಾದ ವ್ಯವಹಾರದ ಬಲದಿಂದ ಸಿದ್ಧವಾಗುತ್ತದೆಯೋ ಅದರಂತೆ ವಿಶೇಷ್ಯವಾದ ಪ್ರತಿಬಂಧಕದ ಅಭಾವವಿದ್ದರೂ, ವಿಶೇಷಣವಾದ ಉತ್ತೇಜಕಾಭಾವದ ಅಭಾವವಿದ್ದರೂ ಮತ್ತು ಇವೆರಡರ ಅಭಾವವಿದ್ದರೂ ಸಹ ಕೇವಲಪ್ರತಿಬಂಧಕಾಭಾವವು (ಶುದ್ಧಪ್ರತಿಬಂಧಕಾಭಾವವು) ವಿಶೇಷಣ-ವಿಶೇಷ್ಯ ಉಭಯಾಭಾವಕ್ಕೆ ವ್ಯಾಪಕವಾದುದು ಅನುಗತವಾಗಿ ಸಿದ್ಧವಾಗುತ್ತದೆ. ಅದೇ ದಾಹವನ್ನು ಕುರಿತು ಕಾರಣವೆಂದು ಅಂಗೀಕರಿಸಬಹುದು.

## ಮೂರನ್ನು ಅನುಗಮ ಮಾಡಿ ದಾಹಕಾರಣತ್ವವನ್ನು ಹೇಳಬೇಕು

**अथ विशेषणाद्यभावादेव केवलपुरुषाभावव्यवहार एकशक्तिमत्वादिति चेन्न । अनुगतव्यवहारस्यानुगतज्ञान-साध्यत्वात् शक्तेश्चातीन्द्रियत्वात् ।**

ಇನ್ನು ವಿಶೇಷಣಾಭಾವ, ವಿಶೇಷ್ಯಾಭಾವ ಮತ್ತು ಉಭಯಾಭಾವವಿದ್ದಲ್ಲಿ ಕೇವಲಪುರುಷಾಭಾವವು ಉಂಟಾಗುವುದು ಆ ಮೂರು ಅಭಾವಗಳಿಗೂ ಏಕಶಕ್ತಿ ಇರುವ ಕಾರಣದಿಂದ ಎಂದು ಶಂಕಿಸಬಾರದು. ಏಕೆಂದರೆ ಅನುಗತವ್ಯವಹಾರವು ಅನುಗತವಾದ ಜ್ಞಾನಸಾಧ್ಯವಾದುದು. ಶಕ್ತಿಯು ಅತೀಂದ್ರಿಯವಾದುದರಿಂದ ಈ ಮೂರು ಅಭಾವಗಳಲ್ಲಿ ಏಕಶಕ್ತಿಯ ಜ್ಞಾನವು ಬರಲು ಸಾಧ್ಯವಿಲ್ಲ. ಆದ್ದರಿಂದ ಏಕಶಕ್ತಿ ಮತ್ತ್ವೇನ ಈ ಮೂರನ್ನೂ ಅನುಗಮ ಮಾಡಿ ಅದನ್ನು ದಾಹಕ್ಕೆ ಕಾರಣವೆಂದು ಹೇಳಲು ಬರುವುದಿಲ್ಲ.

## ಪ್ರಾಗಭಾವಪ್ರಧ್ವಂಸಗಳು ಪ್ರತಿಯೋಗಿಸಮಾನಕಾಲಿಕವಲ್ಲ

**अथोत्तेजकप्रयोगकाले मणेः कोऽभावः । न तावत् प्राक्प्रध्वंसाभावौ, तयोः प्रतियोग्यसमानकालत्वात् ।**

ಇನ್ನು ಉತ್ತೇಜಕ ಪ್ರಯೋಗ ಕಾಲದಲ್ಲಿ ಮಣಿಯು ಇರುವಾಗ ಅಂಗೀಕರಿಸುವ ಮಣಿಯ ಅಭಾವವು ಯಾವ ಅಭಾವ? ಅದು ಮಣಿಯ ಪ್ರಾಗಭಾವವಾಗಲೀ ಅಥವಾ ಪ್ರಧ್ವಂಸವಾಗಲೀ ಆಗಲು ಸಾಧ್ಯವಿಲ್ಲ. ಏಕೆಂದರೆ ಪ್ರಾಗಭಾವ ಮತ್ತು ಪ್ರಧ್ವಂಸಗಳು ಪ್ರತಿಯೋಗಿಯ ಸಮಾನಕಾಲವಾಗಿರುವುದಿಲ್ಲ

## ಧ್ವಂಸವು ಅನಂತವಾದ್ದರಿಂದ ಬರುವ ಆಪತ್ತಿ

**न च 'श्यामोऽयमासीत्' इत्यत्र श्यामध्वंसप्रयुक्त श्यामघटत्वेन पक्वघटध्वंस एव तथोत्तेजकाभाव-ध्वंसप्रयुक्त उत्तेजकाभाववत्त्वेन मणिध्वंस एवेति वाच्यम् । ध्वंसस्यानन्तत्वे उत्तेजकापनयेऽपि दाहप्रसङ्गात् ।**

(ಶಂಕೆ) ಶ್ಯಾಮಃ ಅಯಮಾಸೀತ್ (ಇದು ಶ್ಯಾಮವಾಗಿದ್ದಿತು) ಎಂಬಲ್ಲಿ ಹೇಗೆ ಶ್ಯಾಮಧ್ವಂಸ ಪ್ರಯುಕ್ತವಾಗಿ ಶ್ಯಾಮಘಟತ್ವೇನ ಪಕ್ವವಾದ ರಕ್ತಘಟಧ್ವಂಸವೇ ವಿಷಯವೋ ಅದರಂತೆ ಉತ್ತೇಜಕ ಪ್ರಯೋಗ ಕಾಲದಲ್ಲಿ ಉತ್ತೇಜಕಾಭಾವ ಧ್ವಂಸಪ್ರಯುಕ್ತವಾಗಿ ಉತ್ತೇಜಕಾಭಾವತ್ತ್ವೇನ

ಮಣಿಧ್ವಂಸವೇ ಇರುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಧ್ವಂಸವು ಅನಂತವಾದುದರಿಂದ (ಧ್ವಂಸಕ್ಕೆ ಧ್ವಂಸವಿಲ್ಲದೇ ಇರುವುದರಿಂದ) ಉತ್ತೇಜಕವನ್ನು ತೆಗೆದರೂ ಹಿಂದಿದ್ದ ಧ್ವಂಸವು ಹಾಗೇ ಉಳಿಯುವುದರಿಂದ ದಾಹವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ.

## ಮಣ್ಯಭಾವವು ಅತ್ಯಂತಾಭಾವಸ್ವರೂಪವಲ್ಲ

**नाप्यत्यन्ताभावः तस्य कादाचित्कत्वाभावादिति चेत् । न ।**

**यथा दण्डोपनयापनयदशायां केवलपुरुषाभाव उत्पादविनाशवान् अन्यथा अबाधितकेवलपुरुषाभावतद-भावव्यवहारयोरुपपादयितुम् अशक्यत्वात्, तथोत्तेजकोप-नयानपनयनशृङ्खलायां प्रतिबन्धकाभावोऽपि तथैव स्वीकरणीयः । तुल्यन्यायत्वात् ।**

ಅಥವಾ ಉತ್ತೇಜಕ ಪ್ರಯೋಗಕಾಲದಲ್ಲಿರುವ ಮಣಿಯ ಅಭಾವವನ್ನು ಅತ್ಯಂತಾಭಾವವೆಂದೂ ಹೇಳಲು ಬರುವುದಿಲ್ಲ. ಏಕೆಂದರೆ ಅತ್ಯಂತಾಭಾವವು ನಿತ್ಯವಾದುದು. ಕಾದಾಚಿತ್ಕವಲ್ಲ ಎಂಬ ಶಂಕೆಗಳು ಸರಿಯಲ್ಲ.

ಹೇಗೆ ದಂಡದ ಉಪನಯ ಮತ್ತು ಅಪನಯದ ಅವಸ್ಥೆಯಲ್ಲಿ ಶುದ್ಧಪುರುಷಾಭಾವವು ಉತ್ಪತ್ತಿನಾಶವುಳ್ಳದ್ದಾಗುತ್ತವೆಯೋ, ಇಲ್ಲದಿದ್ದರೆ ಶುದ್ಧಪುರುಷಾಭಾವ ಮತ್ತು ಶುದ್ಧಪುರುಷಾಭಾವದ ಅಭಾವದ ವ್ಯವಹಾರಗಳನ್ನು ಉಪಪಾದಿಸಲು ಬರುವುದಿಲ್ಲವೋ ಅದರಂತೆ ಉತ್ತೇಜಕದ ಉಪನಯ ಮತ್ತು ಅಪನಯದ ಸರಣಿಯಲ್ಲಿ ಉಂಟಾಗುವ ಪ್ರತಿಬಂಧಕಾಭಾವವನ್ನೂ ಕೂಡ ಸಮಾನ ನ್ಯಾಯವಿರುವುದರಿಂದ ಅದರಂತೆಯೇ ಸ್ವೀಕರಿಸಬೇಕು.

## ಮಣ್ಯಭಾವವು ಸಂಸರ್ಗಾಭಾವರೂಪವಾಗಬಹುದೇ ?

**यदि च संसर्गाभावत्रयवैधर्म्यात् तत्र नाऽन्तर्भवति, तदा तुरीय**

**एव संसर्गाभावोऽस्तु । न हि क्लृप्तविशेषबाधे सामान्यबाधः । विशेषान्तरमादायापि तस्य सम्भवात् ।**

ಸಂಸರ್ಗಾಭಾವವು ಪ್ರಾಗಭಾವ, ಪ್ರಧ್ವಂಸಾಭಾವ ಮತ್ತು ಅತ್ಯಂತಾಭಾವವೆಂಬ ಮೂರು ವಿಧವುಳ್ಳದ್ದು. ಈ ಉತ್ಪಾದ ವಿನಾಶಶಾಲಿಯಾದ ಪ್ರತಿಬಂಧಕಾಭಾವವು ಮೂರರಲ್ಲೂ ಸೇರುವುದಿಲ್ಲ ಆದ್ದರಿಂದ ಅದು ಹೇಗೆ ಸಂಸರ್ಗಾಭಾವವಾಗುತ್ತದೆ ಎಂದು ಆಕ್ಷೇಪಿಸಿದರೆ ಅದನ್ನು ನಾಲ್ಕನೆಯ ಸಂಸರ್ಗಾಭಾವವೆಂದು ಒಪ್ಪಿ ಎಂದು ಉತ್ತರ. ಕ್ಲಪ್ತವಾದ ವಿಶೇಷಗಳ ಬಾಧವಿದ್ದರೆ ಸಾಮಾನ್ಯ ಬಾಧವನ್ನು ಹೇಳಲು ಬರುವುದಿಲ್ಲ. ಅಕ್ಲಪ್ತವಾದ ವಿಶೇಷಾಂತರವನ್ನು ತೆಗೆದುಕೊಂಡು ಅಲ್ಲಿ ಸಾಮಾನ್ಯಬಾಧದ ಅಭಾವವನ್ನು ಕೂಡಿಸಬಹುದು.

## ಇದೊಂದು ಸ್ವಗೋತ್ರ ಕಲಹ

**अन्यथा क्लृप्तानादिसंसर्गाभाववैधर्म्यैण ध्वंसोऽपि न सिद्ध्येत्। व्यवहारानुपपत्तिश्च तुल्यैव । सोऽयमस्माकं सगोत्रकलहो न तु शक्तिवादः ।**

ಹಾಗಿಲ್ಲದಿದ್ದರೆ ಸಂಸರ್ಗಾಭಾವವು ಪ್ರಾಗಭಾವಸ್ಥಳದಲ್ಲಿ ಅನಾದಿ ಎಂದು ಕ್ಲಪ್ತವಾಗಿರುವುದರಿಂದ ಜನ್ಯವಾದ ಧ್ವಂಸರೂಪವಾದ ಸಂಸರ್ಗಾಭಾವವು ಸಿದ್ಧವಾಗಲಾರದು ಎಂದೂ ಆಕ್ಷೇಪಿಸಬಹುದು. ಪ್ರತಿಬಂಧಕವಿರುವಾಗ ಪ್ರತಿಬಂಧಕದ ಅಭಾವ ವ್ಯವಹಾರವನ್ನು ಕೂಡಿಸಬೇಕಾದ ಜವಾಬ್ದಾರಿಯು ಎಲ್ಲರಿಗೂ ಇದ್ದೇ ಇದೆ. ಆದ್ದರಿಂದ ಈ ಅಭಾವವು ಎಂತಹ ಅಭಾವ ಎಂದು ಚರ್ಚೆಮಾಡಿದರೆ, ಅದು ಸ್ವಗೋತ್ರ ಕಲಹವಾಗುತ್ತದೆಯೇ ಹೊರತು ಶಕ್ತಿವಾದವಾಗುವುದಿಲ್ಲ.

## ಪರಿಭಾಷೆ ಬಗ್ಗೆ ಪ್ರಶ್ನೆ ಬೇಡ

**अस्तु वा ध्वंस एवासौ । संसर्गाभावविभागे जन्याभावत्वेन ध्वंसस्य विभजनात् । न चैवं विनाशवत्त्वेन प्रागभाव एव सः। परिभाषाया अपर्यनुयोज्यत्वात् ।**

ಅಥವಾ ಈ ಅಭಾವವನ್ನು ಧ್ವಂಸವೆಂದೇ ಒಪ್ಪೋಣ. ಸಂಸರ್ಗಾಭಾವವನ್ನು ವಿಭಾಗ ಮಾಡುವಾಗ ಜನ್ಯ ಅಭಾವಕ್ಕೆ ಧ್ವಂಸವೆಂದು ನಾಮಕರಣ ಮಾಡಿ ವಿಭಾಗ ಮಾಡುತ್ತೇವೆ. ಈ ಪ್ರತಿಬಂಧಕಾಭಾವಕ್ಕೆ ಧ್ವಂಸವನ್ನು ಒಪ್ಪುವುದರಿಂದ ಧ್ವಂಸವುಳ್ಳ ಅಭಾವವು ಪ್ರಾಗಭಾವವಾಗುವುದರಿಂದ ಅದನ್ನು ಪ್ರಾಗಭಾವವೆಂದೇ ಅಂಗೀಕರಿಸಿ ಎಂಬ ಆಪಾದನೆಯು ಸರಿಯಲ್ಲ. ಜನ್ಯವಾದ ಅಭಾವವು ಧ್ವಂಸ ಎಂದಿಷ್ಟೇ ಪರಿಭಾಷೆ. ಪರಿಭಾಷೆಯನ್ನು ಪ್ರಶ್ನೆಮಾಡಬಾರದು.

## ಪ್ರತಿಬಂಧಕಾಭಾವವನ್ನು ಅತ್ಯಂತಾಭಾವಸ್ವರೂಪವೆಂದೂ ಹೇಳಬಹುದು

**यद्वाऽत्यन्ताभाव एवासौ । तस्य नित्यत्वेऽपि कादाचित्का-प्रतीतिकार्यानुदयौ प्रत्यासत्तिकादाचित्कत्वात् । प्रत्यासत्तिश्च विशेषणाभावो विशेष्याभाव उभयाभावश्च । तदैव विशिष्टात्यन्ताभावसत्त्वादिति । तन्न ।**

ಅಥವಾ ಈ ಪ್ರತಿಬಂಧಕಾಭಾವವನ್ನು ಅತ್ಯಂತಾಭಾವವೆಂದೇ ಒಪ್ಪೋಣ. ಅತ್ಯಂತಾಭಾವವು ನಿತ್ಯವಾದರೂ ಈ ಪ್ರತಿಬಂಧಕಾಭಾವಕ್ಕೆ ಒಮ್ಮೊಮ್ಮೆ ಅಪ್ರತೀತಿ ಮತ್ತು ಅದರ ಕಾರ್ಯಾಭಾವವು ಅತ್ಯಂತಾಭಾವವು ನಿತ್ಯವಾದರೂ ಅತ್ಯಂತಾಭಾವ ಸಂಬಂಧವು ಕಾದಾಚಿತ್ಕವಾದುದರಿಂದ ಉಪಪನ್ನವಾಗುತ್ತದೆ. ಈ ಪ್ರತಿಬಂಧಕಾಭಾವದ ಸಂಬಂಧವೆಂದರೆ (ಪ್ರತ್ಯಾಸತ್ತಿಎಂದರೆ) ವಿಶೇಷಣಾಭಾವ, ವಿಶೇಷ್ಯಾಭಾವ ಮತ್ತು ಉಭಯಾಭಾವ ಇವು ಮೂರೇ ಆಗಿವೆ. ಏಕೆಂದರೆ ಇವು ಮೂರು ಇದ್ದಾಗಲೇ ವಿಶಿಷ್ಟಾತ್ಯಂತಾಭಾವ ಪ್ರತೀತಿಯು ಉಂಟಾಗುತ್ತದೆ.

ಇಂತಹ ಶಂಕೆ ಮತ್ತು ಉತ್ತರಗಳು ಸರಿಯಲ್ಲ

## ಬೌದ್ಧರಂತೆ ಕ್ಷಣಭಂಗದ ಆಪತ್ತಿ

**यदि ह्यतीतविशेषणावच्छेदेन विद्यमानस्यैव विशेष्यस्य ध्वंसः स्यात् तदा क्षणरूपातीतविशेषणावच्छिन्नत्वेन प्रतिक्षणं घटस्य विनाशः स्यात् इति क्षणभङ्गापत्तिः । .**

ಶ್ಯಾಮಘಟತ್ವೇನ ರಕ್ತಘಟಧ್ವಂಸವನ್ನೇ ರಕ್ತತಾ ದೆಶೆಯಲ್ಲಿ ಒಪ್ಪುವುದಾದರೆ ಅತೀತ ಕ್ಷಣರೂಪವಾದ ವಿಶೇಷಣಾವಚ್ಛಿನ್ನವಾದ ಘಟದ ಧ್ವಂಸವನ್ನು ಉತ್ತರ ಕ್ಷಣದಲ್ಲಿ ಒಪ್ಪಬೇಕಾಗುವುದರಿಂದ ಬೌದ್ಧರು ಅಂಗೀಕರಿಸುವ ಕ್ಷಣಭಂಗದ ಆಪತ್ತಿಯು ಉಂಟಾಗುತ್ತದೆ.

## ಮಣ್ಯಭಾವವು ಧ್ವಂಸರೂಪವಲ್ಲ

**किञ्च विद्यमानस्य विनष्टत्वेनाप्रतीतेः 'शिखा विनष्टा पुरुषो न विनष्टः' इति विपरीताबाधितप्रत्ययाच्च न विशेषणाभावेऽपि विशेष्यध्वंसः । 'श्यामोऽयमासीत् केवलोऽयमासीत् पुरुषः'इत्यादौ 'सविशेषणे हि' इति न्यायेन विशेष्यवति श्यामकैवल्यादिध्वंस एव प्रतीयते । ध्वंसस्य ध्वंसानुपपत्तेश्च न विद्यमानस्य ध्वंसः ।**

ಅದೂ ಅಲ್ಲದೇ, ವಿದ್ಯಮಾನವಸ್ತುವಿಗೆ ನಷ್ಟತ್ವೇನ ಪ್ರತೀತಿ ಇಲ್ಲ. ಅದಕ್ಕೆ ವಿರುದ್ಧವಾಗಿ ಶಿಖೆಯು ನಷ್ಟವಾಗಿದೆ, ಪುರುಷನು ನಷ್ಟವಾಗಿಲ್ಲ ಎಂಬ ಅಬಾಧಿತ ಪ್ರತೀತಿ ಇರುವುದರಿಂದ ವಿಶೇಷಣಾಭಾವವು ಉಂಟಾದರೂ ವಿಶೇಷ್ಯ ಧ್ವಂಸವು ಉಂಟಾಗುವುದಿಲ್ಲ. ಈ ಘಟವು ಶ್ಯಾಮವಾಗಿದ್ದಿತು. ಈ ಪುರುಷನು ಕೇವಲನಾಗಿದ್ದನು. ಇತ್ಯಾದಿ ವ್ಯವಹಾರ ಸ್ಥಳದಲ್ಲಿ ಸವಿಶೇಷಣೇಹಿ ಎಂಬ ನ್ಯಾಯದಿಂದ ವಿಶೇಷ್ಯವಾದ ಅಧಿಕರಣದಲ್ಲಿ ಶ್ಯಾಮತ್ವ ಮತ್ತು ಕೈವಲ್ಯದ ಧ್ವಂಸವೇ ಪ್ರತೀತವಾಗುತ್ತದೆ. ಧ್ವಂಸಕ್ಕೆ ಧ್ವಂಸವಿಲ್ಲದಿರುವ ಕಾರಣದಿಂದಲೂ ಉತ್ತೇಜಕ ದೆಶೆಯಲ್ಲಿ ವಿದ್ಯಮಾನವಾದ ಮಣಿಯ ಅಭಾವವನ್ನು ಧ್ವಂಸವೆಂದು ಹೇಳಲು ಬರುವುದಿಲ್ಲ.

## ಧ್ವಂಸಕ್ಕೆ ಧ್ವಂಸವಿಲ್ಲ

**एतेनोत्तेजकसद्भावे सति उत्तेजकाभावविशिष्टमणेरुत्पन्न ध्वंसस्य उत्तेजकापनयसमये ध्वंसो जातः । अध्वस्तश्च ध्वंसः कारणम् इति न विफल उत्तेजकापनय इत्यपास्तम् । विद्यमानध्वंसस्य च ध्वंसाभावात् ।**

ಹೀಗೆ ಹೇಳಿದುದರಿಂದಲೇ ಉತ್ತೇಜಕವು ಇರುವಾಗ ಉತ್ತೇಜಕಾಭಾವ ವಿಶಿಷ್ಟ ಮಣಿಗೆ ಯಾವ ಧ್ವಂಸವು ಉಂಟಾಯಿತೋ ಆ ಧ್ವಂಸವು ಉತ್ತೇಜಕವನ್ನು ತೆಗೆದಾಗ ಧ್ವಸ್ತವಾಯಿತು. ಅಧ್ವಸ್ತವಾದ ಧ್ವಂಸವೇ ದಾಹವನ್ನು ಕುರಿತು ಕಾರಣ. ಇದು ಧ್ವಸ್ತವಾದ ಧ್ವಂಸವಾದುದರಿಂದ ದಾಹವನ್ನು ಕುರಿತು ಕಾರಣವಲ್ಲ. ಆದ್ದರಿಂದ ಉತ್ತೇಜಕದ ಅಪನಯನವು ನಿಷ್ಪ್ರಯೋಜನವಲ್ಲ. ಅದು ಧ್ವಂಸವನ್ನು ಸಂಪಾದಿಸಿ ಕೊಡುತ್ತದೆ ಎಂಬುದು ನಿರಸ್ತವಾಯಿತು. ಏಕೆಂದರೆ ವಿದ್ಯಮಾನವಾದ ಧ್ವಂಸಕ್ಕೆ ಧ್ವಂಸವನ್ನು ಅಂಗೀಕರಿಸಲು ಬರುವುದಿಲ್ಲ.

## ಮಣಿಸತ್ವದೆಸೆಯಲ್ಲಿಯೇ ಮಣಿಯು ವಿನಷ್ಟವಾಗಲಿ ಆಪತ್ತಿ

**न च ध्वंसान्यः संसर्गाभावो विशिष्टाभाव इति वाच्यम् । उत्पन्नाभावस्य विनष्टप्रत्ययहेतुतया ततोऽपि विद्यमानस्य विनष्टत्वप्रत्ययापत्तेः ।**

ಅಥವಾ ಈ ವಿಶಿಷ್ಟಾಭಾವವು ಧ್ವಂಸಾನ್ಯವಾದ ಸಂಸರ್ಗಾಭಾವ ಎಂದೂ ಹೇಳಲು ಬರುವುದಿಲ್ಲ. ಏಕೆಂದರೆ ಈ ವಿಶಿಷ್ಟಾಭಾವಕ್ಕೆ ಉತ್ಪತ್ತಿಯನ್ನು ಒಪ್ಪುವುದರಿಂದ ಉತ್ಪನ್ನವಾದ ಅಭಾವವು 'ನಷ್ಟಃ' ಎಂಬ ಪ್ರತೀತಿಗೆ ಕಾರಣವಾಗಿರುವುದರಿಂದ ಮಣಿಯು ಇರುವಾಗಲೇ ಮಣಿಯು ವಿನಷ್ಟವಾಗಿದೆ ಎಂಬ ಪ್ರತೀತಿಯು ಬರಲಿ ಎಂಬ ಆಪತ್ತಿಯು ಬರುತ್ತದೆ.

## ವಿಶಿಷ್ಟಾಭಾವವು ಅತ್ಯಾಂತಾಭಾವವೇಕಲ್ಲ?

**नापि विशिष्टाभावोऽत्यन्ताभावः । तथाहि स एव कचित् विशेषणाभावसहितः कचिद्विशेष्याभावसहितो दाहकारणमिति अननुगमस्तदवस्थ एव । विशेषणविशेष्याभावयोः प्रत्यासत्तित्वावच्छेदकानुगतधर्माभावात् ।**

ಇನ್ನು ವಿಶಿಷ್ಟಾಭಾವವನ್ನು ಅತ್ಯಂತಾಭಾವವೆಂದು ಹೇಳಲು ಬರುವುದಿಲ್ಲ. ಏಕೆಂದರೆ ಅದು ಕೆಲವುಸಲ ವಿಶೇಷಣಾಭಾವ ಸಹಿತವಾಗಿರುತ್ತದೆ. ಕೆಲವುಸಲ ವಿಶೇಷ್ಯಾಭಾವ ಸಹಿತವಾಗಿರುತ್ತದೆ.

ಹೀಗಾಗಿ ಅದನ್ನು ದಾಹಕಾರಣವಾಗಿ ಅನುಗಮ ಮಾಡಲು ಬರುವುದಿಲ್ಲ. ವಿಶಿಷ್ಟಾಭಾವವು ಅತ್ಯಂತಾಭಾವ. ಅದಕ್ಕೆ ವಿಶೇಷಣಾಭಾವ ಮತ್ತು ವಿಶೇಷ್ಯಾಭಾವಗಳು ಪ್ರತ್ಯಾಸತ್ತಿರೂಪವಾದುದು ಎಂದೂ ಹೇಳಲು ಬರುವುದಿಲ್ಲ. ಏಕೆಂದರೆ ವಿಶೇಷಣಾಭಾವ ಮತ್ತು ವಿಶೇಷ್ಯಾಭಾವಗಳಲ್ಲಿ ಪ್ರತ್ಯಾಸತ್ತಿತ್ವಕ್ಕೆ ಅವಚ್ಛೇದಕವಾದ ಒಂದು ಅನುಗತ ಧರ್ಮವಿಲ್ಲ.

## ಅನುಗತವಾದ ಅವಚ್ಛೇದಕಧರ್ಮ

**अथ विशिष्टविरोधित्वं विशेषणविशेष्याभावयोरनुगतंतदवच्छेदकमस्ति । तयोश्च सत्त्व एव विशिष्टात्यन्ताभावसत्त्वादिति चेत् । तर्हि विशिष्टविरोधित्वेनानुगतेन तयोरेव हि विशिष्टाभावत्वेन दाहव्यवहारादौ जनकत्वमस्तु कृतं तदुपजीविनाऽतिरिक्तविशिष्टाभावेन ।**

ಇನ್ನು ಅನುಗತವಾದ ಅವಚ್ಛೇದಕವಿದೆ, ಅದು ವಿಶಿಷ್ಟವಿರೋಧಿತ್ವ, ಏಕೆಂದರೆ ವಿಶೇಷಣಾಭಾವ ವಿಶೇಷ್ಯಾಭಾವವಿರುವಾಗಲೇ ವಿಶಿಷ್ಟಾತ್ಯಂತಾಭಾವದ ಸತ್ತ್ವವು ಇರುತ್ತದೆ ಎಂದು ಹೇಳುವುದಾದರೆ, ವಿಶಿಷ್ಟವಿರೋಧಿತ್ವೇನ ಅನುಗತವಾದ ವಿಶೇಷಣಾಭಾವ ಮತ್ತು ವಿಶೇಷ್ಯಾಭಾವಗಳಿಗೆ ವಿಶಿಷ್ಟಾಭಾವತ್ವೇನ ರೂಪೇಣ ದಾಹವ್ಯವಹಾರಾದಿಗಳನ್ನು ಅಂಗೀಕರಿಸಬಹುದು. ವಿಶೇಷಣಾಭಾವ ಮತ್ತು ವಿಶೇಷ್ಯಾಭಾವಗಳಿಗಿಂತ ಅತಿರಿಕ್ತವಾದ ಮತ್ತು ಅವುಗಳನ್ನು ಉಪಜೀವಿಸಿದ ಅತಿರಿಕ್ತವಾದ ಒಂದು ವಿಶಿಷ್ಟಾಭಾವವನ್ನೇ ಅಂಗೀಕರಿಸಬೇಕಾದ ಅವಶ್ಯಕತೆ ಇಲ್ಲ ಎಂಬ ಆಪತ್ತಿಯು ಬರುತ್ತದೆ.

## ಅನುಗಮವು ಸಾಧ್ಯವಿಲ್ಲ

**अथोत्तेजककाले विद्यमानात्यन्ताभावानुवृत्तावपि उत्तेजकापनयने उत्तरेजकाभावव्यक्तिर्या जाता तदवच्छिन्नमणेरभावो न तत्रेति तदा न कार्योदयः तत्तदुत्तेजकाभावविशिष्टमणेरभावकूटस्य जनकत्वादिति चेन्न । तत्तदुत्तेजका**

**भावानामननुगतत्वेनानुगतविशिष्टाभावव्यवहारानुपपत्तेः । उत्तेजकाभावत्वेनानुगमेऽतिप्रसङ्ग एव ।**

ಇನ್ನು ಉತ್ತೇಜಕ ಕಾಲದಲ್ಲಿ ಇರುವ ಅತ್ಯಂತಾಭಾವವು ಅನುವೃತ್ತವಾದರೂ ಉತ್ತೇಜಕವನ್ನು ತೆಗೆದಾಗ ಯಾವ ಉತ್ತೇಜಕಾಭಾವ ವ್ಯಕ್ತಿಯು ಉಂಟಾಯಿತೋ ಆ ವ್ಯಕ್ತ್ಯವಚ್ಛಿನ್ನವಾದ ಮಣಿಯ ಅಭಾವವು ಅಲ್ಲಿ ಇಲ್ಲ. ಆದ್ದರಿಂದ ಅಲ್ಲಿ ದಾಹರೂಪವಾದ ಕಾರ್ಯವು ಉತ್ಪತ್ತಿಯಾಗುವುದಿಲ್ಲ. ಏಕೆಂದರೆ ಆಯಾ ಉತ್ತೇಜಕಾಭಾವ ವಿಶಿಷ್ಟವಾದ ಮಣಿಯ ಅಭಾವಕೂಟಕ್ಕೆ ಕಾರಣತ್ವವನ್ನು ಒಪ್ಪಿದ್ದೇವೆ.

ಈ ಸಂದರ್ಭದಲ್ಲಿ ಅಭಾವಕೂಟದಲ್ಲಿ ಒಂದು ಅಭಾವವಿಲ್ಲದಿರುವುದರಿಂದ ಕಾರ್ಯವಾಗುವುದಿಲ್ಲ ಎಂದು ಶಂಕೆಯನ್ನು ಮಾಡಲೂ ಬರುವುದಿಲ್ಲ. ಆಯಾ ಉತ್ತೇಜಕಾಭಾವಗಳು ಅನನುಗತವಾದ್ದರಿಂದ ಅವು ಅನುಗತವಿಶಿಷ್ಟಾಭಾವ ವ್ಯವಹಾರವನ್ನು ಕುರಿತು ಕಾರಣವಾಗುವುದಿಲ್ಲ. ಆಯಾ ಉತ್ತೇಜಕಾಭಾವಗಳನ್ನು ಉತ್ತೇಜಕಾಭಾವತ್ವೇನ ಅನುಗಮಮಾಡುತ್ತೇವೆಂದು ಹೇಳಿದರೆ ಅತಿಪ್ರಸಂಗವು ಇದ್ದೇ ಇದೆ.

## ವಿಶಿಷ್ಟವಿರೋಧಿತ್ವವನ್ನು ಕಾರಣತಾವಚ್ಛೇದಕ ಎನ್ನಬಹುದೇ ?

**अथ विशेषणविशेष्याभावयोर्विशिष्टविरोधित्वमनुगत-कारणतावच्छेदकं यत्र तदन्यतराभावस्तत्र न विशिष्टं यत्र विशिष्टं तत्र तयोरभाव इति सहानवस्थाननियमस्य विरोधस्यानुभव-सिद्धत्वादिति चेन्न ।**

ಇನ್ನು ''ವಿಶೇಷಣಾಭಾವ ವಿಶೇಷ್ಯಾಭಾವಗಳನ್ನು ವಿಶಿಷ್ಟವಿರೋಧಿತ್ವೇನ ಅನುಗಮ ಮಾಡಿ ಆ ವಿಶಿಷ್ಟ ವಿರೋಧಿತ್ವವು ಕಾರಣತಾವಚ್ಛೇದಕವೆಂದು ಹೇಳಬಹುದು. ಎಲ್ಲಿ ವಿಶೇಷಣಾಭಾವ ಮತ್ತು ವಿಶೇಷ್ಯಾಭಾವಗಳಲ್ಲಿ ಒಂದು ಅಭಾವವಿರುತ್ತದೆಯೋ ಅಲ್ಲಿ ವಿಶಿಷ್ಟವು ಇರುವುದಿಲ್ಲ. ಎಲ್ಲಿ ವಿಶಿಷ್ಟವು ಇರುತ್ತದೆಯೋ ಅಲ್ಲಿ ವಿಶೇಷಣಾಭಾವವಾಗಲೀ, ವಿಶೇಷ್ಯಾಭಾವವಾಗಲೀ ಇರುವುದಿಲ್ಲ. ಆದ್ದರಿಂದ ವಿಶೇಷಣಾಭಾವ ವಿಶೇಷ್ಯಾಭಾವಗಳಿಗೂ ಮತ್ತು ವಿಶಿಷ್ಟಕ್ಕೂ ಸಹಾನವಸ್ಥಾನ ರೂಪವಾದ ವಿರೋಧವು ಅನುಭವ ಸಿದ್ಧವಾಗಿದೆ'' ಎಂಬ ಈ ಶಂಕೆಯು ಸರಿಯಲ್ಲ.

ಹೀಗಾಗಿ ಅದನ್ನು ದಾಹಕಾರಣವಾಗಿ ಅನುಗಮ ಮಾಡಲು ಬರುವುದಿಲ್ಲ. ವಿಶಿಷ್ಟಾಭಾವವು ಅತ್ಯಂತಾಭಾವ. ಅದಕ್ಕೆ ವಿಶೇಷಣಾಭಾವ ಮತ್ತು ವಿಶೇಷ್ಯಾಭಾವಗಳು ಪ್ರತ್ಯಾಸತ್ತಿರೂಪವಾದುದು ಎಂದೂ ಹೇಳಲು ಬರುವುದಿಲ್ಲ. ಏಕೆಂದರೆ ವಿಶೇಷಣಾಭಾವ ಮತ್ತು ವಿಶೇಷ್ಯಾಭಾವಗಳಲ್ಲಿ ಪ್ರತ್ಯಾಸತ್ತಿತ್ವಕ್ಕೆ ಅವಚ್ಛೇದಕವಾದ ಒಂದು ಅನುಗತ ಧರ್ಮವಿಲ್ಲ.

## ಅನುಗತವಾದ ಅವಚ್ಛೇದಕಧರ್ಮ

**अथ विशिष्टविरोधित्वं विशेषणविशेष्याभावयोरनुगतंतदवच्छेदकमस्ति । तयोश्च सत्त्व एव विशिष्टात्यन्ताभावसत्त्वादिति चेत् । तर्हि विशिष्टविरोधित्वेनानुगतेन तयोरेव हि विशिष्टाभावत्वेन दाहव्यवहारादौ जनकत्वमस्तु कृतं तदुपजीविनाऽतिरिक्तविशिष्टाभावेन ।**

ಇನ್ನು ಅನುಗತವಾದ ಅವಚ್ಛೇದಕವಿದೆ, ಅದು ವಿಶಿಷ್ಟವಿರೋಧಿತ್ವ, ಏಕೆಂದರೆ ವಿಶೇಷಣಾಭಾವ ವಿಶೇಷ್ಯಾಭಾವವಿರುವಾಗಲೇ ವಿಶಿಷ್ಟಾತ್ಯಂತಾಭಾವದ ಸತ್ತ್ವವು ಇರುತ್ತದೆ ಎಂದು ಹೇಳುವುದಾದರೆ, ವಿಶಿಷ್ಟವಿರೋಧಿತ್ವೇನ ಅನುಗತವಾದ ವಿಶೇಷಣಾಭಾವ ಮತ್ತು ವಿಶೇಷ್ಯಾಭಾವಗಳಿಗೆ ವಿಶಿಷ್ಟಾಭಾವತ್ವೇನ ರೂಪೇಣ ದಾಹವ್ಯವಹಾರಾದಿಗಳನ್ನು ಅಂಗೀಕರಿಸಬಹುದು. ವಿಶೇಷಣಾಭಾವ ಮತ್ತು ವಿಶೇಷ್ಯಾಭಾವಗಳಿಗಿಂತ ಅತಿರಿಕ್ತವಾದ ಮತ್ತು ಅವುಗಳನ್ನು ಉಪಜೀವಿಸಿದ ಅತಿರಿಕ್ತವಾದ ಒಂದು ವಿಶಿಷ್ಟಾಭಾವವನ್ನೇ ಅಂಗೀಕರಿಸಬೇಕಾದ ಅವಶ್ಯಕತೆ ಇಲ್ಲ ಎಂಬ ಆಪತ್ತಿಯು ಬರುತ್ತದೆ.

## ಅನುಗಮವು ಸಾಧ್ಯವಿಲ್ಲ

**अथोत्तेजककाले विद्यमानात्यन्ताभावानुवृत्तावपि उत्तेजकापनयने उत्तरेजकाभावव्यक्तिर्या जाता तदवच्छिन्नमणेरभावो न तत्रेति तदा न कार्योदयः तत्तदुत्तेजकाभावविशिष्टमणेरभावकूटस्य जनकत्वादिति चेन्न । तत्तदुत्तेजका**

**भावानामननुगतत्वेनानुगतविशिष्टाभावव्यवहारानुपपत्तेः । उत्तेजकाभावत्वेनानुगमेऽतिप्रसङ्ग एव ।**

ಇನ್ನು ಉತ್ತೇಜಕ ಕಾಲದಲ್ಲಿ ಇರುವ ಅತ್ಯಂತಾಭಾವವು ಅನುವೃತ್ತವಾದರೂ ಉತ್ತೇಜಕವನ್ನು ತೆಗೆದಾಗ ಯಾವ ಉತ್ತೇಜಕಾಭಾವ ವ್ಯಕ್ತಿಯು ಉಂಟಾಯಿತೋ ಆ ವ್ಯಕ್ತ್ಯವಚ್ಛಿನ್ನವಾದ ಮಣಿಯ ಅಭಾವವು ಅಲ್ಲಿ ಇಲ್ಲ. ಆದ್ದರಿಂದ ಅಲ್ಲಿ ದಾಹರೂಪವಾದ ಕಾರ್ಯವು ಉತ್ಪತ್ತಿಯಾಗುವುದಿಲ್ಲ. ಏಕೆಂದರೆ ಆಯಾ ಉತ್ತೇಜಕಾಭಾವ ವಿಶಿಷ್ಟವಾದ ಮಣಿಯ ಅಭಾವಕೂಟಕ್ಕೆ ಕಾರಣತ್ವವನ್ನು ಒಪ್ಪಿದ್ದೇವೆ.

ಈ ಸಂದರ್ಭದಲ್ಲಿ ಅಭಾವಕೂಟದಲ್ಲಿ ಒಂದು ಅಭಾವವಿಲ್ಲದಿರುವುದರಿಂದ ಕಾರ್ಯವಾಗುವುದಿಲ್ಲ ಎಂದು ಶಂಕೆಯನ್ನು ಮಾಡಲೂ ಬರುವುದಿಲ್ಲ. ಆಯಾ ಉತ್ತೇಜಕಾಭಾವಗಳು ಅನನುಗತವಾದ್ದರಿಂದ ಅವು ಅನುಗತವಿಶಿಷ್ಟಾಭಾವ ವ್ಯವಹಾರವನ್ನು ಕುರಿತು ಕಾರಣವಾಗುವುದಿಲ್ಲ. ಆಯಾ ಉತ್ತೇಜಕಾಭಾವಗಳನ್ನು ಉತ್ತೇಜಕಾಭಾವತ್ವೇನ ಅನುಗಮಮಾಡುತ್ತೇವೆಂದು ಹೇಳಿದರೆ ಅತಿಪ್ರಸಂಗವು ಇದ್ದೇ ಇದೆ.

## ವಿಶಿಷ್ಟವಿರೋಧಿತ್ವವನ್ನು ಕಾರಣತಾವಚ್ಛೇದಕ ಎನ್ನಬಹುದೇ ?

**अथ विशेषणविशेष्याभावयोर्विशिष्टविरोधित्वमनुगत-कारणतावच्छेदकं यत्र तदन्यतराभावस्तत्र न विशिष्टं यत्र विशिष्टं तत्र तयोरभाव इति सहानवस्थाननियमस्य विरोधस्यानुभव-सिद्धत्वादिति चेन्न ।**

ಇನ್ನು "ವಿಶೇಷಣಾಭಾವ ವಿಶೇಷ್ಯಾಭಾವಗಳನ್ನು ವಿಶಿಷ್ಟವಿರೋಧಿತ್ವೇನ ಅನುಗಮ ಮಾಡಿ ಆ ವಿಶಿಷ್ಟ ವಿರೋಧಿತ್ವವು ಕಾರಣತಾವಚ್ಛೇದಕವೆಂದು ಹೇಳಬಹುದು. ಎಲ್ಲಿ ವಿಶೇಷಣಾಭಾವ ಮತ್ತು ವಿಶೇಷ್ಯಾಭಾವಗಳಲ್ಲಿ ಒಂದು ಅಭಾವವಿರುತ್ತದೆಯೋ ಅಲ್ಲಿ ವಿಶಿಷ್ಟವು ಇರುವುದಿಲ್ಲ. ಎಲ್ಲಿ ವಿಶಿಷ್ಟವು ಇರುತ್ತದೆಯೋ ಅಲ್ಲಿ ವಿಶೇಷಣಾಭಾವವಾಗಲೀ, ವಿಶೇಷ್ಯಾಭಾವವಾಗಲೀ ಇರುವುದಿಲ್ಲ. ಆದ್ದರಿಂದ ವಿಶೇಷಣಾಭಾವ ವಿಶೇಷ್ಯಾಭಾವಗಳಿಗೂ ಮತ್ತು ವಿಶಿಷ್ಟಕ್ಕೂ ಸಹಾನವಸ್ಥಾನ ರೂಪವಾದ ವಿರೋಧವು ಅನುಭವ ಸಿದ್ಧವಾಗಿದೆ" ಎಂಬ ಈ ಶಂಕೆಯು ಸರಿಯಲ್ಲ.

## ಸಹಾನವಸ್ಥಾನ ನಿಯಮವೆಂದರೇನು ?

**सहानवस्थाननियमो नपरस्परविरहरूपतया विशेषणविशेष्या-भावस्य प्रत्येकं विशिष्टाभावतया तत्प्रत्येकाभावस्य विशिष्टत्वापत्तेः । तथा च विशेष्यविशेषणयोः प्रत्येकं विशिष्टत्वापत्तिः । तदभावस्य तत्त्वात् ।**

ಏಕೆಂದರೆ ಸಹಾನವಸ್ಥಾನ ನಿಯಮವೆಂದರೆ ಪರಸ್ಪರ ವಿರಹರೂಪತ್ವ ಎಂದು ಹೇಳಲು ಬರುವುದಿಲ್ಲ. ಹಾಗೆ ಹೇಳಿದರೆ ವಿಶೇಷಣಾಭಾವವು ಮತ್ತು ವಿಶೇಷ್ಯಾಭಾವವು ಪ್ರತ್ಯೇಕವಾಗಿ ವಿಶಿಷ್ಟಾಭಾವರೂಪವಾದುದರಿಂದ ವಿಶೇಷಣಾಭಾವಾಭಾವವು ಮತ್ತು ವಿಶೇಷ್ಯಾಭಾವಾಭಾವವು ಪ್ರತ್ಯೇಕವಾಗಿ ವಿಶಿಷ್ಟವಾಗಲಿ ಎಂಬ ಆಪತ್ತಿಯು ಬರುತ್ತದೆ. ಘಟಾಭಾವಾಭಾವವು ಘಟರೂಪವಾದುದರಿಂದ ವಿಶೇಷಣಾಭಾವಾಭಾವ ಮತ್ತು ವಿಶೇಷ್ಯಾಭಾವಾಭಾವಗಳು ವಿಶೇಷಣ ಮತ್ತು ವಿಶೇಷ್ಯವಾಗುವುದರಿಂದ ವಿಶೇಷಣ ಮತ್ತು ವಿಶೇಷ್ಯಗಳಿಗೆ ಪ್ರತ್ಯೇಕವಾಗಿ ವಿಶಿಷ್ಟತ್ವವು ಬರಲಿ ಎಂಬ ಆಪತ್ತಿಯು ಬರುತ್ತದೆ.

## ಉಭಯಾಭಾವಾಭಾವವು ವಿಶಿಷ್ಟರೂಪವಲ್ಲ

**न चोभयाभावाभाव उभयं विशिष्टम् । एवं ह्यभावद्वयं विशिष्टाभावो न तु प्रत्येकाभावरूप इति प्रत्येकाभावाद् विशिष्टभावव्यवहारो न स्यात् ।**

ಆದರೆ ಉಭಯಾಭಾವಾಭಾವಗಳಿಗೂ ಪ್ರತ್ಯೇಕವಾಗಿ ವಿಶಿಷ್ಟತ್ವವಿಲ್ಲ. ಆದ್ದರಿಂದ ವಿಶೇಷಣಾಭಾವ ಮತ್ತು ವಿಶೇಷ್ಯಾಭಾವ ಎರಡನ್ನೂ ಸೇರಿಸಿ ಅದು ವಿಶಿಷ್ಟಾಭಾವವೆಂದು ಹೇಳಬೇಕೇ ಹೊರತು ಪ್ರತ್ಯೇಕವಾಗಿ ವಿಶೇಷಣಾಭಾವ ಮತ್ತು ವಿಶೇಷ್ಯಾಭಾವಗಳು ವಿಶಿಷ್ಟಾಭಾವರೂಪವಾಗುವುದಿಲ್ಲ. ಆದ್ದರಿಂದ ಆಗ ಪ್ರತ್ಯೇಕವಾದ ವಿಶೇಷಣಾಭಾವ ಮತ್ತು ವಿಶೇಷ್ಯಾಭಾವ ಇರುವಲ್ಲಿ ವಿಶಿಷ್ಟಾಭಾವ ವ್ಯವಹಾರವು ಬಾರದೇ ಹೋಗಲಿ ಎಂಬ ಆಪತ್ತಿಯು ಬರುತ್ತದೆ.

## ಪರಸ್ಪರವಿರಹವ್ಯಾಪ್ಯತ್ವವಾಗಲೀ, ತದಾಕ್ಷೇಪಕತ್ವವಾಗಲೀ ತದವಸ್ಥಾನವಲ್ಲ

**नापि परस्परविरहव्याप्यत्वं तदाक्षेपकत्वं वा । विशेषण-विशेष्याभावस्य विशिष्टाभावत्वेन तदव्याप्यत्वात् तदनाक्षेपकत्वाच्च । अभेदे तयोरभावात् ।**

ಅಥವಾ ಸಹಾನವಸ್ಥಾನರೂಪವಾದ ವಿರೋಧವು ಪರಸ್ಪರ ವಿರಹವ್ಯಾಪ್ಯತ್ವರೂಪವಾದುದು ಎಂದಾಗಲೀ ಅಥವಾ ಪರಸ್ಪರ ವಿರಹ ಆಕ್ಷೇಪಕತ್ವರೂಪವಾದುದು ಎಂದಾಗಲೀ ಹೇಳಲು ಬರುವುದಿಲ್ಲ. ಏಕೆಂದರೆ ಹೀಗೆ ಶಂಕಿಸುವವರು ವಿಶೇಷಣಾಭಾವ ಮತ್ತು ವಿಶೇಷ್ಯಾಭಾವಗಳನ್ನೇ ವಿಶಿಷ್ಟಾಭಾವವೆಂದು ಹೇಳುವುದರಿಂದ ಅಭೇದವಿರುವಲ್ಲಿ ವ್ಯಾಪ್ಯವ್ಯಾಪಕಭಾವವಾಗಲೀ ಅಥವಾ ಆಕ್ಷೇಪಕತ್ವವಾಗಲೀ ಇರುವುದಿಲ್ಲ.

## ವಿಶಿಷ್ಟವಿರೋಧಿತ್ವದಿಂದ ಅನುಗಮ ಸಾಧ್ಯವಿಲ್ಲ

**एतेनान्यदपि विशिष्टव्यवहारविरोधित्वादिनानुगतत्वम-पास्तम् । केनाप्यनुगतेन रूपेण विशेषणविशेष्याभावस्य विशिष्टाभावत्वे प्रत्येकाभावाभावस्य विशेषणविशेष्यान्यतर-मात्रस्य विशिष्टत्वापत्तेः ।**

ವಿಶಿಷ್ಟವಿರೋಧಿತ್ವೇನ ಈ ಎರಡು ಅಭಾವಗಳನ್ನು ಅನುಗಮ ಮಾಡಲು ಸಾಧ್ಯವಿಲ್ಲ ಎಂದು ಹೇಳಿದುದರಿಂದಲೇ ವಿಶಿಷ್ಟವ್ಯವಹಾರ ವಿರೋಧಿತ್ವೇನ ಅನುಗಮ ಮಾಡಬಹುದು ಎಂಬ ಶಂಕೆಯೂ ನಿರಸ್ತವಾಗುತ್ತದೆ.

ವಿಶೇಷಣಾಭಾವ ಮತ್ತು ವಿಶೇಷ್ಯಾಭಾವಗಳನ್ನು ಯಾವ ರೂಪದಿಂದಾದರೂ ಅನುಗಮ ಮಾಡಿ ಅವುಗಳನ್ನು ವಿಶಿಷ್ಟಾಭಾವವೆಂದು ಹೇಳುವುದಾದರೆ ಪ್ರತ್ಯೇಕವಾದ ವಿಶೇಷಣಾಭಾವಾಭಾವಕ್ಕೂ ಮತ್ತು ವಿಶೇಷ್ಯಾಭಾವಾಭಾವಕ್ಕೂ ಎಂದರೆ ವಿಶೇಷಣ ಮತ್ತು ವಿಶೇಷ್ಯ ಒಂದೊಂದಕ್ಕೂ ವಿಶಿಷ್ಟತ್ವವು ಬರಲಿ ಎಂಬ ಆಪತ್ತಿಯು ಬರುತ್ತದೆ.

## ತದಭಾವಾಭಾವವು ತತ್ವರೂಪ

**तदभावाभावस्य तत्त्वादित्युक्तत्वात् । तस्माद्विशेषणविशेष्याभावो विशेषणावच्छिन्नविशेष्याभावो न विशिष्टाभाव इति ।**

ಏಕೆಂದರೆ ತದಭಾವಾಭಾವವು ತದ್‌ರೂಪವಾದುದು ಎಂದು ಮೊದಲೇ ಹೇಳಿದ್ದೇವೆ. ಆದ್ದರಿಂದ ವಿಶಿಷ್ಟಾಭಾವವನ್ನು ವಿಶೇಷಣ ವಿಶೇಷ್ಯಾಭಾವವೆಂದಾಗಲೀ ವಿಶೇಷಣ ಅವಚ್ಛಿನ್ನ ವಿಶೇಷ್ಯಾಭಾವವೆಂದಾಗಲೀ ಹೇಳಲು ಬರುವುದಿಲ್ಲ.

## ಹಿಂದಿನ ಆಕ್ಷೇಪಗಳಿಗೆ ಉತ್ತರ

**अत्रोच्यते । विशेषणविशेष्ययोः सम्बन्धाद् विशिष्टव्यवहार इति तयोः सम्बन्धाभावादविशिष्टाभावव्यवहार इति । घटतदभावव्यवहाराविव घटसत्त्वासत्त्वाभ्याम् । न हि तयोरसम्बन्धे विशिष्टव्यवहारः, नवा तदभावे सति न विशिष्टाभावव्यवहारः।**

ಇಲ್ಲಿ ಹೀಗೆ ಉತ್ತರವನ್ನು ಹೇಳುತ್ತಾರೆ. ವಿಶೇಷಣ ವಿಶೇಷ್ಯ ಸಂಬಂಧವಿರುವಲ್ಲಿ ವಿಶಿಷ್ಟ ವ್ಯವಹಾರವು ಉಂಟಾಗುತ್ತದೆ. ಆದ್ದರಿಂದ ಅವುಗಳ ಸಂಬಂಧಾಭಾವವು ವಿಶಿಷ್ಟಾಭಾವ ವ್ಯವಹಾರವನ್ನು ಕುರಿತು ಕಾರಣವಾಗುತ್ತದೆ. ಘಟಸತ್ತ್ವವು ಘಟದ ವ್ಯವಹಾರಕ್ಕೆ ಘಟದ ಅಸತ್ತ್ವವು ಘಟಾಭಾವವ್ಯವಹಾರಕ್ಕೆ ಕಾರಣವಾದಂತೆ ಇಲ್ಲಿಯೂ ಆಗುತ್ತದೆ. ವಿಶೇಷಣವಿಶೇಷ್ಯ ಸಂಬಂಧವಿಲ್ಲದಿದ್ದರೆ ವಿಶಿಷ್ಟವ್ಯವಹಾರವು ಉಂಟಾಗುವುದಿಲ್ಲವಷ್ಟೆ. ಅಥವಾ ಅವುಗಳಿಗೆ ಸಂಬಂಧವಿಲ್ಲದಿದ್ದರೆ ವಿಶಿಷ್ಟಾಭಾವ ವ್ಯವಹಾರವು ಉಂಟಾಗದೇ ಇರುವುದಿಲ್ಲವಷ್ಟೆ.

## ಸಂಬಂಧವು ವೈಶಿಷ್ಟ್ಯರೂಪ

**यस्य च यत्र सम्बन्धः स एव तत्र तस्य वैशिष्ट्यम् । स च सम्बन्धाभावो विशेषणाभावाद्विशेष्याभावात् उभयाभावात् सर्वत्राविशिष्ट एकस्तेषां व्यापकोऽनुगतविशिष्टाभाव-**

**व्यवहारकारणम् । 'इह दण्डी पुरुषो नास्ति' इत्यत्र तथा दर्शनात्।**

ಯಾವ ಪದಾರ್ಥಕ್ಕೆ ಎಲ್ಲಿ ಸಂಬಂಧವಿರುತ್ತದೆಯೋ ಆ ಸಂಬಂಧವೇ ಆ ಅಧಿಕರಣದಲ್ಲಿ ಆ ಪದಾರ್ಥದ ವೈಶಿಷ್ಟ್ಯರೂಪವಾದುದು. ಈ ವಿಶೇಷಣ ವಿಶೇಷ್ಯಗಳ ಸಂಬಂಧಾಭಾವವು ವಿಶೇಷಣಾಭಾವವಿದ್ದಲ್ಲಿ, ವಿಶೇಷ್ಯಾಭಾವವಿದ್ದಲ್ಲಿ ಮತ್ತು ಉಭಯಾಭಾವವಿದ್ದಲ್ಲಿ ಸರ್ವತ್ರ ಅನುಗತವಾಗಿರುತ್ತದೆ. ಅದು ಈ ಮೂರು ಅಭಾವಗಳಿಗೆ ವ್ಯಾಪಕವಾಗಿದ್ದು, ಮೂರು ಸ್ಥಳದಲ್ಲಿಯೂ ಬರುವ ಅನುಗತವಾದ ವಿಶಿಷ್ಟಾಭಾವ ವ್ಯವಹಾರಕ್ಕೆ ಕಾರಣವಾಗಿರುತ್ತದೆ. 'ಇಹ ದಂಡೀಪುರುಷೋ ನಾಸ್ತಿ' ಎಂಬ ವ್ಯವಹಾರವು ಹೇಗೆ ಉಂಟಾಗುತ್ತದೆಯೋ ಅದರಂತೆ.

## ಪ್ರತಿಬಂಧಕ ಮತ್ತು ಉತ್ತೇಜಕಾಭಾವಗಳ ಸಂಬಂಧಾಭಾವವೇ ದಾಹಕ್ಕೆ ಕಾರಣ

**अत एव दण्डमात्रसद्भावे दण्डपुरुषसद्भावे उभयाभावे च कैवल्यपुरुषयोः सम्बन्धाभावः सर्वत्रास्तीत्यनुगतः केवलपुरुषा-भावव्यवहारः । एवञ्च प्रतिबन्धकोत्तेजका-भावयोः सम्बन्धाभावो दाहकारणम् । स च प्रतिबन्धकाभावे प्रतिबन्धकोत्तेजकसद्भावे उभयाभावे चास्ति । सर्वत्र प्रतिबन्धकोत्तेजकाभावयोः सम्बन्धो नास्तीति प्रतीतेः ।**

ಆದ್ದರಿಂದಲೇ ಕೇವಲ ದಂಡವಿರುವಲ್ಲಿಯೂ ದಂಡ ಪುರುಷ ಇಬ್ಬರೂ ಇರುವಲ್ಲಿಯೂ ಮತ್ತು ದಂಡ ಪುರುಷ ಎರಡೂ ಇಲ್ಲದಿರುವಲ್ಲಿಯೂ ಕೈವಲ್ಯ (ಶುದ್ಧತ್ವ) ಮತ್ತು ಪುರುಷರ ಸಂಬಂಧಾಭಾವವು ಸರ್ವತ್ರ ಅನುಗತವಾಗಿದ್ದು, ಅದರಿಂದ ಕೇವಲ ಪುರುಷಾಭಾವ ವ್ಯವಹಾರವು ಉಂಟಾಗುತ್ತದೆ. ಅದರಂತೆ ಪ್ರತಿಬಂಧಕ ಮತ್ತು ಉತ್ತೇಜಕಾಭಾವಗಳ ಸಂಬಂಧಾಭಾವವು ದಾಹವನ್ನು ಕುರಿತು ಕಾರಣ. ಆ ಸಂಬಂಧಾಭಾವವಾದರೂ ಪ್ರತಿಬಂಧಕಾಭಾವವು ಇರುವಲ್ಲಿಯೂ ಪ್ರತಿಬಂಧಕ ಮತ್ತು ಉತ್ತೇಜಕ ಎರಡೂ ಇರುವಲ್ಲಿಯೂ ಮತ್ತು ಎರಡೂ ಇಲ್ಲದಿರುವಲ್ಲಿಯೂ

ಇದೆ. ಏಕೆಂದರೆ ಈ ಎಲ್ಲಾ ಮೂರು ಸ್ಥಳದಲ್ಲಿಯೂ ಪ್ರತಿಬಂಧಕ ಮತ್ತು ಉತ್ತೇಜಕಾಭಾವಗಳಿಗೆ ಸಂಬಂಧವಿಲ್ಲ ಎಂಬ ಪ್ರತೀತಿಯು ಉಂಟಾಗುತ್ತದೆ.

## ಪ್ರತಿಬಂಧಕ ಮತ್ತು ಉತ್ತೇಜಕಾಭಾವವಿದ್ದಲ್ಲಿ ದಾಹಾಪತ್ತಿ ಇಲ್ಲ

**नन्वेवं यत्र प्रतिबन्धकोत्तेजकाभावौ तत्रापि दाहः स्यात् । अधिकरणाभावयोरतिरिक्तसम्बन्धाभावात् इति चेन्न । तदभावेऽपि स्वरूपसम्बन्धस्य। भावात् सर्वत्र स्वरूपसम्बन्धादेव अधिकरणाभावयोर्वैशिष्ट्यप्रतीतेः ।**

ಹಾಗಾದರೆ ಎಲ್ಲಿ ಪ್ರತಿಬಂಧಕ ಮತ್ತು ಉತ್ತೇಜಕಾಭಾವವಿದೆಯೋ ಅಲ್ಲಿಯೂ ದಾಹವುಂಟಾಗಲಿ ಎಂಬ ಆಪತ್ತಿ ಬರುತ್ತದೆ. ಏಕೆಂದರೆ ಅಧಿಕರಣ ಮತ್ತು ಅಭಾವಗಳಿಗೆ ಅತಿರಿಕ್ತವಾದ ಸಂಬಂಧವಿಲ್ಲ ಎಂಬ ಈ ಶಂಕೆಯು ಸರಿಯಲ್ಲ. ಅಧಿಕರಣ ಮತ್ತು ಅಭಾವಗಳಿಗೆ ಅತಿರಿಕ್ತ ಸಂಬಂಧವಿಲ್ಲದಿದ್ದರೂ ಅಭಾವ ಪ್ರತ್ಯಯಕ್ಕೆ ಕಾರಣವಾದ ಸ್ವರೂಪಸಂಬಂಧವು ಇಲ್ಲಿ ಇರುವುದಿಲ್ಲ. ಅಧಿಕರಣಾಭಾವಗಳ ವೈಶಿಷ್ಟ್ಯ ಪ್ರತೀತಿಯು ಎಲ್ಲೆಲ್ಲಿ ಉಂಟಾಗುತ್ತದೆಯೋ ಅಲ್ಲೆಲ್ಲಾ ಸ್ವರೂಪ ಸಂಬಂಧದಿಂದಲೇ ಪ್ರತೀತಿಯು ಉಂಟಾಗುತ್ತದೆ.

## ಪ್ರತಿಬಂಧಕ ಹಾಗೂ ಉತ್ತೇಜಕಾಭಾವವಿದ್ದಲ್ಲಿ ಸ್ವರೂಪಸಂಬಂಧವಿದೆಯಲ್ಲವೇ?

**तथापि प्रतिबन्धकोत्तेजकाभावावेव स्वरूपसम्बन्धः, तयोरभावश्च प्रतिबन्धकाभाव उत्तेजकश्च दाहकारणम् । तथा चोभयाभावे उत्तेजकासत्त्वे परं दाहः स्यात्, उत्तेजकवति च प्रतिबन्धके दाहो न स्यादिति चेन्न ।**

ಹೀಗೆ ಹೇಳಿದರೂ ಪ್ರತಿಬಂಧಕ ಮತ್ತು ಉತ್ತೇಜಕಾಭಾವಗಳು ಇರುವಲ್ಲಿ ಸ್ವರೂಪಸಂಬಂಧವು ಇದ್ದೇ ಇದೆ. ಏಕೆಂದರೆ ಅವುಗಳಿಗೆ ಸ್ವರೂಪಸಂಬಂಧವೆಂದರೆ ಅದು ಪ್ರತಿಬಂಧಕ ಮತ್ತು

ಉತ್ತೇಜಕಾಭಾವರೂಪವಷ್ಟೆ. ಪ್ರತಿಬಂಧಕ ಮತ್ತು ಉತ್ತೇಜಕಾಭಾವಗಳ ಅಭಾವವು ಎಂದರೆ ಪ್ರತಿಬಂಧಕಾಭಾವ ಮತ್ತು ಉತ್ತೇಜಕಗಳು ದಾಹವನ್ನು ಕುರಿತು ಕಾರಣ. ಆದ್ದರಿಂದ ಉಭಯಾಭಾವವಿರುವಲ್ಲಿ ಉತ್ತೇಜಕವು ಇಲ್ಲದಿರುವಾಗ ದಾಹ ಉಂಟಾಗಲಿ ಮತ್ತು ಉತ್ತೇಜಕವುಳ್ಳ ಪ್ರತಿಬಂಧಕವಿರುವಾಗ ಉಭಯಾಭಾವವಿಲ್ಲದಿರುವುದರಿಂದ ದಾಹವುಂಟಾಗದಿರಲಿ ಎಂಬ ಆಪತ್ತಿಯು ಬರುತ್ತದೆ ಎಂಬ ಆಕ್ಷೇಪವು ಸರಿಯಲ್ಲ.

## ಅಭಾವ ಹಾಗೂ ಅಧಿಕರಣಗಳು ಮಾತ್ರ ಸಂಬಂಧರೂಪವಲ್ಲ

**अधिकरणाभावावेव न स्वरूपसम्बन्धः । तयोर्घटवद्भूतल-चत्वरीयतदभावयोरपि स्वरूपसत्त्वे घटवति घटाभाव-व्यवहारापत्तेः । किन्तूपश्लिष्टस्वभावत्वम् । तच्च सम्बन्धान्तरं विना विशिष्टप्रत्ययजननयोग्यत्वम् ।**

ಅಭಾವ ವೈಶಿಷ್ಟ್ಯವನ್ನು ಕುರಿತು ಕೇವಲ ಅಧಿಕರಣ ಮತ್ತು ಅಭಾವಗಳೇ ಸ್ವರೂಪ ಸಂಬಂಧವಲ್ಲ. ಕೇವಲ ಅಭಾವ ಮತ್ತು ಅಧಿಕರಣಗಳೆರಡೇ ಸ್ವರೂಪ ಸಂಬಂಧವಾಗುವುದಾದರೆ ಘಟವದ್ ಭೂತಲಕ್ಕೂ ಮತ್ತು ಚತ್ವರೀಯ ಘಟಾಭಾವಕ್ಕೂ ಅಧಿಕರಣ ಮತ್ತು ಅಭಾವರೂಪವಾದ ಸ್ವರೂಪಸಂಬಂಧವಿರುವುದರಿಂದ ಘಟವದ್ಭೂತಲದಲ್ಲಿ ಘಟಾಭಾವ ವ್ಯವಹಾರ ಉಂಟಾಗಲಿ ಎಂಬ ಆಪತ್ತಿಯು ಉಂಟಾಗುತ್ತದೆ. ಆದ್ದರಿಂದ ಅಧಿಕರಣ ಮತ್ತು ಅಭಾವಗಳಿಗೆ ಸ್ವರೂಪ ಸಂಬಂಧವೆಂದರೆ ಪರಸ್ಪರ ಉಪಶ್ಲಿಷ್ಟ ಸ್ವಭಾವತ್ವ ಎಂದು ಹೇಳಬೇಕು. ಎಂದರೆ ಇನ್ನೊಂದು ಸಂಬಂಧದ ಅಪೇಕ್ಷೆ ಇಲ್ಲದೇ ವಿಶಿಷ್ಟ ಪ್ರತ್ಯಯಜನನ ಯೋಗ್ಯತ್ವವು ಇರಬೇಕು ಎಂದು ಅರ್ಥ.

## ವಿಶಿಷ್ಟ ಪ್ರತ್ಯಯಜನನಯೋಗ್ಯತ್ವವೇ ಸ್ವರೂಪಸಂಬಂಧ

**न च घटवद्भूतलत्वचत्वरीयतदभावयोर्विशिष्टप्रत्ययजनन-योग्यत्वमस्ति । घटवति कदापि घटाभावप्रत्ययानुदयात्। तदिहापि प्रतिबन्धकोत्तेजकाभावयोर्विशिष्टप्रत्ययजननयोग्यत्वं स्वरूपसम्बन्धः । अन्यथा उत्तेजकवति प्रतिबन्धके चत्वरीयो**

**त्तेजकाभावविशिष्टप्रत्ययापत्तेः। तादृशस्वरूपसम्बन्धाभावश्च प्रतिबन्धकाभावे प्रतिबन्धकोत्तेजकसद्भावे उभयाभावे चाविशिष्ट एव ।**

ಘಟವದ್ಭೂತಲಕ್ಕೂ ಮತ್ತು ಚತ್ವರೀಯ ಘಟಾಭಾವಕ್ಕೂ ವಿಶಿಷ್ಟಪ್ರತ್ಯಯಜನನಯೋಗ್ಯತ್ವವಿಲ್ಲ. ಏಕೆಂದರೆ ಘಟವದ್ಭೂತಲದಲ್ಲಿ ಎಂದೂ ಘಟಾಭಾವಪ್ರತ್ಯಯವು ಉಂಟಾಗುವುದಿಲ್ಲ. ಅದರಂತೆ ಇಲ್ಲಿಯೂ ಪ್ರತಿಬಂಧಕ ಮತ್ತು ಉತ್ತೇಜಕಾಭಾವಗಳಿಗೆ ವಿಶಿಷ್ಟಪ್ರತ್ಯಯಜನನ ಯೋಗ್ಯತ್ವವೇ ಸ್ವರೂಪಸಂಬಂಧವು. ಇಲ್ಲದಿದ್ದರೆ ಉತ್ತೇಜಕವುಳ್ಳ ಪ್ರತಿಬಂಧಕದಲ್ಲಿ ಚತ್ವರೀಯ ಉತ್ತೇಜಕಾಭಾವ ವಿಶಿಷ್ಟಪ್ರತ್ಯಯವು ಉಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಪ್ರತಿಬಂಧಕ ಮತ್ತು ಉತ್ತೇಜಕಾಭಾವಗಳಿಗೆ ವಿಶಿಷ್ಟಪ್ರತ್ಯಯಜನನ ಯೋಗ್ಯತ್ವರೂಪವಾದ ಸ್ವರೂಪಸಂಬಂಧದ ಅಭಾವವು ಪ್ರತಿಬಂಧಕ ಇಲ್ಲದಿರುವಲ್ಲಿಯೂ ಪ್ರತಿಬಂಧಕ ಮತ್ತು ಉತ್ತೇಜಕ ಎರಡೂ ಇರುವಲ್ಲಿಯೂ ಮತ್ತು ಎರಡೂ ಇಲ್ಲದಿರುವಲ್ಲಿಯೂ ಸಮಾನವಾಗಿರುತ್ತದೆ.

## ಕೇವಲ ಪುರುಷಾಭಾವ ವ್ಯವಹಾರವು ಅನುಗತವಾಗಿದೆ

**यद्वा, अदण्डपुरुषस्याभावे दण्डी पुरुषो न प्रतियोगी तस्यादण्डत्वाभावात् । किन्तु तदन्यः । तस्य चाभावो दण्डिसद्भावेऽपि दण्डमात्रसत्त्वे उभयासत्त्वे चाविशिष्ट इति तस्मात् केवलपुरुषाभावव्यवहारोऽनुगतः ।**

ಅಥವಾ ಅದಂಡಪುರುಷಾಭಾವವನ್ನು ಕುರಿತು ತತ್ಕಾಲದಲ್ಲಿ ದಂಡವುಳ್ಳ ಪುರುಷನು ಪ್ರತಿಯೋಗಿಯಲ್ಲ. ಏಕೆಂದರೆ ಅವನಲ್ಲಿ ಅದಂಡತ್ವವಿಲ್ಲ. ಆದ್ದರಿಂದ ತತ್ಕಾಲದಲ್ಲಿ ದಂಡರಹಿತನಾದ ಪುರುಷನೇ ಆ ಅಭಾವಕ್ಕೆ ಪ್ರತಿಯೋಗಿ. ಅಂತಹ ಪ್ರತಿಯೋಗಿಯ ಅಭಾವವು ದಂಡಿಯು ಇದ್ದರೂ, ದಂಡಮಾತ್ರವೇ ಇದ್ದರೂ, ದಂಡ ಮತ್ತು ಪುರುಷರು ಇಬ್ಬರೂ ಇಲ್ಲದಿದ್ದರೂ ಅವಿಶಿಷ್ಟ (ಸಮಾನ)ವಾಗಿರುವುದರಿಂದ ಈ ಮೂರು ಸ್ಥಳಗಳಲ್ಲಿಯೂ ಕೇವಲಪುರುಷಾಭಾವ ವ್ಯವಹಾರವು ಅನುಗತವಾಗುತ್ತದೆ.

## ವಿಶೇಷಣಾವಚ್ಛಿನ್ನ ಪ್ರತಿಯೋಗಿಕ ಅಭಾವವನ್ನು ಒಪ್ಪದಿದ್ದರೆ

**तदुक्तम् –**

**'न हि – दण्डिनि सति अदण्डानामन्येषां नाभावः, किन्तु दण्डाभावस्यैवेति – युक्तम्, अन्यथा तत्राऽन्येषामिति पदस्य व्यर्थत्वापत्तेः ।**

ಅದು ಹೀಗೆ ಹೇಳಲ್ಪಟ್ಟಿದೆಯಷ್ಟೆ. 'ದಂಡಿಯು ಇರುವಾಗ ಉಳಿದ ಅದಂಡ ಪುರುಷರ ಅಭಾವವು ಇಲ್ಲವೆಂದು ಹೇಳಲು ಬರುವುದಿಲ್ಲ. ಆದರೆ ದಂಡಾಭಾವದ ಅಭಾವವೇ ಇರುತ್ತದೆ ಎಂಬುದು ಯುಕ್ತವಲ್ಲ. ಹಾಗೆ ಹೇಳಿದರೆ ಕೇವಲ ವಿಶೇಷಣಪ್ರತಿಯೋಗಿಕ ಅಭಾವವನ್ನು ಒಪ್ಪಿದಂತಾಗುತ್ತದೆ. ವಿಶೇಷಣಾವಚ್ಛಿನ್ನ ಪ್ರತಿಯೋಗಿಕ ಅಭಾವವನ್ನು ಒಪ್ಪದೆ ಈ ಅಭಾವವು ಕೇವಲ ವಿಶೇಷಣಪ್ರತಿಯೋಗಿಕವೆಂದಾದರೆ 'ಅನ್ಯೇಷಾಂ' ಎಂದು ವಿಶೇಷ್ಯವನ್ನು ಹೇಳುವ ಪದವು ವ್ಯರ್ಥವಾಗುತ್ತದೆ.

## ಪ್ರತಿಬಂಧಕಾಭಾವಕ್ಕೆ ಉತ್ತೇಜಕಸಹಕೃತ ಪ್ರತಿಬಂಧಕವು ಪ್ರತಿಯೋಗಿಯಲ್ಲ

**तथा केवलप्रतिबन्धकाभावे उत्तेजकसहकृतः प्रतिबन्धको न प्रतियोगी तस्य केवलत्वाभावात् । किन्तु तदन्यः । तदन्यस्य च केवलप्रतिबन्धकस्याभावे उत्तेजकसहितप्रतिबन्धक-सत्त्वे उत्तेजकमात्रसत्त्वे उभयासत्त्वे वाविशिष्ट एवेति नाऽननुगमः, उत्तेजकापनये च केवलप्रतिबन्धकोऽस्तीति न तदभाव इति दाहो न भवति' – इति ।**

ಆದರಂತೆ ಕೇವಲ ಪ್ರತಿಬಂಧಕಾಭಾವವನ್ನು ಕುರಿತು ಉತ್ತೇಜಕ ಸಹಕೃತವಾದ ಪ್ರತಿಬಂಧಕವು ಪ್ರತಿಯೋಗಿಯಲ್ಲ. ಏಕೆಂದರೆ ಅದು ಕೇವಲವಲ್ಲ. ಆದರೆ ಕೇವಲಪ್ರತಿಬಂಧಕವೇ ಪ್ರತಿಯೋಗಿ. ಆ ಕೇವಲಪ್ರತಿಬಂಧಕದ ಅಭಾವವಾದರೂ ಉತ್ತೇಜಕ ಸಹಿತ ಪ್ರತಿಬಂಧಕವಿರುವಾಗಲೂ, ಉತ್ತೇಜಕ

ಮಾತ್ರವೇ ಇರುವಾಗಲೂ, ಉತ್ತೇಜಕ ಮತ್ತು ಪ್ರತಿಬಂಧಕ ಎರಡೂ ಇಲ್ಲದಿರುವಾಗಲೂ ಅವಿಶಿಷ್ಟವಾಗಿರುವುದರಿಂದ ಅನನುಗಮವಿಲ್ಲ. ಉತ್ತೇಜಕವನ್ನು ತೆಗೆದಾಗ ಕೇವಲ ಪ್ರತಿಬಂಧಕವೇ ಇರುವುದರಿಂದ, ಕೇವಲ ಪ್ರತಿಬಂಧಕಾಭಾವ ಇಲ್ಲದಿರುವುದರಿಂದ ದಾಹವು ಉಂಟಾಗುವುದಿಲ್ಲ' – ಎಂದು.

## ಪ್ರತಿಬಂಧಕಾಭಾವವು ಕಾರಣವಲ್ಲ

**ननु न प्रतिबन्धकाभावः कारणम् एकदण्डान्वये घटोत्पत्तिवत् प्रतिबन्धकसत्त्वेऽपि तदन्यप्रतिबन्धकाभावेऽपि (प्रतिबन्धकान्तराभावेपि- इति पा.) कार्यानुदयात् । न हि यावत् कारणतावच्छेदकावच्छिन्नं तावदन्वयेऽपि कार्यम् – इति चेन्न ।**

ಇನ್ನು ಪ್ರತಿಬಂಧಕಾಭಾವವು ಕಾರಣವೇ ಆಗಲಾರದು. ಒಂದು ದಂಡವಿದ್ದರೂ ಘಟದ ಉತ್ಪತ್ತಿಯಾಗುವಂತೆ ಒಂದು ಪ್ರತಿಬಂಧಕವಿರುವಾಗ ಇನ್ನೊಂದು ಪ್ರತಿಬಂಧಕದ ಅಭಾವವಿದ್ದರೂ ಕಾರ್ಯವು ಉಂಟಾಗುವುದಿಲ್ಲ. ಕಾರಣತಾವಚ್ಛೇದಕದಿಂದ ಆಕ್ರಾಂತವಾದ ಎಷ್ಟು ವ್ಯಕ್ತಿಗಳಿವೆಯೋ ಅಷ್ಟು ವ್ಯಕ್ತಿಗಳು ಕಾರ್ಯೋತ್ಪತ್ತಿಯಾಗುವಾಗ ಇರಲೇಬೇಕೆಂಬುದಿಲ್ಲ ಎಂಬ ಈ ಶಂಕೆಯೂ ಸರಿಯಲ್ಲ.

## ಹಾಗೇ ಹೇಳಿದರೆ ಅನ್ಯೋನ್ಯಾಶ್ರಯದೋಷ

**प्रतिबन्धकाभावत्वेन न हेतुत्वमन्योन्याश्रयात् किन्तु मण्याद्यभावत्वेन इत्युक्तत्वात्, तत्त्वेऽपि वा घटे दण्डसलिलादिवत् प्रतिबन्धकाभावकूटस्य दाहहेतुत्वात् ।**

ಏಕೆಂದರೆ ನಾವು ಪ್ರತಿಬಂಧಕಾಭಾವಕ್ಕೆ ಪ್ರತಿಬಂಧಕಾಭಾವತ್ವೇನ ಕಾರಣತ್ವವನ್ನು ಹೇಳುವುದಿಲ್ಲ. ಹಾಗೆ ಹೇಳಿದರೆ ಅನ್ಯೋನ್ಯಾಶ್ರಯವು ಬರುತ್ತದೆ ಎಂದು ಮೊದಲೇ ಹೇಳಿದ್ದೇವೆ. ಆದ್ದರಿಂದ ಮಣ್ಯಾದ್ಯಭಾವತ್ವೇನ ಕಾರಣತ್ವವನ್ನು ಹೇಳುತ್ತೇವೆ.

ಪ್ರತಿಬಂಧಕತ್ವವನ್ನೇ ಕಾರಣತ್ವದಿಂದ ಅಘಟಿತವಾಗಿ ಕಾರ್ಯಾನುತ್ಪತ್ತಿ ಪ್ರಯೋಜಕತ್ವ ಎಂದು ಪರಿಷ್ಕಾರ ಮಾಡಿ ಅನ್ಯೋನ್ಯಾಶ್ರಯದೋಷವನ್ನು ಪರಿಹಾರ ಮಾಡಿ ಪ್ರತಿಬಂಧಕಾಭಾವತ್ವೇನ ಕಾರಣತ್ವವನ್ನು ಹೇಳಿದರೂ ಸಹ ಘಟವನ್ನು ಕುರಿತು ದಂಡಸಲಿಲಾದಿ ಕೂಟವು ಕಾರಣವಾದಂತೆ ದಾಹವನ್ನು ಕುರಿತು ಪ್ರತಿಬಂಧಕಾಭಾವಕೂಟವೇ ಕಾರಣವೆಂದು ಹೇಳುತ್ತೇವೆ.

## ಪ್ರತಿಬಂಧಕಾಭಾವ ಕಾರಣವೆಂದರೆ ಸಂಸರ್ಗಾಭಾವಕ್ಕೆ ಕಾರಣತ್ವವನ್ನು ಒಪ್ಪಬೇಕು

**यद्वा, प्रतिबन्धकत्वावच्छिन्नप्रतियोगिक एवाभावः कारणम्। स च यावद्विशेषाभावनियत इति न प्रतिबन्धकसत्त्वेऽपर-प्रतिबन्धकाभावेऽपि कार्योदयः। प्रतिबन्धकस्य च संसर्गाभावो हेतुः, तेन तत्सत्त्वे तदन्योन्याभावेऽपि न कार्यम् ।**

ಅಥವಾ ಪ್ರತಿಬಂಧಕತ್ವಾವಚ್ಛಿನ್ನ ಪ್ರತಿಯೋಗಿಕವಾದ ಒಂದೇ ಅಭಾವವು ಕಾರಣವೆಂದು ಹೇಳುತ್ತೇವೆ. ಈ ಸಾಮಾನ್ಯಾಭಾವವಿರಬೇಕಾದರೆ ಯಾವದ್ವಿಶೇಷಾ ಭಾವಗಳು ಇರಲೇಬೇಕಾದ್ದರಿಂದ ಒಂದು ಪ್ರತಿಬಂಧಕವಿದ್ದರೂ ಇನ್ನೊಂದು ಪ್ರತಿಬಂಧಕದ ಅಭಾವ ಇರುವುದರಿಂದ ಕಾರ್ಯೋತ್ಪತ್ತಿಯಾಗಲಿ ಎಂಬ ಆಪತ್ತಿಗೆ ಅವಕಾಶವಿಲ್ಲ. ಏಕೆಂದರೆ ಆ ಸ್ಥಳದಲ್ಲಿ ಪ್ರತಿಬಂಧಕಾಭಾವ ಕೂಟವಾಗಲೀ, ಯಾವದ್ವಿಶೇಷಾಭಾವ ಸಮನಿಯತವಾದ ಪ್ರತಿಬಂಧಕ ಸಾಮಾನ್ಯಾಭಾವವಾಗಲೀ ಇರುವುದಿಲ್ಲ.

ಪ್ರತಿಬಂಧಕಾಭಾವವು ಕಾರಣವೆಂದು ಹೇಳುವವರಿಗೆ ಪ್ರತಿಬಂಧಕದ ಸಂಸರ್ಗಾಭಾವವು ಕಾರಣವೆಂದು ಅಭಿಪ್ರಾಯ. ಇಲ್ಲದಿದ್ದರೆ ಪ್ರತಿಬಂಧಕವಿರುವಾಗ ಆ ಅಧಿಕರಣದಲ್ಲಿ ಪ್ರತಿಬಂಧಕ ಅನ್ಯೋನ್ಯಾಭಾವವು ಇರುವುದರಿಂದ ಮತ್ತು ಅದೂ ಪ್ರತಿಬಂಧಕಾಭಾವವಾಗುವುದರಿಂದ ದಾಹವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ.

## ಸಂಸರ್ಗಾಭಾವವು ಅನಿರ್ವಚನೀಯ

**अन्वयव्यतिरेकाभ्यां त्वयाऽपि हेतुत्वाङ्गीकारात् । अन्यथा सामग्रीव्यापकयोः सत्त्वे तदन्योन्याभावे कार्यव्याप्याभावापत्तौ कार्यकारणव्याप्यव्यापकभावे व्याघातात् ।**

ಅನ್ವಯವ್ಯತಿರೇಕಗಳ ಬಲದಿಂದ ನೀವು ಸಹ (ಮೀಮಾಂಸಕರು) ಪ್ರತಿಬಂಧಕ ಸಂಸರ್ಗಾಭಾವಕ್ಕೆ ಕಾರಣತ್ವವನ್ನು ಅಂಗೀಕರಿಸುತ್ತೀರಿ. ಇಲ್ಲದಿದ್ದರೆ ಕಾರ್ಯವನ್ನು ಕುರಿತು ಸಾಮಗ್ರಿಯೂ ಮತ್ತು ಅದಕ್ಕೆ ವ್ಯಾಪಕವೂ ಇರುವಾಗ ಆ ಅಧಿಕರಣದಲ್ಲಿ ಅವುಗಳ ಅನ್ಯೋನ್ಯಾಭಾವವು ನಿಯತವಾಗಿರುವುದರಿಂದ ಕಾರ್ಯವೂ ಉಂಟಾಗದಿರಲಿ ಮತ್ತು ವ್ಯಾಪ್ಯವೂ ಉಂಟಾಗದಿರಲಿ ಎಂಬ ಆಪತ್ತಿಯು ಉಂಟಾಗಿ ಕಾರ್ಯಕಾರಣಗಳಿರುವ ವ್ಯಾಪ್ಯ-ವ್ಯಾಪಕಭಾವವೇ ವಿರುದ್ಧವಾಗುತ್ತದೆ.

## ಅನ್ಯೋನ್ಯಾಭಾವವಿರುವಾಗ ಪ್ರತಿಬಂಧಕಾಭಾವವನ್ನು ಒಪ್ಪಬೇಕಾಗುತ್ತದೆ

**किञ्च तवापि प्रतिबन्धकाभावे शक्तिरस्तीति तत्सत्त्वे तदन्योन्याभावमादाय शक्तिसत्त्वप्रसङ्गः । न च स दुर्वचः, न वा प्रागभावादित्वेनाऽननुगमव्यभिचारौ । प्रतियोग्यधिकरणयोः संसर्गमारोप्य यो निषेधः स संसर्गाभावः । 'भूतलं घटसंसर्गो न' इत्यत्र भूतले घटसंसर्गस्य संसर्गो नारोप्यते किन्तु तादात्म्यम् ।**

ಮತ್ತು ನೀವು ಸಹ ಪ್ರತಿಬಂಧಕಾಭಾವದಲ್ಲಿ ಶಕ್ತಿಯನ್ನು ಒಪ್ಪುತ್ತೀರಿ. ಆದ್ದರಿಂದ ಪ್ರತಿಬಂಧಕವಿರುವುದರಿಂದ ಪ್ರತಿಬಂಧಕದ ಅನ್ಯೋನ್ಯಾಭಾವವಿರುವಾಗ ಪ್ರತಿಬಂಧಕಾಭಾವವನ್ನು ಒಪ್ಪಬೇಕಾಗುವುದರಿಂದ ಆಗಲೂ ಶಕ್ತಿಯನ್ನು ಅಂಗೀಕರಿಸಬೇಕಾದ ಪ್ರಸಂಗವು ಬರುತ್ತದೆ. ಅಂತಹ ಸಂಸರ್ಗಾಭಾವವನ್ನು ನಿರ್ವಚನ ಮಾಡಲು ಬರುವುದಿಲ್ಲ ಎಂದೇನೂ ಇಲ್ಲ.

ಅಥವಾ ಸಂಸರ್ಗಾಭಾವವು ಪ್ರಾಗಭಾವಾದಿ ರೂಪವಾಗಿರುವುದರಿಂದ ಅದಕ್ಕೆ ಅನನುಗಮವಾಗಲೀ ಅಥವಾ ಒಂದಿರುವಾಗ ಇನ್ನೊಂದು ಇಲ್ಲದಿರುವುದರಿಂದ ವ್ಯಭಿಚಾರವಾಗಲೀ ಬರುವುದೆಂದು ಹೇಳಬೇಕಾದ ಪ್ರಸಂಗವಿಲ್ಲ. ಏಕೆಂದರೆ ನಾವು ಪ್ರತಿಯೋಗಿ ಮತ್ತು ಅಧಿಕರಣಗಳಿಗೆ ಸಂಸರ್ಗವನ್ನು ಆರೋಪಿಸಿ ಯಾವ ನಿಷೇಧವನ್ನು ಮಾಡುತ್ತೇವೆಯೋ ಅದನ್ನು ಸಂಸರ್ಗಾಭಾವವೆಂದು ಕರೆಯುತ್ತೇವೆ. 'ಭೂತಲಂ ಘಟಸಂಸರ್ಗೋ ನ' ಎಂಬಲ್ಲಿ ಭೂತಲದಲ್ಲಿ ಘಟ ಸಂಸರ್ಗದ ಸಂಸರ್ಗವನ್ನು ಆರೋಪಿಸುವುದಿಲ್ಲ. ಆದರೆ ಘಟಸಂಸರ್ಗದ ತಾದಾತ್ಮ್ಯವನ್ನು ಆರೋಪಿಸಿ ನಿಷೇಧಮಾಡುತ್ತೇವೆ.

## ನಮ್ಮ ಸಿದ್ಧಾಂತದ ಉತ್ತರ

**वयं तु ब्रूमः । यत्र प्रतियोगिनमधिकरणे समारोप्य निषेधावगमः स संसर्गाभावः । यत्र चाधिकरणे प्रतियोगिताव च्छेदकमारोप्य निषेधावगमः सोऽन्योन्याभावः । 'भूतलं घटः' इत्यत्र भूतलस्य घटत्वावगमात् घटत्वमेव च घटतादात्म्यम्।**

ನಾವಾದರೂ ಹೀಗೆ ಹೇಳುತ್ತೇವೆ. ಎಲ್ಲಿ ಅಧಿಕರಣದಲ್ಲಿ ಪ್ರತಿಯೋಗಿಯನ್ನು ಆರೋಪಿಸಿ ನಿಷೇಧವು ಗೃಹೀತವಾಗುತ್ತದೆಯೋ ಅದು ಸಂಸರ್ಗಾಭಾವ. ಎಲ್ಲಿ ಅಧಿಕರಣದಲ್ಲಿ ಪ್ರತಿಯೋಗಿತಾವಚ್ಛೇದಕವನ್ನು ಆರೋಪಿಸಿ ನಿಷೇಧವು ತಿಳಿಯುವುದೋ ಅದು ಅನ್ಯೋನ್ಯಾಭಾವ. 'ಭೂತಲಂ ನ ಘಟಃ' ಎಂಬಲ್ಲಿ ಭೂತಲದಲ್ಲಿ ಘಟತ್ವವನ್ನು ಆರೋಪಿಸುವುದರಿಂದ ಘಟತ್ವವೇ ಘಟತಾದಾತ್ಮ್ಯರೂಪವಾದದು.

## ಅಬಾಧಿತ ವಿಲಕ್ಷಣವ್ಯವಹಾರವೇ ಪ್ರಮಾಣ

**आरोपस्य हेतुत्वे किं मानम् इति चेत् । मा भूत्तावदन्यत्। नेदमिह नेदमिदमित्यबाधितविलक्षणव्यवहारस्यैव तत्र मानत्वादिति ।**

ನಿಷೇಧ ಅವಗಮವನ್ನು ಕುರಿತು ಆರೋಪವು ಕಾರಣ ಎಂಬ ವಿಷಯದಲ್ಲಿ ಏನು ಪ್ರಮಾಣ ಎಂದು ಕೇಳಿದರೆ, ಬೇರೆ ಪ್ರಮಾಣಗಳು ಹಾಗಿರಲಿ 'ನೇದ ಮಿಹ' 'ಇದು ಇಲ್ಲಿ ಇಲ್ಲ'. 'ನೇದಮಿದಂ' 'ಇದು ಇದಲ್ಲ' ಎಂಬ ಅಬಾಧಿತವಾದ ವಿಲಕ್ಷಣವಾದ ವ್ಯವಹಾರವೇ ಈ ವಿಷಯದಲ್ಲಿ ಪ್ರಮಾಣವೆಂದು ಹೇಳುತ್ತೇವೆ.

## ಪ್ರತಿಬಂಧಕದ ಅತ್ಯಂತಾಭಾವವು ಕಾರಣವಲ್ಲ

**ननु प्रतिबन्धकस्यात्यन्ताभावो न हेतुः । तस्मिन् सत्यपि कार्याभावात् । न हि करादौ न मण्यत्यन्ताभावः तत्तसंयोगात्यन्ताभावो वा । मणेः स्वावयववृत्तित्वात् संयोगस्य चाव्याप्यवृत्तित्वात् ।**

ಇನ್ನು ಪ್ರತಿಬಂಧಕದ ಅತ್ಯಂತಾಭಾವವೂ ಕಾರಣವೆಂದು ಹೇಳಲು ಬರುವುದಿಲ್ಲ. ಏಕೆಂದರೆ ಪ್ರತಿಬಂಧಕಾತ್ಯಂತಾಭಾವವು ಇದ್ದಾಗಲೂ ಕಾರ್ಯವುಂಟಾಗುವುದಿಲ್ಲ. ಹೇಗೆಂದರೆ ಹಸ್ತಾದಿಗಳಲ್ಲಿ ಮಣಿಯ ಅತ್ಯಂತಾಭಾವವನ್ನಾಗಲೀ, ಮಣಿಯ ಸಂಯೋಗದ ಅತ್ಯಂತಾಭಾವವನ್ನಾಗಲೀ ಪ್ರತಿಬಂಧಕಾಭಾವವೆಂದು ಹೇಳಬೇಕು. ಮಣಿಯು ತನ್ನ ಅವಯವಗಳಲ್ಲಿಯೇ ಇರುವುದರಿಂದ ಮಣಿಯು ಇರುವಾಗಲೂ ಹಸ್ತದಲ್ಲಿ ಮಣಿಯ ಅತ್ಯಂತಾಭಾವವಿದೆ ಮತ್ತು ಸಂಯೋಗವು ಅವ್ಯಾಪ್ಯವೃತ್ತಿಯಾದುದರಿಂದ ಹಸ್ತದಲ್ಲಿ ಮಣಿ ಇರುವಾಗಲೂ ಮಣಿಸಂಯೋಗದ ಅತ್ಯಂತಾಭಾವವಿದೆ. ಆದ್ದರಿಂದ ದಾಹವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ.

## ಪ್ರತಿಬಂಧಕಾಭಾವಕ್ಕೆ ಕಾರಣತ್ವವೇ ಕೂಡುವುದಿಲ್ಲ

**अत एव न तत्प्रध्वंसप्रागभावौ हेतू । तयोः करादाववृत्तेः। गुणकर्मादिश्च प्रतिबध्यत्वानापत्तेश्च । तस्य जन्यधर्मानाश्रयत्वेन तत्र तयोरभावात् । न चान्यः संसर्गाभावोऽस्ति इति चेन्न ।**

ಆಕಾರಣದಿಂದಲೇ ಪ್ರತಿಬಂಧಕ ಧ್ವಂಸ ಅಥವಾ ಪ್ರತಿಬಂಧಕ ಪ್ರಾಗಭಾವಗಳೂ ದಾಹವನ್ನು ಕುರಿತು ಹೇತು ಅಲ್ಲ. ಏಕೆಂದರೆ ಪ್ರಾಗಭಾವ ಮತ್ತು ಪ್ರಧ್ವಂಸಗಳು ಮಣಿಯ ಅವಯವಗಳಲ್ಲಿ ಇರುತ್ತವೆಯೇ ಹೊರತು ಹಸ್ತದಲ್ಲಿ ಇರುವುದಿಲ್ಲ. ಮತ್ತು ಗುಣಕರ್ಮಾದಿಗಳಿಗೆ ಪ್ರತಿಬಧ್ಯತ್ವವು ಇರದೇ ಹೋಗಲಿ ಎಂಬ ಆಪತ್ತಿಯು ಬರುತ್ತದೆ. ಏಕೆಂದರೆ ಗುಣಕರ್ಮಾದಿಗಳು ಯಾವ ಜನ್ಯಧರ್ಮಕ್ಕೂ ಆಶ್ರಯವಲ್ಲವಾದ್ದರಿಂದ ಅಲ್ಲಿ ಪ್ರಾಗಭಾವವಾಗಲೀ, ಪ್ರಧ್ವಂಸವಾಗಲೀ ಬರಲು ಎಡೆಯಿಲ್ಲ. ಅತ್ಯಂತಾಭಾವ, ಪ್ರಾಗಭಾವ ಮತ್ತು ಧ್ವಂಸಗಳನ್ನು ಬಿಟ್ಟು ಬೇರೆ ಸಂಸರ್ಗಾಭಾವವಿಲ್ಲ. ಆದ್ದರಿಂದ ಪ್ರತಿಬಂಧಕಾಭಾವಕ್ಕೆ ಕಾರಣತ್ವವನ್ನು ಹೇಳಲು ಬರುವುದಿಲ್ಲ ಎಂಬ ಈ ಶಂಕೆಯೂ ಸರಿಯಲ್ಲ.

## ಅನ್ವಯವ್ಯತಿರೇಕಗಳಿಂದ ತಿಳಿದು ಬರುವ ಕಾರಣತ್ವ

**संसर्गावच्छिन्नप्रतियोगिकस्याभावविशेषस्य सति प्रतिबन्धकेऽ-भावात् । स च समयविशेषावच्छेदेन संसर्गितया अत्यन्ताभाव एव । तथैवान्वयव्यतिरेकावधारणात् ।**

ಏಕೆಂದರೆ ನಾವು ಸಂಸರ್ಗಾವಚ್ಛಿನ್ನ ಪ್ರತಿಯೋಗಿಕವಾದ ಅಭಾವವಿಶೇಷವು ದಾಹವನ್ನು ಕುರಿತು ಕಾರಣವೆಂದು ಹೇಳುತ್ತೇವೆ. ಪ್ರತಿಬಂಧಕವಿರುವಾಗ ಈ ಅಭಾವವಿಶೇಷವು ಇರುವುದಿಲ್ಲ. ಈ ಅಭಾವವಿಶೇಷವಾದರೂ ಸಮಯವಿಶೇಷಾವಚ್ಛಿನ್ನವಾದ ಅತ್ಯಂತಾಭಾವವೇ ಸರಿ. ಏಕೆಂದರೆ ಅನ್ವಯವ್ಯತಿರೇಕಗಳಿಂದ ಹಾಗೆಯೇ ತಿಳಿದು ಬರುತ್ತದೆ.

## ಕಾಲಿಕ ಅವ್ಯಾಪ್ಯವೃತ್ತಿಯನ್ನು ಹೇಳಬಹುದೇ ?

**अथैवं – प्रागभावप्रध्वंसस्थले समयविशेषावच्छिन्नात्यन्ता-भावेनैवोपपत्तौ न तयोः सिद्धिः, अत्यन्ताभावो ह्यव्याप्यवृत्तिः तस्य चैकत्र भावाभावे क्वचिद्देशोऽवच्छेदकः क्वचित् काल – इति चेन्न ।**

ಹಾಗಾದರೆ ಪ್ರಾಗಭಾವ ಮತ್ತು ಧ್ವಂಸ ಸ್ಥಳದಲ್ಲಿ ಈ ಸಮಯ ವಿಶೇಷಾವಚ್ಛಿನ್ನವಾದ ಅತ್ಯಂತಾಭಾವವನ್ನು ಅಂಗೀಕರಿಸುವುದರಿಂದಲೇ ಎಲ್ಲವನ್ನೂ ಉಪಪಾದನೆ ಮಾಡಲು ಬರುವುದರಿಂದ ಪ್ರಾಗಭಾವ ಮತ್ತು ಧ್ವಂಸಗಳನ್ನು ಅಂಗೀಕರಿಸುವುದೇ ಬೇಡ. ಅತ್ಯಂತಾಭಾವವನ್ನೇ ಅವ್ಯಾಪ್ಯವೃತ್ತಿ ಎಂದು ಅಂಗೀಕರಿಸಿ ಈ ಅತ್ಯಂತಾಭಾವವು ಕೆಲವು ಸ್ಥಳದಲ್ಲಿ ದೈಶಿಕವಾಗಿ ಅವ್ಯಾಪ್ಯವೃತ್ತಿ, ಕೆಲವು ಸ್ಥಳಗಳಲ್ಲಿ ಕಾಲಿಕವಾಗಿ ಅವ್ಯಾಪ್ಯವೃತ್ತಿ ಎಂದು ಹೇಳಬಹುದು ಎಂಬ ಈ ಶಂಕೆಯೂ ಸರಿಯಲ್ಲ.

## ಅತ್ಯಂತಾಭಾವಕ್ಕಿಂತ ಅತಿರಿಕ್ತವಾಗಿದೆ ಪ್ರಾಗಭಾವ ಹಾಗೂ ಧ್ವಂಸಗಳು

**तत्र विद्यमानताविरोधित्वेनैव कपाले न घट इति प्रतीतिवैलक्षण्यात्। नत्वेवं भूतले घटाभावप्रतीतिः ।**

ಏಕೆಂದರೆ 'ಕಪಾಲೇ ನ ಘಟಃ' ಎಂಬ ಪ್ರತೀತಿಯು ಪ್ರಾಗಭಾವ ಪ್ರಧ್ವಂಸಗಳ ಪ್ರತೀತಿ. 'ಭೂತಲೇ ಘಟೋ ನಾಸ್ತಿ' ಎಂಬುದು ಅತ್ಯಂತಾಭಾವದ ಪ್ರತೀತಿ. ಅತ್ಯಂತಾಭಾವದ ಪ್ರತೀತಿಯು ಬರುವಾಗ ಭೂತಲದಲ್ಲಿ ಅನ್ಯತ್ರ ಘಟದ ಜ್ಞಾನವಿದೆ. 'ಕಪಾಲೇ ನ ಘಟಃ' ಎಂದು ಜ್ಞಾನವು ಬರುವಾಗ ಇದು ಅನ್ಯತ್ರಘಟವನ್ನು ವಿಷಯೀಕರಿಸುವುದಿಲ್ಲ. ಹೀಗೆ ಪ್ರತೀತಿ ವೈಲಕ್ಷಣ್ಯವು ಇರುವುದರಿಂದ ಅತ್ಯಂತಾಭಾವ ವ್ಯತಿರಿಕ್ತವಾದ ಪ್ರಾಗಭಾವ ಮತ್ತು ಧ್ವಂಸಗಳನ್ನು ಅಂಗೀಕರಿಸಬೇಕು.

## ಕೆಲವರ ಉತ್ತರ

**अन्ये तु 'भविष्यति घटो घटो नष्ट इति विलक्षणप्रतीत्या अत्यन्ताभावेनैकेन समर्थयितुमशक्यत्वात् अन्य एवायं संसर्गाभावः' इत्यप्याहुः ।**

ಇನ್ನು ಕೆಲವರು 'ಘಟೋ ಭವಿಷ್ಯತಿ ಘಟೋ ನಷ್ಟಃ' ಎಂಬುದು ಪ್ರಾಗಭಾವ ಮತ್ತು ಧ್ವಂಸಗಳ ಪ್ರತೀತಿ. ಈ ಪ್ರತೀತಿಗಳು 'ಭೂತಲೇ ಘಟೋ ನಾಸ್ತಿ' ಎಂಬ ಪ್ರತೀತಿಗಿಂತ ವಿಲಕ್ಷಣವಾಗಿವೆ. ಅತ್ಯಂತಾಭಾವ ಒಂದನ್ನೇ ಒಪ್ಪಿ ಈ ಪ್ರತೀತಿಯ ವೈಲಕ್ಷಣ್ಯವನ್ನು ಕೂಡಿಸಲು ಬರುವುದಿಲ್ಲ.

ಆದ್ದರಿಂದ 'ಘಟೋ ಭವಿಷ್ಯತಿ ಘಟೋ ನಷ್ಟಃ' ಎಂಬ ಪ್ರತೀತಿಗೆ ವಿಷಯವಾದ ಅಭಾವಗಳು ಭಿನ್ನವಾದ ಸಂಸರ್ಗಾಭಾವಗಳು ಎಂದೂ ಹೇಳುತ್ತಾರೆ.

## ಮೂರು ಸಾಮಗ್ರಿಗಳು ದಾಹಕ್ಕೆ ಕಾರಣವಾಗಬಹುದೇ ?

**एतेन विशेषणाभावविशेष्याभावतदुभयभाव-घटितं सामग्रीत्रयमेवास्तु हेतुः, दाहे च जातित्रयकल्पनमिति प्रत्युक्तम्।**

ಪ್ರತಿಬಂಧಕ ಸಂಸರ್ಗಾಭಾವವೇ ದಾಹವನ್ನು ಕುರಿತು ಹೇತುವೆಂದು ಹೇಳುವುದರಿಂದ ವಿಶೇಷಣಾಭಾವ, ವಿಶೇಷ್ಯಾಭಾವ ಮತ್ತು ತದುಭಯಾಭಾವ ಘಟಿತವಾದ ಮೂರು ಸಾಮಗ್ರಿಗಳು ದಾಹವನ್ನು ಕುರಿತು ಕಾರಣವಾಗಲಿ, ಮೂರು ಸಾಮಗ್ರಿಗಳಿಂದ ಉಂಟಾದ ದಾಹರೂಪವಾದ ಕಾರ್ಯದಲ್ಲಿ ಮೂರು ಬೇರೆ ಬೇರೆ ಜಾತಿಗಳನ್ನು ಕಲ್ಪನೆ ಮಾಡುತ್ತೇವೆ ಎಂಬ ಶಂಕೆಗೆ ಅವಕಾಶವಿಲ್ಲ.

## ದಾಹಗತ ಜಾತಿಯು ಪ್ರತ್ಯಕ್ಷವಾಗಬೇಕಾದೀತು

**अनुगतहेतुसत्त्वात् । दाहवैजात्यस्य योग्यानुपलब्धि-बाधितत्वाच्च । व्यक्तियोग्यतयैव जातियोग्यत्वेन योग्येऽ-योग्यजात्यभावात् ।**

ಏಕೆಂದರೆ ನಾವು ಅನುಗತವಾದ ಹೇತುವನ್ನು ಹೇಳಿದ್ದೇವೆ. ದಾಹದಲ್ಲಿ ವೈಜಾತ್ಯವನ್ನು ಕಲ್ಪನೆ ಮಾಡಿದರೆ ಅದು ಯೋಗ್ಯಾನುಪಲಬ್ಧಿ ಬಾಧಿತವಾಗುತ್ತದೆ. ವ್ಯಕ್ತಿಯು ಯೋಗ್ಯವಾದಾಗ ಅದರಲ್ಲಿರುವ ಜಾತಿಯು ಯೋಗ್ಯವಾಗುತ್ತದೆ ಎಂಬ ನಿಯಮವಿರುವುದರಿಂದ ದಾಹವು ಪ್ರತ್ಯಕ್ಷಯೋಗ್ಯವಾದಾಗ ಅದರಲ್ಲಿರುವ ಜಾತಿಯು ಪ್ರತ್ಯಕ್ಷ ಯೋಗ್ಯವಾಗಬೇಕು. ಆದರೆ ಅಂತಹ ಜಾತಿಯ ಪ್ರತ್ಯಕ್ಷವು ಬರುವುದಿಲ್ಲವಾದ್ದರಿಂದ ಅಂತಹ ಜಾತಿಯು ಅನುಪಲಬ್ಧಿಬಾಧಿತವಾಗುತ್ತದೆ.

## ಮಂತ್ರನಾಶವಾದರೂ ಸಂಕಲ್ಪನಾಶವಾಗಿಲ್ಲ

**ननु 'प्रहरं मा दह' इत्यादौ सावधिमन्त्रपाठे मन्त्रविनाशे दाहः स्यात् । न च सङ्कल्पविषयकालविशेष एव तत्र प्रतिबन्धकः, सङ्कल्पनाशसमयस्य स्वतोऽविशेषात् ।**

ಹಾಗಾದರೆ, 'ಒಂದು ಮುಹೂರ್ತದಹಿಸಬೇಡ' ಮುಂತಾದ ಅವಧಿಯುಕ್ತವಾದ ಮಂತ್ರಪಾಠವಿರುವಲ್ಲಿ ಮಂತ್ರವು ನಾಶವಾದ ಮೇಲೆ ದಾಹವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಅಲ್ಲಿ ಸಂಕಲ್ಪ ವಿಷಯವಾದ ಕಾಲವಿಶೇಷವನ್ನೇ ಪ್ರತಿಬಂಧಕವೆಂದು ಹೇಳಲು ಬರುವುದಿಲ್ಲ. ಏಕೆಂದರೆ ಸಂಕಲ್ಪ ನಾಶವಾದಾಗ ಸಂಕಲ್ಪ ವಿಷಯ ಕಾಲವೂ ನಾಶವಾಗುತ್ತದೆ. ಹಾಗಾದರೆಸಂಕಲ್ಪದಿಂದ ಉದ್ದೇಶ್ಯವಾದ ಕಾಲವು ಪ್ರತಿಬಂಧಕವಾಗುತ್ತದೆ. ಉದ್ದೇಶ್ಯತ್ವವೇ ಆ ಕಾಲದಲ್ಲಿರುವ ವಿಶೇಷ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಸಂಕಲ್ಪನಾಶವಾದಾಗ ಉದ್ದೇಶ್ಯವೂ ನಾಶವನ್ನು ಹೊಂದುತ್ತದೆ.

## ಉದ್ದೇಶಧ್ವಂಸವು ಕಾರಣಕೋಟಿ ಪ್ರವಿಷ್ಟ

**न च उद्देश्यत्वमेव तत्र विशेषः । तस्य विनाशात् । न चोद्देशध्वंसोऽपि हेतुः । तस्य यामादूर्ध्वमपि सत्त्वात् ।**

ಉದ್ದೇಶಧ್ವಂಸವನ್ನು ಕಾರಣಕೋಟಿಯಲ್ಲಿ ಸೇರಿಸುತ್ತೇವೆ ಎಂದು ಹೇಳಲು ಬರುವುದಿಲ್ಲ. ಧ್ವಂಸವು ನಿತ್ಯವಾದುದರಿಂದ ಒಂದು ಯಾಮದ ಅನಂತರವೂ ಆ ಉದ್ದೇಶದ ಧ್ವಂಸವು ಇರುವುದರಿಂದ ಆಗಲೂ ದಾಹಾನುತ್ಪತ್ತಿ ಪ್ರಸಂಗವು ಉಂಟಾಗುತ್ತದೆ.

## ಸಂಸ್ಕಾರವೂ ಕೂಡ ಸವಿಷಯಕವಾದ್ದರಿಂದ ಅನುಪಪತ್ತಿಯು ಇಲ್ಲ

**न च मन्त्रपाठजनितमदृष्टमेव तत्र प्रतिबन्धकं तत्कालदाहाप्राप्तिफलनाश्यत्वेन नाग्रे दाहप्रतिबन्ध इति वाच्यम् । प्रतिबन्धकमन्त्रपाठस्यानिषिद्धत्वेना-विहितत्वेन चादृष्टाजनकत्वात् । तदाचारस्य विगीतत्वेन**

**श्रुत्याद्यननुमापकत्वादिति चेत् । मैवम् । उद्देश्यत्वज्ञानाहित संस्कारविषयकालस्य प्रतिबन्धकत्वात् ।**

ಮಂತ್ರಪಾಠ ಜನಿತವಾದ ಅದೃಷ್ಟವೇ ಪ್ರತಿಬಂಧಕವಾದುದು. ಅದೃಷ್ಟವು ಫಲನಾಶ್ಯವಾದುದರಿಂದ ಒಂದು ಯಾಮದವರೆಗೆ ದಾಹದ ಅಪ್ರಾಪ್ತಿ ರೂಪವಾದ ಫಲದಿಂದ ಅದು ನಾಶವನ್ನು ಹೊಂದುತ್ತದೆ. ಆದ್ದರಿಂದ ಒಂದು ಯಾಮ ಕಾಲದ ನಂತರ ದಾಹದ ಪ್ರತಿಬಂಧವು ಉಂಟಾಗುವುದಿಲ್ಲ ಎಂದೂ ಹೇಳಲು ಬರುವುದಿಲ್ಲ.

ಏಕೆಂದರೆ ಪ್ರತಿಬಂಧಕವಾದ ಮಂತ್ರದ ಪಾಠವು ವಿಹಿತವೂ ಅಲ್ಲ ನಿಷಿದ್ಧವೂ ಅಲ್ಲ. ಆದ್ದರಿಂದ ಅದು ಅದೃಷ್ಟಜನಕವೇ ಅಲ್ಲ. ವಿಹಿತವಲ್ಲದ ಅಥವಾ ನಿಷಿದ್ಧವಲ್ಲದ ಆಚಾರವು, ಅವಿಗೀತವಾದ ಆಚಾರವಾದ್ದರಿಂದ ಅದು ಶ್ರುತ್ಯಾದಿಗಳನ್ನು ಅನುಮಾನ ಮಾಡುವುದಿಲ್ಲ ಎಂಬ ಈ ಆಕ್ಷೇಪವೂ ಸರಿಯಲ್ಲ. ಮಂತ್ರಪಾಠದ ಸ್ಥಳದಲ್ಲಿ ನಾವು ಉದ್ದೇಶ್ಯತ್ವಜ್ಞಾನದಿಂದ ಆಹಿತವಾದ ಸಂಸ್ಕಾರಕ್ಕೆ ವಿಷಯವಾದ ಕಾಲವೇ ಪ್ರತಿಬಂಧಕವೆಂದು ಹೇಳುತ್ತೇವೆ. ಸಂಸ್ಕಾರವೂ ಜ್ಞಾನ ಇಚ್ಛೆಗಳಂತೆ ಸವಿಷಯಕವಾದುದರಿಂದ ಯಾವ ಅನುಪಪತ್ತಿಯೂ ಇಲ್ಲ.

## ಮಂತ್ರಾದಿಗಳು ಪ್ರತಿಬಂಧಕವೇ ಅಲ್ಲ

**ननु प्रतिबन्धमकुर्व्यतामप्रतिबन्धकत्वेन शक्तिमनपकुर्वतां मन्त्रादीनां न प्रतिबन्धकत्वमतः शक्तिसिद्धिः ।**

ಪ್ರತಿಬಂಧವನ್ನು ಮಾಡದಿರುವ ವಸ್ತುಗಳಿಗೆ ಪ್ರತಿಬಂಧಕತ್ವವಿಲ್ಲ. ಶಕ್ತಿಗೆ ಅಪಕಾರವನ್ನು ಮಾಡದಿರುವ ಮಂತ್ರಾದಿಗಳಿಗೆ ಪ್ರತಿಬಂಧಕತ್ವವು ಇಲ್ಲವಾದ್ದರಿಂದ ಶಕ್ತಿಯು ಸಿದ್ಧವಾಗುತ್ತದೆ ಎಂಬುದು ಸರಿಯಲ್ಲ. ಏಕೆಂದರೆ ಕಾರ್ಯದ ಅನುತ್ಪಾದವನ್ನು ಪ್ರತಿಬಂಧವೆಂದಾಗಲೀ, ಅದಕ್ಕೆ ಜನಕವಾದುದನ್ನು ಪ್ರತಿಬಂಧಕ ಎಂದಾಗಲೀ ಹೇಳಲು ಬರುವುದಿಲ್ಲ. ಏಕೆಂದರೆ ಕಾರ್ಯಾನುತ್ಪಾದವೆಂದರೆ ಕಾರ್ಯದ ಪ್ರಾಗಭಾವವೋ ಅಥವಾ ಕಾರ್ಯಕ್ಕೆ ಉತ್ತರಕಾಲಸಂಬಂಧವೋ ಆಗಬೇಕು. ಅವೆರಡೂ ಸಹ ಮಂತ್ರಜನ್ಯವಲ್ಲ ಎಂಬ ಈ ಶಂಕೆಯೂ ಸರಿಯಲ್ಲ. ಏಕೆಂದರೆ ಮಂತ್ರಾದಿಗಳು ಪ್ರತಿಬಂಧಕವೇ ಅಲ್ಲ.

## ಮಂತ್ರಾದಿಗಳು ಕೇವಲ ಪ್ರತಿಬಂಧ

**न च कार्यानुत्पाद एव प्रतिबन्धः तज्जनकत्वमेव प्रतिबन्धकत्वमिति वाच्यम् । कार्यानुत्पादो हि तत्र न तत्प्रागभावो न वा तदुत्तरकालसंसर्गः, तस्य मन्त्राद्यजन्यत्वात् इति चेन्न ।**

**मन्त्रादीनामप्रतिबन्धकत्वात् तत्प्रयोक्तारस्तु प्रतिबन्धकाः । ते च किञ्चित्करा एव । मन्त्रादौ च कार्ये कारणोपचारात् । स्वार्थिक कन्प्रत्ययाद्वा तथा व्यपदेशः ।**

ಮಂತ್ರವನ್ನು ಪ್ರಯೋಗಿಸುವ ಪುರುಷರು ಪ್ರತಿಬಂಧಕರು. ಅವರು ದಾಹಕ್ಕೆ ಪ್ರತಿಬಂಧವನ್ನು ಮಾಡುತ್ತಾರೆ. ಮಂತ್ರಾದಿಗಳು ಆ ಪುರುಷರಿಂದ ಉಂಟಾಗುವ ಕಾರ್ಯ. ಮಂತ್ರಗಳು ಪ್ರತಿಬಂಧಕವೆಂಬ ವ್ಯವಹಾರವು ಕಾರ್ಯದಲ್ಲಿ ಕಾರಣತ್ವವನ್ನು ಹೇಳುವ ಉಪಚರಿತವಾದ ವ್ಯವಹಾರ. ಅಥವಾ ಮಂತ್ರಗಳು ಪ್ರತಿಬಂಧಕ ಎಂಬಲ್ಲಿ ಪ್ರತಿಬಂಧಕ ಎಂಬಲ್ಲಿರುವ ಕನ್ ಪ್ರತ್ಯಯವು ಸ್ವಾರ್ಥದಲ್ಲಿಯೇ ಇದೆ. ಆದ್ದರಿಂದ ಮಂತ್ರಗಳು ಪ್ರತಿಬಂಧ ಎಂದೇ ಅರ್ಥ.

## ಮಂತ್ರವು ಮಂತ್ರಾಭಾವಾಭಾವ ರೂಪ

**प्रतिबन्धश्च सामग्रीविरहः । मन्त्राद्यभावघटितसामग्रीविरहश्च मन्त्रादिरेव । तदभावाभावस्य तत्त्वात् ।।**

ಪ್ರತಿಬಂಧ ಎಂದರೆ ಸಾಮಗ್ರೀವಿರಹ. ದಾಹಸಾಮಗ್ರಿಯಲ್ಲಿ ಮಂತ್ರಾಭಾವವೂ ಸೇರಿಕೊಂಡಿರುವುದರಿಂದ ಮಂತ್ರವಿರುವಾಗ ಮಂತ್ರಾಭಾವಘಟಿತವಾದ ಸಾಮಗ್ರಿಯು ಇಲ್ಲ. ಆದ್ದರಿಂದಲೇ ದಾಹವು ಉಂಟಾಗುವುದಿಲ್ಲ. ತದಭಾವಾಭಾವವು ತದ್ರೂಪವಾದುದೆಂದು ನಾವು ಮೊದಲೇ ಹೇಳಿದ್ದೇವೆ. ಆದ್ದರಿಂದ ಮಂತ್ರವು ಮಂತ್ರಾಭಾವಾಭಾವರೂಪವಾದುದು. ಅದೇ ಪ್ರತಿಬಂಧ.

## ಪ್ರತಿಬಂಧಕಾಭಾವವೂ ಕೇವಲ ಕಾರಣತಾವಚ್ಛೇದಕ

**नव्यास्तु प्रतिबन्धकाभावो न कारणं न वा शक्तिः । किन्तु तत्तत्कालीनदाहविशेषं प्रति तत्तत्कालप्रतिबन्धेतरवह्नेः कारणत्वमिति प्रतिबन्धकाभावः कारणतावच्छेदको न तु कारणं दण्डत्ववत् ।**

ನವ್ಯರು ಹೀಗೆ ಹೇಳುತ್ತಾರೆ. ಪ್ರತಿಬಂಧಕಾಭಾವವು ಕಾರಣವೂ ಅಲ್ಲ, ಶಕ್ತಿಯೂ ಅಲ್ಲ. ಮತ್ತೇನೆಂದರೆ ತತ್ತತ್ಕಾಲದ ದಾಹವಿಶೇಷವನ್ನು ಕುರಿತು ತತ್ತತ್ಕಾಲ ಪ್ರತಿಬಂಧಕಾಭಾವ ಉಳ್ಳ (ಪ್ರತಿಬದ್ಧೇತರ) ವಹ್ನಿಯು ಕಾರಣವಾಗುತ್ತದೆ. ಆದ್ದರಿಂದ ದಂಡತ್ವವು ಕಾರಣತಾವಚ್ಛೇದಕವಾದಂತೆ ಪ್ರತಿಬಂಧಕಾಭಾವವು ಕಾರಣತಾವಚ್ಛೇದಕವಾಗುತ್ತದೆಯೇ ಹೊರತು ಕಾರಣವಾಗುವುದಿಲ್ಲ.

## ಏಕವ್ಯಕ್ತಿ ಸ್ಥಳದಲ್ಲಿ ಹೇಗೆ ಕೂಡಿಸಬೇಕು ?

**आकाशादौ त्वेकव्यक्तिके न यथा कारणत्वं क्वचित् प्रतिबन्धेऽप्यन्यत्र शब्दोत्पत्तेः किन्तु भेर्य्यादिस्तथा कारणत्वमिति तत्प्रतिबन्धे शब्दोत्पत्तिर्न इत्याहुः । तन्न ।**

ಏಕವ್ಯಕ್ತಿಯಾದ ಆಕಾಶಸ್ಥಳದಲ್ಲಿ ಪ್ರತಿಬಂಧಕಾಭಾವವು ಕಾರಣವಲ್ಲವೆಂದು ನಿರ್ದಿಷ್ಟವಾಗಿದೆ. ಏಕೆಂದರೆ ಒಂದು ಕಡೆಯಲ್ಲಿ ಪ್ರತಿಬಂಧಕವಿದ್ದರೂ ಆಕಾಶದಲ್ಲಿ ಇನ್ನೊಂದು ಕಡೆಯಲ್ಲಿ ಶಬ್ದದ ಉತ್ಪತ್ತಿಯಾಗುತ್ತದೆ. ಆದ್ದರಿಂದ ಶಬ್ದವನ್ನು ಕುರಿತು ಭೇರ್ಯಾದಿಗಳೇ ಕಾರಣವೆಂದು ಹೇಳಬೇಕು. ಭೇರ್ಯಾದಿಗಳಿಗೆ ಪ್ರತಿಬಂಧವುಂಟಾದಾಗ ಶಬ್ದವು ಉತ್ಪತ್ತಿಯಾಗುವುದಿಲ್ಲ ಎಂದೂ ಹೇಳುತ್ತಾರೆ. ಆದರೆ ಇದೂ ಸರಿಯಲ್ಲ.

## ಒಂದು ಕಾರಣ ಮತ್ತೊಂದು ಕಾರಣತಾವಚ್ಛೇದಕವೆನ್ನಲು ನಿರ್ಣಾಯಕವೇನು?

**वह्निप्रतिबन्धकाभावयोरन्वयव्यतिरेकतौल्येनोभयस्यापि कारणत्वात् । न त्वेकमवच्छेदकं विनिगमकाभावात् ।**

ಕಾರಣತ್ವವು ಅನ್ವಯವ್ಯತಿರೇಕಗಳಿಂದ ತಿಳಿದುಬರುತ್ತದೆ. ದಾಹವನ್ನು ಕುರಿತು ವಹ್ನಿಗೆ ಹೇಗೆ ಅನ್ವಯ ವ್ಯತಿರೇಕಗಳು ದೃಷ್ಟವಾಗಿವೆಯೋ ಅದರಂತೆ ಪ್ರತಿಬಂಧಕಾಭಾವಕ್ಕೂ ಅನ್ವಯ ವ್ಯತಿರೇಕಗಳು ದೃಷ್ಟವಾಗಿವೆ. ಆದ್ದರಿಂದ ಎರಡಕ್ಕೂ ಕಾರಣತ್ವವನ್ನು ಒಪ್ಪಬೇಕು. ಒಂದು ಕಾರಣ, ಇನ್ನೊಂದು ಕಾರಣತಾವಚ್ಛೇದಕ ಎಂದು ನಿರ್ಣಯ ಮಾಡುವುದಕ್ಕೆ ಯಾವ ಆಧಾರವೂ ಇಲ್ಲ.

## ಪ್ರತಿಬಂಧಕಾಭಾವಕ್ಕೂ ಕಾರಣತ್ವ ಒಪ್ಪಬೇಕು

**किञ्च यस्मिन् सत्यपि यदभावात् कार्याभावस्तस्य कारणत्वमायाति न तु तदवच्छेदकत्वम् ।**

**न हि कार्यायोगव्यवच्छेदः कारणत्वं, किन्तु नियतपूर्वसत्त्वम्। तच्च सहकारिविरहप्रयुक्तकार्याभावेऽप्यक्षतम् ।**

ಯಾವುದು ಇರುವಾಗ ಯಾವುದು ಇಲ್ಲದಿದ್ದರೆ ಕಾರ್ಯವು ಉಂಟಾಗುವುದಿಲ್ಲವೋ ಅದು ಕಾರಣವೆಂದು ಸಿದ್ಧವಾಗಿದೆ. ವಹ್ನಿಯು ಇರುವಾಗ ಪ್ರತಿಬಂಧಕಾಭಾವವು ಇಲ್ಲದಿದ್ದರೆ ಎಂದರೆ ಪ್ರತಿಬಂಧಕವೇ ಇದ್ದರೆ, ದಾಹರೂಪವಾದ ಕಾರ್ಯವು ಉಂಟಾಗುವುದಿಲ್ಲ. ಆದ್ದರಿಂದ ಪ್ರತಿಬಂಧಕಾಭಾವವು ಅವಶ್ಯವಾಗಿ ಕಾರಣವಾಗುತ್ತದೆಯೇ ಹೊರತು ಕಾರಣತಾವಚ್ಛೇದಕವಾಗುವುದಿಲ್ಲ. ಕಾರಣತ್ವವೆಂದರೆ ಅದು ಕಾರ್ಯಾಯೋಗವ್ಯವಚ್ಛೇದರೂಪವಾದುದಲ್ಲ. ಆದರೆ ನಿಯತಪೂರ್ವ ವೃತ್ತಿತ್ವರೂಪವಾದುದು. ಸಹಕಾರಿ ವಿರಹ ಪ್ರಯುಕ್ತವಾಗಿ ಕಾರ್ಯವು ಉಂಟಾಗದಿದ್ದರೂ ನಿಯತಪೂರ್ವವೃತ್ತಿತ್ವಕ್ಕೆ ಯಾವ ಹಾನಿಯೂ ಇಲ್ಲ. ಆದ್ದರಿಂದ ಪ್ರತಿಬಂಧಕಾಭಾವಕ್ಕೂ ಕಾರಣತ್ವವನ್ನು ಒಪ್ಪಬೇಕು.

## ದಂಡತ್ವವು ಕಾರಣತಾವಚ್ಛೇದಕವಲ್ಲ

**अन्यथा चक्रसहितदण्डत्वेन कारणत्वे सहकार्युच्छेदः । यस्य यद्धर्ममवगम्यैव नियतपूर्ववर्तित्वमवगम्यते तस्य तदवच्छेदकं दण्डत्वमिव । सहकारी तु न तथा ।।**

ಸಹಕಾರಿಯನ್ನು ಹೊಂದಿದ ಕಾರಣಕ್ಕೇ ಕಾರಣತ್ವವನ್ನು ಹೇಳುವುದಾದರೆ ಚಕ್ರಸಹಿತವಾದ ದಂಡಕ್ಕೆ, ಚಕ್ರ ಸಹಿತ ದಂಡತ್ವೇನ ಘಟಕಾರಣತ್ವವು ಇರಬೇಕಾಗುವುದರಿಂದ ಎಲ್ಲಿಯೂ ಸಹಕಾರಿಯನ್ನು ಒಪ್ಪಲೇಬೇಕಾದ ಪ್ರಸಂಗವಿಲ್ಲ ಎಂಬ ಆಪತ್ತಿಯು ಬರುತ್ತದೆ. ಯಾವುದಕ್ಕೆ ಯಾವುದರ ಧರ್ಮವೆಂದು ತಿಳಿದೇ ನಿಯತಪೂರ್ವವೃತ್ತಿತ್ವವು ತಿಳಿಯಲ್ಪಡುತ್ತದೆಯೋ ಅದು ಅವಚ್ಛೇದಕ. ದಂಡತ್ವವು ದಂಡಧರ್ಮವೆಂದು ತಿಳಿದೇ ಘಟಪೂರ್ವವೃತ್ತಿ ಎಂದು ತಿಳಿಯುತ್ತದೆ. ಆದ್ದರಿಂದ ದಂಡತ್ವವು ಕಾರಣತಾವಚ್ಛೇದಕ. ಸಹಕಾರಿಯು ಆ ರೀತಿಯಾದುದಲ್ಲ. ಆದ್ದರಿಂದ ಅದು ಕಾರಣತಾವಚ್ಛೇದಕವಲ್ಲ. ಕಾರಣವೆಂದೇ ಹೇಳಬೇಕು.

## ಶಕ್ತಿವಿಷಯದಲ್ಲಿ ಅನುಮಾನವು ಪ್ರಮಾಣವಾಗಬಹುದೇ ?

**ननु माभूत् अर्थापत्तिः शक्तौ मानमनुमानं तु स्यात् । तथाहि (१) स्थिरोऽवयवी जनकदशाविशिष्टो वह्निरजनकदशा-व्यावृत्तभावभूतधर्मवान् जनकत्वात् कुण्ठकुठारात् तीक्ष्णकुठारवत् दाह्यासंयुक्तवह्नेर्दाह्यसंयुक्तवह्निवच्च प्रतिबन्धकसत्त्वे संयोगादेरजनकदशावर्तित्वेन तदतिरिक्तातीन्द्रियभावभूतधर्मसिद्धिः ।**

ಶಕ್ತಿ ವಿಷಯದಲ್ಲಿ ಅರ್ಥಾಪತ್ತಿಯು ಪ್ರಮಾಣವಾಗದಿದ್ದರೆ ಬೇಡ. ಅನುಮಾನವು ಪ್ರಮಾಣವಾಗುತ್ತದೆ. ಅದು ಹೇಗೆಂದರೆ (೧) ಸ್ಥಿರವಾದ ಅವಯವವುಳ್ಳ ಜನಕದಶಾವಿಶಿಷ್ಟವಾದ ವಹ್ನಿಯು ಅಜನಕದಶಾ ವ್ಯಾವೃತ್ತವಾದ ಭಾವರೂಪವಾದ ಧರ್ಮವನ್ನು ಉಳ್ಳದ್ದಾಗಿದೆ. ಜನಕವಾಗಿರುವುದರಿಂದ. ಮೊಂಡುಕೊಡಲಿಗಿಂತ ಹರಿತವಾದ ಕೊಡಲಿಯಂತೆ. ಅಥವಾ ದಾಹ್ಯವಸ್ತುವಿನ ಸಂಯೋಗವಿಲ್ಲದ ವಹ್ನಿಗಿಂತ ದಾಹ್ಯವಸ್ತುವಿನಿಂದ ಸಂಯುಕ್ತವಾದ ವಹ್ನಿಯಂತೆ ಎಂಬ ಅನುಮಾನದಿಂದ ಶಕ್ತಿಯು ಸಿದ್ಧವಾಗುತ್ತದೆ. ಪ್ರತಿಬಂಧಕವು ಇರುವಾಗ ವಹ್ನಿಸಂಯೋಗಾದಿಗಳು ಅಜನಕದಶಾವರ್ತಿಗಳಾದ್ದರಿಂದ ತದತಿರಿಕ್ತವಾದ ಅತೀಂದ್ರಿಯವಾದ ಭಾವರೂಪವಾದ ಶಕ್ತಿರೂಪವಾದಧರ್ಮವು ಸಿದ್ಧವಾಗುತ್ತದೆ.

## ಶಕ್ತಿಯು ಭಾವರೂಪವಾದ್ದರಿಂದ ಬರುವ ಸಮಸ್ಯೆ

**यद्यपि शक्तेर्भावहेतुजन्यत्वेन नाजनकदशाव्यावृत्तत्वं, तथाप्युक्तविशिष्टायास्तथात्वम् । यद्वा धर्मेऽतीन्द्रियत्वं विशेषणम् । न च दृष्टान्तासिद्धिः । तुल्यधारत्वेऽपि लोहविशेषघटितकुठारे विलक्षणच्छिदाक्रियारूपकार्यबलादतीन्द्रियतीक्ष्णत्वसिद्धेः ।**

ಯದ್ಯಪಿ ಶಕ್ತಿಯು ಭಾವರೂಪವಾದ ಹೇತುಗಳಿಂದ ಜನ್ಯವಾದುದರಿಂದ ಅಜನಕದಶೆಯಲ್ಲಿಯೂ ವ್ಯಾವೃತ್ತವಾಗುವುದಿಲ್ಲ. ಅಲ್ಲಿ ಇದ್ದೇ ಇದೆ. ಆದರೂ ನಾವು ಹೇಳಿದ ವಿಶಿಷ್ಟವಾದ ಶಕ್ತಿಗೆ ಅಜನಕದಶಾವ್ಯಾವೃತ್ತತ್ವವು ಕೂಡುತ್ತದೆ. ಅಥವಾ ಸಾಧ್ಯದಲ್ಲಿ ಪ್ರವಿಷ್ಟವಾದ ಭಾವರೂಪವಾದ ಧರ್ಮದಲ್ಲಿ ಅತೀಂದ್ರಿಯತ್ವವನ್ನು ವಿಶೇಷಣವಾಗಿ ಕೊಡುತ್ತೇವೆ. ದೃಷ್ಟಾಂತದಲ್ಲಿ ಸಾಧ್ಯಸಿದ್ಧಿಯು ಇಲ್ಲ ಎಂಬ ಶಂಕೆಗೆ ಅವಕಾಶವಿಲ್ಲ.

ಎರಡು ಕೊಡಲಿಗಳಿಗೂ ಅಲಗುಗಳು ಸಮವಾಗಿದ್ದರೂ, ಲೋಹವಿಶೇಷವುಳ್ಳ ಕೊಡಲಿಯಿಂದ ವಿಲಕ್ಷಣವಾದ ಛೇದರೂಪವಾದ ಕಾರ್ಯವು ಉಂಟಾಗುವುದರಿಂದ ಆ ಕೊಡಲಿಯಲ್ಲಿ ಅತೀಂದ್ರಿಯವಾದ ತೀಕ್ಷ್ಣತ್ವವು ಸಿದ್ಧವಾಗುತ್ತದೆ.

## ಅನುಮಾನದಿಂದ ಶಕ್ತಿಯ ಸಮರ್ಥನೆ

**अथवा तथाभूत एव वह्निः कार्यानुकूलातीन्द्रियाद्विष्ठ-धर्मसमवायी जनकत्वात् आत्मवत् । अतीन्द्रियत्वं च यद्यपि न साक्षात्काराविषयत्वम् अनित्यसाक्षात्काराविषयत्वं योगज-धर्माद्यजन्यसाक्षात्काराविषयत्वं वा । परं स्वं वा प्रत्यसिद्धेः, संयोगादिपञ्चकजन्यज्ञानाविषयत्वमैन्द्रिय-काणामपि ।**

ಅಥವಾ ಮೊದಲನೆಯ ಅನುಮಾನದಲ್ಲಿ ಪಕ್ಷಮಾಡಿದಂತಹ ವಹ್ನಿಯನ್ನೇ ಪಕ್ಷಮಾಡಿ ಅಂತಹ ವಹ್ನಿಯು ಕಾರ್ಯಾನುಕೂಲವಾದ ಅತೀಂದ್ರಿಯವಾದ ಅದ್ವಿಷ್ಟವಾದ ಧರ್ಮದ ಸಮವಾಯವನ್ನು ಹೊಂದಿದೆ. ಜನಕವಾಗಿರುವುದರಿಂದ. ಆತ್ಮನಂತೆ ಎಂಬ ಅನುಮಾನದಿಂದಲೂ ಶಕ್ತಿಯು ಸಿದ್ಧವಾಗುತ್ತದೆ. ಅತೀಂದ್ರಿಯತ್ವ ಎಂದರೆ ಯದ್ಯಪಿ ಸಾಕ್ಷಾತ್ಕಾರ ಅವಿಷಯತ್ವವೆಂದಾಗಲೀ, ಅನಿತ್ಯಸಾಕ್ಷಾತ್ಕಾರ ಅವಿಷಯತ್ವವೆಂದಾಗಲೀ ಯೋಗಜ ಧರ್ಮಾದಿಗಳಿಂದ ಅಜನ್ಯವಾದ ಸಾಕ್ಷಾತ್ಕಾರ ಅವಿಷಯತ್ವವೆಂದಾಗಲೀ ಹೇಳಲು ಬರುವುದಿಲ್ಲ. ಏಕೆಂದರೆ ಅಂತಹ ಅತೀಂದ್ರಿಯತ್ವವು ಪರನಿಗೆ ಅಥವಾ ತನಗೇ ಅಪ್ರಸಿದ್ಧವಾದುದು. ಅಲ್ಲದೇ ಐಂದ್ರಿಯಕವಾದ ಪದಾರ್ಥಗಳಿಗೂ ಸಂಯೋಗಾದಿ ಪಂಚಪ್ರತ್ಯಾಸತ್ತಿಜನ್ಯವಾದ ಜ್ಞಾನಾವಿಷಯತ್ವವು ಇದ್ದೇ ಇದೆ.

## ಉಪಾಧಿಗೆ ಸಾಧ್ಯವ್ಯಾಪಕತ್ವವು ಭಗ್ನವಾಗುತ್ತದೆ

**तथापि संयोगाद्यन्यतरप्रत्यासत्तिजन्यसाक्षात्काराविषयत्वमुभयवादिसिद्धम् । अन्यतरत्वं च तदन्यान्यत्वम् ।**

**न चाभावातीन्द्रियत्वम् । तस्यासिद्धेः । न च वह्नौ स्थितिस्थापकेनार्थान्तरम् । तत्र तदभावात् । क्रियाया वेगेनादृष्टवदात्मसंयोगेन वोत्पत्तेः । न चात्मत्वं नित्यत्वं वोपाधिः। स्पर्शैकत्वादिमति द्व्यणुके साध्याव्यापकत्वात् ।**

ಆದರೂ ಅತೀಂದ್ರಿಯತ್ವವೆಂದರೆ ಸಂಯೋಗಾದಿ ಅನ್ಯತರ ಪ್ರತ್ಯಾಸತ್ತಿಜನ್ಯವಾದ ಸಾಕ್ಷಾತ್ಕಾರ ಅವಿಷಯತ್ವವೆಂದು ಹೇಳುತ್ತೇವೆ. ಅದು ಉಭಯವಾದಿಗಳಿಗೂ ಸಿದ್ಧವಾಗಿದೆ. ಅನ್ಯತರತ್ವವೆಂದರೆ ತದ್ಭಿನ್ನಭಿನ್ನತ್ವ. ಪ್ರತಿಬಂಧಕಾಭಾವವನ್ನೇ ತೆಗೆದುಕೊಂಡು ಸಾಧ್ಯವು ಪರ್ಯವಸಾನವನ್ನು ಹೊಂದುತ್ತದೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಆ ಅಭಾವದಲ್ಲಿ ಅತೀಂದ್ರಿಯತ್ವವು ಇಲ್ಲ. ವಹ್ನಿಯಲ್ಲಿ ಸ್ಥಿತಿಸ್ಥಾಪಕ ಧರ್ಮವನ್ನು ತೆಗೆದುಕೊಂಡು ಅರ್ಥಾಂತರವನ್ನು ಹೇಳಲು ಬರುವುದಿಲ್ಲ. ಏಕೆಂದರೆ ವಹ್ನಿಯಲ್ಲಿ ಸ್ಥಿತಿಸ್ಥಾಪಕತ್ವವಿಲ್ಲ. ಅಗ್ನಿಯಲ್ಲಿ ಸ್ಥಿತಿಸ್ಥಾಪಕತ್ವವಿಲ್ಲದಿದ್ದರೂ ವೇಗದಿಂದಲಾಗಲೀ

ಅಥವಾ ಅದೃಷ್ಟವದಾತ್ಮಸಂಯೋಗದಿಂದಲಾಗಲೀ ಅಲ್ಲಿ ಕ್ರಿಯೆಯು ಉಂಟಾಗಲು ಸಾಧ್ಯವಿದೆ. ಈ ಅನುಮಾನಕ್ಕೆ ಆತ್ಮತ್ವವಾಗಲೀ ಅಥವಾ ನಿತ್ಯತ್ವವಾಗಲೀ ಉಪಾಧಿಯಲ್ಲ. ಏಕೆಂದರೆ ಅತೀಂದ್ರಿಯವಾದ ಸ್ಪರ್ಶ ಮತ್ತು ಏಕತ್ವವಿರುವ ದ್ವ್ಯಣುಕದಲ್ಲಿ ಆತ್ಮತ್ವ ಮತ್ತು ನಿತ್ಯತ್ವವಿಲ್ಲದಿರುವುದರಿಂದ ಉಪಾಧಿಗೆ ಸಾಧ್ಯವ್ಯಾಪಕತ್ವವು ಭಗ್ನವಾಗುತ್ತದೆ.

## ಸಾಧ್ಯವ್ಯಾಪಕತ್ವವು ಭಗ್ನವಾಗಲು ಎರಡನೆಯ ಕಾರಣ

**यद्वा पिण्डीभूतो वह्निः दाहानुकूलाद्विष्टातीन्द्रियभावभूत-धर्मवान् दाहजनकत्वात् आत्मवत् । न च आत्मत्वमुपाधिः। अदृष्टत्वस्य दाहानुकूलत्वेनादृष्टे साध्याव्यापकत्वात् ।**

ಅಥವಾ ಪಿಂಡೀಭೂತವಾದ ವಹ್ನಿಯು ದಾಹಾನುಕೂಲವಾದ ಅದ್ವಿಷ್ಟವಾದ, ಅತೀಂದ್ರಿಯವಾದ ಭಾವಭೂತವಾದ ಧರ್ಮವನ್ನು ಉಳ್ಳದ್ದು. ದಾಹಜನಕವಾದ್ದರಿಂದ, ಆತ್ಮನಂತೆ ಎಂಬ ಅನುಮಾನದಿಂದಲೂ ಶಕ್ತಿಯು ಸಿದ್ಧವಾಗುತ್ತದೆ. ಇಲ್ಲಿಯೂ ಆತ್ಮತ್ವವು ಉಪಾಧಿ ಆಗುವುದಿಲ್ಲ. ಏಕೆಂದರೆ ದಾಹಾನುಕೂಲವಾಗಿರುವ ಅದೃಷ್ಟದಲ್ಲಿ ಸಾಧ್ಯವು ಬರುತ್ತದೆ. ಆದರೆ ಆತ್ಮತ್ವರೂಪವಾದ ಉಪಾಧಿಯು ಬರುವುದಿಲ್ಲ. ಆದ್ದರಿಂದ ಉಪಾಧಿಗೆ ಸಾಧ್ಯವ್ಯಾಪಕತ್ವವು ಭಗ್ನವಾಗುತ್ತದೆ.

## ಸಾಧ್ಯವ್ಯಾಪಕತ್ವವು ಭಗ್ನವಾಗಲು ಮೂರನೆಯ ಕಾರಣ

**अथवा करवह्निसंयोगः कार्यानुकूलातीन्द्रियधर्म-समवायी जनकत्वात् आत्मवत् द्व्यणुकवच्च । 'न चात्मत्वं द्रव्यत्वं वोपाधिः, द्व्यणुकैकत्वस्पर्शादौ साध्याव्यापकत्वात् ।**

ಅಥವಾ ಹಸ್ತವಹ್ನಿಸಂಯೋಗವು ಕಾರ್ಯಾನುಕೂಲವಾದ ಅತೀಂದ್ರಿಯವಾದ ಧರ್ಮದ ಸಮವಾಯವುಳ್ಳದ್ದು. ಜನಕವಾದುದರಿಂದ. ಆತ್ಮನಂತೆ ಮತ್ತು ದ್ವ್ಯಣುಕದಂತೆ ಎಂಬ ಅನುಮಾನದಿಂದಲೂ ಶಕ್ತಿಯು ಸಿದ್ಧವಾಗುತ್ತದೆ. ಇಲ್ಲಿಯೂ ಆತ್ಮತ್ವವಾಗಲೀ, ದ್ರವ್ಯತ್ವವಾಗಲೀ ಉಪಾಧಿ ಆಗುವುದಿಲ್ಲ. ದ್ವ್ಯಣುಕದಲ್ಲಿರುವ ಏಕತ್ವ ಮತ್ತು ಸ್ಪರ್ಶಗಳಲ್ಲಿ ಕಾರ್ಯಾನುಕೂಲವಾದ

ಅತೀಂದ್ರಿಯ ಧರ್ಮಸಮವಾಯವಿದೆ. ಆದರೆ ಆತ್ಮತ್ವವಾಗಲೀ, ದ್ರವ್ಯತ್ವವಾಗಲೀ ಇಲ್ಲದಿರುವುದರಿಂದ ಉಪಾಧಿಗೆ ಸಾಧ್ಯವ್ಯಾಪಕತ್ವತ್ವವೇ ಬರುವುದಿಲ್ಲ.

## ಸಾಧ್ಯವ್ಯಾಪಕತ್ವವು ಭಗ್ನವಾಗಲು ನಾಲ್ಕನೆಯ ಕಾರಣ

**यद्वा, प्रतिबन्धकदशायां प्रत्यक्षसकलदाहहेतु-समवहिता दाहजनको वह्निर्जनकदशावृत्तिकार्यानुकूलभावभूत-धर्मशून्यः अजनकत्वात् कुण्ठकुठारवत्।**

ಅಥವಾ ಪ್ರತಿಬಂಧಕ ದೆಶೆಯಲ್ಲಿ ಪ್ರತ್ಯಕ್ಷವಾದ ಪ್ರಖರದಾಹಹೇತುಗಳಿಂದ ಕೂಡಿದ ದಾಹಜನಕವಾದ ವಹ್ನಿಯು ಜನಕದೆಶೆಯಲ್ಲಿರುವ ಕಾರ್ಯಾನುಕೂಲವಾದ ಭಾವಭೂತವಾದ ಧರ್ಮದಿಂದ ಶೂನ್ಯವಾಗಿದೆ. ಜನಕವಾಗದಿರುವುದರಿಂದ. ಒಂದು ಕೊಡಲಿಯಂತೆ.

## ಸಾಧ್ಯವ್ಯಾಪಕತ್ವವು ಭಗ್ನವಾಗಲು ಐದನೆಯ ಕಾರಣ

**यद्वा तथाभूतो वह्निः दाहजनकदशावृत्तिदाहानुकूल-भावभूतधर्मशून्यः दाहाजनकत्वात् दाह्यासंयुक्तवह्निवत्। अनुकूलत्वञ्च कार्याभावप्रयोजकाभावप्रतियोगित्वं कारण-तदवच्छेदकसाधारणम्। दृढदण्डत्वेन कारणत्वे दृढत्वाभावादपि कार्याभावदर्शनात्' इति ।।**

ಅಥವಾ ಅಂತಹದೇ ವಹ್ನಿಯು ದಾಹಜನಕದೆಶೆಯಲ್ಲಿರುವ ದಾಹಾನುಕೂಲವಾಗಿರುವ ಭಾವಭೂತವಾದ ಧರ್ಮದಿಂದ ಶೂನ್ಯವಾಗಿದೆ. ದಾಹಜನಕವಾಗದಿರುವುದರಿಂದ. ದಾಹ್ಯಸಂಯುಕ್ತವಲ್ಲದ ವಹ್ನಿಯಂತೆ ಎಂಬ ಅನುಮಾನಗಳಿಂದಲೂ ಶಕ್ತಿಯು ಸಿದ್ಧವಾಗುತ್ತದೆ. ಈ ಕೊನೆಯ ಎರಡು ಅನುಮಾನಗಳಲ್ಲಿ ಸಾಧ್ಯದಲ್ಲಿ ಸೇರಿರುವ ಅನುಕೂಲತ್ವವು ಕಾರ್ಯಾಭಾವ ಪ್ರಯೋಜಕ-ಅಭಾವಪ್ರತಿಯೋಗಿತ್ವ ರೂಪವಾದುದು. ಅಂತಹ ಅನುಕೂಲತ್ವವು ಕಾರಣ ಮತ್ತು ಕಾರಣತಾವಚ್ಛೇದಕಗಳಲ್ಲಿ ಸಮಾನವಾಗಿರುತ್ತದೆ. ದಂಡವು ದೃಢ ದಂಡತ್ವೇನ ಕಾರಣವಾದಾಗ

ದಂಡದಲ್ಲಿ ದೃಢತ್ವವಿಲ್ಲದಿದ್ದರೆ ಕಾರ್ಯವು ಉಂಟಾಗುವುದಿಲ್ಲವಾದ್ದರಿಂದ ದಾರ್ಢ್ಯರೂಪವಾದ ಕಾರಣತಾವಚ್ಛೇದಕಕ್ಕೂ ಅನುಕೂಲತ್ವವನ್ನು ಒಪ್ಪಬೇಕಾಗುತ್ತದೆ.

## ಶಕ್ತಿಸಾಧಕ ಅನುಮಾನಗಳಿಗೆ ನೈಯಾಯಿಕರ ಉತ್ತರ

**उच्यते – साध्यं विनाप्युभयसिद्धप्रतिबन्धका-भावादेव जनकत्वादिहेतुसम्भवात् विपक्षबाधकाभावेन अनुमानानाम-प्रयोजकत्वम्। यदि च सहचारदर्शनव्यभिचारादर्शनोपाध्यनुप-लम्भमात्रादेव व्याप्तिग्रहः, तदा शक्तिसिद्ध्यनन्तरं तेनैव हेतुना शक्त्यतिरिक्तत्वप्रक्षेपेण शक्त्यतिरिक्तदाहानुकूलातीन्द्रियधर्मसिद्धिः।**

ಈ ಅನುಮಾನಗಳಿಗೆ ನಾವು (ನೈಯಾಯಿಕರು) ಉತ್ತರವನ್ನು ಹೇಳುತ್ತೇವೆ. ನೀವು ಪ್ರಯೋಗಿಸಿರುವ ಜನಕತ್ವಾದಿ ಹೇತುಗಳು ನೀವು ನಿರ್ದೇಶಿಸಿರುವ ಸಾಧ್ಯವಿಲ್ಲದಿದ್ದರೂ ನಾವಿಬ್ಬರೂ ಒಪ್ಪಿರುವ ಪ್ರತಿಬಂಧಕಾಭಾವದಿಂದಲೇ ಉಪಪನ್ನವಾಗುವುದರಿಂದ ಮತ್ತು ಪಕ್ಷದಲ್ಲಿ ವಿಪಕ್ಷತ್ವಶಂಕೆಯನ್ನು ಮಾಡಿದರೆ ಯಾವ ಬಾಧಕಗಳೂ ಇಲ್ಲದಿರುವುದರಿಂದ ಎಲ್ಲ ಅನುಮಾನಗಳೂ ಅಪ್ರಯೋಜಕವಾಗುತ್ತವೆ. ಒಂದುಪಕ್ಷ ಸಹಚಾರದರ್ಶನ, ವ್ಯಭಿಚಾರದ ಅದರ್ಶನ ಮತ್ತು ಉಪಾಧಿಯ ಅಭಾವ ಇಷ್ಟರಿಂದಲೇ ವ್ಯಾಪ್ತಿಗ್ರಹವಾಗುವುದಾದರೆ ನಿಮ್ಮ ಅನುಮಾನಗಳಿಂದ ಶಕ್ತಿ ಸಿದ್ಧಿಯಾದ ನಂತರ ಸಾಧ್ಯದಲ್ಲಿ ಶಕ್ತಿಭಿನ್ನವಾದ ಭಾವರೂಪಧರ್ಮವುಳ್ಳದ್ದು ಎಂದು ಸೇರಿಸಿ ಶಕ್ತಿಗಿಂತ ಭಿನ್ನವಾದ ದಾಹಾನುಕೂಲವಾದ ಅತೀಂದ್ರಿಯವಾದ ಭಾವರೂಪವಾದ ಧರ್ಮದ (ಶಕ್ತ್ಯಂತರದ) ಸಿದ್ಧಿಯಾಗಲಿ ಎಂಬ ಆಪತ್ತಿಯು ಬರುತ್ತದೆ.

## ಉದ್ದೇಶಸಿದ್ಧಿಯಾಗದೇ ಸಾಧ್ಯವು ಪರ್ಯವಸಾನವಾಗುತ್ತದೆ

**एवं तत्तदतिरिक्तत्वस्य प्रक्षेपात् तेनैव हेतुनाऽनन्ततादृशधर्म-सिद्धिप्रसङ्गः। द्वितीयादितादृशधर्मं विनापि प्रथमानुमितशक्त्यैव**

**जनकत्वाद्युपपत्तेर्न तादृशानन्तधर्मसिद्धिरिति चेत् । हन्तैवं शक्तिं विनापि तदर्थसिद्धेः । किं शक्त्या ।**

ಹಾಗೆಯೇ ಆ ಎರಡನೆಯ ಧರ್ಮವು ಸಿದ್ಧವಾದ ಮೇಲೆ ಸಾಧ್ಯದಲ್ಲಿ ಶಕ್ತಿ ಮತ್ತು ಆ ಧರ್ಮಗಳಿಗಿಂತ ಭಿನ್ನವಾದ ಭಾವರೂಪವಾದ ಧರ್ಮವುಳ್ಳದ್ದು ಎಂದು ಸೇರಿಸಿ ಅದೇ ಹೇತುವಿನಿಂದಲೇ ಅನಂತವಾದ ಅಂತಹ ಧರ್ಮಗಳ ಸಿದ್ಧಿಯಾಗಬೇಕಾದ ಪ್ರಸಂಗವು ಬರುತ್ತದೆ. ಎರಡನೆಯ ಅಂತಹ ಧರ್ಮವನ್ನು ಒಪ್ಪದೇ ಅನುಮಾನದಿಂದ ಮೊದಲು ಸಿದ್ಧವಾದ ಶಕ್ತಿಯಿಂದಲೇ ಜನಕತ್ವಾದಿಗಳು ಉಪಪನ್ನವಾಗುತ್ತವೆ, ಆದ್ದರಿಂದ ಅಂತಹ ಅನಂತ ಧರ್ಮಗಳ ಸಿದ್ಧಿಯ ಪ್ರಸಂಗವಿಲ್ಲ ಎಂದು ಹೇಳುವುದಾದರೆ ಶಕ್ತಿಯನ್ನೂ ಒಪ್ಪದೇ ಅನುಮಾನವು ಪ್ರತಿಬಂಧಕಾಭಾವವನ್ನೇ ತೆಗೆದುಕೊಂಡು ಸಾಧ್ಯಪರ್ಯವಸಾನವನ್ನು ಹೊಂದುವುದರಿಂದ ಮತ್ತು ಅದರಿಂದಲೇ ಜನಕತ್ವಾದಿಗಳು ಉಪಪನ್ನವಾಗುವುದರಿಂದ ಮೊದಲನೆಯ ಶಕ್ತಿಯನ್ನಾದರೂ ಏಕೆ ಕಲ್ಪನೆ ಮಾಡಬೇಕು?

## ಕಲ್ಪನಾಗೌರವದೋಷ

**यत् 'ईश्वरानन्त्यवच्च शक्त्यानन्त्यम्' इत्युक्तम् । तदबोधात्। कार्यमात्रे हि कर्तृत्वेन कारणत्वं न त्वीश्वरत्वेन द्विकर्तृकत्वादिना वा । गौरवात् । घटे त्वार्थः समाजः । एवञ्च अजनकदशा-व्यावृत्तत्वेनैव प्रयोजकत्वं नतु भावभूतत्वेनेति। गौरवात् ।**

ಇನ್ನು ಈಶ್ವರಾನಂತ್ಯವು ಹೇಗಿಲ್ಲವೋ ಅದರಂತೆ ಶಕ್ತಿಯ ಆನಂತ್ಯವು ಇಲ್ಲವೆಂದು ನೀವು ಹೇಳಿದಿರಷ್ಟೆ. ಅದೂ ಸರಿಯಲ್ಲ. ಕಾರ್ಯಸಾಮಾನ್ಯವನ್ನು ಕುರಿತು ಕರ್ತೃತ್ವೇನ ಕಾರಣತ್ವವು ಇದೆಯೇ ಹೊರತು ಈಶ್ವರತ್ವೇನ ಅಥವಾ ದ್ವಿಕರ್ತೃತ್ವೇನ ಕಾರಣತ್ವವು ಇರುವುದಿಲ್ಲ. ಏಕೆಂದರೆ ಹಾಗೆ ಅಂಗೀಕರಿಸಿದರೆ ಗೌರವ ದೋಷವು ಉಂಟಾಗುತ್ತದೆ.

## ಶಕ್ತಿ ಒಪ್ಪಿದರೆ ಅನವಸ್ಥಾದೋಷ

**अपि च भावकार्यमात्रस्य समवायिकारणजन्यत्वेन शक्तेरपि तथात्वात् शक्त्यनुकूला शक्तिरपरा समवायिकारणे मन्तव्या एव । सापि समवायिकारणजन्येति तदनुकूलशक्तिस्वीकारे शक्त्यनवस्था ।**

ಘಟದಲ್ಲಿ ಯದ್ಯಪಿ ಈಶ್ವರ ಮತ್ತು ಕುಲಾಲ ಈ ಉಭಯಕರ್ತೃತ್ವವಿದೆ. ಆದರೂ ಅದು ಆರ್ಥಿಕವಾದುದು. ಅಲ್ಲಿಯೂ ಕಾರ್ಯತ್ವೇನ ಕರ್ತೃತ್ವೇನ ಮಾತ್ರ ಕಾರ್ಯಕಾರಣಭಾವವು ಇರುತ್ತದೆ. ಆದ್ದರಿಂದ ಅಜನಕದಶಾವ್ಯಾವೃತ್ತತ್ವದಿಂದಲೇ ಸಾಧ್ಯವು ಹೇತುವನ್ನು ಕುರಿತು ಪ್ರಯೋಜಕವೇ ಹೊರತು ಭಾವಭೂತತ್ವೇನ ಅಲ್ಲ. ಅಜನಕದಶಾವ್ಯಾವೃತ್ತವಾದ ಭಾವಭೂತವಾದ ಧರ್ಮವು ಜನಕತ್ವವನ್ನು ಕುರಿತು ಪ್ರಯೋಜಕ ಎಂದು ಹೇಳಿದರೆ ಗೌರವ ದೋಷವು ಬರುತ್ತದೆ. ಅದೂ ಅಲ್ಲದೇ, ಯಾವುದೇ ಭಾವಕಾರ್ಯವು ಸಮವಾಯಿಕಾರಣಜನ್ಯವಾಗಿದೆ. ಶಕ್ತಿಯು ಒಂದು ಭಾವಕಾರ್ಯ ಆಗಿರುವುದರಿಂದ ಅದಕ್ಕೂ ಒಂದು ಸಮವಾಯಿಕಾರಣವನ್ನು ಒಪ್ಪಿ ಅಲ್ಲಿ ಮೊದಲನೆಯ ಶಕ್ತಿಗೆ ಅನುಕೂಲವಾದ ಇನ್ನೊಂದು ಶಕ್ತಿಯನ್ನು ಒಪ್ಪಬೇಕಾಗುತ್ತದೆ. ಆ ಎರಡನೆಯ ಶಕ್ತಿಯೂ ಸಹ ಸಮವಾಯಿಕಾರಣ ಜನ್ಯವಾದುದರಿಂದ ಅದಕ್ಕೆ ಅನುಕೂಲವಾದ ಮೂರನೆಯ ಶಕ್ತಿಯನ್ನು ಅಂಗೀಕರಿಸಬೇಕಾಗುತ್ತದೆ. ಹೀಗೆ ಶಕ್ತಿಯ ಅನವಸ್ಥೆಯು ಉಂಟಾಗುತ್ತದೆ.

## ಶಕ್ತಿಸಾಧಕ ಎಲ್ಲಾ ಅನುಮಾನಗಳಿಗೆ ದೋಷಗಳು

**किञ्च प्रथमानुमाने अजनकत्वं न स्वरूपायोग्यत्वम्। वह्नौ कुठारे च तदभावात् । किन्तु कार्यानुपधानम्। तथा च तदुपधानदशायामपि वह्नौ शक्तिः, कुठारे तैक्ष्ण्यमिति बाधो दृष्टान्तासिद्धिश्च । लौहविशेषाणामेव सातिशयच्छिदाजनकत्वमतो नातीन्द्रियतैक्ष्ण्यप्रसिद्धिः।**

**अग्रिमचतुर्षु बहिरिन्द्रियाप्रत्यक्षत्वमुपाधिः तुल्ययोग-क्षेमत्वेऽपि सन्दिग्धोपाधित्वेन दूषकत्वात् ।**

ಮತ್ತು ಮೊದಲನೆಯ ಅನುಮಾನದಲ್ಲಿ ಅಜನಕತ್ವವೆಂದರೆ ಸ್ವರೂಪಯೋಗ್ಯತ್ವಾಭಾವವಲ್ಲ. ಏಕೆಂದರೆ ದೃಷ್ಟಾಂತವಾದ ವಹ್ನಿಯಲ್ಲಾಗಲೀ, ಕುಠಾರದಲ್ಲಾಗಲೀ ಅಂತಹ ಅಜನಕತ್ವವು ಇಲ್ಲ. ಆದ್ದರಿಂದ ಕಾರ್ಯ ಅನುಪಾಧಾನವನ್ನೇ ಅಜನಕತ್ವವೆಂದು ಹೇಳಬೇಕು. ಹಾಗೆ ಮಾಡಿದರೆ ಕಾರ್ಯೋಪಧಾನ ದೆಶೆಯಲ್ಲಿಯೂ ವಹ್ನಿಯಲ್ಲಿ ಶಕ್ತಿಯೂ ಕುಠಾರದಲ್ಲಿ ತೀಕ್ಷ್ಣತ್ವವೂ ಇರುವುದರಿಂದ ಬಾಧವು ಬರುತ್ತದೆ ಮತ್ತು ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವೂ ಬರುತ್ತದೆ.

ಇನ್ನು ಕುಠಾರದಲ್ಲಿ ಅತೀಂದ್ರಿಯವಾದ ತೈಕ್ಷ್ಣ್ಯವೂ ಇಲ್ಲ. ಲೋಹವಿಶೇಷವೇ ಅತಿಶಯಿತವಾದ ಭೇದನಕ್ರಿಯೆಯನ್ನು ಉಂಟುಮಾಡುತ್ತದೆ. ಇನ್ನು ಮುಂದಿನ ನಾಲ್ಕು ಅನುಮಾನಗಳಲ್ಲಿ ಬಹಿರಿಂದ್ರಿಯ ಅಪ್ರತ್ಯಕ್ಷತ್ವವು ಉಪಾಧಿ. ಅದು ಹೇತುವಿಗೆ ಸಮಾನವಾದ ಯೋಗಕ್ಷೇಮವುಳ್ಳದ್ದಾದರೂ ಸಂದಿಗ್ಧೋಪಾಧಿಯಾಗಿ ದೋಷವಾಗುತ್ತದೆ.

**अपि च जनकत्वस्य केवलान्वयित्वेन व्यतिरेकाप्रसिद्ध्या नान्वयव्यतिरेकी । न च जनकत्वाभावस्य शक्तावेव प्रसिद्धिः। अन्योन्याश्रयात् ।**

ಮತ್ತು ನೀವು ಹೇತುವನ್ನಾಗಿ ಮಾಡಿದ ಜನಕತ್ವವು ಕೇವಲಾನ್ವಯಿ ಆದುದರಿಂದ ಅದರ ವ್ಯತಿರೇಕದ ಪ್ರಸಿದ್ಧಿಯೇ ಇಲ್ಲ. ನಿಮ್ಮ ಮತದಲ್ಲಿ ಅನ್ವಯ ವ್ಯತಿರೇಕಿಯಾದ ಹೇತುವೇ ಗಮಕವಾದುದರಿಂದ ವ್ಯತಿರೇಕವಿಲ್ಲದಿರುವ ಹೇತುವು ಶಕ್ತಿರೂಪವಾದ ಸಾಧ್ಯವನ್ನು ಸಾಧಿಸಿಕೊಡುವುದಿಲ್ಲ. ಜನಕತ್ವಾಭಾವವು ಶಕ್ತಿಯಲ್ಲಿಯೇ ಪ್ರಸಿದ್ಧವಾಗಿರುತ್ತದೆ ಎಂದು ಹೇಳಲು ಬರುವುದಿಲ್ಲ. ಈ ಅನುಮಾನದಿಂದ ಶಕ್ತಿಯು ಸಿದ್ಧವಾದರೆ ಅಲ್ಲಿ ಜನಕತ್ವವ್ಯತಿರೇಕದ ಸಿದ್ಧಿಯಾಗುತ್ತದೆ. ಜನಕತ್ವವ್ಯತಿರೇಕದ ಸಿದ್ಧಿಯಾದರೆ ಜನಕತ್ವಹೇತುವು ಅನ್ವಯವ್ಯತಿರೇಕಿಯಾಗುವುದರಿಂದ ಶಕ್ತಿರೂಪವಾದ ಸಾಧ್ಯದ ಸಿದ್ಧಿಯಾಗುತ್ತದೆ ಎಂಬ ಕಾರಣದಿಂದ ಅನ್ಯೋನ್ಯಾಶ್ರಯ ದೋಷವು ಬರುತ್ತದೆ.

**न च गुरुवचनपरम्परा त एव वाक्यार्थतया तत्सिद्धिः । त्वन्नये सिद्धार्थस्याप्रमाणत्वात् ।**

**न च परार्द्धसङ्ख्यायां साध्यजनकत्वव्यतिरेकयोः प्रसिद्धिः। अप्रत्यक्षायाः शब्दैकवेद्यायास्तस्याः प्रत्यक्षेण साध्यहेतुव्यतिरेकयोर्ग्रहीतुमशक्यत्वात् । एतेन पण्डापूर्वेऽपि तत्प्रसिद्धिरपास्ता।।**

ಗುರುಗಳ ವಚನ ಪರಂಪರೆಯಿಂದ ವಾಕ್ಯಾರ್ಥರೂಪವಾಗಿ ಶಕ್ತಿಯು ಸಿದ್ಧವಾಗುತ್ತದೆ ಎಂದೂ ಹೇಳಲು ಬರುವುದಿಲ್ಲ. ಏಕೆಂದರೆ ನಿನ್ನ ಮತದಲ್ಲಿ ಸಿದ್ಧಾರ್ಥ ಬೋಧಕವಾದ ವಚನವು ಅಪ್ರಮಾಣವಾಗಿದೆ. ಪರಾರ್ಧ ಸಂಖ್ಯೆಯಲ್ಲಿ ಸಾಧ್ಯಾಭಾವವು ಮತ್ತು ಹೇತುವಾದ ಜನಕತ್ವದ ಅಭಾವವು ಪ್ರಸಿದ್ಧವಾಗಿದೆ ಎಂದು ಹೇಳಲು ಬರುವುದಿಲ್ಲ. ಪರಾರ್ಧಸಂಖ್ಯೆಯು ಶಬ್ದೈಕವೇದ್ಯವಾಗಿ ಅಪ್ರತ್ಯಕ್ಷವಾಗಿರುವುದರಿಂದ ಅದರಲ್ಲಿ ಸಾಧ್ಯಹೇತುಗಳ ವ್ಯತಿರೇಕವನ್ನು ಗ್ರಹಿಸಲು ಸಾಧ್ಯವಿಲ್ಲ. ಇದೇ ಕಾರಣದಿಂದ ಎಂದರೆ ಶಬ್ದೈಕವೇದ್ಯವಾಗಿ ಅಪ್ರತ್ಯಕ್ಷವಾಗಿರುವುದರಿಂದ ಪಂಡಾಪೂರ್ವದಲ್ಲಿ ಸಾಧ್ಯಹೇತುಗಳ ಪ್ರಸಿದ್ಧಿಯಾಗುತ್ತದೆ ಎಂಬುದೂ ನಿರಸ್ತವಾಗುತ್ತದೆ.

## ಮೀಮಾಂಸಕರ ವಾದ

**स्यादेतत् । तृणारणिमणीनां वह्नौ कारणत्वादेकशक्तिमत्त्वमुपेयम् । एकजातीयकार्ये एकजातीयकारणत्वनियमात् । वह्न्यवान्तरजातीये तेषां प्रत्येकं कारणत्वमिति चेन्न ।**

**वह्निजातीयत्वस्याकस्मिकतापत्तेः । कारणगतैकरूपमपहाय कार्यगतबहुतररूपकल्पने गौरवात् ।**

ಇಲ್ಲಿ ಮೀಮಾಂಸಕರು ಹೀಗೆ ತಮ್ಮ ವಾದವನ್ನು ಮಂಡಿಸುತ್ತಾರೆ. ತೃಣ, ಅರಣಿ ಮತ್ತು ಮಣಿಗಳು ವಹ್ನಿಯನ್ನು ಕುರಿತು ಕಾರಣವಾಗಿರುವುದರಿಂದ ಅವುಗಳಲ್ಲಿ ಒಂದೇ ಶಕ್ತಿಯಿದೆ ಎಂದು ಒಪ್ಪಬೇಕು. ಏಕೆಂದರೆ ಕಾರ್ಯವು ಏಕಜಾತೀಯವಾಗಿರುವಾಗ ಕಾರಣವು ಏಕಜಾತೀಯವಾಗಿರಬೇಕು. ತೃಣಾರಣಿ ಮಣಿಗಳು ಏಕಜಾತೀಯ ವಹ್ನಿಯನ್ನು ಕುರಿತು ಕಾರಣವಲ್ಲ. ಆ ಮೂರರಿಂದ ಉಂಟಾಗುವ ವಹ್ನಿಗಳಲ್ಲಿ ಬೇರೆ ಬೇರೆ ಜಾತಿಗಳಿರುವುದರಿಂದ ಆ ಮೂರೂ ಭಿನ್ನ ಭಿನ್ನ ಜಾತೀಯ ವಹ್ನಿಗಳಿಗೆ ಕಾರಣ ಎಂದು ಹೇಳಬಾರದು.

ಏಕೆಂದರೆ ಆಗ ವಹ್ನಿ ಜಾತೀಯವನ್ನು ಕುರಿತು ಏನು ಕಾರಣ ಎಂದು ಕೇಳಿದರೆ ಎಲ್ಲವೂ ವಿಶೇಷ ಜಾತೀಯ ವಹ್ನಿಯನ್ನು ಕುರಿತು ಕಾರಣವಾದ್ದರಿಂದ ವಹ್ನಿ ಸಾಮಾನ್ಯವು ಆಕಸ್ಮಿಕವಾಗಬೇಕಾಗುತ್ತದೆ. ಮೂರು ಕಾರಣಗಳಲ್ಲಿಯೂ ಏಕಶಕ್ತಿಮತ್ತ್ವರೂಪವಾದ ಒಂದು ಪ್ರಯೋಜಕವನ್ನು ಕಲ್ಪನೆ ಮಾಡುವುದನ್ನು ಬಿಟ್ಟು ಮೂರು ವಹ್ನಿಗಳಲ್ಲಿ ಮೂರು ಜಾತಿಗಳನ್ನು ಕಲ್ಪನೆ ಮಾಡುವುದಾದರೆ ಗೌರವ ದೋಷವು ಬರುತ್ತದೆ.

## ಮೂರು ಜಾತಿಗಳನ್ನು ಕಲ್ಪಿಸುವುದು ಬಾಧಿತ

**तृणारणिमणिप्रभववह्निष्ववान्तरजातेरनुपलब्धि-बाधितत्वाच्च । यत्र च तत्तदिन्धनप्रयोज्यं प्रदीपदारुदहनादौ वैजात्यमनुभूयते तत्र कारणेष्वेकशक्तिमत्त्वमपि नास्ति ।**

ಮತ್ತು ತೃಣ, ಅರಣಿ ಮತ್ತು ಮಣಿಗಳಿಂದ ಉಂಟಾದ ವಹ್ನಿಯಲ್ಲಿ ಅವಾಂತರ ಜಾತಿಯು ಪ್ರತ್ಯಕ್ಷದಿಂದ ಅನುಪಲಬ್ಧವಾದ್ದರಿಂದ ವಹ್ನಿಯಲ್ಲಿ ಮೂರು ಜಾತಿಗಳನ್ನು ಕಲ್ಪನೆ ಮಾಡುವುದು ಬಾಧಿತವೂ ಆಗುತ್ತದೆ. ಎಲ್ಲಿ ಬೇರೆ ಬೇರೆ ಇಂಧನದಿಂದ ಪ್ರಯೋಜ್ಯವಾದ ದೀಪಜ್ವಾಲೆ ಮತ್ತು ಕಟ್ಟಿಗೆಯಲ್ಲಿ ಉಂಟಾದ ವಹ್ನಿಗಳಲ್ಲಿ ವೈಜಾತ್ಯವು ಅನುಭವ ಸಿದ್ಧವಾಗಿದೆಯೋ ಆ ಸ್ಥಳಗಳಲ್ಲಿ ಕಾರಣಗಳಲ್ಲಿ ಏಕಶಕ್ತಿಮತ್ತ್ವವೂ ಇಲ್ಲ.

## ಗೋಮಯದಿಂದ ಜನ್ಯವಾದ ವೃಶ್ಚಿಕದಲ್ಲಿ ವೈಜಾತ್ಯವಿದೆಯೇ ?

**किञ्च गोमय-वृश्चिकप्रभववृश्चिकादिषु वैजात्यकल्पने तत्प्रभववृश्चिकेष्वपि वैजात्यं कल्प्यम्, एवं तत्प्रभवत्वं तत्प्रभवेष्वपीति वैजात्यानन्त्यम् । विजातीयकारणानां विजातीयकार्यजनकत्वनियमात् । न च तयोर्नैको वृश्चिकः। बुद्धिव्यपदेशयोरविशेषात् ।**

ಮತ್ತು ಗೋಮಯದಿಂದ ಉಂಟಾದ ಮತ್ತು ವೃಶ್ಚಿಕದಿಂದ ಉಂಟಾದ ವೃಶ್ಚಿಕದಲ್ಲಿ ವೈಜಾತ್ಯವನ್ನು ಕಲ್ಪನೆ ಮಾಡಿದರೆ ಅವುಗಳಿಂದ ಉಂಟಾದ ವೃಶ್ಚಿಕಗಳಲ್ಲಿಯೂ ವೈಜಾತ್ಯವನ್ನು ಕಲ್ಪನೆ ಮಾಡಬೇಕಾಗುತ್ತದೆ. ಅವುಗಳಿಂದ ಉಂಟಾದ ವೃಶ್ಚಿಕದಲ್ಲಿಯೂ ತಜ್ಜನ್ಯತ್ವವನ್ನು ಮತ್ತು ವೈಜಾತ್ಯವನ್ನು ಕಲ್ಪನೆ ಮಾಡಬೇಕಾಗುತ್ತದೆ. ಹೀಗೆ ಅನಂತ ವೈಜಾತ್ಯಗಳನ್ನು ಕಲ್ಪನೆ ಮಾಡಬೇಕಾಗುತ್ತದೆ. ಏಕೆಂದರೆ ವಿಜಾತೀಯವಾದ ಕಾರಣಗಳು ವಿಜಾತೀಯ ಕಾರ್ಯಗಳನ್ನು ಉಂಟುಮಾಡುತ್ತವೆ ಎಂಬ ನಿಯಮವು ಸಿದ್ಧವಾಗಿದೆ. ಆದ್ದರಿಂದ ಗೋಮಯಜನ್ಯ ಮತ್ತು ವೃಶ್ಚಿಕಜನ್ಯ ವೃಶ್ಚಿಕಗಳಲ್ಲಿ ಒಂದೇ ಜಾತಿ ಇದೆ. ಏಕೆಂದರೆ ಪ್ರತೀತಿ ಮತ್ತು ವ್ಯವಹಾರಗಳು ಒಂದೇ ರೀತಿಯಾಗಿವೆ.

## ಕಾರ್ಯವೈಜಾತ್ಯವನ್ನೇಕೆ ಅನುಮಾನ ಮಾಡಬಾರದು ?

**यदि विजातीयेष्वेककार्यशक्तिः समवेयात् न कार्यविशेषात् कारणविशेषः तदभावात् तदभावः क्वाप्यनुमीयेत । तदभावेऽपि तज्जातीयशक्तिमतोऽन्यस्मादपि तदुत्पत्तिसम्भवादिति चेत् । वह्निवृश्चिकादावेवमेतत् । निरूपितानियतवह्न्यादिकारणक-धूमादौ कुतो न तदनुमानम् ।**

ಒಂದುಪಕ್ಷ ವಿಜಾತೀಯವಾದ ಕಾರಣಗಳಲ್ಲಿಯೂ ಒಂದೇ ಜಾತಿಯ ಕಾರ್ಯವನ್ನು ಉಂಟುಮಾಡುವ ಶಕ್ತಿಯನ್ನು ಅಂಗೀಕರಿಸುವುದಾದರೆ ಕಾರ್ಯವಿಶೇಷದಿಂದ ಕಾರಣವಿಶೇಷವನ್ನು, ಕಾರ್ಯವಿಶೇಷಾಭಾವದಿಂದ ಕಾರಣವಿಶೇಷಾಭಾವವನ್ನು ಅನುಮಾನ ಮಾಡಲು ಸಾಧ್ಯವಿಲ್ಲ

ಎಂದಾಗುತ್ತದೆ. ಏಕೆಂದರೆ ಒಂದು ಕಾರಣವಿಲ್ಲದಿದ್ದರೂ ಅದೇ ಜಾತಿಯ ಶಕ್ತಿಯುಳ್ಳ ಇನ್ನೊಂದು ಕಾರಣದಿಂದ ಆ ಕಾರ್ಯವು ಉಂಟಾಗಬಹುದಾಗುತ್ತದೆ ಎಂದು ಶಂಕಿಸಿದರೆ ವಹ್ನಿ, ವೃಶ್ಚಿಕಾದಿಗಳಲ್ಲಿ ಇದೇ ರೀತಿಯೇ ಸರಿ. ಮೇಲೆ ಹೇಳಿದ ಅನಿಯತವಹ್ನ್ಯಾದಿಗಳಿಂದ ಉಂಟಾದ ಧೂಮದಲ್ಲಿ ಏಕೆ ಕಾರ್ಯವೈಜಾತ್ಯವನ್ನು ಅನುಮಾನ ಮಾಡಬಾರದು.

## ವಹ್ನಿಯು ಧೂಮವಿಶೇಷಕ್ಕೆ ಮಾತ್ರ ಕಾರಣವಾಗಲಿ

**अन्यथा कार्यवैजात्येऽपि तृणस्य वह्निविशेष इव वह्नित्वेन धूमविशेषएवकारणत्वंनतुधूममात्रे।तृणादिप्रभवत्वग्रहानन्तरं वह्न्यवान्तरजातिग्रहवत् वह्नितदन्यजन्यत्वज्ञानानन्तरं धूमावान्तरजातिग्रहो भविष्यतीत्यप्याशङ्क्येत । 'बाधकं विना धूमत्वेन वह्निकार्यता' इति चेत्, तर्हि 'बाधकं विना धूमं प्रति वह्नित्वेन कारणता' इत्यपि तुल्यम् ।**

ಇಲ್ಲದಿದ್ದರೆ ಕಾರ್ಯವೈಜಾತ್ಯವಿದ್ದರೂ ತೃಣವು ವಹ್ನಿವಿಶೇಷಕ್ಕೆ ಕಾರಣವಾದಂತೆ ವಹ್ನಿಯು ಧೂಮವಿಶೇಷಕ್ಕೆ ಕಾರಣವಾದೀತೇ ಹೊರತು ಧೂಮಸಾಮಾನ್ಯಕ್ಕೆ ಕಾರಣವಾಗಲಾರದು. ತೃಣಾದಿ ಜನ್ಯತ್ವದ ಜ್ಞಾನವು ಬಂದಮೇಲೆ ವಹ್ನಿಯ ಅವಾಂತರಜಾತಿಯು ತಿಳಿಯುವಂತೆ ವಹ್ನಿ ಮತ್ತು ತದನ್ಯಜನ್ಯತ್ವ ಜ್ಞಾನವು ಬಂದಮೇಲೆ ಧೂಮದ ಅವಾಂತರಜಾತಿಯ ಜ್ಞಾನವು ಬರುತ್ತದೆ ಎಂದೂ ಆಶಂಕಿಸಬಹುದು. ಬಾಧಕವಿಲ್ಲದಿರುವುದರಿಂದ ಧೂಮವು ಧೂಮತ್ವೇನ ವಹ್ನಿಕಾರ್ಯವಾಗುತ್ತದೆ ಎಂದು ಹೇಳುವುದಾದರೆ ಬಾಧಕವಿಲ್ಲದಿರುವುದರಿಂದ ಧೂಮವನ್ನು ಕುರಿತು ವಹ್ನಿಯು ವಹ್ನಿತ್ವೇನ ಕಾರಣವಾಗುತ್ತದೆ ಎಂದೂ ಸಮಾನವಾಗಿ ಹೇಳಬಹುದು (ಇಲ್ಲೆಲ್ಲಾ ವಹ್ನಿತ್ವೇನ ಕಾರಣ ಎಂದು ಹೇಳಿದರೆ ಏಕಶಕ್ತಿಮತ್ತ್ವೇನ ಕಾರಣ ಎಂದು ಅರ್ಥ ಎಂದು ಮೀಮಾಂಸಕರ ಅಭಿಪ್ರಾಯ).

## ಅನ್ವಯವ್ಯತಿರೇಕಗಳು ಎರಡೂ ಕಡೆ ಸಮಾನ

**यत्तु 'तृणत्वेन कारणत्वग्रहस्योपजीव्यत्वात् तद्रक्षार्थं वह्नौ जातिविशेष एव कल्प्यते' इति । तन्न । वह्नित्वेन**

**कार्यत्वग्रहात् तद्रक्षार्थं तृणादौ शक्तिकल्पनौचित्यात् । यथा चान्वयव्यतिरेकाभ्यां तृणफूत्कारयोः परस्परसहकारित्वं तथैव तच्छक्त्योरपि परस्परसहकारित्वेन वह्न्यनुकूलत्वम् । तथैव कार्यदर्शनात् ।**

ಇನ್ನು ವಹ್ನಿಯನ್ನು ಕುರಿತು ತೃಣತ್ವೇನ ಕಾರಣತ್ವ ಗ್ರಹವು ಉಪಜೀವ್ಯವಾದುದರಿಂದ ಅದನ್ನು ರಕ್ಷಣೆ ಮಾಡಲು ವಹ್ನಿಯಲ್ಲಿ ಜಾತಿಗಳನ್ನು ಕಲ್ಪನೆ ಮಾಡುತ್ತೇವೆ ಎಂಬುದೂ ಸರಿಯಲ್ಲ. ವಹ್ನಿತ್ವೇನ ವಹ್ನಿಯು ಕಾರ್ಯ ಎಂದು ತಿಳಿದಿರುವುದರಿಂದ ಅದನ್ನು ರಕ್ಷಿಸಲು ತೃಣಾದಿಗಳಲ್ಲಿ ಏಕಶಕ್ತಿಯನ್ನು ಕಲ್ಪನೆ ಮಾಡುವುದೇ ಉಚಿತವಾಗುತ್ತದೆ. ಹೇಗೆ ಅನ್ವಯವ್ಯತಿರೇಕಗಳಿಂದ ತೃಣಫೂತ್ಕಾರಗಳಿಗೆ ಪರಸ್ಪರ ಸಹಕಾರಿತ್ವವು ತಿಳಿದುಬರುತ್ತದೆಯೋ ಹಾಗೆಯೇ ತೃಣಫೂತ್ಕಾರಗಳಲ್ಲಿರುವ ಶಕ್ತಿಗಳಿಗೂ ಪರಸ್ಪರ ಸಹಕಾರಿತ್ವವು ಇರುವುದರಿಂದ ಅವೆರಡರಲ್ಲಿಯೂ ವಹ್ನಿ ಅನುಕೂಲತ್ವವು ಇದೆ. ಏಕೆಂದರೆ ಹಾಗೆಯೇ ಕಾರ್ಯವು ಕಂಡುಬರುತ್ತದೆ.

## ಪರಸ್ಪರ ಸಹಕಾರಿತ್ವವಿಲ್ಲ

**एवं तृणारणिमणिफूत्कारनिर्मन्थनतरणिकिरणानांवह्न्यनुकूल-शक्तिमत्त्वेनकारणत्वेऽपिफूत्कारेण तृणादेव निर्मन्थनेनारणेरेव प्रतिफलिततरणिकिरणैर्मणेरेव अग्न्युत्पत्तिः । न तु मणिफूत्कारादिभ्यो, मणिफूत्कारशक्त्योः परस्परसहकारित्व-विरहात् ।**

ಈ ರೀತಿಯಾಗಿ ತೃಣ, ಅರಣಿ, ಮಣಿ, ಫೂತ್ಕಾರ, ನಿರ್ಮಂಥನ, ತರಣಿಕಿರಣ ಇವುಗಳೆಲ್ಲವೂ ವಹ್ನ್ಯನುಕೂಲಶಕ್ತಿಮತ್ತ್ವೇನ ಕಾರಣವಾದರೂ ಫೂತ್ಕಾರದಿಂದ ತೃಣದಲ್ಲಿಯೇ ಅಗ್ನಿಯ ಉತ್ಪತ್ತಿಯಾಗುತ್ತದೆ. ನಿರ್ಮಂಥನದಿಂದ ಅರಣಿಯಲ್ಲೇ ಅಗ್ನಿ ಉತ್ಪತ್ತಿಯಾಗುತ್ತದೆ ಪ್ರತಿಫಲಿತಸೂರ್ಯಕಿರಣಗಳಿಂದ ಮಣಿಯಿಂದಲೇ ಅಗ್ನಿ ಉತ್ಪತ್ತಿಯಾಗುತ್ತದೆ ಹೊರತು ಮಣಿ ಮತ್ತು ಫೂತ್ಕಾರಗಳಿಂದಲಾಗಲೀ ಅಥವಾ ಮಣಿಶಕ್ತಿ ಮತ್ತು ಫೂತ್ಕಾರಶಕ್ತಿಗಳಿಂದಾಗಲೀ

ಅಗ್ನಿಯ ಉತ್ಪತ್ತಿಯಾಗುವುದಿಲ್ಲ. ಏಕೆಂದರೆ ಮಣಿ ಫೂತ್ಕಾರಗಳಿಗೆ ಮತ್ತು ಮಣಿಶಕ್ತಿ ಮತ್ತು ಪೂತ್ಕಾರಶಕ್ತಿಗಳಿಗೆ ಪರಸ್ಪರ ಸಹಕಾರಿತ್ವವಿಲ್ಲ.

## ಶಕ್ತಿಯನ್ನು ಒಪ್ಪಲೇಬೇಕೆಂಬ ಮೀಮಾಂಸಕರ ಸ್ಪಷ್ಟ ನಿಲವು

**यत्तु 'तृणफूत्कारादिस्तोमत्रये विशिष्टे शक्तिः' इति । तन्न । तृणत्वेन गृहीतकारणताभङ्गप्रसङ्गादिति ।।**

ಇನ್ನು ತೃಣಫೂತ್ಕಾರ, ಅರಣಿ ನಿರ್ಮಥನ, ಮಣಿಕಿರಣ ಸಂಯೋಗ ಈ ಮೂರು ವಿಶಿಷ್ಟವಾದ ಸಮುದಾಯಗಳಲ್ಲಿಯೇ ಶಕ್ತಿ ಎಂದು ಹೇಳುವುದು ಸರಿಯಲ್ಲ. ತೃಣತ್ವೇನ ಕಾರಣತ್ವವು ಮೊದಲೇ ಗೃಹೀತವಾಗಿರುವುದರಿಂದ ತೃಣ ಪೂತ್ಕಾರಗಳಿಗೆ ಕಾರಣತ್ವವನ್ನು ಒಪ್ಪುವುದು (ಏಕಶಕ್ತಿಯನ್ನು ಒಪ್ಪುವುದು) ತೃಣತ್ವೇನ ಕಾರಣತ್ವವನ್ನು ಭಂಗಗೊಳಿಸುತ್ತದೆ. ಇಷ್ಟು ಮೀಮಾಂಸಕರ ವಾದ.

## ತಾರ್ಕಿಕರು ಮಾಡುವ ಮೀಮಾಂಸಕರ ಮತ ನಿರಾಕರಣೆ

**उच्यते । तृणारणि-मणि-फूत्कारादिव्यक्तीनामानन्त्येन प्रतिव्यक्ति भावहेतुजनितानन्तशक्तिस्वीकारे गौरवं तावदनन्तव्यक्तिजन्यानन्तवह्निव्यक्तिषु जातित्रयकल्पने लाघवमिति तदेव कल्प्यते ।**

ನಾವು (ವೈಶೇಷಿಕರು) ಉತ್ತರವನ್ನು ಹೇಳುತ್ತೇವೆ. ತೃಣ, ಅರಣಿ, ಮಣಿ ಪೂತ್ಕಾರ ಮೊದಲಾದ ವ್ಯಕ್ತಿಗಳು ಅನಂತವಾಗಿರುವುದರಿಂದ ಪ್ರತಿವ್ಯಕ್ತಿಯಲ್ಲಿಯೂ ಭಾವಹೇತುಜನ್ಯವಾದ ಶಕ್ತಿಯನ್ನು ಸ್ವೀಕಾರಮಾಡಿದರೆ ಅನಂತ ಶಕ್ತಿಗಳನ್ನು ಸ್ವೀಕಾರ ಮಾಡಬೇಕಾಗುವುದರಿಂದ ಗೌರವವು ಬರುತ್ತದೆ. ಅಂತಹ ಅನಂತವ್ಯಕ್ತಿಗಳಿಂದ ಜನ್ಯವಾದ ಅನಂತವಹ್ನಿವ್ಯಕ್ತಿಗಳಲ್ಲಿ ಮೂರು ಜಾತಿಗಳನ್ನು ಕಲ್ಪನೆ ಮಾಡಿದರೆ ಲಾಘವವಿದೆ. ಆದ್ದರಿಂದ ಕಾರ್ಯದಲ್ಲಿಯೇ ವೈಜಾತ್ಯವನ್ನು ಕಲ್ಪನೆಮಾಡುತ್ತೇವೆ.

## ಜಾತಿಭೇದವು ಪ್ರತ್ಯಕ್ಷಸಿದ್ಧ

**न च जातौ योग्यानुपलब्धिबाधः । गोमयवृश्चिकप्रभव-वृश्चिकयोरीषन्नीलत्वकपिलत्वव्यङ्ग्यवौ जात्यस्य प्रत्यक्षसिद्धत्वात् । तृणजन्यनानावह्निव्यक्तिषु तृणजन्यत्वज्ञानानन्तरं मणिजन्यव्यावृत्ताऽनुगतबुद्धिरस्ति जातिविषया । तृणजन्यत्वेनोपाधिनाऽसाविति चेन्न ।**

ಜಾತಿಯನ್ನು ಕಲ್ಪನೆ ಮಾಡಿದರೆ ಹಿಂದೆ ಹೇಳಿದ ಯೋಗ್ಯಾನುಪಲಬ್ಧಿ ಬಾಧ ದೋಷವು ಬರುವುದಿಲ್ಲ. ಏಕೆಂದರೆ ಗೋಮಯಜನ್ಯ ವೃಶ್ಚಿಕದಲ್ಲಿ ಮತ್ತು ವೃಶ್ಚಿಕಜನ್ಯ ವೃಶ್ಚಿಕದಲ್ಲಿ ಸ್ವಲ್ಪ ಕಪ್ಪುಬಣ್ಣ ಮತ್ತು ಕೆಂಪುಬಣ್ಣ ಮೊದಲಾದ ವೈಧರ್ಮ್ಯದಿಂದ ವ್ಯಂಗ್ಯವಾದ ಜಾತಿಭೇದವು ಪ್ರತ್ಯಕ್ಷ ಸಿದ್ಧವಾಗಿದೆ. ತೃಣಜನ್ಯವಾದ ನಾನಾ ವಹ್ನಿ ವ್ಯಕ್ತಿಗಳಲ್ಲಿ ತೃಣಜನ್ಯತ್ವ ಜ್ಞಾನವು ಬಂದಮೇಲೆ ಮಣಿಜನ್ಯವಹ್ನಿಯಿಂದ ವ್ಯಾವೃತ್ತವಾದ ಜಾತಿವಿಷಯಕವಾದ ಅನುಗತವಾದ ಬುದ್ಧಿಯಿದೆ. ಈ ಅನುಗತವಾದ ಬುದ್ಧಿಯು ತೃಣಜನ್ಯತ್ವರೂಪವಾದ ಉಪಾಧಿಯಿಂದಲೇ ಉಪಪನ್ನವಾಗುತ್ತದೆ ಎಂದು ಶಂಕಿಸಬಾರದು.

## ಹಿಂದೆ ಹೇಳಿದ ದೋಷಗಳ ಪರಿಹಾರ

**बाधकं विनानुगतबुद्धेस्तद्व्यङ्ग्यजातिविषयत्वनियमात् । न च गोमयवृश्चिकप्रभववृश्चिकपरम्परायामननुगतजात्यापत्तिः । गोमयजन्यवृश्चिकप्रभववृश्चिकेषु वृश्चिकप्रभवत्वजातेः सत्त्वात् । वह्निमात्रे च दाहस्पर्शनावयवः तत्संयोगः पवनादिश्च कारणानि । न च तृणादिकं विनापि तदुत्पत्तिप्रसङ्गः । विशेषसामग्रीमादायैव सामान्यसामग्र्या जनकत्वात् ॥**

ಬಾಧಕವಿಲ್ಲದಿದ್ದರೆ ಅನುಗತಬುದ್ಧಿಯು ವ್ಯಂಗ್ಯವಾದ ಅನುಗತಜಾತಿಯ ವಿಷಯಕವಾದುದು ಎಂಬ ನಿಯಮವಿದೆ. ಇನ್ನು ಗೋಮಯಜನ್ಯ ವೃಶ್ಚಿಕ ಮತ್ತು ವೃಶ್ಚಿಕಜನ್ಯ ವೃಶ್ಚಿಕ ಇವುಗಳ ಪರಂಪರೆಯಲ್ಲಿ ಅನನುಗತವಾದ ಅನಂತಜಾತಿಗಳನ್ನು ಕಲ್ಪನೆ ಮಾಡಬೇಕಾಗುತ್ತದೆ ಎಂದು ಹಿಂದೆ ಹೇಳಿದ ದೋಷವೂ ಇಲ್ಲ. ಏಕೆಂದರೆ ಗೋಮಯಜನ್ಯ ವೃಶ್ಚಿಕದಿಂದ ಜನ್ಯವಾದ ಎಲ್ಲ ವೃಶ್ಚಿಕದಲ್ಲಿಯೂ ವೃಶ್ಚಿಕ ಪ್ರಭವತ್ವ ಜಾತಿಯು ಅನುಗತವಾಗಿದೆ. ವಹ್ನಿ ಸಾಮಾನ್ಯವನ್ನು ಕುರಿತು ಯಾವುದೂ ಕಾರಣವಿಲ್ಲವಾದ್ದರಿಂದ ಅದು ಆಕಸ್ಮಿಕವಾಗಬೇಕಾಗುತ್ತದೆ ಎಂದು ಹಿಂದೆ ಹೇಳಿದ ದೋಷವೂ ಇಲ್ಲ.

ವಹ್ನಿಸಾಮಾನ್ಯವನ್ನು ಕುರಿತು ದಾಹಸ್ಪರ್ಶನ ಅವಯವ, ಅದರ ಸಂಯೋಗ ಮತ್ತು ವಾಯ್ವಾದಿಗಳೇ ಕಾರಣವಾಗುತ್ತವೆ. ಹಾಗಾದರೆ ತೃಣಾದಿಗಳು ಇಲ್ಲದಿದ್ದರೂ ವಹ್ನಿಯ ಉತ್ಪತ್ತಿಯಾಗಲಿ ಎಂಬ ಪ್ರಸಂಗವಿಲ್ಲ. ಸಾಮಾನ್ಯ ಸಾಮಗ್ರಿಯು ವಿಶೇಷ ಸಾಮಗ್ರಿಯನ್ನು ತೆಗೆದುಕೊಂಡೇ ಜನಕವಾಗುತ್ತದೆ ಹೊರತಾಗಿ ಸಾಮಾನ್ಯಸಾಮಗ್ರಿಯಿಂದಲೇ ಜನ್ಯವಾದುದು ಎಂಬುದಿಲ್ಲ.

## ಮೀಮಾಂಸಕರ ಅಧಿಕಾಶಂಕೆ

**ननु तृणारणिमणीनां वह्नौ कारणत्वग्रहे शक्तिवैजात्ययोरन्यतरकल्पनम् । तद्ग्रहश्च नान्वयव्यतिरेकाभ्यां, व्यभिचारात् ।**

ಮೀಮಾಂಸಕರು ಹೀಗೆ ಶಂಕೆಮಾಡುತ್ತಾರೆ. ತೃಣಾರಣಿಮಣಿಗಳಿಗೂ ಮತ್ತು ವಹ್ನಿಗೂ ಕಾರಣತ್ವವು ಗೃಹೀತವಾದರೆ ಇಲ್ಲವೇ ಕಾರಣಗಳಲ್ಲಿ ಶಕ್ತಿಯನ್ನು ಕಲ್ಪನೆಮಾಡಬೇಕು ಅಥವಾ ಕಾರ್ಯದಲ್ಲಿ ವೈಜಾತ್ಯವನ್ನು ಕಲ್ಪನೆ ಮಾಡಬೇಕು. ಆದರೆ ವ್ಯಭಿಚಾರವಿರುವುದರಿಂದ ಅನ್ವಯವ್ಯತಿರೇಕಗಳಿಂದ ಕಾರಣತ್ವವೇ ಗೃಹೀತವಾಗುವುದಿಲ್ಲ.

## ತೃಣದಲ್ಲಿ ವಹ್ನಿಯು ಕಾರಣವಾಗಬಹುದೇ ?

**अथारणिमण्यभाववति स्तोमविशेषे तृणं विना वह्निव्यतिरेकः**

**तृणान्वये वह्निरित्यन्वयव्यतिरेकाभ्यां तत्रैव स्तोमे तदितरहेतुसकलसमवधाने तृणान्वयेऽवश्यं वह्निरिति नियतान्वयेन रासभादिव्यावृत्तेन तृणादिकारणत्वग्रह इति चेन्न ।**

ಇನ್ನು ಅರಣಿ ಮತ್ತು ಮಣಿಗಳ ಅಭಾವಘಟಿತವಾದ ಸಮುದಾಯ ವಿಶೇಷವು ಇರುತ್ತಿರುವಾಗ ತೃಣವಿಲ್ಲದಿದ್ದರೆ ವಹ್ನಿಯ ಅಭಾವ, ತೃಣವು ಇದ್ದರೆ ವಹ್ನಿ, ಈ ಅನ್ವಯವ್ಯತಿರೇಕಗಳಿಂದ ಅದೇ ಸಮುದಾಯದಲ್ಲಿ ತೃಣೇತರ ಸಕಲ ಹೇತು ಸಮಾಗಮವಿರುವಾಗ ತೃಣವು ಇದ್ದರೆ ಅವಶ್ಯವಾಗಿ ವಹ್ನಿಯು ಉಂಟಾಗುತ್ತದೆ ಎಂಬ ನಿಯತವಾದ ಅನ್ವಯದಿಂದ ತೃಣಾದಿಗಳಿಗೆ ರಾಸಭಾದಿ ವ್ಯಾವೃತ್ತವಾದ ಕಾರಣತ್ವವು ಗೃಹೀತವಾಗುತ್ತದೆ ಎಂದು ಶಂಕಿಸುವಂತಿಲ್ಲ. ತೃಣವಿಲ್ಲದೆಯೂ ವಹ್ನಿಯು ಉಂಟಾಗುತ್ತದೆ ಎಂಬ ಜ್ಞಾನವಿರುವಾಗ ತೃಣದಲ್ಲಿ ವಹ್ನಿನಿಯತ ಪೂರ್ವವೃತ್ತಿತ್ವ ರೂಪವಾದ ಕಾರಣತ್ವದ ಗ್ರಹವೇ ಉಂಟಾಗಲು ಸಾಧ್ಯವಿಲ್ಲ. ತೃಣಜನ್ಯವಲ್ಲದ ವಹ್ನಿಯನ್ನು ಕುರಿತು ಮಣಿಗೆ ಕಾರಣತ್ವಗ್ರಹವು ಉಂಟಾಗುತ್ತದೆ ಎಂಬುದು ಸರಿಯಲ್ಲ.

## ಅನ್ಯೋನ್ಯಾಶ್ರಯದೋಷ

**तृणं विनापि वह्निरिति ज्ञाने सति वह्निनियतपूर्ववृत्तित्वस्य कारणत्वस्य ग्रहीतुमशक्यत्वात् । तृणाजन्ये वह्नौ मणेः कारणत्वग्रह इति चेत् । न ।**

**व्यभिचारेण वह्नौ तृणजन्यत्वाग्रहे तदजन्यत्वस्याप्यग्रहात्। वह्निमात्रस्यैव तदजन्यत्वाच्च । न च मण्यजन्यत्वेन तृणजन्यत्वग्रहः । अन्योन्याश्रयात् ।**

ತೃಣಕ್ಕೆ ವ್ಯಭಿಚಾರವಿರುವುದರಿಂದ ಕಾರಣತ್ವವು ಇಲ್ಲದಿರುವುದರಿಂದ ವಹ್ನಿಸಾಮಾನ್ಯವು ತೃಣಾಜನ್ಯವಾಗಿದೆ. ಆದ್ದರಿಂದ ಮೊದಲು ಹೇಳಿದ ವ್ಯಭಿಚಾರವು ಬಂದೇ ಬರುತ್ತದೆ. ತೃಣಜನ್ಯತ್ವ ಗ್ರಹವಿಲ್ಲದಿದ್ದರೆ ತೃಣ ಅಜನ್ಯತ್ವ ಗ್ರಹವೂ ಉಂಟಾಗುವುದಿಲ್ಲ. ಮಣಿಜನ್ಯವಲ್ಲವಾದುದರಿಂದ

ತೃಣಜನ್ಯತ್ವ ಗ್ರಹವುಂಟಾಗುತ್ತದೆ ಎಂದು ಹೇಳಬಾರದು. ತೃಣಜನ್ಯತ್ವಗ್ರಹ ಉಂಟಾದರೆ ಮಣ್ಯಜನ್ಯತ್ವಗ್ರಹ ಉಂಟಾಗುತ್ತದೆ. ಮಣ್ಯಜನ್ಯತ್ವಗ್ರಹ ಉಂಟಾದರೆ ತೃಣಜನ್ಯತ್ವಗ್ರಹ ಉಂಟಾಗುತ್ತದೆ ಎಂದು ಅನ್ಯೋನ್ಯಾಶ್ರಯವು ಬರುತ್ತದೆ.

## ಅಭಾವಪ್ರಮಾ ಇರುವಾಗ ಭಾವದ ಪ್ರಮೆಯು ಹುಟ್ಟುವುದಿಲ್ಲ

**यत्तु 'यत्र कारणताग्राहकं नास्ति तत्र व्यभिचारः तद्ग्रहपरिपन्थी'ति। तन्न । 'अबाधितनियपूर्ववर्त्तित्वाभावग्रहे तद्ग्रहस्यासम्भवात् अभावप्रमायां भावज्ञानानुदयादि'ति ।**

ಇನ್ನು ಎಲ್ಲಿ ವ್ಯಭಿಚಾರವಿದೆಯೋ ಅಲ್ಲಿ ಮಾತ್ರ ವ್ಯಭಿಚಾರ ಜ್ಞಾನವು ಕಾರಣತ್ವ ಜ್ಞಾನವನ್ನು ಕುರಿತು ಪ್ರತಿಬಂಧಕ ಎಂಬುದೂ ಸರಿಯಲ್ಲ. ಅಬಾಧಿತವಾದ ನಿಯತಪೂರ್ವವೃತಿತ್ವಾಭಾವ ಗ್ರಹವು ಇರುವಾಗ ನಿಯತಪೂರ್ವ ವೃತ್ತಿತ್ವರೂಪವಾದ ಕಾರಣತ್ವದ ಗ್ರಹವೇ ಉಂಟಾಗುವುದಿಲ್ಲ. ಅಭಾವಪ್ರಮೆ ಇರುವಾಗ ಅಭಾವದ ಪ್ರತಿಯೋಗಿಯ ಜ್ಞಾನವು ಉಂಟಾಗುವುದಿಲ್ಲವಷ್ಟೇ.

## ಅಕಾರ್ಯಕಾರಣವ್ಯಾವೃತ್ತವು ಎರಡು ರೀತಿಯಲ್ಲಿ ಉಪಪನ್ನವಾಗುತ್ತದೆ

**उच्यते – उक्तग्राहकैर्वह्निनिष्ठकार्यतानिरूपितकारणतावच्छेदकरूपवत्त्वं तृणस्य तृणनिष्ठकारणतानिरूपितकार्यतावच्छेदकरूपवत्त्वं वह्नेर्वाऽकार्याकारणव्यावृत्तं रूपं परिच्छिद्यते । न तु तृणत्वेन कारणत्वं वह्नित्वेन कार्यत्वं वा । तच्चोभयथापि सम्भवति वह्नित्वेन कार्यतया तदनुकूलशक्तिमत्त्वेन च तृणादीनां कारणतया वह्नित्वावान्तरजातिविशेषेण कार्यतया वा । तत्र च विनिगमकमुक्तमेव ।।**

ನಾವು ಇದಕ್ಕೆ ಉತ್ತರವನ್ನು ಹೇಳುತ್ತೇವೆ. ಅನ್ವಯ ವ್ಯತಿರೇಕಗಳು ಮತ್ತು ನಿಯತಾನ್ವಯರೂಪವಾದ ಹಿಂದೆ ಹೇಳಿದ ಗ್ರಾಹಕಗಳಿಂದ ತೃಣದಲ್ಲಿ ವಹ್ನಿನಿಷ್ಠಕಾರ್ಯತಾ ನಿರೂಪಿತ

ಕಾರಣತಾವಚ್ಛೇದಕ ರೂಪವತ್ತ್ವಗ್ರಹವೂ ಅಥವಾ ವಹ್ನಿಯಲ್ಲಿ ತೃಣನಿಷ್ಠಕಾರಣತಾನಿರೂಪಿತ ಕಾರ್ಯತಾವಚ್ಛೇದಕರೂಪವತ್ತ್ವಗ್ರಹವೂ ಉಂಟಾಗುತ್ತದೆ. ಈ ರೂಪಗಳು ಅಕಾರ್ಯದಿಂದ ಮತ್ತು ಅಕಾರಣದಿಂದ ವ್ಯಾವೃತ್ತವಾದ ರೂಪಗಳು. ಆದರೆ ಆ ಗ್ರಾಹಕಗಳಿಂದ ತೃಣತ್ವೇನ ಕಾರಣತ್ವವು ವಹ್ನಿತ್ವೇನ ಕಾರ್ಯತ್ವವು ಸಿದ್ಧವಾಗುವುದಿಲ್ಲ.

ಯದ್ಯಪಿ ಅಕಾರ್ಯಕಾರಣ ವ್ಯಾವೃತ್ತರೂಪವು ಎರಡು ರೀತಿಯಲ್ಲಿಯೂ ಉಪಪನ್ನವಾಗುತ್ತದೆ. ವಹ್ನಿಯು ಕಾರ್ಯ ಮತ್ತು ತೃಣಾದಿಗಳು ವಹ್ನಿ ಅನುಕೂಲ ಶಕ್ತಿಮತ್ತ್ವೇನ ಕಾರಣ ಎಂದೂ ಕೂಡಿಸಬಹುದು. ಅಥವಾ ವಹ್ನಿಯಲ್ಲಿ ವೈಜಾತ್ಯವನ್ನು ಅಂಗೀಕಾರ ಮಾಡಿ ತೃಣಾದಿಗಳಿಗೆ ಕಾರಣತ್ವವನ್ನೂ ಕೂಡಿಸಬಹುದು. ಇಲ್ಲಿ ಎರಡನೆಯ ವಿಧಾನದಲ್ಲಿ ಲಾಘವರೂಪವಾದ ವಿನಿಗಮಕವು ಇರುವುದೆಂದು ಮೊದಲೇ ಹೇಳಿದ್ದೇವೆ.

## ಅಭಾವಾಭಾವವು ಭಾವದಲ್ಲೇ ಪರ್ಯವಸಾನವಾಗುತ್ತದೆ

**अथ 'तृणारणिमणीनामभावत्रये न कार्यम्, अभावत्रयाभावे कार्यम्' इत्यन्वयव्यतिरेकाभ्याम् अभावत्रयाभावत्वेन तृणादीनां कारणत्वमिति न व्यभिचारः अभावाभावस्य भावपर्यवसन्नत्वादिति चेत् ।**

ಇನ್ನು ಹೀಗೆ ಶಂಕೆ ಮಾಡಬಹುದು. ತೃಣಾರಣಿ ಮಣಿಗಳ ಅಭಾವತ್ರಯವು ಇದ್ದಾಗ ಕಾರ್ಯವುಂಟಾಗುವುದಿಲ್ಲ. ಅಭಾವತ್ರಯಗಳ ಅಭಾವವಿದ್ದರೆ ಕಾರ್ಯ ಉಂಟಾಗುತ್ತದೆ ಎಂಬ ಈ ಅನ್ವಯವ್ಯತಿರೇಕಗಳಿಂದ ತೃಣಾದಿಗಳಿಗೆ ಅಭಾವತ್ರಯಾಭಾವತ್ವೇನ ಕಾರಣತ್ವವನ್ನು ಹೇಳಬಹುದು. ಆಗ ವ್ಯಭಿಚಾರವಿಲ್ಲ. ಅಭಾವಾಭಾವವು ಭಾವದಲ್ಲೇ ಪರ್ಯವಸಾನ ಹೊಂದುವುದರಿಂದ ತೃಣಾದಿಗಳಿಗೆ ಕಾರಣತ್ವವು ಸಿದ್ಧವಾಗುತ್ತದೆ ಎಂದು. ಆದರೆ ಈ ಶಂಕೆಯು ಸರಿಯಲ್ಲ.

## ಅಭಾವತ್ರಯಗಳು ಯಾವುದು ?

**अभावत्रयाणामभावः किं तृणादिप्रत्येकव्यापकोऽन्य एव, उत**

**तृणादि प्रत्येकमेव । आद्ये अभावस्य कारणत्वमिति किमायातं तृणादिकारणत्वे । द्वितीये तृणस्य नारणिमण्यभावाभावत्वं तदुभयापत्तेः ।**

ಈ ಅಭಾವತ್ರಯಾಭಾವವು ತೃಣಾದಿ ಒಂದೊಂದಕ್ಕೂ ವ್ಯಾಪಕವಾದ ಅಭಾವತ್ರಯ ಅಭಾವವೋ ಅಥವಾ ಪ್ರತ್ಯೇಕವಾಗಿ ತೃಣಾದಿರೂಪವೋ ಎಂದು ಪ್ರಶ್ನೆ ಮಾಡುತ್ತೇವೆ. ಅಭಾವತ್ರಯಾಭಾವವು ತೃಣಾದಿ ವ್ಯಾಪಕವಾದ ಅತಿರಿಕ್ತವಾದ ಅಭಾವವೆಂದು ಹೇಳಿದರೆ ಆ ಅಭಾವಕ್ಕೆ ಕಾರಣತ್ವವು ಬಂದಿತೇ ಹೊರತು ತೃಣಾದಿಗಳಿಗೆ ಕಾರಣತ್ವವೇ ಬರುವುದಿಲ್ಲ. ಇನ್ನು ಆ ಅಭಾವವು ಪ್ರತ್ಯೇಕವಾಗಿ ತೃಣಾದಿರೂಪ ಎಂಬ ಎರಡನೆಯ ಪಕ್ಷದಲ್ಲಿ ತೃಣಕ್ಕೆ ಅಭಾವತ್ರಯಾಭಾವತ್ವವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಅಭಾವತ್ರಯದಲ್ಲಿ ಸೇರಿದ ಅರಣ್ಯಭಾವ ಮತ್ತು ಮಣ್ಯಭಾವಗಳ ಅಭಾವವು ತೃಣರೂಪವಾಗುವುದಿಲ್ಲ. ಆ ಎರಡು ಅಭಾವಗಳು ತೃಣರೂಪವಾಗುತ್ತವೆ ಎಂದು ಒಪ್ಪಿದರೆ, ತೃಣಕ್ಕೆ ಅರಣಿತ್ವವು ಮತ್ತು ಮಣಿತ್ವವು ಪ್ರಾಪ್ತವಾಗಬೇಕಾಗುತ್ತದೆ.

## ತೃಣಾದಿಗಳಿಗೆ ಕಾರಣತ್ವಗ್ರಹವು ನಿರಸ್ತವಾಯಿತು

**एतेन 'अभावत्रये न कार्यं तदभावे कार्यमित्यन्वयव्यतिरेकाभ्यां तृणादिप्रत्येकस्य कारणत्वग्रहः' इति परास्तम् ।।**

ಹೀಗೆ ಹೇಳುವುದರಿಂದ ಅಭಾವತ್ರಯವಿದ್ದರೆ ಕಾರ್ಯವಾಗುವುದಿಲ್ಲ. ಅಭಾವತ್ರಯವಿಲ್ಲದಿದ್ದರೆ ಕಾರ್ಯವಾಗುತ್ತದೆ ಎಂಬ ಅನ್ವಯವ್ಯತಿರೇಕಗಳಿಂದ ಪ್ರತ್ಯೇಕವಾಗಿ ತೃಣಾದಿಗಳಿಗೆ ಕಾರಣತ್ವಗ್ರಹ ಉಂಟಾಗುತ್ತದೆ ಎಂಬುದೂ ನಿರಸ್ತವಾಯಿತು.

## ಆಧೇಯಶಕ್ತಿಯನ್ನು ಒಪ್ಪಬೇಕೆಂದು ಮೀಮಾಂಸಕರ ಆಕ್ಷೇಪ

**स्यादेतत् । मा भूत् सहजशक्तिराधेयशक्तिस्तु स्यादेव। तथाहि – 'व्रीहीन् प्रोक्षति' इत्यत्र कालान्तरकार्यानुकूलोऽतीन्द्रियोऽतिशयः प्रोक्षणजन्योऽस्तीत्युभयवादिसिद्धम् ।**

**स व्रीहिसमवेतो न वा? इति संशये व्रीहनिष्ठ एव वाच्यः। कथमन्यथा प्रोक्षितानामेव तेषां कालान्तरेऽवघातादौ विनियोगः । न च मन्त्रादिसहकृतत्वमेव व्रीहिषु विशेषः । तेषां चिरध्वस्तत्वात् ।**

ಮೀಮಾಂಸಕರು ಶಂಕಿಸುತ್ತಾರೆ. ನಾವು ಮುಂದೆ ಹೇಳುವ ವಾದವು ಉಪಪನ್ನವಾಗುತ್ತದೆ. ಸಹಜಶಕ್ತಿಯು ಇಲ್ಲದಿದ್ದರೆ ಬೇಡ. ಆಧೇಯಶಕ್ತಿಯನ್ನಂತೂ ಒಪ್ಪಲೇಬೇಕು. ಅದು ಹೇಗೆಂದರೆ 'ವ್ರೀಹೀನ್ ಪ್ರೋಕ್ಷತಿ' ಎಂಬಲ್ಲಿ ಕಾಲಾಂತರದಲ್ಲಿ ಉಂಟಾಗುವ ಕಾರ್ಯಕ್ಕೆ ಅನುಕೂಲವಾದ ಅತೀಂದ್ರಿಯವಾದ ಅತಿಶಯವು ಪ್ರೋಕ್ಷಣದಿಂದ ಜನ್ಯವಾಗುತ್ತದೆ ಎಂಬುದು ಉಭಯವಾದಿಗಳಿಗೆ ಸಿದ್ಧವಾದುದು. ಆ ಅತಿಶಯವು ವ್ರೀಹಿನಿಷ್ಠವೋ ಅಲ್ಲವೋ ಎಂಬ ಸಂಶಯಬಂದರೆ, ಅದನ್ನು ವ್ರೀಹಿನಿಷ್ಠ ಎಂದೇ ಅಂಗೀಕರಿಸಬೇಕು. ಹಾಗಿಲ್ಲದಿದ್ದರೆ ಪ್ರೋಕ್ಷಿತವಾದ ಆ ವ್ರೀಹಿಗಳಿಗೆ ಮುಂದೆ ಕಾಲಾಂತರದಲ್ಲಿ ಅವಘಾತದಲ್ಲಿ ಹೇಗೆ ವಿನಿಯೋಗ ಉಂಟಾಗುತ್ತದೆ? ವ್ರೀಹಿಗಳಲ್ಲಿ ಮಂತ್ರಸಹಕೃತತ್ವವೇ ಅತಿಶಯ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಮಂತ್ರ ಸಹಕೃತವಾದ ವ್ರೀಹಿಗಳು ಮಂತ್ರವು ನಾಶವಾದಾಗಲೇ ನಾಶವಾಗಿವೆ.

## ಕಲ್ಪನಾಗೌರವದೋಷ

**ननु कथं प्रोक्षितस्यैवावघातादौ अन्वयः? 'वीहीनवहन्ति' इति श्रुतेस्तन्मात्रान्वयेऽप्युपपत्तेः । अथ 'व्रीहिभिर्यजेत' 'व्रीहीन् प्रोक्षति' 'व्रीहीनवहन्ति' 'पुरोडाशैर्यजेत' इत्यत्र यथा पुरोडाशे प्रकृत्यपेक्षयाम् अवहतव्रीहीणाम् अवयवानुवृत्तिद्वाराऽन्वयः, प्रोक्षणे च यागार्थमुपात्तव्रीहीणां, तथाऽवघाते व्रीह्याकाङ्क्षायां प्रोक्षितानामेवान्वयः ।**

बाधकं विना शब्दानां सन्निहितविशेषपरत्वनियमात् । 'व्यक्तिवचनानां सन्निहितविशेषपरत्वम्' इति न्यायात् ।

**अन्यथा प्रकरणादिसन्निहितत्यागे तदन्यसन्निधिकल्पने गौरवमिति चेत् । न ।**

ಇನ್ನು ಪ್ರೋಕ್ಷಿತವಾದ ವ್ರೀಹಿಗಳಿಗೆ ಅವಘಾತದಲ್ಲಿ ಅನ್ವಯ ಎನ್ನುವುದು ಹೇಗೆ? ವ್ರೀಹೀ ನ ವಹಂತಿ ಎಂಬ ವಾಕ್ಯದಿಂದ ವ್ರೀಹಿ ಸಾಮಾನ್ಯಕ್ಕೆ ಅವಘಾತಾನ್ವಯವು ತಿಳಿದುಬರುವುದಷ್ಟೆ ಎಂಬ ಪ್ರಶ್ನೆ ಇದೆ. ಅದಕ್ಕೆ ಹೀಗೆ ಉತ್ತರವನ್ನು ಹೇಳಬೇಕು. ವ್ರೀಹಿಭಿರ್ಯಜೇತ, ವ್ರೀಹೀನ್ ಪ್ರೋಕ್ಷತಿ, ವ್ರೀಹೀನ್ ಅವಹಂತಿ, ಪುರೋಡಾಶೈರ್ಯಜೇತ ಎಂಬಲ್ಲಿ ಹೇಗೆ ಪುರೋಡಾಶಕ್ಕೆ ಪ್ರಕೃತಿದ್ರವ್ಯವು ಅಪೇಕ್ಷಿತವಾಗಿರುವುದರಿಂದ ಅವಹನನವನ್ನು ಹೊಂದಿದ ವ್ರೀಹಿಗಳೇ ಅವಯವ ಅನುವೃತ್ತಿದ್ವಾರಾ ಅನ್ವಯವನ್ನು ಹೊಂದುತ್ತವೆಯೋ ಮತ್ತು ಹೇಗೆ ಪ್ರೋಕ್ಷಣವನ್ನು ಕುರಿತು ತೆಗೆದುಕೊಂಡ ವ್ರೀಹಿಗಳೇ ಯಾಗದ ಸಲುವಾಗಿ ಅನ್ವಯವನ್ನು ಹೊಂದುತ್ತವೆಯೋ, ಅದರಂತೆ ಅವಘಾತಕ್ಕೆ ವ್ರೀಹಿಗಳ ಅಪೇಕ್ಷೆ ಇರುವಾಗ ಪ್ರೋಕ್ಷಿತವಾದ ವ್ರೀಹಿಗಳೇ ಅನ್ವಯವನ್ನು ಹೊಂದುತ್ತವೆ. ಏಕೆಂದರೆ ಬಾಧಕವಿಲ್ಲದಿದ್ದಾಗ ಶಬ್ದಗಳು ಸನ್ನಿಹಿತ ವಿಶೇಷವನ್ನೇ ಹೇಳುತ್ತವೆ ಎಂಬ ನಿಯಮವಿದೆ.

ಮತ್ತು ವ್ಯಕ್ತಿಯನ್ನು ಹೇಳುವ ಶಬ್ದಗಳು ಸನ್ನಿಹಿತ ವಿಶೇಷವನ್ನೇ ಹೇಳುತ್ತವೆ ಎಂಬ ನ್ಯಾಯವೂ ಇದೆ. ಇಲ್ಲದಿದ್ದರೆ ಪ್ರಕರಣಾದಿಗಳಿಂದ ಸನ್ನಿಹಿತವಾದುದರ ತ್ಯಾಗವೂ ಪ್ರಕರಣಾದಿಗಳಿಂದ ಪ್ರಾಪ್ತವಾಗದ ಇನ್ನೊಂದು ವಸ್ತುಗಳ ಸನ್ನಿಧಿಯೂ ಕಲ್ಪಿಸಲ್ಪಡಬೇಕಾಗುವುದರಿಂದ ಗೌರವವು ಉಂಟಾಗುತ್ತದೆ ಎಂಬ ಈ ಉತ್ತರವು ಸರಿಯಲ್ಲ.

## ಪ್ರೋಕ್ಷಣವಿಶಿಷ್ಟದಲ್ಲಿ ಅವಘಾತ ಕಾರಣತ್ವದ ಸಮಾಧಾನವು ಸರಿಯೇ ?

**तर्हि एकस्य द्वयं यत्र प्रोक्षणं तत्रावघातो न तु प्रोक्षणविशिष्टे, यत्र रूपं तत्र रस इतिवत् । तथा च प्रोक्षणस्य शब्देन कालान्तरकार्यजनकत्वाबोधनात् कथं तन्निर्वाहार्थमतिशय-कल्पनम् । 'प्रोक्षिता व्रीहयोऽवघाताय कल्पन्ते' इति वाक्यशेषात् प्रोक्षणविशिष्टस्यावघाते कारणत्वबोध इति चेत्।**

**स व्रीहिसमवेतो न वा? इति संशये व्रीहनिष्ठ एव वाच्यः। कथमन्यथा प्रोक्षितानामेव तेषां कालान्तरेऽवघातादौ विनियोगः । न च मन्त्रादिसहकृतत्वमेव व्रीहिषु विशेषः । तेषां चिरध्वस्तत्वात् ।**

ಮೀಮಾಂಸಕರು ಶಂಕಿಸುತ್ತಾರೆ. ನಾವು ಮುಂದೆ ಹೇಳುವ ವಾದವು ಉಪಪನ್ನವಾಗುತ್ತದೆ. ಸಹಜಶಕ್ತಿಯು ಇಲ್ಲದಿದ್ದರೆ ಬೇಡ. ಆಧೇಯಶಕ್ತಿಯನ್ನಂತೂ ಒಪ್ಪಲೇಬೇಕು. ಅದು ಹೇಗೆಂದರೆ 'ವ್ರೀಹೀನ್ ಪ್ರೋಕ್ಷತಿ' ಎಂಬಲ್ಲಿ ಕಾಲಾಂತರದಲ್ಲಿ ಉಂಟಾಗುವ ಕಾರ್ಯಕ್ಕೆ ಅನುಕೂಲವಾದ ಅತೀಂದ್ರಿಯವಾದ ಅತಿಶಯವು ಪ್ರೋಕ್ಷಣದಿಂದ ಜನ್ಯವಾಗುತ್ತದೆ ಎಂಬುದು ಉಭಯವಾದಿಗಳಿಗೆ ಸಿದ್ಧವಾದುದು. ಆ ಅತಿಶಯವು ವ್ರೀಹಿನಿಷ್ಠವೋ ಅಲ್ಲವೋ ಎಂಬ ಸಂಶಯಬಂದರೆ, ಅದನ್ನು ವ್ರೀಹಿನಿಷ್ಠ ಎಂದೇ ಅಂಗೀಕರಿಸಬೇಕು. ಹಾಗಿಲ್ಲದಿದ್ದರೆ ಪ್ರೋಕ್ಷಿತವಾದ ಆ ವ್ರೀಹಿಗಳಿಗೆ ಮುಂದೆ ಕಾಲಾಂತರದಲ್ಲಿ ಅವಘಾತದಲ್ಲಿ ಹೇಗೆ ವಿನಿಯೋಗ ಉಂಟಾಗುತ್ತದೆ? ವ್ರೀಹಿಗಳಲ್ಲಿ ಮಂತ್ರಸಹಕೃತತ್ವವೇ ಅತಿಶಯ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಮಂತ್ರ ಸಹಕೃತವಾದ ವ್ರೀಹಿಗಳು ಮಂತ್ರವು ನಾಶವಾದಾಗಲೇ ನಾಶವಾಗಿವೆ.

## ಕಲ್ಪನಾಗೌರವದೋಷ

**ननु कथं प्रोक्षितस्यैवावघातादौ अन्वयः? 'वीहीनवहन्ति' इति श्रुतेस्तन्मात्रान्वयेऽप्युपपत्तेः । अथ 'व्रीहिभिर्यजेत' 'व्रीहीन् प्रोक्षति' 'व्रीहीनवहन्ति' 'पुरोडाशैर्यजेत' इत्यत्र यथा पुरोडाशे प्रकृत्यपेक्षयाम् अवहतव्रीहीणाम् अवयवानुवृत्तिद्वाराऽन्वयः, प्रोक्षणे च यागार्थमुपात्तव्रीहीणां, तथाऽवघाते व्रीह्याकाङ्क्षायां प्रोक्षितानामेवान्वयः ।**

**बाधकं विना शब्दानां सन्निहितविशेषपरत्वनियमात् । 'व्यक्तिवचनानां सन्निहितविशेषपरत्वम्' इति न्यायात् ।**

**अन्यथा प्रकरणादिसन्निहितत्यागे तदन्यसन्निधिकल्पने गौरवमिति चेत् । न ।**

ಇನ್ನು ಪ್ರೋಕ್ಷಿತವಾದ ವ್ರೀಹಿಗಳಿಗೆ ಅವಘಾತದಲ್ಲಿ ಅನ್ವಯ ಎನ್ನುವುದು ಹೇಗೆ? ವ್ರೀಹೀ ನ ವಹಂತಿ ಎಂಬ ವಾಕ್ಯದಿಂದ ವ್ರೀಹಿ ಸಾಮಾನ್ಯಕ್ಕೆ ಅವಘಾತಾನ್ವಯವು ತಿಳಿದುಬರುವುದಷ್ಟೆ ಎಂಬ ಪ್ರಶ್ನೆ ಇದೆ. ಅದಕ್ಕೆ ಹೀಗೆ ಉತ್ತರವನ್ನು ಹೇಳಬೇಕು. ವ್ರೀಹಿಭಿರ್ಯಜೇತ, ವ್ರೀಹೀನ್ ಪ್ರೋಕ್ಷತಿ, ವ್ರೀಹೀನ್ ಅವಹಂತಿ, ಪುರೋಡಾಶೈರ್ಯಜೇತ ಎಂಬಲ್ಲಿ ಹೇಗೆ ಪುರೋಡಾಶಕ್ಕೆ ಪ್ರಕೃತಿದ್ರವ್ಯವು ಅಪೇಕ್ಷಿತವಾಗಿರುವುದರಿಂದ ಅವಹನನವನ್ನು ಹೊಂದಿದ ವ್ರೀಹಿಗಳೇ ಅವಯವ ಅನುವೃತ್ತಿದ್ವಾರಾ ಅನ್ವಯವನ್ನು ಹೊಂದುತ್ತವೆಯೋ ಮತ್ತು ಹೇಗೆ ಪ್ರೋಕ್ಷಣವನ್ನು ಕುರಿತು ತೆಗೆದುಕೊಂಡ ವ್ರೀಹಿಗಳೇ ಯಾಗದ ಸಲುವಾಗಿ ಅನ್ವಯವನ್ನು ಹೊಂದುತ್ತವೆಯೋ, ಅದರಂತೆ ಅವಘಾತಕ್ಕೆ ವ್ರೀಹಿಗಳ ಅಪೇಕ್ಷೆ ಇರುವಾಗ ಪ್ರೋಕ್ಷಿತವಾದ ವ್ರೀಹಿಗಳೇ ಅನ್ವಯವನ್ನು ಹೊಂದುತ್ತವೆ. ಏಕೆಂದರೆ ಬಾಧಕವಿಲ್ಲದಿದ್ದಾಗ ಶಬ್ದಗಳು ಸನ್ನಿಹಿತ ವಿಶೇಷವನ್ನೇ ಹೇಳುತ್ತವೆ ಎಂಬ ನಿಯಮವಿದೆ.

ಮತ್ತು ವ್ಯಕ್ತಿಯನ್ನು ಹೇಳುವ ಶಬ್ದಗಳು ಸನ್ನಿಹಿತ ವಿಶೇಷವನ್ನೇ ಹೇಳುತ್ತವೆ ಎಂಬ ನ್ಯಾಯವೂ ಇದೆ. ಇಲ್ಲದಿದ್ದರೆ ಪ್ರಕರಣಾದಿಗಳಿಂದ ಸನ್ನಿಹಿತವಾದುದರ ತ್ಯಾಗವೂ ಪ್ರಕರಣಾದಿಗಳಿಂದ ಪ್ರಾಪ್ತವಾಗದ ಇನ್ನೊಂದು ವಸ್ತುಗಳ ಸನ್ನಿಧಿಯೂ ಕಲ್ಪಿಸಲ್ಪಡಬೇಕಾಗುವುದರಿಂದ ಗೌರವವು ಉಂಟಾಗುತ್ತದೆ ಎಂಬ ಈ ಉತ್ತರವು ಸರಿಯಲ್ಲ.

## ಪ್ರೋಕ್ಷಣವಿಶಿಷ್ಟದಲ್ಲಿ ಅವಘಾತ ಕಾರಣತ್ವದ ಸಮಾಧಾನವು ಸರಿಯೇ ?

**तर्हि एकस्य द्वयं यत्र प्रोक्षणं तत्रावघातो न तु प्रोक्षणविशिष्टे, यत्र रूपं तत्र रस इतिवत् । तथा च प्रोक्षणस्य शब्देन कालान्तरकार्यजनकत्वाबोधनात् कथं तन्निर्वाहार्थमतिशय-कल्पनम् । 'प्रोक्षिता व्रीहयोऽवघाताय कल्पन्ते' इति वाक्यशेषात् प्रोक्षणविशिष्टस्यावघाते कारणत्वबोध इति चेत्।**

ಏಕಸ್ಯದ್ವಯಂ ಎಂಬ ನ್ಯಾಯವಿದೆ. ಎಂದರೆ ಎಲ್ಲಿ ಪ್ರೋಕ್ಷಣವಿದೆಯೋ ಅಲ್ಲಿಯೇ ಅವಘಾತವನ್ನು ಕಲ್ಪನೆ ಮಾಡಬೇಕು. ಶುದ್ಧವ್ರೀಹಿಗಳಲ್ಲಿ ಪ್ರೋಕ್ಷಣವಿದೆ. ಅಲ್ಲಿಯೇ ಅವಘಾತದ ಪ್ರಾಪ್ತಿ. ಪ್ರೋಕ್ಷಣವಿಶಿಷ್ಟವಾದ ವ್ರೀಹಿಗಳಲ್ಲಿ ಅವಘಾತದ ಪ್ರಾಪ್ತಿ ಇಲ್ಲ. ಎಲ್ಲಿ ರೂಪವಿದೆಯೋ ಅಲ್ಲಿ ರಸವಿದೆ ಎಂದು ಹೇಳುವಾಗ, ಹೇಗೆ ರೂಪವಿಶಿಷ್ಟದಲ್ಲಿ ರಸವು ಪ್ರಾಪ್ತವಾಗುವುದಿಲ್ಲವೋ ಅದರಂತೆ ಇಲ್ಲಿಯೂ ಕೂಡ. ಆದ್ದರಿಂದ ಪ್ರೋಕ್ಷಣಕ್ಕೆ ಕಾಲಾಂತರದಲ್ಲಿ ಕಾರ್ಯಜನಕತ್ವವು ಶಬ್ದದಿಂದ ತಿಳಿಯದಿರುವುದರಿಂದ ಏಕೆ ಅದನ್ನು ನಿರ್ವಾಹಮಾಡಲು ವ್ರೀಹಿಗಳಲ್ಲಿ ಅತಿಶಯವನ್ನು ಕಲ್ಪನೆ ಮಾಡಬೇಕು? ಪ್ರೋಕ್ಷಿತವಾದ ವ್ರೀಹಿಗಳು ಅವಘಾತವನ್ನು ಹೊಂದುತ್ತವೆ ಎಂಬ ವಾಕ್ಯವಿರುವುದರಿಂದ ಪ್ರೋಕ್ಷಣವಿಶಿಷ್ಟದಲ್ಲಿ ಅವಘಾತವನ್ನು ಕುರಿತು ಕಾರಣತ್ವವು ತಿಳಿಯುತ್ತದೆ ಎಂಬ ಸಮಾಧಾನವು ಸರಿಯಲ್ಲ.

## ಪ್ರೋಕ್ಷಿತವಾದದ್ದು ಯಾವುದು ?

**अस्तु तावदयम् । तथापि 'प्रोक्षिता' इत्यत्र भूते क्तानुशासनादतीतप्रोक्षणे व्रीहाववघातान्वयः । तथा चावघाते प्रोक्षणध्वंसः कारणं न तु प्रोक्षणमिति चेत् । मैवम् । प्रोक्षणमवघातजनकं प्रमाणतस्तदर्थमुपादीयमानत्वात् अवघाते व्रीहिवत् ।**

ಈ ಆಕ್ಷೇಪವು ಹಾಗಿರಲಿ, ಪ್ರೋಕ್ಷಿತ ಎಂಬಲ್ಲಿರುವ ಕ್ತಪ್ರತ್ಯಯವು ಭೂತಕಾಲದಲ್ಲಿ ಅನುಶಾಸನವನ್ನು ಹೊಂದಿದೆ. ಆದ್ದರಿಂದ ಪ್ರೋಕ್ಷಣಧ್ವಂಸವುಳ್ಳ ವ್ರೀಹಿಗಳಿಗೆ ಅವಘಾತವನ್ನು ಹೇಳಬೇಕು. ಆದ್ದರಿಂದ ಅವಘಾತವನ್ನು ಕುರಿತು ಪ್ರೋಕ್ಷಣಧ್ವಂಸವು ಕಾರಣವಾಗುತ್ತದೆಯೇ ಹೊರತು ಪ್ರೋಕ್ಷಣವು ಕಾರಣವಾಗಲಾರದು ಎಂಬ ಈ ಆಕ್ಷೇಪವು ಬಂದರೆ ಅದನ್ನು ಪರಿಹಾರ ಮಾಡಲು ಮೀಮಾಂಸಕರು ಅನುಮಾನದಿಂದ ಪ್ರೋಕ್ಷಣಕ್ಕೆ ಕಾರಣತ್ವವನ್ನು ಸಾಧಿಸಲು ಹೊರಡುತ್ತಾರೆ. ಆ ಅನುಮಾನವು ಈ ರೀತಿ ಇದೆ. ಪ್ರೋಕ್ಷಣವು ಅವಘಾತಜನಕವಾದುದು, ಪ್ರಮಾಣದಿಂದ ಅವಘಾತದ ಸಲುವಾಗಿ ಉಪಾದೀಯಮಾನವಾದ್ದರಿಂದ (ಸ್ವೀಕರಿಸಲ್ಪಡುವುದರಿಂದ) ಅವಘಾತವನ್ನು ಕುರಿತು ವ್ರೀಹಿಯಂತೆ ಎಂಬುದು ಆ ಅನುಮಾನ.

## ಹೇತುವಿಗೆ ಅಸಿದ್ಧಿದೋಷವಿಲ್ಲ

**न चासिद्धिः । अप्रोक्षितेऽवघाताभावादवश्यमवघात ार्थं प्रोक्षणोपादानात् । न च प्रोक्षणध्वंस एव व्यापारः प्रतियोगिनोऽहेतुत्वापातात् । अन्यथा यागादेरपि तथा स्यात् । फलस्य च नियतसमयोत्पत्तिकत्वम- पूर्ववत् स्वभावादेव भविष्यति । न च प्रोक्षिता व्रीहयस्तथा । निरन्वयध्वस्तत्वेनोपलक्षणस्याहेतुत्वात् ।**

ಇಲ್ಲಿ ಹೇತುವಿಗೆ ಅಸಿದ್ಧಿಯಿಲ್ಲ. ಪ್ರೋಕ್ಷಣ ಹೊಂದದಿರುವ ವ್ರೀಹಿಗಳಲ್ಲಿ ಅವಘಾತವಿಲ್ಲದಿರುವುದರಿಂದ ಪ್ರೋಕ್ಷಣವು ಅವಘಾತದ ಸಲುವಾಗಿಯೇ ಪ್ರಮಾಣದಿಂದ ಉಪಾದೀಯಮಾನವಾಗಿದೆ. ಪ್ರೋಕ್ಷಣಧ್ವಂಸರೂಪವಾದ ವ್ಯಾಪಾರವೇ ಅವಘಾತವನ್ನು ಕುರಿತು ಕಾರಣವೆಂದು ಹೇಳಿದರೆ ಪ್ರೋಕ್ಷಣಕ್ಕೆ ಹೇತುತ್ವವೇ ಬರುವುದಿಲ್ಲ ಎಂಬ ಆಪತ್ತಿ ಇದೆ.

ಈ ಆಪತ್ತಿಗೆ ಇಷ್ಟಾಪತ್ತಿಯನ್ನು ಹೇಳುವುದಾದರೆ ಯಾಗಜನ್ಯ ಅಪೂರ್ವಕ್ಕೆ ಸ್ವರ್ಗಸಾಧನತ್ವವನ್ನು ಒಪ್ಪಿ, ಯಾಗಕ್ಕೆ ಸ್ವರ್ಗಸಾಧನತ್ವವನ್ನೇ ಒಪ್ಪುವುದು ಬೇಡ ಎಂಬ ಆಪತ್ತಿಯು ಬರುತ್ತದೆ. ಅಪೂರ್ವವು ಸ್ವರ್ಗಕ್ಕೆ ಕಾರಣವಾದರೆ ಕಾಲವಿಳಂಬದಿಂದ ಏಕೆ ಸ್ವರ್ಗವು ಉಂಟಾಗುತ್ತದೆ ಎಂದರೆ ಫಲದ ಸ್ವಭಾವವೇ ಹಾಗೆ. ನಿಯತಸಮಯದಲ್ಲಿಯೇ ಅದು ಉತ್ಪತ್ತಿಯನ್ನು ಹೊಂದುತ್ತದೆ ಎಂದು ಉತ್ತರವನ್ನು ಹೇಳಬಹುದು. ಪ್ರೋಕ್ಷಿತ ವ್ರೀಹಿಗಳಿಗೆ ಹಾಗೆ ಹೇಳಲು ಬರುವುದಿಲ್ಲ. ಪ್ರೋಕ್ಷಿತವ್ರೀಹಿಗಳೆಂದರೆ ಪ್ರೋಕ್ಷಣೋಪಲಕ್ಷಿತ ವ್ರೀಹಿಗಳು ಎಂದು ಅರ್ಥ. ಅಲ್ಲಿ ಉಪಲಕ್ಷಣವಾದ ಪ್ರೋಕ್ಷಣಕ್ಕೆ ಅನ್ವಯವನ್ನು ಹೇಳಲು ಬರುವುದಿಲ್ಲ.

## ಅನುಮಾನಕ್ಕೆ ಸಿದ್ಧಸಾಧನತಾ ದೋಷ

**'कुरूणां क्षेत्रम्' इत्यत्र तु कुरुज्ञानस्येतरव्यावृत्तक्षेत्रव्यवहारजनकत्वं न तु कुरोः । अन्यथा यागोपलक्षितो यज्वैव स्वर्गं फलिष्यति किमपूर्व्येण । न च देवदत्ताद्यशरीरं**

**देवदत्तविशेषगुणजन्यं जन्यत्वे सति तद्भोगसाधनत्वात् तन्निर्मितस्रग्वदिति तत्सिद्धिः । जन्मान्तरीयैरदृष्टजनकत्वाभिमतैर्ज्ञानेच्छाप्रयत्नैः सिद्धसाधनात् ।**

ಕುರೂಣಾಂ ಕ್ಷೇತ್ರಂ ಎಂಬಲ್ಲಿ ಕುರು ಜ್ಞಾನಕ್ಕೆ ಇತರವ್ಯಾವೃತ್ತವಾದ ಕ್ಷೇತ್ರವ್ಯವಹಾರಜನಕತ್ವವೇ ಹೊರತು ಉಪಲಕ್ಷಣವಾದ ಕುರುಗಳಿಗೆ ಅಲ್ಲ. ಹಾಗಿಲ್ಲದಿದ್ದರೆ ಯಾಗೋಪಲಕ್ಷಿತ ಯಜಮಾನನೇ ಸ್ವರ್ಗವನ್ನು ಕುರಿತು ಕಾರಣ ಎಂದು ಹೇಳಿ ಅಪೂರ್ವವನ್ನೂ ನಿರಾಕರಿಸಬಹುದು. 'ದೇವದತ್ತಶರೀರ ಭಿನ್ನವಾದುದು. ದೇವದತ್ತ ವಿಶೇಷಗುಣಜನ್ಯವಾಗಿದೆ. ಜನ್ಯವಾಗಿ ಭೋಗಸಾಧನವಾಗಿರುವುದರಿಂದ. ಅವನ ಭೋಗಸಾಧನ ಪುಷ್ಪಮಾಲೆಯಂತೆ' ಎಂಬ ಅನುಮಾನದಿಂದ ಅಪೂರ್ವ ಸಿದ್ಧಿಯಾಗುತ್ತದೆ ಎಂದು ಹೇಳುವಂತಿಲ್ಲ. ಅದೃಷ್ಟಜನಕವೆಂದು ಅಭಿಮತವಾದ ಜನ್ಮಾಂತರೀಯ ಜ್ಞಾನೇಚ್ಛಾಪ್ರಯತ್ನಗಳಿಂದಲೇ ಸಾಧ್ಯವು ಉಪಪನ್ನವಾಗುವುದರಿಂದ ಅನುಮಾನಕ್ಕೆ ಸಿದ್ಧಸಾಧನ ದೋಷವು ಬರುತ್ತದೆ.

## ಗುಣಾದಿಸ್ಥಳದಲ್ಲಿ ಪ್ರತಿಬಂಧಕವೇ ಇರಲು ಸಾಧ್ಯವಿಲ್ಲ

**तस्मात् प्रोक्षणादयो भावभूतमतिशयं जनयन्त एव कालान्तरभाविकार्यजनकाः । प्रमाणतस्तदर्थमुपादीयमानत्वात् रोगचिकित्सावत् ।**

ಗುಣಾದಿಸ್ಥಳದಲ್ಲಿ ಪ್ರತಿಬಂಧಕವೇ ಇರಲು ಸಾಧ್ಯವಿಲ್ಲವಾದ್ದರಿಂದ ಅವುಗಳಿಗೆ ಪ್ರತಿಬಧ್ಯತ್ವವು ಕೂಡುವುದಿಲ್ಲ. ಪ್ರತಿಬಂಧಕ ಪ್ರಾಗಭಾವ ಧ್ವಂಸಗಳು ಗುಣಾದಿನಿಷ್ಠವಾಗಬೇಕಾದರೆ ಅಲ್ಲಿಯೇ ಪ್ರತಿಬಂಧಕವೂ ಬರಬೇಕು. ಪ್ರತಿಬಂಧಕ ಸಂಸರ್ಗವು ಒಂದು ಜನ್ಯಧರ್ಮ. ಗುಣಾದಿಗಳಲ್ಲಿ ಯಾವ ಜನ್ಯಧರ್ಮವೂ ಇಲ್ಲದಿರುವುದರಿಂದ ಅಲ್ಲಿ ಪ್ರತಿಬಂಧಕವೂ ಇಲ್ಲ. ಗುಣಾದಿಗಳಿಗೆ ಪ್ರತಿಬಧ್ಯತ್ವವೂ ಇಲ್ಲ.

## ಪರಂಪರಾಸಂಬಂಧವನ್ನು ಕಲ್ಪನೆ ಮಾಡಿದರೆ ಗೌರವದೋಷ

**स चातिशयो लाघवात् फलसमानाधिकरण इति व्रीहिनिष्ठ एव। तेन तत्समवहितत्वं व्रीहेः साक्षात्सम्बन्धात् । पुरुषनिष्ठत्वे च व्रीहिणो साक्षात् सम्बन्धाभावात् । परम्परासम्बन्धे गौरवात् । न साक्षाद् व्रीहिसमवहितत्वं स्यात् । किञ्च यो यद्गतफलार्थितयक्रियते स बाधकं विना तद्गतमेव तदनुकूलमतिशयं जनयति रोगचिकित्सावत् ।**

ಆದ್ದರಿಂದ 'ಪ್ರೋಕ್ಷಣಾದಿಗಳು ಭಾವಭೂತವಾದ ಅತಿಶಯವನ್ನು ಉತ್ಪತ್ತಿಮಾಡಿಯೇ ಕಾಲಾಂತರವ್ಯಕ್ತಿಯಾದ ಕಾರ್ಯಕ್ಕೆ ಜನಕವಾಗಿವೆ. ಪ್ರಮಾಣದಿಂದ ಕಾಲಾಂತರಭಾವಿ ಕಾರ್ಯದ ಸಲುವಾಗಿ ಉಪಾದೀಯ ಮಾನವಾದುದರಿಂದ, ರೋಗಚಿಕಿತ್ಸೆಯಂತೆ' ಎಂಬ ಅನುಮಾನದಿಂದ ಅತಿಶಯವು ಸಿದ್ಧವಾಗುತ್ತದೆ.

ಆ ಅತಿಶಯವಾದರೂ ಫಲಸಮಾನಾಧಿಕರಣವಾಗ ಬೇಕಾಗಿರುವುದರಿಂದ ಲಾಘವದಿಂದ ವ್ರೀಹಿನಿಷ್ಠವೆಂದೇ ಸಿದ್ಧವಾಗುತ್ತದೆ. ಆದ್ದರಿಂದ ವ್ರೀಹಿಗಳಿಗೆ ಪ್ರೋಕ್ಷಣ ಸಮವಹಿತತ್ವ ಮತ್ತು ಪ್ರೋಕ್ಷಣಜನ್ಯ ಅತಿಶಯ ಸಮವಹಿತತ್ವವು ಸಾಕ್ಷಾತ್‌ಸಂಬಂಧದಿಂದಲೇ ಉಪಪನ್ನವಾಗುತ್ತವೆ. ಆ ಅತಿಶಯವನ್ನು ಪುರುಷನಿಷ್ಠವೆಂದು ಅಂಗೀಕರಿಸಿದರೆ ವ್ರೀಹಿಗೆ ಅದರ ಸಾಕ್ಷಾತ್‌ಸಂಬಂಧವು ಉಂಟಾಗುವುದಿಲ್ಲ. ಪರಂಪರಾಸಂಬಂಧವು ಕಲ್ಪನೆ ಮಾಡಿದರೆ ಗೌರವವು ಉಂಟಾಗುತ್ತದೆ ಮತ್ತು ಸಾಕ್ಷಾತ್ ವ್ರೀಹಿಗೆ ಸಮವಧಾನವನ್ನು ಸಿದ್ಧವಾಗುವುದಿಲ್ಲ.

## ಕೃಷಿಚಿಕಿತ್ಸಾದಿಗಳಲ್ಲಿ ವ್ಯಭಿಚಾರ

**अथ प्रोक्षणं पुरुषसमवेतातिशयजनकं कालान्तरभाविकार्यजनकत्वे सति विहितत्वात् यागवत्, अन्यथा विधिविरोधादिति चेन्न । कृषिचिकित्सादिना व्यभिचारात् ।**

ಅದೂ ಅಲ್ಲದೆ, ಯಾವ ಸಂಸ್ಕಾರವು ಯಾವುದರಲ್ಲಿ ಉಂಟಾಗುವ ಫಲದ ಅಪೇಕ್ಷೆಯಿಂದ ಮಾಡಲ್ಪಡುತ್ತದೆಯೋ ಬಾಧಕವಿಲ್ಲದಿದ್ದರೆ ಆ ಸಂಸ್ಕಾರವು ಆ ವಸ್ತುವಿನಲ್ಲಿಯೇ ಅಪೇಕ್ಷಿತವಾದ ಫಲಕ್ಕೆ ಅನುಕೂಲವಾದ ಅತಿಶಯವನ್ನು ಉಂಟುಮಾಡುತ್ತದೆ ಎಂಬುದು ನಿಯಮ. ರೋಗಚಿಕಿತ್ಸೆಯು ಇದಕ್ಕೆ ದೃಷ್ಟಾಂತ. ಇದಕ್ಕೆ ವಿರುದ್ಧವಾಗಿ 'ಪ್ರೋಕ್ಷಣವು ಪುರುಷಸಮವೇತವಾದ ಅತಿಶಯವನ್ನು ಉಂಟುಮಾಡುತ್ತದೆ. ಕಾಲಾಂತರಭಾವಿಕಾರ್ಯಜನಕವಾಗಿ ವಿಹಿತವಾಗಿರುವುದರಿಂದ, ಯಾಗದಂತೆ. ಇಲ್ಲದಿದ್ದರೆ ವಿಧಿವಿರೋಧವು ಬರುತ್ತದೆ' ಎಂದು ಅನುಮಾನದಿಂದ ಸಾಧಿಸಲು ಬರುವುದಿಲ್ಲ. ಕೃಷಿಚಿಕಿತ್ಸಾದಿಗಳಲ್ಲಿ ವ್ಯಭಿಚಾರವು ಬರುತ್ತದೆ. ಅವು ಕಾಲಾಂತರಭಾವಿಫಲಕ್ಕಾಗಿ ವಿಹಿತವಾಗಿವೆ. ಪುರುಷಸಮವೇತವಾದ ಅತಿಶಯಜನಕವಾಗಿಲ್ಲ.

## ಮೀಮಾಂಸಕರ ಅಧಿಕಾಶಂಕೆ

**अप्रयोजकत्वाच्च । तेन विनापि विधिसम्भवात् । अस्तु वा सकलव्रीहिनिष्ठ एक एव । न चैकव्रीहिनाशे तन्नाशापत्तिः । किञ्चिदाश्रयनाशस्य वृक्षादाविव कार्यानाशकत्वादिति ।।**

ಕೃಷಿಯು ಭೂಮಿಯಲ್ಲಿಯೂ, ಚಿಕಿತ್ಸೆಯು ದೇಹದಲ್ಲಿಯೂ ಅತಿಶಯವನ್ನು ಉಂಟುಮಾಡುತ್ತದೆ. ಈ ಅನುಮಾನಕ್ಕೆ ಅಪ್ರಯೋಜಕತ್ವ ದೋಷವೂ ಇದೆ. ಏಕೆಂದರೆ ಪುರುಷಸಮವೇತ ಅತಿಶಯವಿಲ್ಲದಿದ್ದರೂ ವಿಧಿಯು ಕೂಡುತ್ತದೆ. ಅಥವಾ ಎಲ್ಲ ವ್ರೀಹಿಗಳಲ್ಲೂ ಸೇರಿ ಒಂದೇ ಅತಿಶಯವನ್ನು ಒಪ್ಪುತ್ತೇವೆ. ಹಾಗಾದರೆ ಆ ಸಮುದಾಯದಲ್ಲಿ ಒಂದು ವ್ರೀಹಿಯು ನಾಶವಾದರೆ ಆ ಅತಿಶಯದ ನಾಶವಾಗಲಿ ಎಂಬ ಆಪತ್ತಿಯು ಇಲ್ಲ. ಒಂದು ಕೊಂಬೆಯು ನಾಶವನ್ನು ಹೊಂದಿದರೆ ವೃಕ್ಷವು ಹೇಗೆ ನಾಶವನ್ನು ಹೊಂದುವುದಿಲ್ಲವೋ, ಅದರಂತೆ ಒಂದು ವ್ರೀಹಿಯು ನಾಶವನ್ನು ಹೊಂದಿದರೆ ಕಾರ್ಯವಾದ ಆ ಅತಿಶಯದ ನಾಶವಾಗುವುದಿಲ್ಲ. ಇದು ಮೀಮಾಂಸಕರ ಶಂಕೆ.

## ವೈಶೇಷಿಕರ ಉತ್ತರ

**उच्यते । अतिशयग्राहकमानाल्लाघवसहकृतात् स एक एव सिद्ध्यति न नाना पुरुषनिष्ठश्च ।**

ಇದಕ್ಕೆ ವೈಶೇಷಿಕರಾದ ನಾವು ಉತ್ತರವನ್ನು ಹೇಳುತ್ತೇವೆ. ಲಾಘವ ಸಹಕೃತವಾದ ಅತಿಶಯಗ್ರಾಹಕ ಪ್ರಮಾಣದಿಂದ ಆ ಅತಿಶಯವು ಒಂದೇ ಎಂದು ಸಿದ್ಧವಾಗುತ್ತದೆಯೇ ಹೊರತಾಗಿ ಒಂದೊಂದು ವ್ರೀಹಿಗಳಲ್ಲಿ ಒಂದೊಂದು ಅತಿಶಯವೆಂಬ ರೀತಿಯಲ್ಲಿ ನಾನಾ ಎಂದು ಸಿದ್ಧವಾಗುವುದಿಲ್ಲ.

## ಅನುಗತವಾದ ಬೇರೆ ಹೇತು ಹೇಳಲಾಗದು

**तथाहि – प्रोक्षणमपूर्वजनकं दृष्टद्वाराभावे सति कालान्तरभाविफलजनकतया विहितत्वात् यागतदङ्गवत् । कृष्यादौ दृष्टद्वारसम्भवात् न व्यभिचारो न वाऽप्रयोजकत्वम्। यागदानहोमादितदङ्गानामपूर्वजनकत्वे दृष्टद्वाराभावे सति कालान्तरभाविकार्यजनकतया विहितत्वस्यैव प्रयोजकत्वात्। अन्यस्याननुगमात् ।**

ಅದರಂತೆಯೇ ಆ ಒಂದು ಅತಿಶಯವು ಪುರುಷನಿಷ್ಠವೆಂದೇ ಸಿದ್ಧವಾಗುತ್ತದೆ. ಅದು ಹೇಗೆಂದರೆ, 'ಪ್ರೋಕ್ಷಣವು ಅಪೂರ್ವಜನಕವಾಗಿದೆ. ದೃಷ್ಟದ್ವಾರವು ಇಲ್ಲದಿರುವಾಗ ಕಾಲಾಂತರಭಾವಿ ಫಲಜನಕವಾಗಿ ವಿಹಿತವಾಗಿರುವುದರಿಂದ, ಯಾಗತದಂಗಗಳಂತೆ' ಎಂಬ ಅನುಮಾನದಿಂದ ಪುರುಷನಿಷ್ಠವಾಗಿಯೇ ಸಿದ್ಧವಾಗುತ್ತದೆ. ಕೃಷ್ಯಾದಿಗಳಲ್ಲಿ ದೃಷ್ಟದ್ವಾರತ್ವವು ಕೂಡುವುದರಿಂದ ಹಿಂದೆ ಹೇಳಿದ ವ್ಯಭಿಚಾರವಾಗಲೀ ಅಥವಾ ಅಪ್ರಯೋಜಕತ್ವವಾಗಲೀ ಇಲ್ಲ. ಏಕೆಂದರೆ ಯಾಗ, ದಾನ, ಹೋಮ, ತದಂಗಗಳು ಅಪೂರ್ವಜನಕವಾಗಿವೆ. ಅಲ್ಲಿ ದೃಷ್ಟದ್ವಾರವಿಲ್ಲದಿದ್ದರೂ ಕಾಲಾಂತರಭಾವಿಕಾರ್ಯ ಜನಕವಾಗಿ ವಿಹಿತವಾಗಿವೆ. ಆದ್ದರಿಂದ ಸಾಧ್ಯವನ್ನು ಕುರಿತು ನಾವು ಪ್ರಯೋಗಮಾಡಿದ ಹೇತುವೇ ಪ್ರಯೋಜಕವಾದುದು. ಬೇರೆ ಅನುಗತವಾದ ಹೇತುವನ್ನು ಹೇಳಲು ಬರುವುದಿಲ್ಲ.

## ವ್ಯಾಪ್ತಿಗೆ ವ್ಯಭಿಚಾರದೋಷ

**न च यो यदङ्गफलार्थितया क्रियते स बाधकं विना तद्गतमेव तदनुकूल फलं जनयतीति नियमः । शत्रुवधमुद्दिश्य प्रवर्तिते**

**श्येनयागादौ व्यभिचारात् । विपक्षे बाधकाभावाच्च । नापि यदुद्देशेन यत् क्रियते तत्तत्र भाविकार्यानुकूलातिशयजनकमिति व्याप्तिः । हविस्त्यागादिभिर्व्यभिचारात् ।**

ಯಾವುದು ಯದಂಗವಾದ ಫಲದ ಅಪೇಕ್ಷೆಯಿಂದ ಮಾಡಲ್ಪಡುತ್ತದೆಯೋ ಅದು ಬಾಧಕವಿಲ್ಲದಿದ್ದರೆ ತದ್ಗತವಾದ, ತದನುಕೂಲವಾದ ಫಲವನ್ನು ಉಂಟುಮಾಡುತ್ತದೆ ಎಂಬ ನಿಯಮವಿಲ್ಲ. ಶತ್ರುವಧೆಯನ್ನು ಉದ್ದೇಶಿಸಿ ಮಾಡುವ ಶ್ಯೇನಯಾಗದಿಂದ ಉಂಟಾಗುವ ಅಪೂರ್ವವು ಶತ್ರುನಿಷ್ಠವಾಗಿರುವುದಿಲ್ಲ. ಮತ್ತು ಈ ನಿಯಮವನ್ನು ಅಂಗೀಕರಿಸದಿದ್ದರೆ ಯಾವ ಬಾಧಕವೂ ಇಲ್ಲ. ಯಾವ ಉದ್ದೇಶದಿಂದ ಯಾವ ಕ್ರಿಯೆಯು ಮಾಡಲ್ಪಡುತ್ತದೆಯೋ ಆ ಕ್ರಿಯೆಯು ಆ ಉದ್ದೇಶವಿಷಯವಾದ ವಸ್ತುವಿನಲ್ಲಿ ಭಾವಿಕಾರ್ಯಕ್ಕೆ ಅನುಕೂಲವಾದ ಅತಿಶಯವನ್ನು ಉಂಟುಮಾಡುತ್ತದೆ ಎಂಬ ವ್ಯಾಪ್ತಿಯೂ ಇಲ್ಲ. ಏಕೆಂದರೆ ದೇವತೋದ್ದೇಶದಿಂದ ಮಾಡುವ ಹವಿಸ್ಸಿನ ತ್ಯಾಗದಿಂದ ದೇವತೆಯಲ್ಲಿ ಅತಿಶಯವು ಉಂಟಾಗುವುದಿಲ್ಲ. ಆದ್ದರಿಂದ ಈ ವ್ಯಾಪ್ತಿಗೆ ವ್ಯಭಿಚಾರವು ಬರುತ್ತದೆ.

## ಉಪಯೋಗಾಂತರವನ್ನು ಹೇಳಲು ಸಾಧ್ಯವಿಲ್ಲ

**ननु प्रोक्षितव्रीहिणाऽदृष्टस्य जनितत्वात् बर्हिष इव पुनरुपयोगान्तरं स्यात् । विनियुक्तविनियोगविरोधात् उपयोगे वा तज्जातीयान्तरमुपादीयेताविशेषात् । न ।**

(ಶಂಕೆ) ಪ್ರೋಕ್ಷಿತವ್ರೀಹಿಗಳಿಂದ ಅದೃಷ್ಟವು ಉತ್ಪನ್ನವಾಗುವುದರಿಂದ ಬರ್ಹಿರ್ಯಾಗಕ್ಕೆ ಅದೃಷ್ಟವು ಉತ್ಪನ್ನವಾದಮೇಲೆ ಹೇಗೆ ಉಪಯೋಗಾಂತರವನ್ನು ಹೇಳುವುದಿಲ್ಲವೋ ಅದರಂತೆ ಇಲ್ಲಿಯೂ ಉಪಯೋಗಾಂತರವನ್ನು ಹೇಳಬಾರದು. ನಿಯುಕ್ತವಾದುದರ ವಿನಿಯೋಗವು ವಿರುದ್ಧವಾದುದಷ್ಟೇ. ಅಥವಾ ಜನಿತಾದೃಷ್ಟವಾದ ವ್ರೀಹಿಗೆ ಉಪಯೋಗಾಂತರವಿದೆ ಎಂದಾದರೆ ವ್ರೀಹಿಜಾತೀಯ ವಾದ ಬೇರೆ ವ್ರೀಹಿಗೂ ಅವಹನನದ ಅನ್ವಯವು ಉಂಟಾಗುತ್ತದೆ ಎಂಬ ಶಂಕೆಯು ಸರಿಯಲ್ಲ.

## ಪ್ರೋಕ್ಷಿತವಾದ ವ್ರೀಹಿಗೆ ಅನ್ವಯವು ಸಾಧ್ಯವಿದೆ

**'व्रीहीनवहन्ति' इत्यत्रोक्तन्यायेन प्रोक्षितस्यैव व्रीहेरन्वयात्। विधेर्दुर्लङ्घ्यत्वात् । यथा 'बर्हिस्तृणोति' 'बर्हिषि हविरासादयति' इत्यत्र ।**

ವ್ರೀಹೀನವಹಂತಿ ಎಂಬಲ್ಲಿ ವ್ಯಕ್ತಿವಚನವು ಸನ್ನಿಹಿತ ವ್ಯಕ್ತಿಯನ್ನೇ ತೆಗೆದುಕೊಂಡು ಪರ್ಯವಸಾನವನ್ನು ಹೊಂದುತ್ತದೆ ಎಂದು ಹಿಂದೆ ಹೇಳಿದ ನ್ಯಾಯದಿಂದ ಪ್ರೋಕ್ಷಿತವಾದ ವ್ರೀಹಿಗೇ ಅನ್ವಯವುಂಟಾಗುತ್ತದೆ. ಏಕೆಂದರೆ ವಿಧಿಯನ್ನು ಉಲ್ಲಂಘಿಸಲು ಸಾಧ್ಯವಿಲ್ಲ. ಬರ್ಹಿಸ್ತೃಣೋತಿ ಬರ್ಹಿಷಿ ಹವಿರಾಸಾದಯತಿ ಎಂಬಲ್ಲಿ ಹೇಗೆ ಸಂಸ್ಕಾರಹೊಂದಿದ ಬರ್ಹಿಗಳೇ ಅನ್ವಯವನ್ನು ಹೊಂದುತ್ತವೆಯೋ ಅದರಂತೆ ಇಲ್ಲಿಯೂ ಕೂಡ.

## ಮುಂದಿನ ಕಾರ್ಯಕ್ಕೆ ಸಹಕೃತ ಸಂಸ್ಕಾರವೂ ಕಾರಣ

**यद्वा विचित्राः संस्काराः । केचिदुद्देश्यसहकारिण एवाग्रिमकार्यकारिणः । यथाऽभिचारसंस्कारो यं देहमुद्दिश्य प्रवृत्तस्तदपेक्ष एव तत्सम्बद्धस्यैव दुःखं जनयति । तथा प्रोक्षणसंस्कारा अपि उद्देश्यव्रीहिसहकृता एवाग्रिमकार्य-कर्तारः ।**

ಅಥವಾ ಸಂಸ್ಕಾರಗಳು ಅನೇಕ ವಿಧವಾದವುಗಳು. ಕೆಲವು ಸಂಸ್ಕಾರಗಳು ಉದ್ದೇಶ್ಯಸಹಕಾರಿಗಳಾಗಿಯೇ ಮುಂದಿನ ಕಾರ್ಯವನ್ನು ಉಂಟುಮಾಡುತ್ತವೆ. ಉದಾಹರಣೆಗೆ - ಯಾವ ದೇಹವನ್ನು ಉದ್ದೇಶಿಸಿ ಅಭಿಚಾರ ಸಂಸ್ಕಾರವು ಪ್ರವೃತ್ತವಾಗುತ್ತದೆಯೋ ಆ ದೇಹದ ಸಹಕಾರವನ್ನು ಹೊಂದಿ ತತ್ಸಂಬದ್ಧವಾಗಿ ಸಂಸ್ಕಾರವು ದುಃಖವನ್ನು ಹುಟ್ಟಿಸುತ್ತದೆ. ಅದರಂತೆ ಪ್ರೋಕ್ಷಣ ಸಂಸ್ಕಾರವೂ ಕೂಡ ಉದ್ದೇಶ್ಯವಾದ ವ್ರೀಹಿಯಿಂದ ಸಹಕೃತವಾಗಿಯೇ ಮುಂದಿನ ಕಾರ್ಯಕ್ಕೆ ಕಾರಣವಾಗುತ್ತದೆ.

## ಕೆಲವು ಸಂಸ್ಕಾರಗಳು ವ್ಯಧಿಕರಣವಾಗಿ ಕಾರ್ಯಕಾರಿ

**यथा च कारीरीजनितसंस्काराधारपुरुषसंयोगात् जलमुचामदृष्टसमवधानं तथा प्रोक्षणजन्यादृष्टवदात्मसंयोगाद्व्रीहिणामुत्तरक्रियाविशेषाः । कर्मकर्तृसाधनवैगुण्यात् फलाभावस्तुल्य एव । आगमिकत्वात् चाण्डालादिस्पर्शस्याहवनीयादिसंस्कारानाशकत्वश्रुतेर्व्यधिकरणस्याप्यपूर्वनाशकत्वम् । धर्मनाशे कर्मनाशापारगमनवत् निषिद्धकीर्तनवच्च।**

ಹೇಗೆ ಕಾರೀರೀಷ್ಟಿಯಿಂದ ಉಂಟಾದ ಸಂಸ್ಕಾರಾಶ್ರಯ ಪುರುಷನ ಸಂಯೋಗದಿಂದ ಮೋಡಗಳಿಗೆ ಅದೃಷ್ಟದ ಸಂಬಂಧವು ಉಂಟಾಗುತ್ತದೆಯೋ ಅದರಂತೆ ಪ್ರೋಕ್ಷಣ ಜನ್ಯವಾದ ಅದೃಷ್ಟಾಶ್ರಯನಾದ ಆತ್ಮನ ಸಂಯೋಗದಿಂದ ವ್ರೀಹಿಗಳಿಂದ ಉತ್ತರಕ್ರಿಯಾ ವಿಶೇಷಗಳು ಉಂಟಾಗುತ್ತವೆ. ಕರ್ಮಕರ್ತೃಸಾಧನಗಳಲ್ಲಿ ದೋಷವಿದ್ದರೆ ಎರಡು ಕಡೆಯಲ್ಲಿಯೂ ಫಲವುಂಟಾಗುವುದಿಲ್ಲ.

ಇನ್ನು ಕೆಲವು ಸಂಸ್ಕಾರಗಳು ವ್ಯಧಿಕರಣವಾಗಿ ಕಾರ್ಯಕಾರಿಯಾಗುತ್ತವೆ. ಅಸ್ಪೃಶ್ಯಸ್ಪರ್ಶದಿಂದ ಆವಹನೀಯಾದಿ ಸಂಸ್ಕಾರಗಳು ನಾಶವಾಗುತ್ತವೆ ಎಂದು ಶ್ರುತಿಯಿರುವುದರಿಂದ ವ್ಯಧಿಕರಣವಾದ ಚಂಡಾಲಸ್ಪರ್ಶಕ್ಕೂ ಅಪೂರ್ವನಾಶಕತ್ವವಿದೆ (ಯಜಮಾನನಿಗೆ ಚಂಡಾಲಸ್ಪರ್ಶವಾದರೆ ಆವಹನೀಯದ ಸಂಸ್ಕಾರವು ನಾಶವನ್ನು ಹೊಂದುತ್ತದೆ). ಧರ್ಮನಾಶವನ್ನು ಕುರಿತು ನಿಷಿದ್ಧ ಕೀರ್ತನದಂತೆ, ಕರ್ಮನಾಶಾನದಿಯ ಜಲಸ್ಪರ್ಶದಂತೆ (ಇಲ್ಲಿ ಜಲಸ್ಪರ್ಶ ಮತ್ತು ನಿಷಿದ್ಧಕೀರ್ತನೆಗಳು ದೇಹನಿಷ್ಠ. ಧರ್ಮವು ಆತ್ಮನಿಷ್ಠ. ಆದರೂ ನಾಶ್ಯನಾಶಕ ಭಾವವಿದೆ) ಇದು ಸಂಭವಿಸುತ್ತದೆ.

## ಪ್ರೋಕ್ಷಣಜನ್ಯವಾದ ಅತಿಶಯವು ವ್ರೀಹಿನಿಷ್ಠವಾಗಲಿ

**किञ्च प्रोक्षणजन्यातिशयो व्रीहिनिष्ठो न नाना । आत्मवृत्तेरेकस्मादप्युक्तन्यायेन कार्योपपत्तेः ।**

ಇನ್ನು ಪ್ರೋಕ್ಷಣಜನ್ಯವಾದ ಅತಿಶಯವು ವ್ರೀಹಿನಿಷ್ಠವೆಂದು ಅಂಗೀಕರಿಸಿದರೆ ಅದು ಅನೇಕವೆಂದು ಅಂಗೀಕರಿಸಿದರೆ ಗೌರವವು ಬರುತ್ತದೆ. ಆತ್ಮವೃತ್ತಿಯಾದ ಒಂದೇ ಒಂದು ಅತಿಶಯವನ್ನು ಅಪೂರ್ವರೂಪವಾದುದನ್ನು ಅಂಗೀಕರಿಸಿದರೆ ಅಂತಹ ಅದೃಷ್ಟವದಾತ್ಮಸಂಯೋಗದಿಂದ ಕಾರ್ಯವು ಉಪಪನ್ನವಾಗುವುದರಿಂದ ಲಾಘವವೇ ಇದೆ. ಇನ್ನು ಎಲ್ಲಾ ವ್ರೀಹಿಗಳಲ್ಲಿಯೂ ಸೇರಿ ಒಂದೇ ಅತಿಶಯವುಂಟಾಗುತ್ತದೆ ಎಂದೂ ಹೇಳಲು ಸಾಧ್ಯವಿಲ್ಲ.

## ಅನನುಗಮ ಹಾಗೂ ವ್ಯಭಿಚಾರದೋಷಗಳು

**नाप्येकः । एकद्विस्वाश्रयनाशानां प्रत्येकमननुगमेन कार्यनाशे आश्रयमात्रनाशस्य जनकत्वादेव व्रीहिनाशेन तन्नाशादपरप्रोक्षित-व्रीहीणामनन्वयापत्तेः ।**

ಏಕೆಂದರೆ ಕಾರ್ಯನಾಶವನ್ನು ಕುರಿತು ಆಶ್ರಯನಾಶವು ಕಾರಣ ಎಂದು ಒಪ್ಪಬೇಕು. ಅದನ್ನು ಬಿಟ್ಟು ಆಶ್ರಯವಾದ ಒಂದುವ್ಯಕ್ತಿಯ ನಾಶ ಅಥವಾ ಎರಡು ವ್ಯಕ್ತಿಯ ನಾಶವು ಕಾರ್ಯನಾಶವನ್ನು ಕುರಿತು ಕಾರಣವೆಂದು ಹೇಳಿದರೆ ಅನನುಗಮವೂ, ವ್ಯಭಿಚಾರವೂ ಬರುತ್ತದೆ. ಆದ್ದರಿಂದ ಯಾವ ವ್ರೀಹಿ ಸಮುದಾಯದಲ್ಲಿ ಪ್ರೋಕ್ಷಣದಿಂದ ಒಂದು ಅದೃಷ್ಟವು ಉಂಟಾಯಿತೋ ಆಗ ಆ ಸಮುದಾಯದಲ್ಲಿ ಒಂದು ವ್ರೀಹಿಯು ನಾಶವಾದರೆ ಸಮುದಾಯ ರೂಪವಾದ ಆಶ್ರಯವೇ ನಾಶವಾಗುವುದರಿಂದ ಆಶ್ರಯನಾಶಪ್ರಯುಕ್ತವಾಗಿ ಆ ಅತಿಶಯವು ನಾಶವನ್ನು ಹೊಂದುವುದರಿಂದ ಪ್ರೋಕ್ಷಿತವಾದ ಉಳಿದ ವ್ರೀಹಿಗಳಿಗೂ ಅವಘಾತಾದಿಗಳಲ್ಲಿ ಅನ್ವಯವಾಗದಿರಲಿ ಎಂಬ ಆಪತ್ತಿಯು ಉಂಟಾಗುತ್ತದೆ.

## ಆಧೇಯಶಕ್ತಿಯನ್ನು ಒಪ್ಪುವ ಅವಶ್ಯಕತೆಯಿಲ್ಲ

**अथ 'व्रीहीन् प्रोक्षति' इतीप्सितद्वितीयाश्रुतेः क्रियाजन्येष्टफलभागित्वं व्रीहेरेवावगम्यते । न चापूर्वस्य व्रीहिवृत्तित्वम्, साक्षात्सम्बन्धस्यैवोत्सर्गिकत्वादिति चेन्न । धात्वर्थतावच्छेदकसंयोगेन व्रीहिकर्मतोपपत्तेः ।**

ಇನ್ನು ವ್ರೀಹೀನ್ ಪ್ರೋಕ್ಷತಿ ಎಂಬಲ್ಲಿ ದ್ವಿತೀಯಾ ವಿಭಕ್ತಿ ಶ್ರುತಿಯಿದೆ. ಈಪ್ಸಿತ ತಮಂ ಕರ್ಮ' ಎಂದು ಅನುಶಾಸನವಿರುವುದರಿಂದ ಕ್ರಿಯಾಜನ್ಯ ಇಷ್ಟಫಲಭಾಗಿತ್ವವನ್ನು ವ್ರೀಹಿಗಳಿಗೆ ಅಂಗೀಕರಿಸಬೇಕು. ಕ್ರಿಯಾಜನ್ಯಫಲವು ಅಪೂರ್ವವೆಂದು ಒಪ್ಪಿದರೆ ಅದು ವ್ರೀಹಿನಿಷ್ಠವಾಗುವುದಿಲ್ಲ. ಅಪೂರ್ವವು ಚೇತನನಿಷ್ಠವಾಗುತ್ತದೆ. ಆಗ ವ್ರೀಹಿಗಳಿಗೆ ಅಪೂರ್ವವದಾತ್ಮಸಂಬಂಧವನ್ನು ಹೇಳಬೇಕು. ಇದು ಪರಂಪರಾ ಸಂಬಂಧ. ಆದರೆ ಎಲ್ಲ ಕಡೆಗಳಲ್ಲಿಯೂ ಬಾಧಕವಿಲ್ಲದಿದ್ದರೆ ಸಾಕ್ಷಾತ್‌ಸಂಬಂಧವನ್ನೇ ತೆಗೆದುಕೊಳ್ಳುವುದು ಉತ್ಸರ್ಗನಿಯಮ. ಆದ್ದರಿಂದ ವ್ರೀಹಿಗಳಲ್ಲಿ ಆಧೇಯಶಕ್ತಿಯನ್ನು ಒಪ್ಪಬೇಕಾಗುತ್ತದೆ ಎಂಬ ಮೀಮಾಂಸಕರ ಶಂಕೆಯೂ ಸರಿಯಲ್ಲ.

## ಧಾತ್ವರ್ಥತಾವಚ್ಛೇದಕ ಸಂಯೋಗದಿಂದಲೇ ಕರ್ಮತ್ವವು ಉಪಪನ್ನವಾಗುತ್ತದೆ

**नच संयोगावच्छिन्न एव व्यापारविशेषः प्रोक्षणार्थः, तथा च कथं प्रोक्षणसाध्यतयाऽन्वय इति वाच्यम् ।**

**संयोगस्योपलक्षणत्वेनापदार्थत्वात् । अन्यथा 'ग्रामं गच्छति' इत्यादौ का गतिः, का वा 'सक्तून् प्रोक्षति' इत्यादौ । तत्राधेयशक्त्यभावात् ।**

ಪ್ರೋಕ್ಷತಿ ಎಂಬಲ್ಲಿ ಧಾತ್ವರ್ಥತಾವಚ್ಛೇದಕವಾದ ಸಂಯೋಗದಿಂದಲೇ ವ್ರೀಹಿಗಳಿಗೆ ಕರ್ಮತ್ವವು ಉಪಪನ್ನವಾಗುತ್ತದೆ. ಇನ್ನು ಸಂಯೋಗಾವಚ್ಛಿನ್ನವಾದ ವ್ಯಾಪಾರ ವಿಶೇಷವೇ ಪ್ರೋಕ್ಷಣ ಶಬ್ದಾರ್ಥ. ಆದ್ದರಿಂದ ಆ ಸಂಯೋಗವು ಪ್ರೋಕ್ಷಣ ರೂಪವಾದುದರಿಂದ ಪ್ರೋಕ್ಷಣಸಾಧ್ಯವಲ್ಲ. ಹೀಗಿರುವಾಗ ಪ್ರೋಕ್ಷಣರೂಪಕ್ರಿಯಾಜನ್ಯ ಸಂಯೋಗರೂಪಫಲಾಶ್ರಯತ್ವವನ್ನು ಹೇಳಿ ವ್ರೀಹಿಗಳಿಗೆ ಹೇಗೆ ಕರ್ಮತ್ವವನ್ನು ಕೂಡಿಸುವುದು ಎಂದು ಶಂಕಿಸಬಾರದು.

ಸಂಯೋಗಾವಚ್ಛಿನ್ನವ್ಯಾಪಾರವು ಪ್ರೋಕ್ಷಣಾರ್ಥವೆಂದು ಅಂಗೀಕರಿಸುವಾಗ ಸಂಯೋಗವು ಉಪಲಕ್ಷಣವಾಗುತ್ತದೆ. ಆದ್ದರಿಂದ ಅದು ಧಾತ್ವರ್ಥವಲ್ಲ. ಆದ್ದರಿಂದ ಅದು ಪ್ರೋಕ್ಷಣಸಾಧ್ಯವಾಗುತ್ತದೆ. ಇಲ್ಲದಿದ್ದರೆ ಗ್ರಾಮಂ ಗಚ್ಛತಿ ಎಂಬಲ್ಲಿ ಸಕ್ತೂನ್ ಪ್ರೋಕ್ಷತಿ ಎಂಬಲ್ಲಿ ಹೇಗೆ ಅರ್ಥವನ್ನು ಹೇಳುತ್ತೀರಿ. ಗಮನದಿಂದ ಗ್ರಾಮದಲ್ಲಾಗಲೀ ಪ್ರೋಕ್ಷಣದಿಂದ ಸಕ್ತುಗಳಲ್ಲಾಗಲೀ ಒಂದು ಆಧೇಯಶಕ್ತಿಯು ಉಂಟಾಗುವುದಿಲ್ಲವಷ್ಟೇ ?

## ದ್ವಿತೀಯಾವಿಭಕ್ತಿಯು ಕೇವಲ ಪ್ರಯೋಗಸಾಧುತ್ವಾರ್ಥಕವಲ್ಲ

**किञ्च 'घटं साक्षात्करोति' इत्यादौ क्रियाजन्यसंस्कारादीनां घटवृत्तित्वात् संस्कारस्य स्वरूपसम्बन्धेन घटवृत्तित्वं, 'वह्निमनुमिनोमि' इत्यादिवत् । प्रयोगसाधुरेव वा द्वितीयेति यदि, तदा प्रकृतेऽपि तथाऽस्तु ।**

ಮತ್ತು 'ಘಟಂ ಸಾಕ್ಷಾತ್ಕರೋತಿ' (ಘಟವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ) ಇತ್ಯಾದಿ ಸ್ಥಳದಲ್ಲಿ ಧಾತ್ವರ್ಥವಾದ ಸಾಕ್ಷಾತ್ಕಾರ ರೂಪವಾದ ಕ್ರಿಯಾಜನ್ಯಸಂಸ್ಕಾರಗಳು ಸ್ವರೂಪಸಂಬಂಧದಿಂದ ಘಟವೃತ್ತಿಯಾಗಿವೆ ಮತ್ತು ಹಾಗೆಯೇ 'ವಹ್ನಿಂ ಅನುಮಿನೋಮಿ' ಎಂಬಲ್ಲಿ ಅನುಮಿತಿಯನ್ನು ಕುರಿತು ವಹ್ನಿಯು ಕಾರಣವಲ್ಲವಾದ್ದರಿಂದ ದ್ವಿತೀಯಾ ವಿಭಕ್ತಿಯು ಕೇವಲ ಪ್ರಯೋಗಸಾಧುತ್ವಾರ್ಥವಾಗಿ ಇದೆ ಎಂದು ಒಪ್ಪುವುದಾದರೆ ವ್ರೀಹೀನ್ ಪ್ರೋಕ್ಷತಿ ಎಂಬಲ್ಲಿಯೂ ಕೂಡ ಪ್ರಯೋಗ ಸಾಧುತ್ವಾರ್ಥವನ್ನಾಗಲೀ ಅಥವಾ ವ್ರೀಹಿಗಳಲ್ಲಿ ಸಂಸ್ಕಾರವನ್ನಾಗಲೀ ಒಪ್ಪಿ ನಿರ್ವಾಹ ಮಾಡಬಹುದಾದ್ದರಿಂದ ಆಧೇಯ ಶಕ್ತಿಯನ್ನು ಅಂಗೀಕರಿಸುವ ಅವಶ್ಯಕತೆ ಇಲ್ಲ.

## ಅನ್ಯಧರ್ಮವು ಅನ್ಯಧರ್ಮಕ್ಕೆ ಪ್ರಯೋಜಕವಲ್ಲ

**अथ प्रतिमादौ प्रतिष्ठाजन्यं न यजमानादृष्टं पूज्यत्वप्रयोजकम्। भोगादिना तन्नाशेऽपि पूज्यत्वात् तत्सत्त्वेपि चाण्डालादि-स्पर्शेनापूज्यत्वात् । अन्यधर्मं प्रत्यन्यधर्मस्यानुपयोगाच्च । न च प्रतिष्ठाध्वंसस्तथा । तत एवोपजीव्यप्रतिष्ठाप्रयोजकत्व-भङ्गापत्तेः ।**

ಇನ್ನು ಪ್ರತಿಮಾದಿಗಳಲ್ಲಿ ಪ್ರತಿಷ್ಠಾ ಕ್ರಿಯೆಯಿಂದ ಉಂಟಾದ ಯಜಮಾನಾದೃಷ್ಟವು ಪ್ರತಿಮೆಯ ಪೂಜ್ಯತ್ವವನ್ನು ಕುರಿತು ಪ್ರಯೋಜಕವಲ್ಲ. ಏಕೆಂದರೆ ಭೋಗಾದಿಗಳಿಂದ ಯಜಮಾನನ ಅದೃಷ್ಟವು ನಾಶವಾದರೂ ಪ್ರತಿಮೆಯಲ್ಲಿ ಪೂಜ್ಯತ್ವವು ಇದ್ದೇ ಇರುತ್ತದೆ. ಅಥವಾ ಯಜಮಾನನ ಅದೃಷ್ಟವು ಇರುವಾಗಲೂ ಪ್ರತಿಮೆಗೆ ಚಂಡಾಲಸ್ಪರ್ಶವಾದರೆ ಪೂಜ್ಯತ್ವವಿರುವುದಿಲ್ಲ. ಅನ್ಯಧರ್ಮವು ಅನ್ಯಧರ್ಮವನ್ನು ಕುರಿತು ಪ್ರಯೋಜಕವಲ್ಲ.

## ಪ್ರತಿಮೆಯಲ್ಲಿಯೂ ಆಧೇಯಶಕ್ತಿಯು ಅನಾವಶ್ಯಕ

**तस्मात् प्रतिष्ठाजन्यास्पृश्यस्पर्शादिनाश्या प्रतिमादिनिष्ठा शक्तिरभ्युपेयेति चेत् । प्रतिष्ठाविधिना प्रतिमादौ देवता सन्निधिरहङ्कारममकाररूपः क्रियते, स्वसादृश्यदर्शिनश्चित्रादाविव ज्ञानस्य नाशेऽपि संस्कारसत्त्वात्। अस्पृश्यस्पर्शादिना तु तन्नाशः ।**

ಹಾಗಾದರೆ ಪ್ರತಿಷ್ಠಾಜನ್ಯವಾದ ದುಷ್ಪಸ್ಪರ್ಶಾದಿ ನಾಶ್ಯವಾದ ಪ್ರತಿಮಾನಿಷ್ಠವಾದ ಒಂದು ಆಧೇಯಶಕ್ತಿಯನ್ನು ಒಪ್ಪುತ್ತೇವೆ ಎಂದು ಹೇಳಬಾರದು. ಪ್ರತಿಷ್ಠಾವಿಧಾನದಿಂದ ಪ್ರತಿಮಾದಿಗಳಲ್ಲಿ ದೇವತಾಸನ್ನಿಧಾನವುಂಟಾಗುತ್ತದೆ. ದೇವತಾಸನ್ನಿಧಾನವೆಂದರೆ ದೇವತೆಗೆ ಆ ಪ್ರತಿಮೆಯಲ್ಲಿ ಇದು ನಾನು, ಈ ಪ್ರತಿಮೆಯು ನನ್ನ ಶರೀರ ಎಂಬ ಜ್ಞಾನ. ತನ್ನ ಚಿತ್ರವನ್ನು ನೋಡಿ ತಾನು, ತನ್ನದು ಎಂದು ಹೇಳಿದಂತೆ. ದೇವತೆಗಳಿಗೆ ಆ ಜ್ಞಾನವು ನಾಶವಾದರೂ ಆ ಜ್ಞಾನದ ಸಂಸ್ಕಾರವು ಇದ್ದೇ ಇರುತ್ತದೆ. ದುಷ್ಪಸ್ಪರ್ಶಾದಿಗಳಿಂದ ಆ ಸಂಸ್ಕಾರವು ನಾಶವನ್ನು ಹೊಂದುತ್ತದೆ. ಆದರಿಂದ ಪೂಜ್ಯತ್ವವು ನಾಶಹೊಂದುತ್ತದೆ. ಆದ್ದರಿಂದ ಪ್ರತಿಮೆಯಲ್ಲಿ ಆಧೇಯಶಕ್ತಿಯನ್ನು ಅಂಗೀಕರಿಸಬೇಕಾಗಿಲ್ಲ.

## ದುಷ್ಪಸ್ಪರ್ಶಾದಿವಿರಹಸಹಕೃತಸಮ್ಯಕ್ಪ್ರತಿಷ್ಠಿತತ್ವಜ್ಞಾನವು ಪೂಜ್ಯತ್ವಕ್ಕೆ ಪ್ರಯೋಜಕ

**अचेतनदेवतापक्षे च यथार्थप्रतिष्ठितप्रत्यभिज्ञानस्य अस्पृश्य-स्पर्शादिविरहसहकृतस्य तथात्वम् । 'प्रतिष्ठितं पूजयेत्' इति विधिबलात् तत्प्रतिसन्धानस्यावश्यकत्वादिति प्राञ्चः ।**

ಜಡವೇ ದೇವತಾ ಎಂಬ ಪಕ್ಷದಲ್ಲಿ ದುಷ್ಪಸ್ಪರ್ಶಾದಿ ವಿರಹ ಸಹಕೃತವಾದ ಸಮ್ಯಕ್ಪ್ರತಿಷ್ಠಿತತ್ವ ಜ್ಞಾನವು ಪೂಜ್ಯತ್ವಕ್ಕೆ ಪ್ರಯೋಜಕವಾದುದು. ಪ್ರತಿಷ್ಠಿತಂ ಪೂಜಯೇತ್ (ಪ್ರತಿಷ್ಠಿತವಾದ ಪ್ರತಿಮೆಯನ್ನು ಪೂಜಿಸಬೇಕು) ಎಂದು ವಿಧಿ ಇರುವುದರಿಂದ ಅಂತಹ ಅನುಸಂಧಾನವು ಅವಶ್ಯಕವಾಗಿ ಇರಬೇಕಾಗುತ್ತದೆ. ಆದ್ದರಿಂದ ಅಲ್ಲಿಯೂ ಆಧೇಯಶಕ್ತಿಯನ್ನು ಅಂಗೀಕರಿಸಲು ಅವಕಾಶವಿಲ್ಲ.

## ಪ್ರತಿಷ್ಠಾವಿಧಿವಾಕ್ಯದ ಬಗ್ಗೆ ನವೀನರ ಅಭಿಪ್ರಾಯ

**नव्यास्तु प्रतिष्ठाविधिनैव तवाधेयशक्तिवदपूर्वान्तरं जन्यते । तददृष्टवदात्मसंयोगाश्रयस्य पूज्यत्वम् अस्पृश्यस्पर्शेन तन्नाशे चापूज्यत्वमित्याहुः ।।**

ನವೀನರಾದರೋ ಪ್ರತಿಷ್ಠಾವಿಧಾನದಿಂದ ಪ್ರತಿಮೆಯಲ್ಲಿ ನೀವು ಆಧೇಯಶಕ್ತಿಯನ್ನು ಒಪ್ಪುವಂತೆ ನಾವು ಯಜಮಾನನಲ್ಲೇ ಅಪೂರ್ವಾಂತರವನ್ನು ಒಪ್ಪುತ್ತೇವೆ. ಅಂತಹ ಅಪೂರ್ವವದಾತ್ಮಸಂಯೋಗಾಶ್ರಯತ್ವವು ಪ್ರತಿಮೆಯ ಪೂಜ್ಯತ್ವಕ್ಕೆ ಪ್ರಯೋಜಕವಾದುದು. ದುಷ್ಟಸ್ಪರ್ಶದಿಂದ ಅಪೂರ್ವವದಾತ್ಮಸಂಯೋಗವು ನಾಶವಾಗುವುದರಿಂದ ಪ್ರತಿಮೆಯಲ್ಲಿ ಪೂಜ್ಯತ್ವವಿರುವುದಿಲ್ಲ ಎಂದು ಹೇಳುತ್ತಾರೆ.

## ಪ್ರತಿಷ್ಠಾವಿಧಿವಾಕ್ಯದ ಬಗ್ಗೆ ಯಥಾರ್ಥ ವ್ಯಾಖ್ಯಾನ

**वयं तु ब्रूमः । 'प्रतिष्ठितं पूजयेत्' इति विधिवाक्येन प्रतिष्ठायाः कारणत्वं न बोध्यते । किन्तु भूतार्थे क्तानुशासनादतीतप्रतिष्ठे पूज्यत्वं बोध्यते। तथा च प्रतिष्ठाध्वंसः प्रतिष्ठाकालीनयावदस्पृश्यस्पर्शादिप्रतियोगिकानादिकाल-संसर्गाभावसहितः पूज्यत्वप्रयोजकः; स च प्रागभावोऽत्यन्ताभावश्च कचित् ।**

ಆದರೆ ನಾವು ಹೀಗೆ ಹೇಳುತ್ತೇವೆ. ಪ್ರತಿಷ್ಠಿತಂ ಪೂಜಯೇತ್ ಎಂಬ ವಿಧಿವಾಕ್ಯದಿಂದ ಪ್ರತಿಷ್ಠೆಗೆ ಪೂಜ್ಯತ್ವವನ್ನು ಕುರಿತು ಕಾರಣತ್ವವು ಬೋಧಿಸಲ್ಪಡುವುದಿಲ್ಲ. ಪ್ರತಿಷ್ಠಿತಂ ಎಂಬಲ್ಲಿ ಭೂತಾರ್ಥಕವಾದ ಕ್ತ ಪ್ರತ್ಯಯವಿದೆ. ಅದು ಪ್ರತಿಷ್ಠಾವಿಧಾನವು ಮುಗಿದ ಮೇಲೆ ಪೂಜೆಯನ್ನು ಮಾಡಬೇಕು ಎಂದಿಷ್ಟೇ ತಿಳಿಸುತ್ತದೆ. ಪ್ರತಿಷ್ಠಾವಿಧಾನವು ಮುಗಿದ ಮೇಲೆ ಪ್ರತಿಷ್ಠಾ ಧ್ವಂಸವೇ ಇದೆ. ಆದ್ದರಿಂದ ಪ್ರತಿಷ್ಠಾಕಾಲೀನವಾದ ಆಯಾಯ ದುಷ್ಟಸ್ಪರ್ಶಗಳ ಪ್ರತಿಯೋಗಿಕವಾದ ಅನಾದಿಕಾಲ ಸಂಸರ್ಗಾಭಾವಸಹಿತವಾದ ಪ್ರತಿಷ್ಠಾಧ್ವಂಸವೇ ಪೂಜ್ಯತ್ವವನ್ನು ಕುರಿತು ಪ್ರಯೋಜಕವಾದುದು.

ಆ ದುಷ್ಪಸ್ಪರ್ಶಾದಿ ಸಂಸರ್ಗಾಭಾವವು ಕೆಲವೊಮ್ಮೆ ಪ್ರಾಗಭಾವರೂಪವಾಗುತ್ತದೆ, ಕೆಲವೊಮ್ಮೆ ಅತ್ಯಂತಾಭಾವರೂಪವಾಗುತ್ತದೆ.

## ಕಾಮಿನೀಪದಾಘಾತದಿಂದ ಶಕ್ತಿಯನ್ನು ಸಮರ್ಥಿಸಬಹುದೇ ?

**कामिनीचरणाभिघातदोहदादिभिरशोकपुष्पोत्कर्ष-दर्शनादपि नाधेयशक्तिसिद्धिः, समयविशेषावच्छिन्नचरण-दोहदादिसंयोगध्वंसस्यैव कारणत्वात् । चरणाभिघाताद्याकृष्ट-भागान्तरजनितवृक्षादेववातदुपपत्तेः।कालान्तरेपुष्पाद्युत्कर्षात् वृक्षावयवोपचयावश्यम्भावेन वृक्षभेदावश्यकत्वात् ।**

ಕಾಮಿನೀಪದಾಘಾತರೂಪವಾದ ದೋಹದ (ಬಯಕೆ) ದಿಂದ ಅಶೋಕ ವೃಕ್ಷದಲ್ಲಿ ಪುಷ್ಪೋತ್ಕರ್ಷವು ಕಾಣುವುದರಿಂದಲೂ ಆಧೇಯ ಶಕ್ತಿಯು ಸಿದ್ಧವಾಗುವುದಿಲ್ಲ. ಅಲ್ಲಿಯೂ ಕೂಡ ಸಮಯವಿಶೇಷಾವಚ್ಛಿನ್ನ ಚರಣಸಂಯೋಗ ಧ್ವಂಸವೇ ಪುಷ್ಪೋತ್ಕರ್ಷವನ್ನು ಕುರಿತು ಕಾರಣವಾಗುತ್ತದೆ. ಅಥವಾ ಚರಣಾಭಿಘಾತವನ್ನು ಹೊಂದಿದ ವೃಕ್ಷದ ಭಾಗಕ್ಕಿಂತ ಭಿನ್ನವಾದ ವೃಕ್ಷದ ಭಾಗವೇ ಅಲ್ಲಿ ಪುಷ್ಪೋತ್ಕರ್ಷಕ್ಕೆ ಕಾರಣ. ಏಕೆಂದರೆ ಕಾಲಾಂತರದಲ್ಲಿ ಪುಷ್ಪದ ಉತ್ಕರ್ಷ ಉಂಟಾಗುವುದರಿಂದ ವೃಕ್ಷದ ಅವಯವಗಳಿಗೆ ಉಪಚಯವಾದರೆ ವೃಕ್ಷಭೇದವನ್ನು ಅವಶ್ಯವಾಗಿ ಅಂಗೀಕರಿಸಬೇಕಾಗುವುದರಿಂದ ಅಲ್ಲಿ ಆ ಭಿನ್ನವಾದ ವೃಕ್ಷವೇ ಕಾರಣವೆಂದು ಹೇಳಬಹುದು.

## ಭಸ್ಮಸಂಯೋಗಾದಿಗಳಿಗೆ ಶಕ್ತಿಯು ಸಿದ್ಧವಾಗಬಹುದೇ ?

**नापि ताम्रकांस्यादावस्तु भस्मसंयोगादिजन्यशुद्धिरूपा आधेयशक्तिः । तत्संयोगध्वंसस्य संयोगसमानकालीनास्पृश्य-स्पर्शादिप्रतियोगिकयावदनादिसंसर्गाभावसहितस्य शुद्धि-पदार्थत्वात् । भस्मादिसंयोगजनितः कांस्याद्युपभोक्तृनिष्ठः संस्कार एव शुद्धिरित्यन्ये ।।**

ಅಥವಾ ತಾಮ್ರ, ಕಂಚು ಮೊದಲಾದವುಗಳಿಗೆ ಭಸ್ಮಸಂಯೋಗಾದಿಗಳಿಂದ ಶುದ್ಧಿಯಾಗುವುದರಿಂದಲೂ ಆಧೇಯ ಶಕ್ತಿಯು ಸಿದ್ಧವಾಗುವುದಿಲ್ಲ. ಅಲ್ಲಿಯೂ ಕೂಡ ಭಸ್ಮಾದಿ ಸಂಯೋಗಧ್ವಂಸವಿದೆ. ಅನಾದಿಕಾಲೀನ ದುಷ್ಪಸ್ಪರ್ಶ ಸಂಸರ್ಗಾಭಾವ ಸಹಿತವಾದ ಭಸ್ಮಸಂಯೋಗಧ್ವಂಸವೇ ಶುದ್ಧಿ ಪದಾರ್ಥರೂಪವಾದುದು. ಆದ್ದರಿಂದ ಅಲ್ಲಿಯೂ ಶುದ್ಧಿ ಎಂಬ ಆಧೇಯಶಕ್ತಿಯನ್ನು ಅಂಗೀಕರಿಸಬೇಕಾದ ಅಗತ್ಯವಿಲ್ಲ. ನವ್ಯರಾದರೂ ಭಸ್ಮಾದಿ ಸಂಯೋಗದಿಂದ ಕಂಚು ಮೊದಲಾದವುಗಳನ್ನು ಉಪಯೋಗಿಸುವ ಪುರುಷನಲ್ಲಿ ಒಂದು ಸಂಸ್ಕಾರ ಉಂಟಾಗುತ್ತದೆ. ಅದೇ ಶುದ್ಧಿ ಪದಾರ್ಥ ಎಂದು ಹೇಳುತ್ತಾರೆ.

## ಅಭಿಮಂತ್ರಿತವಾದ ಕ್ಷೀರಪಲ್ಲವಾದಿ ಸ್ಥಳಗಳಲ್ಲಿ ಹೇಗೆ ?

**अभिमन्त्रितपयःपल्लवादावपि समयविशेषावच्छिन्नाभिमन्त्रणध्वंसएवव्यथाद्यपनायकःतत्तन्मन्त्रदेवतासन्निधिरेववा। कलमबीजादीनामापरमाण्वन्तभङ्गे तत्र चावान्तरजात्यभावे नियतकलमजातीयादिसिद्धिरपि परमाणुपाकजविशेषादेव। कार्यवृत्तिरूपादिसजातीयस्य पूर्वरूपादिविजातीयस्य परमाणौ पाकजरूपादेरुभयसिद्धत्वात् । यथाहि कलमबीजं यवादेर्जात्या व्यावर्त्यते तथा तत्परमाणवोऽपि पाकजैरेव ।**

ಅಭಿಮಂತ್ರಿತವಾದ ಕ್ಷೀರಪಲ್ಲವಾದಿಗಳಲ್ಲಿಯೂ ಸಮಯವಿಶೇಷಾವಚ್ಛಿನ್ನವಾದ ಅಭಿಮಂತ್ರಣಧ್ವಂಸವೇ ದುಃಖಾದಿ ಪರಿಹಾರಕವಾದುದು. ಹಾಗಾದರೆ ಯಾಗಸ್ಥಳದಲ್ಲಿಯೂ ಕೂಡ ಸಮಯವಿಶೇಷಾವಚ್ಛಿನ್ನವಾದ ಯಾಗಧ್ವಂಸವೇ ಸ್ವರ್ಗಜನಕವೆಂದು ಕಲ್ಪಿಸಿ ಅಪೂರ್ವವನ್ನು ಕಲ್ಪಿಸುವ ಅಗತ್ಯವಿಲ್ಲ ಎಂದು ಶಂಕಿಸಬಾರದು. ಏಕೆಂದರೆ ಶ್ರುತಿಯೇ ಯಾಗಕ್ಕೂ ಮತ್ತು ಸ್ವರ್ಗಕ್ಕೂ ಕಾರ್ಯಕಾರಣಭಾವವನ್ನು ಹೇಳುತ್ತದೆ.

ಅಥವಾ ಅಭಿಮಂತ್ರಿತ ಕ್ಷೀರಪಲ್ಲವಾದಿ ಸ್ಥಳದಲ್ಲಿ ಆ ಕ್ಷೀರಪಲ್ಲವಗಳಲ್ಲಿರುವ ಮಂತ್ರದೇವತಾ-ಸನ್ನಿಧಿಯೇ ದುಃಖಾದಿಗಳನ್ನು ಪರಿಹರಿಸುತ್ತದೆ ಎಂದು ಹೇಳಬಹುದು. ಕಲಮಬೀಜಾದಿಗಳನ್ನು ಭೂಮಿಯಲ್ಲಿ ಹಾಕಿದಾಗ ಅಥರಲ್ಲಿ ಪರಮಾಣು ಪರ್ಯಂತವಾಗಿ ಭಂಗವುಂಟಾಗಿ ಅದರಲ್ಲಿ

ಬೇರೆ ಅವಾಂತರ ಜಾತಿಯಿಲ್ಲದಿರುವುದರಿಂದ ನಿಯತವಾದ ಕಲಮಜಾತೀಯವಾದ ಅಂಕುರ ಉತ್ಪತ್ತಿಯಾಗುವುದೂ ಸಹ ಆ ಪರಮಾಣುಗಳಲ್ಲಿ ಪಾಕದಿಂದ ಉಂಟಾದ ವಿಶೇಷದಿಂದಲೇ. ಏಕೆಂದರೆ ಕಾರ್ಯಗತರೂಪಕ್ಕೆ ಸಜಾತೀಯವೂ ಪೂರ್ವರೂಪಕ್ಕೆ ವಿಜಾತೀಯವೂ ಆದ ರೂಪವು ಪರಮಾಣುವಿನಲ್ಲಿ ಪಾಕದಿಂದ ಉಂಟಾಗುತ್ತದೆ ಎಂದು ಉಭಯವಾದಿ ಸಿದ್ಧವಾಗಿದೆ. ಹೇಗೆ ಕಲಮಬೀಜವು ಯವಬೀಜಕ್ಕಿಂತ ಜಾತ್ಯಾಭಿನ್ನವಾಗಿದೆಯೋ ಅದರಂತೆ ಕಲಮಬೀಜದ ಪರಮಾಣುಗಳೂ ಕಲಮಬೀಜದ ಪಾಕಜ ಪರಮಾಣುಗಳಿಗಿಂತ ಜಾತ್ಯಾಭಿನ್ನವಾಗಿವೆ.

## ಮಾಘಮಾಸದ ಪಾಕಪರಮಾಣುವಿನ ಕಾರ್ಯ

**एवं माघकर्षणजनितात् परमाणुपाकपरम्पराविशेषादेव हैमन्तिकसस्योत्पत्तिः ।**

**एतेन लाक्षारसावसेकादयो व्याख्याताः । निमित्तविशेषजनितपाकजात् तत्फलविशेषः यथा हारीतमांसं हरिद्रानलसाधितमुपयोगात् सद्यो व्यापादयति नान्यथा साधितमित्यादि ।**

ಅದರಂತೆ ಮಾಘಮಾಸದಲ್ಲಿ ಭೂಮಿಯಲ್ಲಿ ಉಳುವುದರಿಂದ ಉಂಟಾಗುವ ಪರಮಾಣು ಪಾಕಪರಂಪರೆಯ ವಿಶೇಷದಿಂದಲೇ ಹೇಮಂತದಲ್ಲಿ ಸಸ್ಯೋತ್ಪತ್ತಿ ಉಂಟಾಗುತ್ತದೆ. ಬೀಜಪೂರ ವೃಕ್ಷಕ್ಕೆ ಲಾಕ್ಷಾರಸವನ್ನು ಲೇಪಿಸುವುದರಿಂದ ಬೀಜಪೂರದ ಕುಸುಮಗಳು ಕೆಂಪಾಗುತ್ತವೆ.

ಲಾಕ್ಷಾರಸವು ಪೂರ್ಣವಾಗಿ ಬಿದ್ದುಹೋಗಿರುವುದರಿಂದ ಅಲ್ಲಾದರೂ ಆಧೇಯಶಕ್ತಿಯನ್ನು ಕಲ್ಪನೆಮಾಡಬೇಕು ಎಂದು ಹೇಳಬೇಕಾಗಿಲ್ಲ. ಅಲ್ಲಿಯೂ ಕೂಡ ಲಾಕ್ಷಾರಸಲೇಪದಿಂದ ಉಂಟಾದ ಪಾಕದಿಂದ ಉಂಟಾದ ವಿಶೇಷವೇ ಕುಸುಮಗಳ ಕೆಂಪುಬಣ್ಣಕ್ಕೆ ಕಾರಣವಾಗುತ್ತದೆ. ಹಾರೀತ ಪಕ್ಷಿಯ ಮಾಂಸವನ್ನು ಅರಿಶಿನದ ಗಿಡದ ಬೆಂಕಿಯಲ್ಲಿ ಬೇಯಿಸಿ ಉಪಯೋಗಿಸಿದರೆ ಸದ್ಯದಲ್ಲೇ ಮರಣವನ್ನು ಉಂಟು ಮಾಡುತ್ತದೆ. ಆದರೆ ಬೇರೆ ರೀತಿಯಲ್ಲಿ ಬೇಯಿಸಿದರೆ ಮರಣವುಂಟಾಗುವುದಿಲ್ಲ ಎಂಬುದು ಹೇಗೆ ಪಾಕಜವಿಶೇಷದಿಂದಲೇ ಉಪಪನ್ನವಾಗುತ್ತದೆಯೋ ಅದರಂತೆ ಇಲ್ಲಿಯೂ ಕೂಡ.

## ಪಾಕಜನ್ಯವಾದ ವಿಶೇಷವಿಲ್ಲದಿದ್ದಾಗ

**यत्र च तोयतेजोवायुषु न पाकजो विशेषस्तत्रोद्भवानुद्भवकठिनत्वादयो विशेषास्तत्तदुपनायकादृष्टविशेषादेव । तुलादौ चाधिवासपूर्वकतुलारोहणसामग्री तुल्यस्य सत्यासत्य-प्रतिज्ञात्वसहिता प्राचीनधर्माधर्मफले तज्जयभङ्गौ जनयति ।**

ಎಲ್ಲಿ ಜಲತೇಜಸ್ಸು ಮತ್ತು ವಾಯುಗಳಲ್ಲಿ ಪಾಕಜನ್ಯವಾದ ಯಾವ ವಿಶೇಷವೂ ಇಲ್ಲವೋ ಅಲ್ಲಿ ಉದ್ಭೂತತ್ವ, ಅನುದ್ಭೂತತ್ವ, ಕಠಿಣತ್ವ ಮೊದಲಾದ ಧರ್ಮಗಳು ಅದಕ್ಕೆ ಪ್ರಯೋಜಕವಾದ ಅದೃಷ್ಟವಿಶೇಷದಿಂದಲೇ ಉಂಟಾಗುತ್ತವೆ. ಮೇಲೆ ಹೇಳಿದ ಕ್ಷೀರಾದಿ ಯಾವ ಸ್ಥಳದಲ್ಲಿಯೂ ಆಧೇಯ ಶಕ್ತಿಯನ್ನು ಅಂಗೀಕರಿಸಬೇಕಾಗಿಲ್ಲ. ತುಲಾದಿ ವಿಧಿಯಲ್ಲಿ ಅಧಿವಾಸಾದಿ ನಿಯಮಪೂರ್ವಕವಾಗಿ ಮಾಡಿದ ತುಲಾರೋಹಣ ಸಾಮಗ್ರಿಯು ತುಲೆಯಲ್ಲಿ ಕುಳಿತುಕೊಳ್ಳುವ ಪುರುಷನ ಸತ್ಯಾಸತ್ಯ ಪ್ರತಿಜ್ಞಾಸಹಿತವಾಗಿ ಪ್ರಾಚೀನ ಧರ್ಮ ಮತ್ತು ಅಧರ್ಮಗಳ ಫಲವಾದ ಜಯ ಅಥವಾ ಪರಾಭವಗಳನ್ನು ಉಂಟುಮಾಡುತ್ತದೆ.

## 'ಅಹಂ ನಿಷ್ಪಾಪಃ ಪಾಪವಾನ್ ವಾ'

**यद्वा 'अहं निष्पापः पापवान् वा' इति तुलाधिरूढाभिशस्त-ज्ञानविशेषसहिता सा तथा । तदाहुः – 'तांस्तु देवाः प्रपश्यन्ति स्वश्चैवान्तरपुरुषः' इति ।**

ಅಥವಾ ತುಲಾದಲ್ಲಿ ಕುಳಿತುಕೊಳ್ಳುವ ಪುರುಷನ ನಾನು ನಿಷ್ಪಾಪಿಯೋ ಅಥವಾ ಪಾಪಿಯೋ ಎಂಬ ಪ್ರಶಸ್ತವಾದ ಜ್ಞಾನವಿಶೇಷ ಸಹಿತವಾದ ತುಲಾರೋಹಣ ಸಾಮಗ್ರಿಯೇ ಫಲಜನಕವಾಗಿದೆ. ಅಂತಹ ಪುರುಷರನ್ನು ದೇವತೆಗಳು ಮತ್ತು ಅಂತರ್ಯಾಮಿಯಾದ ಪುರುಷನು ನೋಡುತ್ತಾರೆ ಎಂಬ ಪ್ರಮಾಣವು ಇದಕ್ಕೆ ಅನುಕೂಲವಾಗಿದೆ.

## ತುಲಾರೋಹಣ ಸಾಮಗ್ರಿಯಿಂದ ಧರ್ಮಾಧರ್ಮಗಳು

**अथ वा प्रतिज्ञाशुद्ध्यशुद्धी अपेक्ष्य तया धर्माधर्मौ जन्येते। ताभ्याश्च जयपराजयौ । सत्यासत्यप्रतिज्ञाभिशस्त-तुलारोहणस्येष्टानिष्टफलत्वेनार्थतो विधिनिषेधात् । 'अभिशस्तः सत्यप्रतिज्ञो विजयकामस्तुलामारोहेद-सत्यप्रतिज्ञो न तुलामारोहेत्' इति श्रुतेरुन्नयनात् । यद्वा तया देवतासन्निधिः क्रियते ताश्च कर्मानुरूपं लिङ्गमभिव्यञ्जयन्ति।।**

ಅಥವಾ ತುಲಾರೋಹಣಸ್ಥಳದಲ್ಲಿ ಪ್ರತಿಜ್ಞೆಯ ಶುದ್ಧಿ ಮತ್ತು ಅಶುದ್ಧಿಗಳನ್ನು ಅನುಸರಿಸಿ (ಸತ್ಯತ್ವ ಮತ್ತು ಮಿಥ್ಯಾತ್ವಗಳನ್ನು ಅನುಸರಿಸಿ) ತುಲಾರೋಹಣ ಸಾಮಗ್ರಿಯಿಂದ ಧರ್ಮಾಧರ್ಮಗಳು ಉಂಟಾಗುತ್ತವೆ. ಆ ಧರ್ಮಾಧರ್ಮಗಳು ಜಯಪರಾಜಯಗಳಿಗೆ ಕಾರಣವಾಗುತ್ತವೆ. ಸತ್ಯಾಸತ್ಯ ಪ್ರತಿಜ್ಞಾ ಪೂರ್ವಕವಾಗಿ ಮಾಡಿದ ವಿಧಿಪೂರ್ವಕವಾದ ತುಲಾರೋಹಣವು ಇಷ್ಟಾನಿಷ್ಟ ಫಲಗಳನ್ನು ಕೊಡುವುದರಿಂದ ಅರ್ಥತಃ ವಿಧಿನಿಷೇಧಗಳು ಲಭ್ಯವಾಗುವುದರಿಂದ ಅಭಿಶಸ್ತನಾದವನು, ಜಯಕಾಮವುಳ್ಳವನು ಸತ್ಯಪ್ರತಿಜ್ಞೆಯನ್ನು ಮಾಡಿ ತುಲಾರೋಹಣವನ್ನು ಮಾಡಬೇಕು, ಅಸತ್ಯಪ್ರತಿಜ್ಞೆಯನ್ನು ಮಾಡಿದವನು ತುಲಾರೋಹಣವನ್ನು ಮಾಡಬಾರದು ಎಂಬ ಶ್ರುತಿಯನ್ನು ಅನುಮಾನ ಮಾಡಬಹುದು.

ಅಥವಾ ಅಂತಹ ತುಲಾರೋಹಣ ಸಾಮಗ್ರಿಯಿಂದ ದೇವತಾ ಸನ್ನಿಧಾನವು ಆ ಪುರುಷನಲ್ಲಿ ಉಂಟಾಗುತ್ತದೆ. ಆ ದೇವತೆಗಳೇ ಆ ಪುರುಷನ ಕರ್ಮಾನುರೂಪವಾದ ಫಲವನ್ನು ಕೊಡುತ್ತಾರೆ ಎಂದು ಹೇಳಬಹುದಾದ್ದರಿಂದ ಎಲ್ಲಿಯೂ ಆಧೇಯಶಕ್ತಿಯನ್ನು ಕಲ್ಪನೆ ಮಾಡಬೇಕಾದ ಪ್ರಸಂಗವಿಲ್ಲ.

## ಶಕ್ತಿ ಪದದ ಅರ್ಥವೇನು ?

**कस्तर्हि शक्तिपदस्यार्थः । कारणत्वम् । तच्च**

**स्वस्वव्याप्येतरसकलसम्पत्तौ कार्याभावव्यापकाभाव-प्रतियोगित्वम् ।।**

ಹಾಗಾದರೆ ಶಕ್ತಿ ಎಂಬ ಪದದ ಅರ್ಥವೇನು ಎಂದು ಕೇಳಿದರೆ ಕಾರಣತ್ವ ಎಂದೇ ಹೇಳುತ್ತೇವೆ. ಆ ಕಾರಣತ್ವವನ್ನು ಅನೇಕ ವಿಧವಾಗಿ ನಿರೂಪಣೆ ಮಾಡಬಹುದು. ತಾನು ಮತ್ತು ತನಗೆ ವ್ಯಾಪ್ಯವಾದ ಪದಾರ್ಥಗಳನ್ನು ಬಿಟ್ಟು ಉಳಿದೆಲ್ಲ ಸಾಮಗ್ರಿಗಳು ಇರುವಾಗ ಕಾರ್ಯಾಭಾವ ವ್ಯಾಪಕವಾದ ಅಭಾವಕ್ಕೆ ಯಾವುದು ಪ್ರತಿಯೋಗಿಯೋ ಅದು ಕಾರಣವೆಂದು ಹೇಳಬಹುದು. (ಸ್ವಸ್ವ ವ್ಯಾಪ್ಯೇತರ ಸಕಲ ಸಂಪತ್ತೌ ಕಾರ್ಯಾಭಾವ ವ್ಯಾಪಕಾಭಾವ ಪ್ರತಿಯೋಗಿತ್ವಂ) ಮತ್ತು ಇನ್ನೂ ಅನೇಕ ರೀತಿಯಲ್ಲಿ ಪರಿಷ್ಕಾರ ಮಾಡಬಹುದು.

## ಕಾರಣ ಪದದ ಅರ್ಥ

**अथवा यत्र कार्याभावव्याप्यता इतराभावावच्छिन्ना तत्कारणम् । बीजेऽङ्कुराभावव्याप्यता न बीजत्वेनावच्छिद्यते। इतरसमवधाने सति बीजादङ्कुरसम्भवात् ।**

(೨) ಎಲ್ಲಿ ಕಾರ್ಯಾಭಾವ ವ್ಯಾಪ್ಯತ್ವವು ಇತರಾಭಾವಾವಚ್ಛಿನ್ನವಾಗುತ್ತದೆಯೋ ಅದು ಕಾರಣ ಎಂದು ಹೇಳಬಹುದು. ಬೀಜದಲ್ಲಿ ಅಂಕುರಾಭಾವ ವ್ಯಾಪ್ಯತ್ವವು ಬೀಜತ್ವಾವಚ್ಛಿನ್ನವಾಗುವುದಿಲ್ಲ. ಏಕೆಂದರೆ ಇತರ ಸಮವಧಾನವಿರುವಾಗ ಬೀಜದಿಂದ ಅಂಕುರದ ಉತ್ಪತ್ತಿಯಾಗುತ್ತದೆ. ಅಲ್ಲಿ ಅಂಕುರಾಭಾವವಿಲ್ಲ. ಆಗಲೂ ಬೀಜತ್ವವಿರುವುದರಿಂದ ಬೀಜತ್ವಾವಚ್ಛಿನ್ನದಲ್ಲಿ ಅಂಕುರಾಭಾವವ್ಯಾಪ್ಯತ್ವವು ಬರುವುದಿಲ್ಲ.

## ಕಲ್ಲಿನ ಚೂರಿನಿಂದ ಅಂಕುರ ಹುಟ್ಟದು

**किन्त्वितराभावेनावच्छिद्यते । इतराभावे बीजस्याङ्कुराभाव-नियमात् । शिलाशकले त्वङ्कुराभावव्याप्यता शिलात्वेनैवा-वच्छिद्यते।**

ಆದರೆ ಬೀಜದಲ್ಲಿರುವ ಅಂಕುರಾಭಾವ ವ್ಯಾಪ್ಯತ್ವವು ಇತರಾಭಾವ ಅವಚ್ಛಿನ್ನವಾಗುತ್ತದೆ. ಏಕೆಂದರೆ ಇತರ ಸಾಮಗ್ರಿಗಳು ಇಲ್ಲದಿರುವಾಗ ಬೀಜದಿಂದ ಅಂಕುರದ ಉತ್ಪತ್ತಿಯಾಗುವುದೇ ಇಲ್ಲ. ಆದ್ದರಿಂದ ಆಗ ಅಂಕುರಾಭಾವ ವ್ಯಾಪ್ಯತ್ವವು ಇತರಾಭಾವಾವಚ್ಛಿನ್ನವಾಗುತ್ತದೆ. ಕಲ್ಲಿನ ಚೂರಿನಿಂದ (ಶಿಲಾಶಕಲದಿಂದ) ಎಂದೂ (ಯಾವ ಸಮವಧಾನವಿದ್ದರೂ) ಅಂಕುರವು ಉತ್ಪತ್ತಿಯಾಗುವುದಿಲ್ಲ. ಆದ್ದರಿಂದ ಶಿಲಾಶಕಲನಿಷ್ಠ ಅಂಕುರಾಭಾವ ವ್ಯಾಪ್ಯತ್ವವು ಶಿಲಾತ್ವಾವಚ್ಛಿನ್ನವಾಗುತ್ತದೆ. ಹೀಗೆ ಬೀಜಕ್ಕೂ ಶಿಲೆಗೂ ವ್ಯತ್ಯಾಸವಿದೆ.

## ಅನ್ಯಾಸಮವಧಾನಾವಚ್ಛಿನ್ನಕಾರ್ಯಾನುತ್ಪತ್ತಿ ವ್ಯಾಪ್ಯತ್ವವೇ ಕಾರಣತ್ವ

**यद्वा अन्यासमवधानावच्छिन्नकार्यानुत्पत्तिव्याप्यत्वं कारणत्वम्, रासभादेः स्वत एव कार्याभावव्याप्यता अन्यासमवधानस्य वैयर्थ्येनानवच्छेदकत्वात् । अनन्यथा-सिद्धनियतपूर्ववर्तिजातीयत्वं वा तत्त्वम् ।**

ಅಥವಾ ಯಾವ ವಸ್ತುವಿನಲ್ಲಿರುವ ಕಾರ್ಯಾನುತ್ಪತ್ತಿ ವ್ಯಾಪ್ಯತ್ವವು ಅನ್ಯ ಅಸಮವಧಾನ ಅವಚ್ಛಿನ್ನವಾಗುತ್ತದೆಯೋ ಅದು ಕಾರಣ. ರಾಸಬಾಧಿಗಳಿಗೆ ಘಟದ ವಿಷಯದಲ್ಲಿ ಕಾರ್ಯಭಾವ ವ್ಯಾಪ್ಯತ್ವವು ಸ್ವತ ಏವ ಇದೆ. ಅನ್ಯ ಅಸಮವಧಾನವು ಅಲ್ಲಿ ವ್ಯರ್ಥವಾದುದರಿಂದ ರಾಸಭದಲ್ಲಿರುವ ಘಟಾಭಾವ ವ್ಯಾಪ್ಯತ್ವವು ರಾಸಭಾತ್ವಾವಚ್ಛಿನ್ನವಾಗುತ್ತದೆಯೇ ಹೊರತು ಅನ್ಯ ಅಸಮವಧಾನಾ-ವಚ್ಛಿನ್ನವಾಗುವುದಿಲ್ಲ.

## ಅನ್ಯಥಾಸಿದ್ಧಿಯು ಮೂರು ವಿಧ

**अन्यथासिद्धत्वञ्च त्रिधा । येन सहैव यस्य यं प्रति पूर्ववर्त्तित्वमवगम्यते, यथा घटं प्रति दण्डरूपस्य । अन्यं प्रति पूर्ववर्त्तित्वे ज्ञाते एव यं प्रति यस्य पूर्ववर्त्तित्वमवगम्यते, यथा शब्दं प्रति पूर्ववर्त्तित्वे ज्ञात एव ज्ञानं प्रत्याकाशस्य ।**

ಅನನ್ಯಥಾಸಿದ್ಧ ನಿಯತಪೂರ್ವವರ್ತಿ ಜಾತೀಯತ್ವಂ ಕಾರಣತ್ವಂ ಎಂದೂ ಹೇಳಬಹುದು. ಅನ್ಯಥಾಸಿದ್ಧಿಯು ಮೂರು ವಿಧವಾದುದು.

ಯಾವುದನ್ನು ಕುರಿತು ಯಾವುದರ ಪೂರ್ವವೃತ್ತಿತ್ವವು ಇನ್ನೊಂದರ ಪೂರ್ವವೃತ್ತಿತ್ವದ ಜೊತೆಯಲ್ಲಿಯೇ ಗೃಹೀತವಾಗುತ್ತದೆಯೋ ಅದು ಅನ್ಯಥಾ ಸಿದ್ಧವಾದುದು. ಘಟವನ್ನು ಕುರಿತು ದಂಡರೂಪಕ್ಕೆ ಪೂರ್ವವೃತ್ತಿತ್ವವು ಗೃಹೀತವಾಗುವಾಗ ದಂಡದ ಪೂರ್ವವೃತ್ತಿತ್ವಗ್ರಹದ ಜೊತೆಯಲ್ಲಿಯೇ ಗೃಹೀತವಾಗುತ್ತದೆ. ಆದ್ದರಿಂದ ಘಟವನ್ನು ಕುರಿತು ದಂಡರೂಪವು ಅನ್ಯಥಾ ಸಿದ್ಧವಾಗುತ್ತದೆ.

## ಮೂರು ಬಗೆಯ ಅನ್ಯಥಾಸಿದ್ಧಿಗಳು

**अन्यत्र क्लृप्तनियतपूर्ववर्तिन एव कार्यसम्भवे तत्सहभूतत्वम्, यथा गन्धवति गन्धानुत्पादाद् गन्धं प्रति तत्प्रागभावस्य नियतपूर्ववर्तित्वकल्पनात् पाकजस्थले गन्धं प्रति रूपादिप्रागभावादीनामप्यन्यथासिद्धत्वम् ।**

(ಅ) ಇನ್ನೊಂದು ವಸ್ತುವನ್ನು ಕುರಿತು ಪೂರ್ವವೃತ್ತಿತ್ವವು ಜ್ಞಾತವಾದ ಮೇಲೆ ಯಾವ ವಸ್ತುವನ್ನು ಕುರಿತು ಪೂರ್ವವೃತ್ತಿತ್ವವು ಜ್ಞಾತವಾಗುತ್ತದೆಯೋ ಅದೂ ಅನ್ಯಥಾ ಸಿದ್ಧವಾದುದು. ಶಬ್ದವನ್ನು ಕುರಿತು ಪೂರ್ವವೃತ್ತಿತ್ವವು ಜ್ಞಾತವಾದ ಮೇಲೆ ಆಕಾಶಕ್ಕೆ ಜ್ಞಾನವನ್ನು ಕುರಿತು ಪೂರ್ವವೃತ್ತಿತ್ವವು ಜ್ಞಾತವಾಗುತ್ತದೆ. ಆದ್ದರಿಂದ ಜ್ಞಾನವನ್ನು ಕುರಿತು ಆಕಾಶವು ಅನ್ಯಥಾ ಸಿದ್ಧವಾಗುತ್ತದೆ.

(ಇ) ಬೇರೆ ಕಡೆಯಲ್ಲಿ ಕ್ಲಪ್ತವಾದ ನಿಯತಪೂರ್ವವರ್ತಿಗಳಿಂದಲೇ ಕಾರ್ಯವು ಉಂಟಾಗುವುದಾದರೆ ಆ ನಿಯತಪೂರ್ವವರ್ತಿಗಳ ಸಹಚರವಾದುದು ಅನ್ಯಥಾ ಸಿದ್ಧವಾಗುತ್ತದೆ. ಗಂಧವಿರುವಲ್ಲಿ ಗಂಧೋತ್ಪತ್ತಿಯಾಗುವುದಿಲ್ಲ ಎಂಬ ಕಾರಣದಿಂದ ಗಂಧವನ್ನು ಕುರಿತು ಗಂಧಪ್ರಾಗಭಾವವು ನಿಯತಪೂರ್ವವರ್ತಿ ಎಂದು ಸಿದ್ಧವಾಗಿದೆ. ಪಾಕಜಸ್ಥಳದಲ್ಲಿ ಗಂಧೋತ್ಪತ್ತಿಯಾಗುವಾಗ ಗಂಧೋತ್ಪತ್ತಿ ಪೂರ್ವದಲ್ಲಿ ಅಲ್ಲಿ ಗಂಧಪ್ರಾಗಭಾವವೂ ರೂಪಾದಿ ಪ್ರಾಗಭಾವವೂ ಇದೆ. ಆದರೆ ಗಂಧವನ್ನು ಕುರಿತು ಗಂಧಪ್ರಾಗಭಾವವು ಕ್ಲಪ್ತನಿಯತಪೂರ್ವವರ್ತಿ

ಎಂದು ಸಿದ್ಧವಾಗಿರುವುದರಿಂದ ಪಾಕಜ ಸ್ಥಳದಲ್ಲಿ ಗಂಧವನ್ನು ಕುರಿತು ಗಂಧಪ್ರಾಗಭಾವವೇ ಕಾರಣ. ರೂಪಪ್ರಾಗಭಾವವು ಅನ್ಯಥಾ ಸಿದ್ಧವೆಂದು ಹೇಳಲ್ಪಡುತ್ತವೆ.

## ಏತತ್-ತ್ರಿತಯವ್ಯತಿರೇಕನಿಯತಪೂರ್ವವರ್ತಿತ್ವವೇ ಕಾರಣತ್ವ

**एतत् त्रितयव्यतिरेकनियतपूर्ववर्तित्वं कारणत्वम् ।**

ಈಮೂರುರೀತಿಅನ್ಯಥಾಸಿದ್ಧವಲ್ಲದನಿಯತಪೂರ್ವವರ್ತಿಯಾದುದುಕಾರಣವೆಂದೆನಿಸುತ್ತದೆ. ನಿಯತಪೂರ್ವವರ್ತಿ ಎಂದರೆ ನಿಯತಪೂರ್ವವರ್ತಿಜಾತೀಯ ಎಂದು ಅಭಿಪ್ರಾಯ. ಏಕೆಂದರೆ ಒಂದೇ ದಂಡವು ಎಲ್ಲಾ ಘಟೋತ್ಪತ್ತಿ ಸ್ಥಳದಲ್ಲಿಯೂ ಇರುವುದಿಲ್ಲ. ದಂಡಜಾತೀಯವಾದುದು ಇರುತ್ತದೆ. ದಂಡಜಾತೀಯ ಎಂದರೆ ಪೂರ್ವವರ್ತಿತಾವಚ್ಛೇದಕ ರೂಪವುಳ್ಳದ್ದು ಎಂದು ಅರ್ಥ. ಅಂತಹ ಅವಚ್ಛೇದಕ ರೂಪ ಇಲ್ಲಿ ದಂಡತ್ವವಾಗುತ್ತದೆ. ಆದ್ದರಿಂದ ಎಲ್ಲಿ ಘಟತ್ವಾವಚ್ಛಿನ್ನವು ಉತ್ಪನ್ನವಾದರೂ ಅಲ್ಲಿ ದಂಡತ್ವಾವಚ್ಛಿನ್ನವಾದುದು ಇರುತ್ತದೆ ಎಂದು ಅಭಿಪ್ರಾಯ.

## ಅಪೂರ್ವಕ್ಕೆ ಸ್ವರ್ಗಸಾಧನತ್ವ ಹೇಗೆ ?

**यागापूर्वयोस्तु यागपूर्ववर्तित्वेऽवगते न त्ववगम्यमाने । यत्र जन्यस्य पूर्ववर्तित्वेऽवगते जनकस्य पूर्वभावोऽवगम्यते तत्र जन्येन जनकस्यान्यथासिद्धिः ।**

ಯಾಗ ಮತ್ತು ಅಪೂರ್ವಸ್ಥಳದಲ್ಲಿ ಮಾತ್ರ ಶ್ರುತಿಯಿಂದ ಯಾಗಕ್ಕೆ ಪೂರ್ವವರ್ತಿತ್ವವು ಅವಗತವಾದ ಮೇಲೆಯೇ ಅಪೂರ್ವಕ್ಕೆ ಪೂರ್ವವರ್ತಿತ್ವ ಅವಗತವಾಗುತ್ತದೆ. ಹೊರತಾಗಿ ಯಾಗದ ಜೊತೆಯಲ್ಲಿಯೇ ಅಪೂರ್ವಕ್ಕೆ ಸ್ವರ್ಗಕಾರಣತ್ವವು ಅವಗತವಾಗುವುದಿಲ್ಲ. ಯಾಗಕ್ಕೆ ಪೂರ್ವವರ್ತಿತ್ವವು ಅವಗತವಾದಮೇಲೆ ಆದರಲ್ಲಿ ಅನುಪಪತ್ತಿಯನ್ನು ಪ್ರತಿಸಂಧಾನ ಮಾಡಿ ಸ್ವರ್ಗಪೂರ್ವವರ್ತಿಯಾಗಿ ಅಪೂರ್ವವನ್ನು ಕಲ್ಪನೆಮಾಡುವುದರಿಂದ ಯಾಗದ ಜೊತೆಯಲ್ಲಿಯೇ ಅಪೂರ್ವಕ್ಕೆ ಸ್ವರ್ಗಸಾಧನತ್ವ ಗ್ರಹವು ಉಂಟಾಗುವುದಿಲ್ಲ.

## ಪೂರ್ವವರ್ತಿತ್ವಗ್ರಹವು ಮತ್ತೊಂದರ ಅಪೇಕ್ಷೆಯಿಲ್ಲದಿದ್ದಾಗ

**यत्र च जनकस्य तथात्वेऽवगते जन्यस्य पूर्वभावावगतिस्तत्र तद्द्वारा तस्य जनकत्वमेव । दण्डसंयोगभ्रमणयोस्तु युगपदेव पूर्वभावित्वग्रहः ।**

ಎಲ್ಲಿ ಜನ್ಯವಾದುದಕ್ಕೆ ಪೂರ್ವವರ್ತಿತ್ವವು ತಿಳಿದನಂತರ ಜನಕವಾದುದಕ್ಕೆ ಪೂರ್ವವರ್ತಿತ್ವವು ತಿಳಿಯುತ್ತದೆಯೋ ಅಲ್ಲಿ ಕಾರ್ಯವನ್ನು ಕುರಿತು ಜನ್ಯದಿಂದ ಜನಕಕ್ಕೆ ಅನ್ಯಥಾಸಿದ್ಧಿ ಉಂಟಾಗುತ್ತದೆ.

ಆದರೆ ಎಲ್ಲಿ ಜನಕಕ್ಕೆ ಪೂರ್ವವರ್ತಿತ್ವವು ತಿಳಿದು ಅನಂತರ ಜನ್ಯಕ್ಕೆ ಪೂರ್ವವರ್ತಿತ್ವವು ತಿಳಿಯುತ್ತದೆಯೋ ಅಲ್ಲಿ, ಜನಕಕ್ಕೆ ಜನ್ಯದ್ವಾರಾ ಕಾರ್ಯಜನಕತ್ವವು ಇರುತ್ತದೆ. ಅಲ್ಲಿ ಅನ್ಯಥಾಸಿದ್ಧಿ ಇರುವುದಿಲ್ಲ. ಯಾಗ ಮತ್ತು ಅಪೂರ್ವಸ್ಥಳಗಳು ಈ ಎರಡನೆಯ ರೀತಿಗೆ ಸೇರಿದುದು. ದಂಡಸಂಯೋಗ ಮತ್ತು ಚಕ್ರಭ್ರಮಣಗಳಿಗಾದರೆ ಏಕಕಾಲದಲ್ಲಿ ಘಟಪೂರ್ವವರ್ತಿತ್ವ ಗ್ರಹವು ಉಂಟಾಗುತ್ತದೆ. ಅವು ಸ್ವತಂತ್ರವಾಗಿ ಉಂಟಾಗುತ್ತವೆ. ಅಲ್ಲಿ ಒಂದೊಂದಕ್ಕೆ ಪೂರ್ವವರ್ತಿತ್ವಗ್ರಹವು ಇನ್ನೊಂದರ ಪೂರ್ವವರ್ತಿತ್ವ ಗ್ರಹದ ಸಾಹಿತ್ಯವನ್ನು ಅಪೇಕ್ಷಿಸುವುದಿಲ್ಲ. ಆದ್ದರಿಂದ ಘಟವನ್ನು ಕುರಿತು ದಂಡಸಂಯೋಗವೂ ಮತ್ತು ಚಕ್ರಭ್ರಮಣವೂ ಕಾರಣಗಳಾಗುತ್ತವೆ.

## ಯಾವುದು ಅನನ್ಯಥಾಸಿದ್ಧ

**स्वस्वानन्तरोत्पत्तिकेतरसकलसमवधाने सत्यपि यस्याभावात् कार्यं न जायते सति च जायते तज्जातीयं प्रति तदनन्यथासिद्धम्।।**

(ಅ) ತನ್ನ ಮತ್ತು ತನ್ನ ಅನಂತರ ಉತ್ಪತ್ತಿಯಾಗುವ ಸಕಲ ವಸ್ತುಗಳ ಸಮವಧಾನವು ಇರುವಾಗ, ಯಾವುದರ ಅಭಾವದಿಂದ ಕಾರ್ಯ ಉಂಟಾಗುವುದಿಲ್ಲವೋ, ಯಾವುದು ಇದ್ದರೆ ಕಾರ್ಯವುಂಟಾಗುತ್ತದೆಯೋ ಅಂತಹ ಕಾರ್ಯಜಾತೀಯವನ್ನು ಕುರಿತು ಆ ವಸ್ತುವು ಅನನ್ಯಥಾಸಿದ್ಧವೆಂದು ಹೇಳಬಹುದು.

ಈ ಕಾರಣತ್ವಪರಿಷ್ಕಾರಗಳಲ್ಲಿ ನಿಯತಪದವು ಮುಖ್ಯವಾದುದು. ನಿಯತಪೂರ್ವವರ್ತಿತ್ವ ಎಂಬಲ್ಲಿ ನಿಯತಪದವನ್ನು ಬಿಟ್ಟರೆ ಘಟಜಾತೀಯವನ್ನು ಕುರಿತು ರಾಸಭಜಾತೀಯವು ಒಂದೆಡೆ ಅನನ್ಯಥಾ ಸಿದ್ಧವಾಗುವುದರಿಂದ ರಾಸಭದಲ್ಲಿ ಅತಿವ್ಯಾಪ್ತಿಯು ಬರುತ್ತದೆ. ಆದ್ದರಿಂದ ನಿಯತತ್ವವನ್ನು ವಿಶೇಷಣವಾಗಿ ಕೊಡಬೇಕು. ಘಟಜಾತೀಯವನ್ನು ಕುರಿತು ರಾಸಭಕ್ಕೆ ನಿಯತಪೂರ್ವವರ್ತಿತ್ವವು ಇಲ್ಲ. ಆದ್ದರಿಂದ ಅತಿವ್ಯಾಪ್ತಿಯು ವಾರಣೆಯಾಗುತ್ತದೆ.

## ಕೆಲವರು ಹೇಳುವ ಕಾರಣತ್ವಲಕ್ಷಣ

**'अनन्यथासिद्धनियतपूर्ववर्त्तित्वं कारणत्वम्' इत्यन्ये । तन्न । ईश्वरतद्बुद्ध्यादीनामसङ्ग्रहात् । तद्व्यतिरेकस्य तत्समवधान-व्यतिरेकस्य वाऽभावात् ।**

ಅನನ್ಯಥಾ ಸಿದ್ಧ ನಿಯತಪೂರ್ವವರ್ತಿತ್ವವೇ ಕಾರಣತ್ವವೆಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಏಕೆಂದರೆ ಆಗ ಈಶ್ವರ ಮತ್ತು ಈಶ್ವರ ಜ್ಞಾನಗಳಿಗೆ ಕಾರಣತ್ವವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಈಶ್ವರ ವ್ಯತಿರೇಕವಾಗಲೀ, ಈಶ್ವರ ಬುದ್ಧಿವ್ಯತಿರೇಕವಾಗಲೀ ಅಥವಾ ಈಶ್ವರ ತದ್ಬುದ್ಧಿ ಸಮವಧಾನ ವ್ಯತಿರೇಕವಾಗಲೀ ಅಪ್ರಸಿದ್ಧವಾದುದರಿಂದ ತದ್ಘಟಿತ ಕಾರಣತ್ವವು ಈಶ್ವರ ತದ್ಬುದ್ಧಿಗಳಲ್ಲಿ ಬರುವುದಿಲ್ಲ.

## ಘಟಕ್ಕೆ ದಂಡವೇಕೆ ಅನನ್ಯಥಾಸಿದ್ಧ?

**कार्यस्यान्यथानुपपद्यमानताव्यवस्थाप्यत्वं वाऽनन्यथा-सिद्धत्वम् ।**

ಕಾರ್ಯಕ್ಕೆ ಯಾವುದು ಅನ್ಯಥಾ ಅನುಪಪದ್ಯಮಾನತ್ವವನ್ನು ವ್ಯವಸ್ಥಾಪನೆ ಮಾಡುತ್ತದೆಯೋ ಅದು ಅನನ್ಯಥಾಸಿದ್ಧವೆಂದು ಹೇಳಬಹುದು. ಘಟವನ್ನು ಕುರಿತು ದಂಡವು ತಾನಿಲ್ಲದಿದ್ದರೆ ಘಟಕ್ಕೆ ಅನುಪಪದ್ಯಮಾನತ್ವವನ್ನು ವ್ಯವಸ್ಥೆ ಮಾಡಿಕೊಡುತ್ತದೆ. ಆದ್ದರಿಂದ ದಂಡವು ಘಟವನ್ನು ಕುರಿತು ಅನನ್ಯಥಾಸಿದ್ಧವಾದುದು.

## ಅತೀಂದ್ರಿಯ ಶಕ್ತಿಯ ವಿಷಯದಲ್ಲಿ ಸಾಧಕ ಪ್ರಮಾಣವಿಲ್ಲ

**नन्वेवमतिरिक्तशक्तौ साधकबाधकप्रमाणाभावान्नित्यं संशयः । नच साधकाभावस्य बाधकत्वम्, बाधकाभावस्य साधकत्वादिति चेन्न । साधकाभावेन वह्नावन्यत्र सिद्धातीन्द्रियधर्माभाव-साधने लाघवं बाधकाभावेनातीन्द्रियधर्मसाधने च गौरवमिति साधकाभावात् तदभाव एव सिद्ध्यतीति ।।**

## इति शक्तिवादः ।।

ಹಾಗಾದರೆ, ಅತಿರಿಕ್ತಶಕ್ತಿಯ ವಿಷಯದಲ್ಲಿ ಸಾಧಕಪ್ರಮಾಣವೂ, ಬಾಧಕ ಪ್ರಮಾಣವೂ ಇಲ್ಲದಿರುವುದರಿಂದ ಯಾವಾಗಲೂ ಸಂಶಯ ಉಂಟಾಗುತ್ತದೆ. ಯಾವುದೊಂದು ಪಕ್ಷವೂ ನಿರ್ಣೀತವಾಗುವುದಿಲ್ಲ ಎಂಬ ಶಂಕೆಯು ಬರಬಹುದು. ಅಥವಾ ಸಾಧಕಾಭಾವವೇ ಬಾಧಕವಾದುದು, ಬಾಧಕಾಭಾವವೇ ಸಾಧಕವಾದುದು ಎಂಬ ಕಾರಣದಿಂದ ಯಾವಾಗಲೂ ಸಂಶಯಬರಬಹುದು ಎಂದೂ ಶಂಕಿಸಬಾರದು. ಸಾಧಕವಿಲ್ಲದಿರುವುದರಿಂದ ವಹ್ನಿಯಲ್ಲಿ ಅನ್ಯತ್ರಪ್ರಸಿದ್ಧವಾದ ಅತೀಂದ್ರಿಯ ಧರ್ಮವು ಇಲ್ಲವೆಂದು ಸಾಧನೆ ಮಾಡಿದರೆ ಲಾಘವವಿದೆ. ಬಾಧಕವು ಇಲ್ಲದಿರುವುದರಿಂದ ವಹ್ನಿಯಲ್ಲಿ ಅತೀಂದ್ರಿಯ ಧರ್ಮವಿದೆ ಎಂದು ಸಾಧನೆ ಮಾಡಿದರೆ ಗೌರವವು ಇದೆ. ಆ ಕಾರಣದಿಂದ ಸಾಧಕವು ಇಲ್ಲದಿರುವುದರಿಂದ ಅತೀಂದ್ರಿಯವಾದ ಶಕ್ತಿಯ ಅಭಾವವೇ ಸಿದ್ಧವಾಗುತ್ತದೆ.

ತತ್ವಚಿಂತಾಮಣಿಯಲ್ಲಿ ಶಕ್ತಿವಾದವು ಮುಗಿಯಿತು.

ಈ ಕಾರಣತ್ವಪರಿಷ್ಕಾರಗಳಲ್ಲಿ ನಿಯತಪದವು ಮುಖ್ಯವಾದುದು. ನಿಯತಪೂರ್ವವರ್ತಿತ್ವ ಎಂಬಲ್ಲಿ ನಿಯತಪದವನ್ನು ಬಿಟ್ಟರೆ ಘಟಜಾತೀಯವನ್ನು ಕುರಿತು ರಾಸಭಜಾತೀಯವು ಒಂದೆಡ ಅನನ್ಯಥಾ ಸಿದ್ಧವಾಗುವುದರಿಂದ ರಾಸಭದಲ್ಲಿ ಅತಿವ್ಯಾಪ್ತಿಯು ಬರುತ್ತದೆ. ಆದ್ದರಿಂದ ನಿಯತತ್ವವನ್ನು ವಿಶೇಷಣವಾಗಿ ಕೊಡಬೇಕು. ಘಟಜಾತೀಯವನ್ನು ಕುರಿತು ರಾಸಭಕ್ಕೆ ನಿಯತಪೂರ್ವವರ್ತಿತ್ವವು ಇಲ್ಲ. ಆದ್ದರಿಂದ ಅತಿವ್ಯಾಪ್ತಿಯು ವಾರಣೆಯಾಗುತ್ತದೆ.

## ಕೆಲವರು ಹೇಳುವ ಕಾರಣತ್ವಲಕ್ಷಣ

**'अनन्यथासिद्धनियतपूर्ववर्त्तित्वं कारणत्वम्' इत्यन्ये । तन्न । ईश्वरतद्बुद्ध्यादीनामसङ्ग्रहात् । तद्व्यतिरेकस्य तत्समवधान-व्यतिरेकस्य वाऽभावात् ।**

ಅನನ್ಯಥಾ ಸಿದ್ಧ ನಿಯತಪೂರ್ವವರ್ತಿತ್ವವೇ ಕಾರಣತ್ವವೆಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಏಕೆಂದರೆ ಆಗ ಈಶ್ವರ ಮತ್ತು ಈಶ್ವರ ಜ್ಞಾನಗಳಿಗೆ ಕಾರಣತ್ವವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಈಶ್ವರ ವ್ಯತಿರೇಕವಾಗಲೀ, ಈಶ್ವರ ಬುದ್ಧಿವ್ಯತಿರೇಕವಾಗಲೀ ಅಥವಾ ಈಶ್ವರ ತದ್ಬುದ್ಧಿ ಸಮವಧಾನ ವ್ಯತಿರೇಕವಾಗಲೀ ಅಪ್ರಸಿದ್ಧವಾದುದರಿಂದ ತದ್ಘಟಿತ ಕಾರಣತ್ವವು ಈಶ್ವರ ತದ್ಬುದ್ಧಿಗಳಲ್ಲಿ ಬರುವುದಿಲ್ಲ.

## ಘಟಕ್ಕೆ ದಂಡವೇಕೆ ಅನನ್ಯಥಾಸಿದ್ಧ?

**कार्यस्यान्यथानुपपद्यमानताव्यवस्थाप्यत्वं वाऽनन्यथा-सिद्धत्वम् ।**

ಕಾರ್ಯಕ್ಕೆ ಯಾವುದು ಅನ್ಯಥಾ ಅನುಪಪದ್ಯಮಾನತ್ವವನ್ನು ವ್ಯವಸ್ಥಾಪನೆ ಮಾಡುತ್ತದೆಯೋ ಅದು ಅನನ್ಯಥಾಸಿದ್ಧವೆಂದು ಹೇಳಬಹುದು. ಘಟವನ್ನು ಕುರಿತು ದಂಡವು ತಾನಿಲ್ಲದಿದ್ದರೆ ಘಟಕ್ಕೆ ಅನುಪಪದ್ಯಮಾನತ್ವವನ್ನು ವ್ಯವಸ್ಥೆ ಮಾಡಿಕೊಡುತ್ತದೆ. ಆದ್ದರಿಂದ ದಂಡವು ಘಟವನ್ನು ಕುರಿತು ಅನನ್ಯಥಾಸಿದ್ಧವಾದುದು.

## ಅತೀಂದ್ರಿಯ ಶಕ್ತಿಯ ವಿಷಯದಲ್ಲಿ ಸಾಧಕ ಪ್ರಮಾಣವಿಲ್ಲ

**नन्वेवमतिरिक्तशक्तौ साधकबाधकप्रमाणाभावान्नित्यं संशयः । नच साधकाभावस्य बाधकत्वम्, बाधकाभावस्य साधकत्वादिति चेन्न । साधकाभावेन वह्नावन्यत्र सिद्धातीन्द्रियधर्माभाव-साधने लाघवं बाधकाभावेनातीन्द्रियधर्मसाधने च गौरवमिति साधकाभावात् तदभाव एव सिद्ध्यतीति ।।**

**इति शक्तिवादः ।।**

ಹಾಗಾದರೆ, ಅತಿರಿಕ್ತಶಕ್ತಿಯ ವಿಷಯದಲ್ಲಿ ಸಾಧಕಪ್ರಮಾಣವೂ, ಬಾಧಕ ಪ್ರಮಾಣವೂ ಇಲ್ಲದಿರುವುದರಿಂದ ಯಾವಾಗಲೂ ಸಂಶಯ ಉಂಟಾಗುತ್ತದೆ. ಯಾವುದೊಂದು ಪಕ್ಷವೂ ನಿರ್ಣೀತವಾಗುವುದಿಲ್ಲ ಎಂಬ ಶಂಕೆಯು ಬರಬಹುದು. ಅಥವಾ ಸಾಧಕಾಭಾವವೇ ಬಾಧಕವಾದುದು, ಬಾಧಕಾಭಾವವೇ ಸಾಧಕವಾದುದು ಎಂಬ ಕಾರಣದಿಂದ ಯಾವಾಗಲೂ ಸಂಶಯಬರಬಹುದು ಎಂದೂ ಶಂಕಿಸಬಾರದು. ಸಾಧಕವಿಲ್ಲದಿರುವುದರಿಂದ ವಹ್ನಿಯಲ್ಲಿ ಅನ್ಯತ್ರಪ್ರಸಿದ್ಧವಾದ ಅತೀಂದ್ರಿಯ ಧರ್ಮವು ಇಲ್ಲವೆಂದು ಸಾಧನೆ ಮಾಡಿದರೆ ಲಾಘವವಿದೆ. ಬಾಧಕವು ಇಲ್ಲದಿರುವುದರಿಂದ ವಹ್ನಿಯಲ್ಲಿ ಅತೀಂದ್ರಿಯ ಧರ್ಮವಿದೆ ಎಂದು ಸಾಧನೆ ಮಾಡಿದರೆ ಗೌರವವು ಇದೆ. ಆ ಕಾರಣದಿಂದ ಸಾಧಕವು ಇಲ್ಲದಿರುವುದರಿಂದ ಅತೀಂದ್ರಿಯವಾದ ಶಕ್ತಿಯ ಅಭಾವವೇ ಸಿದ್ಧವಾಗುತ್ತದೆ.

ತತ್ವಚಿಂತಾಮಣಿಯಲ್ಲಿ ಶಕ್ತಿವಾದವು ಮುಗಿಯಿತು.

# ಶಕ್ತಿವಾದ

## ರುಚಿದತ್ತವಿರಚಿತ - ಪ್ರಕಾಶ
## (ತತ್ವಚಿಂತಾಮಣಿಯ ಟಿಪ್ಪಣಿ)

### ಅರ್ಥಾಪತ್ತಿಗೆ ಪೃಥಕ್ ಪ್ರಾಮಾಣ್ಯವಿಲ್ಲ

**तत्वचिन्तामणिः –**

**अथ - रुचिदत्तविरचितप्रकाशे शक्तिवादः –**

**प्रसङ्गादाह – स्यादेतदिति ।। कार्येणैवेति ।। यथा अनुमीयत इति नैयायिकदिशा उपदर्शितया अर्थापत्तेः पृथक्त्वेन स्वयं स्वीकारादिति ध्येयम् ।**

ಪ್ರಸಂಗ ಸಂಗತಿಯಿಂದ ಸ್ಯಾದೇತತ್ ಎಂದು ಹೇಳುತ್ತಾರೆ – ಸ್ಯಾದೇತದಿತಿ – ಕಾರ್ಯೇಣೈವೇತಿ – ಯಥಾನುಮೀಯತೇ ಎಂದು ಹೇಳುವುದು ನೈಯಾಯಿಕರ ರೀತಿಯಿಂದ. ಏಕೆಂದರೆ ಮೀಮಾಂಸಕರು ಹೇಳುವ ಅರ್ಥಾಪತ್ತಿಗೆ ಮೀಮಾಂಸಕರು ಪೃಥಕ್ ಪ್ರಮಾಣ್ಯವನ್ನು ಒಪ್ಪಿದರೂ ನೈಯಾಯಿಕರು ಸ್ವತಃ ಅದನ್ನು ಒಪ್ಪದೇ ಅದನ್ನು ಅನುಮಾನದಲ್ಲಿಯೇ ಅಂತರ್ಭಾವ ಮಾಡುವುದರಿಂದ ಹೀಗೆ ಹೇಳಿದ್ದಾರೆ.

## ಕಾರ್ಯಾಭಾವದಿಂದ ಶಕ್ತಿಯು ಸಿದ್ಧವಾಯಿತಲ್ಲವೇ ?

**नन्वेवं कार्येण न तदुन्नयनं किन्तु कार्याभावेनेत्यत आह – व्यतिरेकेति ।। व्यतिरेकनिरूपकतया तत्प्रयोजकमित्यर्थः । तस्य अस्पष्टस्य, तदर्थत्वात् - दृष्टसाद्गुण्यार्थत्वात्, तथा च दृष्टसाद्गुण्यमेवादृष्टसाद्गुण्ये मानमिति भावः ।**

ಹಾಗಾದರೆ ಕಾರ್ಯಾಭಾವದಿಂದ ಶಕ್ತಿಯು ಸಿದ್ಧವಾಯಿತೇ ಹೊರತು ಕಾರ್ಯದಿಂದಲ್ಲ ಎಂಬ ಶಂಕೆಗೆ ಉತ್ತರವಾಗಿ ವ್ಯತಿರೇಕ ಎಂದು ಹೇಳುತ್ತಾರೆ – ವ್ಯತಿರೇಕೇತಿ – ತಾನಿಲ್ಲದಿದ್ದರೆ ದಾಹ ವ್ಯತಿರೇಕವನ್ನು ಉಂಟುಮಾಡುವುದರಿಂದ ದಾಹದ ವ್ಯತಿರೇಕಕ್ಕೆ ಪ್ರಯೋಜಕವಾಗುವುದರಿಂದ ಶಕ್ತಿಯು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ. ತಸ್ಯ= ಅದೃಷ್ಟಕ್ಕೆ, ತದರ್ಥತ್ವಾತ್= ದೃಷ್ಟಸಾಮಗ್ರಿಯನ್ನು ಸಂಪಾದನೆ ಮಾಡುವುದೇ ಪ್ರಯೋಜನವಾದ್ದರಿಂದ. ಆದ್ದರಿಂದ ದೃಷ್ಟಸಾಮಗ್ರಿಯ ಸಾದ್ಗುಣ್ಯವೇ ಅದೃಷ್ಟ ಸಾದ್ಗುಣ್ಯವು ಇದೆ ಎಂಬ ವಿಷಯದಲ್ಲಿ ಪ್ರಮಾಣವೆಂದು ಅಭಿಪ್ರಾಯ.

## ಮಣ್ಯಪಸರಣವು ಅದೃಷ್ಟಜನಕವಲ್ಲ

**परमाण्विति ।। खण्डप्रलये परमाणुकर्मणि सत्यपि यथा न द्व्यणुकारम्भकसंयोग इत्यर्थः । पूर्वादृष्टस्य नाशात् अग्रिमस्योत्पादकाभावाद्दाहो नस्यादित्याह–मण्यपसारणेति।। न च मण्यपसारणेनैव तदाऽदृष्टमुपपद्यत इति वाच्यम् । तस्य विहितनिषिद्धेतरत्वेन तदजनकत्वादिति भावः ।**

ಖಂಡಪ್ರಳಯದಲ್ಲಿ ಪರಮಾಣುವಿನಲ್ಲಿ ಕ್ರಿಯೆಯು ಇದ್ದರೂ ದ್ವ್ಯಣುಕಾರಂಭಕವಾದ ಸಂಯೋಗವು ಉಂಟಾಗದಿರುವಂತೆ ಎಂದು ಅರ್ಥ. ಪೂರ್ವಾದೃಷ್ಟವು ನಾಶವಾಗಿರುವುದರಿಂದ ಮುಂದಿನ ಅದೃಷ್ಟಕ್ಕೆ ಕಾರಣವು ಇಲ್ಲದಿರುವುದರಿಂದ ಮಣ್ಯಪಸರಣ ಕಾಲದಲ್ಲಿ ದಾಹವುಂಟಾಗದಿರಲಿ ಎಂದು ಹೇಳುತ್ತಾರೆ – ಮಣ್ಯಪಸರಣೇತಿ. ಮಣಿಯ ಅಪಸರಣದಿಂದಲೇ ಆಗ ಅದೃಷ್ಟವು ಉತ್ಪತ್ತಿಯಾಗುತ್ತದೆ ಎಂದು ಹೇಳಬಾರದು. ವಿಹಿತ ಅಥವಾ ನಿಷಿದ್ಧಕ್ರಿಯೆಯು ಮಾತ್ರ ಅದೃಷ್ಟವನ್ನು

ಉಂಟುಮಾಡುತ್ತದೆ. ಮಣ್ಯಪಸರಣವು ವಿಹಿತವೂ ಅಲ್ಲ, ನಿಷಿದ್ಧವೂ ಅಲ್ಲ. ಆದ್ದರಿಂದ ಅದು ಅದೃಷ್ಟಜನಕವಲ್ಲ ಎಂದು ಅಭಿಪ್ರಾಯ.

## ಹಾಗಾದಲ್ಲಿ ಅನವಸ್ಥಾದೋಷ

**मण्याद्यभाव एवेति ।। इदं चादृष्टकारणतानिरासमात्राभिप्रायेणापाततः, वस्तुतोऽस्यापि न कारणत्वामत्यग्रे वक्ष्यति। तदभावात् = अदृष्टाभावात् । 'वन्ध्ये'त्युपलक्षणम् । 'परमाणुकर्मणि' इत्यपि द्रष्टव्यम् । नन्वदृष्टं दृष्टोपसंहारद्वारैव सर्वत्र जनकं न तु साक्षात्, इत्यत आह – अदृष्टं चेति ।। अन्यथेति ।। द्वारे तस्य साक्षाज्जनकत्वं स्वीकार्यमेव तत्रापि द्वारान्तरापेक्षायामनवस्थानादिति भावः ।।**

ಅದೃಷ್ಟಕ್ಕೆ ಕಾರಣತ್ವವಿಲ್ಲ ಎಂದು ನಿರಾಸ ಮಾಡುವ ಸಲುವಾಗಿ ಮಾತ್ರ ಹೀಗೆ ಹೇಳಿದ್ದಾರೆ. ವಾಸ್ತವಿಕವಾಗಿ ಮಣ್ಯಭಾವಕ್ಕೂ ಕಾರಣತ್ವವಿಲ್ಲ ಎಂದು ಮುಂದೆ ಹೇಳುವವರಿದ್ದಾರೆ. ತದಭಾವಾತ್= ಅದೃಷ್ಟವು ಇಲ್ಲದಿರುವುದರಿಂದ. ವಂಧ್ಯಾ ಎನ್ನುವುದು ಉಪಲಕ್ಷಣ. ಪರಮಾಣು ಕರ್ಮದಲ್ಲಿಯೂ ಎಂದು ತಿಳಿದುಕೊಳ್ಳಬೇಕು. ಅದೃಷ್ಟವು ದೃಷ್ಟಸಂಪಾದನ ಮೂಲಕವಾಗಿಯೇ ಸರ್ವತ್ರ ಕಾರ್ಯಜನಕವಾಗಿದೆ, ಸಾಕ್ಷಾತ್ತಾಗಿ ಅಲ್ಲ ಎಂಬ ಶಂಕೆಗೆ ಉತ್ತರವನ್ನು ಅದೃಷ್ಟಂ ಚ ಎಂಬ ವಾಕ್ಯದಿಂದ ಹೇಳುತ್ತಾರೆ - ಅದೃಷ್ಟಂ ಚೇತಿ. ಅನ್ಯಥೇತಿ - ದ್ವಾರವನ್ನು ಕುರಿತು ಅದೃಷ್ಟಕ್ಕೆ ಸಾಕ್ಷಾಜ್ಜನಕತ್ವವನ್ನು ಸ್ವೀಕರಿಸಲೇಬೇಕು. ಇಲ್ಲದಿದ್ದರೆ ಆ ದ್ವಾರಕ್ಕೂ ಜನಕವಾದ ಅದೃಷ್ಟಭಿನ್ನವಾದ ಇನ್ನೊಂದು ದ್ವಾರವನ್ನು ಕಲ್ಪನೆ ಮಾಡುತ್ತಾ ಹೋದರೆ ಅನವಸ್ಥಾ ದೋಷವು ಬರುತ್ತದೆ.

## ಚೋದನಾಲಕ್ಷಣೋಽರ್ಥೋ ಧರ್ಮಃ

**न चेति ।। तथा च दाहेपि तदेव जनकमिति भावः । श्येनेति।। चोदनालक्षणोऽर्थो धर्म इत्यर्थपदेन श्रेयस्कारार्थकेन**

**श्येनापूर्वमनर्थरूपं व्यावृत्तं तस्य निषिद्धशत्रुवधजनकत्वे-नाश्रेयस्करत्वात्, तद्वदयमपि न धर्म इत्यर्थः । दाहप्रतिकूलेति।। नियताग्निसाध्यदाहप्रतिकूलमेवादृष्टमुत्पाद्यत इति नाग्न्यन्तरजन्यदाहप्रतिबन्ध इति भावः ।**

ಆದ್ದರಿಂದ ದಾಹವನ್ನು ಕುರಿತು ಸಹ ಅದೇ ಕಾರಣವೆಂದು ಅಭಿಪ್ರಾಯ. ಶ್ಯೇನೇತಿ – ಚೋದನಾ ಲಕ್ಷಣೋಽರ್ಥೋ ಧರ್ಮಃ ಎಂಬ ಮೀಮಾಂಸಾ ಸೂತ್ರದಲ್ಲಿ ಅರ್ಥಪದವು ಶ್ರೇಯಸ್ಕರ ಎಂಬ ಅರ್ಥವನ್ನು ಹೇಳುವುದರಿಂದ ಅನರ್ಥರೂಪವಾದ ಶ್ಯೇನಾ ಪೂರ್ವವು ವ್ಯಾವೃತ್ತವಾಗುತ್ತದೆ. ಏಕೆಂದರೆ ನಿಷಿದ್ಧವಾದ ಶತ್ರುವಧವನ್ನು ಉಂಟುಮಾಡುವುದರಿಂದ ಶ್ಯೇನಾ ಪೂರ್ವವು ಶ್ರೇಯಸ್ಕರವಲ್ಲ. ಅದರಂತೆ ಈ ಧರ್ಮವೂ ಕೂಡ ಎಂದು ಅಭಿಪ್ರಾಯ. ದಾಹಪ್ರತಿಕೂಲೇತಿ – ನಿಯತಾಗ್ನಿಸಾಧ್ಯವಾದ ದಾಹಕ್ಕೆ ಪ್ರತಿಕೂಲವಾದ ಅದೃಷ್ಟವನ್ನೇ ಉಂಟುಮಾಡುತ್ತದೆ. ಆದ್ದರಿಂದ ಇನ್ನೊಂದು ಅಗ್ನಿಯಿಂದ ಉಂಟಾಗುವ ದಾಹಕ್ಕೆ ಪ್ರತಿಬಂಧವಾಗುವುದಿಲ್ಲ ಎಂದು ಅಭಿಪ್ರಾಯ.

## ಮತ್ತೊಂದು ದೋಷ

**दोषान्तरमाह – अदृष्टेति ।। अशुचेरिति ।। वामागमादैः तथा दर्शनादिति भावः । उभयसत्त्वे = उत्तेजकप्रतिबन्धकसत्त्वे । तच्चेति ।। कारणत्वमित्यर्थः । मणिसद्भावे – उत्तेजकाभाव-विशिष्टमणिसद्भावे ।।**

'ಅದೃಷ್ಟೋತ್ಪತ್ತೌ' ಎಂಬ ವಾಕ್ಯದಿಂದ ದೋಷಾಂತರವನ್ನು ಹೇಳುತ್ತಾರೆ – ಅದೃಷ್ಟೇತಿ. ಅಶುಚೇರಿತಿ – ವಾಮಾಚಾರಕ್ಕೆ ಸಂಬಂಧಿಸಿದ ಆಗಮಗಳಲ್ಲಿ ಅಶುಚಿಯಾದವನಿಗೂ ಅದೃಷ್ಟವು ಉತ್ಪತ್ತಿಯಾಗುತ್ತದೆ ಎಂದು ಹೇಳುವಕಾರಣದಿಂದ ಎಂದು ಅಭಿಪ್ರಾಯ. ಉಭಯಸತ್ವೇ= ಉತ್ತೇಜಕ ಮತ್ತು ಪ್ರತಿಬಂಧಕ ಎರಡೂ ಇರುವಾಗ. ತಚ್ಚೇತಿ – ತತ್ ಎಂದರೆ ಕಾರಣತ್ವ ಎಂದು ಅರ್ಥ. ಮಣಿಸದ್ಭಾವೇ= ಉತ್ತೇಜಕಾಭಾವ ವಿಶಿಷ್ಟ ಮಣಿ ಇರುವಾಗ.

## ಪ್ರತಿಯೋಗಿತಾವಚ್ಛೇದಕಭೇದವು ಅಭಾವಭೇದವ್ಯಾಪ್ಯ

**प्रगियोगीति ।। यद्यपि प्रतियोगिभेदस्थले प्रतियोगितावच्छेदकभेदस्यावश्यकत्वात् तद्भेदादेव भेदस्तथापि यथा प्रतियोगिभेदोऽभावभेदव्याप्यस्तथा प्रतियोगितावच्छेदकभेदोपीत्यर्थः ।**

ಯದ್ಯಪಿ ಪ್ರತಿಯೋಗಿಭೇದವಿದ್ದ ಸ್ಥಳದಲ್ಲಿ ಪ್ರತಿಯೋಗಿತಾವಚ್ಛೇದಕ ಭೇದವು ಇದ್ದೇ ಇರುವುದರಿಂದ ಪ್ರತಿಯೋಗಿ ಭೇದದಿಂದಲೇ ಅಭಾವ ಭೇದವನ್ನು ಹೇಳಬಹುದು. ಆದರೂ ಪ್ರತಿಯೋಗಿ ಭೇದವು ಹೇಗೆ ಅಭಾವ ಭೇದವ್ಯಾಪ್ಯವೋ ಹಾಗೆಯೇ ಪ್ರತಿಯೋಗಿತಾವಚ್ಛೇದಕಭೇದವೂ ಅಭಾವ ಭೇದವ್ಯಾಪ್ಯ ಎಂದು ಹೇಳುವುದರಲ್ಲಿ ತಾತ್ಪರ್ಯ.

## ವಿಶಿಷ್ಟಾಭಾವದ ಬಗ್ಗೆ

**एवञ्चेति ।। केवलदण्डसद्भावे उभयाभावाद्दण्डपुरुषसद्भावे विशेषणाभावाद्दण्डपुरुषोभयाभावे च विशेष्याभावाद्दण्डाभावविशिष्टपुरुषाभाव इत्यर्थः ।**

ಕೇವಲ ದಂಡವು ಇರುವಾಗ ದಂಡಾಭಾವ ಮತ್ತು ಪುರುಷ ಇಬ್ಬರೂ ಇಲ್ಲದಿರುವುದರಿಂದ, ದಂಡಪುರುಷರುಇಬ್ಬರೂಇರುವಾಗದಂಡಾಭಾವರೂಪವಾದವಿಶೇಷಣವು ಇಲ್ಲದಿರುವುದರಿಂದ, ದಂಡಪುರುಷ ಇಬ್ಬರೂ ಇಲ್ಲದಿರುವಾಗ ದಂಡಾಭಾವರೂಪ ವಿಶೇಷಣವು ಇದ್ದರೂ ಪುರುಷರೂಪ ವಿಶೇಷ್ಯವು ಇಲ್ಲದಿರುವುದರಿಂದ, ಮೂರು ಸ್ಥಳದಲ್ಲಿಯೂ ದಂಡಾಭಾವವಿಶಿಷ್ಟಪುರುಷಾಭಾವವು ಇದೆ ಎಂದು ಅಭಿಪ್ರಾಯ.

## ಅನುಗತಜ್ಞಾನವೇ ಅನುಗತವಿಷಯ ಸಾಧ್ಯ

**प्रयुक्त इति ।। विशेषणविरहान्यतरव्याप्त इत्यर्थः । अनुगतेति ।। यद्यपि शब्दप्रयोगरूपे व्यवहारे व्यभिचारः नानार्थशब्दानुगमेपि**

**विषयाननुगमात्, तथापि व्यवहारशब्देन ज्ञानमेव विवक्षितम् । न चैवमनन्वयः । ज्ञानेन विषयिणा विषयस्योपलक्षणात्, तथा चानुगतज्ञानस्यानुगतविषय-साध्यत्वादित्यर्थो द्रष्टव्यः ।**

ವಿಶೇಷಣ ವಿಶೇಷ್ಯ ಉಭಯಾಭಾವ ಪ್ರಯುಕ್ತವೆಂದರೆ ವಿಶೇಷಣ ವಿರಹ, ವಿಶೇಷ್ಯ ವಿರಹ, ಉಭಯ ವಿರಹ ಇವುಗಳಲ್ಲಿ ಯಾವುದಾದರೊಂದರಿಂದ ವ್ಯಾಪ್ತ ಎಂದು ಅರ್ಥ. ಅನುಗತೇತಿ – ಯದ್ಯಪಿ ನಾನಾರ್ಥಕ ಶಬ್ದಗಳ ವ್ಯವಹಾರದಲ್ಲಿ ಶಬ್ದದ ಅನುಗಮವಿದ್ದರೂ ವಿಷಯದ ಅನುಗಮ ಇಲ್ಲದಿರುವುದರಿಂದ ಅಂತಹ ಶಬ್ದಪ್ರಯೋಗರೂಪವಾದ ವ್ಯವಹಾರದಲ್ಲಿ ವ್ಯಭಿಚಾರವು ಬರುತ್ತದೆ. ಆದರೂ ಇಲ್ಲಿ ವ್ಯವಹಾರಶಬ್ದದಿಂದ ಜ್ಞಾನವು ವಿವಕ್ಷಿತವಾಗಿದೆ. ಆದರೂ ಅನನ್ವಯವಿಲ್ಲ. ವಿಷಯಿಯಾದ ಜ್ಞಾನವು ವಿಷಯಕ್ಕೆ ಉಪಲಕ್ಷಣವಾಗಿದೆ. ಆದ್ದರಿಂದ ಅನುಗತ ಜ್ಞಾನವು ಅನುಗತ ವಿಷಯ ಸಾಧ್ಯವಾದುದು ಎಂದು ಅರ್ಥ.

## ಅನುಗತಶಕ್ತಿಯು ಅನುಗತವ್ಯವಹಾರಕ್ಕೆ ಕಾರಣವಲ್ಲವೇ?

**ननु शक्तिरेवानुगता तद्विषयोऽस्त्वित्यत आह – शक्तेश्चेति ।। श्यामध्वंसप्रयुक्तः । तन्नियतः, न तज्जन्यः समसमयत्वादिति ध्येयम् । न तु घटत्वेन, घट आसीदिति प्रत्ययाभावादिति भावः ।**

**सोऽयमिति ।। उत्पादविनाशवान् तुरीयसंसर्गाभावोऽस्तु नोभयथापि शक्तिसिद्धिरिति भावः ।।**

ಅನುಗತವಾದ ಶಕ್ತಿಯೇ ಅಂತಹ ವ್ಯವಹಾರಕ್ಕೆ ವಿಷಯವಾಗಲಿ ಎಂಬ ಶಂಕೆಯನ್ನು ಶಕ್ತೇಶ್ಚ ಎಂಬ ವಾಕ್ಯದಿಂದ ನಿರಾಕರಿಸುತ್ತಾರೆ. ಶಕ್ತೇಶ್ಚೇತಿ – ಶ್ಯಾಮಧ್ವಂಸ ಪ್ರಯುಕ್ತ ಎಂದರೆ ಶ್ಯಾಮಧ್ವಂಸ ನಿಯತ ಎಂದು ಅರ್ಥ. ಶ್ಯಾಮಧ್ವಂಸ ಜನ್ಯ ಎಂದು ಅರ್ಥವಲ್ಲ. ಏಕೆಂದರೆ ಶ್ಯಾಮಧ್ವಂಸವು ಮತ್ತು ಶ್ಯಾಮಘಟಧ್ವಂಸವು ಸಮಸಮಯವರ್ತಿಗಳಾಗಿವೆ. ಶ್ಯಾಮ ಘಟತ್ವೇನ ಪಕ್ವಘಟಧ್ವಂಸವನ್ನು

ಹೇಳಬೇಕೇ ಹೊರತಾಗಿ ಘಟತ್ವೇನ ಧ್ವಂಸವನ್ನು ಹೇಳಬಾರದು. ಏಕೆಂದರೆ ಶ್ಯಾಮಘಟ ಆಸೀತ್ ಎಂಬ ಪ್ರತ್ಯಯವಿದೆ. ಘಟ ಆಸೀತ್ ಎಂಬ ಪ್ರತ್ಯಯವಿಲ್ಲ ಎಂದು ಅಭಿಪ್ರಾಯ.

ಸೋಯಮಿತಿ – ಉತ್ಪಾದ ವಿನಾಶಶಾಲಿಯಾದ ನಾಲ್ಕನೆಯ ಸಂಸರ್ಗಾಭಾವ ಇರಲಿ ಅಥವಾ ಇಲ್ಲದಿರಲಿ ಯಾವ ಕಲ್ಪದಲ್ಲಿಯೂ ಶಕ್ತಿಯೇ ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

## ವಿನಷ್ಟವಾದ್ದರಲ್ಲಿ ಧ್ವಂಸಪದವನ್ನು ವ್ಯವಹರಿಸಬಹುದೇ

**ननु तुरीयसंसर्गाभावस्वीकारे विभागव्याघात इत्यपरितुष्यन्नाह – अस्तु वेति ।। ननु विनाशिनि ध्वंसपदपरिभाषैव सन्दिग्धेत्यरुचेराह – यद्वेति ।।**

ನಾಲ್ಕನೆಯ ಸಂಸರ್ಗಾಭಾವವನ್ನು ಒಪ್ಪಿದರೆ ವಿಭಾಗ ವ್ಯಾಘಾತ ಉಂಟಾಗುತ್ತದೆ ಎಂಬ ಅಸಮಾಧಾನದಿಂದ ಅಸ್ತುವಾ ಎಂದು ಹೇಳುತ್ತಾರೆ – ಅಸ್ತುವೇತಿ. ವಿನಾಶವುಳ್ಳ ವಸ್ತುವಿನಲ್ಲಿ ಧ್ವಂಸಪದದ ವ್ಯವಹಾರವೇ ಸಂದಿಗ್ಧವಾದುದು ಎಂಬ ಅಸಮಾಧಾನದಿಂದ ಯದ್ವಾ ಎಂದು ಹೇಳುತ್ತಾರೆ – ಯದ್ವೇತಿ.

## ಪ್ರಪಂಚದಲ್ಲಿ ನಿತ್ಯವಾದ ವಸ್ತುವೇ ಇಲ್ಲದಿರಬೇಕಾದೀತು

**यदि ह्वतीतेति ।। यद्यपि विशेष्यतावच्छेदकघटत्वाद्यवच्छिन्न-घटादिप्रतियोगिकः प्रतिक्षणं ध्वंसो नेष्यते तादृशाक्षणभङ्गपात एव च दोषावहस्तथापि विशेष्यस्य प्रत्यभिज्ञायमानत्वात् समवाय्यसमवायिनाशाभावाच्च न घटादेर्विनाशः, किन्तु विशेषणस्यैव । न च विशेषणनाशसामग्र्येव विशेष्यनाशिका, नित्यमात्रापलापापत्तेः । अत एव 'श्यामोयमासीत्' इति प्रत्ययो न त्वयमासीदिति प्रत्यय इति भावः ।**

ಯದ್ಯಪಿ ವಿಶೇಷ್ಯತಾವಚ್ಛೇದಕವಾದ ಘಟತ್ವಾವಚ್ಛಿನ್ನ ಘಟಾದಿ ಪ್ರತಿಯೋಗಿಕ ಧ್ವಂಸವನ್ನು ಪ್ರತಿಕ್ಷಣ ಒಪ್ಪಿದರೆ ನಾವು ಬೌದ್ಧರ ಕ್ಷಣಭಂಗವಾದದಲ್ಲಿ ಸಿಕ್ಕಿಬೀಳುತ್ತೇವೆ. ಅದು ದೋಷಾವಹ. ಆದರೂ ವಿಶೇಷ್ಯಕ್ಕೆ ಪ್ರತ್ಯಭಿಜ್ಞಾನವಿರುವುದರಿಂದ ಸಮವಾಯಿಕಾರಣ ಮತ್ತು ಅಸಮವಾಯಿ ಕಾರಣ ನಾಶವಿಲ್ಲದಿರುವುದರಿಂದ ಘಟಕ್ಕೆ ವಿನಾಶವಿಲ್ಲ. ಆದರೆ ವಿಶೇಷಣಕ್ಕೆ ಮಾತ್ರ ನಾಶ ಎಂದು ಅಭಿಪ್ರಾಯ. ವಿಶೇಷಣ ನಾಶ ಸಾಮಗ್ರಿಯೇ ವಿಶೇಷ್ಯ ನಾಶಕವಾಗುತ್ತದೆ ಎಂಬುದು ಸರಿಯಲ್ಲ. ಆಗ ಪೂರ್ವಕ್ಷಣವೃತ್ತಿತ್ವ ವಿಶಿಷ್ಟ ಆಕಾಶಾದಿಗಳಿಗೂ ನಾಶವನ್ನು ಒಪ್ಪಬೇಕಾಗುವುದರಿಂದ ಪ್ರಪಂಚದಲ್ಲಿ ನಿತ್ಯವಾದ ವಸ್ತುವು ಯಾವುದೂ ಇಲ್ಲ ಎಂಬ ಆಪತ್ತಿಯು ಉಂಟಾಗುತ್ತದೆ. ಆದ್ದರಿಂದಲೇ ದೃಷ್ಟಾಂತವಾಗಿ ಶ್ಯಾಮಃ ಅಯಮಾಸೀತ್ ಇತಿ ಪ್ರತ್ಯಯಃ ಎಂದು ಹೇಳಿದರೆ ಹೊರತು ಅಯಮಾಸೀತ್ ಇತಿ ಪ್ರತ್ಯಯಃ ಎಂದು ಹೇಳಲಿಲ್ಲ ಎಂದು ಅಭಿಪ್ರಾಯ.

## ನಾಕನೆಯ ಸಂಸರ್ಗಾಭಾವವು ವಿಶಿಷ್ಟಾಭಾವವಲ್ಲ

**ध्वंसस्येति ।। तथा चोत्तेजकापगमेपि दाहापत्तिः । उत्तेजककालोत्पन्नस्य प्रतिबन्धकध्वंसस्य तदाप्यनाशादिति भावः । 'ध्वस्तस्ये'ति क्वचित्पाठः । स च सुगम एव । उत्पादविनाशशीलस्तुर्यः संसर्गाभाव एव विशिष्टाभाव इति निरस्यति – न चेति ।।**

ತಥಾಚ ಉತ್ತೇಜಕವನ್ನು ತೆಗೆದರೂ ದಾಹವುಂಟಾಗಲಿ. ಏಕೆಂದರೆ ಉತ್ತೇಜಕ ಕಾಲದಲ್ಲಿ ಉತ್ಪನ್ನವಾದ ಪ್ರತಿಬಂಧಕಧ್ವಂಸವು ಉತ್ತೇಜಕವನ್ನು ತೆಗೆದಮೇಲೆಯೂ ಇದ್ದೇ ಇದೆ ಎಂದು ಅಭಿಪ್ರಾಯ. ಧ್ವಂಸಸ್ಯ ಎಂಬಲ್ಲಿ ಧ್ವಸ್ತಸ್ಯ ಎಂದು ಪಾಠಾಂತರವಿದೆ. ಆದರ ಅರ್ಥವು ಸ್ಪಷ್ಟವಾಗಿಯೇ ಇದೆ. ಉತ್ಪಾದ ವಿನಾಶಶಾಲಿಯಾದ ನಾಕನೆಯ ಸಂಸರ್ಗಾಭಾವವೇ ವಿಶಿಷ್ಟಾಭಾವ ಎಂಬುದನ್ನು 'ನಚೇತಿ' ಎಂದು ನಿರಾಕರಣೆ ಮಾಡುತ್ತಾರೆ.

## ಅತ್ಯಂತಾಭಾವವು ನಿತ್ಯವಾದ್ದರಿಂದ ಬರುವ ಆಪತ್ತಿ

**'अत्यन्ताभाव एवासौ' इति पक्षे परिहरति – नापीति।।**

**अत्यन्ताभावस्य नित्यत्वात् सदैव दाहापत्तिरिति प्रत्यासत्तिसहितस्य तस्य हेतुत्वं वाच्यम्, प्रत्यासत्तिश्च विशेषणभावादिरित्यननुगम इत्याह – स एवेति ।।**

ಇದು ಅತ್ಯಂತಾಭಾವವೇ ಎಂಬ ಪಕ್ಷದಲ್ಲಿ ನಾಪಿ ಎಂದು ಪರಿಹಾರವನ್ನು ಹೇಳುತ್ತಾರೆ – ನಾಪೀತಿ. ಅತ್ಯಂತಾಭಾವವು. ನಿತ್ಯವಾದುದರಿಂದ ಯಾವಾಗಲೂ ದಾಹವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಅದನ್ನು ಪರಿಹರಿಸಲು ಪ್ರತ್ಯಾಸತ್ತಿ ಸಹಿತವಾದ ಅತ್ಯಂತಾಭಾವಕ್ಕೆ ಹೇತುತ್ವವನ್ನು ಹೇಳಬೇಕು. ಪ್ರತ್ಯಾಸತ್ತಿಯಾದರೂ ವಿಶೇಷಣಾಭಾವರೂಪವಾದುದರಿಂದ ಅನನುಗಮ ಉಂಟಾಗುತ್ತದೆ ಎಂದು 'ಸ ಏವ' ಎಂಬ ವಾಕ್ಯದಿಂದ ಹೇಳುತ್ತಾರೆ – ಸ ಏವೇತಿ.

## ಉತ್ತೇಜಕಾಭಾವವಿಶಿಷ್ಟಮಣ್ಯಭಾವವು ದಾಹಕ್ಕೆ ಕಾರಣ

**अथेति ।। उत्तेजककाले विद्यमाने योऽत्यन्ताभावस्तदनुवृत्तावपि इत्यर्थः । उत्तेजकाभावत्वेनेति ।। तर्ह्युत्तेजकाभावविशिष्टमण्यभावत्वेन हेतुत्वं, तथा च पूर्वानुवर्त्तमानतादृशा भावादुत्तेजकापनयकाले दाहापत्तिः, कारणतावच्छेदकावच्छिन्नयत्किञ्चित्सत्त्वे एव कार्योत्पत्तेरित्यर्थः ।**

ಉತ್ತೇಜಕ ಕಾಲದಲ್ಲಿ ವಿದ್ಯಮಾನವಾದ ಅತ್ಯಂತಾಭಾವವು ಅನುವೃತ್ತವಾದರೂ ಸಹ ಎಂದರ್ಥ. ಉತ್ತೇಜಕಾಭಾವತ್ವೇನೇತಿ – ಹಾಗಾದರೆ ಉತ್ತೇಜಕಾಭಾವ ವಿಶಿಷ್ಟ ಮಣ್ಯಭಾವತ್ವೇನ ಕಾರಣತ್ವವನ್ನು ಹೇಳಬೇಕು. ತಥಾಚ ಹಿಂದಿನಿಂದ ಅನುವೃತ್ತವಾದ ಆ ಅಭಾವವು ಉತ್ತೇಜಕವನ್ನು ತೆಗೆದ ಮೇಲೂ ಇರುವುದರಿಂದ ದಾಹವುಂಟಾಗಲಿ. ಏಕೆಂದರೆ ಕಾರಣತಾವಚ್ಛೇದಕಾವಚ್ಛಿನ್ನವಾದ ಯತ್ಕಿಂಚಿತ್ ಕಾರಣವಿರುವಾಗ ಕಾರ್ಯವುಂಟಾಗಬೇಕಷ್ಟೆ ಎಂದು ಅಭಿಪ್ರಾಯ.

## ಇಷ್ಟಾಪತ್ತಿಯ ಆಶಂಕೆ

**तर्हीति ।। पूर्वोक्त इष्टापत्तिमाशङ्कते – अथेति ।। विशेषण**

**विशेष्याभावस्येति ।। अतिरिक्तविशिष्टाभावानभ्युपगमादिति भावः ।।**

'ಅಥ ಎಂಬ ವಾಕ್ಯದಿಂದ ಹಿಂದೆ ಹೇಳಿದ ಇಷ್ಟಾಪತ್ತಿಯನ್ನು ಆಶಂಕೆ ಮಾಡುತ್ತಾರೆ – ಅಥೇತಿ. 'ವಿಶೇಷಣವಿಶೇಷ್ಯಭಾವಸ್ಯೇತಿ – ಅತಿರಿಕ್ತವಾದ ವಿಶಿಷ್ಟಾಭಾವವನ್ನು ಅಂಗೀಕರಿಸದೆ ಇರುವುದರಿಂದ ಎಂದು ಅಭಿಪ್ರಾಯ.

## ದಂಡಿಯಿರುವಾಗಲು ದಂಡಿ ಇಲ್ಲ ಎಂಬ ಶಂಕೆ

**सम्बन्धाभावादिति ।। ननु विशेषणविशेष्यसम्बन्धस्य तदुभयमात्रवृत्तित्वाद् भूतलादौ तत्सम्बन्धाभावाद्दण्डिनि सत्यपि 'दण्डीह नास्ति' इति व्यवहारापत्तिरिति चेत् । न ।**

ಸಂಬಂಧಾಭಾವಾದಿತಿ – ವಿಶೇಷಣ ವಿಶೇಷ್ಯ ಸಂಬಂಧವು ವಿಶೇಷಣ ವಿಶೇಷ್ಯ ಉಭಯವೃತ್ತಿಯಾದುದರಿಂದ ಭೂತಲದಲ್ಲಿ ಆ ಸಂಬಂಧವು ಇಲ್ಲದಿರುವುದರಿಂದ ದಂಡಿಯು ಇರುವಾಗಲೂ ಇಹ ದಂಡೀ ನಾಸ್ತಿ ಎಂಬ ವ್ಯವಹಾರವುಂಟಾಗಲಿ ಎಂಬ ಆಪಾದನೆಯು ಸರಿಯಲ್ಲ.

## ಪರಂಪರಾಸಂಬಂಧವೇ ದಂಡೀ ಎಂಬ ವ್ಯವಹಾರಕ್ಕೆ ಕಾರಣ

**यादृशेन हि सम्बन्धेन यत्र यद्विशिष्टव्यवहारस्तादृश-सम्बन्धाभावस्यैव तद्व्यवहारहेतुत्वं दण्डपुरुषसंयोगस्तु नैतद्व्यवहारहेतुः, तस्य भूतलावृत्तित्वेन तत्रेदमस्तीति व्यवहारानापत्तेः, किन्तु परम्परासम्बन्धविशेषः, तथा च तदभाव एव विशिष्टाभावव्यवहारहेतुरिति फलबलेन तथा कल्पनादिति ।**

ಯಾವ ಸಂಬಂಧದಿಂದ ಎಲ್ಲಿ ಯದ್ವಿಶಿಷ್ಟ ವ್ಯವಹಾರವು ಉಂಟಾಗುತ್ತದೆಯೋ ಅಂತಹ ಸಂಬಂಧಾಭಾವವೇ ಅಲ್ಲಿ ವಿಶಿಷ್ಟಾಭಾವ ವ್ಯವಹಾರಗಳಿಗೆ ಕಾರಣವಾದುದು. ದಂಡಪುರುಷ

ಸಂಯೋಗವಾದರೂ ಈ ವಿಶಿಷ್ಟ ವ್ಯವಹಾರಕ್ಕೆ ಕಾರಣವಲ್ಲ. ಆ ಸಂಬಂಧವು ಭೂತಲದಲ್ಲಿ ಇಲ್ಲದಿರುವುದರಿಂದ ಭೂತಲದಲ್ಲಿ ಇದಮಸ್ತಿ ಎಂಬ ವ್ಯವಹಾರವನ್ನು ಆಪತ್ತಿ ಮಾಡಲು ಬರುವುದಿಲ್ಲ. ಆದರೆ ದಂಡ ಮತ್ತು ಪುರುಷರ ಪರಂಪರಾಸಂಬಂಧ ವಿಶೇಷವೇ ಅಂತಹ ವ್ಯವಹಾರವನ್ನು ಕುರಿತು ಕಾರಣ ಎಂದು ಫಲಬಲದಿಂದ ಕಲ್ಪನೆಮಾಡುತ್ತೇವೆ.

## 'ಸಂಬಂಧಾಂತರಂ ವಿನಾ' ಎಂಬುದರ ವ್ಯಾಖ್ಯಾನ

**सम्बन्धान्तरं विनेति ।। संयोगादावतिव्याप्तेराह – सम्बन्धेति।। असम्भववारणायाह – अन्तरेति ।। ननु स्वात्मविषयकज्ञाने स्वात्मना समं विषयविषयिभावः सम्बन्धः स्वरूपसम्बन्ध एव वाच्यः, तत्र चेदमव्यापकं तत्र समवायस्यैव सम्बन्धान्तरस्य सत्त्वादिति चेन्न । उद्देश्यव्यवहारप्रयोजकसम्बन्धान्तरं विनेत्यर्थात् ।**

ಸಂಬಂಧಾಂತರಂ ವಿನೇತಿ – ಸಂಬಂಧಾಂತರಂ ವಿನಾ ಎಂಬಲ್ಲಿ ಸಂಯೋಗ ಸಂಬಂಧವನ್ನು ತೆಗೆದುಕೊಂಡು ಅತಿವ್ಯಾಪ್ತಿಯನ್ನು ನಿವಾರಣೆ ಮಾಡಲು ಸಂಬಂಧ ಎಂದೂ ಅಸಂಭವವನ್ನು ನಿವಾರಣೆ ಮಾಡಲು ಅಂತರ ಎಂದೂ ಹೇಳಿದ್ದಾರೆ. ಹಾಗಾದರೆ ಸ್ವಾತ್ಮವಿಷಯಕ ಜ್ಞಾನದಲ್ಲಿ ವಿಷಯವಾದ ಸ್ವಾತ್ಮನ ಜೊತೆಯಲ್ಲಿ ಸ್ವಾತ್ಮನಿಗೆ ವಿಷಯವಿಷಯಿಭಾವ ಸಂಬಂಧವನ್ನು ಹೇಳಬೇಕು. ಅದು ಸ್ವರೂಪಸಂಬಂಧವೇ. ಅಲ್ಲಿ ಸಂಬಂಧಾಂತರವಾದ ಸಮವಾಯ ಸಂಬಂಧವಿರುವುದರಿಂದ ಈ ಲಕ್ಷಣಕ್ಕೆ ಅಲ್ಲಿ ಅವ್ಯಾಪ್ತಿಯು ಬರುತ್ತದೆ ಎಂದು ಶಂಕೆ ಮಾಡಿದರೆ ಅವ್ಯಾಪ್ತಿ ಇಲ್ಲ. ಸಂಬಂಧಾಂತರಂ ವಿನಾ ಎಂದರೆ ಉದ್ದೇಶ್ಯವಾದ ವ್ಯವಹಾರಕ್ಕೆ ಪ್ರಯೋಜಕವಾದ ಇನ್ನೊಂದು ಸಂಬಂಧವನ್ನು ಬಿಟ್ಟು ಎಂದು ಅರ್ಥ.

## ಅನ್ಯೋನ್ಯಾಶ್ರಯ ದೋಷ

**न च समवायो विषयत्वव्यवहारप्रयोजकः । घटादिविषयकज्ञानस्य स्वात्मनि विषयत्वव्यवहार-**

**प्रयोजकत्वप्रसङ्गात् । ननु घटाभावभ्रमानुपपत्तिः, योग्यतायाः फलबलकल्प्यतया तत्र विशिष्टज्ञानोत्पत्त्या योग्यतावश्यम्भावात्। न च प्रत्ययपदं प्रमापरम्, सम्बन्धसत्त्वे तस्यापि प्रमात्वात्, अन्यथा सम्बन्धाभावेन तस्याप्रमात्वं तदप्रमात्वे च तत्र सम्बन्धाभाव इति परस्पराश्रयात् ।**

ಸಮವಾಯವು ಉದ್ವಿಷ್ಟವಾದ ವಿಷಯತ್ವವ್ಯವಹಾರಕ್ಕೆ ಪ್ರಯೋಜಕವಾದುದಲ್ಲ. ಅದು ವಿಷಯತ್ವ ವ್ಯವಹಾರಕ್ಕೆ ಪ್ರಯೋಜಕವಾಗಿದ್ದರೆ ಘಟಾದಿ ವಿಷಯತ್ವ ಜ್ಞಾನದಿಂದ ಆತ್ಮನಿಗೆ ವಿಷಯಕ (ವಿಷಯಿತ್ವ) ವ್ಯವಹಾರವು ಉಂಟಾಗಲಿ ಎಂಬ ಆಪತ್ತಿಯು ಬರುತ್ತದೆ ಎಂದು ಹೀಗೆ ಪರಿಹಾರವನ್ನು ಮಾಡುತ್ತೇವೆ. ಹಾಗಾದರೆ ಘಟಾಭಾವ ಭ್ರಮೆಯು ಉಂಟಾಗದೇ ಹೋಗಲಿ ಎಂಬ ಆಪತ್ತಿಯು ಇದೆ. ಯೋಗ್ಯತೆಯು ಫಲಬಲದಿಂದ ಕಲ್ಪ್ಯವಾದುದರಿಂದ ವಿಶಿಷ್ಟಜ್ಞಾನವು ಬರುವುದರಿಂದ ಅಲ್ಲಿ ಅವಶ್ಯಕವಾಗಿ ಯೋಗ್ಯತೆಯನ್ನು ಕಲ್ಪನೆಮಾಡಲೇಬೇಕು. ಇನ್ನು ಪ್ರತ್ಯಯ ಪದಕ್ಕೆ ಭ್ರಮ ಎಂದು ಅರ್ಥಮಾಡುವಂತಿಲ್ಲ. ಸಂಬಂಧವಿದ್ದರೆ ಘಟಾಭಾವ ಜ್ಞಾನವು ಪ್ರಮೆಯೇ ಆಗುತ್ತದೆ. ಇಲ್ಲದಿದ್ದರೆ ಸಂಬಂಧಾಭಾವವು ಸಿದ್ಧವಾದರೆ ಆ ಜ್ಞಾನಕ್ಕೆ ಭ್ರಮತ್ವ, ಭ್ರಮತ್ವವು ಸಿದ್ಧವಾದರೆ ಸಂಬಂಧಾಭಾವಸಿದ್ಧಿ ಎಂದು ಅನ್ಯೋನ್ಯಾಶ್ರಯವು ಬರುತ್ತದೆ.

## ಅತೀಂದ್ರಿಯಾಭಾವಸ್ವರೂಪಸಂಬಂಧದದಲ್ಲಿ ಅವ್ಯಾಪ್ತಿ

**किञ्च अतीन्द्रियाभावस्वरूपसम्बन्धेऽव्याप्तिः, तत्र सम्बन्धस्य विशिष्टप्रत्ययाजनकत्वात् तत्प्रत्ययस्यानुमित्यादि-रूपत्वेन विषयाजन्यत्वादिति चेन्न । विशिष्ट प्रत्यय-जनन योग्यतावच्छेदकरूपावच्छिन्न स्वरूपस्य सम्बन्धात्, योग्यतावच्छेदकाभावे योग्यत्वस्याप्यभावात्। योग्यतावच्छेदकं चात्यन्ताभावे प्रतियोगिदेशान्यदेशत्वम्, प्रागभावादौ च प्रतियोगिदेशत्वे सति प्रतियोगिकालान्यकाल त्वम्, अन्योन्याभावे प्रतियोगितावच्छेदकदेशान्यदेशत्वम् ।**

ಮತ್ತು ಅತೀಂದ್ರಿಯ ಪ್ರತಿಯೋಗಿಕ ಅಭಾವದ ಸ್ವರೂಪಸಂಬಂಧದಲ್ಲಿ ಅವ್ಯಾಪ್ತಿಯು ಬರುತ್ತದೆ. ಏಕೆಂದರೆ ಅಲ್ಲಿ ಸಂಬಂಧವು ವಿಶಿಷ್ಟಪ್ರತ್ಯಯಜನಕವೇ ಅಲ್ಲ. ಏಕೆಂದರೆ ಆ ಪ್ರತ್ಯಯವು ಅನುಮಿತ್ಯಾದಿ ರೂಪವಾದುದು. ಅನುಮಿತಿಯು ವಿಷಯಜನ್ಯವಲ್ಲವಾದುದರಿಂದ ಅನುಮಿತಿಯಲ್ಲಿ ತೋರುವ ಆ ಸಂಬಂಧವು ವಿಶಿಷ್ಟ ಪ್ರತ್ಯಯಜನಕವೇ ಅಲ್ಲ ಎಂದು ಶಂಕೆ ಮಾಡಿದರೆ ಅದಕ್ಕೆ ಉತ್ತರವನ್ನು ಹೇಳುತ್ತೇವೆ. ಸಂಬಂಧವೆಂದರೆ ವಿಶಿಷ್ಟಪ್ರತ್ಯಯಜನನ ಯೋಗ್ಯತಾವಚ್ಛೇದಕರೂಪಾವಚ್ಛಿನ್ನ ಸ್ವರೂಪವುಳ್ಳದ್ದು ಎಂದರ್ಥ. ಯೋಗ್ಯತಾವಚ್ಛೇದಕವಿಲ್ಲದಿದ್ದರೆ ಯೋಗ್ಯತ್ವವು ಇರುವುದಿಲ್ಲ. ಅತ್ಯಂತಾಭಾವದಲ್ಲಿ . ಯೋಗ್ಯತಾವಚ್ಛೇದಕವೆಂದರೆ ಪ್ರತಿಯೋಗಿ ದೇಶಾನ್ಯದೇಶವೃತ್ತಿತ್ವ-ರೂಪವಾದುದು. ಪ್ರಾಗಭಾವಾದಿಗಳಲ್ಲಿ ಯೋಗ್ಯತಾವಚ್ಛೇದಕರೂಪವೆಂದರೆ ಪ್ರತಿಯೋಗಿ ದೇಶವೃತ್ತಿತ್ವೇ ಸತಿ ಪ್ರತಿಯೋಗಿ ಕಾಲಾನ್ಯ ಕಾಲವೃತ್ತಿತ್ವ ರೂಪವಾದುದು. ಅನ್ಯೋನ್ಯಾಭಾವದಲ್ಲಿ ಯೋಗ್ಯತಾವಚ್ಛೇದಕವೆಂದರೆ ಪ್ರತಿಯೋಗಿತಾವಚ್ಛೇದಕ ದೇಶ ಭಿನ್ನ ದೇಶವೃತ್ತಿತ್ವ ರೂಪವಾದುದು.

## ಅನವಸ್ಥಾ ಎಲ್ಲಿ ದೋಷವಲ್ಲ?

**न चान्यत्वमन्योन्याभाववत्त्वं तत्र च मत्वार्थयोग इति वाच्यम् । तत्रापि तद्देशान्यत्वस्य सत्त्वात् । न चैवमनवस्था वस्त्वनवस्थायाः प्रामाणिकत्वेनादोषात्, प्रत्ययानवस्थायाश्चा सत्त्वात्, उक्तावच्छेदकोपलक्षित-स्वरूपस्यैव प्रत्ययविषयत्वे तस्य तदविषयत्वात् । एवञ्चोक्ता-वच्छेदकावच्छिन्नस्वरूपाभावे यत्राभावधीस्तत्र भ्रमः ।**

ಇಲ್ಲಿ ಅನ್ಯತ್ವ ಎಂದರೆ ಅನ್ಯೋನ್ಯಾಭಾವವತ್ತ್ವರೂಪವಾದುದು. ಅಲ್ಲಿ ಮತ್ವರ್ಥಕ್ಕೆ ಅನುಪಪತ್ತಿಯಿದೆ ಎಂದು ಹೇಳಬಾರದು. ಅಲ್ಲಿಯೂ ಕೂಡ ತದ್ದೇಶಾನ್ಯತ್ವವು ಇದೆ. ಹಾಗಾದರೆ ಯೋಗ್ಯತಾ ಘಟಕವಾದ ಅನ್ಯತ್ವಕ್ಕೂ ಒಂದು ಯೋಗ್ಯತೆ, ಆ ಯೋಗ್ಯತೆಯು ತದ್ದೇಶಾನ್ಯತ್ವರೂಪವಾದುದರಿಂದ ತದ್‌ಘಟಕವಾದ ಯೋಗ್ಯತೆಯಲ್ಲಿ ಇನ್ನೊಂದು ಯೋಗ್ಯತಾವಚ್ಛೇದಕ, ಆ ಅನ್ಯತ್ವದಲ್ಲಿಯೂ ತದ್ದೇಶಾನ್ಯತ್ವರೂಪವಾದ ಇನ್ನೊಂದು ಯೋಗ್ಯತಾವಚ್ಛೇದಕ ಹೀಗೆ ಅನವಸ್ಥಾ ದೋಷವು ಉಂಟಾಗುತ್ತದೆ ಎಂಬ ಶಂಕೆಯು ಸರಿಯಲ್ಲ.

ವಸ್ತುವನ್ನು ಅಂಗೀಕಾರ ಮಾಡುವುದರಿಂದ ಬರುವ ಅನವಸ್ಥೆಯು ಪ್ರಾಮಾಣಿಕವಾದುದರಿಂದ ದೋಷವಲ್ಲ. ಪ್ರತೀತಿಯ ಅನವಸ್ಥೆಯಿಲ್ಲ. ಹೇಳಲ್ಪಟ್ಟ ಯೋಗ್ಯತಾವಚ್ಛೇದಕ ಉಪಲಕ್ಷಿತವಾದ ಸ್ವರೂಪವೇ ಪ್ರತ್ಯಯ ವಿಷಯವಾಗುತ್ತದೆ. ಯೋಗ್ಯತಾವಚ್ಛೇದಕವು ಪ್ರತ್ಯಯ ವಿಷಯವಾಗುವುದಿಲ್ಲ ಎಂಬ ಕಾರಣದಿಂದ. ಆದ್ದರಿಂದ ಇಂತಹ ಅವಚ್ಛೇದಕಾವಚ್ಛಿನ್ನ ಸ್ವರೂಪವು ಇಲ್ಲದೇ ಎಲ್ಲಿ ಅಭಾವಜ್ಞಾನವು ಬರುತ್ತದೆಯೋ ಅದು ಭ್ರಮ ಎಂದು ನಿರ್ಣಯಿಸಬಹುದು.

## ಲಕ್ಷಣಕ್ಕೆ ಅವ್ಯಾಪ್ತಿಯಿಲ್ಲ

**एतेन 'अतीन्द्रियस्वरूपसम्बन्धाव्याप्ति'रपास्ता । न चोक्तावच्छेदकस्य प्रत्ययाविषयत्वे विषयाभावात् कथं भ्रमत्वप्रमात्वे इति वाच्यम् । एकत्रोक्तावच्छेदकावच्छिन्नस्य सम्बन्धत्वेन विद्यमानसम्बन्धविषयत्वादन्यत्र तदनवच्छिन्नत्वेन तस्य विद्यमानसम्बन्धाविषयत्वात् ।**

ಇದರಿಂದಲೇ ಅತೀಂದ್ರಿಯ ಸ್ವರೂಪಸಂಬಂಧದಲ್ಲಿ ಲಕ್ಷಣಕ್ಕೆ ಅವ್ಯಾಪ್ತಿಯು ಪರಿಹೃತವಾಗುತ್ತದೆ. ಈ ಅವಚ್ಛೇದಕವು ಉಪಲಕ್ಷಣವಾಗಿ ಜ್ಞಾನಕ್ಕೆ ವಿಷಯವಾಗದಿದ್ದರೆ ಅಂತಹ ವಿಷಯದ ಸತ್ತ್ವಾಸತ್ತ್ವಗಳಿಂದ ಭ್ರಮತ್ವ ಪ್ರಮಾತ್ವಗಳನ್ನು ಹೇಗೆ ನಿರ್ಣಯಿಸುವುದು ಎಂದು ಶಂಕಿಸಬಾರದು. ಏಕೆಂದರೆ ಒಂದುಕಡೆ ಉಕ್ತ ಅವಚ್ಛೇದಕಾವಚ್ಛಿನ್ನವು ಸಂಬಂಧವಾಗಿರುವುದರಿಂದ ಆ ಜ್ಞಾನವು ವಿದ್ಯಮಾನ ಸಂಬಂಧ ವಿಷಯಕವಾಗಿದೆ. ಇನ್ನೊಂದು ಕಡೆ ಅವಚ್ಛೇದಕಾವಚ್ಛಿನ್ನವು ಇಲ್ಲದಿರುವುದರಿಂದ ವಿದ್ಯಮಾನಸಂಬಂಧ ವಿಷಯತ್ವವಿಲ್ಲ. ಈ ಕಾರಣದಿಂದ ಪ್ರಮಾತ್ವ ಭ್ರಮತ್ವಗಳು ಸಿದ್ಧವಾಗುತ್ತವೆ.

## ಉಭಯಪ್ರತಿಯೋಗಿಕಸಂಬಂಧಾಭಾವವೇ ವಿಶಿಷ್ಟಾಭಾವ

**ननु यत्किञ्चित्सम्बन्धाभावो न विशिष्टाभावोऽतिप्रसङ्गादिति विशेषणविशेष्योभयप्रतियोगिकसम्बन्धाभावस्तथा वाच्यः, तदभावश्च क्वचिद्विशेषणविशेष्योभयप्रतियोगित्वरूप-**

**विशेषणाभावात् क्वचिद्विशेष्यसम्बन्धाभावादित्यननुगमस्तदवस्थ एव । इयानेव विशेषो यत्पुरुषादौ विशेष्ये दण्डादिर्विशेषणं सम्बन्धे च विशेषणविशेष्योभयप्रतियोगित्वम् ।**

ಯತ್ಕಿಂಚಿತ್ ಸಂಬಂಧಾಭಾವವನ್ನು ವಿಶಿಷ್ಟಾಭಾವವೆಂದು ಹೇಳಿದರೆ ಅತಿ ಪ್ರಸಂಗವು ಬರುವುದರಿಂದ ವಿಶೇಷಣವಿಶೇಷ್ಯ ಉಭಯ ಪ್ರತಿಯೋಗಿಕ ಸಂಬಂಧಾಭಾವವನ್ನು ವಿಶಿಷ್ಟಾಭಾವವೆಂದು ಹೇಳಬೇಕು. ಆ ಅಭಾವವಾದರೂ ಒಮ್ಮೆ ವಿಶೇಷಣವಿಶೇಷ್ಯ ಉಭಯಪ್ರತಿಯೋಗಿಕತ್ವರೂಪವಾದ ವಿಶೇಷಣವಿಲ್ಲದಿರುವುದರಿಂದಲೂ ಕೆಲವೊಮ್ಮೆ ವಿಶೇಷ್ಯವಾದ ಸಂಬಂಧವಿಲ್ಲದಿರುವುದರಿಂದಲೂ ಸಿದ್ಧವಾಗುವುದರಿಂದ ಅನನುಗಮವು ಬಂದೇ ಬರುತ್ತದೆ. ವಿಶೇಷ್ಯನಾದ ಪುರುಷನಲ್ಲಿ ದಂಡಾದಿಗಳು ವಿಶೇಷಣ. ಸಂಬಂಧದಲ್ಲಿ ಮಾತ್ರ ವಿಶೇಷಣ ವಿಶೇಷ್ಯ ಉಭಯ ಪ್ರತಿಯೋಗಿಕತ್ವವು ವಿಶೇಷಣ ಎಂಬುದಷ್ಟೆ ವಿಶೇಷ.

## ಅನನುಗಮದೋಷಕ್ಕೂ ಅವಕಾಶವಿಲ್ಲ

**ननु दण्डपुरुषोभयप्रतियोगिकसम्बन्धत्वमेकं प्रतियोगितावच्छेदकं तदवच्छिन्नाभाव एक एवेति नाऽननुगम इति चेत् । तर्हि दण्डावच्छिन्नपुरुषत्वमेकं प्रतियोगितावच्छेदकं तदवच्छिन्नाभावोऽप्यनुगत एवेति किं सम्बन्धाभावस्य विशिष्टाभावत्वोपवर्णनेन । न च विशेष्ये विद्यमाने न तदभाव इति वाच्यम् । विशेषणावच्छिन्नानामन्येषामेवाभावाभ्युपगमेन दोषाभावात् । अत एवानुपदमेव वक्ष्यति 'न हि दण्डिनि सति' इत्यादि ।**

ಇನ್ನು ದಂಡಪುರುಷ ಉಭಯಪ್ರತಿಯೋಗಿಕ ಸಂಬಂಧತ್ವರೂಪವಾದ ಪ್ರತಿಯೋಗಿತಾವಚ್ಛೇದಕವು ಒಂದೇ ಆದ್ದರಿಂದ ತದವಚ್ಛಿನ್ನಾಭಾವವು ಒಂದೇ ಆದುದರಿಂದ

ಅನನುಗಮವಿಲ್ಲ ಎಂದು ಹೇಳುವುದಾದರೆ ದಂಡಾವಚ್ಛಿನ್ನ ಪುರುಷತ್ವವೇ ಒಂದೇ ಪ್ರತಿಯೋಗಿತಾವಚ್ಛೇದಕ, ತದವಚ್ಛಿನ್ನಾಭಾವವು ಅನುಗತವಾಗುತ್ತದೆ. ಆ ಕಾರಣದಿಂದ ಸಂಬಂಧಾಭಾವಕ್ಕೆ ವಿಶಿಷ್ಟಾಭಾವತ್ವವನ್ನು ಏಕೆ ಪ್ರಯಾಸಪಟ್ಟು ಒಪ್ಪುತ್ತೀರಿ ಎಂಬ ಪ್ರಶ್ನೆಯು ಬರುತ್ತದೆ. ವಿಶೇಷ್ಯವಿರುವಾಗ ವಿಶೇಷಣಾವಚ್ಛಿನ್ನ ಪುರುಷಾಭಾವವು ಬರುವುದಿಲ್ಲ ಎಂದು ಹೇಳಬಾರದು. ವಿಶೇಷಣಾವಚ್ಛಿನ್ನ ಅನ್ಯಪುರುಷರ ಅಭಾವವು ದಂಡಿಯು ಇರುವ ಸ್ಥಳದಲ್ಲಿಯೂ ಇರುವುದರಿಂದ ಯಾವ ದೋಷವೂ ಇಲ್ಲ. ಆದ್ದರಿಂದಲೇ ಮುಂದೆ 'ನ ಹಿ ದಂಡಿನಿ ಸತಿ' ಎಂಬ ವಾಕ್ಯವನ್ನು ಹೇಳುತ್ತಾರೆ.

## ಸಮವಾಯವು ಇದ್ದಾಗ ಸ್ವರೂಪ ಸಂಬಂಧವು ಏಕೆ ?

**किञ्च अन्यत्र यथा तथाऽस्तु प्रकृते चोत्तेजकाभावमणि-सम्बन्धस्य तदुभयस्वरूपतया तदभावोऽननुगत एव। न च तदुभयं न स्वरूपसम्बन्धः, किन्तु तादृशविशिष्टप्रत्ययजनन-योग्यत्वमतिरिक्तमेव तथेति वाच्यम् । विशिष्टबुद्धिविषयस्य सम्बन्धत्वाद्विशिष्टप्रत्ययघटितस्य तस्य विशिष्टबुद्ध्य-विषयत्वात्, अत एव सम्बन्धस्य सम्बन्धिभिन्नत्वनियमेन स्वरूपसम्बन्धः परैर्नाङ्गीक्रियते । अत एव समवायसिद्धिः, तत्तत्स्वरूपाणामनन्तत्वेन स्वरूपसम्बन्धेनार्थान्तराभावात्, अन्यथा तेनैवार्थान्तरं स्यात्**

ಮತ್ತು ಬೇರೆಯ ಸ್ಥಳದಲ್ಲಿ ಹೇಗಾದರೂ ಇರಲಿ ಪ್ರಕೃತದಲ್ಲಿ ಮಾತ್ರ ಉತ್ತೇಜಕಾಭಾವ ಮತ್ತು ಮಣಿಯ ಸಂಬಂಧವು ತದುಭಯ ರೂಪವಾದುದರಿಂದ ಉತ್ತೇಜಕಾಭಾವ ವಿಶಿಷ್ಟಮಣ್ಯಭಾವವು ಅನನುಗತವೇ ಆಗುತ್ತದೆ. ಇನ್ನು ತದುಭಯವು ಸ್ವರೂಪಸಂಬಂಧವಲ್ಲ, ಆದರೆ ಅತಿರಿಕ್ತವಾದ ಅಂತಹ ವಿಶಿಷ್ಟಪ್ರತ್ಯಯ ಜನನ ಯೋಗ್ಯತ್ವವೇ ಸ್ವರೂಪಸಂಬಂಧ ಎಂದು ಹೇಳಬಾರದು. ಸಂಬಂಧವು ವಿಶಿಷ್ಟ ಬುದ್ಧಿಗೆ ಗೋಚರವಾಗಬೇಕು. ಸಂಬಂಧವು ಪ್ರತ್ಯಯ ಘಟಕವಾದರೆ ವಿಶಿಷ್ಟ ಬುದ್ಧಿಯಲ್ಲಿ ತೋರುವುದಿಲ್ಲವಾದ್ದರಿಂದ ಅದು ಸಂಬಂಧವೇ ಆಗಲಾರದು. ಆದ್ದರಿಂದಲೇ

ಪರರು ಸಂಬಂಧವು ಸಂಬಂಧಿ ಭಿನ್ನವಾಗಲೇಬೇಕೆಂದು ಸ್ವೀಕರಿಸಿ ಸ್ವರೂಪಸಂಬಂಧವನ್ನು ನಿರಾಕರಿಸುತ್ತಾರೆ. ಮತ್ತು ಆದ್ದರಿಂದಲೇ ಸಮವಾಯವು ಸಿದ್ಧವಾಗುತ್ತದೆ. ಇಲ್ಲದಿದ್ದರೆ ಅಂತಹ ಸ್ವರೂಪ ಸಂಬಂಧವನ್ನು ಅಂಗೀಕರಿಸಿದರೆ ಅಂತಹ ಸ್ವರೂಪಗಳು ಅನಂತವಾದ್ದರಿಂದ ಗೌರವವು ಬರುವುದರಿಂದ ಸ್ವರೂಪವನ್ನು ಬಿಟ್ಟು ಅತಿರಿಕ್ತವಾದ ಸಮವಾಯವು ಸಿದ್ಧವಾಗುತ್ತದೆ. ಇಲ್ಲದಿದ್ದರೆ ಸ್ವರೂಪಸಂಬಂಧದಿಂದಲೇ ಅರ್ಥಾಂತರವು ಬರುತ್ತಿದ್ದಿತು.

## ಘಟತದಧಿಕರಣಸಂಬಂಧಾಭಾವದಿಂದಲೇ ತದ್‌ವ್ಯವಹಾರದ ಅಭಾವ

**न च सम्बन्धत्वस्य मिलितवृत्तित्वेन सम्बन्धत्वावच्छिन्नाभावस्यानुगतत्वमिति वाच्यम्। एवं विशेषणावच्छिन्नविशेष्याभावस्यापि विशिष्टाभावत्वे दोषाभावादित्युक्तम्। अपि च यदि सम्बन्धाभावो विशिष्टाभावस्तदा इह दण्डी पुरुषो नास्तीत्यत्र नञर्थप्रतियोगित्वेन सम्बन्ध एवावभासेत। न चैवम्, दण्डावच्छिन्नपुरुषस्यैव तत्त्वेन प्रतीतेः । अन्यथा घटाभावोऽप्यतिरिक्तो न सिद्ध्येत्, घटतदधिकरणसम्बन्धाभावादेव तद्व्यवहारसम्भवात् ।**

ಇನ್ನು ಸಂಬಂಧತ್ವವು ಮಿಳಿತವಾಗಿ ಉಭಯವೃತ್ತಿಯಾದುದರಿಂದ ಸಂಬಂಧಾವಚ್ಛಿನ್ನಾಭಾವವು ಅನುಗತವಾಗುತ್ತದೆ ಎಂಬ ಶಂಕೆಯು ಸರಿಯಲ್ಲ. ಹಾಗೆ ಹೇಳುವುದಾದರೆ ವಿಶೇಷಣಾವಚ್ಛಿನ್ನ ವಿಶೇಷ್ಯಾಭಾವವನ್ನು ವಿಶಿಷ್ಟಾಭಾವವೆಂದು ಒಪ್ಪಿದರೆ ದೋಷವಿಲ್ಲವೆಂದು ಮೊದಲೇ ಹೇಳಿದ್ದೇವೆ. ಮತ್ತು ಸಂಬಂಧಾಭಾವವೇ ವಿಶಿಷ್ಟಾಭಾವವಾದರೆ 'ಇಹ ದಂಡೀ ಪುರುಷೋ ನಾಸ್ತಿ' ಎಂಬಲ್ಲಿ ಸಂಬಂಧವೇ ನಞರ್ಥವಾದ ಅಭಾವಕ್ಕೆ ಪ್ರತಿಯೋಗಿತ್ವೇನ ತೋರಬೇಕಾದೀತು. ಆದರೆ ಹಾಗೆ ಆಗುವುದಿಲ್ಲ. ದಂಡಾವಚ್ಛಿನ್ನ ಪುರುಷನೇ ಪ್ರತಿಯೋಗಿತ್ವೇನ ತೋರುತ್ತಾನೆ. ಇಲ್ಲದಿದ್ದರೆ (ಇದನ್ನು ಅಪಲಾಪ ಮಾಡಿದರೆ) ಅತಿರಿಕ್ತವಾದ ಘಟಾಭಾವವು ಸಿದ್ಧವಾಗುವುದಿಲ್ಲ. ಘಟ ತದಧಿಕರಣ ಸಂಬಂಧವನ್ನೇ ಘಟಾಭಾವ ವ್ಯವಹಾರಕ್ಕೆ ವಿಷಯವೆಂದು ಹೇಳಬಹುದು.

## ಘಟಾಭಾವಕ್ಕೆ ಸಂಬಂಧಾಭಾವದಿಂದ ಅನ್ಯಥಾಸಿದ್ಧಿಯಿರುವುದಿಲ್ಲವೇ?

**यदि च सम्बन्धस्य तत्र प्रतियोगित्वेनानुल्लेखात् तज्ज्ञानं विनापि घटत्वावच्छिन्नघटज्ञानादेव तदभावज्ञानाच्च न तदभावेनान्यथासिद्धिः, तदा प्रकृतेऽपि तुल्यमित्यपरितोषं हृदि निधायाह – यद्वेति ।।**

ಒಂದುಪಕ್ಷ ಘಟಾಭಾವ ಸ್ಥಳದಲ್ಲಿ ಸಂಬಂಧಕ್ಕೆ ಪ್ರತಿಯೋಗಿತ್ವೇನ ಉಲ್ಲೇಖವು ಇಲ್ಲದಿರುವುದರಿಂದ ಮತ್ತು ಆ ಸಂಬಂಧದ ಜ್ಞಾನವಿಲ್ಲದಿದ್ದರೂ ಘಟತ್ವಾವಚ್ಛಿನ್ನಘಟಜ್ಞಾನದಿಂದಲೇ ಘಟಾಭಾವಜ್ಞಾನವು ಬರುವುದರಿಂದ ಘಟಾಭಾವಕ್ಕೆ ಸಂಬಂಧಾಭಾವದಿಂದ ಅನ್ಯಥಾ ಸಿದ್ಧಿಯಿಲ್ಲ ಎಂದು ಹೇಳುವುದಾದರೆ ಪ್ರಕೃತದಲ್ಲಿಯೂ ಅದೇ ನ್ಯಾಯವನ್ನು ಅನುಸರಿಸಬಹುದು ಎಂಬ ಅಸಮಾಧಾನವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಯದ್ವಾ ಎಂಬ ಪಕ್ಷಾಂತರವನ್ನು ಹೇಳುತ್ತಾರೆ – ಯದ್ವೇತಿ.

## ಸಮಯವಿಶೇಷಣಾವಚ್ಛಿನ್ನ ಸಂಸರ್ಗಾಭಾವದಿಂದ ಉತ್ತರ

**अयं च विशेषणावच्छिन्नविशेष्यप्रतियोगिताकोऽत्यन्ताभावः न तु ध्वंसो न वा विद्यमानप्रतियोगिक इति न क्षणिकत्वशङ्का । न च तस्य नित्यत्वेन प्रागपि कार्यापत्तिः समयविशेषणावच्छेदेन संसर्गित्वादिति ग्रन्थकृतैवाभिधानादिति ।। दण्डी पुरुष इति ।। तत्काले दण्डवानित्यर्थः । किन्तु तदन्यः तत्काले दण्डाभाववानित्यर्थः ।**

ಈ ಅಭಾವವಾದರೂ ವಿಶೇಷಣಾವಚ್ಛಿನ್ನ ವಿಶೇಷ್ಯ ಪ್ರತಿಯೋಗಿಕ ಅತ್ಯಂತಾಭಾವವೇ ಹೊರತು ಧ್ವಂಸವಲ್ಲ. ಅಥವಾ ವಿದ್ಯಮಾನ ಪ್ರತಿಯೋಗಿಕ ಅತ್ಯಂತಾಭಾವವಲ್ಲ. ಆದ್ದರಿಂದ ಕ್ಷಣಿಕತ್ವದ ಶಂಕೆಯಿಲ್ಲ. ಹಾಗಾದರೆ ಅತ್ಯಂತಾಭಾವವು ನಿತ್ಯವಾಗಿರುವುದರಿಂದ ಮೊದಲೂ ಸಹ (ಉತ್ತೇಜಕಾನಯನಕ್ಕಿಂತಲೂ ಮೊದಲೂ ಸಹ) ಕಾರ್ಯವುಂಟಾಗಲಿ ಎಂಬ ಆಪತ್ತಿ

ಬಂದರೆ ಇದನ್ನು ಸಮಯವಿಶೇಷಣಾವಚ್ಛಿನ್ನ ಸಂಸರ್ಗಾಭಾವವೆಂದು ಹೇಳಿ ಮೂಲಕಾರರೇ ಉತ್ತರಕೊಟ್ಟಿದ್ದಾರೆ. ದಂಡೀ ಪುರುಷ ಇತಿ – ಆಕಾಲದಲ್ಲಿ ದಂಡವುಳ್ಳವನೂ, ಅನ್ಯಕಾಲದಲ್ಲಿ ದಂಡವಿಲ್ಲದಿರುವವನೂ ಆದ ಪುರುಷ ಎಂದು ಅರ್ಥ.

## ಅಭಾವವು ವಿಶೇಷಣಾವಚ್ಛಿನ್ನ ಪ್ರತಿಯೋಗಿಕವೇ ?

**न हीति ।। युक्तमिति योजना । अन्वयेति ।। विशेषणावच्छिन्नप्रतियोगिको यदि नाभावः, किन्तु विशेषणप्रतियोगिक एव तदाऽन्येषामिति पदस्य विशेष्यवाचिनोऽनुपादाना पत्ते-रित्यर्थः । यद्वा, यदि तत्कालीनदण्डाभाववानेव न प्रतियोगी, तदा अन्यकालीनदण्डाभावमादाय तत्र स्थितदण्डिनोप्यदण्डत्वेनाभावप्रतियोगित्वादन्येषामिति व्यर्थमित्यर्थः ।।**

ನಹೀತಿ – ನಹಿ ಎಂಬುದಕ್ಕೆ ಯುಕ್ತಂ ಎಂಬ ಪದದಿಂದ ಅನ್ವಯವನ್ನು ಹೇಳಬೇಕು. ಅನ್ಯಥೇತಿ – ಅಭಾವವನ್ನು ವಿಶೇಷಣಾವಚ್ಛಿನ್ನ ಪ್ರತಿಯೋಗಿಕ ಎಂದು ಅಂಗೀಕರಿಸದೇ ವಿಶೇಷಣ ಪ್ರತಿಯೋಗಿಕ ಎಂದು ಅಂಗೀಕರಿಸಿದರೆ ಆಗ ವಿಶೇಷ್ಯವಾಚಕವಾದ ಅನ್ಯೇಷಾಂ ಎಂಬ ಪದದ ಉಪಾದಾನವು ವ್ಯರ್ಥವಾಗುತ್ತದೆ ಎಂದು ಅಭಿಪ್ರಾಯ. ಅಥವಾ ತತ್ಕಾಲೀನ ದಂಡಾಭಾವವುಳ್ಳವನೇ ಪ್ರತಿಯೋಗಿಯಾಗದಿದ್ದರೆ ಅನ್ಯಕಾಲೀನ ದಂಡಾಭಾವವನ್ನು ತೆಗೆದುಕೊಂಡು ಅಲ್ಲಿ ದಂಡಿಯು ಇರುವಾಗಲೂ ಅವನೇ ಅದಂಡತ್ವೇನ ಅಭಾವ ಪ್ರತಿಯೋಗಿಯಾಗುವುದರಿಂದ ಅನ್ಯೇಷಾಂ ಎಂಬುದು ವ್ಯರ್ಥವಾಗುತ್ತದೆ ಎಂದು ಅಭಿಪ್ರಾಯ.

## ಕಾರ್ಯಾನುತ್ಪಾದಪ್ರಯೋಜಕತ್ವವು ಪ್ರತಿಬಂಧಕತ್ವವೇ?

**ननु कार्यानुत्पादप्रयोजकत्वं प्रतिबन्धकत्वं प्रयोजकत्वं च यस्मिन् सतीत्यादिगर्भं न तु पूर्ववर्त्तित्वगर्भमिति नान्योन्याश्रय**

**इत्यत आह – तत्त्वेपि वेति ।। नन्वेवमन्योन्याश्रयाभावेन तत्सामान्याभाव एक एव लाघवाद्धेतुरस्तु न तु यावद्विशेषाभावा इत्यपरितोषात् तदेव सिद्धान्तयति – यद्वेति ।।**

ಪ್ರತಿಬಂಧಕತ್ವವೆಂದರೆ ಕಾರ್ಯ ಅನುತ್ಪಾದ ಪ್ರಯೋಜಕತ್ವ ಎಂದು ಹೇಳುತ್ತೇವೆ. ಪ್ರಯೋಜಕತ್ವವು ಯಸ್ಮಿನ್ ಸತಿ ಇತ್ಯಾದಿ ರೂಪವಾದುದು ಹೊರತು ಪೂರ್ವವೃತ್ತಿತ್ವ ಘಟಿತವಾದುದಲ್ಲ. ಆದ್ದರಿಂದ ಅನ್ಯೋನ್ಯಾಶ್ರಯವಿಲ್ಲ ಎಂಬ ಶಂಕೆಗೆ ತತ್ವೇವಾ ಎಂದು ಸಮಾಧಾನವನ್ನು ಹೇಳುತ್ತಾರೆ – ತತ್ವೇಪಿವೇತಿ. ಹಾಗಾದರೆ ಅನ್ಯೋನ್ಯಾಶ್ರಯವು ಇಲ್ಲದಿರುವುದರಿಂದ ಸಾಮಾನ್ಯಾಭಾವವೊಂದೇ ಲಾಘವವಿರುವುದರಿಂದ ಹೇತುವಾಗಲಿ, ವಿಶೇಷಾಭಾವಕೂಟಕ್ಕೆ ಹೇತುತ್ವವನ್ನು ಒಪ್ಪುವುದು ಬೇಡ ಎಂಬ ಅಸಮಾಧಾನದಿಂದ ಯದ್ವಾ ಎಂದು ಅದನ್ನೇ ಸಿದ್ಧಾಂತ ಮಾಡುತ್ತಾರೆ – ಯದ್ವೇತಿ.

## ಉತ್ತೇಜಕಾಭಾವಾವಚ್ಛಿನ್ನ ಅತ್ಯಂತಾಭಾವವೇ ಹೇತು

**संसर्गाभाव इति ।। अत्रापि यत्रोत्तेजकमस्ति तत्रोत्तेजकाभावावच्छिन्नात्यन्ताभावमात्रं हेतुरन्यत्र ध्वंसादिसाधारणतत्संसर्गाभावत्वमावश्यकमिति भावः । यो निषेधः, ज्ञायत इति शेषः ।।**

ಸಂಸರ್ಗಾಭಾವ ಇತಿ – ಇಲ್ಲಿಯೂ ಸಹ ಎಲ್ಲಿ ಉತ್ತೇಜಕವಿದೆಯೋ ಅಲ್ಲಿ ಉತ್ತೇಜಕಾಭಾವಾವಚ್ಛಿನ್ನವಾದ ಅತ್ಯಂತಾಭಾವವೇ ಹೇತು. ಬೇರೆ ಕಡೆಯಲ್ಲಿ ಧ್ವಂಸಾದಿ ಸಾಧಾರಣವಾದ ಸಂಸರ್ಗಾಭಾವವನ್ನು ಅವಶ್ಯವಾಗಿ ಒಪ್ಪಬೇಕು ಎಂದು ಅಭಿಪ್ರಾಯ. ಯೋ ನಿಷೇಧಃ – ಎಂಬಲ್ಲಿ ಜ್ಞಾಯತೇ ತಿಳಿಯಲ್ಪಡುತ್ತದೆಯೋ ಎಂದು ಅಧ್ಯಾಹಾರ ಮಾಡಬೇಕು.

## ಅನ್ಯೋನ್ಯಾಭಾವದಲ್ಲಿ ಅತಿವ್ಯಾಪ್ತಿ

**नन्वभेदारोपादिस्थले तादात्म्यमपि संसर्ग एव इत्यन्योन्याभावेऽतिव्याप्तिः, किञ्च संसर्गस्यारोपत्वे**

**रजतत्वादेरिव तत्संसर्गोपि भासेत, न चैवमित्यपरितुष्यन्नाह – वयं त्विति ।।**

ಅಭೇದಾರೋಪ ಸ್ಥಳದಲ್ಲಿ ತಾದಾತ್ಮ್ಯವೂ ಸಂಸರ್ಗವಾಗುವುದರಿಂದ ಅನ್ಯೋನ್ಯಾಭಾವವೂ ಸಹ ಸಂಸರ್ಗಾವಚ್ಛಿನ್ನ ಪ್ರತಿಯೋಗಿಕ ಅಭಾವವಾಗುತ್ತದೆ. ತಥಾಚ ಸಂಸರ್ಗಾಭಾವ ಲಕ್ಷಣಕ್ಕೆ ಅನ್ಯೋನ್ಯಾಭಾವದಲ್ಲಿ ಅತಿವ್ಯಾಪ್ತಿಯು ಬರುತ್ತದೆ. ಇನ್ನು ಸಂಸರ್ಗವು ಆರೋಪ್ಯವಾದರೆ ರಜತತ್ವಾದಿಗಳ ಸಂಸರ್ಗವು ತೋರಿದಂತೆ ಸಂಸರ್ಗದ ಸಂಸರ್ಗವೂ ತೋರಬೇಕಾಗುತ್ತದೆ. ಆದರೆ ಅದು ತೋರುವುದಿಲ್ಲ. ಆದ್ದರಿಂದ ಸಂಸರ್ಗಾರೋಪವನ್ನು ಅಂಗೀಕರಿಸುವುದು ಹೇಗೆ ಎಂಬ ಅಸಮಾಧಾನದಿಂದ ವಯಂತು ಬ್ರೂಮಃ ಎಂದು ಹೇಳುತ್ತಾರೆ – ವಯಂತ್ವಿತಿ.

## ಅತಿವ್ಯಾಪ್ತಿಯ ಪರಿಹಾರ

**प्रतियोगिनमिति ।। अधिकरणविषयकप्रतियोग्यारोपजन्यज्ञानविषयाभाव इत्यर्थः । सः = निषेधः । अन्योन्याभावेऽतिव्याप्त्यभावमन्योन्याभावभिन्नत्वं लक्षणान्तरं च दर्शयितुमन्योन्याभावलक्षणमप्याह – यत्र चेति ।। अधिकरणविषयकप्रतियोगितावच्छेदकारोपजन्यनिबोधीविषय इत्यर्थः ।**

ಪ್ರತಿಯೋಗಿನಮಿತಿ – ಅಧಿಕರಣವಿಷಯಕ (ವಿಶೇಷ್ಯಕ) ಪ್ರತಿಯೋಗ್ಯಾರೋಪಜನ್ಯ ಜ್ಞಾನವಿಷಯವಾದ ಅಭಾವವು ಸಂಸರ್ಗಾಭಾವ ಎಂದು ಅರ್ಥ. ಸಃ ಎಂದರೆ ನಿಷೇಧ ಎಂದು ಅರ್ಥ. ಅನ್ಯೋನ್ಯಾಭಾವದಲ್ಲಿ ಅತಿವ್ಯಾಪ್ತಿ ಬರುವುದಿಲ್ಲ ಮತ್ತು ಅನ್ಯೋನ್ಯಾಭಾವಭಿನ್ನತ್ವೇ ಸತಿ ಅಭಾವತ್ವಂ ಎಂದು ಸಂಸರ್ಗಾಭಾವಕ್ಕೆ ಬೇರೆ ಲಕ್ಷಣವನ್ನೂ ಹೇಳಬಹುದು ಎಂದು ತೋರಿಸಲು ಅನ್ಯೋನ್ಯಾಭಾವದ ಲಕ್ಷಣವನ್ನು ಹೇಳುತ್ತಾರೆ – ಯತ್ರಚೇತಿ. ಅಧಿಕರಣ ವಿಷಯಕ (ವಿಶೇಷ್ಯಕ) ಪ್ರತಿಯೋಗಿತಾವಚ್ಛೇದಕಾರೋಪಜನ್ಯ ನಿಷೇಧ ಬುದ್ಧಿ ವಿಷಯವಾದುದು ಅನ್ಯೋನ್ಯಾಭಾವ ಎಂದು ಅರ್ಥ.

## ಅತೀಂದ್ರಿಯವಾದ ಸಂಸರ್ಗಾಭಾವ ಹಾಗೂ ಅನ್ಯೋನ್ಯಾಭಾವಗಳಲ್ಲಿ ಅವ್ಯಾಪ್ತಿ

**नन्विदमुभयलक्षणमतीन्द्रियसंसर्गाभावान्योन्याभावयोरव्याप्तं तद्विषयकज्ञानस्यानुमित्यादिरूपतयाऽऽरोपाजन्यत्वात् । न च योग्यतापुरस्कारात् तथात्वम्, तादृशारोप जननयोग्यतावच्छेदकं हि नाभावप्रतीतित्वम् अतिप्रसङ्गादिति संसर्गाभावविषयत्वादिकं तथा वाच्यम्, तथा चाऽऽत्माश्रयः।**

ಇವೆರಡು ಲಕ್ಷಣಗಳು ಅತೀಂದ್ರಿಯ ಸಂಸರ್ಗಾಭಾವದಲ್ಲಿ ಮತ್ತು ಅತೀಂದ್ರಿಯ ಅನ್ಯೋನ್ಯಾಭಾವದಲ್ಲಿ ಬರುವುದಿಲ್ಲ. ಏಕೆಂದರೆ ತದ್ವಿಷಯಕ ಜ್ಞಾನವು ಪ್ರತ್ಯಕ್ಷ ರೂಪವಾಗುವುದಿಲ್ಲ. ಅನುಮಿತ್ಯಾದಿ ರೂಪವಾಗುತ್ತದೆ. ಆ ಅನುಮಿತ್ಯಾದಿಗಳು ಆರೋಪಜನ್ಯವಲ್ಲ. ಆದ್ದರಿಂದ ಆರೋಪಜನ್ಯ ನಿಷೇಧ ವಿಷಯತ್ವರೂಪವಾದ ಲಕ್ಷಣಗಳು ಅವ್ಯಾಪ್ತವಾಗುತ್ತದೆ ಎಂದು ಶಂಕೆಯು ಬರುತ್ತದೆ. ಆರೋಪಜನ್ಯ ಎಂದರೆ ಯೋಗ್ಯತೆಯನ್ನು ಪ್ರವೇಶಮಾಡಿಸಿ ಆರೋಪಜನನ ಯೋಗ್ಯತಾವಚ್ಛೇದಕಾವಚ್ಛಿನ್ನಜನ್ಯ ಎಂದು ಅರ್ಥವನ್ನು ಮಾಡಿದರೆ ಆರೋಪಜನನ ಯೋಗ್ಯತಾವಚ್ಛೇದಕವಾದುದು ಯಾವುದು ಎಂದು ಪ್ರಶ್ನೆ. ಅಭಾವ ಪ್ರತೀತಿ ವಿಷಯತ್ವ ಎಂದು ಹೇಳಿದರೆ ಅದು ಅನ್ಯೋನ್ಯಾಭಾವದಲ್ಲೂ ಬರುವುದರಿಂದ ಸಂಸರ್ಗಾಭಾವ ಪ್ರತೀತಿ ವಿಷಯತ್ವ ಎಂದು ಹೇಳಬೇಕು. ತಥಾ ಚ ಸಂಸರ್ಗಾಭಾವಲಕ್ಷಣದಲ್ಲಿ ಸಂಸರ್ಗಾಭಾವವು ಸೇರುವುದರಿಂದ ಆತ್ಮಾಶ್ರಯ ದೋಷವು ಬರುತ್ತದೆ.

## ಅನ್ಯೋನ್ಯಾಶ್ರಯ ಹಾಗೂ ಅವ್ಯಾಪ್ತಿದೋಷಗಳು

**न च प्रागभावादिविषयत्वमेव तथा, प्रागभावत्वादेरपि संसर्गाभावघटितत्वात् । एवञ्च जन्यत्वस्याऽपि प्रागभावगर्भतया तस्य च संसर्गाभावगर्भत्वादन्योन्या-**

**श्रयोपि । किञ्च योग्यताया अनिर्वचनेऽप्रत्यक्षे योग्यध्वंसेऽप्यव्याप्तिरिति ।**

ಅಥವಾ ಪ್ರಾಗಭಾವಾದಿ ಪ್ರತೀತಿ ವಿಷಯತ್ವಂ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಪ್ರಾಗಭಾವತ್ವಾದಿಗಳು ಸಂಸರ್ಗಾಭಾವ ಘಟಿತವಾದುದರಿಂದ ಪುನಃ ಆತ್ಮಾಶ್ರಯ ದೋಷವು ಬರುತ್ತದೆ. ಇನ್ನು ಆರೋಪಜನ್ಯ ಎಂಬಲ್ಲಿ ಜನ್ಯತ್ವವು ಸಹ ಪ್ರಾಗಭಾವಗರ್ಭಶರೀರವನ್ನು ಹೊಂದಿದೆ. ಆ ಪ್ರಾಗಭಾವತ್ವವು ಸಂಸರ್ಗಾಭಾವ ಗರ್ಭವಾಗಿರುವುದರಿಂದ ಪುನಃ ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ಇನ್ನು ಯೋಗ್ಯತೆಯನ್ನು ನಿರ್ವಚನ ಮಾಡದಿದ್ದರೆ (ನಿವೇಶಮಾಡದಿದ್ದರೆ) ಅಪ್ರತ್ಯಕ್ಷವಾದ ಯೋಗ್ಯಧ್ವಂಸದಲ್ಲಿ ಅಂತಹ ಪ್ರತೀತಿ ವಿಷಯತ್ವವು ಬರುವುದಿಲ್ಲವಾದ್ದರಿಂದ ಅವ್ಯಾಪ್ತಿಯು ಬರುತ್ತದೆ.

## ಎಲ್ಲಾ ದೋಷಗಳ ಪರಿಹಾರ

**अत्र वदन्ति । प्रतियोग्यारोपपूर्वकनिषेधावगमविषयतावच्छेदकवत्त्वं संसर्गाभावत्वम् । एवमग्रेपि इत्युभयं लक्षणम् । स्वरूपं तु विषयतावच्छेदकं संसर्गाभावत्वादि, तच्च स्वाभावाभावत्वं अस्वाभावाभाववत्त्वं तेन नोक्तसर्वदोषावकाशः । अस्ति च घटस्य योऽभावस्तदाभअवो घटो घटान्योन्यान्याभावस्याभावो घटत्वमिति ।**

ಇಲ್ಲಿ ಹೀಗೆ ಹೇಳುತ್ತಾರೆ. ಪ್ರತಿಯೋಗ್ಯಾರೋಪಪೂರ್ವಕ ನಿಷೇಧಾವಗಮ ವಿಷಯತಾವಚ್ಛೇದಕವತ್ತ್ವಂ ಸಂಸರ್ಗಾಭಾವತ್ವಂ, ಪ್ರತಿಯೋಗಿತಾವಚ್ಛೇದಕಾರೋಪ ಪೂರ್ವಕ ನಿಷೇಧಾವಗಮ ವಿಷಯತಾವಚ್ಛೇದಕವತ್ತ್ವಂ ಅನ್ಯೋನ್ಯಾಭಾವತ್ವಂ ಎಂದು ಎರಡು ಲಕ್ಷಣಗಳು. ಸ್ವರೂಪತಃ ವಿಷಯತಾವಚ್ಛೇದಕವಾದ ಸಂಸರ್ಗಾಭಾವತ್ವವು ಸ್ವಾಭಾವಾಭಾವತ್ವರೂಪವಾದುದು ಮತ್ತು ಅನ್ಯೋನ್ಯಾಭಾವತ್ವವು ಅಸ್ವಾಭಾವಾಭಾವವತ್ವರೂಪವಾದುದು. ಆದ್ದರಿಂದ ಹಿಂದೆ

ಹೇಳಿದ ದೋಷಗಳಿಗೆ ಅವಕಾಶವಿಲ್ಲ. ಘಟದ ಅಭಾವದ ಅಭಾವವು ಘಟರೂಪವೆಂತಲೂ ಘಟಾನ್ಯೋನ್ಯಾಭಾವದ ಅಭಾವವು ಘಟತ್ವರೂಪವೆಂತಲೂ ಸಿದ್ಧವಾಗಿದೆ.

## ಲಕ್ಷಣಗಳಲ್ಲಿ ಸಾಂಕರ್ಯವಿಲ್ಲ

**न च संसर्गाभावस्य योऽन्योन्याभावस्तदभावो न संसर्गाभाव इति स्वसंसर्गाभावाभावो लक्षणार्थो वाच्य इति पुनरन्योन्याश्रयत्वमिति वाच्यम् । स्वाभावाभावत्वमित्यत्र वस्तुतो यद्यपि संसर्गाभावाभाव एव पर्यवसितस्तथापि संसर्गाभावत्वं न तत्र प्रविष्टम् - अभावत्वेनैव संसर्गाभाव उपस्थित इति न काचिदनुपपत्तिः । अन्योन्याभावे स्वप्रतियोगिकाभावमात्राभावत्वाभावादिति सर्वं सुस्थमिति ।**

ಇನ್ನು ಸ್ವಾಭಾವಾಭಾವ ಎಂಬಲ್ಲಿ ಸಂಸರ್ಗಾಭಾವದ ಅನ್ಯೋನ್ಯಾಭಾವದ ಅಭಾವವನ್ನು ತೆಗೆದುಕೊಂಡರೆ ಅದು ಸಂಸರ್ಗಾಭಾವರೂಪವಾಗುವುದಿಲ್ಲವಾದ್ದರಿಂದ ಸ್ವಸಂಸರ್ಗಾಭಾವಾಭಾವವು ಲಕ್ಷಣಾರ್ಥ ಎಂದು ಹೇಳಬೇಕು. ಆಗ ಲಕ್ಷಣದಲ್ಲಿ ಪುನಃ ಸ್ವಪದವು ಸೇರುವುದರಿಂದ ಅನ್ಯೋನ್ಯಾಶ್ರಯ ದೋಷವು ಬರುತ್ತದೆ ಎಂಬ ಶಂಕೆಯನ್ನು ಮಾಡಬಾರದು. ಸ್ವಾಭಾವಾಭಾವತ್ವಂ ಎಂದರೆ ವಾಸ್ತವಿಕವಾಗಿ ಸಂಸರ್ಗಾಭಾವಾಭಾವತ್ವ ಎಂದೇ ಅರ್ಥವು ಪರ್ಯವಸಾನವನ್ನು ಹೊಂದುತ್ತದೆ. ಆದರೆ ಅಲ್ಲಿ ಸಂಸರ್ಗಾಭಾವವು ಸಂಸರ್ಗಾಭಾವತ್ವೇನ ಪ್ರವಿಷ್ಟವಾಗಿಲ್ಲ. ಅಭಾವತ್ವ ರೂಪದಿಂದಲೇ ಪ್ರವಿಷ್ಟವಾಗಿದೆ. ಆದ್ದರಿಂದ ಅನುಪಪತ್ತಿಯಿಲ್ಲ. ಅನ್ಯೋನ್ಯಾಭಾವದಲ್ಲಿ ಸ್ವಪ್ರತಿಯೋಗಿಕ ಅಭಾವಮಾತ್ರ ಪ್ರತಿಯೋಗಿಕಾಭಾವತ್ವವು ಇಲ್ಲ. ಘಟಾದಿ ಪ್ರತಿಯೋಗಿಕತ್ವವೂ ಇದೆ. ಆದ್ದರಿಂದ ಲಕ್ಷಣಗಳಿಗೆ ಸಾಂಕರ್ಯವು ಬರುವುದಿಲ್ಲ.

## ಅಭಾವಪ್ರತಿಯೋಗಿಕಾಭಾವವು ಅಧಿಕರಣಸ್ವರೂಪ

**अत्रेदं चिन्त्यम् । स्वभावाभावत्वं न संसर्गाभावत्वम्, अन्योन्याभावेऽतिव्याप्तिः । तथाहि स्वं घटान्योन्या-**

**भावस्तदभावो घटस्तदभावश्चादन्योन्याभावः। ननु घटान्योन्याभावाभावो न घटः, किन्तु घटत्वमिति चेन्न। घटो घटान्योन्याभावो नेति प्रतीत्या घटे घटान्योन्याभावान्योन्याभावो विषयीक्रियते,स च घटस्वरूप एव अभावप्रतियोगिकस्याभावस्याधिकरणानतिरेकात् । न च स्वसंसर्गाभावाभावत्वं तत्त्वमिति वाच्यम् । आत्माश्रयात् ।**

ಇಲ್ಲಿ ಇದು ಚಿಂತ್ಯವಾದ ವಿಷಯ. ಸಂಸರ್ಗಾಭಾವತ್ವವು ಸ್ವಾಭಾವಾಭಾವತ್ವ ರೂಪವಾದುದು ಎಂದು ಹೇಳಿದರೆ ಅನ್ಯೋನ್ಯಾಭಾವದಲ್ಲಿ ಅತಿವ್ಯಾಪ್ತಿಯು ಬರುತ್ತದೆ. ಅದು ಹೇಗೆಂದರೆ ಸ್ವಂ ಎಂದರೆ ಘಟಾನ್ಯೋನ್ಯಾಭಾವ. ತದಭಾವ ಎಂದರೆ ಘಟ. ತದಭಾವ ಎಂದರೆ ಘಟಾನ್ಯೋನ್ಯಾಭಾವವಾಗುತ್ತದೆ. ಘಟಾನ್ಯೋನ್ಯಾಭಾವಾಭಾವವು ಘಟರೂಪವಾದುದಲ್ಲ ಆದರೆ ಘಟತ್ವರೂಪವಾದುದು ಎಂದು ಹೇಳಬಾರದು. 'ಘಟಃ ಘಟಾನ್ಯೋನ್ಯಾಭಾವೋ ನ' ಎಂಬ ಪ್ರತೀತಿಯಿಂದ ಘಟಾನ್ಯೋನ್ಯಾಭಾವಾನ್ಯೋನ್ಯಾಭಾವವು ಘಟದಲ್ಲಿ ವಿಷಯೀಕೃತವಾಗುತ್ತದೆ. ಅದನ್ನು ಘಟಸ್ವರೂಪ ಎಂದೇ ಒಪ್ಪಬೇಕು. ಏಕೆಂದರೆ ಅಭಾವಪ್ರತಿಯೋಗಿಕಾಭಾವವು ಅಧಿಕರಣಸ್ವರೂಪವಾಗುತ್ತದೆ. ಸ್ವಸಂಸರ್ಗಾಭಾವಾಭಾವತ್ವಂ ಎಂದು ಹೇಳಿದರೆ ಘಟಾನ್ಯೋನ್ಯಾಭಾವವನ್ನು ತೆಗೆದುಕೊಳ್ಳಲು ಬರುವುದಿಲ್ಲವಾದ್ದರಿಂದ ಹಿಂದೆ ಹೇಳಿದ ದೋಷವಿಲ್ಲ ಎಂದು ಹೇಳಿದರೆ ಆತ್ಮಾಶ್ರಯ ದೋಷವಂತೂ ಬಂದೇ ಬರುತ್ತದೆ.

## ಕೆಲವರ ಪ್ರಕಾರ ಲಕ್ಷಣ

**केचित्तु अखण्डयोः संसर्गाभावत्वान्योन्याभावत्वयोरुभाभ्यां लक्षणाभ्यामुपलक्षणम् । न च तयोः पदार्थान्तरतापत्तिः, सामान्यान्तर्भावात् । सामान्यं हि द्विविधम् उपाधिर्जातिश्च। तत्रोपाधिर्द्विविधः–सखण्डोऽखण्डश्चेत्युपाधावन्तर्भावात् तत्तेदन्ते इवेति, तथा च रत्नकोशे तरणिमिश्रैरुक्तम् – 'एवमभावत्वध्वंसत्वादिकं बोध्यमित्याहुः' ।**

ಇನ್ನು ಕೆಲವರು ಹೀಗೆ ಹೇಳುತ್ತಾರೆ. ಹಿಂದೆ ಹೇಳಿದ ಲಕ್ಷಣಗಳು ಪರಿಚಾಯಕವಾದವುಗಳು ಮಾತ್ರ. ಅಖಂಡವಾದ ಸಂಸರ್ಗಾಭಾವತ್ವ ಮತ್ತು ಅನ್ಯೋನ್ಯಾಭಾವತ್ವವೇ ಸಂಸರ್ಗಾಭಾವ ಅನ್ಯೋನ್ಯಾಭಾವದ ಲಕ್ಷಣಗಳು. ಅವುಗಳು ಪದಾರ್ಥಾಂತರವಲ್ಲ. ಸಾಮಾನ್ಯದಲ್ಲಿಯೇ ಅಂತರ್ಭಾವವನ್ನು ಹೊಂದುತ್ತವೆ. ಏಕೆಂದರೆ ಸಾಮಾನ್ಯವು ದ್ವಿವಿಧ. ಉಪಾಧಿ ಮತ್ತು ಜಾತಿ ಎಂದು. ಉಪಾಧಿಯೂ ದ್ವಿವಿಧ. ಅಖಂಡ ಮತ್ತು ಸಖಂಡವೆಂದು. ತತ್ತಾ ಇದಂತಾ ಮೊದಲಾದವುಗಳು ಸಖಂಡೋಪಾಧಿಗಳು. ತರಣಿಮಿಶ್ರರು ತಮ್ಮ ರತ್ನಕೋಶಗ್ರಂಥದಲ್ಲಿ 'ಹೀಗೆ ಅಭಾವತ್ವ ಮತ್ತು ಧ್ವಂಸತ್ವಾದಿಗಳನ್ನು ಅಖಂಡೋಪಾಧಿ ಎಂದು ತಿಳಿಯಬೇಕು' ಎಂದು ಹೇಳಿದ್ದಾರೆ.

## ಜ್ಞಾನವೈಲಕ್ಷಣ್ಯದಿಂದ ವ್ಯವಹಾರ ವೈಲಕ್ಷಣ್ಯ

**नेदमिहेति ।। ननु संसर्गाभावान्योन्याभावरूपविषय-वैलक्षण्येन ज्ञानवैलक्षण्यं तस्माच्च व्यवहारवैलक्षण्यम् इत्यन्यथासिद्धं तत्रारोपहेतुतां व्यवस्थापयतीति चेत् । मैवम्। यदि नारोपे हेतुस्तदा भूतले घटसंसर्गाभावान्यान्याभाव-सत्त्वे कदाचिन्नेदमिह कदाचिन्नेदमिदमिति व्यवहार-वैलक्षण्यानुप- पत्तेरित्यर्थात् ।**

'ನೇದ ಮಿಹೇತಿ' – ಸಂಸರ್ಗಾಭಾವ ಮತ್ತು ಅನ್ಯೋನ್ಯಾಭಾವರೂಪವಾದ ವಿಷಯ ವೈಲಕ್ಷಣ್ಯದಿಂದ ಜ್ಞಾನವೈಲಕ್ಷಣ್ಯವುಂಟಾಗುತ್ತದೆ. ಜ್ಞಾನವೈಲಕ್ಷಣ್ಯದಿಂದ ವ್ಯವಹಾರ ವೈಲಕ್ಷಣ್ಯವು ಉಂಟಾಗುತ್ತದೆ. ಆರೋಪಹೇತುತ್ವವನ್ನು ಅನ್ಯಥಾಸಿದ್ಧವೆಂದು ವ್ಯವಸ್ಥೆ ಮಾಡುತ್ತದೆ ಎಂದು ಆಕ್ಷೇಪ ಮಾಡಿದರೆ ಅದು ಸರಿಯಲ್ಲ. ಆರೋಪವು ಹೇತುವಾಗದಿದ್ದರೆ ಭೂತಲದಲ್ಲಿ ಘಟಸಂಸರ್ಗಾಭಾವ ಮತ್ತು ಘಟಾನ್ಯೋನ್ಯಾಭಾವ ಇವೆರಡೂ ಇದ್ದರೂ ಒಮ್ಮೊಮ್ಮೆ ನೇದಮಿಹ ಎಂಬ ಪ್ರತೀತಿಯೂ ಇನ್ನೊಮ್ಮೆ ನೇದಮಿದಂ ಎಂಬ ಪ್ರತೀತಿಯೂ ಬಂದು ಅದರಂತೆ ವ್ಯವಹಾರ ಮಾಡುತ್ತೇವೆ.

## ಪ್ರತೀತಿವೈಲಕ್ಷಣ್ಯವಿಲ್ಲದಿದ್ದರೆ ಕಾರ್ಯವೈಚಿತ್ರ್ಯ ಕೂಡದು

**प्रतियोगिज्ञानानुपलब्ध्यादीनां कारणानां तौल्ये कार्य-**

**वैचित्र्यस्याकस्मिकतापत्तौ कारणवैचित्र्यस्य कल्पनीयत्वे पारिशेष्यादारोपहेतुतायामेव विश्रामादिति भाव इत्याहुः ।**

ಈ ಜ್ಞಾನವನ್ನು ಕುರಿತು ಆರೋಪವು ಕಾರಣವಾಗಿಲ್ಲದಿದ್ದರೆ ವ್ಯವಹಾರ ವೈಲಕ್ಷಣ್ಯವೇ ಕೂಡುವುದಿಲ್ಲ. ಪ್ರತಿಯೋಗಿಜ್ಞಾನ ಅನುಪಲಬ್ಧಿ ಮೊದಲಾದವುಗಳು ಎರಡು ಕಡೆಯಲ್ಲಿಯೂ ಸಮವಾಗಿರುವುದರಿಂದ ಪ್ರತೀತಿವೈಲಕ್ಷಣ್ಯವನ್ನು ಹೇಳದಿದ್ದರೆ ಕಾರ್ಯವೈಚಿತ್ರ್ಯವು ಆಕಸ್ಮಿಕವಾಗುತ್ತದೆ ಎಂಬ ಆಪತ್ತಿಯು ಬರುವುದರಿಂದ ಕಾರಣ ವೈಚಿತ್ರ್ಯವನ್ನು ಕಲ್ಪನೆ ಮಾಡಲೇಬೇಕು. ಬೇರೆ ಕಾರಣಗಳು ಸಮಾನವಾಗಿರುವುದರಿಂದ ಪರಿಶೇಷದಿಂದ ಆರೋಪಹೇತುತ್ವವೇ ಸಿದ್ಧವಾಗುತ್ತದೆ ಎಂದು ಹೇಳುತ್ತಾರೆ.

## ಗುಣಾದಿಗಳಿಗೆ ಪ್ರತಿಬದ್ಧತ್ವಾಭಾವವು ಸಿದ್ಧವಾಗುತ್ತದೆ

**गुणेति ।। उक्तप्रतिबन्धकाभावस्य तत्रासत्त्वेन तत्र प्रतिबन्धो न स्यात् यत्रैव कदाचित् प्रतिबन्धकाभावस्तत्रैवान्यदा प्रतिबन्धकसत्त्वादिति भावः । प्रतिबन्धकत्वानापत्तेरिति पाठे अन्यस्येति शेषः । तथा च गुणादेः प्रतिबन्धकत्वमन्यस्य न स्यादिति गुणादेः प्रतिविध्यत्वं न स्यादित्येवार्थः पर्यवस्यतीति ध्येयम् ।**

ಗುಣೇತಿ – ಗುಣದಲ್ಲಿ ಹಿಂದೆ ಹೇಳಿದ ಪ್ರತಿಬಂಧಕಾಭಾವವು ಇಲ್ಲದಿರುವುದರಿಂದ ಅಲ್ಲಿ ಪ್ರತಿಬಂಧವಾಗದಿರಲಿ ಎಂದು ಅಭಿಪ್ರಾಯ. ಪ್ರತಿಬಂಧಕವು ಅನಾದಿಯಾಗಿರುವುದಿಲ್ಲ. ಹಾಗಿದ್ದರೆ ಪ್ರತಿಬಧ್ಯವು ಎಂದೂ ಉತ್ಪತ್ತಿಯಾಗುವುದೇ ಇಲ್ಲ. ಆದ್ದರಿಂದ ಪ್ರತಿಬಂಧಕಕ್ಕೆ ಜನ್ಯತ್ವವನ್ನು ಒಪ್ಪಬೇಕು. ಆದರೆ ಗುಣಕರ್ಮಾದಿಗಳಲ್ಲಿ ಜನ್ಯವಾದ ಯಾವ ಧರ್ಮವೂ ಇಲ್ಲ. ಧ್ವಂಸವು ಯಾವಾಗಲೂ ಪ್ರತಿಯೋಗಿ ಸಮಾನಾಧಿಕರಣವಾದ್ದರಿಂದ ಪ್ರತಿಬಂಧಕವಿಲ್ಲದಿರುವುದರಿಂದ ಪ್ರತಿಬಂಧಕ ಧ್ವಂಸವು ಬರುವುದಿಲ್ಲ. ಆದ್ದರಿಂದ ಗುಣದಲ್ಲಿ ಪ್ರತಿಬಂಧಕಧ್ವಂಸ-ವಿಲ್ಲದಿರುವುದರಿಂದ ಪ್ರತಿಬಂಧಕವು ಇಲ್ಲ. ಆದ್ದರಿಂದ ಗುಣಾದಿಗಳಿಗೆ ಪ್ರತಿಬಧ್ಯತ್ವವು

ಕೂಡುವುದಿಲ್ಲ ಎಂದು ಅಭಿಪ್ರಾಯ. ಕೆಲವು ಪುಸ್ತಕಗಳಲ್ಲಿ ಪ್ರತಿಬಂಧಕತ್ವಾನಾಪತ್ತೇಃ ಎಂಬ ಪಾಠವಿದೆ. ಅಲ್ಲಿ ಅನ್ಯಸ್ಯ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ತಥಾಚ ಗುಣಾದಿಗಳನ್ನು ಕುರಿತು ಇನ್ನೊಂದಕ್ಕೆ ಪ್ರತಿಬಂಧಕತ್ವವು ಇಲ್ಲ ಎಂದು ಹೇಳಿದರೆ ಅರ್ಥಾತ್ ಗುಣಾದಿಗಳಿಗೆ ಪ್ರತಿಬದ್ಧ್ಯತ್ವಾಭಾವವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

## ಸಂಸರ್ಗ ಹಾಗೂ ಸಂಸರ್ಗಾಭಾವಗಳು ಅವ್ಯಾಪ್ಯವೃತ್ತಿ

**संसर्गेति ।। यद्यपि संसर्गस्याव्याप्यवृत्तित्वात् तदवच्छिन्नाभावोपि तथैव, तथा च सोपि तत्रास्त्येव, तथापि व्याप्यवृत्तितादृशाभावस्य हेतुत्वमिति भावः । एवं विद्यमानताविरोधित्वेनेत्यर्थः । अन्यत्र विद्यमानेपि घटे तथा प्रतीतिदर्शनादिति भावः ।।**

ಸಂಸರ್ಗೇತಿ – ಯದ್ಯಪಿ ಸಂಸರ್ಗವು ಅವ್ಯಾಪ್ಯವೃತ್ತಿಯಾದುದರಿಂದ ಸಂಸರ್ಗಾಭಾವದ ಅಭಾವವೂ ಅವ್ಯಾಪ್ಯವೃತ್ತಿಯೇ. ಆದ್ದರಿಂದ ಪ್ರತಿಬಂಧಕ ಸಂಸರ್ಗವು ಇರುವ ಸ್ಥಳದಲ್ಲಿ ಪ್ರತಿಬಂಧಕ ಸಂಸರ್ಗಾಭಾವವು ಇದ್ದೇ ಇದೆ. ಆದರೂ ವ್ಯಾಪ್ಯವೃತ್ತಿಯಾದ ಪ್ರತಿಬಂಧಕಾಭಾವವೇ ದಾಹಹೇತು ಎಂದು ಅಭಿಪ್ರಾಯ. ಅಥೈವಂ ಎಂಬಲ್ಲಿ ಏವಂ ಎಂದರೆ ಅತ್ರವಿದ್ಯಮಾನತಾ ವಿರೋಧಿತ್ವೇನ ಎಂದು ಅರ್ಥ. ಆದ್ದರಿಂದ ಎಲ್ಲಿ ಘಟಧ್ವಂಸಪ್ರಾಗಭಾವಗಳ ಪ್ರತೀತಿಯು ಬರುತ್ತದೆಯೋ ಆ ಅಧಿಕರಣದಲ್ಲಿ ಘಟವು ವಿದ್ಯಮಾನವಲ್ಲ ಎಂದು ಅರ್ಥ. ಆದ್ದರಿಂದ ಅನ್ಯತ್ರ ಘಟವು ವಿದ್ಯಮಾನವಾದರೂ ಈ ಅಧಿಕರಣದಲ್ಲಿ ಪ್ರಾಗಭಾವಾದಿವಿಷಯಕವಾದ ಅದರ ಪ್ರತೀತಿಯು ಬರಬಹುದು ಎಂದು ಅಭಿಪ್ರಾಯ.

## ವಿಶಿಷ್ಟಾಭಾವವು ನಿರ್ಬಾಧಿತ

**योग्य इति ।। रत्नत्वस्यापि योग्यवृत्तेर्योग्यत्वमेव, पदविशेषवाच्यत्वज्ञानार्थं तत्रोपदेशापेक्षेति भावः । मन्त्रविनाशेति ।। मन्त्रस्याशुचिनाशतया प्रहराभ्यन्तरेपि**

**दाहः स्यादित्यर्थः । सङ्कल्पस्य विशेषणत्वमालम्ब्य दूषयति – सङ्कल्पनाश इति ।। तथा च सङ्कल्पस्य इच्छात्मकत्वात् तदभावे विशिष्टाभावोऽक्षत एवेति भावः ।**

ಯೋಗ್ಯ ಇತಿ – ಯೋಗ್ಯವೃತ್ತಿಯಾದ ರತ್ನತ್ವವೂ ಕೂಡ ಯೋಗ್ಯವಾದುದೇ. ಪದವಿಶೇಷ ವಾಚ್ಯತ್ವಜ್ಞಾನಕ್ಕೋಸ್ಕರವಾಗಿ ಅಲ್ಲಿ ಉಪದೇಶದ ಅಪೇಕ್ಷೆಯಿದೆ. ಮಂತ್ರವಿನಾಶೇತಿ – ಮಂತ್ರವು ಬೇಗ ನಾಶವನ್ನು ಹೊಂದುವುದರಿಂದ ಒಂದು ಯಾಮದ ಒಳಗೂ ದಾಹವುಂಟಾಗಲಿ ಎಂದು ಅರ್ಥ. ಸಂಕಲ್ಪವು ವಿಶೇಷಣ ಎಂದು ಅಂಗೀಕರಿಸಿ ದೋಷವನ್ನು ಹೇಳುತ್ತಾರೆ – ಸಂಕಲ್ಪನಾಶ ಇತಿ – ಸಂಕಲ್ಪವು ಇಚ್ಛಾ ರೂಪವಾದುದರಿಂದ ವಿಶೇಷಣವಾದ ಇಚ್ಛೆಯು ನಷ್ಟವಾದ ಮೇಲೆ ವಿಶಿಷ್ಟಾಭಾವವು ನಿರ್ಬಾಧವಾಗಿದೆ ಎಂದು ಅಭಿಪ್ರಾಯ.

## ಮಂತ್ರೌಷಧಾದಿಗಳಂತೆ ವ್ಯಭಿಚಾರವಿಲ್ಲ

**विगीतत्वेनेति ।। यद्यपि विगीतत्वं निषिद्धत्वमेवेत्यनिषिद्ध त्वेन इत्यनेन प्रागुक्तेन विरोधः, तथापि शिष्टप्रवृत्त्यविषयत्वं तदभिप्रेत्य एतदुक्तमिति ध्येयम् ।यद्यप्येवं श्रुत्यनुमापकस्या-निषिद्धत्वरूपाविगीतत्वस्य न क्षतिः, तथापि भोजनाद्याचारे व्यभिचारवारणाय अलौकिकत्वमपि विशेषणम् । इदं तु मन्त्रौषध्यादिवल्लौकिकमेवेति भावः ।**

**यद्वा शिष्टाचारत्वस्यैतदनुमानान्तर्गतत्वस्यैव क्षतिरिति भावः।**

ವಿಗೀತತ್ವೇನೇತಿ – ಯದ್ಯಪಿ ವಿಗೀತತ್ವವೆಂದರೆ ನಿಷಿದ್ಧತ್ವ ಎಂದೇ ಅರ್ಥ. ಆದರೆ ಮೊದಲು ಅಂತಹ ಆಚಾರವು ಅವಿಹಿತ ಮತ್ತು ಅನಿಷಿದ್ಧ ಎಂದು ಹೇಳಿ ಇಲ್ಲಿ ನಿಷಿದ್ಧತ್ವವನ್ನು ಹೇಳಿದರೆ ವಿರೋಧವು ಬರುತ್ತದೆ. ಆದರೂ ಮೊದಲು ಅನಿಷಿದ್ಧ ಎಂದರೆ ಶಿಷ್ಟಪ್ರವೃತ್ತಿ ವಿಷಯವಲ್ಲ

ಎಂಬ ಅರ್ಥವನ್ನು ತೆಗೆದುಕೊಂಡು ಇಲ್ಲಿ ನಿಷಿದ್ಧತ್ವ ಎಂಬ ಅರ್ಥವನ್ನು ಹೇಳಿದ್ದಾರೆ. ಆದ್ದರಿಂದ ವಿರೋಧವಿಲ್ಲ.

ಹೀಗೆ ಮಾಡಿದರೆ ಅನಿಷಿದ್ಧತ್ವರೂಪವಾದ ಅವಿಗೀತತ್ವವು ಶ್ರುತಿಯನ್ನು ಅನುಮಾನಮಾಡಿಕೊಡುವುದಕ್ಕೆ ಏನೂ ತೊಂದರೆಯಿಲ್ಲ. ಆದರೆ ಭೋಜನಾದಿ ಆಚಾರದಲ್ಲಿ ವ್ಯಭಿಚಾರವು ಬರುತ್ತದೆ. ಏಕೆಂದರೆ ರಾಗತಃ ಪ್ರಾಪ್ತವಾದ್ದರಲ್ಲಿ ಶ್ರುತಿಯಾಗಲೀ, ಶ್ರುತಿಯ ಅನುಮಾನವಾಗಲೀ ಇಲ್ಲ. ಆದ್ದರಿಂದ ಶ್ರುತ್ಯನುಮಾಪಕವಾದ ಆಚಾರದಲ್ಲಿ ಅನಿಷಿದ್ಧತ್ವವನ್ನು ವಿಶೇಷಣವಾಗಿ ಕೊಟ್ಟಂತೆ ಅಲೌಕಿಕತ್ವವನ್ನೂ ವಿಶೇಷಣವಾಗಿ ಕೊಡಬೇಕು. ಭೋಜನಾದಿಗಳು ಮಂತ್ರೌಷಧಾದಿಗಳಂತೆ ಲೌಕಿಕವಾದ್ದರಿಂದ ಈಗ ವ್ಯಭಿಚಾರವು ಬರುವುದಿಲ್ಲ.

ಅಥವಾ ಹಾಗೆ ಮಾಡಿದರೆ ಈ ಅನುಮಾನಾಂತರ್ಗತವಾದ ಶಿಷ್ಟಾಚಾರತ್ವರೂಪವಾದ ಹೇತುವಿಗೆ ಯಾವ ಹಾನಿಯೂ ಇಲ್ಲ ಎಂದು ಅಭಿಪ್ರಾಯ.

## ಮಂತ್ರದ ಕ್ರಮ ಹೇಗೆ ?

**उद्देश्यत्वेति ।।ज्ञानमस्थिरमिति तद्विशिष्टाभावः प्रहराभ्यन्तरेऽपि स्यादिति – संस्कारेत्युक्तम् ।। यत्किञ्चित् संस्कारविषयत्वं च प्रहराभ्यन्तरेऽपीत्यत उक्तम् – उद्देश्यज्ञानाहितेति ।। स च ज्ञानविषयमात्र इति नोक्तदोषः ।**

ಉದ್ದೇಶ್ಯತ್ವೇತಿ – ಜ್ಞಾನವು ಅಸ್ಥಿರವಾದುದರಿಂದ ತದ್ವಿಶಿಷ್ಟಾಭಾವವು ಒಂದು ಯಾಮದ ಒಳಗೇ ಇರುವುದರಿಂದ ಒಂದು ಯಾಮದ ಒಳಗೇ ದಾಹವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಆದ್ದರಿಂದ ಸಂಸ್ಕಾರ ಎಂದು ಹೇಳಿದ್ದಾರೆ. ಜ್ಞಾನವು ಶೀಘ್ರವಾಗಿ ನಾಶವನ್ನು ಹೊಂದಿದರೂ ಸಂಸ್ಕಾರವು ಸ್ಥಾಯಿಯಾಗಿ ಇರುವುದರಿಂದ ಈಗ ದೋಷವಿಲ್ಲ.

## ಸಂಕಲ್ಪವೇ ಮುಖ್ಯ

**ननु रोगादिना संस्कारनाशे विशिष्टाभावसम्भवात्**

**प्रहराभ्यन्तरेऽपि दाहः स्यात्, यत्र च संस्कारोदयो न तत्र वा कागतिरिति चेत् । न । तत्र दाहप्रतिबन्ध इत्यस्यैवासिद्धेः ।**

ಯಾವುದಾದರೊಂದು ಸಂಸ್ಕಾರ ವಿಷಯಕಾಲವು ಒಂದು ಯಾಮದ ಒಳಗೇ ಇರುವುದರಿಂದ ಪುನಃ ಅದೇ ಆಪತ್ತಿಯು ಬರುತ್ತದೆ. ಆದ್ದರಿಂದ ಉದ್ದೇಶ್ಯತ್ವಜ್ಞಾನಾ ಹಿತ ಎಂದು ಸಂಸ್ಕಾರಕ್ಕೆ ವಿಶೇಷಣವನ್ನು ಕೊಡಬೇಕು. ಉದ್ದೇಶ್ಯತ್ವ ಜ್ಞಾನಾ ಹಿತತ್ವವು ಅದರಿಂದ ಉಂಟಾದ ಸಂಸ್ಕಾರದಲ್ಲಿ ಮಾತ್ರ ಬರುತ್ತದೆಯೇ ಹೊರತು ಉದಾಸೀನವಾದ ಇನ್ನೊಂದು ಸಂಸ್ಕಾರದಲ್ಲಿ ಬರುವುದಿಲ್ಲವಾದ್ದರಿಂದ ದೋಷವಿಲ್ಲ. ಹಾಗಾದರೆ ರೋಗಾದಿಗಳಿಂದ ಸಂಸ್ಕಾರವು ನಾಶಹೊಂದಿದರೆ ವಿಶಿಷ್ಟಾಭಾವವು ಉಂಟಾಗುವುದರಿಂದ ಒಂದು ಯಾಮಕ್ಕಿಂತ ಮೊದಲೇ ದಾಹವಾಗಲಿ ಎಂಬ ಆಪತ್ತಿಯು ಬರುತ್ತದೆ.

## ಸಾಂಪ್ರದಾಯಿಕರ ಉತ್ತರ

**यत्र च दाहप्रतिबन्धः, तत्राऽनन्यगतिककार्यदर्शनात् संस्कारोऽपि कल्प्यते कार्योन्नेयधर्माणां यथा कार्यमुन्नयनादिति सम्प्रदायिकाः।**

ಮತ್ತು ಎಲ್ಲಿ ಉದ್ದೇಶ್ಯತ್ವಜ್ಞಾನದಿಂದ ಸಂಸ್ಕಾರವೇ ಮೂಡಲಿಲ್ಲವೋ ಅಂತಹ ಕಡೆಯಲ್ಲಿ ಹೇಗೆ ದಾಹ ಎಂಬ ಪ್ರಶ್ನೆಯು ಬರುತ್ತದೆ ಎಂದು ಆಕ್ಷೇಪಿಸಿದರೆ ಅಲ್ಲಿ ದಾಹಪ್ರತಿಬಂಧವನ್ನೇ ಒಪ್ಪುವುದಿಲ್ಲ ಎಂದು ಉತ್ತರ. ಕಾರ್ಯದರ್ಶನದಿಂದ ಕಲ್ಪಿಸುವ ಧರ್ಮಗಳನ್ನು ಕಾರ್ಯದರ್ಶನಕ್ಕೆ ಅನುಗುಣವಾಗಿ ಕಲ್ಪಿಸಲಾಗುತ್ತದೆ. ಎಲ್ಲಿ ದಾಹಪ್ರತಿಬಂಧವು ಉಂಟಾಗುತ್ತದೋ ಅಲ್ಲಿ ಅನಿವಾರ್ಯವಾಗಿ ಆ ಕಾರ್ಯದಿಂದ ಸಂಸ್ಕಾರವನ್ನು ಕಲ್ಪನೆಮಾಡುತ್ತೇವೆ. ಎಲ್ಲಿ ಕಾರ್ಯವೇ ಇಲ್ಲವೋ ಅಲ್ಲಿ ಅಂತಹ ಸಂಸ್ಕಾರವನ್ನು ಕಲ್ಪನೆಮಾಡಬೇಕಾದ ಅಗತ್ಯವಿಲ್ಲ ಎಂದು ಸಾಂಪ್ರದಾಯಿಕರ ಉತ್ತರ.

## ನಮ್ಮ ಉತ್ತರ

**वयं तु ब्रूमः – सङ्कल्पविषय एव कालः प्रतिबन्धकः। सङ्कल्पस्य न विशेषणत्वं, किन्तु स्वविषयीभूत- कालोपलक्षकत्वम्,**

**यथा मङ्गलस्यासन्नसमाप्तिफलकत्वे आसन्नसमयस्य स्ववृत्तिसमाप्त्युपलक्षकत्वम् । इयानेव विशेषो – यत्तस्याधाराधेयसम्बन्धेन तथात्वमस्य च विषयविषयिभाव सम्बन्धेनेति न कश्चिद्विशेष इति ।**

ಆದರೆ ನಮ್ಮ ಉತ್ತರವು ಬೇರೆ ಇದೆ. ಸಂಕಲ್ಪವಿಷಯವಾದ ಕಾಲವೇ ಪ್ರತಿಬಂಧಕ. ಆ ಕಾಲದಲ್ಲಿ ಸಂಕಲ್ಪವು ವಿಶೇಷಣವಲ್ಲ. ಉಪಲಕ್ಷಣಮಾತ್ರ. ಹೇಗೆ ಮಂಗಳವು ಆಸನ್ನ ಸಮಾಪ್ತಿ ಫಲವುಳ್ಳದ್ದೆಂದು ಸಿದ್ಧವಾದಾಗ ಆಸನ್ನ ಸಮಯಕ್ಕೆ ಸ್ವವೃತ್ತಿ ಸಮಾಪ್ತಿಯ ಉಪಲಕ್ಷಕತ್ವವು ಹೇಗೋ ಅದರಂತೆ. ಆದರೆ ಇಷ್ಟೇ ವಿಶೇಷ. ಸಮಾಪ್ತಿ ಮತ್ತು ಸಮಯಗಳಲ್ಲಿ ಆಧಾರಾಧೇಯಭಾವರೂಪವಾದ ಸಂಬಂಧವಿದೆ. ಪ್ರಕೃತದಲ್ಲಿ ಮಾತ್ರ ಸಂಕಲ್ಪಕ್ಕೂ ಮತ್ತು ಕಾಲಕ್ಕೂ ವಿಷಯವಿಷಯೀಭಾವರೂಪವಾದ ಸಂಬಂಧವಿದೆ. ಬೇರೆಯಾವ ವ್ಯತ್ಯಾಸವೂ ಇಲ್ಲ.

## 'ಪ್ರತಿಬಂಧಕಂ' ಎಂಬ ನಪುಂಸಕ ಪ್ರಯೋಗದ ಬಗ್ಗೆ

**प्रतिबन्धकत्वान्यथानुपपत्त्या तत्सिद्धिं निराकर्त्तुमुत्थापयति – नन्विति ।। कर्त्तरि ण्वुलो विधानादिति भावः । तस्येति।। यद्यपि क्षेमसाधारणजन्यत्वमत्रापि सम्भवति तथापि सत्त्वघटितजन्यत्वाभिप्रायेण इदमुक्तमिति ध्येयम् । 'स्वार्थिकाः क्वचिल्लिङ्गवचनान्यतिवर्त्तन्ते' इति न्यायादौषधं प्रतिबन्धकमिति नपुंसकलिङ्गत्वमिति भावः ।**

ಪ್ರತಿಬಂಧಕತ್ವದ ಅನ್ಯಥಾ ಅನುಪಪತ್ತಿಯಿಂದ ಶಕ್ತಿಯನ್ನು ಸಾಧಿಸುವುದನ್ನು ನಿರಾಕರಿಸಲು ಶಂಕೆಯನ್ನು ಮಾಡುತ್ತಾರೆ – ನನ್ವಿತಿ. ಣ್ವುಲ್ ಪ್ರತ್ಯಯವನ್ನು ಕರ್ತ್ರರ್ಥದಲ್ಲಿ ವಿಧಾನ ಮಾಡುವುದರಿಂದ ಈ ಶಂಕೆ ಎಂದು ಅಭಿಪ್ರಾಯ. ತಸ್ಯೇತಿ – ಯದ್ಯಪಿ ಸ್ಥಿತಸ್ಯ ಪರಿರಕ್ಷಣರೂಪವಾದ ಕ್ಷೇಮ ಸಾಧಾರಣವಾದ ಜನ್ಯತ್ವವು ಇಲ್ಲಿಯೂ ಕೂಡುತ್ತದೆ. (ಅಪ್ರಾಪ್ತಪ್ರಾಪ್ತಿರೂಪವಾದುದನ್ನು ಹೇಳಲು ಬರುವುದಿಲ್ಲ). ಆದರೂ ಸತ್ವ ಘಟಿತವಾದ ಜನ್ಯತ್ವವನ್ನು ತೆಗೆದುಕೊಂಡು ಹೀಗೆ

ಹೇಳಿದ್ದಾರೆ ಎಂದು ತಿಳಿಯಬೇಕು. ಪುಲ್ಲಿಂಗಾಂತವಾದ ಪ್ರತಿಬಂಧ ಶಬ್ದದ ಮೇಲೆ ಸ್ವಾರ್ಥಿಕ ಪ್ರತ್ಯಯವು ಬಂದರೂ ಸ್ವಾರ್ಥಿಕ ಪ್ರತ್ಯಯಗಳು ಕೆಲವೊಮ್ಮೆ ಲಿಂಗವಚನಗಳನ್ನು ಮೀರುತ್ತವೆ ಎಂಬ ನ್ಯಾಯದಿಂದ ಇಲ್ಲಿ ಪ್ರತಿಬಂಧಕಂ ಎಂದು ನಪುಂಸಕಲಿಂಗವು ಬಂದಿದೆ.

## ಮಂತ್ರಾದಿಗಳಿಗೆ ಪ್ರತಿಬಂಧಕತ್ವವಿದೆಯೇ ?

**ननु भवेदेवं यदि मन्त्रादीनां प्रतिबन्धकत्वं भवेदत आह – प्रतिबन्धश्चेति ।। सामग्रीविरहः = सामग्रीघटककारणविरहः।**

ಮಂತ್ರಾದಿಗಳಿಗೆ ಪ್ರತಿಬಂಧಕತ್ವವಿದ್ದರೆ ಹೀಗೆ ಆಗಬಹುದು ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಾರೆ – ಪ್ರತಿಬಂಧಶ್ಚೇತಿ. ಸಾಮಗ್ರೀ ವಿರಹ ಎಂದರೆ ಸಾಮಗ್ರಿಯ ಘಟಕವಾದ ಕಾರಣದ ವಿರಹ ಎಂದು ಅರ್ಥ.

## ಅನ್ಯೋನ್ಯಾಭಾವ ಹಾಗೂ ಅತ್ಯಂತಾಭಾವ ಅವ್ಯಾಪ್ಯವೃತ್ತಿ ಎಂದು ಮುರಾರಿಮಿಶ್ರ

**यद्वा व्यासज्यवृत्तिप्रतियोगिकाभावमभ्युपगम्य मुरारिमिश्रमतमाह – नव्यास्त्विति ।। भेर्यादेरिति ।। इदं तु समाधिसौकर्यादुक्तम् । वस्तुतस्तु तत्कालप्रतिबद्धेतरवह्निरिव तत्तत्कालतत्तद्देशप्रतिबद्धेतराकाशस्य जनकत्वं सम्भवति, अन्योन्याभावस्याव्याप्यवृत्तित्वाभ्युपगमेन तत्प्रणवयानात्। प्रतिबन्धकात्यन्ताभावस्यैवाच्छेदकत्वस्वीकाराद्वा तस्याऽयाप्यवृत्तित्वात्, अन्यथा वह्निभेर्यादेरपि कालान्तरे कार्यानुत्पत्त्यापत्तिः ।। प्रतिबद्धेतरत्वाभावादिति ।।**

ಅಥವಾ ಮುರಾರಿಮಿಶ್ರರ ಮತವನ್ನು ಅನುಸರಿಸಿ ವ್ಯಾಸಜ್ಯವೃತ್ತಿ ಪ್ರತಿಯೋಗಿಕವಾದ ಅಭಾವವನ್ನು ಅಂಗೀಕರಿಸಿ ನವ್ಯಾಸ್ತು ಎಂದು ಇನ್ನೊಂದು ಅಭಿಪ್ರಾಯವನ್ನು ಹೇಳುತ್ತಾರೆ –

ನವ್ಯಾಸ್ತು ಇತಿ. ಭೇರ್ಯಾದೇರಿತಿ – ಸಮಾಧಾನವನ್ನು ಹೇಳುವ ಸೌಕರ್ಯಕ್ಕಾಗಿ ಹೀಗೆ ಹೇಳಿದ್ದಾರೆ. ವಸ್ತುತಃ ತತ್ಕಾಲ ಪ್ರತಿಬದ್ಧೇತರ ವಹ್ನಿಗೆ ದಾಹಜನಕತ್ವವು ಇರುವಂತೆ ತತ್ತತ್ಕಾಲ ತತ್ತದ್ದೇಶ ಪ್ರತಿಬದ್ಧೇತರ ಆಕಾಶಕ್ಕೆ ಶಬ್ದಜನಕತ್ವವು ಕೂಡುತ್ತದೆ. ಆ ಮತದಲ್ಲಿ ಅನ್ಯೋನ್ಯಾಭಾವಕ್ಕೂ ಅವ್ಯಾಪ್ಯವೃತ್ತಿತ್ವವನ್ನು ಒಪ್ಪುವುದರಿಂದ ಅಥವಾ ಪ್ರತಿಬಂಧಕಾತ್ಯಂತಾಭಾವಕ್ಕೆ ಅವಚ್ಛೇದಕತ್ವವನ್ನು ಸ್ವೀಕಾರಮಾಡಿಯೂ ಆಕಾಶಕ್ಕೆ ಶಬ್ದಜನಕತ್ವವನ್ನು ಹೇಳಬಹುದು. ಏಕೆಂದರೆ ಅತ್ಯಂತಾಭಾವವೂ ಅವ್ಯಾಪ್ಯವೃತ್ತಿಯಾದುದು. ಹೀಗೆ ಅನ್ಯೋನ್ಯಾಭಾವಗಳಿಗೆ ಅವ್ಯಾಪ್ಯವೃತ್ತಿತ್ವವನ್ನು ಒಪ್ಪದಿದ್ದರೆ ವಹ್ನಿ ಮತ್ತು ಭೇರಿಗಳಿಂದ ಕಾಲಾಂತರದಲ್ಲಿಯೂ ದಾಹ ಮತ್ತು ಶಬ್ದಗಳ ಉತ್ಪತ್ತಿಯಾಗಲಾರದು. ಏಕೆಂದರೆ ವಹ್ನಿ ಮತ್ತು ಭೇರಿಗಳು ಪ್ರತಿಬದ್ಧೇತರವಾಗುವುದಿಲ್ಲ ಎಂಬ ಆಕ್ಷೇಪವು ಬರುತ್ತದೆ.

## ದಾಹಸ್ಥಳದಲ್ಲಿ ಹೇಗೆ ವ್ಯವಸ್ಥೆ?

**यद्वा तत्कालप्रतिबद्धा अन्ये वह्न्यादयः प्रसिद्धास्तदन्यवह्नित्वं तत्र जनकतावच्छेदककोटिप्रविष्टम् । आकाशे तु न तथा – इत्यनेनैवाभिप्रायेण एतदुक्तमिति ।। उभयस्यापीति ।।**

ಅಥವಾ ತತ್ಕಾಲ ಪ್ರತಿಬದ್ಧವಾದವುಗಳೆಂದರೆ ಪ್ರಸಿದ್ಧವಾದ ಇತರ ವಹ್ನ್ಯಾದಿಗಳು. ತದನ್ಯವಹ್ನಿತ್ವವು ದಾಹಸ್ಥಳದಲ್ಲಿ ಜನಕತಾಕೋಟಿಯಲ್ಲಿ ಪ್ರವಿಷ್ಟವಾಗಿದೆ. ಆಕಾಶಸ್ಥಳದಲ್ಲಿ ಮಾತ್ರ ಒಂದೇ ವ್ಯಕ್ತಿ ಇರುವುದರಿಂದ ಹೀಗೆ ಹೇಳಲು ಬರುವುದಿಲ್ಲ ಎಂಬ ಅಭಿಪ್ರಾಯದಿಂದ ಭೇರ್ಯಾದಿಗಳನ್ನು ಹೇಳಿದ್ದಾರೆ. ಉಭಯಸ್ಯಾಪಿ ಇತಿ –

## ದೃಢತ್ವಕ್ಕೂ ಘಟಜನಕತ್ವ ಬರಲಿ

**नन्वेवमन्वयव्यतिरेकतौल्येन दृढत्वदण्डयोर्द्वयोरपि जनकत्वापत्तिः । न च दण्डस्य चक्रादिसमवधानं साक्षात्सम्बन्धेन दृढत्वस्य च परम्परासम्बन्धेन तदिति विनिगमकमिति वाच्यम् । वह्नि प्रतिबन्धकाभावयोरपि तुल्यत्वात् ।**

ಹಾಗಾದರೆ ದೃಢತ್ವಕ್ಕೂ ಮತ್ತು ದಂಡಕ್ಕೂ ಅನ್ವಯವ್ಯತಿರೇಕಗಳು ಸಮಾನವಾಗಿರುವುದರಿಂದ ಎರಡಕ್ಕೂ ಘಟಜನಕತ್ವವು ಉಂಟಾಗಲಿ. ದಂಡಕ್ಕೆ ಚಕ್ರಾದಿ ಸಮವಧಾನವು ಸಾಕ್ಷಾತ್ಸಂಬಂಧದಿಂದ ಇದೆ ದೃಢತ್ವಕ್ಕೆ ಮಾತ್ರ ಪರಂಪರಾಸಂಬಂಧೇನ ಇದೆ. ಆದ್ದರಿಂದ ದಂಡವು ಕಾರಣ ದೃಢತ್ವವು ಕಾರಣವಲ್ಲ ಎಂದು ಹೇಳುವುದಾದರೆ ಇದೇ ನ್ಯಾಯವನ್ನು ಪ್ರತಿಬಂಧಕಾಭಾವ ಮತ್ತು ವಹ್ನಿಗಳಿಗೂ ಅನ್ವಯಿಸಬಹುದು.

## ಹಾಗಾದಲ್ಲಿ ಜನಕತ್ವಕ್ಕೆ ಜನಕತ್ವ ಬರಬೇಕಾದೀತು

**किञ्चैवं विनिगमनया परम्परासम्बद्धस्यालोकरूपादेरपि प्रत्यक्षादेर्हेतुत्वं न स्यात्, किन्त्ववच्छेदकत्वमेव स्यात् दृढत्ववत्। अपि च यस्मिन् सत्यपीति नियमादेव दार्ढ्यहेतुत्वमेव दण्डे सत्यपि दार्ढ्याभावेन कार्याभावात्। न चादृढेनाप्यनेकेन रज्जुबद्धेन घटोत्पत्तिदर्शनाद् विवक्षितविवेकेन भ्रमिजनकत्वमेव दार्ढ्यं तस्य च न घटजनकत्वं जनकत्वस्याजनकत्वादिति वाच्यम् । भ्रमिजनकत्वस्य घटजनकत्वे विरोधाभावात् । जनकत्वस्य तज्जनकविरोधः, आत्माश्रयात् ।**

ಮತ್ತು ಹೀಗೆ ವಿನಿಗಮನವನ್ನು ಮಾಡಿ ಪರಂಪರಾಸಂಬದ್ಧವಾದುದಕ್ಕೆ ಕಾರಣತ್ವವಿಲ್ಲವೆಂದು ಹೇಳುವುದಾದರೆ ಪ್ರತ್ಯಕ್ಷವನ್ನು ಕುರಿತು ಪರಂಪರಾಸಂಬದ್ಧವಾದ ಆಲೋಕರೂಪಾದಿಗಳಿಗೂ ಕಾರಣತ್ವವು ಬರದೇ ಹೋಗಲಿ, ದೃಢತ್ವದಂತೆ ಕಾರಣತಾವಚ್ಛೇದಕತ್ವವೇ ಬರಲಿ ಎಂಬ ಆಪತ್ತಿಯು ಉಂಟಾಗುತ್ತದೆ. ಮತ್ತು ಯಸ್ಮಿನ್ ಸತ್ಯಪಿ ಎಂಬ ಕಾರಣತ್ವವನ್ನು ವ್ಯವಸ್ಥೆ ಮಾಡುವ ನಿಯಮದಿಂದ ದಾರ್ಢ್ಯಕ್ಕೆ ಹೇತುತ್ವವೇ ಸಿದ್ಧವಾಗುತ್ತದೆ. ಏಕೆಂದರೆ ದಂಡವಿದ್ದರೂ ದಾರ್ಢ್ಯವಿಲ್ಲದಿದ್ದರೆ ಕಾರ್ಯವು ಉಂಟಾಗುವುದಿಲ್ಲ. ಅನೇಕ ಅದೃಢದಂಡಗಳನ್ನು ಹಗ್ಗದಿಂದ ಕಟ್ಟಿದಾಗ ಘಟೋತ್ಪತ್ತಿಯು ಉಂಟಾಗುವುದರಿಂದ ದಾರ್ಢ್ಯವು ಘಟಜನಕತ್ವರೂಪವಾದುದು ಎಂದು ಅಂಗೀಕರಿಸಬೇಕು. ದಾರ್ಢ್ಯಕ್ಕೆ ಘಟಜನಕತ್ವವನ್ನು ಅಂಗೀಕರಿಸಿದರೆ ಜನಕತ್ವಕ್ಕೆ ಜನಕತ್ವವನ್ನು ಅಂಗೀಕರಿಸಿದಂತಾಗುವುದರಿಂದ ವಿರೋಧವುಂಟಾಗುತ್ತದೆ ಎಂಬುದೂ ಸರಿಯಲ್ಲ. ಏಕೆಂದರೆ

ಜನಕತ್ವಕ್ಕೆ ತನ್ನ ಜನಕತ್ವವನ್ನು ಅಂಗೀಕರಿಸಿದರೆ ಆತ್ಮಾಶ್ರಯ ಬರುವುದರಿಂದ ವಿರೋಧವು ಬರುತ್ತದೆ. ಭ್ರಮಿಜನಕತ್ವಕ್ಕೆ ಘಟಜನಕತ್ವವನ್ನು ಅಂಗೀಕರಿಸಿದರೆ ವಿರೋಧದ ಪ್ರಸಕ್ತಿ ಇಲ್ಲ.

## ದಂಡವು ಭ್ರಮಿಜನಕವಾದರೆ ಜನಕತಾವಚ್ಛೇದಕ ಯಾವುದು ?

**किञ्च भ्रमिजनकतायामेव दण्डस्य किमवच्छेदकं न तावद्दण्डत्वमेव अदृढादपि भ्रम्युत्पत्त्यापत्तेः । न च दृढदण्डत्वं तथा, अवच्छेद्य भ्रमिजनकत्वातिरिक्तस्य दृढत्वस्याभावात्, भावे वा घटजनकं तदेवास्तु ।**

ಮತ್ತು ದಂಡವು ಭ್ರಮಿಜನಕವೆಂದು ಅಂಗೀಕರಿಸಿದರೂ ಜನಕತಾವಚ್ಛೇದಕವು ಯಾವುದು? ದಂಡತ್ವವಂತೂ ಅಲ್ಲ. ದಂಡತ್ವಕ್ಕೆ ಜನಕತಾವಚ್ಛೇದಕವನ್ನು ಅಂಗೀಕರಿಸಿದರೆ ಅದೃಢವಾದ ದಂಡದಿಂದಲೂ ಭ್ರಮಿಯು ಉಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ದೃಢದಂಡತ್ವವು ಅವಚ್ಛೇದಕ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಅವಚ್ಛೇದ್ಯವಾದ ಭ್ರಮಿಜನಕತ್ವವನ್ನು ಬಿಟ್ಟು ಬೇರೆ ದೃಢತ್ವವನ್ನು ನಿರ್ವಚನ ಮಾಡಲು ಬರುವುದಿಲ್ಲ. ಭ್ರಮಿಜನಕತ್ವದಲ್ಲಿ ಭ್ರಮಿಜನಕತ್ವವು ಅವಚ್ಛೇದಕವಾಗುವುದಿಲ್ಲ. ಭ್ರಮಿಜನಕತ್ವಾತಿರಿಕ್ತವಾದ ಒಂದು ಅವಚ್ಛೇದಕವನ್ನು ಹೇಳುವುದಾದರೆ ಅದೇ ಘಟವನ್ನು ಕುರಿತು ಕಾರಣವಾಗಲಿ. ದಂಡಕ್ಕೆ ಕಾರಣತ್ವವನ್ನು ಒಪ್ಪುವುದೇ ಬೇಡ ಎಂಬ ಆಪತ್ತಿಯು ಬರುತ್ತದೆ.

## ಕುಲಾಲಪಿತೃವಿಗೂ ಕಾರಣತ್ವ ಬರಲಿ

**अपि च 'अन्यं प्रतीति' न्यायेन दण्डस्यान्यथासिद्ध्यापत्तिः, कुम्भकारपितृवत् । न चान्यमुदासीनं प्रतीति विवक्षितं भ्रमिस्तु जनिकैवेति वाच्यम् । एवं कुम्भकारपितुरपि जनकत्वं स्यात् कुम्भकारस्यापि जनकत्वेनोदासीनत्वा-भावात्, तस्मादत्र समाधानं चिन्त्यम् ।**

ಅದೂ ಅಲ್ಲದೆ, ಅನ್ಯಂ ಪ್ರತಿ ಎಂಬ ಅನ್ಯಥಾಸಿದ್ಧದ ಲಕ್ಷಣವನ್ನು ಹೇಳುವ ನ್ಯಾಯದಿಂದ ಕುಂಭಕಾರಪಿತೃವಿಗೆ ಅನ್ಯಥಾಸಿದ್ಧಿಯು ಬರುವಂತೆ ದಂಡಕ್ಕೂ ಅನ್ಯಥಾಸಿದ್ಧಿಯು ಬರಲಿ ಎಂಬ ಆಪತ್ತಿಯು ಬರುತ್ತದೆ. ಅನ್ಯಥಾಸಿದ್ಧಿಯ ಲಕ್ಷಣದಲ್ಲಿ ಉದಾಸೀನವಾದ ಅನ್ಯವಸ್ತುವನ್ನು ಕುರಿತು ಪೂರ್ವವೃತ್ತಿತ್ವವು ಜ್ಞಾತವಾದಮೇಲೆಯೇ ಇತ್ಯಾದಿ ವಿವಕ್ಷೆಮಾಡುತ್ತೇವೆ. ಭ್ರಮಿಯು ಉದಾಸೀನವಲ್ಲ ಜನಕವೇ ಆಗಿದೆ. ಆದ್ದರಿಂದ ದಂಡಕ್ಕೆ ಅನ್ಯಥಾಸಿದ್ಧಿಯಿಲ್ಲ ಎಂದು ಹೇಳುವುದಾದರೆ ಕುಂಭಕಾರಪಿತೃವಿಗೂ ಸಹ ಕುಂಭಕಾರನು ಉದಾಸೀನವಲ್ಲವಾದ್ದರಿಂದ (ಘಟಜನಕನೇ ಆಗಿರುವುದರಿಂದ) ಕುಂಭಕಾರ ಪಿತೃವಿಗೂ ಕಾರಣತ್ವವು ಬರಲಿ ಎಂಬ ಆಪತ್ತಿಯು ಬರುತ್ತದೆ. ಆದ್ದರಿಂದ ಇಲ್ಲಿ ಏನು ಸಮಾಧಾನವನ್ನು ಹೇಳಬೇಕು ಎಂದು ಆಲೋಚಿಸಬೇಕು.

## ವಿಪಕ್ಷೇ ಬಾಧಕ ತರ್ಕ

**विपक्षे बाधकमाह – न हीति ।। तस्य प्रवृत्तिपूर्वमनिश्चये कारणे कायार्थिनो प्रवृत्त्यापत्तिरिति भावः । अन्यथेति ।। कार्यायोगव्यवच्छेदस्यैव कारणत्व इत्यर्थः ।**

ನ ಹಿ ಎಂಬುದಾಗಿ ವಿಪಕ್ಷದಲ್ಲಿ ಬಾಧಕವನ್ನು ಹೇಳುತ್ತಾರೆ – ನ ಹಿ ಇತಿ. ಪ್ರವೃತ್ತಿ ಮಾಡುವುದಕ್ಕಿಂತ ಮೊದಲು ಆದರಲ್ಲಿ ಕಾರ್ಯಾನುತ್ಪಾದ ಪ್ರಯೋಜಕತ್ವವು ನಿಶ್ಚಯವಾಗದಿದ್ದರೆ ಕಾರ್ಯಾರ್ಥಿಯಾದವನು ಅಲ್ಲಿ ಪ್ರವೃತ್ತಿಯನ್ನೇ ಮಾಡಲಾರ ಎಂದು ಅಭಿಪ್ರಾಯ. ಅನ್ಯಥೇತಿ – ಕಾರ್ಯಾಯೋಗ ವ್ಯವಚ್ಛೇದವೇ ಕಾರಣತ್ವ ಎಂದು ಅಂಗೀಕರಿಸಿದರೆ ಎಂದು ಅರ್ಥ.

## ಪ್ರತಿಬಂಧಕಾಭಾವವು ಕಾರಣವಲ್ಲ

**ननु तथापि प्रतिबन्धकाभावो न कारणं प्रतिबन्धकसमान-कालीनकार्यं प्रत्युत्तेजकरूपविशेषसामग्रीकल्पनेनैव सामञ्जस्ये तद्धेतुताग्राहकान्वयादेरन्यथासिद्धिरिति चेन्न । यत्र प्रतिबन्धके नोत्तेजकं तत्र प्रतिबन्धकाभावस्य कारणत्वकल्पनादन्यत्रापि**

**हेतुत्वेन तत्त्वेन तत्रावच्छेदकान्तरकल्पनौचित्यात्, न तु विशेषसामग्र्यन्तरकल्पनं गौरवात् ।**

ಹಾಗಾದರೂ ಪ್ರತಿಬಂಧಕಾಭಾವವು ಕಾರಣವಲ್ಲ. ಪ್ರತಿಬಂಧಕವಿರುವ ಕಾರಣದಲ್ಲಿ ಉತ್ತೇಜಕರೂಪವಾದ ವಿಶೇಷ ಸಾಮಗ್ರಿಯೇ ಕಾರ್ಯಕ್ಕೆ ಜನಕ ಎಂದು ಅಂಗೀಕರಿಸುವುದರಿಂದಲೇ ಎಲ್ಲವೂ ಉಪಪನ್ನವಾಗುವುದರಿಂದ ಪ್ರತಿಬಂಧಕಾಭಾವಕ್ಕೆ ಹೇತುತ್ವವನ್ನು ಸಾಧಿಸುವ ಅನ್ವಯವ್ಯತಿರೇಕಗಳು ಅನ್ಯಥಾ ಸಿದ್ಧವಾಗುತ್ತವೆ ಎಂಬ ಆಕ್ಷೇಪವು ಸರಿಯಲ್ಲ. ಎಲ್ಲಿ ಪ್ರತಿಬಂಧಕವಿದೆಯೋ ಉತ್ತೇಜಕವಿಲ್ಲವೋ ಅಲ್ಲಿ ಪ್ರತಿಬಂಧಕಾಭಾವಕ್ಕೆ ದಾಹಕಾರಣತ್ವವನ್ನು ಕಲ್ಪನೆಮಾಡಲೇಬೇಕಾಗುವುದರಿಂದ ಬೇರೆ ಸ್ಥಳದಲ್ಲಿಯೂ ಅದು ಹೇತುವಾಗುವುದರಿಂದ ಅಲ್ಲಿ ಪ್ರತಿಬಂಧಕಾಭಾವತ್ವವನ್ನು ಹೇತುತಾವಚ್ಛೇದಕವೆಂದು ಕಲ್ಪನೆಮಾಡುವುದೇ ಒಳ್ಳೆಯದು.

## ಯಾವ ಉತ್ತೇಜಕಾಭಾವವಿಶಿಷ್ಟಮಣ್ಯಭಾವವು ಹೇತು

**किञ्च उत्तेजकमननुगतमिति न दाहहेतुः । तत्तदुत्तेजकयावदभाव- विशिष्टमण्याद्यभाव एवानुगत इति स एवानुगतो हेतुः। अत एव पक्षताया अनुमितिहेतुत्वम्, अन्यथ- असिद्ध्युत्तरानुमितित्वावच्छिन्ने सिषाधयिषाविशेषसामग्री सामान्यसामग्रीपरामर्शमात्रमिति तस्या अहेतुत्वात् । नन्वेवं संशयोत्तरप्रत्यक्षत्वावच्छिन्ने विशेषदर्शनरूपसामग्र्यन्तरं न कल्प्येतेति चेत् । न इष्टत्वात्, विशेषादर्शनसहकृतसंशया- भावस्यैव हेतुत्वादिति केचित् ।।**

ಇದರಿಂದ ಉತ್ತೇಜಕವಿರುವ ಸ್ಥಳದಲ್ಲಿಯೂ ಸಮಂಜಸವಾಗುತ್ತದೆ. ಹೊರತಾಗಿ ಇನ್ನೊಂದು ವಿಶೇಷಸಾಮಗ್ರಿಯನ್ನು ಕಲ್ಪಿಸಿದರೆ ಗೌರವ ಉಂಟಾಗುತ್ತದೆ. ಮತ್ತು ಉತ್ತೇಜಕ ಸ್ಥಳದಲ್ಲಿ ಉತ್ತೇಜಕತ್ವೇನ ಅನುಗಮ ಮಾಡಿ ವಿಶೇಷ ಸಾಮಗ್ರಿಯನ್ನು ಕಲ್ಪನೆ ಮಾಡಲು ಬರುವುದಿಲ್ಲ. ಏಕೆಂದರೆ ಉತ್ತೇಜಕವು ಅನನುಗತವಾಗಿದೆ. ಆದ್ದರಿಂದ ಯಾವದುತ್ತೇಜಕಾಭಾವವಿಶಿಷ್ಟ

ಮಣ್ಯಭಾವವು ಹೇತುವೆಂದು ಹೇಳಿದರೆ ಅದು ಅನುಗತವಾಗುತ್ತದೆ. ಆದ್ದರಿಂದಲೇ ಪಕ್ಷತೆಗೆ ಅನುಮಿತಿ ಹೇತುತ್ವವು ಸಿದ್ಧವಾಗುತ್ತದೆ. ಇಲ್ಲದಿದ್ದರೆ ಸಿದ್ಧ್ಯುತ್ತರ ಅನುಮಿತಿ ಸ್ಥಳದಲ್ಲಿ ಸಿಷಾಧಯಿಷೆಯು ವಿಶೇಷಸಾಮಗ್ರಿ ಕೇವಲ ಪರಾಮರ್ಶವು ಸಾಮಾನ್ಯ ಸಾಮಗ್ರಿ . ಆದ್ದರಿಂದ ಕೇವಲ ಪರಾಮರ್ಶಕ್ಕೆ ಹೇತುತ್ವವೇ ಇಲ್ಲ ಎಂದಾಗುತ್ತದೆ. ಸಿಷಾಧಯಿಷಾವಿಶಿಷ್ಟ ಸಿದ್ಧ್ಯಭಾವವು ಕಾರಣ ಎಂದು ಹೇಳಿದರೆ ಅದು ಎಲ್ಲ ಸ್ಥಳಗಳಲ್ಲಿಯೂ ಅನುಗತವಾಗುವುದರಿಂದ ಯಾವ ದೋಷವೂ ಇಲ್ಲ. ಹಾಗಾದರೆ ಸಂಶಯೋತ್ತರ ಪ್ರತ್ಯಕ್ಷಸ್ಥಳದಲ್ಲಿ ವಿಶೇಷದರ್ಶನರೂಪ ಸಾಮಗ್ರಿಯನ್ನು ಕಲ್ಪನೆ ಮಾಡುವುದು ಬೇಡ ಎಂಬ ಆಪಾದನೆಯು ಬರುತ್ತದೆ ಎಂದು ಹೇಳಿದರೆ ಅದು ಇಷ್ಟಾಪಾದನೆ ಎಂದು ಹೇಳುತ್ತೇವೆ. ಸಂಶಯೋತ್ತರ ಪ್ರತ್ಯಕ್ಷವನ್ನು ಕುರಿತು ವಿಶೇಷಣ ದರ್ಶನಾಭಾವ ಸಹಕೃತವಾದ ಸಂಶಯದ ಅಭಾವವೇ ಕಾರಣವೆಂದು ಕೆಲವರು ಹೇಳುತ್ತಾರೆ.

## ಶಕ್ತಿಯೆಂಬ ಸಾಧ್ಯವೇ ಅಪ್ರಸಿದ್ಧ

**ननु शक्तिरूपसाध्याप्रसिद्धेर्नानुमानं स्यात्, इत्यत आह – तथाहीति ।। अवयवी प्रत्यक्ष इत्यर्थः । अन्यथा वह्नित्वस्य परमाण्ववृत्तित्वेन अव्यावर्त्तकतापत्तेः । अत्र च प्रतिबन्धकसमवधानदशायां यादृशसंयोगवान् वह्निः प्रतिबन्धकाभावकालेऽपि तादृशदारुसंयोगवानेव वह्निः स्थिरपदेन विवक्षित इति न दारुसंयोगेनार्थान्तरम् । ननु यावदजनकदशायां व्यावृत्तत्वं शक्तेर्नास्ति यत्किञ्चिदजनकदशाव्यावृत्तत्वं दारुसंयोगादेरपीत्यर्थान्तरम् इत्यपरितोषादाह – यद्वेति ।।**

ಶಕ್ತಿರೂಪವಾದ ಸಾಧ್ಯವು ಅಪ್ರಸಿದ್ಧವಾದುದರಿಂದ ಅನುಮಾನವು ಪ್ರವೃತ್ತವಾಗುವುದಿಲ್ಲ ಎಂಬ ಶಂಕೆಗೆ ತಥಾಹಿ ಎಂದು ಉತ್ತರವನ್ನು ಹೇಳುತ್ತಾರೆ – ತಥಾಹೀತಿ. ಅವಯವಿಯೆಂದರೆ ಪ್ರತ್ಯಕ್ಷವಿಷಯವಾದ ವಹ್ನಿ ಎಂದು ಅರ್ಥ. ಆಗ ತೇಜಃ ಪರಮಾಣುಗಳನ್ನು ತೆಗೆದುಕೊಳ್ಳಲು ಬರುವುದಿಲ್ಲ. ಇಲ್ಲದಿದ್ದರೆ ಪರಮಾಣುವಿನಲ್ಲಿ ವಹ್ನಿತ್ವವು ಇಲ್ಲದಿರುವುದರಿಂದ ವಹ್ನಿತ್ವವು ವ್ಯಾವರ್ತಕವಾಗಿರುತ್ತಿರಲಿಲ್ಲ. ಈ ಅನುಮಾನದಲ್ಲಿ ಸ್ಥಿರ ಎಂಬ ಪದದಿಂದ ಪ್ರತಿಬಂಧಕವಿರುವಾಗ

ವಹ್ನಿಯಲ್ಲಿ ಎಂತಹ ಸಂಯೋಗವಿದೆಯೋ ಪ್ರತಿಬಂಧಕವಿಲ್ಲದಿರುವಾಗಲೂ ಅಂತಹ ದಾಹ್ಯಸಂಯೋಗವಿರುವ ವಹ್ನಿಯೇ ನಮಗೆ ವಿವಕ್ಷಿತವಾಗಿರುವ ಕಾರಣದಿಂದ ದಾಹ್ಯ ಸಂಯೋಗವನ್ನು ತೆಗೆದುಕೊಂಡು ಅರ್ಥಾಂತರವು ಬರುವುದಿಲ್ಲ. ಎಷ್ಟು ಅಜನಕತಾ ದಶೆಗಳಿವೆಯೋ ಅಷ್ಟರಿಂದಲೂ ವ್ಯಾವೃತ್ತತ್ವವು ಶಕ್ತಿಗೆ ಇಲ್ಲ. ಯತ್ಕಿಂಚಿತ್ ಅಜನಕದಶಾವ್ಯಾವೃತ್ತತ್ವವು ದಾಹ್ಯಸಂಯೋಗಾದಿಗಳಿಗೂ ಇದೆ ಎಂಬ ಅರ್ಥಾಂತರವು ಬಂದೇ ಬರುತ್ತದೆಂಬ ಕಾರಣದಿಂದ ಯದ್ವಾ ಎಂದು ಹೇಳುತ್ತಾರೆ – ಯದ್ವೇತಿ.

## ಅಭಾವಗಳೆಲ್ಲವೂ ಅನುಪಲಬ್ಧಿಗಮ್ಯ

**न चैवं भावभूतपदं व्यर्थम्, दुरदृष्टाभावादेरतीन्द्रियस्य वारणाय तदुपगमात् । भाट्टमतेऽनुपलब्धिगम्यतया भावमात्रस्यैवातीन्द्रियत्वाद्वा । वस्तुतस्तु संयोगाद्यन्यतम - प्रत्यासत्तिजन्यसाक्षात्काराविषयत्वमभावमात्र एवेत्यनुपदमेव स्फुटम् । ननु लोहविशेषस्यैव सातिशयच्छिदाजनकत्वादती- न्द्रियतैक्ष्ण्ये मानाभावः, अतिरिक्तपदार्थापत्तेश्चेत्यस्वरसादाह – अथ वेति ॥**

ಹಾಗಾದರೆ ಭಾವಭೂತ ಎಂಬ ಪದವು ವ್ಯರ್ಥ ಎಂದು ಆಕ್ಷೇಪಿಸಿದರೆ ಅತೀಂದ್ರಿಯವಾದ ದುರದೃಷ್ಟಾಭಾವವನ್ನು ತೆಗೆದುಕೊಂಡು ಅರ್ಥಾಂತರ ನಿವಾರಣೆಯನ್ನು ಮಾಡುವುದು ಅದರ ಉಪಯೋಗ. ಅಥವಾ ಭಾಟ್ಟಮತದಲ್ಲಿ ಅಭಾವವೆಲ್ಲವೂ ಅನುಪಲಬ್ಧಿಗಮ್ಯವಾದುದರಿಂದ ಅತೀಂದ್ರಿಯವಾದ ಕಾರಣ, ಅದನ್ನು ತೆಗೆದುಕೊಂಡು ಅರ್ಥಾಂತರವನ್ನು ಪರಿಹಾರ ಮಾಡುವುದಕ್ಕಾಗಿ ಭಾವಭೂತ ಎಂಬ ಪದವನ್ನು ಹಾಕಿದ್ದೇವೆ ಎಂದು ಅಭಿಪ್ರಾಯ. ವಸ್ತುತಃ ಸಂಯೋಗಾದಿ ಅನ್ಯತಮ ಪ್ರತ್ಯಾಸತ್ತಿಜನ್ಯ ಸಾಕ್ಷಾತ್ಕಾರ ವಿಷಯತ್ವಾಭಾವವು ಅಭಾವಸಾಮಾನ್ಯದಲ್ಲಿ ಇದೆ ಎಂದು ಸದ್ಯದಲ್ಲಿಯೇ ಹೇಳುತ್ತೇವೆ. ಲೋಹವಿಶೇಷವೇ ಅತಿಶಯವಾದ ಛೇದನಕ್ಕೆ ಕಾರಣವಾದುದರಿಂದ ಅತೀಂದ್ರಿಯ ತೈಕ್ಷ್ಣ್ಯದಲ್ಲಿ ಪ್ರಮಾಣವಿಲ್ಲ. ಮತ್ತು ಅತೀಂದ್ರಿಯ ತೈಕ್ಷ್ಣ್ಯವನ್ನು ಒಪ್ಪಿದರೆ ಅತಿರಿಕ್ತವಾದ ಪದಾರ್ಥವನ್ನು ಒಪ್ಪಬೇಕಾಗುತ್ತದೆ ಎಂಬ ಅಸ್ವಾರಸ್ಯದಿಂದ ಅಥವಾ ಎಂದು ಇನ್ನೊಂದು ಅನುಮಾನವನ್ನು ಹೇಳುತ್ತಾರೆ – ಅಥವೇತಿ.

ಮಣ್ಯಭಾವವು ಹೇತುವೆಂದು ಹೇಳಿದರೆ ಅದು ಅನುಗತವಾಗುತ್ತದೆ. ಆದ್ದರಿಂದಲೇ ಪಕ್ಷತೆಗೆ ಅನುಮಿತಿ ಹೇತುತ್ವವು ಸಿದ್ಧವಾಗುತ್ತದೆ. ಇಲ್ಲದಿದ್ದರೆ ಸಿದ್ಧ್ಯುತ್ತರ ಅನುಮಿತಿ ಸ್ಥಳದಲ್ಲಿ ಸಿಷಾಧಯಿಷೆಯು ವಿಶೇಷಸಾಮಗ್ರಿ ಕೇವಲ ಪರಾಮರ್ಶವು ಸಾಮಾನ್ಯ ಸಾಮಗ್ರಿ . ಆದ್ದರಿಂದ ಕೇವಲ ಪರಾಮರ್ಶಕ್ಕೆ ಹೇತುತ್ವವೇ ಇಲ್ಲ ಎಂದಾಗುತ್ತದೆ. ಸಿಷಾಧಯಿಷಾವಿಶಿಷ್ಟ ಸಿದ್ಧ್ಯಭಾವವು ಕಾರಣ ಎಂದು ಹೇಳಿದರೆ ಅದು ಎಲ್ಲ ಸ್ಥಳಗಳಲ್ಲಿಯೂ ಅನುಗತವಾಗುವುದರಿಂದ ಯಾವ ದೋಷವೂ ಇಲ್ಲ. ಹಾಗಾದರೆ ಸಂಶಯೋತ್ತರ ಪ್ರತ್ಯಕ್ಷಸ್ಥಳದಲ್ಲಿ ವಿಶೇಷದರ್ಶನರೂಪ ಸಾಮಗ್ರಿಯನ್ನು ಕಲ್ಪನೆ ಮಾಡುವುದು ಬೇಡ ಎಂಬ ಆಪಾದನೆಯು ಬರುತ್ತದೆ ಎಂದು ಹೇಳಿದರೆ ಅದು ಇಷ್ಟಾಪಾದನೆ ಎಂದು ಹೇಳುತ್ತೇವೆ. ಸಂಶಯೋತ್ತರ ಪ್ರತ್ಯಕ್ಷವನ್ನು ಕುರಿತು ವಿಶೇಷಣ ದರ್ಶನಾಭಾವ ಸಹಕೃತವಾದ ಸಂಶಯದ ಅಭಾವವೇ ಕಾರಣವೆಂದು ಕೆಲವರು ಹೇಳುತ್ತಾರೆ.

## ಶಕ್ತಿಯೆಂಬ ಸಾಧ್ಯವೇ ಅಪ್ರಸಿದ್ಧ

**ननु शक्तिरूपसाध्याप्रसिद्धेर्नानुमानं स्यात्, इत्यत आह – तथाहीति ।। अवयवी प्रत्यक्ष इत्यर्थः । अन्यथा वह्नित्वस्य परमाण्ववृत्तित्वेन अव्यावर्त्तकतापत्तेः । अत्र च प्रतिबन्धकसमवधानदशायां यादृशसंयोगवान् वह्निः प्रतिबन्धकाभावकालेऽपि तादृशदारुसंयोगवानेव वह्निः स्थिरपदेन विवक्षित इति न दारुसंयोगेनार्थान्तरम् । ननु यावदजनकदशायां व्यावृत्तत्वं शक्तेर्नास्ति यत्किञ्चिदजनकदशाव्यावृत्तत्वं दारुसंयोगादेरपीत्यर्थान्तरम् इत्यपरितोषादाह – यद्वेति ।।**

ಶಕ್ತಿರೂಪವಾದ ಸಾಧ್ಯವು ಅಪ್ರಸಿದ್ಧವಾದುದರಿಂದ ಅನುಮಾನವು ಪ್ರವೃತ್ತವಾಗುವುದಿಲ್ಲ ಎಂಬ ಶಂಕೆಗೆ ತಥಾಹಿ ಎಂದು ಉತ್ತರವನ್ನು ಹೇಳುತ್ತಾರೆ – ತಥಾಹೀತಿ. ಅವಯವಿಯೆಂದರೆ ಪ್ರತ್ಯಕ್ಷವಿಷಯವಾದ ವಹ್ನಿ ಎಂದು ಅರ್ಥ. ಆಗ ತೇಜಃ ಪರಮಾಣುಗಳನ್ನು ತೆಗೆದುಕೊಳ್ಳಲು ಬರುವುದಿಲ್ಲ. ಇಲ್ಲದಿದ್ದರೆ ಪರಮಾಣುವಿನಲ್ಲಿ ವಹ್ನಿತ್ವವು ಇಲ್ಲದಿರುವುದರಿಂದ ವಹ್ನಿತ್ವವು ವ್ಯಾವರ್ತಕವಾಗಿರುತ್ತಿರಲಿಲ್ಲ. ಈ ಅನುಮಾನದಲ್ಲಿ ಸ್ಥಿರ ಎಂಬ ಪದದಿಂದ ಪ್ರತಿಬಂಧಕವಿರುವಾಗ

ವಹ್ನಿಯಲ್ಲಿ ಎಂತಹ ಸಂಯೋಗವಿದೆಯೋ ಪ್ರತಿಬಂಧಕವಿಲ್ಲದಿರುವಾಗಲೂ ಅಂತಹ ದಾಹ್ಯಸಂಯೋಗವಿರುವ ವಹ್ನಿಯೇ ನಮಗೆ ವಿವಕ್ಷಿತವಾಗಿರುವ ಕಾರಣದಿಂದ ದಾಹ್ಯ ಸಂಯೋಗವನ್ನು ತೆಗೆದುಕೊಂಡು ಅರ್ಥಾಂತರವು ಬರುವುದಿಲ್ಲ. ಎಷ್ಟು ಅಜನಕತಾ ದಶೆಗಳಿವೆಯೋ ಅಷ್ಟರಿಂದಲೂ ವ್ಯಾವೃತ್ತತ್ವವು ಶಕ್ತಿಗೆ ಇಲ್ಲ. ಯತ್ಕಿಂಚಿತ್ ಅಜನಕದಶಾವ್ಯಾವೃತ್ತತ್ವವು ದಾಹ್ಯಸಂಯೋಗಾದಿಗಳಿಗೂ ಇದೆ ಎಂಬ ಅರ್ಥಾಂತರವು ಬಂದೇ ಬರುತ್ತದೆಂಬ ಕಾರಣದಿಂದ ಯದ್ವಾ ಎಂದು ಹೇಳುತ್ತಾರೆ – ಯದ್ವೇತಿ.

## ಅಭಾವಗಳೆಲ್ಲವೂ ಅನುಪಲಬ್ಧಿಗಮ್ಯ

**न चैवं भावभूतपदं व्यर्थम्, दुरदृष्टाभावादेरतीन्द्रियस्य वारणाय तदुपगमात् । भाट्टमतेऽनुपलब्धिगम्यतया भावमात्रस्यैवातीन्द्रियत्वाद्वा । वस्तुतस्तु संयोगाद्यन्यतम - प्रत्यासत्तिजन्यसाक्षात्काराविषयत्वमभावमात्र एवेत्यनुपदमेव स्फुटम् । ननु लोहविशेषस्यैव सातिशयच्छिदाजनकत्वादती- न्द्रियतैक्ष्ण्ये मानाभावः, अतिरिक्तपदार्थापत्तेश्चेत्यस्वरसादाह – अथ वेति ।।**

ಹಾಗಾದರೆ ಭಾವಭೂತ ಎಂಬ ಪದವು ವ್ಯರ್ಥ ಎಂದು ಆಕ್ಷೇಪಿಸಿದರೆ ಅತೀಂದ್ರಿಯವಾದ ದುರದೃಷ್ಟಾಭಾವವನ್ನು ತೆಗೆದುಕೊಂಡು ಅರ್ಥಾಂತರ ನಿವಾರಣೆಯನ್ನು ಮಾಡುವುದು ಅದರ ಉಪಯೋಗ. ಅಥವಾ ಭಾಟ್ಟಮತದಲ್ಲಿ ಅಭಾವವೆಲ್ಲವೂ ಅನುಪಲಬ್ಧಿಗಮ್ಯವಾದುದರಿಂದ ಅತೀಂದ್ರಿಯವಾದ ಕಾರಣ, ಅದನ್ನು ತೆಗೆದುಕೊಂಡು ಅರ್ಥಾಂತರವನ್ನು ಪರಿಹಾರ ಮಾಡುವುದಕ್ಕಾಗಿ ಭಾವಭೂತ ಎಂಬ ಪದವನ್ನು ಹಾಕಿದ್ದೇವೆ ಎಂದು ಅಭಿಪ್ರಾಯ. ವಸ್ತುತಃ ಸಂಯೋಗಾದಿ ಅನ್ಯತಮ ಪ್ರತ್ಯಾಸತ್ತಿಜನ್ಯ ಸಾಕ್ಷಾತ್ಕಾರ ವಿಷಯತ್ವಾಭಾವವು ಅಭಾವಸಾಮಾನ್ಯದಲ್ಲಿ ಇದೆ ಎಂದು ಸದ್ಯದಲ್ಲಿಯೇ ಹೇಳುತ್ತೇವೆ. ಲೋಹವಿಶೇಷವೇ ಅತಿಶಯವಾದ ಭೇದನಕ್ಕೆ ಕಾರಣವಾದುದರಿಂದ ಅತೀಂದ್ರಿಯ ತೈಕ್ಷ್ಣ್ಯದಲ್ಲಿ ಪ್ರಮಾಣವಿಲ್ಲ. ಮತ್ತು ಅತೀಂದ್ರಿಯ ತೈಕ್ಷ್ಣ್ಯವನ್ನು ಒಪ್ಪಿದರೆ ಅತಿರಿಕ್ತವಾದ ಪದಾರ್ಥವನ್ನು ಒಪ್ಪಬೇಕಾಗುತ್ತದೆ ಎಂಬ ಅಸ್ವಾರಸ್ಯದಿಂದ ಅಥವಾ ಎಂದು ಇನ್ನೊಂದು ಅನುಮಾನವನ್ನು ಹೇಳುತ್ತಾರೆ – ಅಥವೇತಿ.

## ಕಾರ್ಯಾನುಕೂಲತ್ವಂ ಎಂದರೇನು ?

**कार्यानुकूलत्वं स्वनिमित्तकारणककार्यानुकूलत्वं विवक्षितम्, तेन कर्मानुकूलस्थितिस्थापकेन नार्थान्तरं कर्मणि तु वह्निः समवायिकारणमिति नोक्तदोषः । वह्नौ स्थितिस्थापकाभावपक्षे कार्यानुकूलपदमुद्देश्यसिद्ध्यर्थम् । अदृष्टवदात्मसंयोगोष्ण-स्पर्शप्रतिबन्धकाभावादिनार्थान्तरवारणाया 'द्विष्ठादि'-विशेषणम् । यद्यपि गुरुमतेऽभावोऽधिको नास्त्येवेति समवायपदमधिकं, तथापि परस्यार्थान्तरं स्यादेवेति तद्वारणाय तदुपात्तमिति ध्येयम् ।**

ಇಲ್ಲಿ ಕಾರ್ಯಾನುಕೂಲತ್ವವೆಂದರೆ ಸ್ವನಿಮಿತ್ತಕಾರಣಕವಾದ ಕಾರ್ಯವನ್ನು ಕುರಿತು ಅನುಕೂಲತ್ವ ಎಂದು ವಿವಕ್ಷಿತವಾಗಿದೆ. ಆದ್ದರಿಂದ ಕರ್ಮಾನುಕೂಲವಾದ ಸ್ಥಿತಿಸ್ಥಾಪಕ ಧರ್ಮವನ್ನು ತೆಗೆದುಕೊಂಡು ಅರ್ಥಾಂತರವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಸ್ಥಿತಿಸ್ಥಾಪನವನ್ನು ಕುರಿತು ವಹ್ನಿಯು ಸಮವಾಯಿ ಕಾರಣವಾಗಿದೆ. ವಹ್ನಿಯಲ್ಲಿ ಸ್ಥಿತಿಸ್ಥಾಪಕ ಗುಣವನ್ನು ಒಪ್ಪದಿದ್ದ ಪಕ್ಷದಲ್ಲಿ ಕಾರ್ಯಾನುಕೂಲಪದವು ಉದ್ದೇಶ್ಯಸಿದ್ಧಿಗಾಗಿ ಇದೆ. ಅರ್ಥಾಂತರವನ್ನು ನಿವಾರಣೆ ಮಾಡುವುದಕ್ಕಾಗಿ ಅಲ್ಲ. ಅದೃಷ್ಟವದಾತ್ಮಸಂಯೋಗ, ಉಷ್ಣಸ್ಪರ್ಶ ಮತ್ತು ಪ್ರತಿಬಂಧಕಾಭಾವಗಳನ್ನು ತೆಗೆದುಕೊಂಡು ಬರುವ ಅರ್ಥಾಂತರವನ್ನು ನಿವಾರಣೆಯನ್ನು ಮಾಡಲು ಅದ್ವಿಷ್ಠ , ಧರ್ಮ ಮತ್ತು ಸಮವಾಯ ಎಂಬ ಪದಗಳನ್ನು ವಿಶೇಷವಾಗಿ ಕೊಡಲಾಗಿದೆ. ಯದ್ಯಪಿ ಗುರುಮತದಲ್ಲಿ ಅತಿರಿಕ್ತವಾದ ಅಭಾವವೇ ಇಲ್ಲದಿರುವುದರಿಂದ ಅಭಾವವನ್ನು ನಿವಾರಣೆ ಮಾಡಲು ತೆಗೆದುಕೊಂಡಿರುವ ಸಮವಾಯಿ ಪದವು ಅಧಿಕವಾಗುತ್ತದೆ. ಆದರೂ ನೈಯಾಯಿಕರೀತ್ಯಾ ಅರ್ಥಾಂತರವು ಬಂದೇ ಬರುವುದರಿಂದ ಅದನ್ನು ವಾರಣೆ ಮಾಡಲು ಸಮವಾಯಿ ಪದವು ಸಾರ್ಥಕ ಎಂದು ಅಭಿಪ್ರಾಯ.

## ಗುರುಮತದಲ್ಲಿ ಅತಿರಿಕ್ತವಾದ ಅಭಾವವಿಲ್ಲ

**ऐन्द्रियकाणामिति ।। वस्तुतस्तु संयोगादिपञ्चकजन्यज्ञानस्या प्रसिद्धेः साध्याप्रसिद्धिर्द्रष्टव्या । तथापीति ।। यद्यपि जन्यान्तं**

**व्यर्थं तदजन्यसाक्षात्कारस्य व्यावर्त्यस्याप्रसिद्धेः, तद्रहितं च न्यायनयेऽप्रसिद्धं तथापि विशिष्टाभावे न वैयर्थ्यमिति ध्येयम् । अत्र संयोगादीत्यर्थः । तेनात्ममनोयोगस्य योगिप्रत्यक्षादावपि जनकत्वान्न परं प्रति असिद्धिरिति मन्तव्यम् । नचाभावेति ।। उक्तातीन्द्रियत्वस्य तत्रापि भावादिति भावः । तस्येति ।। गुरुमतेतिरिक्तस्य तस्यासिद्धेरित्यर्थः ।**

ಐಂದ್ರಿಯಕಾಣಾಮಿತಿ – ವಸ್ತುತಃ ಸಂಯೋಗಾದಿ ಪಂಚ ಪ್ರತ್ಯಾಸತ್ತಿ ಜನ್ಯಜ್ಞಾನವು ಅಪ್ರಸಿದ್ಧವಾದುದರಿಂದ ಇಲ್ಲಿ ಸಾಧ್ಯಾಪ್ರಸಿದ್ಧಿಯನ್ನೇ ತಿಳಿಯಬೇಕು. ತಥಾಪೀತಿ – ಯದ್ಯಪಿ ಜನ್ಯಾಂತ ಪದೋಪಾದಾನವು ವ್ಯರ್ಥವಾಗುತ್ತದೆ. ಸಂಯೋಗಾದಿ ಪಂಚಕಜನ್ಯವಾದ ವ್ಯಾವರ್ತ್ಯವಾದ ಸಾಕ್ಷಾತ್ಕಾರವು ಅಪ್ರಸಿದ್ಧವಾಗುವುದರಿಂದ ತದ್ರಹಿತವಾದುದು ನ್ಯಾಯಮತದಲ್ಲಿ ಅಪ್ರಸಿದ್ಧವಾಗುತ್ತದೆ. ಆದರೂ ವಿಶಿಷ್ಟಾಭಾವವು ಅಖಂಡವಾದುದರಿಂದ ಇಲ್ಲಿ ವೈಯರ್ಥವಿಲ್ಲ. ಸಂಯೋಗಾದ್ಯನ್ಯತರ ಪ್ರತ್ಯಾಸತ್ತಿಜನ್ಯ ಸಾಕ್ಷಾತ್ಕಾರಾವಿಷಯತ್ವ ಎಂಬಲ್ಲಿ ಅತ್ರ (ಇಲ್ಲಿ) ಸಂಯೋಗಾದ್ಯಜನ್ಯ ಇತ್ಯಾದಿಯಾಗಿ ತೆಗೆದುಕೊಳ್ಳಬೇಕು. ಆದರಿಂದ ಆತ್ಮಮನಃಸಂಯೋಗವು ಯೋಗಿಪ್ರತ್ಯಕ್ಷದಲ್ಲಿಯೂ ಸಹ ಜನಕವಾಗಿರುವುದರಿಂದ ಪರನನ್ನು ಕುರಿತು ಅಸಿದ್ಧಿದೋಷವಿಲ್ಲ ಎಂದು ತಿಳಿಯಬೇಕು. ನಚಾಭಾವೇತಿ – ಅಲ್ಲಿಯೂ ಸಹ ನಾವು ನಿರ್ವಚನ ಮಾಡಿದ ಅತೀಂದ್ರಿಯತ್ವವು ಇರುವ ಕಾರಣ ಎಂದು ಅಭಿಪ್ರಾಯ. ತಸ್ಯೇತಿ – ಗುರುಮತದಲ್ಲಿ ಅತಿರಿಕ್ತವಾದ ಅಭಾವವು ಇಲ್ಲದಿರುವುದರಿಂದ ಎಂದು ಅರ್ಥ.

## ನೈಯಾಯಿಕ ಮತದಲ್ಲಿ ಹೇಗೆ ಸಮಾಧಾನ ?

**नैयायिकमते च परिभाषिकस्य निरुक्तस्यातीन्द्रियत्वस्याभावे वृत्तावपि न काचित्क्षतिः । तमादायार्थान्तरशङ्कायाः समवायिपदेनैव वारणादिति भावः । परमाणौ साध्यव्याप्तेराह – यद्वेति ।। यद्वा कार्यस्य विशेषरूपेण सिद्ध्यर्थमाह – यद्वेति ।। अदृष्टत्वस्य धर्मत्वादेरित्यर्थः । अनुकूलत्वेनेति ।।**

**कारणतदवच्छेदकसाधारणस्य तस्य तस्याग्रे निरुक्तत्वादिति भावः ।**

ನಿರ್ವಚನ ಮಾಡಿದ ಈ ಅತೀಂದ್ರಿಯತ್ವವು ನೈಯಾಯಿಕ ಮತರೀತ್ಯಾ ಅಭಾವದಲ್ಲಿ ಬಂದರೂ ತೊಂದರೆಯಿಲ್ಲ. ಅಭಾವವನ್ನು ತೆಗೆದುಕೊಂಡು ಬರುವ ಆ ಅರ್ಥಾಂತರ ಶಂಕೆಯು ಸಮವಾಯಿ ಪದದಿಂದಲೇ ನಿರಸ್ತವಾಗುತ್ತದೆ. ಪರಮಾಣುವಿನಲ್ಲಿ ಸಾಧ್ಯವ್ಯಾಪಕತ್ವವು ಬರದಿರುವುದರಿಂದ ಯದ್ವಾ ಎಂದು ಇನ್ನೊಂದು ಅನುಮಾನವನ್ನು ಹೇಳುತ್ತಾರೆ – ಯದ್ವೇತಿ. ಅಥವಾ ಕಾರ್ಯವು ವಿಶೇಷರೂಪದಿಂದ ಸಿದ್ಧಿಯಾಗುವುದಕ್ಕಾಗಿ ಯದ್ವಾ ಎಂದು ಹೇಳುತ್ತಾರೆ – ಯದ್ವೇತಿ. ಅದೃಷ್ಟತ್ವ ಎಂದರೆ ಧರ್ಮತ್ವಾದಿಗಳು ಎಂದು ಅರ್ಥ. ಅನುಕೂಲತ್ವೇನೇತಿ – ಕಾರಣತಾವಚ್ಛೇದಕ ಸಾಧಾರಣವಾದ ಅನುಕೂಲತ್ವವನ್ನು ಮೊದಲೇ ನಿರ್ವಚನ ಮಾಡಿದ್ದೇವೆ ಎಂದು ಅಭಿಪ್ರಾಯ.

## ಮೀಮಾಂಸಕ ಮತದಲ್ಲಿ ಶಕ್ತಿಯೇ ಕಾರಣತಾವಚ್ಛೇದಕ

**यद्यपि तन्मते धर्मत्वादिकं न कारणतावच्छेदकं किन्तु शक्तिरेव, तथापि न्यायनये धर्मत्वादिकमादाय तन्मते शक्तिमादाय साध्यमस्त्येवादृष्टे, उपाधिस्तु नेत्युभयसिद्धसाध्या-व्यापकत्वमिति भावः । अद्विष्टपदानुपदानात् साध्ये लाघवं स्थितिस्थापकेन नार्थान्तरत्वशङ्कापीति मनसि कृत्वाह – अथवेति ।।**

ಯದ್ಯಪಿ ಮೀಮಾಂಸಕ ಮತದಲ್ಲಿ ಶಕ್ತಿಯೇ ಕಾರಣತಾವಚ್ಛೇದಕವೇ ಹೊರತು ಧರ್ಮತ್ವಾದಿಗಳು ಕಾರಣತಾವಚ್ಛೇದಕವಲ್ಲ. ಆದರೂ ನ್ಯಾಯಮತ ರೀತ್ಯಾ ಧರ್ಮತ್ವವನ್ನು ತೆಗೆದುಕೊಂಡು ಮೀಮಾಂಸಕ ಮತ ರೀತ್ಯಾ ಶಕ್ತಿಯನ್ನು ತೆಗೆದುಕೊಂಡು ಅದೃಷ್ಟದಲ್ಲಿ ಸಾಧ್ಯವಿದೆ, ಉಪಾಧಿಯಾದ ಆತ್ಮತ್ವವು ಇಲ್ಲ ಎಂದು ಉಭಯಸಿದ್ಧಸಾಧ್ಯವ್ಯಾಪಕತ್ವ ಭಂಗವು ಉಂಟಾಗುತ್ತದೆ ಎಂದು ಅಭಿಪ್ರಾಯ. ಅದ್ವಿಷ್ಟ ಪದವನ್ನು ಸಾಧ್ಯದಲ್ಲಿ ಹಾಕದೇ ಇರುವುದರಿಂದ ಲಾಘವ ಮತ್ತು ಸ್ಥಿತಿಸ್ಥಾಪಕದಿಂದ ಅರ್ಥಾಂತರ ಶಂಕೆಯೂ ಇಲ್ಲ ಎಂಬ ಅಭಿಪ್ರಾಯದಿಂದ ಅಥವಾ ಎಂದು ಇನ್ನೊಂದು ಅನುಮಾನವನ್ನು ಹೇಳುತ್ತಾರೆ – ಅಥವೇತಿ.

## ವ್ಯಭಿಚಾರ ದೋಷವಿಲ್ಲ

**कार्यानुकूलत्वं स्वकार्यानुकूलत्वं तदप्युद्देश्यसिद्धये । संयोगत्वेनार्थान्तरवारणाय 'अतीन्द्रिये'ति ।। उक्तातीन्द्रियत्वस्य प्रतिबन्धकाभावेपि सत्त्वात्परमतेऽर्थान्तरशङ्का माभूदित्यत उक्तम् – समवायीति ।। जनकत्वादिति ।। ना चाभावे व्यभिचारः, समवायगर्भसाध्यस्य तत्रासत्त्वादिति वाच्यम् । परैरभावानङ्गीकारात् ।**

ಕಾರ್ಯಾನುಕೂಲತ್ವವೆಂದರೆ ಸ್ವಕಾರ್ಯಾನುಕೂಲತ್ವ ಎಂದು ಅರ್ಥ. ಈ ದಳವನ್ನು ಉದ್ದೇಶಸಿದ್ಧಿಗಾಗಿ ಹಾಕಲಾಗಿದೆ. ಬೇರೆ ಏನನ್ನೂ ವಾರಣೆ ಮಾಡುವುದಕ್ಕಾಗಿ ಅಲ್ಲ. ಸಂಯೋಗತ್ವವನ್ನು ತೆಗೆದುಕೊಂಡು ಬರುವ ಅರ್ಥಾಂತರವನ್ನು ವಾರಣೆ ಮಾಡಲು ಅತೀಂದ್ರಿಯ ಎಂಬ ವಿಶೇಷಣವನ್ನು ಹಾಕಿದೆ. ನಿರ್ವಚನ ಮಾಡಿದ ಅತೀಂದ್ರಿಯತ್ವವು ನ್ಯಾಯಮತದಂತೆ ಪ್ರತಿಬಂಧಕಾಭಾವದಲ್ಲಿಯೂ ಇರುವುದರಿಂದ ಬರುವ ಅರ್ಥಾಂತರ ಶಂಕೆಯನ್ನು ವಾರಣೆ ಮಾಡಲು ಸಮವಾಯಿ ಎಂಬ ವಿಶೇಷಣವನ್ನು ಹಾಕಿದೆ. ಜನಕತ್ವಾದಿತಿ – ಅಭಾವದಲ್ಲಿ ಸಮವಾಯಿಗರ್ಭವಾದ ಸಾಧ್ಯವಿಲ್ಲದಿರುವುದರಿಂದ ಮತ್ತು ಜನಕತ್ವವು ಇರುವುದರಿಂದ ವ್ಯಭಿಚಾರವು ಬರುತ್ತದೆ ಎಂಬ ಆಕ್ಷೇಪವಿಲ್ಲ. ಏಕೆಂದರೆ ಪರರು ಅಭಾವವನ್ನೇ ಅಂಗೀಕರಿಸುವುದಿಲ್ಲ.

## ಸಮವಾಯದಲ್ಲಿ ವ್ಯಭಿಚಾರ ಬರುತ್ತದೆಯೇ ?

**ननु तथापि समवाये व्यभिचारः । न च तत्रापि शक्तिसमवायोस्त्येवेति वाच्यम् । अनवस्थनादिति चेन्न । निमित्तकारणतातिरिक्तकारणताश्रयत्वस्य हेत्वर्थत्वात् । तच्च यत्किञ्चित्कार्ये प्रत्येकं विवक्षितं न तु दाहलक्षणं प्रतीति नासिद्धिरिति ध्येयम् । अत्र साध्ये हेतौ च दाहपदप्रक्षेपेण वह्निपक्षकानुमान इवानुमानान्तरमपि ग्रन्थकृदभिमतं**

**कारणतदवच्छेदकसाधारणस्य तस्य तस्याग्रे निरुक्तत्वादिति भावः ।**

ನಿರ್ವಚನ ಮಾಡಿದ ಈ ಅತೀಂದ್ರಿಯತ್ವವು ನೈಯಾಯಿಕ ಮತರೀತ್ಯಾ ಅಭಾವದಲ್ಲಿ ಬಂದರೂ ತೊಂದರೆಯಿಲ್ಲ. ಅಭಾವವನ್ನು ತೆಗೆದುಕೊಂಡು ಬರುವ ಆ ಅರ್ಥಾಂತರ ಶಂಕೆಯು ಸಮವಾಯಿ ಪದದಿಂದಲೇ ನಿರಸ್ತವಾಗುತ್ತದೆ. ಪರಮಾಣುವಿನಲ್ಲಿ ಸಾಧ್ಯವ್ಯಾಪಕತ್ವವು ಬರದಿರುವುದರಿಂದ ಯದ್ವಾ ಎಂದು ಇನ್ನೊಂದು ಅನುಮಾನವನ್ನು ಹೇಳುತ್ತಾರೆ – ಯದ್ವೇತಿ. ಅಥವಾ ಕಾರ್ಯವು ವಿಶೇಷರೂಪದಿಂದ ಸಿದ್ಧಿಯಾಗುವುದಕ್ಕಾಗಿ ಯದ್ವಾ ಎಂದು ಹೇಳುತ್ತಾರೆ – ಯದ್ವೇತಿ. ಅದೃಷ್ಟತ್ವ ಎಂದರೆ ಧರ್ಮತ್ವಾದಿಗಳು ಎಂದು ಅರ್ಥ. ಅನುಕೂಲತ್ವೇನೇತಿ – ಕಾರಣತಾವಚ್ಛೇದಕ ಸಾಧಾರಣವಾದ ಅನುಕೂಲತ್ವವನ್ನು ಮೊದಲೇ ನಿರ್ವಚನ ಮಾಡಿದ್ದೇವೆ ಎಂದು ಅಭಿಪ್ರಾಯ.

## ಮೀಮಾಂಸಕ ಮತದಲ್ಲಿ ಶಕ್ತಿಯೇ ಕಾರಣತಾವಚ್ಛೇದಕ

**यद्यपि तन्मते धर्मत्वादिकं न कारणतावच्छेदकं किन्तु शक्तिरेव, तथापि न्यायनये धर्मत्वादिकमादाय तन्मते शक्तिमादाय साध्यमस्त्येवादृष्टे, उपाधिस्तु नेत्युभयसिद्धसाध्या-व्यापकत्वमिति भावः । अद्विष्टपदानुपदानात् साध्ये लाघवं स्थितिस्थापकेन नार्थान्तरत्वशङ्कापीति मनसि कृत्वाह – अथवेति ।।**

ಯದ್ಯಪಿ ಮೀಮಾಂಸಕ ಮತದಲ್ಲಿ ಶಕ್ತಿಯೇ ಕಾರಣತಾವಚ್ಛೇದಕವೇ ಹೊರತು ಧರ್ಮತ್ವಾದಿಗಳು ಕಾರಣತಾವಚ್ಛೇದಕವಲ್ಲ. ಆದರೂ ನ್ಯಾಯಮತ ರೀತ್ಯಾ ಧರ್ಮತ್ವವನ್ನು ತೆಗೆದುಕೊಂಡು ಮೀಮಾಂಸಕ ಮತ ರೀತ್ಯಾ ಶಕ್ತಿಯನ್ನು ತೆಗೆದುಕೊಂಡು ಅದೃಷ್ಟದಲ್ಲಿ ಸಾಧ್ಯವಿದೆ, ಉಪಾಧಿಯಾದ ಆತ್ಮತ್ವವು ಇಲ್ಲ ಎಂದು ಉಭಯಸಿದ್ಧಸಾಧ್ಯವ್ಯಾಪಕತ್ವ ಭಂಗವು ಉಂಟಾಗುತ್ತದೆ ಎಂದು ಅಭಿಪ್ರಾಯ. ಅದ್ವಿಷ್ಟ ಪದವನ್ನು ಸಾಧ್ಯದಲ್ಲಿ ಹಾಕದೇ ಇರುವುದರಿಂದ ಲಾಘವ ಮತ್ತು ಸ್ಥಿತಿಸ್ಥಾಪಕದಿಂದ ಅರ್ಥಾಂತರ ಶಂಕೆಯೂ ಇಲ್ಲ ಎಂಬ ಅಭಿಪ್ರಾಯದಿಂದ ಅಥವಾ ಎಂದು ಇನ್ನೊಂದು ಅನುಮಾನವನ್ನು ಹೇಳುತ್ತಾರೆ – ಅಥವೇತಿ.

## ವ್ಯಭಿಚಾರ ದೋಷವಿಲ್ಲ

**कार्यानुकूलत्वं स्वकार्यानुकूलत्वं तदप्युद्देश्यसिद्धये । संयोग त्वेनार्थान्तरवारणाय 'अतीन्द्रिये'ति ।। उक्तातीन्द्रियत्वस्य प्रतिबन्धकाभावेपि सत्त्वात्परमतेऽर्थान्तरशङ्का माभूदित्यत उक्तम् – समवायीति ।। जनकत्वादिति ।। ना चाभावे व्यभिचारः, समवायगर्भसाध्यस्य तत्रासत्त्वादिति वाच्यम् । परैरभावानङ्गीकारात् ।**

ಕಾರ್ಯಾನುಕೂಲತ್ವವೆಂದರೆ ಸ್ವಕಾರ್ಯಾನುಕೂಲತ್ವ ಎಂದು ಅರ್ಥ. ಈ ದಳವನ್ನು ಉದ್ದೇಶಸಿದ್ಧಿಗಾಗಿ ಹಾಕಲಾಗಿದೆ. ಬೇರೆ ಏನನ್ನೂ ವಾರಣೆ ಮಾಡುವುದಕ್ಕಾಗಿ ಅಲ್ಲ. ಸಂಯೋಗತ್ವವನ್ನು ತೆಗೆದುಕೊಂಡು ಬರುವ ಅರ್ಥಾಂತರವನ್ನು ವಾರಣೆ ಮಾಡಲು ಅತೀಂದ್ರಿಯ ಎಂಬ ವಿಶೇಷಣವನ್ನು ಹಾಕಿದೆ. ನಿರ್ವಚನ ಮಾಡಿದ ಅತೀಂದ್ರಿಯತ್ವವು ನ್ಯಾಯಮತದಂತೆ ಪ್ರತಿಬಂಧಕಾಭಾವದಲ್ಲಿಯೂ ಇರುವುದರಿಂದ ಬರುವ ಅರ್ಥಾಂತರ ಶಂಕೆಯನ್ನು ವಾರಣೆ ಮಾಡಲು ಸಮವಾಯಿ ಎಂಬ ವಿಶೇಷಣವನ್ನು ಹಾಕಿದೆ. ಜನಕತ್ವಾದಿತಿ – ಅಭಾವದಲ್ಲಿ ಸಮವಾಯಿಗರ್ಭವಾದ ಸಾಧ್ಯವಿಲ್ಲದಿರುವುದರಿಂದ ಮತ್ತು ಜನಕತ್ವವು ಇರುವುದರಿಂದ ವ್ಯಭಿಚಾರವು ಬರುತ್ತದೆ ಎಂಬ ಆಕ್ಷೇಪವಿಲ್ಲ. ಏಕೆಂದರೆ ಪರರು ಅಭಾವವನ್ನೇ ಅಂಗೀಕರಿಸುವುದಿಲ್ಲ.

## ಸಮವಾಯದಲ್ಲಿ ವ್ಯಭಿಚಾರ ಬರುತ್ತದೆಯೇ ?

**ननु तथापि समवाये व्यभिचारः । न च तत्रापि शक्तिसमवायोस्त्येवेति वाच्यम् । अनवस्थनादिति चेन्न । निमित्तकारणतातिरिक्तकारणताश्रयत्वस्य हेत्वर्थत्वात् । तच्च यत्किञ्चित्कार्ये प्रत्येकं विवक्षितं न तु दाहलक्षणं प्रतीति नासिद्धिरिति ध्येयम् । अत्र साध्ये हेतौ च दाहपदप्रक्षेपेण वह्निपक्षकानुमान इवानुमानान्तरमपि ग्रन्थकृदभिमतं**

**लेखकप्रमादान्न प्रचरतीति ध्येयम् । अत एवैतदन्तर्भावेनैव वक्ष्यति – अग्रिमचतुर्षु बहिरिन्द्रियाप्रत्यक्षत्वमुपाधिरिति, अन्यथा तदसङ्गतत्वापत्तेरिति वक्ष्यते । न चात्मत्वमिति ।।**

ಆದರೂ ಸಮವಾಯದಲ್ಲಿ ವ್ಯಭಿಚಾರವು ಬರುತ್ತದೆ, ಇಲ್ಲದಿದ್ದರೆ ಸಮವಾಯದಲ್ಲಿಯೂ ಶಕ್ತಿಸಮವಾಯವನ್ನು ಒಪ್ಪಿದರೆ ಆ ಶಕ್ತಿಸಮವಾಯದಲ್ಲಿ ಇನ್ನೊಂದು ಶಕ್ತಿಸಮವಾಯವನ್ನು ಒಪ್ಪಬೇಕಾಗುವುದರಿಂದ ಅನವಸ್ಥಾದೋಷವು ಬರುತ್ತದೆ ಎಂಬ ಆಕ್ಷೇಪವು ಸರಿಯಲ್ಲ. ಏಕೆಂದರೆ ಜನಕತ್ವಾತ್ ಎಂಬ ಹೇತುವಿಗೆ ನಿಮಿತ್ತ ಕಾರಣತಾಭಿನ್ನ ಕಾರಣತಾಶ್ರಯತ್ವಾತ್ ಎಂದು ಅರ್ಥ. ಅದು ಯಾವುದಾದರೂ ಒಂದು ಕಾರ್ಯವನ್ನು ಕುರಿತು ಇದ್ದರೂ ಸಾಕು, ದಾಹವನ್ನು ಕುರಿತೇ ಇರಬೇಕೆಂದಿಲ್ಲ ಎಂಬ ಕಾರಣದಿಂದ ಅಸಿದ್ಧಿದೋಷವಿಲ್ಲ. ಇಲ್ಲಿ ಸಾಧ್ಯ ಮತ್ತು ಹೇತುಗಳಲ್ಲಿ ದಾಹ ಪದವನ್ನು ನಿವೇಶ ಮಾಡಿ ವಹ್ನಿಪಕ್ಷಕ ಅನುಮಾನದಂತೆ ಅನುಮಾನಾಂತರಗಳೂ ಕೂಡ ಗ್ರಂಥಕಾರರಿಗೆ ಸಮ್ಮತವಾಗಿದೆ. ಆದರೆ ಲೇಖಕ ಪ್ರಮಾದದಿಂದ ಆ ಅನುಮಾನಗಳು ಪ್ರಚಾರದಲ್ಲಿ ಬಂದಿಲ್ಲ ಎಂದು ತಿಳಿಯಬೇಕು. ಆ ಕಾರಣದಿಂದಲೇ ಅಂತಹ ಅನುಮಾನಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಗ್ರಂಥಕಾರರು ಮುಂದೆ ಮುಂದಿನ ನಾಲ್ಕು ಅನುಮಾನಗಳಲ್ಲಿಯೂ ಬಹಿರಿಂದ್ರಿಯ - ಅಪ್ರತ್ಯಕ್ಷತ್ವವು ಉಪಾಧಿ ಎಂದು ಹೇಳುತ್ತಾರೆ. ಇಲ್ಲದಿದ್ದರೆ ಈ ವಾಕ್ಯವು ಅಸಂಗತವಾಗುತ್ತದೆ. ನಚಾತ್ಮತ್ವಮಿತಿ –

## ದ್ವ್ಯಣುಕಾದಿಗಳಲ್ಲಿ ಸಾಧ್ಯವಾಪ್ಯಕತ್ವವಿದೆ

**न च द्व्यणुकादौ साध्याव्याप्तिरिति वाच्यम् । दाहजनकत्व-रूपपक्षधर्मावच्छिन्नसाध्यव्यापकत्वादिति भावः । शुद्धसाध्यव्यापकमाह – द्रव्यत्वमिति ।। द्व्यणुकेति ।। नन्वेकत्वत्वस्पर्शत्वजाती नातीन्द्रिये द्व्यणुकैकत्वत्वद्व्यणुक-स्पर्शत्वोपाधी च समवेतौ तथा च तत्र साध्यासत्त्वान्न साध्याव्याप्तिरिति चेत् । अत्र केचित् । अतद्गुणसंविज्ञानबहुव्रीहिणा गुरुत्वधर्मादिकमुक्तं तत्र साध्याव्यापकत्वमस्त्येवेत्याहुः ।**

ದ್ವ್ಯಣುಕಾದಿಗಳಲ್ಲಿ ಸಾಧ್ಯವ್ಯಾಪಕತ್ವವಿಲ್ಲ ಎಂಬ ದೋಷವಿಲ್ಲ. ಏಕೆಂದರೆ ದಾಹಜನಕತ್ವರೂಪವಾದ ಪಕ್ಷಧರ್ಮಾವಚ್ಛಿನ್ನ ಸಾಧ್ಯವ್ಯಾಪಕತ್ವವು ಇಲ್ಲಿ ಅಭಿಪ್ರೇತವಾಗಿದೆ. ಶುದ್ಧಸಾಧ್ಯವ್ಯಾಪಕ ಉಪಾಧಿಯನ್ನು ಹೇಳುತ್ತಾರೆ–ದ್ರವ್ಯತ್ವಮಿತಿ. ದ್ವ್ಯಣುಕೇತಿ–ಅತೀಂದ್ರಿಯವಾದ ದ್ವ್ಯಣುಕೈಕತ್ವದಲ್ಲಿ ಮತ್ತು ದ್ವ್ಯಣುಕಸ್ಪರ್ಶದಲ್ಲಿ ಏಕತ್ವತ್ವ ಮತ್ತು ಸ್ಪರ್ಶತ್ವರೂಪ ಉಪಾಧಿಗಳು ಸಮವೇತವಾಗಿವೆ. ಅಲ್ಲಿ ಸಾಧ್ಯವಿಲ್ಲ. ಆದ್ದರಿಂದ ಸಾಧ್ಯವ್ಯಾಪಕತ್ವಕ್ಕೆ ಭಂಗವುಂಟಾಗುತ್ತದೆ ಎಂದು ಶಂಕಿಸಿದರೆ ಕೆಲವರು ಹೀಗೆ ಉತ್ತರವನ್ನು ಹೇಳುತ್ತಾರೆ. ಇಲ್ಲಿ ಅತದ್ಗುಣಸಂವಿಜ್ಞಾನಬಹುವ್ರೀಹಿಯಿಂದ ಗುರುತ್ವಾದಿ ಧರ್ಮವನ್ನು ತೆಗೆದುಕೊಳ್ಳಬೇಕು. ಅಲ್ಲಿ ಸಾಧ್ಯಾವ್ಯಾಪಕತ್ವವು ಬಂದೇ ಬರುತ್ತದೆ

## ಶಕ್ತಿಯಂತೆ ಉಪಾಧಿಯೂ ಕೂಡ ಸಮವಾಯ ಸಂಬಂಧದಿಂದ ಇದೆ

**अन्ये तु धर्मांशस्याविवक्षितत्वेन तत्समवायित्वस्य तन्निरूपितसमवायाश्रयत्वार्थकतया समवायिद्व्यणुकमादायैव तत्र साध्यसत्त्वमिति वदन्ति । शक्तिवदुपाधिरपि समवैति, अन्यथोपाधिरसम्बद्धः स्यात् तन्मते विशेषणताया अनभ्युपगमादित्यप्याहुः ।**

ಇನ್ನು ಕೆಲವರು ಇಲ್ಲಿ ಧರ್ಮಾಂಶವು ಅವಿವಕ್ಷಿತವಾಗಿದೆ. ತತ್ಸಮವಾಯಿತ್ವ ಎಂದರೆ ತನ್ನಿರೂಪಿತ ಸಮವಾಯಾಶ್ರಯತ್ವ ಎಂದು ಅರ್ಥ. ಆದ್ದರಿಂದ ಸಮವಾಯಿಯಾದ ದ್ವ್ಯಣುಕವನ್ನು ತೆಗೆದುಕೊಂಡು ಅಲ್ಲಿ ಸಾಧ್ಯವಿರುವುದರಿಂದ ಸಾಧ್ಯವ್ಯಾಪಕತ್ವಕ್ಕೆ ಭಂಗವಿಲ್ಲ ಎಂದು ಹೇಳುತ್ತಾರೆ. ಅವರ ಮತದಂತೆ, ಶಕ್ತಿಯಂತೆ ಉಪಾಧಿಯೂ ಸಮವಾಯ ಸಂಬಂಧದಿಂದ ಇರುತ್ತದೆ. ಇಲ್ಲದಿದ್ದರೆ ವಿಶೇಷಣತಾ ಸಂಬಂಧವನ್ನು ಅಂಗೀಕರಿಸದೇ ಇರುವುದರಿಂದ ಉಪಾಧಿಯು ಅಸಂಬದ್ಧವಾಗುತ್ತದೆ ಎಂಬ ಆಪತ್ತಿಯು ಬರುತ್ತದೆ.

## ಅನುಕೂಲತ್ವವು ಜನಕತಾವಚ್ಛೇದಕ ರೂಪ

**नन्वनुकूलत्वं यदि जनकत्वं तदा शक्तावेतदभ्युपगमेऽपसिद्धान्तः । अथावच्छेदकत्वं तदा दृष्टान्तासिद्धिः,**

**आत्मन्यदृष्टरूपतादृशधर्मस्य जनकत्वादित्युभयसाधारणं तदाह – अनुकूलत्वं चेति ।।**

ಇನ್ನು ಅನುಕೂಲತ್ವವು ಜನಕತ್ವರೂಪವಾದರೆ ಶಕ್ತಿಯಲ್ಲಿ ಜನಕತ್ವವನ್ನು ಅಂಗೀಕರಿಸಿದರೆ ಅಪಸಿದ್ಧಾಂತವು ಬರುತ್ತದೆ. ಅನುಕೂಲತ್ವವು ಜನಕತಾವಚ್ಛೇದಕ ರೂಪವಾದುದು ಎಂದು ಅಂಗೀಕರಿಸಿದರೆ ದೃಷ್ಟಾಂತಾಸಿದ್ಧಿಯುಂಟಾಗುತ್ತದೆ. ಏಕೆಂದರೆ ಆತ್ಮನಲ್ಲಿ ಅಂತಹ ಅದೃಷ್ಟರೂಪವಾದ ಧರ್ಮವು ಜನಕವಾಗಿದೆಯೇ ಹೊರತು ಜನಕತಾವಚ್ಛೇದಕವಾಗಿಲ್ಲ ಎಂಬ ಶಂಕೆಯನ್ನು ಪರಿಹರಿಸಲು ಕಾರಣ ಮತ್ತು ಕಾರಣತಾವಚ್ಛೇದಕಗಳಿಗೆ ಸಾಧಾರಣವಾದ ಅನುಕೂಲತ್ವವನ್ನು ನಿರ್ವಚನ ಮಾಡುತ್ತಾರೆ – ಅನುಕೂಲತ್ವಂ ಚೇತಿ.

## ಧರ್ಮಿಗಿಂತ ಧರ್ಮಕಲ್ಪನೆಯೇ ಶ್ರೇಷ್ಠ

**उभयसिद्धेति ।। तथाच प्रतिबन्धकाभावस्यैव दाहादिप्रयोजकत्वं कल्प्यते धर्मकल्पनाया एव लघुत्वादिति तात्पर्यार्थः ।। घटे त्वार्थः समाज इति ।। ईश्वरकर्तृकत्वस्य न्यायप्राप्तत्वात् कुलालकर्तृकत्वस्य घटत्वावच्छेदेन अन्वयव्यतिरेकसिद्धत्वादिति भावः ।।**

ಉಭಯಸಿದ್ಧೇತಿ – ಧರ್ಮಿಕಲ್ಪನೆಗಿಂತಲೂ ಧರ್ಮಕಲ್ಪನೆಯೇ ಲಘುವಾದ್ದರಿಂದ ಪ್ರತಿಬಂಧಕಾಭಾವಕ್ಕೇ ದಾಹಪ್ರಯೋಜಕತ್ವವನ್ನು ಕಲ್ಪನೆ ಮಾಡುವುದು ಉಚಿತ ಎಂದು ಅಭಿಪ್ರಾಯ. ಘಟೇತ್ವಾರ್ಥಃ ಸಮಾಜ ಇತಿ – ಈಶ್ವರ ಕರ್ತೃಕತ್ವವು ನ್ಯಾಯಪ್ರಾಪ್ತವಾದುದರಿಂದ ಮತ್ತು ಅನ್ವಯವ್ಯತಿರೇಕಗಳಿಂದ ಕುಲಾಲಕರ್ತೃಕತ್ವವು ಸಿದ್ಧವಾಗುವುದರಿಂದ ಇಬ್ಬರಿಗೂ ಕರ್ತೃತ್ವವಿರುವುದರಿಂದ ಉಂಟಾಗುವ ಕರ್ತೃಸಮುದಾಯವು ಆರ್ಥಿಕವಾದುದು.

## ಸಮವಾಯಿಕಾರಣಜನ್ಯತ್ವದಿಂದ ಅನವಸ್ಥಾ ದೋಷ

**समवायिकारण इति ।। यद्यपि निमित्तकारणेपि**

**शक्तिरस्त्येवेति तद्द्वाराप्यनवस्था भवत्येव, तथाप्येककार्यमात्रे समवायिकारणजन्यत्वं परो न मन्यते; तन्मते कारणस्येव कार्यस्यापि समवायस्य तथाभावाभावात्, तथापि समवेतकार्यं प्रति तथात्वं स्वीकार्यमेवेति भावः ।**

ಸಮವಾಯಿ ಕಾರಣ ಇತಿ– ನಿಮಿತ್ತಕಾರಣದಲ್ಲಿಯೂ ಶಕ್ತಿ ಇರುವುದರಿಂದ ನಿಮಿತ್ತಕಾರಣವನ್ನು ತೆಗೆದುಕೊಂಡರೂ ಅನವಸ್ಥಾದೋಷವು ಬಂದೇ ಬರುತ್ತದೆ. ಆದರೂ ಕಾರ್ಯವ್ಯಕ್ತಿಯು ಒಂದೇ ಆಗಿರುವ ಸ್ಥಳದಲ್ಲಿ ಸಮವಾಯಿಕಾರಣ ಜನ್ಯತ್ವವನ್ನು ಪರರು ಅಂಗೀಕರಿಸುವುದಿಲ್ಲ. ಅವರ ಮತದಲ್ಲಿ ಕಾರಣವಾದ ಸಮವಾಯಕ್ಕೆ ಹೇಗೆ ಸಮವಾಯಿಕಾರಣಜನ್ಯತ್ವವು ಇಲ್ಲವೋ ಅದರಂತೆ ಕಾರ್ಯವಾದ ಸಮವಾಯಕ್ಕೂ ಸಮವಾಯಿಕಾರಣಜನ್ಯತ್ವವು ಇಲ್ಲ. ಆದರೂ ಸಮವೇತಕಾರ್ಯಕ್ಕೆ ಸಮವಾಯಿಕಾರಣಜನ್ಯತ್ವವನ್ನೂ ಅಂಗೀಕರಿಸಲೇಬೇಕಾಗುವುದರಿಂದ ಅನವಸ್ಥಾ ದೋಷವು ಬರುತ್ತದೆ ಎಂದು ಅಭಿಪ್ರಾಯ.

## ಅನವಸ್ಥೆಯು ಪ್ರಮಾಣಪ್ರಮಿತವಲ್ಲ

**न चेयमनवस्था प्रामाणिकी प्रमाणाभावात् । न कार्यान्यथानुपपत्तिरेव मानं, तस्योभयसिद्धप्रतिबन्धकाभावेनैवोपपत्तेः । न चाभावो न कारणं भाववद् ग्राहकतौल्यात्। एवञ्च गुणादिनिष्ठशक्तौ गुणादीनां समवायिकारणत्वापत्तौ द्रव्यत्वापत्तिरित्यपि दूषणं द्रष्टव्यम् ।**

ಈ ಅನವಸ್ಥೆಯನ್ನು ಪ್ರಾಮಾಣಿಕವಲ್ಲ. ಏಕೆಂದರೆ ಈ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಕಾರ್ಯಕ್ಕೆ ಅನ್ಯಥಾ ಅನುಪಪತ್ತಿಯೇ ಪ್ರಮಾಣ ಎಂಬುದು ಸರಿಯಲ್ಲ. ಏಕೆಂದರೆ ಉಭಯಸಿದ್ಧವಾದ ಪ್ರತಿಬಂಧಕಾಭಾವದಿಂದಲೇ ಕಾರ್ಯವನ್ನು ಉಪಪಾದನೆ ಮಾಡಬಹುದು. ಅಭಾವವು ಕಾರಣವೇ ಅಲ್ಲ ಎಂದು ಹೇಳುವಂತಿಲ್ಲ. ಏಕೆಂದರೆ ಭಾವಕ್ಕೆ ಕಾರಣತ್ವವನ್ನು ನಿಶ್ಚಯಮಾಡಿಕೊಡುವ ಅನ್ವಯವ್ಯತಿರೇಕಗಳಿದ್ದಂತೆ ಅಭಾವಕ್ಕೂ ಕಾರಣತ್ವವನ್ನು

ನಿಶ್ಚಯಮಾಡಿಕೊಡುವ ಅನ್ವಯವ್ಯತಿರೇಕಗಳು ಇವೆ. ಹೀಗಾಗಿ ಗುಣಾದಿ ನಿಷ್ಠಶಕ್ತಿಯನ್ನು ಕುರಿತು ಗುಣಾದಿಗಳು ಸಮವಾಯಿಕಾರಣವೆಂದು ಅಂಗೀಕರಿಸಬೇಕಾಗುವುದರಿಂದ 'ಸಮವಾಯಿಕಾರಣತ್ವಂ ದ್ರವ್ಯಸ್ಯೈವ' ಎಂಬ ನಿಯಮವಿರುವುದರಿಂದ ಗುಣಾದಿಗಳಿಗೂ ದ್ರವ್ಯತ್ವವು ಉಂಟಾಗಲಿ ಎಂಬ ಆಪತ್ತಿರೂಪವಾದ ದೂಷಣವನ್ನು ಇಲ್ಲಿ ಇಟ್ಟುಕೊಳ್ಳಬೇಕು.

## ಶಕ್ತಿಯಲ್ಲಿಯೂ ಮತ್ತೊಂದು ಶಕ್ತಿ ಒಪ್ಪಬೇಕಾಗುತ್ತದೆ ?

**न च नित्यैव शक्तिर्न कार्येति वाच्यम् । 'अनित्ये भावहेतुजेति' तत्सिद्धान्तात् । किञ्चैवं प्रतिबद्धवह्नेरपि दाहापत्तिः । न चोद्भूता शक्तिस्तदा नास्तीति वाच्यम् । उद्भूतत्वमपि यदि नित्यं तदा स एव दोषः । अथानित्यं, तदा तज्जननानुकूला शक्तावपि शक्तिः स्वीकार्या । एवं तत्राप्युद्भूतत्वजननानुकूलं शक्त्यन्तरमित्यनवस्थापत्तेः उद्भूतत्वस्यैव शक्तिस्थानाभिषेचनीयतया नित्यशक्तौ मानाभावश्चेति भावः ।**

ಶಕ್ತಿಯು ನಿತ್ಯವಾದುದು ಕಾರ್ಯವಲ್ಲ ಎಂದು ಹೇಳಿದರೆ 'ಅನಿತ್ಯಾ ಭಾವಹೇತುಜಾ' ಎಂದು ಶಕ್ತಿಗೆ ಕಾರ್ಯತ್ವವನ್ನು ಅಂಗೀಕರಿಸುವ ಅವರ ಸಿದ್ಧಾಂತಕ್ಕೆ ವಿರುದ್ಧವಾಗುತ್ತದೆ. ಮತ್ತು ಶಕ್ತಿಯು ನಿತ್ಯವಾದರೆ ಪ್ರತಿಬದ್ಧವಾದ ವಹ್ನಿಯಿಂದಲೂ ದಾಹವು ಉಂಟಾಗಲಿ ಎಂಬ ಆಪತ್ತಿಯು ಬರುತ್ತದೆ.

ಪ್ರತಿಬಂಧಕ ಸಮವಧಾನದೆಶೆಯಲ್ಲಿ ಉದ್ಭೂತಶಕ್ತಿಯಿಲ್ಲ ಎಂದು ಹೇಳುವುದಾದರೆ ಆ ಉದ್ಭೂತತ್ವವಾದರೂ ನಿತ್ಯವೋ ಅಥವಾ ಅನಿತ್ಯವೋ ಎಂಬ ಪ್ರಶ್ನೆಯು ಬರುತ್ತದೆ. ನಿತ್ಯವಾದರೆ ಪ್ರತಿಬಂಧಕ ಸಮವಧಾನದೆಶೆಯಲ್ಲಿ ದಾಹವುಂಟಾಗಲಿ ಎಂಬ ಆಪತ್ತಿಯು ಬಂದೇ ಬರುತ್ತದೆ. ಇನ್ನು ಅನಿತ್ಯ ಎಂದು ಹೇಳಿದರೆ ಶಕ್ತಿಯಲ್ಲಿ ಉದ್ಭೂತತ್ವ ಜನನಾಕೂಲಶಕ್ತಿಯನ್ನು ಅಂಗೀಕಾರ ಮಾಡಬೇಕಾಗುತ್ತದೆ. ಹೀಗೆ ಆ ಶಕ್ತಿಯಲ್ಲಿಯೂ ಉದ್ಭೂತತ್ವಜನನಾಕೂಲವಾದ ಇನ್ನೊಂದು ಶಕ್ತಿಯನ್ನು ಅಂಗೀಕಾರ ಮಾಡಬೇಕಾಗುತ್ತದೆ. ಆದ್ದರಿಂದ ಉದ್ಭೂತತ್ವವೇ ಶಕ್ತಿಯ ಸ್ಥಾನಾಪನ್ನವಾಗಿರುವುದರಿಂದ ನಿತ್ಯಶಕ್ತಿಯಲ್ಲಿ ಪ್ರಮಾಣವಿಲ್ಲ ಎಂದು ಅಭಿಪ್ರಾಯ.

## ಪ್ರಥಮಾನುಮಾನೇ ಎಂಬುದು ಉಪಲಕ್ಷಣ

**'प्रथमानुमाने' इत्युपलक्षणम् । 'अजनकत्वगर्भद्वितीयानुमानेपि' इति द्रष्टव्यम् ।**

ಪ್ರಥಮಾನುಮಾನದಲ್ಲಿ ಎಂದು ಹೇಳಿರುವುದು ಉಪಲಕ್ಷಣ. ಅಜನಕತ್ವ ಗರ್ಭವಾದ ದ್ವಿತೀಯಾನುಮಾನದಲ್ಲಿಯೂ ಈ ದೋಷವನ್ನು ಇಟ್ಟುಕೊಳ್ಳಬೇಕು.

## ದೃಷ್ಟಾಂತಾಸಿದ್ಧಿಯು ಅಪರಿಹಾರ್ಯವೇ ?

**ननूद्भूतत्वविशिष्टा शक्तिरजनकदशाव्यावृत्तेति पूर्वपक्ष एवोक्तमिति न बाध इति चेन्न । नित्यानित्यविकल्पेन पूर्वोक्तेनोद्भूतत्वे मानाभाव इत्येतदवष्टम्भेनैतस्योक्तत्वात् ।वस्तुतः प्रतिबन्धकाल एव परं शक्तौ नोद्भूतत्वं तथा च सहकार्यान्तरविरहप्रयुक्तं यदा वह्नौ कार्यानुपधानं तदा उद्भूतत्वविशिष्टायास्तस्याः सत्त्वाद्बाध एवेति भावः । अतीन्द्रियत्वगर्भे साध्ये प्रागुक्तं दृष्टान्तासिद्ध्युद्धारं परिहरति – लोहेति ।।**

ಉದ್ಭೂತತ್ವವಿಶಿಷ್ಟವಾದ ಶಕ್ತಿಯು ಅಜನಕದಶಾವ್ಯಾವೃತ್ತವೆಂದು ಪೂರ್ವಪಕ್ಷದಲ್ಲಿಯೇ ಹೇಳಿರುವುದರಿಂದ ಬಾಧವಿಲ್ಲ ಎಂದು ಹೇಳಬಾರದು. ನಿತ್ಯಾನಿತ್ಯವಿಕಲ್ಪ ಅಸಹವಾದ್ದರಿಂದ ಉದ್ಭೂತತ್ವದಲ್ಲಿಯೇ ಪ್ರಮಾಣವಿಲ್ಲ ಎಂದು ಸ್ವೀಕರಿಸಿ ಈ ಬಾಧರೂಪದೋಷವನ್ನು ಹೇಳಿದ್ದಾಗಿದೆ. ವಾಸ್ತವಿಕವಾಗಿ ಪ್ರತಿಬಂಧಕಾಲದಲ್ಲಿ ಮಾತ್ರ ಶಕ್ತಿಯಲ್ಲಿ ಉದ್ಭೂತತ್ವವಿಲ್ಲ. ಆದ್ದರಿಂದ ಆಗ ವಹ್ನಿಯಲ್ಲಿ ದಾಹರೂಪಕಾರ್ಯ ಅನುಪಧಾನವು ಸಹಕಾರ್ಯಂತರ ವಿರಹಪ್ರಯುಕ್ತವಾಗಿದೆ. ಆಗಲೂ ಉದ್ಭೂತತ್ವ ವಿಶಿಷ್ಟ ಶಕ್ತಿ ಇರುವುದರಿಂದ ಬಾಧವು ಬಂದೇ ಬರುತ್ತದೆ ಎಂದು ಅಭಿಪ್ರಾಯ. ಅತೀಂದ್ರಿಯತ್ವ ಘಟಿತವಾದ ಸಾಧ್ಯದಲ್ಲಿ ಹಿಂದೆ ಹೇಳಿದ ದೃಷ್ಟಾಂತಾ ಸಿದ್ಧಿಯ ಪರಿಹಾರವನ್ನು ಮಾಡಲು ಸಾಧ್ಯವಿಲ್ಲವೆಂದು ನಿರಾಕರಿಸುತ್ತಾರೆ – ಲೋಹೇತಿ.

## ಕುಠಾರದಲ್ಲಿ ಸಾಧ್ಯವ್ಯಾಪಕತ್ವವಿಲ್ಲ

**अग्निमेति ॥ यद्वा धर्मेऽतीन्द्रियत्वमित्यादि-चतुर्थीत्यर्थ इति केचित् । तन्न । कुठारे साध्याव्यापकतापत्तेः। तदनुमाने कुठारस्यैतद्दृष्टान्तत्वेन तत्र साध्यसत्त्वात् । न च लोहविशेषाणाम् इत्यनेन तत्र साध्याभावव्यवस्थितेर्नैवमिति वाच्यम् । एवं साध्यव्यापकताग्रहस्थलाभावादेव नोपाधिः । न चात्मैव तथेति वाच्यम् । अदृष्टादेरजनकदशावृत्तित्वेन तत्र साध्यासत्त्वात् ।**

ಅಗ್ನಿಮೇತಿ – ಅಥವಾ ಧರ್ಮದಲ್ಲಿ ಅತೀಂದ್ರಿಯತ್ವವನ್ನು ಹಾಕುತ್ತೇವೆ ಎಂಬ ನಾಲ್ಕನೆಯ ಪಕ್ಷದಲ್ಲಿ ಎಂದು ಅರ್ಥ ಎಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಏಕೆಂದರೆ ಕುಠಾರದಲ್ಲಿ ಸಾಧ್ಯ ವ್ಯಾಪಕತ್ವವು ಭಗ್ನವಾಗುತ್ತದೆ. ಆ ಅನುಮಾನದಲ್ಲಿ ಕುಠಾರವು ದೃಷ್ಟಾಂತವಾಗಿರುವುದರಿಂದ ಅಲ್ಲಿ ಸಾಧ್ಯವಿದೆ. ಉಪಾಧಿ ಇಲ್ಲದಿದ್ದರೆ ಸಾಧ್ಯವ್ಯಾಪಕತ್ವಕ್ಕೆ ಭಂಗವು ಬಂದೇ ಬರುತ್ತದೆ. 'ಲೋಹವಿಶೇಷಣಾಮ್' ಎಂಬ ವಾಕ್ಯದಿಂದ ಕುಠಾರದಲ್ಲಿ ಸಾಧ್ಯಾಭಾವವನ್ನು ಹೇಳಿರುವುದರಿಂದ ವ್ಯಾಪ್ತಿಭಂಗವಿಲ್ಲ ಎಂದು ಹೇಳುವುದಾದರೆ ಆಗ ಉಪಾಧಿಗೆ ಸಾಧ್ಯವ್ಯಾಪಕತ್ವ ಗ್ರಹವನ್ನು ಉಂಟುಮಾಡುವ ಸ್ಥಳವೇ ಇಲ್ಲವಾದ್ದರಿಂದ ಉಪಾಧಿಯೇ ಇಲ್ಲವೆಂದಾಗುತ್ತದೆ. ಆತ್ಮನೇ ವ್ಯಾಪ್ತಿಗ್ರಹಸ್ಥಳವಾಗುತ್ತಾನೆ ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಅಜನಕದಶೆಯಲ್ಲಿಯೂ ಅದೃಷ್ಟವು ಆತ್ಮವೃತ್ತಿಯಾದುದರಿಂದ ಅಲ್ಲಿ ಸಾಧ್ಯವೇ ಇಲ್ಲ.

## ಸಾಧ್ಯವ್ಯಾಪಕತ್ವವು ಬರುವುದಿಲ್ಲ

**न च जनकदशावृत्तिपरमाण्वादिसंयोगमादाय तत्रापि साध्यसत्त्वमिति वाच्यम् । एवं हि तादृशसंयोगमादाय घटादावपि साध्यसत्वेनोपाधेः साध्याव्यापकत्वात् । न च गुरुत्वाभावरूपपक्षधर्मावच्छिन्नसाध्यव्यापकत्वमिति**

**वाच्यम्। सौरालोकादावपि तादृशपरमाणुसंयोगसत्त्वेन साध्याव्यापकत्वात् । तस्मात् पूर्वोक्तसंयोगपक्षकदाहघटित-साध्यकानुमानेन सह चतुष्ट्वमभिमतम् ।**

ಇನ್ನು ಜನಕದಶಾವೃತ್ತಿ ಪರಮಾಣ್ವಾದಿ ಸಂಯೋಗವನ್ನು ತೆಗೆದುಕೊಂಡು ಆತ್ಮನಲ್ಲಿ ಸಾಧ್ಯವಿದೆ ಎಂದು ಹೇಳುವುದಾದರೆ ಅಂತಹ ಸಂಯೋಗವನ್ನು ತೆಗೆದುಕೊಂಡು ಘಟಾದಿಗಳಲ್ಲಿಯೂ ಸಾಧ್ಯವಿರುವುದರಿಂದ ಅಲ್ಲಿ ಆತ್ಮತ್ವವು ಇಲ್ಲದಿರುವುದರಿಂದ ಉಪಾಧಿಗೆ ಸಾಧ್ಯವ್ಯಾಪಕತ್ವವು ಭಗ್ನವಾಗುತ್ತದೆ. ಗುರುತ್ವಾಭಾವರೂಪವಾದ ಪಕ್ಷಧರ್ಮಾವಚ್ಛಿನ್ನ ಸಾಧ್ಯವ್ಯಾಪಕತ್ವವನ್ನು ಹೇಳುತ್ತೇವೆ ಎಂದು ಹೇಳಿದರೆ, ಘಟವನ್ನು ತೆಗೆದುಕೊಂಡು ದೋಷವನ್ನು ಹೇಳಲು ಬರದಿದ್ದರೂ ಸೌರಾಲೋಕಾದಿಗಳಲ್ಲಿ ಅಂತಹ ಪರಮಾಣು ಸಂಯೋಗವಿರುವುದರಿಂದ ಸಾಧ್ಯವ್ಯಾಪಕತ್ವವು ಭಗ್ನವಾಗುತ್ತದೆ. ಆದ್ದರಿಂದ ಹಿಂದೆ ಹೇಳಿದ ಸಂಯೋಗವನ್ನು ಪಕ್ಷವನ್ನು ಮಾಡಿ ದಾಹಘಟಿತ ಸಾಧ್ಯವನ್ನು ನಿರ್ದೇಶಿಸಿದ ಅನುಮಾನವನ್ನೇ ತೆಗೆದುಕೊಂಡು ನಾಲ್ಕು ಎಂಬ ಸಂಖ್ಯೆಯನ್ನು ಕೂಡಿಸಬೇಕು.

## ವೃಕ್ಷಾದಿಗಳಲ್ಲಿಯೂ ಸಾಧ್ಯವ್ಯಾಪಕತ್ವವಿಲ್ಲ

**न चात्र स्थितिस्थापकवति वृक्षादौ साध्याव्याप्तिरिति वाच्यम्। कार्यानुकूलेत्यस्य स्वनिमित्तककार्यानुकूलेति विवक्षया स्थितिस्थापकस्य तथात्वेन वृक्षादौ तथाऽसत्त्वात् । कार्यपदस्य वह्निकार्यपरत्वाद्वा । तथा च तादृशसाध्यमात्मन्येव, तत्र चोपाधिरस्त्येवेति न साध्याव्याप्तिरिति भावः ।**

**अपरे तु चतुर्षु मध्ये कार्यानुकूलेत्यादिघटितानुमानत्रयेऽ-यमुपाधिरित्यर्थ इत्याहुः ।**

ಸ್ಥಿತಿಸ್ಥಾಪಕವುಳ್ಳ ವೃಕ್ಷಾದಿಗಳಲ್ಲಿ ಸಾಧ್ಯವ್ಯಾಪಕತ್ವವು ಬರುತ್ತದೆ ಎಂದು ಹೇಳಬಾರದು. ಕಾರ್ಯಾನುಕೂಲ ಎಂದರೆ ಸ್ವನಿಮಿತ್ತಕ ಕಾರ್ಯಾನುಕೂಲ ಎಂದು ಅರ್ಥ. ಸ್ಥಿತಿಸ್ಥಾಪಕತ್ವವನ್ನು

ಕುರಿತು ವೃಕ್ಷಕ್ಕೆ ಸಮವಾಯಿಕಾರಣತ್ವವಿದೆ, ನಿಮಿತ್ತಕಾರಣತ್ವವಿಲ್ಲ ಆದ್ದರಿಂದ ದೋಷವಿಲ್ಲ. ಅಥವಾ ಕಾರ್ಯಪದಕ್ಕೆ ವಹ್ನಿಕಾರ್ಯ ಎಂದು ಅಭಿಪ್ರಾಯ ಎಂದೂ ಹೇಳಬಹುದು. ತಥಾಚ ಅಂತಹ ಸಾಧ್ಯವು ಆತ್ಮನಲ್ಲಿಯೇ ಇದೆ. ಅಲ್ಲಿ ಉಪಾಧಿಯೂ ಇದೆ ಎಂಬ ಕಾರಣದಿಂದ ಸಾಧ್ಯವ್ಯಾಪಕತ್ವಭಂಗವಿಲ್ಲ ಎಂದು ಅಭಿಪ್ರಾಯ.

ಇನ್ನು ಕೆಲವರು ನಾಲ್ಕು ಅನುಮಾನಗಳ ಮಧ್ಯೆ ಕಾರ್ಯಾನುಕೂಲ ಇತ್ಯಾದಿ ಘಟಿತವಾದ ಮೂರು ಅನುಮಾನಗಳಲ್ಲಿ ಆತ್ಮತ್ವವು ಉಪಾಧಿ ಎಂದು ಅರ್ಥ ಎಂದು ಹೇಳುತ್ತಾರೆ.

## ಅನ್ವಯವ್ಯತಿರೇಕಿಯಾದ ಅನುಮಾನವಷ್ಟೇ ಮೀಮಾಂಸಕರಿಗೆ ಪ್ರಮಾಣ

**अपि चेति ।। तन्मते चान्वयव्यतिरेक्येव गमक इति भावः। सिद्धिरिति ।। शक्तिसिद्धिरित्यर्थः । तथा चैतदनुमानेनैव न शक्तिसिद्धिर्येनान्योन्याश्रय इति भावः । 'परार्द्धसङ्ख्यायाम्' इत्युपलक्षणम् । परममहत्त्वपरमाणपरिमाणादावपि द्रष्टव्यम्।**

ಅಪಿಚೇತಿ – ಮೀಮಾಂಸಕ ಮತದಲ್ಲಿ ಅನ್ವಯವ್ಯತಿರೇಕಿಯಾದ ಅನುಮಾನವು ಮಾತ್ರ ಸಾಧಕವಾಗುವುದರಿಂದ ಪ್ರಕೃತ ಅನುಮಾನವು ಸಾಧಕವಾಗುವುದಿಲ್ಲ ಎಂದು ಅಭಿಪ್ರಾಯ. ಸಿದ್ಧಿರಿತಿ – (ತತ್ಪ್ರಸಿದ್ಧಿಃ ಎಂಬುವ ಪಾಠ ಸರಿಯಲ್ಲ, ತತ್ಸಿದ್ಧಿಃ ಎಂಬ ಪಾಠ ಇರಬೇಕು) ಶಕ್ತಿಸಿದ್ಧಿ ಎಂದು ಅರ್ಥ. ಆದ್ದರಿಂದ ಈ ಅನುಮಾನವನ್ನು ಬಿಟ್ಟು ಉಪದೇಶ ಪರಂಪರೆಯಿಂದ ಶಕ್ತಿಯ ಸಿದ್ಧಿಯಾಗುವುದರಿಂದ ಅನ್ಯೋನ್ಯಾಶ್ರಯವು ಇಲ್ಲ ಎಂದು ಅಭಿಪ್ರಾಯ. ಪರಾರ್ಧ ಸಂಖ್ಯೆಯಲ್ಲಿ ಎಂದು ಹೇಳಿದ್ದು ಉಪಲಕ್ಷಣ. ಪರಮ ಮಹತ್ವ ಮತ್ತು ಪರಮಾಣು ಪರಿಮಾಣಗಳನ್ನೂ ತೆಗೆದುಕೊಳ್ಳಬೇಕು.

## ಪ್ರತ್ಯಕ್ಷವೊಂದೇ ವ್ಯಾಪ್ತಿಗ್ರಾಹಕವಲ್ಲ

**अप्रत्यक्षाया इति ।। ननु प्रत्यक्षमेव न व्याप्तिग्राहकम्, अतीन्द्रियानुमानस्थले तदभावात् । तथा च मानान्तरेण**

**साध्यहेतुप्रतियोगिकव्यतिरेकव्याप्तिग्रहोऽस्त्विति चेत् । अत्र प्रत्यक्षाभिप्रायेण एतदुक्तम् । वस्तुतोऽन्यथोपपन्नतया सर्वमेवानुमानमप्रयोजकमित्याहुः ।**

ಅಪ್ರತ್ಯಕ್ಷಾಯಾ ಇತಿ – ಪ್ರತ್ಯಕ್ಷ ಒಂದೇ ವ್ಯಾಪ್ತಿಗ್ರಾಹಕವಲ್ಲ. ಹಾಗಾಗುವುದಾದರೆ ಅತೀಂದ್ರಿಯಾನುಮಾನಸ್ಥಳದಲ್ಲಿ ವ್ಯಾಪ್ತಿಗ್ರಹವೇ ಉಂಟಾಗುವುದಿಲ್ಲ. ಆದ್ದರಿಂದ ಪ್ರಮಾಣಾಂತರದಿಂದ ಸಾಧ್ಯಾಭಾವ ಹೇತ್ವಭಾವಗಳಿಗೆ ವ್ಯಾಪ್ತಿಗ್ರಹವುಂಟಾಗಬಹುದು ಎಂದು ಆಕ್ಷೇಪ ಮಾಡಿದರೆ ಹೌದು ಪ್ರಕೃತಾಭಿಪ್ರಾಯದಿಂದ ಅಪ್ರತ್ಯಕ್ಷ ಎಂದು ಹೇಳಿರುವುದು ಎಂದು ಅಭಿಪ್ರಾಯ. ವಾಸ್ತವಿಕವಾಗಿ ಸಾಧ್ಯಕ್ಕೆ ಅನ್ಯಥೋಪಪತ್ತಿ ಇರುವುದರಿಂದ ಎಲ್ಲ ಅನುಮಾನಗಳೂ ಅಪ್ರಯೋಜಕ ಎಂದು ಅರ್ಥವನ್ನು ಹೇಳುತ್ತಾರೆ.

## ಅನ್ಯೋನ್ಯಾಶ್ರಯ

**वस्तुतो मानान्तरशब्दः सिद्धार्थत्वात् नानुमानम् । कार्यानुकूलातीन्द्रियधर्माभावानुमानं हि जनकत्वाभावेनैव लिङ्गेन वाच्यम्, जनकत्वसत्त्वे तादृशधर्मसत्त्वस्यावश्य-कत्वात् । जनकत्वाभावानुमानं च तादृशधर्माभावेन तादृशधर्मस्य जनकतावच्छेदकस्य सत्त्वे जनकत्वस्याप्यावश्य-कत्वात् । एवञ्च 'हेत्वभावेन साध्याभावः साध्याभावेन हेत्वभावोऽनुमेयः' इति व्यक्तोऽन्योन्याश्रय इति भावः ।**

ವಾಸ್ತವಿಕವಾಗಿ ಮಾನಾಂತರವು ಸಿದ್ಧ ವಿಷಯಕವಾದುದರಿಂದ ಅನುಮಾನವಲ್ಲ. ಕಾರ್ಯಾನುಕೂಲವಾದ ಅತೀಂದ್ರಿಯ ಧರ್ಮದ ಅಭಾವವನ್ನು ಜನಕತ್ವಾಭಾವಹೇತುವಿನಿಂದಲೇ ಸಾಧನೆ ಮಾಡಬೇಕು. ಏಕೆಂದರೆ ಜನಕತ್ವವು ಇದ್ದರೆ ಕಾರ್ಯಾನುಕೂಲಧರ್ಮವು ಇರಲೇಬೇಕಾಗುತ್ತದೆ. ಇನ್ನು ಕಾರ್ಯಾನುಕೂಲ ಧರ್ಮಾಭಾವದಿಂದ ಜನಕತ್ವಾಭಾವವನ್ನು ಸಾಧನೆ ಮಾಡಬೇಕು. ಏಕೆಂದರೆ ಕಾರ್ಯಾನುಕೂಲತಾದೃಶಧರ್ಮವು ಜನಕತಾವಚ್ಛೇದಕವಾದುದರಿಂದ

ಜನಕತಾವಚ್ಛೇದಕವು ಇದ್ದರೆ ಜನಕತ್ವವು ಅವಶ್ಯಕವಾಗಿ ಇರಲೇಬೇಕಾಗುತ್ತದೆ. ಆದ್ದರಿಂದ ಹೇತ್ವಭಾವದಿಂದ ಸಾಧ್ಯಾಭಾವದ ಅನುಮಾನ, ಸಾಧ್ಯಾಭಾವದಿಂದ ಹೇತ್ವಭಾವದ ಅನುಮಾನ ಎಂದು ಸ್ಪಷ್ಟವಾದ ಅನ್ಯೋನ್ಯಾಶ್ರಯದೋಷವು ಬರುತ್ತದೆ.

## ಅನ್ವಯವ್ಯಾಪ್ತಿಜ್ಞಾನವು ವ್ಯತಿರೇಕವ್ಯಾಪ್ತಿಜ್ಞಾನಕ್ಕೆ ಕಾರಣವೇ ಆಗಿದೆ

**यद्वा तदनुमानमपि साध्यसाधनाभावव्याप्तिग्रहमन्तरेण न स्यात् तद्ग्रहश्च न तदुभयव्यतिरेकप्रसिद्धिं विना तदुभयव्यतिरेकश्च साध्यसाधने एवेति साध्यसाधन-व्याप्तिग्रहे तदुभयाभावव्याप्तिधीः, तस्यां च सत्यां तदुभयव्याप्तिधीरित्यन्योन्याश्रय इति भावः । न चान्वयव्याप्तिधीर्न व्यतिरेकव्याप्तिधीहेतुरिति नान्योन्याश्रय इति वाच्यम् । तथाप्यन्वयव्याप्त्यग्रहादेव तदनुपपत्तेरिति भावः ।**

ಅಥವಾ ಅಂತಹ ಅನುಮಾನವು ಸಾಧ್ಯಸಾಧನಾಭಾವಗಳಿಗೆ ವ್ಯಾಪ್ತಿಗ್ರಹವಿಲ್ಲದಿದ್ದರೆ ಉಂಟಾಗುವುದಿಲ್ಲ. ಸಾಧ್ಯಾಭಾವ ಸಾಧನಾಭಾವಗಳಿಗೆ ವ್ಯಾಪ್ತಿಗ್ರಹವು ಸಹ ಅವೆರಡರ ವ್ಯತಿರೇಕವು ಸಿದ್ಧವಾಗದಿದ್ದರೆ ಉಂಟಾಗುವುದಿಲ್ಲ. ಸಾಧ್ಯಾಭಾವದ ವ್ಯತಿರೇಕವೆಂದರೆ ಸಾಧ್ಯ, ಸಾಧನಾಭಾವದ ವ್ಯತಿರೇಕವೆಂದರೆ ಸಾಧನ. ತಥಾಚ ಸಾಧ್ಯಸಾಧನಗಳಿಗೆ ವ್ಯಾಪ್ತಿಗ್ರಹ ಉಂಟಾದರೆ ತದುಭಯಾಭಾವಗಳಿಗೆ ವ್ಯಾಪ್ತಿಗ್ರಹ. ಉಭಯಾಭಾವಗಳಿಗೆ ವ್ಯಾಪ್ತಿಗ್ರಹವುಂಟಾದರೆ ಸಾಧ್ಯಸಾಧನಗಳಿಗೆ ವ್ಯಾಪ್ತಿಗ್ರಹವೆಂದು ಅನ್ಯೋನ್ಯಾಶ್ರಯವುಂಟಾಗುತ್ತದೆ ಎಂದು ಅಭಿಪ್ರಾಯ. ಅನ್ವಯವ್ಯಾಪ್ತಿ ಜ್ಞಾನವು ವ್ಯತಿರೇಕವ್ಯಾಪ್ತಿ ಜ್ಞಾನವನ್ನು ಕುರಿತು ಕಾರಣವಲ್ಲದಿರುವುದರಿಂದ ಅನ್ಯೋನ್ಯಾಶ್ರಯವಿಲ್ಲ ಎಂದು ಹೇಳಬಾರದು. ಅನ್ವಯವ್ಯಾಪ್ತಿ ಜ್ಞಾನವು ಕಾರಣವಲ್ಲದಿದ್ದರೂ, ಅನ್ವಯವ್ಯಾಪ್ತಿಯ ಜ್ಞಾನವಿಲ್ಲದಿದ್ದರೆ ವ್ಯತಿರೇಕವ್ಯಾಪ್ತಿಯ ಗ್ರಹವು ಬರುವುದಿಲ್ಲವಾದ್ದರಿಂದ ಅನ್ವಯ ವ್ಯಾಪ್ತಿಯ ಗ್ರಹವು ಅವಶ್ಯಕವಾಗಿ ಅಪೇಕ್ಷಿತವಾಗಿದೆ ಎಂದು ಅಭಿಪ್ರಾಯ.

## ಪಂಡಾಪೂರ್ವಕ್ಕೆ ಅಪೂರ್ವಸಾಕ್ಷಾತ್ಕಾರಜನಕತ್ವ ಇರುತ್ತದೆ

**एतेन पण्डेति ।। न च पण्डापूर्वादौ स्वध्वंससाक्षात्कार-जनकत्वेन जनकत्वाभाव एव नेति वाच्यम् । अतीन्द्रियत्वेन योगिज्ञानस्य विषयाजन्यतया च साक्षात्काराजनकत्वात् । तन्मते ध्वंसस्याधिकरणादिरूपतया तदसाध्यत्वाच्चेति भावः।।**

ಏತೇನ ಪಂಡೇತಿ–ಪಂಡಾಪೂರ್ವಾದಿಗಳಿಗೆ ಅಪೂರ್ವಧ್ವಂಸ ಮತ್ತು ಅಪೂರ್ವಸಾಕ್ಷಾತ್ಕಾರವನ್ನು ಕುರಿತು ಜನಕತ್ವವೇ ಇರುವುದರಿಂದ ಜನಕತ್ವಾಭಾವವು ಇಲ್ಲ ಎಂದು ಹೇಳಬಾರದು. ಅಪೂರ್ವ ಸಾಕ್ಷಾತ್ಕಾರವು ಯೋಗಿಪ್ರತ್ಯಕ್ಷವಾದುದರಿಂದ ಯೋಗಿಪ್ರತ್ಯಕ್ಷವು ವಿಷಯಜನ್ಯವಲ್ಲವಾದುದರಿಂದ ಅಂತಹ ಸಾಕ್ಷಾತ್ಕಾರವನ್ನು ಕುರಿತು ಅಪೂರ್ವಕ್ಕೆ ಕಾರಣತ್ವವಿಲ್ಲ. ಇನ್ನು ಧ್ವಂಸವು ಅಧಿಕರಣ ಸ್ವರೂಪವಾದುದರಿಂದ ಅದು ಪ್ರತಿಯೋಗಿಜನ್ಯವಲ್ಲವಾದುದರಿಂದ ಧ್ವಂಸವನ್ನು ಕುರಿತೂ ಅಪೂರ್ವವು ಕಾರಣವಲ್ಲ ಎಂದು ಅಭಿಪ್ರಾಯ.

## ಶಕ್ತಿಯನ್ನೊಪ್ಪಿದರೆ ಲಾಘವ

**तृणारणीति ।। तथा च वह्नित्वप्रयोजकतया तृणादीनामेका-नुगतशक्तिसिद्धावन्यत्रापि तदनुमानमिति भावः । ननु वह्निनिष्ठा जातिः प्रमाणसिद्धा, तथा च 'धर्मिकल्पनात्' इति न्यायात् तस्या एवावच्छेदकत्वं कल्प्यते न शक्तिरित्यत आह – तृणारणीति ।। तथा च जातित्रयमपि कल्प्यमेवेति तदपेक्षयैकशक्तिकल्पनमेव लघ्विति भावः ।**

ತೃಣಾರಣೀತಿ–ತಥಾಚ ವಹ್ನಿತ್ವಕ್ಕೆ ಪ್ರಯೋಜಕವಾಗಿ ತೃಣಾದಿಗಳಲ್ಲಿ ಅನುಗತವಾದ ಏಕಶಕ್ತಿಯು ಸಿದ್ಧವಾದ ಮೇಲೆ ಬೇರೆ ಸ್ಥಳದಲ್ಲಿಯೂ ಅದನ್ನು ಅನುಮಾನ ಮಾಡುತ್ತೇವೆ ಎಂದು ಅಭಿಪ್ರಾಯ. ವಹ್ನಿನಿಷ್ಠ ಅವಾಂತರಜಾತಿಯು ಪ್ರಮಾಣ ಸಿದ್ಧವಾಗಿರುವುದರಿಂದ ಶಕ್ತಿರೂಪ ಧರ್ಮಿಯನ್ನು ಕಲ್ಪನೆ ಮಾಡುವುದಕ್ಕಿಂತ ಆ ಜಾತಿಗಳಿಗೆ ಕಾರ್ಯತಾವಚ್ಛೇದಕತ್ವವನ್ನು ಕಲ್ಪನೆ ಮಾಡುವುದು

ಯುಕ್ತವಾದುದು ಎಂಬ ಶಂಕೆಗೆ ತೃಣಾರಣಿ ಎಂದು ಉತ್ತರವನ್ನು ಹೇಳುತ್ತಾರೆ – ತೃಣಾರಣೀತಿ. ಜಾತಿತ್ರಯಗಳು ಅನುಪಲಬ್ಧವಾಗಿರುವುದರಿಂದ ಮೂರು ಜಾತಿಗಳನ್ನೂ ಕಲ್ಪನೆ ಮಾಡಬೇಕು. ಅದಕ್ಕಿಂತ ಒಂದುಶಕ್ತಿಯನ್ನು ಕಲ್ಪನೆ ಮಾಡುವುದು ಲಘುವಾದುದು ಎಂದು ಅಭಿಪ್ರಾಯ.

## ತೃಣನಿರ್ಮಥನದಿಂದ ಅಗ್ನಿ ಏಕೆ ಹುಟ್ಟದು ?

**यत्र चेति ।। तत्रोक्तन्यायावतारादिति भावः । शङ्कते – यदीति ।। वैजात्ये = वैजात्यपक्षे । 'इत्यप्याशङ्क्येत' इत्यन्वयः । नन्वेवं तृणनिर्मन्थनाभ्यामप्यग्न्युत्पत्त्यापत्तिः कारणतावच्छेद कावच्छिन्नघटितसामग्रीसत्त्वादित्यत आह – यथा चेति ।।**

ಯತ್ರಚೇತಿ – ಅಲ್ಲಿ ಹಿಂದೆ ಹೇಳಿದ ನ್ಯಾಯಕ್ಕೆ ಅವಕಾಶವಿದೆ ಎಂದು ಅಭಿಪ್ರಾಯ. ಶಂಕೆಯನ್ನು ಮಾಡುತ್ತಾರೆ – ಯದೀತಿ. ವೈಜಾತ್ಯೇ (ಕಾರ್ಯವೈಜಾತ್ಯೇ) ಎಂದರೆ ಕಾರ್ಯವೈಜಾತ್ಯಪಕ್ಷದಲ್ಲಿ ಎಂದು ಅರ್ಥ. ಇದಕ್ಕೆ ಇತ್ಯಾಶಂಕ್ಯೇತ ಎಂಬುದರಿಂದ ಅನ್ವಯ. ಹಾಗಾದರೆ ತೃಣನಿರ್ಮಥನಗಳಿಂದ ಅಗ್ನಿಯು ಉತ್ಪತ್ತಿಯಾಗಲಿ. ಕಾರಣತಾವಚ್ಛೇದಕಾವಚ್ಛಿನ್ನ ಘಟಿತವಾದ ಸಾಮಗ್ರಿಯು ಇದೆಯಷ್ಟೆ ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಾರೆ – ಯಥಾಚೇತಿ.

## ಕಾರ್ಯದಲ್ಲಿ ವೈಜಾತ್ಯ ಒಪ್ಪದಿದ್ದರೆ

**तथैव तच्छक्त्योरपीति ।। नन्वेवं कार्यवैजात्यमावश्यकम्, एकजातीयकार्ये सहकारिनियमानुपपत्तेः । स हि फलविरोधेन परं स्यात् । स च कार्यतावच्छेदकभेदेन, स च प्रकृते न कार्यवैजात्यं विना, एवञ्च नैकशक्तिमत्त्वेन जनकत्वमिति चेत् ।अत्राहुः ।**

ತಥೈವ ತಚ್ಛಕ್ತ್ಯೋರಪೀತಿ – ಹಾಗಾದರೆ ಕಾರ್ಯವೈಜಾತ್ಯವನ್ನು ಅವಶ್ಯವಾಗಿ ಅಂಗೀಕರಿಸಬೇಕು. ಇಲ್ಲದಿದ್ದರೆ ಏಕಜಾತೀಯ ಕಾರ್ಯದಲ್ಲಿ ಸಹಕಾರಿ ನಿಯಮವು ಕೂಡುವುದಿಲ್ಲ. ಸಹಕಾರಿ

ನಿಯಮವನ್ನಾದರೂ ಫಲವಿರೋಧದಿಂದ ಕಾರ್ಯವು ಕಾಣದಿರುವುದರಿಂದ ಅಂಗೀಕರಿಸಬೇಕು. ಫಲವಿರೋಧವನ್ನಾದರೂ ಕಾರ್ಯತಾವಚ್ಛೇದಕ ಭೇದದಿಂದ ಉಪಪಾದನೆ ಮಾಡಬೇಕು. ಪ್ರಕೃತದಲ್ಲಿ ಕಾರ್ಯದಲ್ಲಿ ವೈಜಾತ್ಯವನ್ನು ಒಪ್ಪದಿದ್ದರೆ ಕಾರ್ಯತಾವಚ್ಛೇದಕ ಭೇದವಿಲ್ಲ. ಆದ್ದರಿಂದ ಕಾರ್ಯದಲ್ಲಿ ವೈಜಾತ್ಯವನ್ನು ಒಪ್ಪಲೇಬೇಕು. ಆದ್ದರಿಂದ ತೃಣಾದಿಗಳಿಗೆ ಏಕಶಕ್ತಿಮತ್ತ್ವೇನ ಕಾರಣತ್ವವು ಕೂಡುವುದಿಲ್ಲ ಎಂದು ಶಂಕೆಯು ಬಂದರೆ ಕೆಲವರು ಹೀಗೆ ಹೇಳುತ್ತಾರೆ.

## ಏಕಶಕ್ತಿಮತ್ತ್ವೇನ ತೃಣಾದಿಗಳಿಗೆ ಕಾರಣತ್ವ

**तृणादीनां वह्नित्वावच्छिन्नं प्रत्येकशक्तिमत्त्वेन फूत्कारादीनां च तृणजन्यवह्नित्वाद्यवच्छिन्नं प्रति जनकत्वेनैव शक्तिसिद्धि-सहकारिनियमयोरप्युपपत्तिरिति ।**

ತೃಣಾದಿಗಳಿಗೆ ವಹ್ನಿತ್ವಾವಚ್ಛಿನ್ನವನ್ನು ಕುರಿತು ಏಕಶಕ್ತಿಮತ್ತ್ವೇನ ಕಾರಣತ್ವವನ್ನು ಹೇಳುವುದರಿಂದ ಶಕ್ತಿ ಸಿದ್ಧಿಯಾಗುತ್ತದೆ. ಫೂತ್ಕಾರಾದಿಗಳಿಗೆ ತೃಣಜನ್ಯವಹ್ನಿತ್ವಾವಚ್ಛಿನ್ನವನ್ನು ಕುರಿತು ಕಾರಣತ್ವವನ್ನು ಹೇಳುವುದರಿಂದ ಸಹಕಾರಿ ನಿಯಮವು ಸಿದ್ಧವಾಗುತ್ತದೆ ಎಂದು ಅವರ ಅಭಿಪ್ರಾಯ.

## ಹಿಂದಿನ ಆಪತ್ತಿಗಳ ಪರಿಹಾರ

**केचित्तु यथा प्रागभावत्वेन कार्यमात्रं प्रति कारणत्वेऽपि घटप्रागभावो न पटं प्रति योग्यः । यथा वा जन्यविशिष्टज्ञाने विशेषणज्ञानत्वेन कारणत्वेऽपि घटत्वज्ञानं पटत्वविशिष्टज्ञानं प्रति न स्वरूपयोग्यं तथा फूत्कारादीनामेकशक्तिमत्त्वेन कारणत्वेऽपि न तृणनिर्मन्थनादिभ्यो वह्न्युत्पत्तिरित्याहुः ।**

ಇನ್ನು ಕೆಲವರು ಕಾರ್ಯಮಾತ್ರವನ್ನು ಕುರಿತು ಪ್ರಾಗಭಾವವು ಪ್ರಾಗಭಾವತ್ವೇನ ಕಾರಣವಾದರೂ ಹೇಗೆ ಘಟ ಪ್ರಾಗಭಾವಕ್ಕೆ ಪಟಕಾರಣತ್ವ (ಯೋಗ್ಯತ್ವ) ಇಲ್ಲವೋ ಮತ್ತು ಹೇಗೆ ಜನ್ಯವಿಶಿಷ್ಟ

ಜ್ಞಾನವನ್ನು ಕುರಿತು ವಿಶೇಷಣಜ್ಞಾನತ್ವೇನ ವಿಶೇಷಣಜ್ಞಾನಕ್ಕೆ ಕಾರಣತ್ವವಿದ್ದರೂ ಘಟತ್ವಜ್ಞಾನವು ಪಟತ್ವವಿಶಿಷ್ಟಜ್ಞಾನವನ್ನು ಕುರಿತು ಹೇಗೆ ಸ್ವರೂಪಯೋಗ್ಯತ್ವ ಕಾರಣತ್ವವನ್ನು ಹೊಂದಿಲ್ಲವೋ ಹಾಗೆ ತೃಣಫೂತ್ಕಾರಾದಿಗಳಿಗೆ ಏಕಶಕ್ತಿಮತ್ತ್ವೇನ ಕಾರಣತ್ವವಿದ್ದರೂ ತೃಣನಿರ್ಮಥನಾದಿಗಳಿಂದ ವಹ್ನಿಯ ಉತ್ಪತ್ತಿಯ ಆಪತ್ತಿಯಿಲ್ಲ ಎಂದು ಹೇಳುತ್ತಾರೆ.

## ಎಲ್ಲಿ ಏಕಶಕ್ತಿಮತ್ತ್ವವು ಕಾರಣತಾವಚ್ಛೇದಕ ?

**तृणफूत्कारसम्बन्धतरणिकिरणमणिसम्बन्धादिष्वेकजातीय - शक्तिमत्त्वं कारणतावच्छेदकम्, तथा च तदन्यतमसम्बन्धाभावे तृणनिर्मन्थनसमवधानेऽपि नाग्न्युत्पत्तिरित्यप्याहुः ।**

ಇನ್ನು ಕೆಲವರು ತೃಣಫೂತ್ಕಾರ ಸಂಬಂಧ, ಸೂರ್ಯಕಿರಣ ಮಣಿ ಸಂಬಂಧ ಮುಂತಾದ ಸಂಬಂಧಗಳಲ್ಲಿಯೇ ಏಕಶಕ್ತಿಮತ್ತ್ವವೇ ಕಾರಣತಾವಚ್ಛೇದಕವಾದುದು. ತಥಾಚ ಆ ಮೂರು ಸಂಬಂಧಗಳಲ್ಲಿ ಯಾವುದಾದರೂ ಒಂದು ಸಂಬಂಧವಿಲ್ಲದಿದ್ದರೆ ಕಾರಣತಾವಚ್ಛೇದಕಾವಚ್ಛಿನ್ನ-ವಾದುದು ಇಲ್ಲದಿರುವುದರಿಂದ ತೃಣನಿರ್ಮಥನ ಸಮವಧಾನವಿದ್ದರೂ ಅಗ್ನಿಯ ಉತ್ಪತ್ತಿಯಾಗುವುದಿಲ್ಲ ಎಂದು ಹೇಳುತ್ತಾರೆ.

## ಮೀಮಾಂಸಕರ ಏಕದೇಶಿಗಳ ನಿರಾಕರಣೆ

**स्वैकदेशिमतं दूषयति – यत्त्विति ।। तृणत्वेनेति ।। यद्यपि परमते तृणत्वेन न कारणता किन्त्वेकशक्तिमत्त्वेन, अन्यथा तद्रक्षार्थं कार्यवैजात्यकल्पनापत्तेः । तथापि तृणादिप्रत्येकवृत्तित्वं लाघवात् । कारणतापदेन शक्तिरेवात्र विवक्षिता । तथा च तृणत्वावच्छेदेन गृहीतशक्तिभङ्गप्रसङ्गादित्यर्थः ।**

ಮೀಮಾಂಸಕರು ಯತ್ತು ಎಂಬುದಾಗಿ ತಮ್ಮ ಏಕದೇಶಿ ಮತವನ್ನೇ ದೂಷಿಸುತ್ತಾರೆ – ಯತ್ತ್ವಿತಿ. ತೃಣತ್ವೇನೇತಿ – ಯದ್ಯಪಿ ಪರಮತದಲ್ಲಿ (ಮೀಮಾಂಸಕ ಮತದಲ್ಲಿ) ತೃಣತ್ವೇನ ಕಾರಣತ್ವವಿಲ್ಲ.

ಏಕಶಕ್ತಿಮತ್ತ್ವೇನ ಕಾರಣತ್ವವನ್ನು ಅಂಗೀಕರಿಸುತ್ತಾರೆ. ಇಲ್ಲದಿದ್ದರೆ ತೃಣತ್ವೇನ ಕಾರಣತ್ವವನ್ನು ಹೇಳಿದರೆ ಕಾರ್ಯದಲ್ಲಿ ವೈಜಾತ್ಯವನ್ನು ಕಲ್ಪನೆಮಾಡಬೇಕಾಗುತ್ತದೆ. ಆದರೂ ಲಾಘವದಿಂದ ಆ ಶಕ್ತಿಯು ತೃಣಾದಿ ಪ್ರತ್ಯೇಕ ವ್ಯಕ್ತಿಯಾಗಿದೆ. ಇಲ್ಲಿ ಕಾರಣತ್ವಪದದಿಂದ ಶಕ್ತಿಯೇ ಅಭಿಪ್ರೇತವಾಗಿದೆ. ತಥಾಚ ತೃಣತ್ವಾವಚ್ಛಿನ್ನದಲ್ಲಿ ಗೃಹೀತವಾದ ಶಕ್ತಿಯ ಭಂಗವು ಉಂಟಾಗುವ ಪ್ರಸಂಗವಿದೆ ಎಂದು ಅರ್ಥ.

## ಶಕ್ತಿಯನ್ನೊಪ್ಪಲೇ ಬೇಕೆಂಬ ಮೀಮಾಂಸರ ಧೋರಣೆ

**तृणादिशक्तेश्चैकजातीयत्वेनानुगमः । एकजातिप्रयोजकं च तत्रादृष्टादिकम् । न च गौरवम्, प्रामाणिकत्वादिति भावः ।।**

ತೃಣಾದಿಶಕ್ತಿಗಳನ್ನು ಏಕಜಾತೀಯತ್ವೇನ ಅನುಗಮ ಮಾಡಬೇಕು. ಶಕ್ತಿಗಳಲ್ಲಿ ಏಕಜಾತಿಗೆ ಪ್ರಯೋಜಕವಾದುದು ಅದೃಷ್ಟಾದಿಗಳೇ. ಶಕ್ತಿಯಲ್ಲಿ ಜಾತಿಯನ್ನು ಕಲ್ಪನೆ ಮಾಡುವುದು ಪ್ರಾಮಾಣಿಕವಾದ್ದರಿಂದ ಗೌರವ ದೋಷವು ಬರುವುದಿಲ್ಲ. ಇದು ಮೀಮಾಂಸಕರ ವಾದ.

## ಮೀಮಾಂಸಕ ಮತ ನಿರಾಕರಣೆ

**प्रतिव्यक्तीति ।। एतच्च 'अनित्ये भावहेतुजा' इति सिद्धान्तात्। नित्यशक्त्यभ्युपगमे च पूर्वोक्त एव दोषो द्रष्टव्यः । जातीति।। न च मण्यादौ कारणं एवैकजातिः कल्प्यतां लाघवादिति वाच्यम् । प्रस्तरत्वादिना सङ्करापत्तेरिति भावः ।**

ಪ್ರತಿವ್ಯಕ್ತೀತಿ – ಅನಿತ್ಯಾಭಾವ ಹೇತುಜಾ ಎಂಬ ಮೀಮಾಂಸಕರ ಸಿದ್ಧಾಂತವನ್ನು ಅನುಸರಿಸಿ ಜನ್ಯವಾದ ಶಕ್ತಿಯು ಅನಿತ್ಯವೆಂದು ಅಂಗೀಕರಿಸಿ ಈ ದೋಷವನ್ನು ಹೇಳಲಾಗಿದೆ. ನಿತ್ಯಶಕ್ತಿಯನ್ನು ಅಂಗೀಕರಿಸಿದರೆ ಪ್ರತಿಬಂಧಕವಿದ್ದಾಗಲೂ ದಾಹ ಉಂಟಾಗಲಿ ಎಂಬ ಹಿಂದೆ ಹೇಳಿದ ದೋಷವು ಇದ್ದೇ ಇದೆ ಎಂದು ತಿಳಿಯಬೇಕು. ಜಾತೀತಿ – ಕಾರಣವಾದ ಮಣ್ಯಾದಿಗಳಲ್ಲೇ ಒಂದುಜಾತಿಯನ್ನು ಕಲ್ಪನೆಮಾಡಿದರೆ ಲಾಘವವು ಉಂಟಾಗುತ್ತದೆ ಎಂಬ ಶಂಕೆಯು ಸರಿಯಲ್ಲ. ಏಕೆಂದರೆ ಮಣಿಯಲ್ಲೇ

ಅಂತಹ ಜಾತಿಯನ್ನು ಕಲ್ಪನೆಮಾಡಿದರೆ ಪ್ರಸ್ತರತ್ವಾದಿಗಳಿಂದ ಸಾಂಕರ್ಯವು ಬರುತ್ತದೆ ಎಂದು ಅಭಿಪ್ರಾಯ.

## ಜಾತಿಗೆ ಅವಚ್ಛೇದಕತ್ವ ಕಲ್ಪನೆ ಮಾಡಿದರೆ ಸಾಕು, ಶಕ್ತಿ ಬೇಡ

**प्रत्यक्षसिद्धत्वादिति ।। तथा च 'धर्मिकल्पनात्' इति न्यायेन तस्या एव जातेरवच्छेदकत्वमात्रं कल्प्यते न तु शक्तिं कल्पयित्वा तदवच्छेदकत्वमिति भावः । एतदपि जातेः प्रामाणिकतया तद(व)च्छेदकत्वस्यैव लाघवादौचित्यमित्य-भिप्रेत्योक्तम् ।**

ಪ್ರತ್ಯಕ್ಷಸಿದ್ಧತ್ವಾದಿತಿ – ತಥಾಚ ಧರ್ಮಿಕಲ್ಪನೆಗಿಂತಲೂ ಧರ್ಮಕಲ್ಪನೆಯೇ ಶ್ರೇಷ್ಠವಾದದ್ದು ಎಂಬ ನ್ಯಾಯದಿಂದ ಪ್ರತ್ಯಕ್ಷಸಿದ್ಧವಾದ ಜಾತಿಗೆ ಅವಚ್ಛೇದಕವನ್ನು ಕಲ್ಪನೆಮಾಡಿದರೆ ಲಾಘವ. ಧರ್ಮಿಯಾದ ಶಕ್ತಿಯನ್ನು ಮತ್ತು ಅದಕ್ಕೆ ಅವಚ್ಛೇದಕತ್ವವನ್ನು ಕಲ್ಪನೆಮಾಡಿದರೆ ಗೌರವವು ಬರುತ್ತದೆ ಎಂದು ಅಭಿಪ್ರಾಯ. ಇದೂ ಸಹ ಜಾತಿಯು ಪ್ರಾಮಾಣಿಕವಾದ್ದರಿಂದ ಅದಕ್ಕೆ ಅವಚ್ಛೇದಕತ್ವವನ್ನು ಕಲ್ಪನೆಮಾಡುವುದರಲ್ಲೇ ಲಾಘವವಿದೆ ಎಂಬ ಅಭಿಪ್ರಾಯದಿಂದ ಹೇಳಲ್ಪಟ್ಟಿದೆ.

## ಶಕ್ತಿಯು ಸಿದ್ಧವಾಗದು

**वस्तुतःकार्यतावच्छेदकाननुगमस्यादोषत्वात् जात्यभावेऽपित त्तद्वह्नित्वस्यैवावच्छेदकत्वसम्भवान्न शक्तिसिद्धिरित्यवधेयम्। तन्मते जातेः संस्थानमात्रव्यङ्ग्यतया शक्तौ जात्यभावे कथमनुगम इत्यपि दूषणं बोध्यम् ।**

ವಸ್ತುತಃ ಕಾರ್ಯತಾವಚ್ಛೇದಕವು ಅನನುಗತವಾದರೂ ದೋಷವಿಲ್ಲವಾದ್ದರಿಂದ ಜಾತಿಯನ್ನು ಅಂಗೀಕರಿಸದಿದ್ದರೂ ತತ್ತದ್ವಹ್ನಿತ್ವವೇ ಕಾರ್ಯತಾವಚ್ಛೇದಕವೆಂದು ಅಂಗೀಕರಿಸಿದರೆ ದೋಷವಿಲ್ಲವಾದ್ದರಿಂದ ಶಕ್ತಿಯ ಸಿದ್ಧಿಯಾಗುವುದಿಲ್ಲ ಎಂದು ತಿಳಿಯಬೇಕು. ಮತ್ತು ಅವರ ಮತದಲ್ಲಿ

ಜಾತಿಯು ಸಂಸ್ಥಾನ ಮಾತ್ರ ವ್ಯಂಗ್ಯವಾಗಿರುವುದರಿಂದ ಶಕ್ತಿಯಲ್ಲಿ ಸಂಸ್ಥಾನವಿಲ್ಲದಿರುವುದರಿಂದ ಜಾತಿಯು ಇಲ್ಲದಿರುವಾಗ ಅನುಗಮವನ್ನು ಮಾಡುವುದು ಅಸಾಧ್ಯ ಎಂಬ ದೂಷಣವನ್ನೂ ಇಟ್ಟುಕೊಳ್ಳಬೇಕು.

## ಯೋಗ್ಯಾನುಪಲಬ್ಧಿರೂಪವಾದ ಬಾಧದ ಪರಿಹಾರ

**वह्निवृत्तिजातौ योग्यानुपलब्धिबाधं निराकरोति – तृणजन्येति ।। अन्यथा विशुद्धमातापितृजन्यत्वेनैव ब्राह्मणानुगतबुद्धेस्तत्रापि जात्यभावः स्यादिति भावः । वैजात्यानन्त्यमुद्धरति – गोमयेति ।।**

ವಹ್ನಿಯಲ್ಲಿ ಜಾತಿಯನ್ನು ಅಂಗೀಕಾರ ಮಾಡಿದರೆ ಯೋಗ್ಯಾನುಪಲಬ್ಧಿರೂಪವಾದ ಬಾಧವು ಬರುವುದೆಂದು ಹಿಂದೆ ಹೇಳಿದ ದೋಷವನ್ನು ತೃಣಜನ್ಯ ಎಂಬ ವಾಕ್ಯದಿಂದ ಪರಿಹಾರ ಮಾಡುತ್ತಾರೆ – ತೃಣಜನ್ಯೇತಿ. ಇಲ್ಲದಿದ್ದರೆ ವಿಶುದ್ಧ ಮಾತಾಪಿತೃಜನ್ಯತ್ವ ಜ್ಞಾನದಿಂದಲೇ ಅನುಗತ ಬ್ರಾಹ್ಮಣತ್ವಬುದ್ಧಿಯು ಬರುವುದರಿಂದ ಅಲ್ಲಿಯೂ ಕೂಡ ಬ್ರಾಹ್ಮಣತ್ವ ಜಾತಿಯ ಸಿದ್ಧಿಯಾಗದಿರಲಿ ಎಂಬ ಆಪತ್ತಿಯು ಉಂಟಾಗುತ್ತದೆ. ಹಿಂದೆ ಹೇಳಿದ ವೈಜಾತ್ಯಾನಂತ್ಯ ಕಲ್ಪನಾರೂಪವಾದ ದೋಷವನ್ನು ಗೋಮಯ ಎಂಬ ವಾಕ್ಯದಿಂದ ಪರಿಹಾರ ಮಾಡುತ್ತಾರೆ – ಗೋಮಯೇತಿ –

## ಆನಂತ್ಯದೋಷಕ್ಕೆ ಅವಕಾಶವಿಲ್ಲ

**यद्यपि गोमयवृश्चिकप्रभवयोर्वृश्चिकयोर्वैजात्यमस्ति तथापि वृश्चिकत्वमनुगतमप्यस्ति । तदेवाग्रिमवृश्चिके जनकतावच्छेदकमिति सर्वत्र वृश्चिकप्रभवत्वप्रयोज्यजाति-मत्त्वमिति नानन्त्यमिति भावः ।**

ಯದ್ಯಪಿ ಗೋಮಯ ವೃಶ್ಚಿಕದಿಂದ ಜನ್ಯವಾದ ಮತ್ತು ವೃಶ್ಚಿಕದಿಂದ ಜನ್ಯವಾದ ವೃಶ್ಚಿಕಗಳಲ್ಲಿ ವೈಜಾತ್ಯವಿದೆ. ಆದರೂ ಅನುಗತವಾದ ವೃಶ್ಚಿಕತ್ವವೂ ಇದೆ. ಆ ವೃಶ್ಚಿಕತ್ವ ಜಾತಿಯೇ ಮುಂದೆ

ಉತ್ಪನ್ನವಾಗುವ ವೃಶ್ಚಿಕಗಳಿಗೆ ಕಾರಣತಾವಚ್ಛೇದಕವಾಗುತ್ತದೆ. ಆದ್ದರಿಂದ ಎಲ್ಲ ಕಡೆಯಲ್ಲಿಯೂ ವೃಶ್ಚಿಕಪ್ರಭವತ್ವ ಪ್ರಯುಕ್ತವಾದ ಒಂದೇ ಜಾತಿಯಿರುವುದರಿಂದ ಆನಂತ್ಯವಿಲ್ಲ ಎಂದು ಅಭಿಪ್ರಾಯ.

## ಲೀಲಾವತ್ಯಾದಿಗ್ರಂಥಗಳಲ್ಲಿ ಮಾಡಿದ ಪರಿಹಾರ ಕ್ರಮ

**वह्निजातीयत्वाकस्मिकत्वप्रसङ्गं प्रागुक्तमुद्धरति – वह्निमात्र इति ।। यद्यप्युदर्यवह्नेरनुद्भूतः स्पर्श इति लीलावत्यादौ व्यवस्थापनात् तत्र कथं वह्नित्वं प्रयोजकाभावात् तथापि भौमवह्निमात्र एव तत्प्रयोजकत्वमुक्तमिति भावः ।**

ವಿಶೇಷ ಕಾರ್ಯಕಾರಣಭಾವಗಳನ್ನು ಕಲ್ಪನೆ ಮಾಡಿದರೆ ವಹ್ನಿ ಸಾಮಾನ್ಯವನ್ನು ಕುರಿತು ಯಾವುದೂ ಕಾರಣವಿಲ್ಲದಿರುವುದರಿಂದ ಅದು ಆಕಸ್ಮಿಕವಾಗಬೇಕಾಗುತ್ತದೆ ಎಂದು ಹಿಂದೆ ಹೇಳಿದ ದೋಷವನ್ನು ವಹ್ನಿಮಾತ್ರ ಎಂಬ ವಾಕ್ಯದಿಂದ ಪರಿಹಾರ ಮಾಡುತ್ತಾರೆ – ವಹ್ನಿ ಮಾತ್ರ ಇತಿ. ಯದ್ಯಪಿ ಜಾಠರ ವಹ್ನಿಯಲ್ಲಿ ಅನುದ್ಭೂತಸ್ಪರ್ಶವಿದೆ ಎಂದು ಲೀಲಾವತ್ಯಾದಿ ಗ್ರಂಥಗಳಲ್ಲಿ ವ್ಯವಸ್ಥೆ ಮಾಡಿರುವುದರಿಂದ ವಹ್ನಿತ್ವಕ್ಕೆ ಪ್ರಯೋಜಕವಾದ ಅನುದ್ಭೂತ ಸ್ಪರ್ಶವು ಇಲ್ಲದಿರುವುದರಿಂದ ಅಲ್ಲಿ ವಹ್ನಿತ್ವವನ್ನು ಅಂಗೀಕರಿಸುವುದು ಹೇಗೆ ಎಂಬ ಪ್ರಶ್ನೆಗೆ ಅನುದ್ಭೂತ ಸ್ಪರ್ಶವನ್ನು ಭೌಮವಹ್ನಿಗೆ ಮಾತ್ರ ಪ್ರಯೋಜಕವೆಂದು ಹೇಳಿದ್ದೇವೆ. ಜಾಠರ ವಹ್ನಿಯು ಭೌಮವಹ್ನಿಯಲ್ಲವಾದ್ದರಿಂದ ಯಾವ ದೋಷವೂ ಇಲ್ಲ ಎಂದು ಪರಿಹಾರ.

## ಲೀಲಾವತಿಗ್ರಂಥಕ್ಕೆ ಆಪಾತತಃ ಆಕ್ಷೇಪವೇಕೆ ?

**केचित्तु लीलावतीग्रन्थ आपाततः । वस्तुतस्तत्रोद्भूतस्पर्श इत्याहुः । पवनेति ।। तदुत्कर्षेण वह्न्युत्कर्षदर्शनादिति भावः।।**

ಕೆಲವರು ಲೀಲಾವತಿ ಗ್ರಂಥವು ಆಪಾತತಃ ಪ್ರವೃತ್ತವಾಗಿದೆ, ವಾಸ್ತವವಾಗಿ ಜಾಠರವಹ್ನಿಯಲ್ಲಿಯೂ ಉದ್ಭೂತಸ್ಪರ್ಶವಿದೆ ಎಂದು ಹೇಳುತ್ತಾರೆ. ಪವನೇತಿ – ಪವನದ ಉತ್ಕರ್ಷದಿಂದ ವಹ್ನಿಯ ಉತ್ಕರ್ಷವು ಕಂಡುಬರುವುದರಿಂದ ಪವನವು ಕಾರಣಕೋಟಿಯಲ್ಲಿ ಸೇರುತ್ತದೆ ಎಂದು ಅಭಿಪ್ರಾಯ.

## ತಟಸ್ಥನ ಆಕ್ಷೇಪ

**तटस्थः शङ्कते – नन्विति ।। ननु तृणजन्यत्वं तृणरूपादौ प्रसिद्धं, तदभावश्च मणिजन्यवह्नौ सुग्रह इति तदवच्छेदेन मणिजन्यत्वंसुग्रहमित्यत आह–वह्निमात्रस्येति।।व्यभिचारेण तृणस्याजनकत्वाद् वह्निमात्रस्यैव तृणजन्यत्वादित्यर्थः । तथा च पुनः स एव व्यभिचार इति भावः ।**

ತಟಸ್ಥನು ನನು ಎಂದು ಶಂಕಿಸುತ್ತಾನೆ – ನನ್ವಿತಿ. ತೃಣಜನ್ಯತ್ವವು ತೃಣರೂಪಾದಿಗಳಲ್ಲಿ ಪ್ರಸಿದ್ಧವಾಗಿದೆ. ಆದ್ದರಿಂದ ಮಣಿಜನ್ಯವಹ್ನಿಯಲ್ಲಿ ತೃಣಜನ್ಯತ್ವಾಭಾವದ ಗ್ರಹವುಂಟಾಗುವುದರಿಂದ ವಹ್ನಿತ್ವಾವಚ್ಛೇದೇನ ಮಣಿಜನ್ಯತ್ವವು ಗೃಹೀತವಾಗುತ್ತದೆ ಎಂಬ ಶಂಕೆಗೆ ವಹ್ನಿಮಾತ್ರಸ್ಯ ಎಂದು ಉತ್ತರವನ್ನು ಹೇಳುತ್ತಾರೆ – ವಹ್ನಿಮಾತ್ರಸ್ಯೇತಿ. ವ್ಯಭಿಚಾರದಿಂದ ತೃಣಕ್ಕೆ ಜನಕತ್ವವೇ ಇಲ್ಲದಿರುವುದರಿಂದ ವಹ್ನಿಮಾತ್ರವೇ ತೃಣಾಜನ್ಯವಾಗುತ್ತದೆ ಎಂದು ಅರ್ಥ. ಆದ್ದರಿಂದ ಪುನಃ ಮೊದಲು ಹೇಳಿದ ವ್ಯಭಿಚಾರವೇ ಬರುತ್ತದೆ ಎಂದು ಅಭಿಪ್ರಾಯ.

## ವಿಶಿಷ್ಟಜ್ಞಾನವು ವಿಶೇಷಣಜ್ಞಾನದ ಕಾರ್ಯವಾದ್ದರಿಂದ ದೋಷವಿಲ್ಲ

**उक्तग्राहकैरिति ।। अन्वयव्यतिरेकाभ्यां नियतेनान्वयेन चेति कृत्वा बहुवचनोपपत्तिः । अकार्याकारणेति ।। ननु कारणत्वसंशये कथं तदवच्छेदकरूपवत्त्वनिश्चयः, तयोरेकनिश्चयाकनिश्चेयत्वात्, किञ्च वह्निनिष्ठकार्यताया स्तृणनिष्ठकारणतायाश्चाग्रहे कथं तदवच्छेदकत्वेन ज्ञानं विशेषणज्ञानसाध्यत्वाद् विशिष्टज्ञानस्य ।**

ಉಕ್ತಗ್ರಾಹಕೈರಿತಿ – ಅನ್ವಯ ವ್ಯತಿರೇಕಗಳು ಮತ್ತು ನಿಯತಾನ್ವಯ ಹೀಗೆ ಮೂರು ಗ್ರಾಹಕವಿರುವುದರಿಂದ ಬಹುವಚನವು ಕೂಡುತ್ತದೆ. ಅಕಾರ್ಯಾಕಾರಣೇತಿ – ಕಾರಣತ್ವ ಮತ್ತು ಕಾರಣತಾವಚ್ಛೇದಕ ರೂಪಗಳು ಒಂದೇ ಜ್ಞಾನದಿಂದ ನಿಶ್ಚಯಿಸಲ್ಪಡಬೇಕಾದ್ದರಿಂದ

ಕಾರಣತ್ವ ಸಂಶಯವಿರುವಾಗ ಕಾರಣತಾವಚ್ಛೇದಕರೂಪವತ್ತ್ವನಿಶ್ಚಯವು ಹೇಗೆ ಬರುತ್ತದೆ? ಮತ್ತು ವಿಶಿಷ್ಟಜ್ಞಾನವು ವಿಶೇಷಣ ಜ್ಞಾನಕಾರ್ಯವಾದುದರಿಂದ ವಹ್ನಿ ನಿಷ್ಠ ಕಾರ್ಯತಾ ಜ್ಞಾನವೂ ಮತ್ತು ತೃಣನಿಷ್ಠ ಕಾರಣತಾ ಜ್ಞಾನವೂ ಇಲ್ಲದಿರುವಾಗ ಅಂತಹ ಕಾರ್ಯತಾ ವಿಶಿಷ್ಟವಾದ ಕಾರ್ಯತಾವಚ್ಛೇದಕ ಜ್ಞಾನವು ಮತ್ತು ಕಾರಣತಾವಚ್ಛೇದಕ ಜ್ಞಾನವು ಹೇಗೆ ಬರುತ್ತದೆ?

## ಕಾರ್ಯತಾವಚ್ಛೇದಕತ್ವ ಎಂದರೇನು ?

**अपि च कार्यतावच्छेदकत्वं कार्यताद्याश्रयमात्रवृत्तित्वं, तद्ग्रहे च कार्यताद्याश्रयत्वमवश्यं विषयः । न च कार्यताद्यपि गृह्यत एवेति वाच्यम् । व्यभिचारेण तद्ग्रहस्याशक्यत्वादिति चेत् । अत्र वदन्ति ।**

ಮತ್ತು ಕಾರ್ಯತಾವಚ್ಛೇದಕತ್ವವೆಂದರೆ ಕಾರ್ಯತಾಶ್ರಯ ಮಾತ್ರ ವೃತ್ತಿತ್ವಂ. ಕಾರ್ಯತಾಶ್ರಯವೃತ್ತಿತ್ವ ಜ್ಞಾನವು ಬಂದರೆ ಅದರಲ್ಲಿ ಕಾರ್ಯತಾಶ್ರಯತ್ವವು ಅವಶ್ಯವಾಗಿ ತೋರಬೇಕು. ಆದರೆ ವ್ಯಭಿಚಾರವಿರುವುದರಿಂದ ಕಾರ್ಯತಾಜ್ಞಾನವೇ ಬರಲು ಸಾಧ್ಯವಿಲ್ಲ. ಆದ್ದರಿಂದ ಕಾರ್ಯತಾವಚ್ಛೇದಕ ಮತ್ತು ಕಾರಣತಾವಚ್ಛೇದಕ ರೂಪಗಳ ಜ್ಞಾನವು ಹೇಗೆ ಬರಲು ಸಾಧ್ಯ ? ಎಂಬ ಈ ಪ್ರಶ್ನೆಗಳಿಗೆ ಕೆಲವರು ಹೀಗೆ ಉತ್ತರವನ್ನು ಹೇಳುತ್ತಾರೆ.

## ವಹ್ನಿತ್ವಾಶ್ರಯಕ್ಕೂ ತೃಣತ್ವಾಶ್ರಯಕ್ಕೂ ಕಾರ್ಯಕಾರಣಭಾವವಿದೆ

**कार्यतादिकमप्यत्र गृह्यत एव । तेन नोक्तसर्वदोषावकाशः। न चोक्तव्यभिचारनिश्चये कथमव्यभिचाररूपनियमगर्भहेतुत्वग्रह इति वाच्यम् । समानप्रकारकविरोधिज्ञानस्यैव प्रतिबन्धकतया तृणत्वावच्छिन्नस्य वह्नित्वावच्छिन्ने व्यभिचारग्रहे तदवच्छिन्नस्य तदवच्छिन्ने हेतुत्वाग्रहेऽपि तदाश्रययोर्हेतुहेतुमद्भावग्रहस्याविरोधात् ।**

ಇಲ್ಲಿ ಕಾರ್ಯತ್ವಾದಿಗಳು ಗ್ರಹಿಸಲ್ಪಡುತ್ತವೆ. ಆದ್ದರಿಂದ ತದವಚ್ಛೇದಕ ರೂಪಗಳು ಗ್ರಹಿಸಲ್ಪಡಬಹುದು. ಹಿಂದೆ ಹೇಳಿದ ವ್ಯಭಿಚಾರ ನಿಶ್ಚಯವಿರುವಾಗ ಅವ್ಯಭಿಚಾರ ರೂಪನಿಯಮ ಘಟಿತವಾದ ಕಾರಣತ್ವ ಗ್ರಹವು ಹೇಗೆ ಉಂಟಾಗುತ್ತದೆ ಎಂಬ ಆಕ್ಷೇಪಕ್ಕೆ ಹೀಗೆ ಸಮಾಧಾನ. ಸಮಾನ ಪ್ರಕಾರಕ ವಿರೋಧಿ ಜ್ಞಾನವೇ ಪ್ರತಿಬಂಧಕವಾದುದು. ವಹ್ನಿತ್ವಾವಚ್ಛಿನ್ನವನ್ನು ಕುರಿತು ತೃಣತ್ವಾವಚ್ಛಿನ್ನವು ವ್ಯಭಿಚರಿತ ಎಂಬ ಜ್ಞಾನವಿರುವಾಗ ವಹ್ನಿತ್ವಾವಚ್ಛಿನ್ನವನ್ನು ಕುರಿತು ತೃಣತ್ವಾವಚ್ಛಿನ್ನಕ್ಕೆ ಕಾರಣತ್ವ ಗ್ರಹವು ಉಂಟಾಗದಿದ್ದರೂ ವಹ್ನಿತ್ವಾಶ್ರಯಕ್ಕೂ ಮತ್ತು ತೃಣತ್ವಾಶ್ರಯಕ್ಕೂ ಕಾರ್ಯಕಾರಣಭಾವಗ್ರಹವು ಉಂಟಾಗಲು ಯಾವ ವಿರೋಧವೂ ಇಲ್ಲ.

## ಯಾಗವು ಹೇಗೆ ಸ್ವರ್ಗಜನಕ ?

**अत एव यागं विनापि दानात् स्वर्गज्ञानेऽपि स्वर्गजनको याग इति धीः स्वर्गत्वसमानाधिकरण्येन यागजन्यत्वं विषयीकरोति, तदिदमाह – न तु तृणत्वेन कारणत्वं वह्नित्वेन कार्यत्वं वेति ।। यदि कार्यकारणभाव एव न गृह्यते तदा न तु हेतुत्वं कार्यत्वं वेत्येव ब्रूयात् ।**

ಆದ್ದರಿಂದಲೇ ಯಾಗವಿಲ್ಲದೇ ದಾನದಿಂದಲೇ ಸ್ವರ್ಗ ಉಂಟಾಗುವುದರಿಂದ ಸ್ವರ್ಗವನ್ನು ಕುರಿತು ಯಾಗವು ವ್ಯಭಿಚರಿತ ಎಂದು ತಿಳಿದಿದ್ದರೂ ಯಾಗವು ಸ್ವರ್ಗಜನಕ ಎಂಬ ಜ್ಞಾನವು ಬರುತ್ತದೆ. ಏಕೆಂದರೆ ಅಲ್ಲಿ ಸ್ವರ್ಗತ್ವ ಸಾಮಾನಾಧಿಕರಣ್ಯೇನ ಯಾಗಜನ್ಯತ್ವವು ವಿಷಯೀಕೃತವಾಗುತ್ತದೆ. ಸ್ವರ್ಗತ್ವಾವಚ್ಛೇದೇನ ಯಾಗಜನ್ಯತ್ವವು ವಿಷಯೀಕೃತವಾಗುವುದಿಲ್ಲ. ಇದನ್ನು ಮೂಲದಲ್ಲಿಯೇ 'ನ ತು ತೃಣತ್ವೇನ ಕಾರಣತ್ವಂ ವಹ್ನಿತ್ವೇನ ಕಾರ್ಯತ್ವಂ ವಾ' ಎಂದು ಹೇಳಿದ್ದಾರೆ. ಒಂದುಪಕ್ಷ ಕಾರ್ಯಕಾರಣಭಾವವೇ ಗೃಹೀತವಾಗುವುದಿಲ್ಲ ಎಂಬ ಅಭಿಪ್ರಾಯವಿದ್ದಿದ್ದರೆ 'ನ ತು ಕಾರಣತ್ವ ಕಾರ್ಯತ್ವಂ ವಾ' ಎಂದು ಹೇಳಬೇಕಾಗಿದ್ದಿತು.

## ವಹ್ನಿತ್ವಸಾಮಾನಾಧಿಕರಣ್ಯೇನ ರಾಸಭಜನ್ಯತ್ವವು ಬರಲಿ ಎಂಬ ಆಕ್ಷೇಪದ ಪರಿಹಾರ

**न चैवं वह्नित्वावच्छेदेन व्यभिचारग्रहेपि वह्नित्वसामानाधिकरण्येन रासभजन्यत्वं गृह्यतामिति वाच्यम् । ग्राहकाभावात् । अत्र चारणिमण्यभाववतीत्यादिना ग्राहकस्योक्तत्वात् । न चैवं तृणनिष्ठकारणताप्रतियोगिककार्यताश्रयत्वं गृह्यत इत्येवास्तु किं तदवच्छेदकरूपवत्त्वपर्यन्तेनेति वाच्यम् । अग्रिमविनिगमगवेषणस्य सामान्यतावच्छेदकग्रहं विनाऽनुपपत्तेः । सामान्यतो दृष्टावतारं विना परिशेषानुदयादिति ।**

ಹಾಗಾದರೆ ವಹ್ನಿತ್ವಾವಚ್ಛೇದೇನ ರಾಸಭದಲ್ಲಿ ವ್ಯಭಿಚಾರವಿದ್ದರೂ ವಹ್ನಿತ್ವ ಸಾಮಾನಾಧಿಕರಣ್ಯೇನ ರಾಸಭಜನ್ಯತ್ವವು ಗೃಹೀತವಾಗಲಿ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಏಕೆಂದರೆ ವಹ್ನಿಯಲ್ಲಿ ರಾಸಭಜನ್ಯತ್ವಗ್ರಾಹಕವಾದ ಪ್ರಮಾಣವು ಇಲ್ಲ. ಇಲ್ಲಿ ಮಾತ್ರ 'ಅರಣಿಮಣ್ಯಭಾವವತಿ ಸ್ತೋಮವಿಶೇಷೇ' ಎಂದು ಗ್ರಾಹಕವಿದೆ ಎಂದೇ ಹೇಳಿದ್ದಾರೆ. ಹಾಗಾದರೆ ತೃಣನಿಷ್ಠಕಾರಣತಾನಿರೂಪಿತ ಕಾರ್ಯತಾಶ್ರಯತ್ವವು ಗೃಹೀತವಾಗುತ್ತದೆ ಎಂದು ಇಷ್ಟೇ ಹೇಳಿದರೆ ಸಾಕು. ಕಾರ್ಯತಾವಚ್ಛೇದಕ ಕಾರಣಾವಚ್ಛೇದಕ ರೂಪವತ್ತ್ವ ಎಂದು ಏಕೆ ಹೇಳಬೇಕಾಗಿದ್ದಿತು ಎಂದು ಪ್ರಶ್ನೆ ಮಾಡಿದರೆ ಮುಂದೆ ಹೇಳುವ ವಿನಿಗಮಕಾನ್ವೇಷಣೆಯು ಅವಚ್ಛೇದಕ ರೂಪವಿಲ್ಲದಿದ್ದರೆ ಉಂಟಾಗುವುದಿಲ್ಲವಾದ್ದರಿಂದ ಅವಚ್ಛೇದಕರೂಪಪರ್ಯಂತವಾಗಿ ಹೋಗಿದ್ದಾರೆ. ಸಾಮಾನ್ಯತೋ ದೃಷ್ಟ ಅನುಮಾನದ ಪ್ರವೃತ್ತಿಯಾಗದೆ ಪರಿಶೇಷ ಅನುಮಾನದ ಪ್ರವೃತ್ತಿ ಉಂಟಾಗುವುದಿಲ್ಲ ಎಂದು ಉತ್ತರ.

## ಕೆಲವರ ನಿರಾಕರಣೆ

**यत्तु ससम्बन्धिकप्रत्यक्षज्ञाने सम्बन्धितावच्छेदकरूपवत्त्वज्ञानमावश्यकमितितद्धियं विनानकार्यकारणभावग्रहः**

**प्रत्यक्षेण, अत एव न शाब्दस्वर्गजनकत्वज्ञानप्रतिबन्धीति । तन्न ।**

ಕೆಲವರು ಸಸಂಬಂಧಿಕ ಪ್ರತ್ಯಕ್ಷ ಜ್ಞಾನವನ್ನು ಕುರಿತು ಸಂಬಂಧಿತಾವಚ್ಛೇದಕ ರೂಪವತ್ತ್ವ ಜ್ಞಾನವು ಕಾರಣ. ಸಂಬಂಧಿತಾವಚ್ಛೇದಕ ರೂಪವತ್ತ್ವಜ್ಞಾನವಿಲ್ಲದಿದ್ದರೆ ಪ್ರತ್ಯಕ್ಷದಿಂದ ಕಾರ್ಯಕಾರಣಭಾವಗ್ರಹವು ಉಂಟಾಗುವುದಿಲ್ಲ. ಆದ್ದರಿಂದಲೇ ದಾನದಿಂದ ವ್ಯಭಿಚಾರವಿದ್ದರೂ ಶಬ್ದದಿಂದ ಯಾಗಕ್ಕೆ ಸ್ವರ್ಗಜನಕತ್ವಜ್ಞಾನವುಂಟಾಗುತ್ತದೆ. ಅದು ಪ್ರತ್ಯಕ್ಷದಿಂದ ಉಂಟಾಗುವುದಿಲ್ಲವಾದ್ದರಿಂದ ಸ್ವರ್ಗಜನಕತ್ವ ಜ್ಞಾನ ಪ್ರತಿಬಂದಿ ಇಲ್ಲ ಎಂದು ಹೇಳುತ್ತಾರೆ. ಅದು ಸರಿಯಲ್ಲ.

## ಕಾರ್ಯತಾಬುದ್ಧಿಯಲ್ಲಿ ಅವಚ್ಛೇದಕತ್ವವು ತೋರುವುದಿಲ್ಲ

**इयं वह्निव्यक्तिस्तृणजन्येति प्रत्येक्षेण तद्व्यक्तित्वादेरवश्यं भानात् । न च तस्यानवच्छेदकतया तदवच्छेदेन कार्यता - बुद्धेर्भ्रमत्वापत्तिरिति वाच्यम् । कार्यताबुद्धावबच्छेदकत्वस्याप्यभानात् । भाने वा तदंशे भ्रमत्वेपि कार्यतांशे प्रमात्वादिति।।**

ಈ ವಹ್ನಿ ವ್ಯಕ್ತಿಯು ತೃಣಜನ್ಯವಾದುದು ಎಂದು ಉಂಟಾಗುವ ಪ್ರತ್ಯಕ್ಷದಲ್ಲಿ ವಹ್ನಿನಿಷ್ಠತತ್ತದ್ವ್ಯಕ್ತಿತ್ವಾದಿಗಳು ಅವಶ್ಯವಾಗಿ ತೋರುತ್ತವೆ. ತದ್ವ್ಯಕ್ತಿತ್ವವು ತೋರಿದರೂ ಅದು ಕಾರ್ಯತಾ ಅನವಚ್ಛೇದಕವಾದುದರಿಂದ ವಹ್ನಿತ್ವಾವಚ್ಛೇದೇನ ಕಾರ್ಯತ್ವ ಬುದ್ಧಿಯು ಭ್ರಮವಾಗುತ್ತದೆ ಎಂಬ ಆಪತ್ತಿಯು ಬರುತ್ತದೆ ಎಂದು ಆಕ್ಷೇಪಿಸಿದರೆ ಕಾರ್ಯತಾಬುದ್ಧಿಯಲ್ಲಿ ಅವಚ್ಛೇದಕತ್ವವು ತೋರುವುದಿಲ್ಲ. ಒಂದುಪಕ್ಷ ತೋರಿದರೂ ಅವಚ್ಛೇದಕತ್ವಾಂಶದಲ್ಲಿ ಭ್ರಾಂತಿಯಾದರೂ ಕಾರ್ಯತಾಂಶದಲ್ಲಿ ಪ್ರಮೆಯೇ ಆಗುತ್ತದೆ. ಆದ್ದರಿಂದ ಕಾರ್ಯತ್ವವು ಗೃಹೀತವಾಗುತ್ತದೆ ಎಂದು ನಮ್ಮ ಉತ್ತರ.

## ವ್ಯಾಸಜ್ಯವೃತ್ತಿ ಪ್ರತಿಯೋಗಿಕವಾದ ಅಭಾವ ಎಂದರ್ಥ

**अन्य एवेति ।। अभावत्रयप्रतियोगिको व्यासज्यप्रतियोगिताक इत्यर्थः । अभावस्येति ।। तथा च तृणोत्कर्षेण वह्न्युत्कर्षोपि न स्यादिति भावः ।**

ಅನ್ಯ ಏವೇತಿ – ಅಭಾವತ್ರಯಪ್ರತಿಯೋಗಿಕವಾದ ವ್ಯಾಸಜ್ಯವೃತ್ತಿ ಪ್ರತಿಯೋಗಿತಾಕವಾದ ಅಭಾವ ಎಂದು ಅಭಿಪ್ರಾಯ. ಅಭಾವಸ್ಯೇತಿ – ಅಂತಹ ಅಭಾವವೇ ಕಾರಣವಾದರೆ ತೃಣಕ್ಕೆ ಕಾರಣತ್ವವಿಲ್ಲದಿರುವುದರಿಂದ ತೃಣೋತ್ಕರ್ಷದಿಂದ ವಹ್ನಿಯ ಉತ್ಕರ್ಷವು ಆಗದಿರಲಿ ಎಂದು ಅಭಿಪ್ರಾಯ.

## ಪುನರುಕ್ತಿ ದೋಷವಿಲ್ಲ

**एतेनेति ।। तृणस्य तदुभयत्वापत्त्या इत्यर्थः । पूर्वं मिलितानां तृणादीनामभावत्रयाभावत्वेन हेतुत्वमाशङ्कितम्, इदानीं तु प्रत्येकस्येति न पौनरुक्त्यमित्याहुः ।।**

ಏತೇನೇತಿ – ತೃಣಕ್ಕೆ ಅರಣಿ ಮಣ್ಯುಭಯತ್ವಾಪತ್ತಿ ಬರುವುದರಿಂದ ಎಂದು ಅರ್ಥ. ಮೊದಲು ಮಿಲಿತವಾದ ತೃಣಾದಿ ಅಭಾವಗಳಿಗೆ ತೃಣಾದಿ ಅಭಾವತ್ರಯಾಭಾವತ್ವೇನ ಕಾರಣತ್ವವನ್ನು ಶಂಕೆ ಮಾಡಿದರು, ಈಗ ತೃಣಾದ್ಯಭಾವಾಭಾವಗಳಿಗೆ ಪ್ರತ್ಯೇಕವಾಗಿ ತೃಣಾದ್ಯಭಾವಾಭಾವತ್ವೇನ ಕಾರಣತ್ವವನ್ನು ಶಂಕಿಸುತ್ತಿದ್ದಾರೆ. ಆದ್ದರಿಂದ ಪುನರುಕ್ತಿಯಿಲ್ಲ ಎಂದು ಹೇಳುತ್ತಾರೆ.

## ತಟಸ್ಥನ ಆಶಂಕೆ

**उभयसिद्धत्वमेव स्थापयति – कथमिति ।। तटस्थ आह – नन्विति ।। अवघातेन व्रीहेर्नष्टत्वात् तदन्वयः पुरोडाशे न भवतीत्यत आह – अवयवेति ।। नन्विति ।। तथाच तद्व्यापारत्वेनातिशयः कल्प्य इति भावः ।**

ಉಭಯಸಿದ್ಧತ್ವವನ್ನೇ ಕಥಂ ಎಂದು ಸ್ಥಾಪಿಸುತ್ತಾರೆ – ಕಥಂ ಇತಿ. ತಟಸ್ಥನು ಶಂಕಿಸುತ್ತಾನೆ – ನನ್ವಿತಿ. ಅವಘಾತದಿಂದ ವ್ರೀಹಿಯು ನಷ್ಟವಾಗಿರುವುದರಿಂದ ಪುರೋಡಾಶದಲ್ಲಿ ವ್ರೀಹಿಯ ಅನ್ವಯ ಉಂಟಾಗುವುದಿಲ್ಲ ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಾರೆ – ಅವಯವೇತಿ. ನತ್ವಿತಿ – ತಥಾಚ ಪ್ರೋಕ್ಷಣವ್ಯಾಪಾರ ರೂಪವಾದ ಅತಿಶಯವನ್ನು ಕಲ್ಪನೆ ಮಾಡಬೇಕು ಎಂದು ಅಭಿಪ್ರಾಯ.

## ಆಶಂಕೆಯ ಪರಿಹಾರ

**तटस्थशङ्कां परिहरति – मैवमिति ।। भ्रमेणोपादीयमानेऽव घाताजनके व्यभिचारादाह – प्रमाणत इति ।। नन्वकारणे कारणकारणे व्यभिचारः ।**

ತಟಸ್ಥ ಶಂಕೆಯನ್ನು ಮೈವಂ ಎಂದು ಪರಿಹರಿಸುತ್ತಾರೆ – ಮೈವಮಿತಿ. ಭ್ರಮದಿಂದ ಉಪಾದಾನ ಮಾಡುವ ಅವಘಾತ ಅಜನಕವಾದ ವ್ರೀಹಿಯಲ್ಲಿ ವ್ಯಭಿಚಾರವನ್ನು ಪರಿಹಾರ ಮಾಡಲು ಹೇತುವಾದ ಉಪಾದೇಯತ್ವಜ್ಞಾನಕ್ಕೆ ಪ್ರಮಾಣತಃ ಎಂದು ವಿಶೇಷಣವನ್ನು ಕೊಟ್ಟಿದ್ದಾರೆ – ಪ್ರಮಾಣತ ಇತಿ.

## ಜನಕೀಭೂತಧ್ವಂಸಜನಕತ್ವವನ್ನು ವಿವಕ್ಷಿಸಿದರೂ ಸಾಕು

**न च कारणकारणसाधारणमनुकूलत्वमात्रं साध्यं तदपि मध्यवर्त्तिघटितम् इत्यतिशयसिद्धिरिति वाच्यम् । एवं हि जनकीभूतध्वंसजनकत्वेनापि साध्यस्य चरितार्थत्वे प्रतियोगिनाऽहेतुत्वापत्तेरिति वक्ष्यमाणविरोधादिति चेत् । न ।**

ಹಾಗಾದರೂ ಕಾರಣವಲ್ಲದ ಕಾರಣಕಾರಣದಲ್ಲಿ ವ್ಯಭಿಚಾರವು ಬರುತ್ತದೆ. ಸಾಧ್ಯವಾದ ಜನಕತ್ವವು ಕಾರಣ ಮತ್ತು ಅಕಾರಣ ಸಾಧಾರಣವಾದ ಅನುಕೂಲತ್ವ ರೂಪವಾದುದು ಎಂದು ಹೇಳುತ್ತೇವೆ. ಆಗಲೂ ಸಹ ಮಧ್ಯವರ್ತಿಯ ಅಪೇಕ್ಷೆ ಇರುವುದರಿಂದ ಅತಿಶಯವು ಸಿದ್ಧವಾಗುತ್ತದೆ ಎಂಬ ಶಂಕೆಯು ಸರಿಯಲ್ಲ. ಹಾಗೆ ಹೇಳಿದರೆ ಜನಕೀಭೂತ ಧ್ವಂಸ ಜನಕತ್ವವನ್ನು ತೆಗೆದುಕೊಂಡೂ ಸಾಧ್ಯವು ಪರ್ಯವಸಾನ ಹೊಂದುವುದರಿಂದ ಧ್ವಂಸ ಪ್ರತಿಯೋಗಿಗೆ ಹೇತುತ್ವವು ಬರಲಾರದು ಎಂಬ ಮುಂದಿನ ವಾಕ್ಯದಿಂದ ವಿರೋಧ ಬರುತ್ತದೆ ಎಂಬ ಈ ಶಂಕೆಯು ಸರಿಯಲ್ಲ.

**वेदमूलकावघातोद्देश्यकोपादानविषयत्वादिति विशेष-व्याप्त्यैव साधनादिति । वस्तुतो व्यक्तिवचनान्यायेनावघाते प्रोक्षितेव्रीहेरन्वये प्रोक्षणस्य बाधकं विना विशेषणत्वं नोपलक्षणत्वमिति ।।**

ಪ್ರಮಾಣತಃ ಎಂದರೆ ವೇದ ಮೂಲಕವಾದ ಎಂದು ಅರ್ಥ. ತಥಾಚ ವೇದ ಮೂಲಕ ಅವಘಾತೋದ್ದೇಶ್ಯಕ ಉಪಾದಾನ ವಿಷಯತ್ವಾತ್ ಎಂದು ನಿಷ್ಕೃಷ್ಟ ಹೇತು ಸ್ವರೂಪವಾಗುತ್ತದೆ. ಇಲ್ಲಿ ವಿಶೇಷವ್ಯಾಪ್ತಿಯಿಂದಲೇ ಸಾಧ್ಯವನ್ನು ಸಾಧನೆ ಮಾಡುತ್ತೇವೆ. ಆದರೆ ವಾಸ್ತವಿಕವಾಗಿ ವ್ಯಕ್ತಿವಚನಗಳಿಗೆ ಬಾಧಕವಿಲ್ಲದಿದ್ದರೆ ಸನ್ನಿಹಿತ ಪರತ್ವವಿದೆ ಎಂದು ಹಿಂದೆ ಹೇಳಿದ ನ್ಯಾಯದಿಂದಲೇ ಪ್ರೋಕ್ಷಿತ ವ್ರೀಹಿಗಳಿಗೆ ಅವಘಾತದಲ್ಲಿ ಅನ್ವಯ ಉಂಟಾದಾಗ ಪ್ರೋಕ್ಷಣಕ್ಕೂ ಸಹ ಬಾಧಕವಿಲ್ಲದಿರುವುದರಿಂದ ವಿಶೇಷಣತ್ವವೇ ಸಿದ್ಧವಾಗುತ್ತದೆ. ಉಪಲಕ್ಷಣತ್ವವು ಅಲ್ಲ.

**प्रतियोगिन इति ।। अभावतत्प्रतियोगिनोरेकत्राजनकत्वादित्यर्थः । व्यापारं विनैव प्रोक्षणस्यावघातजनकत्वमस्त्विति शङ्कते – न चेति ।। अहेतुत्वादिति ।। प्रोक्षणस्य च हेतुत्वं साधितमिति भावः ।**

ಪ್ರತಿಯೋಗಿನ ಇತಿ – ಅಭಾವ ಮತ್ತು ಅದರ ಪ್ರತಿಯೋಗಿಗಳೆರಡೂ ಒಂದೇ ಕಾರ್ಯವನ್ನು ಕುರಿತು ಜನಕವಾಗುವುದಿಲ್ಲವಾದುದರಿಂದ ಎಂದು ಅಭಿಪ್ರಾಯ. ವ್ಯಾಪಾರವಿಲ್ಲದೆಯೇ ಪ್ರೋಕ್ಷಣವು ಅವಘಾತಜನಕವಾಗಲಿ ಎಂದು ಶಂಕಿಸುತ್ತಾರೆ – ನಚೇತಿ. ಅಹೇತುತ್ವಾದಿತಿ – ಪ್ರೋಕ್ಷಣಕ್ಕಾದರೂ ಹೇತುತ್ವವನ್ನು ಸಾಧನೆ ಮಾಡಿದ್ದೇವೆ ಎಂದು ಅಭಿಪ್ರಾಯ.

## ದೃಷ್ಟಾಂತದಲ್ಲಿ ಸಾಧನವೈಫಲ್ಯ

**ननु यद्युपलक्षणमतीतमजनकं तदा ततो व्यावृत्तबुद्ध्यादिकं न स्यादित्यत आह – कुरूणामिति ।। तन्निर्मितेत्युपलक्षणम्। तद्भोगसाधनेत्यपि द्रष्टव्यम् । अन्यथा साधनवैकल्यापत्तेरित्यवधेयम् ।**

ಅತೀತವಾದ ಉಪಲಕ್ಷಣವು ಅಜನಕವಾಗುವುದಾದರೆ ಅಂತಹ ಉಪಲಕ್ಷಣದಿಂದ ವ್ಯಾವೃತ್ತಬುದ್ಧಿಯು ಉಂಟಾಗಲಾರದು ಎಂಬ ಶಂಕೆಗೆ ಕುರೂಣಾಂ ಎಂದು ಉತ್ತರವನ್ನು ಹೇಳುತ್ತಾರೆ – ಕುರೂಣಾಮಿತಿ. ದೃಷ್ಟಾಂತದಲ್ಲಿ ತನ್ನಿರ್ಮಿತ ಎಂದು ಹೇಳಿರುವುದು ಉಪಲಕ್ಷಣ. ತದ್ಯೋಗಸಾಧನ ಎಂದೂ ಇಟ್ಟುಕೊಳ್ಳಬೇಕು. ಇಲ್ಲದಿದ್ದರೆ ದೃಷ್ಟಾಂತದಲ್ಲಿ ಸಾಧನ ವೈಕಲ್ಯವು ಬರುತ್ತದೆ ಎಂದು ಅಭಿಪ್ರಾಯ.

## ಸಾಧಕಾವಚ್ಛೇದಕ ಕೋಟಿಯಲ್ಲಿ ಭಾವತ್ವವನ್ನು ಛೇದಿಸಬೇಕಾಗಿಲ್ಲ

**जन्मान्तरीयैरिति ।। अतीतोपलक्षणस्यापि जनकत्वाभ्युपगमादिति भावः । एतावता ध्वंसातिरिक्तं व्यापारं सिद्धमुपसंहरति – तस्मादिति ।। प्रमाणत इति ।। कार्यापेक्षया चिरध्वस्तत्वे सतीति विशेषणम्, तेन साक्षाज्जनके न व्यभिचारः । अतिशयस्य भावत्वं च पक्षधर्मताबललभ्यं न तु साध्यतावच्छेदकप्रविष्टम्, तेन विघ्नध्वंसद्वारा समाप्तिसाधने मङ्गले मिथ्याज्ञानध्वंसद्वारा मुक्तिसाधने तत्त्वज्ञाने वा न व्यभिचारः ।**

ಜನ್ಮಾಂತರೀಯೈರಿತಿ – ಅತೀತವಾದ ಉಪಲಕ್ಷಣಕ್ಕೂ ಜನಕತ್ವವನ್ನು ಅಂಗೀಕಾರ ಮಾಡುವುದರಿಂದ ಎಂದು ಅಭಿಪ್ರಾಯ. ಹೇಗಾದರೂ ಪ್ರೋಕ್ಷಣಧ್ವಂಸಾತಿರಿಕ್ತವಾದ ವ್ಯಾಪಾರವು ಸಿದ್ಧವಾಗುತ್ತದೆ ಎಂದು ತಸ್ಮಾತ್ ಎಂಬ ವಾಕ್ಯದಿಂದ ಉಪಸಂಹಾರ ಮಾಡುತ್ತಾರೆ – ತಸ್ಮಾದಿತಿ.

ಪ್ರಮಾಣತ ಇತಿ – ಕಾರ್ಯಾಪೇಕ್ಷಯಾ ಚಿರಧ್ವಸ್ತತ್ವೇ ಸತಿ (ಕಾರ್ಯಾಪೇಕ್ಷೆಯಿಂದ ಬಹಳ ಹಿಂದೆಯೇ ನಷ್ಟವಾಗಿದ್ದರೂ ಸಹ) ಎಂಬ ವಿಶೇಷಣವನ್ನು ಇಟ್ಟುಕೊಳ್ಳಬೇಕು. ಇಲ್ಲದಿದ್ದರೆ ಸಾಕ್ಷಾಜ್ಜನಕದಲ್ಲಿ ವ್ಯಭಿಚಾರವು ಬರುತ್ತದೆ. ಸಿದ್ಧವಾಗುವ ಅತಿಶಯವು ಭಾವರೂಪವಾದುದೆಂದು ಪಕ್ಷಧರ್ಮತಾಬಲದಿಂದಲಭ್ಯವಾಗುತ್ತದೆಹೊರತುಸಾಧ್ಯತಾವಚ್ಛೇದಕಕೋಟಿಯಲ್ಲಿಭಾವತ್ವವನ್ನು ಸೇರಿಸುವುದಿಲ್ಲ. ಆದ್ದರಿಂದಲೇ ವಿಘ್ನಧ್ವಂಸದ್ವಾರಾ ಸಮಾಪ್ತಿಜನಕವಾದ ಮಂಗಳದಲ್ಲಾಗಲೀ ಅಥವಾ ಮಿಥ್ಯಾ ಜ್ಞಾನ ಧ್ವಂಸದ್ವಾರಾ ಮುಕ್ತಿಸಾಧನವಾದ ತತ್ತ್ವಜ್ಞಾನದಲ್ಲಾಗಲೀ ವ್ಯಭಿಚಾರವಿಲ್ಲ.

## ಸ್ವಮತದ ಪ್ರಕಾರ ಪರಿಹಾರ

**नन्वस्त्वतिशयः पुरुषसमवेत एव, तथाच नाधेयशक्तिसिद्धिः, अत आह – स चेति ।। संस्कारत्वेनेति ।। न चैवमनेकव्रीह्युपादानं न स्यादिति वाच्यम् । होमादिनिर्वाहार्थं तदुपयोगात् । ननु यत्र किञ्चिदवयवनाशात् सकलव्रीहिनाशेन खण्डव्रीहिणामुत्पत्तिस्तत्र का गतिरित्यस्वरसादाह – अस्तु वेति ।। किञ्चिदिति ।। यावत् प्रत्यभिज्ञं वस्तुस्थितिरिति स्वमतावष्टम्भेनेदम् ।।**

ಅತಿಶಯವನ್ನು ಒಪ್ಪೋಣ ಆದರೆ ಅದು ಪುರುಷ ಸಮವೇತವೇ ಆಗಲಿ. ತಥಾಚ ವ್ರೀಹಿಗಳಲ್ಲಿ ಆಧೇಯಶಕ್ತಿಯು ಸಿದ್ಧವಾಗುವುದಿಲ್ಲ ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಾರೆ – ಸಚೇತಿ. ಸಂಸ್ಕಾರತ್ವೇನೇತಿ.

ಏಕವ್ರೀಹಿನಿಷ್ಠವಾದ ಅಪೂರ್ವ ಸಿದ್ಧವಾಗುವುದಾದರೆ ಅನೇಕ ವ್ರೀಹಿಗಳ ಉಪಾದಾನವು ಅನುಪಪನ್ನವಾಗುತ್ತದೆ ಎಂಬ ಶಂಕೆ ಇಲ್ಲ. ಏಕೆಂದರೆ ಹೋಮ ನಿರ್ವಾಹಾರ್ಥವಾಗಿ ಅನೇಕ ವ್ರೀಹಿಗಳ ಉಪಾದಾನವಿದೆ. ಆದ್ದರಿಂದ ಅನೇಕ ವ್ರೀಹಿನಿಷ್ಠತ್ವೇನೈವ ಅತಿಶಯವು ಸಿದ್ಧವಾಗುತ್ತದೆ. ಎಲ್ಲಿ ಅವಯವ ನಾಶದಿಂದ ಸಕಲ ವ್ರೀಹಿಗಳೂ ನಾಶವಾಗಿ ಖಂಡವ್ರೀಹಿಗಳು ಉತ್ಪತ್ತಿಯಾಗುತ್ತವೆಯೋ ಅಲ್ಲಿ ಹೇಗೆ ನಿರ್ವಾಹ ಮಾಡುವುದು ಎಂಬ ಅಸ್ವಾರಸ್ಯದಿಂದ ಅಸ್ತುವಾ ಎಂದು ಇನ್ನೊಂದು ಪಕ್ಷವನ್ನು ಹೇಳುತ್ತಾರೆ– ಅಸ್ತುವೇತಿ. ಕಿಂಚಿದಿತಿ– ಪ್ರತ್ಯಭಿಜ್ಞೆಯು ಬರುವವರೆಗೂ ವಸ್ತುವು ಸ್ಥಿರವಾಗಿ ಇದ್ದೇ ಇದೆ ಎಂಬ ಸ್ವಮತವನ್ನು ಅವಲಂಬಿಸಿ ಇದನ್ನು ಹೇಳಲಾಗಿದೆ.

## ಪ್ರಕಾರಾಂತರದಿಂದ ಸಮಾಧಾನ

**यद्यप्यतिशयस्यैकत्वेनैव पुरुषनिष्ठत्वं सिद्ध्यति । अन्यथा लाघवेनाश्रयनाशमात्रस्यैव कार्यनाशप्रयोजकत्वे नावयवनाशात् तन्नाशाद् व्रीह्यन्तराणामुपयोगो न स्यात्**

**तथापि प्रकारान्तरमाह – तथाहीति ।। दृष्टद्वारेति ।। अत्र धर्मजनकत्वं साध्यम्, निषिद्धकर्मणि व्यभिचारवारणाय 'विहितत्वादि'त्युक्तम् । प्रायश्चित्ते व्यभिचारवारणाय – कालान्तरेत्यादि ।।**

ಯದ್ಯಪಿ ಅತಿಶಯವು ಒಂದಾಗಿರುವ ಕಾರಣದಿಂದಲೇ (ಏಕತ್ವವಿರುವುದರಿಂದಲೇ) ಅದಕ್ಕೆ ಪುರುಷನಿಷ್ಠತ್ವವು ಸಿದ್ಧವಾಗುತ್ತದೆ. ಇಲ್ಲದಿದ್ದರೆ ಆಶ್ರಯನಾಶವೇ ಕಾರ್ಯನಾಶವನ್ನು ಕುರಿತು ಪ್ರಯೋಜಕವಾದ್ದರಿಂದ ಅವಯವ ನಾಶದಿಂದ ಅತಿಶಯವು ನಾಶವಾಗುವುದರಿಂದ ಉಳಿದ ಅವಯವರೂಪವಾದ ವ್ರೀಹಿಗಳಿಗೂ ಉತ್ತರಕಾರ್ಯದಲ್ಲಿ ವಿನಿಯೋಗವಿಲ್ಲ ಎಂಬ ಆಪತ್ತಿಯು ಬರುತ್ತದೆ ಎಂಬ ಆಕ್ಷೇಪವಿದ್ದರೂ ಪ್ರಕಾರಾಂತರದಿಂದ ಸಮಾಧಾನವನ್ನು ಹೇಳುತ್ತಾರೆ – ತಥಾಹೀತಿ. ದೃಷ್ಟದ್ವಾರೇತಿ – ಇಲ್ಲಿ ಧರ್ಮಜನಕತ್ವವು ಸಾಧ್ಯವಾಗಿದೆ. ನಿಷಿದ್ಧ ಕರ್ಮದಲ್ಲಿ ವ್ಯಭಿಚಾರವನ್ನು ನಿವಾರಣೆಮಾಡಲು ವಿಹಿತತ್ವಾತ್ ಎಂದು ಹೇತು ನಿರ್ದೇಶವನ್ನು ಮಾಡಿದೆ. ಸದ್ಯದಲ್ಲಿಯೇ ಫಲಜನಕವಾದ ಪ್ರಾಯಶ್ಚಿತ್ತದಲ್ಲಿ ವ್ಯಭಿಚಾರವನ್ನು ನಿವಾರಣೆ ಮಾಡಲು ಕಾಲಾಂತರ ಇತ್ಯಾದಿ ವಿಶೇಷಣಗಳನ್ನು ಹಾಕಲಾಗಿದೆ.

## ಅನ್ವಯವ್ಯತಿರೇಕಾನುಮಾನದಿಂದ ದ್ವಾರವಿಶೇಷ್ಯವು ಲಭ್ಯ

**ननु दृष्टद्वाराभावे सतीत्यस्यादृष्टान्यद्वाराभावे सतीत्यर्थः, तथा चासिद्धिः, परमते शक्तेरेव द्वारत्वात् । न च प्रत्यक्षद्वाराभावे सतीति तदर्थः । औषधपानादौ व्यभिचारात् । न च तत्र विहितत्वाभावादेव न व्यभिचार इति वाच्यम् । आयुर्वेदेन तस्यापि विहितत्वादिति चेत् । न । शब्दतदुपजीवि-प्रमाण मात्रप्रयोज्यधीविषयद्वारेतरद्वास्य दृष्टद्वारपदेन विवक्षितत्वात् । न चौषधादौ व्यभिचारः । तदीयधातु - साम्यादिरूपातीन्द्रियद्वारविशेषे शब्दानुपजीविप्रमाणा**

**-सम्भवादिति वाच्यम् । अन्वयव्यतिरेकादिमूलकप्रमाणस्यापि कदाचित्तत्र प्रसरादिति भावः ।**

ದೃಷ್ಟದ್ವಾರಾಭಾವೇಸತಿ ಎಂದರೆ ಅದೃಷ್ಟಾನ್ಯದ್ವಾರಾಭಾವೇಸತಿ ಎಂದು ಅರ್ಥ. ಪರಮತದಲ್ಲಿ ಅದೃಷ್ಟಾನ್ಯವಾದ ಶಕ್ತಿಯನ್ನು ಒಪ್ಪುವುದರಿಂದ ಅನುಮಾನಕ್ಕೆ ಅಸಿದ್ಧಿ ದೋಷವು ಬರುತ್ತದೆ.

ದೃಷ್ಟದ್ವಾರಾಭಾವೇಸತಿ ಎಂದರೆ ಪ್ರತ್ಯಕ್ಷದ್ವಾರಾಭಾವೇಸತಿ ಎಂದು ಅರ್ಥ ಎಂದು ಹೇಳಿದರೆ ಔಷಧಪಾನದಲ್ಲಿ ವ್ಯಭಿಚಾರವು ಬರುತ್ತದೆ. ಔಷಧ ಪಾನದಲ್ಲಿ ವಿಹಿತತ್ವವೇ ಇಲ್ಲದಿರುವುದರಿಂದ ಅಲ್ಲಿ ಹೇತುವು ಬರುವುದಿಲ್ಲವಾದ್ದರಿಂದ ವ್ಯಭಿಚಾರವಿಲ್ಲ ಎಂದು ಹೇಳಬಾರದು. ಏಕೆಂದರೆ ಆಯುರ್ವೇದದಿಂದ ಔಷಧ ಪಾನವು ವಿಹಿತವಾಗಿದೆ ಎಂಬ ಈ ಆಕ್ಷೇಪವನ್ನು ಮಾಡಿದರೆ ಅದು ಸರಿಯಲ್ಲ. ನಾವು ದೃಷ್ಟದ್ವಾರ ಪದದಿಂದ ಶಬ್ದ ಮತ್ತು ತದುಪಜೀವಿ ಪ್ರಮಾಣ ಮಾತ್ರಗಳಿಂದ ಜನ್ಯವಾದ ಜ್ಞಾನವಿಷಯದ್ವಾರಾತಿರಿಕ್ತದ್ವಾರವನ್ನು ವಿವಕ್ಷೆ ಮಾಡಿದ್ದೇವೆ. ಈಗ ಔಷಧಪಾನಗಳಲ್ಲಿ ವ್ಯಭಿಚಾರವಿಲ್ಲ. ಏಕೆಂದರೆ ಔಷಧಪಾನಜನ್ಯವಾದ ಧಾತುಸಾಮ್ಯಾದಿರೂಪವಾದ ಅತೀಂದ್ರಿಯವಾದ ದ್ವಾರವಿಶೇಷವು ಶಬ್ದ ಅನುಪಜೀವಿ ಪ್ರಮಾಣದಿಂದ ಅಲಭ್ಯವಾಗಿಲ್ಲ. ಏಕೆಂದರೆ ಅನ್ವಯ ವ್ಯತಿರೇಕ ಮೂಲಕವಾದ ಅನುಮಾನರೂಪ ಪ್ರಮಾಣದಿಂದಲೂ ಸಹ ಆ ದ್ವಾರವಿಶೇಷವು ಕೆಲವೊಮ್ಮೆ ಲಭ್ಯವಾಗುತ್ತದೆ ಎಂದು ಅಭಿಪ್ರಾಯ.

## ಕೃಷ್ಯಾದಿಗಳಲ್ಲಿ ವ್ಯಭಿಚಾರವಿಲ್ಲ

**कृष्यादाविति ।। न च विहितत्वाभावादेव न व्यभिचार इति वाच्यम् । प्रत्येकवर्णोपायविभागविधिना वैश्यस्य कृषिविधिनादिति भावः । शत्रुवधमिति ।। एतच्च परमते। अस्मन्मते श्येनापूर्वस्य शत्रुनिष्ठत्वमेव फलोपपादकमपूर्वं फलाश्रये कल्प्यत इति वक्ष्यमाणयुक्त्या तथा व्यवस्थितेः । अत एव गयाश्राद्धापूर्वस्य पितृनिष्ठत्वम्, पञ्चमटीकायां तथा विभावनाच्च ।**

ಕೃಷ್ಯಾದಾವಿತಿ – ವಿಹಿತತ್ವವು ಇಲ್ಲದಿರುವುದರಿಂದ ಕೃಷ್ಯಾದಿಗಳಲ್ಲಿ ವ್ಯಭಿಚಾರವಿಲ್ಲ ಎಂದು ಹೇಳಲು ಬರುವುದಿಲ್ಲ. ವರ್ಣಗಳ ಜೀವನೋಪಾಯ ವ್ಯವಸ್ಥೆಯಲ್ಲಿ ವೈಶ್ಯರಿಗೆ ಕೃಷಿಯೂ ಸಹ ವಿಹಿತವಾಗಿದೆ. ಶತ್ರುವಧಮಿತಿ – ಇದು ಪರಮತರೀತ್ಯಾ (ಮೀಮಾಂಸಕ ಮತ ರೀತ್ಯಾ) ಹೇಳಲ್ಪಟ್ಟಿದೆ. ನಮ್ಮ ನೈಯಾಯಿಕ ಮತದಲ್ಲಾದರೆ ಫಲಜನಕವಾದ ಅದೃಷ್ಟವನ್ನು ಫಲಾಶ್ರಯದಲ್ಲೇ ಕಲ್ಪನೆ ಮಾಡಬೇಕೆಂಬ ಮುಂದೆ ಹೇಳುವ ಯುಕ್ತಿಯಿಂದ ಶ್ಯೇನಾಪೂರ್ವಕ್ಕೆ ಶತ್ರುನಿಷ್ಠತ್ವವೇ ಸಿದ್ಧವಾಗುತ್ತದೆ. ಆದ್ದರಿಂದಲೇ ಗಯಾಶ್ರಾದ್ಧಜನ್ಯವಾದ ಅಪೂರ್ವವು ಪಿತೃನಿಷ್ಠವಾಗುತ್ತದೆ. ಹಾಗೆಂದು ಪಂಚಮಾಧ್ಯಾಯ ಟೀಕೆಯಲ್ಲಿಯೇ ಪ್ರತಿಪಾದ್ಯವಾಗಿದೆ.

## ಲಾಘವವು ಅನಾದರಣೀಯ

**स्वमतेन दोषमाह – विपक्षेति ।। न च फलसामानाधिकरण्ये लाघवमेव विपक्षबाधकमिति वाच्यम् । नानात्वगौरवेन तल्लाघवानादरादिति भावः ।**

ಸ್ವಮತದಿಂದ ದೋಷವನ್ನು ಹೇಳುತ್ತಾರೆ – ವಿಪಕ್ಷೇತಿ. ಅಪೂರ್ವಕ್ಕೆ ಫಲಸಾಮಾನ್ಯಾಧಿ-ಕರಣವನ್ನು ಒಪ್ಪಿದರೆ ಲಾಘವವಿದೆ ಎಂಬ ಯುಕ್ತಿಯೇ ವಿಪಕ್ಷ ಬಾಧಕವಾಗುತ್ತದೆ ಎಂಬುದು ಸರಿಯಲ್ಲ. ಹಾಗೆ ಕಲ್ಪನೆಮಾಡಿದರೆ ಅಪೂರ್ವಕ್ಕೆ ನಾನಾತ್ವವು ಉಂಟಾಗುವುದರಿಂದ ವಿಪಕ್ಷಕ್ಕೆ ಬಾಧಕವಾಗಿ ಹೇಳಿದ ಲಾಘವವು ಅನಾದರಣೀಯವಾದುದು.

## ಅನುಮಾನಕ್ಕೆ ಸಿದ್ಧಸಾಧನತಾ ದೋಷ

**हविस्त्यागेति ।। वह्न्युद्देशेन हविस्त्याज्यते, न च तत्रातिशयो जन्यते इत्यर्थः । न च वह्नौ तदनुकूलसंयोगो जन्यत एवेति वाच्यम् । एवं हि प्रोक्षणेनापि व्रीहौ जलसंयोगजननात् सिद्धसाधनादिति भावः । पुरुषसमवेतातिशयस्य परम्परासम्बन्धेन स्वरूपसम्बन्धेन साक्षादेव वा**

**व्रीहिनिष्ठत्वस्याप्युपपत्तेर्नातिरिक्तपदार्थकल्पनमिति तत्त्वम् ।**

ಹವಿಸ್ತ್ಯಾಗೇತಿ – ವಹ್ನಿಯ ಉದ್ದೇಶದಿಂದ ಹವಿಸ್ಸನ್ನು ತ್ಯಾಗಮಾಡುತ್ತಾರೆ. ವಹ್ನಿಯಲ್ಲಿ ಯಾವ ಅತಿಶಯವೂ ಉಂಟಾಗುವುದಿಲ್ಲ ಎಂದು ಅರ್ಥ. ವಹ್ನಿಯಲ್ಲಿ ದಾಹಾನುಕೂಲ ಸಂಯೋಗ ರೂಪವಾದ ಅತಿಶಯವು ಉಂಟಾಗುತ್ತದೆ ಎಂದು ಹೇಳುವುದಾದರೆ ಪ್ರೋಕ್ಷಣದಿಂದಲೂ ವ್ರೀಹಿಯಲ್ಲಿ ಜಲಸಂಯೋಗರೂಪವಾದ ಅತಿಶಯವು ಉಂಟಾಗುವುದರಿಂದ ಅನುಮಾನಕ್ಕೆ ಸಿದ್ಧಸಾಧನ ದೋಷವು ಬರುತ್ತದೆ ಎಂದು ಅಭಿಪ್ರಾಯ. ಪುರುಷನಿಷ್ಠವಾದ ಅದೃಷ್ಟರೂಪವಾದ ಅತಿಶಯವೇ ಅದೃಷ್ಟವದಾತ್ಮ ಸಂಯೋಗರೂಪ ಪರಂಪರಾ ಸಂಬಂಧದಿಂದ ಅಥವಾ ಸಾಕ್ಷಾತ್ ಸ್ವರೂಪಸಂಬಂಧದಿಂದಲೇ ವ್ರೀಹಿನಿಷ್ಠವಾಗುವುದರಿಂದ ಶಕ್ತಿರೂಪವಾದ ಅತಿರಿಕ್ತ ಪದಾರ್ಥವನ್ನು ಕಲ್ಪನೆ ಮಾಡಬಾರದು ಎಂಬುದು ಅಭಿಪ್ರಾಯ.

## ಪ್ರೋಕ್ಷಣೆಯ ಸ್ಥಳದಲ್ಲಿ ಹೇಗೆ ಉಚ್ಚರಿಸಬೇಕು ?

**अथोत्पन्नतत्त्वज्ञानपुरुषकृतप्रोक्षणेन दोषाभावाददृष्टानुत्पादे शक्तिसिद्धिरिति चेन्न । तत्र फलानुत्पादात् । लोकसङ्ग्रहार्थं तदाचारणादिति भावः । बर्हिष इति ।। बर्हिर्यागस्येत्यर्थः। यथा तस्य जनितादृष्टस्य न पुनरुपभोगान्तरं तथा व्रीहेरप्यदृष्टजननोपगमे तन्न स्यादित्यर्थः । यद्वा व्यतिरेकदृष्टान्तोऽयम् । यथा बर्हिस्तृणाति इत्यादिविधिबलात् तस्य पुनरुपयोगस्तथाऽत्र न स्यादित्यर्थः ।**

ಇನ್ನು ತತ್ವಜ್ಞಾನಿಯು ಮಾಡಿದ ಪ್ರೋಕ್ಷಣೆಯ ಸ್ಥಳದಲ್ಲಿ ತತ್ವಜ್ಞಾನಿಯಲ್ಲಿ ದೋಷವಿಲ್ಲದಿರುವುದರಿಂದ ದೋಷ ಕಾರ್ಯವಾದ ಅದೃಷ್ಟವು ಅಲ್ಲಿ ಉತ್ಪತ್ತಿಯಾಗುವುದಿಲ್ಲ. ಆದ್ದರಿಂದ ವ್ರೀಹಿನಿಷ್ಠವಾದ ಶಕ್ತಿಯು ಸಿದ್ಧವಾಗುತ್ತದೆ ಎಂದು ಹೇಳಿದರೆ ತತ್ವಜ್ಞಾನಿಯು ಮಾಡಿದ ಪ್ರೋಕ್ಷಣೆಯಿಂದ ಯಾವ ಅದೃಷ್ಟವೂ ಉತ್ಪತ್ತಿಯಾಗುವುದಿಲ್ಲ. ಲೋಕಸಂಗ್ರಹಾರ್ಥವಾಗಿ ಮಾತ್ರ ಅವನ ಆಚರಣೆ. ಆದ್ದರಿಂದ ಶಕ್ತಿಸಿದ್ಧಿಯಾಗುವ ಪ್ರಸಂಗವಿಲ್ಲ ಎಂದು ಅಭಿಪ್ರಾಯ. ಬರ್ಹಿಷ

ಇತಿ – ಬರ್ಹಿ ಎಂದರೆ ಬರ್ಹಿರ್ಯಾಗ ಎಂದು ಅರ್ಥ. ಹೇಗೆ ಅದೃಷ್ಟವನ್ನು ಉಂಟುಮಾಡಿದ ಬರ್ಹಿರ್ಯಾಗಕ್ಕೆ ಪುನಃ ಉಪಯೋಗಾಂತರವು ಇಲ್ಲವೋ ಅದರಂತೆ ವ್ರೀಹಿಯಲ್ಲಿಯೂ ಸಹ ಅದೃಷ್ಟೋತ್ಪತ್ತಿಯನ್ನು ಅಂಗೀಕರಿಸಿದರೆ ಅದಕ್ಕೆ ಪುನಃ ಉಪಯೋಗಾಂತರವಿಲ್ಲವೆಂಬ ಆಪತ್ತಿಯು ಬರುತ್ತದೆ ಎಂದು ಅರ್ಥ. ಅಥವಾ ಬರ್ಹಿಷಃ ಎಂಬುದು ವ್ಯತಿರೇಕ ದೃಷ್ಟಾಂತ. ಹೇಗೆ ಸಂಸ್ಕೃತವಾದ ಬರ್ಹಿಗಳಿಗೆ (ದರ್ಭೆಗಳಿಗೆ) ಬರ್ಹಿಃಸ್ತೃಣಾತಿ ಎಂಬ ವಿಧಿಬಲದಿಂದ ಪುನಃ ಉಪಯೋಗಾಂತರವನ್ನು ಒಪ್ಪುತ್ತೇವೆಯೋ ಅದರಂತೆ ಇಲ್ಲಿ ವ್ರೀಹಿಗಳಿಗೆ ಉಪಯೋಗಾಂತರಗಳನ್ನು ಒಪ್ಪುವುದಕ್ಕೆ ಪ್ರಮಾಣವಿಲ್ಲ ಎಂದು ಅರ್ಥ.

## ಪಾತಿತ್ಯದೋಷವಿದ್ದಾಗ ಅದೃಷ್ಟ ಹುಟ್ಟದು

**उक्तन्यायेनेति ।। व्यक्तिवचनन्यायेनावघाते प्रोक्षितस्यैवान्वये सर्वमिदमविरुद्धमिति भावः । ननु पुरुषे पातित्यादिदोषेणादृष्टन्नोत्पद्यते इति अगत्या व्रीहिनिष्ठातिशयः स्वीकार्य इत्यत आह – कर्तृकर्मेति ।। एवं हि व्रीहिनिष्ठोपि स न स्यादित्यर्थः। पुरुषनिष्ठत्वे साधकमुक्त्वा व्रीहिनिष्ठत्वे बाधकमाह – किञ्चेति।।**

ಉಕ್ತನ್ಯಾಯೇನೇತಿ – ವ್ಯಕ್ತಿವಚನಗಳಿಗೆ ಸನ್ನಿಹಿತ ಪರತ್ವ ಎಂಬ ನ್ಯಾಯದಿಂದ ಅವಘಾತದಲ್ಲಿ ಪ್ರೋಕ್ಷಿತವಾದ ವ್ರೀಹಿಗಳೇ ಅನ್ವಯವನ್ನು ಹೊಂದುವುದರಿಂದ ಯಾವ ವಿರೋಧವೂ ಇಲ್ಲ ಎಂದು ಅಭಿಪ್ರಾಯ.

ಪುರುಷನಲ್ಲಿ ಪಾತಿತ್ಯಾದಿ ದೋಷವಿರುವಾಗ ಅದೃಷ್ಟವು ಉತ್ಪತ್ತಿಯಾಗುವುದಿಲ್ಲ. ಅಲ್ಲಿ ಅಗತ್ಯಾ ವ್ರೀಹಿನಿಷ್ಠವಾದ ಅದೃಷ್ಟವನ್ನೇ ಅಂಗೀಕರಿಸಬೇಕಾಗುತ್ತದೆ ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಾರೆ – ಕರ್ತೃಕರ್ಮೇತಿ – ಆ ಪಕ್ಷದಲ್ಲಿ ವ್ರೀಹಿಯಲ್ಲೂ ಅದೃಷ್ಟವು ಉಂಟಾಗುವುದಿಲ್ಲ ಎಂದು ಅರ್ಥ. ಅದೃಷ್ಟವು ಪುರುಷನಿಷ್ಠ ಎಂಬ ವಿಷಯದಲ್ಲಿ ಸಾಧಕಪ್ರಮಾಣವನ್ನು ಹೇಳಿ ವ್ರೀಹಿನಿಷ್ಠ ಎಂಬ ಪ್ರಮಾಣದಲ್ಲಿ ಬಾಧಕಪ್ರಮಾಣವನ್ನು ಹೇಳುತ್ತಾರೆ – ಕಿಂಚೇತಿ.

## ಭಾವಕಾರ್ಯವನ್ನಷ್ಟೇ ವಿವಕ್ಷಿಸಬೇಕು

**कार्येति ।। भावकार्येत्यर्थः । स्वाश्रयेति ।। स्वसमवायिकारणेत्यर्थः । एवञ्च किञ्चिदाश्रयनाशे वृक्षादिनाशे प्रत्यभिज्ञानस्य तज्जातीयत्वं विषय इति भावः ।**

ಕಾರ್ಯ ಎಂದರೆ ಭಾವಕಾರ್ಯ ಎಂದು ಅರ್ಥ. ಆಶ್ರಯ ಎಂದರೆ (ಸ್ವಾಶ್ರಯ ಎಂದರೆ) ಸ್ವಸಮವಾಯಿ ಕಾರಣ ಎಂದು ಅರ್ಥ. ಆದ್ದರಿಂದ ಸ್ವಲ್ಪ ಆಶ್ರಯನಾಶವಾದಾಗ ಅಥವಾ ಆ ವೃಕ್ಷದಲ್ಲಿ ಸ್ವಲ್ಪ ಅವಯವಗಳು ನಾಶವಾದಾಗ ಉಂಟಾಗುವ ಪ್ರತ್ಯಭಿಜ್ಞಾನವು ಪೂರ್ವಜಾತೀಯ ವಸ್ತುವಿಷಯಕವೇ ಹೊರತು ಪೂರ್ವವಸ್ತುವೇ ಅಲ್ಲ ಎಂದು ಅಭಿಪ್ರಾಯ.

## ಅವಾಂತರಜಾತಿಯನ್ನು ವಿವಕ್ಷಿಸಿ ಉಪಪಾದಿಸಲಾಗದು

**संयोगस्येति ।। ननु फलस्योपलक्षणत्वे तत्तद्व्यापारमात्रस्यैव धात्वर्थत्वे त्यजिगम्योः पर्यायतापत्तिः । अवच्छेदकीभूतयोः फलयोर्विभागसंयोगार्थाप्रवेशे स्पन्दमात्रस्यैवोभयधात्वर्थत्वात्, कर्ममात्रस्यैवोभयजनकत्वेन पतनादिवदवान्तरजातिमादयाप्यर्थभेदस्य दुरुपपादत्वादिति । अत्र वदन्ति ।**

ಸಂಯೋಗಸ್ಯೇತಿ – ಫಲವು ಉಪಲಕ್ಷಣವಾಗಿ ವ್ಯಾಪಾರವು ಮಾತ್ರ ಧಾತ್ವರ್ಥ ಎಂದು ಅಂಗೀಕರಿಸಿದರೆ ತ್ಯಜಿ ಮತ್ತು ಗಮಿ ಧಾತುಗಳು ಪರ್ಯಾಯವಾಗಬೇಕಾಗುತ್ತವೆ. ಏಕೆಂದರೆ ಧಾತ್ವರ್ಥತಾವಚ್ಛೇದಕವಾದ ಫಲಗಳಾದ ವಿಭಾಗ ಮತ್ತು ಸಂಯೋಗಗಳು ಧಾತ್ವರ್ಥದಲ್ಲಿ ಸೇರದಿದ್ದರೆ ಸ್ಪಂದ ಮಾತ್ರವೇ ಧಾತ್ವರ್ಥವಾಗುತ್ತದೆ. ಅದು ಎರಡು ಧಾತುಗಳಿಗೂ ಸಮಾನವಾದುದು. ಕರ್ಮ ಸಾಮಾನ್ಯವೇ ಅಂತಹ ಸ್ಪಂದಜನಕವಾಗಿರುವುದರಿಂದ ಪತನಾದಿಗಳಲ್ಲಿ ಇರುವಂತೆ ಅವಾಂತರ ಜಾತಿಯನ್ನಾದರೂ ಅಂಗೀಕರಿಸಿ ಅರ್ಥಭೇದವನ್ನು ಉಪಪಾದನೆ ಮಾಡಲು ಸಾಧ್ಯವಿಲ್ಲ ಎಂಬ ಈ ಆಕ್ಷೇಪಕ್ಕೆ ಹೀಗೆ ಉತ್ತರವನ್ನು ಹೇಳುತ್ತಾರೆ.

## ಫಲವಿಶಿಷ್ಟವ್ಯಾಪಾರ, ಫಲ-ಉಪಲಕ್ಷಿತವ್ಯಾಪಾರವು ವಾಕ್ಯವಾದಾಗ

**व्यापारे उपलक्षणीभूतस्यापि फलस्य प्रतीतौ विशेषणत्वमेव। इष्टसाधनताविधिपक्षे क्रियोपलक्षणस्यापि इष्टस्य ज्ञानविशेषतावत् । तदत्र फलविशिष्टो व्यापारो यदि वाच्यस्तदा शब्दात् फलविशिष्टव्यापारधीरपरथा फलोपलक्षित-व्यापारधीरिति उभयथापि फलांशेपि शक्तिं क्व प्रतीत्य विशेषो येन पर्यायता । विशेषणत्वे प्रकृते कर्मत्वानुपपत्तिरिति ।**

ಫಲವು ವ್ಯಾಪಾರದಲ್ಲಿ ಉಪಲಕ್ಷಣವಾದರೂ ಧಾತುಜನ್ಯಪ್ರತೀತಿಯಲ್ಲಿ ವಿಶೇಷಣವೇ ಆಗಿದೆ. ಇಷ್ಟಸಾಧನವು ವಿಧ್ಯರ್ಥ ಎಂಬ ಪಕ್ಷದಲ್ಲಿ ಕ್ರಿಯೆಯನ್ನು ಕುರಿತು ಇಷ್ಟವು ಉಪಲಕ್ಷಣವಾದರೂ ಜ್ಞಾನವನ್ನು ಕುರಿತು ವಿಶೇಷಣವಾದಂತೆ. ಆದ್ದರಿಂದ ಫಲವಿಶಿಷ್ಟವ್ಯಾಪಾರವು ವಾಚ್ಯವಾಗುವುದಾದರೆ ಶಬ್ದದಿಂದಲೇ ಫಲವಿಶಿಷ್ಟ ವ್ಯಾಪಾರ ಪ್ರತೀತಿ ಉಂಟಾಗುತ್ತದೆ. ಬೇರೆ ರೀತಿಯಲ್ಲಿ ಆಗುವುದಾದರೆ ಫಲೋಪಲಕ್ಷಿತ ವ್ಯಾಪಾರ ಬುದ್ಧಿಯು ಉಂಟಾಗುತ್ತದೆ. ಎರಡು ಸಂದರ್ಭಗಳಲ್ಲಿಯೂ ಫಲಾಂಶದಲ್ಲಿ ಶಕ್ತಿಯು ಸಮಾನವಾಗಿ ತೋರದಿರುವುದರಿಂದ ಪರ್ಯಾಯತ್ವವನ್ನು ಆಪಾದನೆ ಮಾಡಲು ಈ ಪ್ರತೀತಿಗಳಲ್ಲಿ ಸಾಮ್ಯವು ಎಲ್ಲಿದೆ ಮತ್ತು ವಿಶೇಷಣವಾದ ಪಕ್ಷದಲ್ಲಿ ಪ್ರಕೃತದಲ್ಲಿ ಕರ್ಮತ್ವವು ಅನುಪಪನ್ನ ಎಂದಾದರೂ ಹೇಗೆ ಹೇಳಲು ಸಾಧ್ಯ?

## ಪ್ರೋಕ್ಷಣಜನ್ಯ-ಅದೃಷ್ಟವು ಸ್ವರೂಪಸಂಬಂಧದಿಂದಲೇ ವ್ರೀಹಿಗೆ ಕರ್ಮ

**अस्तु वा प्रोक्षणजन्यापूर्वस्य साक्षात्स्वरूपसम्बन्धेनैव व्रीहिकर्मत्वं, साक्षाद्धीजन्यसंस्कारविषयतया घटादीनामिव, एवञ्च व्याप्यसंस्कार्यकर्मणो भेदोपयुपपद्यत इत्यभिप्रेत्याह – किञ्चेति ।। वह्निमिति ।। न ह्यत्र कर्मणि द्वितीया, अनुमितौ वह्नेरकारकत्वात्, कर्मणश्च कारकविशेषत्वात् । किन्तु साधु विभक्तिस्तथात्रापीत्यर्थः ।**

ಅಥವಾ ಸಾಕ್ಷಾತ್ಕಾರ ಜನ್ಯ ಸಂಸ್ಕಾರ ವಿಷಯತ್ವವಿರುವುದರಿಂದ ಘಟಾದಿಗಳಿಗೆ ಹೇಗೆ ಸಾಕ್ಷಾತ್ಕಾರ ಕರ್ಮತ್ವವು ಇದೆಯೋ ಅದರಂತೆ ಪ್ರೋಕ್ಷಣಜನ್ಯ ಅದೃಷ್ಟವು ಸಾಕ್ಷಾತ್ ಸ್ವರೂಪ ಸಂಬಂಧದಿಂದ ವ್ರೀಹಿಗಳಲ್ಲಿರುವ ಪ್ರಯುಕ್ತ ವ್ರೀಹಿಗಳಿಗೆ ಪ್ರೋಕ್ಷಣ ಕರ್ಮತ್ವವು ಉಪಪನ್ನವಾಗಲಿ. ಇದರಿಂದ ಸಂಸ್ಕಾರ್ಯ ಮತ್ತು ಕರ್ಮಗಳ ಭೇದವು ಉಪಪನ್ನವಾಗುತ್ತದೆ ಎಂಬ ಅಭಿಪ್ರಾಯದಿಂದ ಕಿಂಚ ಎಂದು ಹೇಳುತ್ತಾರೆ – ಕಿಂಚೇತಿ. ವಹ್ನಿಮಿತಿ – ಇಲ್ಲಿ ವಹ್ನಿಂ ಎಂಬಲ್ಲಿ ಕರ್ಮಣಿ ದ್ವಿತೀಯಾ ಬಂದಿಲ್ಲ. ಏಕೆಂದರೆ ಅನುಮಿತಿಯನ್ನು ಕುರಿತು ವಹ್ನಿಯು ಕಾರಕವಲ್ಲ. ಮತ್ತು ಕರ್ಮವಾದರೂ ಕಾರಕ ವಿಶೇಷವಾಗಿದೆ. ಆದರೆ ಶಬ್ದಸಾಧುತಾರ್ಥವಾಗಿ ವಿಭಕ್ತಿ ಬಂದಿದೆ. ಅದರಂತೆ ವ್ರೀಹೀನ್ ಎಂಬಲ್ಲಿಯೂ ಉಪಪನ್ನವಾಗುತ್ತದೆ ಎಂದು ಅರ್ಥ.

**न चेति ।। 'प्रतिष्ठितं पूजयेत्' इति निष्ठास्वरसादिति भावः। तत एव तत्सत्त्वेपि चाण्डालादिस्पर्शेनापूज्यत्वादेवेत्यर्थः । देवताचैतन्यपक्षमालम्ब्य परिहरति – प्रतिष्ठाविधिनेति ।।**

ನಚೇತಿ – ಪ್ರತಿಷ್ಠಿತಂ ಪೂಜಯೇತ್ ಎಂಬಲ್ಲಿ 'ಕ್ತ' ಪ್ರತ್ಯಯದ ಸ್ವಾರಸ್ಯದಿಂದ ಹೀಗೆ ಅರ್ಥವನ್ನು ಮಾಡಬೇಕು. ತತ ಏವ ಎಂದರೆ ಪ್ರತಿಷ್ಠಿತ ಪ್ರತಿಮೆಯು ಇದ್ದರೂ ಚಂಡಾಲಾದಿ ಸ್ಪರ್ಶದಿಂದ ಅಪೂಜ್ಯತ್ವವು ಉಂಟಾಗುವ ಕಾರಣದಿಂದ ಎಂದು ಅರ್ಥ. ದೇವತಾ ಚೈತನ್ಯಪಕ್ಷವನ್ನು ಅವಲಂಬಿಸಿ ಪರಿಹಾರವನ್ನು ಹೇಳುತ್ತಾರೆ – ಪ್ರತಿಷ್ಠಾವಿಧಿನೇತಿ.

## ವಿಶೇಷದರ್ಶನವಿದ್ದರೂ ಆಹಾರ್ಯಭ್ರಾಂತಿ ಬರುತ್ತದೆ

**अहङ्कारेति ।। अहमियं प्रतिमा ममेदं शरीरम् इत्यादिज्ञानरूप इत्यर्थः । नन्विदं ज्ञानं विषयबाधाद्भ्रान्तं स्यात्, न च तत्सम्भवति, विशेषदर्शनादित्यत आह – स्वसादृश्येति ।। तथाच विशेषदर्शने सत्यप्याहार्यभ्रमोऽयमित्यर्थः ।।**

ಅಹಂಕಾರೇತಿ – ನಾನು ಈ ಪ್ರತಿಮೆ. ಈ ಪ್ರತಿಮೆಯು ನನ್ನ ಶರೀರ ಎಂಬ ಅಹಂಕಾರ ಮಮಕಾರ ರೂಪವಾದ ಜ್ಞಾನವೇ ಸನ್ನಿಧಾನ ಎಂದು ಅರ್ಥ. ಹಾಗಾದರೆ ಈ ಜ್ಞಾನಕ್ಕೆ ಬಾಧವಿರುವುದರಿಂದ

ಭ್ರಾಂತಿಯಾಯಿತು. ಆದರೆ ವಿಶೇಷದರ್ಶನವಿರುವ ದೇವತೆಗಳಿಗೆ ಅಂತಹ ಭ್ರಾಂತಿಯನ್ನು ಅಂಗೀಕರಿಸಲು ಬರುವುದಿಲ್ಲ ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಾರೆ – ಸ್ವಸಾದೃಶ್ಯೇತಿ. ತಥಾಚ ವಿಶೇಷದರ್ಶನವಿದ್ದರೂ ಆಹಾರ್ಯವಾದ ಭ್ರಾಂತಿಯು ಬರಬಹುದು ಎಂದು ಅರ್ಥ.

## ಮೊದಲನೆಯ ಕಲ್ಪದಲ್ಲಿರುವ ಅನುಪಪತ್ತಿ

**ननु देवतायां सर्वज्ञत्वाभावेन व्यासङ्गदशायां व्यवहितनानादेशे प्रतिष्ठायां कथमहङ्कारममकारौ संस्कारौ संस्कारनाशे वा कथं पूज्यत्वं कथं वा ज्ञानसंस्कारयोरननुगतयोः पूजाप्रयोजकत्वमिति प्रथमकल्पानुपपत्तिः ।**

ದೇವತೆಗೆ ಸರ್ವಜ್ಞತ್ವವಿಲ್ಲದಿರುವುದರಿಂದ ದೇವತೆಗೆ ಮನೋವ್ಯಾಸಂಗವಿರುವಾಗ (ಮನೋವಿಕ್ಷೇಪವಿರುವಾಗ) ವ್ಯವಹಿತವಾದ ನಾನಾ ಪ್ರದೇಶಗಳಲ್ಲಿ ಪ್ರತಿಷ್ಠೆಮಾಡಿದ ಪ್ರತಿಮೆಗಳಲ್ಲಿ ಅಹಂಕಾರವಾಗಲೀ, ಮಮಕಾರವಾಗಲೀ ಅಥವಾ ಸಂಸ್ಕಾರವಾಗಲೀ ಹೇಗೆ ಉಂಟಾಗುತ್ತದೆ. ಅಹಂಕಾರಾದಿಗಳು ನಾಶವಾದರೆ ಆ ಪ್ರತಿಮೆಗೆ ಪೂಜ್ಯತ್ವವು ಹೇಗೆ? ಇನ್ನು ಜ್ಞಾನ ಮತ್ತು ಸಂಸ್ಕಾರಗಳು ಅನನುಗತವಾಗಿವೆ (ಪೂಜ್ಯತ್ವಕ್ಕೆ ವ್ಯಧಿಕರಣ ವಾಗಿವೆ). ಅವುಗಳಿಗೆ ಪೂಜ್ಯತ್ವ ಪ್ರಯೋಜಕತ್ವವು ಹೇಗೆ ಮತ್ತು ಎಲ್ಲಿ ಪ್ರತ್ಯಭಿಜ್ಞಾನವಿಲ್ಲವೋ ಅಂತಹ ಪ್ರತಿಷ್ಠಿತ ಪ್ರತಿಮೆಗೂ ಪೂಜ್ಯತ್ವವು ಹೇಗೆ ಎಂದು ದೇವತಾ ಸನ್ನಿಧಾನವನ್ನು ಒಪ್ಪುವ ಮೊದಲನೆಯ ಕಲ್ಪದಲ್ಲಿ ಅನುಪಪತ್ತಿಯಿದೆ.

## ಎರಡನೆಯ ಕಲ್ಪದಲ್ಲಿಯೂ ಅನುಪಪತ್ತಿ

**यत्र च व्यासङ्गवत्तन्न प्रत्यभिज्ञानं तत्र प्रतिष्ठितप्रतिमापूजापि निष्फला स्यात् । प्रतिष्ठितं पूजयेदित्यादिना च प्रतिष्ठायास्तद्ध्वंसस्य वा हेतुत्वं बोध्यते न तत्प्रत्यभिज्ञानस्यापीति द्वितीयकल्पानुपपत्तिः । दृष्टेनैवोपप त्तावदृष्टकल्पनानुपपत्तिरिति तृतीयकल्पानुपपत्तिरित्यस्वरसा दाह – वयं त्विति ।।**

ಇನ್ನು ಪ್ರತಿಷ್ಠೆಯ ಅಥವಾ ಪ್ರತಿಷ್ಠಾ ಧ್ವಂಸದ ಪ್ರತ್ಯಭಿಜ್ಞಾನವು ಪೂಜ್ಯತ್ವವನ್ನು ಕುರಿತು ಪ್ರಯೋಜಕ ಎಂಬ ಎರಡನೆಯ ಪಕ್ಷದಲ್ಲಿ ಚಿತ್ತವಿಕ್ಷೇಪದಿಂದ ಪ್ರತಿಷ್ಠಿತ ಪ್ರತಿಮೆಯಲ್ಲಿ ಪ್ರತ್ಯಭಿಜ್ಞಾನವು ಉಂಟಾಗದಿದ್ದರೆ ಅಲ್ಲಿ ಪೂಜ್ಯತ್ವವು ಇಲ್ಲದೇ ಹೋದ್ದರಿಂದ ಅಲ್ಲಿ ಮಾಡಿದ ಪೂಜೆಯು ವ್ಯರ್ಥವಾಗಬೇಕು. ಮತ್ತು ಪ್ರತಿಷ್ಠಿತಂ ಪೂಜಯೇತ್ ಎಂಬ ವಾಕ್ಯದಿಂದ ಪ್ರತಿಷ್ಠೆಗೆ ಅಥವಾ ಪ್ರತಿಷ್ಠಾ ಧ್ವಂಸಕ್ಕೆ ಪೂಜ್ಯತ್ವ ಪ್ರಯೋಜಕತ್ವವು ತಿಳಿಯುತ್ತದೆಯೇ ಹೊರತು ಪ್ರತ್ಯಭಿಜ್ಞಾನಕ್ಕೆ ಪೂಜ್ಯತ್ವ ಪ್ರಯೋಜಕತ್ವವು ತಿಳಿದು ಬರುವುದಿಲ್ಲ ಎಂಬುದು ಅನುಪಪತ್ತಿ. ಇನ್ನು ಪ್ರತಿಮೆಯಲ್ಲಿಯೇ ಅಪೂರ್ವಾಂತರವನ್ನು ಅಂಗೀಕರಿಸುವ ಮೂರನೆಯ ಪಕ್ಷದಲ್ಲಿಯೂ ದೃಷ್ಟಪ್ರಯೋಜಕದಿಂದಲೇ ಉಪಪನ್ನವಾಗುವಾಗ ಅದೃಷ್ಟವನ್ನು ಏಕೆ ಕಲ್ಪನೆಮಾಡಬೇಕು ಎಂಬ ಅನುಪಪತ್ತಿಯಿದೆ. ಹೀಗೆ ಮೂರು ಪಕ್ಷಗಳಲ್ಲಿಯೂ ಅನುಪಪತ್ತಿ ಇರುವುದರಿಂದ ಈ ಅಸ್ವಾರಸ್ಯವನ್ನು ಪರಿಹರಿಸಿ ಗ್ರಂಥಕಾರರು ವಯಂತು ಎಂದು ತಮ್ಮ ಪಕ್ಷವನ್ನು ಹೇಳುತ್ತಾರೆ – ವಯಂತ್ವಿತಿ.

## ಪ್ರತಿಮೆಯಲ್ಲಿ ಪ್ರತಿಷ್ಠೆಯ ಅನಂತರ ಶಕ್ತಿಯಿಲ್ಲವೇ ?

**ननु यत्र प्रतिमायां प्रतिष्ठा जाता दैवात् किञ्चिदवयवनाशादन्या प्रतिमा जाता तत्र प्रतिष्ठारूपप्रतियोगिनोऽवृत्तेस्तद्ध्वंसस्यापि न वृत्तिः, प्रतियोग्यधिकरण एव ध्वंसस्य वृत्तेः, तथाच तत्पूजा निष्फला स्यात् ।**

ಹಾಗಾದರೆ ಯಾವ ಪ್ರತಿಮೆಯಲ್ಲಿ ಪ್ರತಿಷ್ಠೆಯ ನಂತರ ದೈವಾತ್ ಸ್ವಲ್ಪ ಅವಯವ ನಾಶವುಂಟಾಯಿತೋ ಆಗ ನೈಯಾಯಿಕ ಮತದಂತೆ ಅನ್ಯ ಪ್ರತಿಮೆಯೇ ಉಂಟಾಯಿತು. ಅಲ್ಲಿ ಪ್ರತಿಷ್ಠೆಯಾಗಲೀ, ಪ್ರತಿಷ್ಠಾಧ್ವಂಸವಾಗಲೀ ಇಲ್ಲ. ಏಕೆಂದರೆ ಧ್ವಂಸವು ಪ್ರತಿಯೋಗ್ಯಧಿಕರಣದಲ್ಲಿ ಇರುತ್ತದೆಯಷ್ಟೆ. ತಥಾಚ ಅಂತಹ ಪ್ರತಿಮೆಯ ಪೂಜೆಯು ನಿಷ್ಫಲವಾಗಬೇಕಾಗುತ್ತದೆ.

## ಪ್ರತಿಮೆಯೇ ನಾಶವಾದಾಗ ಹೇಗೇ ?

**न चेष्टापत्तिः, आचारविरोधात् । अन्यथा एतच्छङ्कया**

**कस्यापि प्रवृत्तिर्न स्यात् । न च तत्प्रतिमावृत्तित्वेन ध्वंसस्य न प्रयोजकत्वं किन्तु स्वरूपेण तच्च तत्रास्त्येवेति वाच्यम्। एवं हि तद्ध्वंसस्य प्रतिमान्तरपूज्यत्व-प्रयोजकतापि स्यादविशेषादिति चेत् ।**

ಆದರೆ ಇಷ್ಟಾಪತ್ತಿಯನ್ನು ಹೇಳಲು ಬರುವುದಿಲ್ಲ. ಅಂತಹ ಪ್ರತಿಮೆಯ ಪೂಜೆಯು ಸಂಪ್ರದಾಯಪ್ರಾಪ್ತವಾಗಿದೆ. ಇಲ್ಲದಿದ್ದರೆ ಯಾವುದಾದರೂ ಅವಯವವು ಸ್ವಲ್ಪನಾಶವಾಗಿರಬಹುದು ಎಂಬ ಶಂಕೆಯಿಂದ ಯಾವ ಪ್ರತಿಮೆಯ ಪೂಜೆಯಲ್ಲಿಯೂ ಪ್ರವೃತ್ತಿಯೇ ಉಂಟಾಗಲಾರದು. ಪ್ರತಿಷ್ಠಾ ಧ್ವಂಸವು ಆ ಪ್ರತಿಮಾ ವೃತ್ತಿತ್ವೇನ ಇರಬೇಕಾಗಿಲ್ಲ, ಸ್ವರೂಪತಃ ಇದ್ದರೆ ಸಾಕು ಎಂದು ಹೇಳಿದರೆ ಅಂತಹ ಧ್ವಂಸವು ಪ್ರತಿಷ್ಠೆ ಇಲ್ಲದಿರುವ ಪ್ರತಿಮೆಯ ಸ್ಥಳದಲ್ಲಿಯೂ ಕೂಡ ಸ್ವರೂಪತಃ ಇರುವುದರಿಂದ ಅಲ್ಲಿಯೂ ಪೂಜ್ಯತ್ವವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಈ ಆಕ್ಷೇಪಕ್ಕೆ ಹೀಗೆ ಉತ್ತರವನ್ನು ಹೇಳುತ್ತಾರೆ –

## ಅಪ್ರತಿಷ್ಠವಾದ ಪ್ರತಿಮೆಯಲ್ಲಿ ಪೂಜ್ಯತ್ವವಿಲ್ಲ

**अत्राहुः । इयं प्रतिष्ठितेति बुद्धेः खण्डप्रतिमायामपि प्रमात्व-व्यवहारात् तद्ध्वंसस्य तत्रापि वृत्तिरेव । प्रतिमान्तरे च तदभावात् तदभावः । अत एव प्रोक्षितव्रीहीणां यत्किञ्चिदवयवनाशान्नाशेपि खण्डव्रीहीणामुपयोगः । 'संस्कृता एते व्रीहयः' इति प्रतीत्या तत्रापि पुरुषसमवेतसंस्कार-सम्बन्धसिद्धेः । अन्यथा सर्वमिदं तत्रापि तुल्यमिति ।**

ಸ್ವಲ್ಪ ಭಗ್ನವಾದ ಪ್ರತಿಮೆಯಲ್ಲಿಯೂ ಸಹ ಈ ಪ್ರತಿಮೆಯು ಪ್ರತಿಷ್ಠಿತವಾದುದು ಎಂಬ ಬುದ್ಧಿ ಇರುವುದರಿಂದ ಪ್ರತಿಷ್ಠಾಧ್ವಂಸವು ಅಲ್ಲಿ ಇದ್ದೇ ಇದೆ. ಅಪ್ರತಿಷ್ಠಿತವಾದ ಪ್ರತಿಮೆಯಲ್ಲಿ ಆ ಧ್ವಂಸವಿಲ್ಲವಾದ್ದರಿಂದ ಅಲ್ಲಿ ಪೂಜ್ಯತ್ವವಿಲ್ಲ. ಆದ್ದರಿಂದಲೇ ಪ್ರೋಕ್ಷಿತವಾದ ವ್ರೀಹಿಗಳಲ್ಲಿ ಕಿಂಚಿದವಯವ ನಾಶವುಂಟಾದರೂ ಆ ಖಂಡವ್ರೀಹಿಗಳಿಗೆ ಪುರೋಡಾಶದಲ್ಲಿ ಉಪಯೋಗವಿದೆ.

ಖಂಡ ವ್ರೀಹಿಗಳಲ್ಲಿಯೂ ಸಹ ಇವು ಸಂಸ್ಕಾರವಿಶಿಷ್ಟವಾಗಿವೆ ಎಂಬ ಬುದ್ಧಿ ಇರುವುದರಿಂದ ಅಲ್ಲಿಯೂ ಕೂಡ ಪುರುಷ ಸಮವೇತ ಸಂಸ್ಕಾರ ಸಂಬಂಧವು ಇದ್ದೇ ಇದೆ. ಇದನ್ನು ಒಪ್ಪದಿದ್ದರೆ ಪ್ರತಿಮೆಯ ವಿಷಯದಲ್ಲಿ ಮಾಡಿದ ಆಪಾದನೆಗಳೆಲ್ಲವೂ ವ್ರೀಹಿಯ ವಿಷಯದಲ್ಲಿಯೂ ಉಂಟಾಗುತ್ತವೆ ಎಂದು ಹೇಳುತ್ತಾರೆ.

## ಪ್ರತಿಷ್ಠಿತವಾದ ಪ್ರತಿಮೆಯಲ್ಲೂ ಅಪೂಜ್ಯತ್ವ ಬರಲಿ ಎಂಬ ಆಪತ್ತಿ

**प्रतिष्ठाकालीनेति ।। अत्र स्वसमानाधिकरणेत्यपि विशेषणस्तेन तत्प्रतिष्ठाकालीनप्रतिमान्तरास्पृश्यस्पर्शप्रागभावाभावेन यावदर्थाभावान्नापूज्यतापत्तिः ।**

ಪ್ರತಿಷ್ಠಾಕಾಲೀನೇತಿ – ಇಲ್ಲಿ ಪ್ರತಿಷ್ಠಾಕಾಲೀನ ಎಂಬ ವಿಶೇಷಣವನ್ನು ನಿವೇಶ ಮಾಡಿದಂತೆ ಪ್ರತಿಷ್ಠಾ ಸಮಾನಾಧಿಕರಣ ಎಂಬ ವಿಶೇಷಣವನ್ನೂ ನಿವೇಶಮಾಡಬೇಕು. ಇಲ್ಲದಿದ್ದರೆ ಪೂಜ್ಯವಾದ ಪ್ರತಿಮೆಯ ಪ್ರತಿಷ್ಠಾಕಾಲದಲ್ಲಿಯೇ ಅಸ್ಪೃಶ್ಯಸ್ಪರ್ಶವಿರುವ ಪ್ರತಿಮಾಂತರದಲ್ಲಿ ಅಸ್ಪೃಶ್ಯಸ್ಪರ್ಶಪ್ರಾಗಭಾವವು ಬರುವುದಿಲ್ಲವಾದ್ದರಿಂದ ಯಾವತ್ ಪದದ ಅರ್ಥದಲ್ಲಿ ಆ ಅಭಾವವೂ ಸೇರಿರುವುದರಿಂದ ಪ್ರತಿಷ್ಠಿತವಾದ ಪ್ರತಿಮೆಗೂ ಅಪೂಜ್ಯತ್ವವು ಬರಲಿ ಎಂಬ ಆಪತ್ತಿಯಿದೆ.

## ಪ್ರತಿಷ್ಠಾಕಾಲೀನತ್ವವು ಅಭಾವದಲ್ಲಿ ವಿಶೇಷಣ

**ननु प्रतिष्ठोत्तरमपि पूज्यता न स्यात् । प्रतिष्ठापूर्वकालीना-स्पृश्यस्पर्शानां जाततया तत्प्रागभावाभावादित्यत आह प्रतिष्ठाकालीनेत्यभावविशेषणम् ।**

ಪ್ರತಿಷ್ಠಾ ಉತ್ತರಕಾಲದಲ್ಲಿಯೂ ಪೂಜ್ಯತ್ವವು ಬರದಿರಲಿ. ಏಕೆಂದರೆ ಪ್ರತಿಷ್ಠಾಪೂರ್ವ ಕಾಲೀನವಾದ ಅಸ್ಪೃಶ್ಯಸ್ಪರ್ಶಾದಿಗಳು ಉಂಟಾಗಿರುವುದರಿಂದ ಪ್ರಾಗಭಾವವು ಇಲ್ಲದೇ ಇರುವುದರಿಂದ ಯಾವದನಾದಿಸಂಸರ್ಗಾಭಾವಸಾಹಿತ್ಯವು ಬರುವುದಿಲ್ಲ ಎಂಬ ದೋಷವನ್ನು ಪರಿಹಾರಮಾಡುವುದಕ್ಕಾಗಿ ಪ್ರತಿಷ್ಠಾ ಕಾಲೀನತ್ವವನ್ನು ಅಭಾವ ವಿಶೇಷಣವನ್ನಾಗಿ ಕೊಟ್ಟಿದೆ.

## ಭಿನ್ನವಾದ ಪ್ರತಿಮೆಯು ಪೂಜ್ಯವಲ್ಲ

**नन्वेकस्पर्शानन्तरमग्रिमस्पर्शप्रागभाव- सत्त्वात् पूज्यता स्यादित्यत आह – यावदिति ।। 'आदि'पदमवयवि-विभागादिपरम् । स्फुटितप्रतिमाया अप्यपूज्यत्वात् । नन्वनादिसंसर्गपदमत्राकिञ्चित्करमिति चेत् । अत्राहुः ।**

ಯಾವತ್ ಪದವನ್ನು ಕೊಡದಿದ್ದರೆ ಒಂದು ಸ್ಪರ್ಶನವಾದ ನಂತರ ಮುಂದಿನ ಸ್ಪರ್ಶದ ಪ್ರಾಗಭಾವವಿರುವುದರಿಂದ ಪೂಜ್ಯತ್ವವು ಉಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಅದಕ್ಕಾಗಿ ಅಭಾವದಲ್ಲಿ ಯಾವತ್ತ್ವದ ವಿಶೇಷಣವನ್ನು ಕೊಡಬೇಕು. ಸ್ಪರ್ಶಾದಿ ಎಂಬಲ್ಲಿರುವ ಆದಿಪದದಿಂದ ಅವಯವ ವಿಭಾಗಾದಿಗಳನ್ನು ತೆಗೆದುಕೊಳ್ಳಬೇಕು. ಏಕೆಂದರೆ ಭಿನ್ನವಾದ ಪ್ರತಿಮೆಯು ಪೂಜ್ಯವಲ್ಲ. ಇಲ್ಲಿ ಅನಾದಿ ಪದ ಮತ್ತು ಸಂಸರ್ಗಪದಗಳು ವ್ಯರ್ಥವಾದವುಗಳು ಎಂಬ ಆಕ್ಷೇಪಕ್ಕೆ ಹೀಗೆ ಉತ್ತರವನ್ನು ಹೇಳುತ್ತಾರೆ.

## ಅನ್ಯೋನ್ಯಾಭಾವವನ್ನು ವ್ಯಾವೃತ್ತಿ ಮಾಡಲು ಸಂಸರ್ಗ ಪದ

**तावदभावसहितप्रतिष्ठाध्वंसस्य हेतुत्वे तावदभावा अपि हेतव इति ध्रुवम् । तथा चानादित्वानन्तर्भावे साद्यभावानामपि जनकत्वमिति बहूनां जनकत्वे गौरवमित्यल्पजनकत्वे लाघवेन सादिव्यावर्त्तनार्थमनादिपदोपादानम् । एवमन्योन्याभाव-व्यावर्त्तनार्थं संसर्गपदम् ।**

ಅನಾದಿ ಮತ್ತು ಸಂಸರ್ಗ ಎರಡು ಪದಗಳು ಇಲ್ಲದಿದ್ದರೆ ಯಾವದಭಾವಸಹಿತ ಪ್ರತಿಷ್ಠಾಧ್ವಂಸವು ಪ್ರಯೋಜಕವೆಂದು ಹೇಳಬೇಕು. ಯಾವದಭಾವಗಳಲ್ಲಿ ಅನಾದ್ಯಭಾವಗಳೂ ಸಾದ್ಯಭಾವಗಳೂ ಸೇರುತ್ತವೆ. ಸಾದ್ಯಭಾವಗಳಿಗೆ ಪ್ರಯೋಜಕತ್ವವನ್ನು ಅಂಗೀಕರಿಸಿದರೆ ಗೌರವ ಉಂಟಾಗುವುದರಿಂದ ಅಲ್ಪಕ್ಕೆ ಜನಕತ್ವವನ್ನು ಅಂಗೀಕರಿಸಿದರೆ ಲಾಘವವಿರುವುದರಿಂದ ಮತ್ತು ಬೇರೆ ಅನುಪಪತ್ತಿ ಇಲ್ಲದಿರುವುದರಿಂದ ಸಾದ್ಯಭಾವವನ್ನು ವ್ಯಾವೃತ್ತಿ ಮಾಡಲು ಅನಾದಿ ಪದವನ್ನು ನಿವೇಶಮಾದಿದೆ.

ಹಾಗೆಯೇ ಅನ್ಯೋನ್ಯಾಭಾವವನ್ನು ವ್ಯಾವೃತ್ತಿ ಮಾಡಲು ಸಂಸರ್ಗಪದವನ್ನು ನಿವೇಶಮಾಡಿದ ಎಂದು ಹೀಗೆ ಹೇಳುತ್ತಾರೆ.

## ಪ್ರತಿಷ್ಠಾಕಾಲೀನ ಎಂಬುದರ ಅರ್ಥ

**अन्ये तु प्रतिष्ठाकालीनत्वेन प्रतिष्ठोत्तरकालीनत्वं विवक्षितम्, तदपि स्पर्शादिविशेषणं न त्वभावविशेषणम् । एवं प्रतिमायामस्पृश्यस्पर्शे जातेपि तद्ध्वंसान्योन्याभावावादाय पूज्यतापत्तिः ।**

ಇನ್ನು ಕೆಲವರು ಪ್ರತಿಷ್ಠಾಕಾಲೀನ ಎಂದರೆ ಪ್ರತಿಷ್ಠೋತ್ತರ ಕಾಲೀನ ಎಂದು ಅರ್ಥ. ಪ್ರತಿಷ್ಠೋತ್ತರ ಕಾಲೀನತ್ವವು ಸಹ ಸ್ಪರ್ಶಾದಿಗಳಿಗೆ ವಿಶೇಷಣವೇ ಹೊರತು ಅಭಾವಕ್ಕೆ ವಿಶೇಷಣವಲ್ಲ. ಈಗಲೂ ಪ್ರತಿಮೆಯಲ್ಲಿ ಅಸ್ಪೃಶ್ಯಸ್ಪರ್ಶವು ಉಂಟಾದಾಗ ತದ್ಧ್ವಂಸ ಮತ್ತು ಅನ್ಯೋನ್ಯಾಭಾವಗಳ ಸಾಹಿತ್ಯವನ್ನು ತೆಗೆದುಕೊಂಡು ಪೂಜ್ಯತ್ವಾಪತ್ತಿ ಉಂಟಾಗುತ್ತದೆ. ಏಕೆಂದರೆ ಪ್ರತಿಷ್ಠೋತ್ತರ ಕಾಲೀನವಾದ ಯಾವದಸ್ಪೃಶ್ಯಸ್ಪರ್ಶಗಳ ಅಭಾವಗಳು ಅಲ್ಲಿ ಇದೆ. ಅನಾದಿಪದ ಮತ್ತು ಸಂಸರ್ಗಪದಗಳ ನಿವೇಶನ ಮಾಡುವುದರಿಂದ ಈ ದೋಷವು ವಾರಣೆಯಾಗುತ್ತದೆ.

## ಪ್ರತಿಮೆಯಲ್ಲಿ ಅಸ್ಪೃಶ್ಯತ್ವದ ಅನಾದ್ಯಭಾವವಿದೆಯೇ ?

**प्रतिष्ठोत्तरकालीनानां यावदस्पृश्यस्पर्शानामभावस्य तत्र सत्त्वात्, अनादिपदसंसर्गपदोपादाने तु नोक्तदोषः; तन्निष्ठास्पृश्यस्पर्श-व्यक्तेरेवानादिसंसर्गाभावस्य तत्रासत्त्वात्, अत्यन्ताभावस्य प्रतियोग्यसमानाधिकरणत्वात्, प्रागभावस्य प्रतियोगि तद्ध्वंसासमानकालीनत्वादित्याहुः ।**

ಆ ಪ್ರತಿಮೆಯಲ್ಲಿರುವ ಅಸ್ಪೃಶ್ಯಸ್ಪರ್ಶವ್ಯಕ್ತಿಯ ಅನಾದಿಸಂಸರ್ಗಾಭಾವವು ಅಲ್ಲಿ ಇಲ್ಲ. ಏಕೆಂದರೆ ಅನಾದಿ ಸಂಸರ್ಗಾಭಾವವೆಂದರೆ ಅತ್ಯಂತಾಭಾವವಾಗಬೇಕು ಅಥವಾ ಪ್ರಾಗಭಾವವಾಗಬೇಕು.

ಅತ್ಯಂತಾಭಾವವು ಪ್ರತಿಯೋಗ್ಯಸಮಾನಾಧಿಕರಣವಾದ್ದರಿಂದ ಅಸ್ಪೃಶ್ಯಸ್ಪರ್ಶ ವ್ಯಕ್ತಿಯು ಇರುವಲ್ಲಿ ಅದರ ಅತ್ಯಂತಾಭಾವವಿಲ್ಲ. ಪ್ರಾಗಭಾವವು ಪ್ರತಿಯೋಗಿ ಸಮಾನಾಧಿಕರಣ ವಾದರೂ ಪ್ರತಿಯೋಗಿತಧ್ವಂಸ ಸಮಾನಾಧಿಕರಣವಲ್ಲವಾದ್ದರಿಂದ ಅಸ್ಪೃಶ್ಯಸ್ಪರ್ಶ ವ್ಯಕ್ತಿ ಮತ್ತು ತದ್ಧ್ವಂಸವಿರುವಾಗ ಅಲ್ಲಿ ಪ್ರಾಗಭಾವವೂ ಇಲ್ಲ ಎಂದು ಹೇಳುತ್ತಾರೆ.

## ಸಮಯ ವಿಶೇಷದಲ್ಲಿ ಚರಣಸಂಯೋಗ ಧ್ವಂಸವು ಕಾರಣವಲ್ಲ

**समयविशेष इति ।। स च विशेषः कार्यैकोन्नयो यदनन्तरं पुष्पमित्यर्थः । नन्वेवं चरणसंयोगस्य कारणीभूताभाव प्रतियोगित्वेन प्रतिबन्धकत्वापत्तिः । न चेष्टापत्तिः, चिरसमय व्यापिसंयोगे सति पुष्पानुत्पत्त्यापत्तेरित्यपरितोषादाह – चरणेति ।।**

ಸಮಯ ವಿಶೇಷ ಇತಿ – ಅಂತಹ ಸಮಯವಿಶೇಷವನ್ನು ಕೇವಲ ಕಾರ್ಯದಿಂದಲೇ ಊಹಿಸಬೇಕಾದ್ದರಿಂದ ಯಾವ ಸಮಯದನಂತರ ಪುಷ್ಪ ಉಂಟಾಗುತ್ತದೋ ಅಂತಹ ಕಾಲವನ್ನು ತೆಗೆದುಕೊಳ್ಳಬೇಕು. ಚರಣಸಂಯೋಗ ಧ್ವಂಸವು ಕಾರಣವಾಗುವುದಾದರೆ ಚರಣಸಂಯೋಗವು ಕಾರಣೀಭೂತ ಅಭಾವಪ್ರತಿಯೋಗಿಯಾಗುವುದರಿಂದ ಪ್ರತಿಬಂಧಕವಾಗಲಿ ಎಂಬ ಆಪತ್ತಿಯು ಬರುತ್ತದೆ. ಅದಕ್ಕೆ ಇಷ್ಟಾಪತ್ತಿಯನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಚರಣಸಂಯೋಗವು ಚಿರಕಾಲವೃತ್ತಿಯಾದರೆ ಪುಷ್ಪಾನುತ್ಪತ್ತಿ ಆಪತ್ತಿಯು ಉಂಟಾಗುತ್ತದೆ ಎಂಬ ಅಸಮಾಧಾನದಿಂದ ಬೇರೆ ಪಕ್ಷವನ್ನು ಹೇಳುತ್ತಾರೆ – ಚರಣೇತಿ.

## ಅತೀಂದ್ರಿಯಶಕ್ತಿಯು ಅನಗತ್ಯ

**तत्संयोगेति ।। अत एवाम्लादिसंयोगो जलक्षालनेनापनीयत इति भावः । संस्कार एवेति ।। धर्मविशेष इत्यर्थः । अन्ये त्वित्यस्वरसोद्भावनम् । तद्बीजं तु दृष्टद्वारेणैवोपपत्तावदृष्ट-कल्पनानवकाश इति ।**

ತತ್ಸಂಯೋಗೇತಿ – ಆದ್ದರಿಂದಲೇ ಆಮ್ಲಾದಿ ಸಂಯೋಗವುಂಟಾದರೆ ಜಲಕ್ಷಾಲನದಿಂದ ಆದರ ಧ್ವಂಸವು ಉಂಟಾಗುತ್ತದೆ ಎಂದು ಅಭಿಪ್ರಾಯ. ಸಂಸ್ಕಾರ ಏವೇತಿ – ಇಲ್ಲಿ ಸಂಸ್ಕಾರವೆಂದರೆ ಧರ್ಮವಿಶೇಷ ಎಂದು ಅರ್ಥ. ಇಲ್ಲಿ ಅನ್ಯೇ ಎಂದು ಅಸ್ವಾರಸ್ಯವನ್ನು ಸೂಚಿಸಿದ್ದಾರೆ. ದೃಷ್ಟದ್ವಾರದಿಂದಲೇ ಕೂಡಿಸಲು ಬರುವಾಗ ಅತೀಂದ್ರಿಯವಾದ ಶಕ್ತಿಯನ್ನು ಕಲ್ಪನೆಮಾಡುವುದು ಅನಗತ್ಯವಾದುದು ಎಂಬುದು ಅಸ್ವಾರಸ್ಯಕ್ಕೆ ಕಾರಣ.

## ಪಾಕಜವಿಷಯದಲ್ಲಿ ಪ್ರಮಾಣ

**समयविशेषेति ।। न चैवं यागेऽप्यपूर्वं न कल्प्यमिति वाच्यम्। तत्र विधिना कार्यकारणभावबोधनात्, अत्र तु न तथेति भावः। पाकजविशेषे मानमाह – कार्येति ।।**

ಸಮಯವಿಶೇಷೇತಿ – ಹಾಗಾದರೆ ಸಮಯವಿಶೇಷಾವಚ್ಛಿನ್ನವಾದ ಯಾಗ ಧ್ವಂಸಕ್ಕೆ ಸ್ವರ್ಗಜನಕತ್ವವನ್ನು ಕಲ್ಪನೆ ಮಾಡಬಹುದಾದ್ದರಿಂದ ಯಾಗಸ್ಥಳದಲ್ಲಿಯೂ ಅಪೂರ್ವವನ್ನು ಕಲ್ಪನೆ ಮಾಡಬೇಕಾದ ಅಗತ್ಯವಿಲ್ಲ ಎಂಬ ಆಕ್ಷೇಪವು ಸರಿಯಲ್ಲ. ಯಾಗ ಸ್ಥಳದಲ್ಲಿ ವಿಧಿಯಿಂದಲೇ ಕಾರ್ಯಕಾರಣಭಾವವು ಬೋಧಿತವಾಗುವುದರಿಂದ ಅದನ್ನು ನಿರ್ವಾಹ ಮಾಡುವುದಕ್ಕೆ ಅಪೂರ್ವವನ್ನು ಕಲ್ಪನೆಮಾಡಬೇಕು. ಪ್ರಕೃತದಲ್ಲಿ ಅಂತಹ ವಿಧಿಯಿಲ್ಲ ಎಂದು ಅಭಿಪ್ರಾಯ. ಪಾಕಜ ವಿಶೇಷದಲ್ಲಿ ಪ್ರಮಾಣವನ್ನು ಹೇಳುತ್ತಾರೆ – ಕಾರ್ಯೇತಿ.

## ಆಧೇಯಶಕ್ತಿಯನ್ನು ಅಂಗೀಕರಿಸಬೇಕಲ್ಲವೇ?

**ननु बीजापूरादौ लाक्षाद्यवसेकात् कुसुमारुण्यं दृश्यते तत्र लाक्षारसस्य गलितत्वान्न कालान्तरीयकुसुमारुणिमहेतुत्वं न वा स्वल्पात् तस्मात् तादृगुत्कर्षस्तथा च तत्प्रयोजकत्वेनाधेयशक्तिः स्वीकार्येत्यत आह – एतेनेति ।।**

ಬೀಜಪೂರಾದಿಗಳಲ್ಲಿ (ಸೀಬೆಯ ಮರದಲ್ಲಿ) ಅರಗಿನ ರಸವನ್ನು ಲೇಪನೆ ಮಾಡುವುದರಿಂದ ಪುಷ್ಪಗಳಲ್ಲಿ ಕೆಂಪುಬಣ್ಣ ಉಂಟಾಗುತ್ತದೆ. ಅರಗಿನ ರಸವಾದರೂ (ಲಾಕ್ಷಾರಸ) ಬೇಗ

ಬಿದ್ದುಹೋಗುವುದರಿಂದ ಕಾಲಾಂತರದಲ್ಲಿ ಉಂಟಾಗುವ ಪುಷ್ಪಗಳ ಕೆಂಪುಬಣ್ಣಕ್ಕೆ ಅದು ಕಾರಣವಲ್ಲ. ಮತ್ತು ಲೇಪಮಾಡಿದ ಅಲ್ಪವಾದ ಲಾಕ್ಷಾರಸವು ಅಷ್ಟೊಂದು ಪುಷ್ಪಗಳಲ್ಲಿ ಕೆಂಪುಬಣ್ಣವನ್ನು ಉಂಟುಮಾಡಲು ಸಾಧ್ಯವಿಲ್ಲ. ಆದ್ದರಿಂದ ಅಲ್ಲಿ ಲಾಕ್ಷಾರಸದ ಲೇಪದಿಂದ ವೃಕ್ಷದಲ್ಲಿ ಆಧೇಯವಾದ ಒಂದು ಶಕ್ತಿಯನ್ನು ಅಂಗೀಕಾರ ಮಾಡಬೇಕು ಎಂಬ ಶಂಕೆಗೆ ಏತೇನ ಎಂದು ಉತ್ತರವನ್ನು ಹೇಳುತ್ತಾರೆ – ಏತೇನೇತಿ.

### ಕಂಚಿನಪಾತ್ರೆಯಲ್ಲಿ ಬಹುಕಾಲವಿಟ್ಟ ತುಪ್ಪವು ವಿಷ

**इत्यादीति ।। 'दशरात्रोषितं कांस्ये सर्प्पिश्चापि विषायते' इत्यादि पदग्राह्यम् । कठिनत्वं तु तोये प्रतिबद्धवत्त्वमित्यर्थः । तुलादौ तुलाविधिजन्यामाधेयशक्तिं जयादिप्रयोजिकामाशङ्क्य निराकरोति – तुलादाविति ।। तुल्यस्यतुलनीयस्य ।**

ಇತ್ಯಾದೀತಿ – ಇತ್ಯಾದಿ ಎಂಬಲ್ಲಿರುವ ಆದಿಪದದಿಂದ 'ದಶರಾತ್ರೋಷಿತಂ ಕಾಂಸ್ಯೇ ಸರ್ಪಿಶ್ಚಾಪಿ ವಿಷಾಯತೇ' (ಕಂಚಿನಪಾತ್ರೆಯಲ್ಲಿ ಹತ್ತುರಾತ್ರಿಗಳ ಕಾಲ ಇಟ್ಟ ತುಪ್ಪವೂ ವಿಷವಾಗುತ್ತದೆ) ಎಂಬುದನ್ನು ತೆಗೆದುಕೊಳ್ಳಬೇಕು. ಜಲದಲ್ಲಿ ಕಠಿಣತ್ವವೆಂದರೆ ಪ್ರತಿಬದ್ಧವತ್ವ ಎಂದು ಅರ್ಥ (ಹಿಮದ ಗಡ್ಡೆಯಲ್ಲಿ ಕಠಿಣತ್ವವಿರುತ್ತದೆ). ತುಲಾ ವಿಧಾನದಿಂದ ತುಲೆಯಲ್ಲಿ ಜಯಪರಾಜಯಗಳಿಗೆ ಪ್ರಯೋಜಕವಾದ ಒಂದು ಆಧೇಯ ಶಕ್ತಿ ಉಂಟಾಗುತ್ತದೆ ಎಂಬುದನ್ನು ನಿರಾಕರಿಸುತ್ತಾರೆ – ತುಲಾದಾವಿತಿ. ತುಲ್ಯಸ್ಯ ಎಂದರೆ ಯಾವ ಪುರುಷನನ್ನು ತೂಗಬೇಕೋ ಅವನ ಎಂದು ಅರ್ಥ.

### ನಿಷ್ಪಾಪ ಎಂಬ ಭ್ರಮೆಯಿಂದ ತುಲಾರೋಹಣ ಮಾಡಿದರೆ

**ननु तुलादिसामग्र्याः क्षणिकतया कालान्तरभाविजयादिजनकत्वानुपपत्तिः पापिनोऽपि सभाक्षोभादिना पापवत्त्वज्ञानाभावे निष्पापत्वभ्रमे वा भङ्गानुपपत्तिश्चेत्यरुचेराह – अथवेति ।। तया = तुलाधिरोहणसमग्र्या ।**

ತುಲಾದಿ ಸಾಮಗ್ರಿಯು ಕ್ಷಣಿಕವಾದುದರಿಂದ ಕಾಲಾಂತರದಲ್ಲಿ ಉಂಟಾಗುವ ಜಯಪರಾಜಯಗಳಿಗೆಕಾರಣವಾಗುವುದಿಲ್ಲ. ಮತ್ತುಪಾಪಿಯಾದವನೂಕೂಡಸಭಾಕ್ಷೋಭದಿಂದ ತನ್ನ ಪಾಪವನ್ನು ಮರೆತು ತಾನು ನಿಷ್ಪಾಪ ಎಂಬ ಭ್ರಮೆಯಿಂದ ತುಲಾರೋಹಣವನ್ನು ಮಾಡಿದರೆ ಅವನಮನವು ಆಗಲಾರದು ಎಂಬ ಅಸ್ವಾರಸ್ಯದಿಂದ ಅಥವಾ ಎಂದು ಪಕ್ಷಾಂತರವನ್ನು ಹೇಳುತ್ತಾರೆ – ಅಥವೇತಿ. ತಯಾ ಎಂದರೆ ತುಲಾಧಿರೋಹಣ ಸಾಮಗ್ರಿಯಿಂದ ಎಂದು ಅರ್ಥ.

## ಸನ್ನಿಧಿಪದದ ಅರ್ಥ

**ननु दृष्टद्वारेणैवोपपत्तावदृष्टकल्पनानुपपत्तिः, लौकिकक्रियाया अपीष्टानिष्टफलकत्वेन तुलाधिरोहणेन श्रुत्युन्नयनासम्भवश्चेत्यपरितोषादाह – यद्वेति ।। अयं पापी निष्पापो वा तुलारूढ इति ज्ञानमेव तज्जन्यसंस्कारो वाऽत्र सन्निधिरित्यर्थः । ताश्चेति ।। देवता इत्यर्थः । लिङ्गमिति ।। नमनोन्नमनादिकमित्यर्थः ।।**

ದೃಷ್ಟದ್ವಾರದಿಂದಲೇ ಎಲ್ಲವೂ ಕೂಡುವಾಗ ಅದೃಷ್ಟವನ್ನು ಕಲ್ಪನೆಮಾಡುವುದು ಸರಿಯಲ್ಲ. ಮತ್ತು ಲೌಕಿಕ ಕ್ರಿಯೆಯಿಂದಲೂ ಇಷ್ಟಾನಿಷ್ಟಫಲಗಳು ಉಂಟಾಗುವುದರಿಂದ ತುಲಾಧಿರೋಹಣದಿಂದ ಶ್ರುತಿಯನ್ನು ಅನುಮಾನಮಾಡಲು ಸಾಧ್ಯವಿಲ್ಲ ಎಂಬ ಅಸಮಾಧಾನದಿಂದ ಯದ್ವಾ ಎಂದು ಪಕ್ಷಾಂತರವನ್ನು ಹೇಳುತ್ತಾರೆ – ಯದ್ವೇತಿ. ಈ ತುಲಾರೋಹಣವನ್ನು ಮಾಡಿದವನು ಪಾಪಿ ಅಥವಾ ನಿಷ್ಪಾಪ ಎಂಬ ದೇವತೆಗಳ ಜ್ಞಾನವೇ ಅಥವಾ ಆ ಜ್ಞಾನಜನ್ಯವಾದ ಸಂಸ್ಕಾರವೇ ಸನ್ನಿಧಿ ಎಂಬ ಪದದ ಅರ್ಥ. ತಾಶ್ಚೇತಿ – ತಾಃ ಎಂದರೆ ದೇವತೆಗಳು ಎಂದು ಅರ್ಥ. ಲಿಂಗಮಿತಿ – ಲಿಂಗವೆಂದರೆ ಅವನಮನ ಮತ್ತು ಉನ್ನಮನಾದಿಗಳು ಎಂದು ಅರ್ಥ.

## ವ್ಯಭಿಚಾರದೋಷ

**स्वस्वेति ।। अत्र यत्र कार्यस्य घटादेरभावस्तत्र दण्डादेरभाव इति दैशिकी व्यापकता, कालिक्यां तु सामग्रीकाले व्यभिचारात्,**

**एवञ्च दण्डसद्भावेपि चक्राद्यभावेन कार्याभावे व्यभिचार इति तद्वारणाय कार्याभावं विशिनष्टि – 'सम्पत्तावि'त्यन्तेन ।।**

ಸ್ವಸ್ವೇತಿ – ಕಾರ್ಯಾಭಾವ ವ್ಯಾಪಕಾಭಾವ ಎಂಬಲ್ಲಿ ಎಲ್ಲಿ ಕಾರ್ಯವಾದ ಘಟಾದಿಗಳ ಅಭಾವವೋ ಅಲ್ಲಿ ದಂಡಾದಿಗಳ ಅಭಾವ ಎಂದು ದೈಶಿಕ ವ್ಯಾಪ್ತಿಯನ್ನು ಇಟ್ಟುಕೊಳ್ಳಬೇಕು. ಯದಾಕಾರ್ಯಸ್ಯ ಘಟಾದೇರಭಾವಃ ತದಾ ದಂಡಾದೇರಭಾವಃ ಎಂಬ ಕಾಲಿಕ ವ್ಯಾಪ್ತಿಯನ್ನು ಇಟ್ಟುಕೊಂಡರೆ ಘಟಸಾಮಗ್ರಿಕಾಲದಲ್ಲಿ ಘಟವಿಲ್ಲದಿರುವುದರಿಂದ ಘಟಾಭಾವವಿದ್ದರೂ ಘಟಸಾಮಗ್ರಿಯ ಅಭಾವವಿಲ್ಲದಿರುವುದರಿಂದ ಘಟಾಭಾವ ವ್ಯಾಪಕಾಭಾವ ಪ್ರತಿಯೋಗಿತ್ವವು ಸಾಮಗ್ರಿಗೆ ಬರುವುದಿಲ್ಲ ಎಂದು ವ್ಯಭಿಚಾರವು ಬರುತ್ತದೆ.

ಅದರಂತೆ ದಂಡವಿರುವಾಗ ಚಕ್ರಾಭಾವದಿಂದಲೇ ಘಟಾಭಾವ ಉಂಟಾಗುವ ಸ್ಥಳದಲ್ಲಿ ಘಟಾಭಾವ ವ್ಯಾಪಕಾಭಾವ ಪ್ರತಿಯೋಗಿತ್ವವು ದಂಡಕ್ಕೆ ಬರುವುದಿಲ್ಲವಾದುದರಿಂದ ವ್ಯಭಿಚಾರವು ಬರುತ್ತದೆ. ಆದಕ್ಕಾಗಿ ಸ್ವಸ್ವವ್ಯಾಪ್ಯೇತರ ಸಕಲಸಂಪತ್ತೌ ಎಂದು ವಿಶೇಷಣವನ್ನು ಕೊಟ್ಟಿದ್ದಾರೆ.

## ದಲಕೃತ್ಯವಿಚಾರ

**स्वेतरसकलसम्पत्ताविति कृतेऽप्रसिद्धिः, दण्डेतरसकल-मध्यपतितानां चक्रभ्रम्यादीनां सम्पत्तौ घटाभावाप्रसिद्धेरित्यत उक्तम् – स्वव्याप्येति ।। चक्रभ्रम्यादीनां च दण्डसमवधाननियतत्वेन दण्डव्याप्यतया तदितरसम्पत्तिकाल ीनकार्याभावप्रसिद्धेर्नोक्तदोषः ।**

ಸ್ವೇತರ ಸಕಲ ಸಂಪತ್ತೌ ಎಂದು ಇಷ್ಟೇ ಹೇಳಿದರೆ ಅಪ್ರಸಿದ್ಧಿಯು ಬರುತ್ತದೆ. ದಂಡೇತರ ಸಕಲ ಮಧ್ಯಪತಿತವಾದ ಚಕ್ರಭ್ರಮಿ ಮೊದಲಾದವುಗಳು ಇರುವಾಗ ಘಟಾಭಾವವು ಅಪ್ರಸಿದ್ಧವಾದುದರಿಂದ ಅಪ್ರಸಿದ್ಧಿ ನಿಬಂಧನವಾದ ಅವ್ಯಾಪ್ತಿಯು ಬರುತ್ತದೆ. ಅದನ್ನು ಪರಿಹಾರ ಮಾಡುವುದಕ್ಕಾಗಿ ಸ್ವವ್ಯಾಪ್ಯ ಎಂದೂ ವಿಶೇಷಣವನ್ನು ಸೇರಿಸಬೇಕು. ಚಕ್ರಭ್ರಮ್ಯಾದಿಗಳು ಇರುವಾಗ ದಂಡಸಮವಧಾನವು ಇದ್ದೇ ಇರುವುದರಿಂದ ಅವು ದಂಡವ್ಯಾಪ್ಯವಾಗುತ್ತವೆ. ತದಿತರ

ಸಂಪತ್ತಿಕಾಲದಲ್ಲಿ ಘಟರೂಪವಾದ ಕಾರ್ಯದ ಅಭಾವವು ಪ್ರಸಿದ್ಧವಾಗುವುದರಿಂದ ಹಿಂದೆ ಹೇಳಿದ ದೋಷವಿಲ್ಲ.

## ಕಾರ್ಯಾಭಾವವು ಅಪ್ರಸಿದ್ಧ

**एतेन यत्र स्वं स्वव्याप्यमप्यस्ति तत्रापि तत्सम्पत्तिरस्तीति तत्र कार्याभावाप्रसिद्धिरेवेत्यपास्तम्, क्वाचित्कतादृशाभावप्रसिद्ध्यैव व्यापकत्वनिर्वाहात् ।**

ಹೀಗೆ ಹೇಳುವುದರಿಂದ ಎಲ್ಲಿ ತಾನು ಮತ್ತು ತನ್ನ ವ್ಯಾಪ್ಯವು ಇರುತ್ತದೆಯೋ ಅಲ್ಲಿ ಸ್ವ-ಸ್ವವ್ಯಾಪ್ಯೇತರ ಸಂಪತ್ತಿಯು ಇದ್ದೇ ಇರುವುದರಿಂದ ಕಾರ್ಯಾಭಾವವು ಅಪ್ರಸಿದ್ಧವಾಗುತ್ತದೆ ಎಂಬುದು ನಿರಸ್ತವಾಯಿತು. ಎಲ್ಲಾದರೂ ಒಂದುಕಡೆ ಕಾರ್ಯಾಭಾವವು ಪ್ರಸಿದ್ಧವಾದರೂ ಕಾರಣಾಭಾವಕ್ಕೆ ತದ್ವ್ಯಾಪಕತ್ವವು ಕೂಡುವುದರಿಂದ ಒಂದು ಸ್ಥಳದಲ್ಲಿ ಕಾರ್ಯಾಭಾವವು ಅಪ್ರಸಿದ್ಧವಾದರೆ ವ್ಯಾಪಕತ್ವಕ್ಕೆ ಭಂಗವು ಬರುವುದಿಲ್ಲ.

## ಕಾರಣತ್ವಲಕ್ಷಣಕ್ಕೆ ಆತ್ಮಾಶ್ರಯದೋಷ

**ननु तदितरसकलपदं तदितरकारणपरं तदितरमात्रपरं वा? आद्ये आत्माश्रयः । अन्त्येऽसम्भवः । घटाद्युत्पत्तौ वेमादिसमवधानाभावादिति चेत् । न । कार्यप्रागभावव्याप्यप्रागभावप्रतियोगिसकलस्य विवक्षितत्वात् । कार्यनियतपूर्ववर्त्तिसकलस्य विवक्षितत्वाद्वा ।**

ಇನ್ನು ತದಿತರ ಸಕಲ ಎಂಬಲ್ಲಿ ತದಿತರ ಎಂಬ ಪದಕ್ಕೆ ತದಿತರ ಕಾರಣ ಎಂದು ಅರ್ಥವೋ ಅಥವಾ ಕೇವಲ ತದಿತರ ಎಂದು ಅರ್ಥವೋ? ತದಿತರ ಕಾರಣ ಎಂದು ಅರ್ಥವಾದರೆ ಕಾರಣತ್ವದ ಲಕ್ಷಣದಲ್ಲಿ ಕಾರಣತ್ವವು ಸೇರುವುದರಿಂದ ಆತ್ಮಾಶ್ರಯದೋಷವು ಬರುತ್ತದೆ. ತದಿತರ ಸಾಮಾನ್ಯಪರ ಎಂಬ ಎರಡನೆಯ ಪಕ್ಷದಲ್ಲಿ ಅಸಂಭವವು ಉಂಟಾಗುತ್ತದೆ. ಘಟೋತ್ಪತ್ತಿ ಸ್ಥಳದಲ್ಲಿ ದಂಡತದ್ವ್ಯಾಪ್ಯೇತರವಾದ ತುರೀವೇಮಾದಿಗಳ ಸಮವಧಾನವು ಇಲ್ಲವಾದ್ದರಿಂದ ಸ್ವಸ್ವವ್ಯಾಪ್ಯೇತರ

ಸಕಲ ಸಂಪತ್ತಿ ವಿಶಿಷ್ಟ ಕಾರ್ಯಾಭಾವವು ಒಂದುಕಡೆಯಲ್ಲಿಯೂ ಸಿದ್ಧವಾಗದಿರುವುದರಿಂದ ಅಸಂಭವ ದೋಷವು ಬರುತ್ತದೆ. ಈ ಪ್ರಶ್ನೆಗೆ ಕಾರ್ಯಪ್ರಾಗಭಾವವ್ಯಾಪ್ಯವಾದ ಪ್ರಾಗಭಾವ ಪ್ರತಿಯೋಗಿಯಾದ ಸಕಲ ಎಂದು ನಮ್ಮ ಅಭಿಪ್ರಾಯ ಎಂದು ಉತ್ತರ. ಅಥವಾ ಕಾರ್ಯನಿಯತಪೂರ್ವವೃತ್ತಿಯಾದ ಸಕಲ ಎಂದೂ ಹೇಳಬಹುದು.

## ಕಾರ್ಯತ್ವದ ಲಕ್ಷಣ

**कार्यत्वं च प्रागभावप्रतियोगित्वम् । न चान्यथासिद्धे दण्डरूपादावतिव्याप्तिः, तत्र स्वस्वव्याप्तेतरदण्डादि-सकलसम्पत्तौ कार्याभावाभावेनोक्तरूपाभावात् । वस्तुतो नान्यथासिद्धत्वमत्रापि देयम्, अतो नोक्तदोषः । अन्यथा कुलालपित्रादौ प्रसङ्गतादवस्थ्यात् । चक्रभ्रमादीनां चक्रव्याप्यत्ववत् कुलालादीनां तद्व्याप्यत्वात् ।**

ಕಾರ್ಯತ್ವ ಎಂದರೆ ಪ್ರಾಗಭಾವ ಪ್ರತಿಯೋಗಿತ್ವರೂಪವಾದುದು. ಅದರಲ್ಲಿ ಕಾರಣತ್ವಕ್ಕೆ ಪ್ರವೇಶವಿಲ್ಲವಾದ್ದರಿಂದ ಆತಾಶ್ರಯದೋಷವಿಲ್ಲ ಹಾಗಾದರೂ ಅನ್ಯಥಾಸಿದ್ಧವಾದ ದಂಡರೂಪಾದಿಗಳಲ್ಲಿ ಅತಿವ್ಯಾಪ್ತಿಯು ಬರುತ್ತದೆ. ಅಲ್ಲಿ ದಂಡರೂಪ ತದ್ವ್ಯಾಪ್ಯೇತರ ದಂಡಾದಿ ಸಕಲ ಸಂಪತ್ತಿ ಇರುವಾಗ ಘಟವು ಉತ್ಪತ್ತಿಯಾಗುವ ಕಾರಣ ಘಟಾಭಾವವು ಇರುವುದಿಲ್ಲ. ವಾಸ್ತವಿಕವಾಗಿ ಕಾರಣ ಲಕ್ಷಣದಲ್ಲಿ ಅನನ್ಯಥಾಸಿದ್ಧತ್ವ ವಿಶೇಷಣವನ್ನು ಕೊಡಬೇಕು. ಆದ್ದರಿಂದ ದಂಡರೂಪಾದಿಗಳಲ್ಲಿ ಅತಿವ್ಯಾಪ್ತಿ ಇಲ್ಲ. ಇಲ್ಲದಿದ್ದರೆ ಕುಲಾಲ ಪಿತೃವಿನಲ್ಲಿ ಅತಿವ್ಯಾಪ್ತಿಯು ಬರುತ್ತದೆ. ಚಕ್ರಭ್ರಮ್ಯಾದಿಗಳು ಚಕ್ರವ್ಯಾಪ್ಯವಾದಂತೆ ಕುಲಾಲನೂ ಸಹ ಪಿತೃವ್ಯಾಪ್ಯನಾದ್ದರಿಂದ ಉಕ್ತಲಕ್ಷಣವು ಕುಲಾಲಪಿತೃವಿನಲ್ಲಿ ಬರುವುದರಿಂದ ಅತಿವ್ಯಾಪ್ತಿಯು ಬರುತ್ತದೆ.

## ಕೆಲವರ ಪ್ರಕಾರ ಕಾರಣಸಾಮಾನ್ಯಲಕ್ಷಣ

**यत्त्विदं कारणसामान्यलक्षणं तथा च कुलालपितृत्वेनान्यथा-सिद्धत्वेपि कुलालत्वेन तस्यापि घटजनकतयाऽति-**

**व्याप्त्यभावः । न च कुलालपितृत्वेन जनकतापत्तिः । यस्य कार्याभावव्यापकाभावप्रतियोगित्वं तस्य हेतुत्वमित्येव लक्षणार्थत्वादिति । तन्न ।**

ಕೆಲವರು ಇದು ಕಾರಣ ಸಾಮಾನ್ಯಕ್ಕೆ ಲಕ್ಷಣ. ಕುಲಾಲ ಪಿತೃವು ಒಂದು ಘಟವನ್ನು ಕುರಿತು ಅನ್ಯಥಾ ಸಿದ್ಧನಾದರೂ ಅವನಲ್ಲಿಯೂ ಕುಲಾಲತ್ವವಿರುವುದರಿಂದ ಕುಲಾಲತ್ವೇನ ಘಟಜನಕತ್ವವು ಅವನಲ್ಲಿಯೂ ಇಷ್ಟವೇ ಆಗಿರುವುದರಿಂದ ಅತಿವ್ಯಾಪ್ತಿ ಇಲ್ಲ. ಕುಲಾಲ ಪಿತೃವಿಗೆ ಕುಲಾಲತ್ವೇನ ಜನಕತ್ವವಿದ್ದರೂ ಕುಲಾಲಪಿತೃತ್ವೇನ ಕೂಡ ಜನಕತ್ವವು ಬರಲಿ ಎಂಬ ಆಪತ್ತಿ ಇಲ್ಲ. ಯಾವುದಕ್ಕೆ ಕಾರ್ಯಾಭಾವ ವ್ಯಾಪಕಾಭಾವ ಪ್ರತಿಯೋಗಿತ್ವವಿದೆಯೋ ಅದಕ್ಕೆ ಕಾರಣತ್ವವಿದೆ ಎಂದು ಇಷ್ಟೇ ಲಕ್ಷಣವಿರುವುದರಿಂದ ಕಾರಣತ್ವವು ಕುಲಾಲ ಪಿತೃವಿಗೂ ಇಷ್ಟವಾಗಿರುವುದರಿಂದ ಕಿಂಚಿದ್ರೂಪೇಣ ಕಾರಣತ್ವವು ಬರಲಿ ಎಂದು ಆಪಾದನೆ ಮಾಡಲು ಸಾಧ್ಯವಿಲ್ಲ ಎಂದು ಹೇಳುತ್ತಾರೆ. ಆದರೆ ಅದು ಸರಿಯಲ್ಲ.

## ಅತಿವ್ಯಾಪ್ತ್ಯಾದಿದೋಷಗಳು

**दण्डचक्रादिजनके तथाप्यतिव्याप्त्यपरिहारात् । न हि तज्जनके दण्डावयवादौ दण्डत्वादिसम्भवः । कुलालमात्रादौ प्रसङ्गतादवस्त्याच्च ।**

ಏಕೆಂದರೆ ಆಗಲೂ ದಂಡಚಕ್ರಾದಿ ಜನಕವಾದ ದಂಡಾವಯವಾದಿಗಳಲ್ಲಿ ಅತಿವ್ಯಾಪ್ತಿಯು ಬರುತ್ತದೆ. ಸ್ವಪದದಿಂದ ದಂಡಾವಯವವನ್ನು ತೆಗೆದುಕೊಂಡು ಸ್ವವ್ಯಾಪ್ಯೇತರ ಸಕಲ ಸಂಪತ್ತೌ ಘಟಾಭಾವ ವ್ಯಾಪಕಾಭಾವ ಪ್ರತಿಯೋಗಿತ್ವವು ದಂಡಾವಯವಾದಿಗಳಲ್ಲಿ ಬರುವುದರಿಂದ ಅತಿವ್ಯಾಪ್ತಿಯು ಬರುತ್ತದೆ. ದಂಡಾವಯವವು ಲಕ್ಷ್ಯವೇ ಆಗಿದೆ ಎಂದು ಹೇಳುವಂತಿಲ್ಲ. ದಂಡತ್ವಾಶ್ರಯವು ಲಕ್ಷವಾಗಿದೆಯೇ ಹೊರತು, ದಂಡತ್ವಾಶ್ರಯವಲ್ಲದಿರುವ ದಂಡಾವಯವವು ಲಕ್ಷ್ಯವಾಗುವುದಿಲ್ಲ. ಅದರಂತೆ ಕುಲಾಲ ಮಾತ್ರವಿನಲ್ಲಿಯೂ ಅತಿವ್ಯಾಪ್ತಿಯು ಬರುತ್ತದೆ. ಅಲ್ಲಿ ಘಟಜನಕತ್ವವು ಇಲ್ಲದಿರುವುದರಿಂದ ಮತ್ತು ಕುಲಾಲನಿಗೆ ಕುಲಾಲ ಮಾತ್ರವ್ಯಾಪ್ಯತ್ವವು ಇರುವುದರಿಂದ ಅತಿವ್ಯಾಪ್ತಿಯು ಬರುತ್ತದೆ.

## ಅವ್ಯಾಪ್ತಿಯ ಪರಿಹಾರ

**ननु स्वस्वव्याप्येतरसकलसम्पत्तौ स्वसम्पत्तौ च स्वव्याप्याभावप्रयुक्तकार्याभावव्यापकत्वाभावात् स्वाभावस्यायुक्तमिदमिति चेन्न। तत्सम्पत्तिकालीनकार्याभाव-व्यापकाभावप्रतियोगिस्वस्वव्याप्यान्यतरकत्वस्य विवक्षितत्वात् ।**

ಇಷ್ಟು ಹೇಳಿದರೂ ಸ್ವಸ್ವವ್ಯಾಪ್ಯೇತರ ಸಕಲ ಸಂಪತ್ತಿಯು ಇರುವಾಗ ಮತ್ತು ಸ್ವಸಂಪತ್ತಿಯು ಇರುವಾಗ ಕಾರ್ಯವು ಉಂಟಾಗುವುದರಿಂದ ಸ್ವವ್ಯಾಪ್ಯಾಭಾವ ಪ್ರಯುಕ್ತ ಕಾರ್ಯಾಭಾವ ವ್ಯಾಪಕತ್ವವು ಸ್ವಾಭಾವಕ್ಕೆ ಬರುವುದಿಲ್ಲವಾದ್ದರಿಂದ ಅವ್ಯಾಪ್ತಿಯು ಬರುತ್ತದೆ. ಆದ್ದರಿಂದ ಈ ಲಕ್ಷಣವು ಅಯುಕ್ತವಾದುದು ಎಂಬ ಆಕ್ಷೇಪವು ಬಂದರೆ ಸ್ವ-ಸ್ವವ್ಯಾಪ್ಯೇತರ ಸಂಪತ್ತಿ ಕಾಲೀನ ಕಾರ್ಯಾಭಾವ ವ್ಯಾಪಕಾಭಾವ ಪ್ರತಿಯೋಗಿ ಸ್ವಸ್ವವ್ಯಾಪ್ಯ ಅನ್ಯತರಕತ್ವವನ್ನು ಲಕ್ಷಣ ಎಂದು ಹೇಳುತ್ತೇವೆ.

ಆ ಸ್ಥಳದಲ್ಲಿ ಸ್ವಾಭಾವವು ಬರದಿರುವುದರಿಂದ ಕಾರ್ಯಾಭಾವವು ಬರದಿದ್ದರೂ ಸ್ವವ್ಯಾಪ್ಯಾಭಾವ ಬರುವುದರಿಂದ ಕಾರ್ಯಾಭಾವ ವ್ಯಾಪಕ ಅಭಾವ ಪ್ರತಿಯೋಗಿ ಸ್ವವ್ಯಾಪ್ಯಕತ್ವವು ಇರುವುದರಿಂದ ಕಾರ್ಯಾಭಾವ ವ್ಯಾಪಕಾಭಾವ ಪ್ರತಿಯೋಗಿ ಸ್ವಸ್ವವ್ಯಾಪ್ಯ ಅನ್ಯತರಕತ್ವ ರೂಪವಾದ ಲಕ್ಷಣವು ಬರುವುದರಿಂದ ಅವ್ಯಾಪ್ತಿ ಇಲ್ಲ.

## ಸ್ವಾಸಮವಧಾನಕಾಲೀನತ್ವವನ್ನು ವಿಶೇಷಣ ಮಾಡಿದಾಗ

**यत्तु स्वासमवधानकालीनत्वमपि कार्याभावविशेषणम् अतो नोक्त दोष इति । तन्न । आत्मादिहेतावव्याप्तेः ।**

ಕೆಲವರು ಈ ದೋಷವನ್ನು ಪರಿಹಾರ ಮಾಡಲು ಸ್ವಾಸಮವಧಾನ ಕಾಲೀನತ್ವವನ್ನು (ಸ್ವಸಂಪತ್ತಿಯನ್ನು ವಾರಣೆ ಮಾಡುವುದಕ್ಕಾಗಿ) ಕಾರ್ಯಾಭಾವದಲ್ಲಿ ವಿಶೇಷಣವಾಗಿ ಕೊಡಬೇಕು.

ಆದ್ದರಿಂದ ಅವ್ಯಾಪ್ತಿಯು ಬರುವುದಿಲ್ಲ ಎಂದು ಹೇಳುತ್ತಾರೆ. ಅದು ಸರಿಯಲ್ಲ. ಆತ್ಮನಿಗೂ ಹೇತುತ್ವವಿರುವುದರಿಂದ ಆತ್ಮ ಅಸಮವಧಾನ ಕಾಲವು ಅಪ್ರಸಿದ್ಧವಾದುದರಿಂದ ಹೇತುವಾದ ಆತ್ಮನಲ್ಲಿ ಅವ್ಯಾಪ್ತಿಯು ಬರುತ್ತದೆ.

## ಆತ್ಮನಲ್ಲಿ ಅವ್ಯಾಪ್ತಿ

**नन्वेवमप्यात्मादिहेतावव्याप्तिरेव कार्याभाववति देशे काले वा तदभावाभावादिति चेन्न । तत्समवधानसत्त्वेपि तदभावस्य केवलान्वयित्वेन तत्रापि तत्सत्वात् ।**

ಇನ್ನು ಸ್ವ ಅಸಮವಧಾನ ಕಾಲೀನತ್ವವನ್ನು ಕೊಡದಿದ್ದರೂ ಆತ್ಮನಲ್ಲಿ ಅವ್ಯಾಪ್ತಿಯು ಬಂದೇ ಬರುತ್ತದೆ. ಏಕೆಂದರೆ ಉಕ್ತವಿಶಿಷ್ಟವಾದ ಕಾರ್ಯಾಭಾವವು ಇರುವ ದೇಶದಲ್ಲಾಗಲೀ ಅಥವಾ ಕಾಲದಲ್ಲಾಗಲೀ ಆತ್ಮಾಭಾವವು ಇಲ್ಲದಿರುವುದರಿಂದ ತಾದೃಶ ಅಭಾವ ಪ್ರತಿಯೋಗಿತ್ವವು ಆತ್ಮನಲ್ಲಿ ಬರುವುದಿಲ್ಲ. ಆದರೆ ಇದೂ ಸರಿಯಲ್ಲ. ಆತ್ಮ ಸಮವಧಾನವಿದ್ದರೂ ಆತ್ಮಾಭಾವವು ಕೇವಲಾನ್ವಯಿಯಾದ್ದರಿಂದ ಆ ಸ್ಥಳದಲ್ಲಿ ಆತ್ಮಾಭಾವವು ಇದ್ದೇ ಇರುವುದರಿಂದ ತಾದೃಶ ಅಭಾವ ಪ್ರತಿಯೋಗಿತ್ವವು ಆತ್ಮನಿಗೆ ಬರುತ್ತದೆ. ಆದ್ದರಿಂದ ಅವ್ಯಾಪ್ತಿಯು ಬರುವುದಿಲ್ಲ. ಮತ್ತು ಆತ್ಮ ತದ್ವ್ಯಾಪ್ಯ ಅನ್ಯತರ ಅಭಾವಕ್ಕೆ ಕಾರ್ಯಾಭಾವ ವ್ಯಾಪಕತ್ವವು ಬಂದರೆ ಸಾಕು. ಪ್ರಕೃತ ಸ್ಥಳದಲ್ಲಿ ಆತ್ಮಾಭಾವ ಇರುವ ವಿಷಯದಲ್ಲಿ ವಿವಾದವನ್ನು ಮಾಡಿದರೂ ಆತ್ಮವ್ಯಾಪ್ಯಾಭಾವವು ಬರುವುದರಿಂದ ಕಾರ್ಯಾಭಾವ ವ್ಯಾಪಕಾಭಾವ ಪ್ರತಿಯೋಗಿ ಅನ್ಯತರಕತ್ವರೂಪವಾದ ಲಕ್ಷಣವು ಬರುವುದರಿಂದ ಅವ್ಯಾಪ್ತಿ ಇಲ್ಲ.

## ಅನನ್ಯಥಾಸಿದ್ಧತ್ವವಿಶೇಷಣದಿಂದಲೇ ಅವ್ಯಾಪ್ತಿಯ ಪರಿಹಾರ

**न चैवमाकाशस्य घटादिहेतुतापत्तिः । अनन्यथासिद्धत्वेनैव वारणात् । तद्व्याप्तेतरसकलसम्पत्तौ घटाभावाप्रसिद्धेश्च । आत्मादौ च स्वव्याप्यहेत्वन्तर- प्रत्यासत्त्यादिव्यतिरेकप्रयुक्त कार्याभावप्रसिद्धिसम्भवात् । अत एवात्मनः कपालगोचर- प्रत्यक्षादिसम्बन्धेन घटकारणत्वम् ।**

ಹಾಗಾದರೆ ಆಕಾಶಕ್ಕೆ ಘಟಾದಿ ಕಾರಣತ್ವವು ಬರಲಿ ಎಂಬ ಆಪತ್ತಿ ಇಲ್ಲ. ಅನನ್ಯಥಾಸಿದ್ಧತ್ವ ವಿಶೇಷಣದಿಂದಲೇ ಆಕಾಶವು ವಾರಣೆಯಾಗುತ್ತದೆ. ಆಕಾಶವ್ಯಾಪ್ಯೇತರ ಸಕಲ ಸಂಪತ್ತಿ ಇರುವಾಗ ಘಟಾಭಾವವು ಅಪ್ರಸಿದ್ಧವಾದುದರಿಂದ ಸ್ವಪದದಿಂದ ಆಕಾಶವನ್ನು ತೆಗೆದುಕೊಳ್ಳಲು ಬರುವುದಿಲ್ಲ. ಆದ್ದರಿಂದ ಘಟವನ್ನು ಕುರಿತು ಆಕಾಶಕ್ಕೆ ಕಾರಣತ್ವವು ಬರಲಿ ಎಂದು ಆಪಾದಿಸಲು ಬರುವುದಿಲ್ಲ. ಆತ್ಮಸ್ಥಳದಲ್ಲಿ ಮಾತ್ರ ಸ್ವಪದದಿಂದ ಆತ್ಮವನ್ನು ತೆಗೆದುಕೊಂಡರೆ ಸ್ವವ್ಯಾಪ್ಯವಾದ ಹೇತ್ವಂತರವೆಂದರೆ ಪ್ರತ್ಯಾಸತ್ತಿರೂಪವಾದುದು. ತದ್ವ್ಯತಿರೇಕ ಪ್ರಯುಕ್ತವಾದ ಕಾರ್ಯವ್ಯತಿರೇಕವು ಪ್ರಸಿದ್ಧವಾಗುವುದರಿಂದ ಅವ್ಯಾಪ್ತಿ ಬರುವುದಿಲ್ಲ. ಆದ್ದರಿಂದಲೇ ಆತ್ಮನಿಗೆ ಕಪಾಲ ವಿಷಯಕ ಪ್ರತ್ಯಕ್ಷಾದಿಸಂಬಂಧೇನ ಘಟಕಾರಣತ್ವವು ಕೂಡುತ್ತದೆ.

## ಕಾರ್ಯಾಭಾವವ್ಯಾಪಕಾಭಾವಪ್ರತಿಯೋಗಿತ್ವದ ವ್ಯಾಖ್ಯಾನ

**यत्तु यदवच्छिन्नाभावव्यापकाभावप्रतियोगितावच्छेदकावच्छिन्नस्य हेतुत्वरूपत्वम् । अस्ति चात्मत्वावच्छिन्नभावस्य ज्ञानाभावाव्यापकत्वेऽपि गुणत्वावच्छिन्नाभावं प्रति समवायित्वावच्छिन्नाभावस्य व्यापकत्वम् । अस्ति च दिक्कालयोस्तत्त्वावच्छिन्नाभावस्याव्यापकत्वेऽप्याधाराधेयभाववत्त्वेन तदभावस्यापि कार्याभावव्यापकत्वमिति । तच्चिन्त्यम्।**

ಕೆಲವರು ಕಾರ್ಯಾಭಾವ ವ್ಯಾಪಕಾಭಾವ ಪ್ರತಿಯೋಗಿತ್ವಂ ಎನ್ನುವುದಕ್ಕೆ ಯದವಚ್ಛಿನ್ನಾಭಾವ ವ್ಯಾಪಕಾಭಾವಪ್ರತಿಯೋಗಿತಾವಚ್ಛೇದಕಾವಚ್ಛಿನ್ನತ್ವಂಕಾರಣತ್ವಂಎಂದುಅರ್ಥವನ್ನುಮಾಡುತ್ತಾರೆ. ಆತ್ಮತ್ವಾವಚ್ಛಿನ್ನಾಭಾವಕ್ಕೆ ಆತ್ಮನು ವಿಭುವಾದ್ದರಿಂದ ಜ್ಞಾನಾಭಾವ ವ್ಯಾಪಕತ್ವವಿಲ್ಲದಿದ್ದರೂ ಗುಣತ್ವಾವಚ್ಛಿನ್ನ ಅಭಾವವನ್ನು ಕುರಿತು ಸಮವಾಯಿತ್ವಾವಚ್ಛಿನ್ನಾಭಾವವು ವ್ಯಾಪಕವಾದುದರಿಂದಲೇ ಸಮವಾಯಿತ್ವಾವಚ್ಛಿನ್ನಕ್ಕೆ ಕಾರಣತ್ವವು ಸಿದ್ಧವಾಗುವುದರಿಂದ ಆತ್ಮನಿಗೆ ಕಾರಣತ್ವವು ಸಿದ್ಧವಾಗುತ್ತದೆ. ದಿಕ್ಕಾಲಗಳ ಸ್ಥಳದಲ್ಲಿ ದಿಕ್ತ್ವಾವಚ್ಛಿನ್ನಾಭಾವ ಮತ್ತು ಕಾಲತ್ವಾವಚ್ಛಿನ್ನಾಭಾವಗಳು ಕಾರ್ಯಾಭಾವ ವ್ಯಾಪಕವಾಗದಿದ್ದರೂ ಆಧಾರಾಧೇಯಭಾವವತ್ತ್ವೇನ ದಿಗಭಾವಾದಿಗಳೂ ಕಾರ್ಯಾಭಾವ

ವ್ಯಾಪಕವಾಗುವುದರಿಂದ ಅವ್ಯಾಪ್ತಿಯಿಲ್ಲ (ಕಾರ್ಯಾಭಾವ ಸ್ಥಳದಲ್ಲಿ ಆಧಾರತ್ವೇನ ಕಾಲವಿದ್ದರೂ ಆಧೇಯತ್ವೇನ ಕಾಲಾಭಾವವು ಬರುತ್ತದೆ. ಅದರಂತೆ ಆಧೇಯತ್ವೇನ ದಿಗಭಾವವು ಬರುವುದರಿಂದ ಹೀಗೆ ಹೇಳಬಹುದು). ಆದರೆ ಈ ಪರಿಹಾರವು ಸರಿಯಲ್ಲ.

## ಆತ್ಮನಿಗೆ ಕಾರಣತ್ವವು ಉಪಪನ್ನ

**एकघटसत्त्वे घटत्वावच्छिन्नाभावाभाववदात्मरूपसमवायिसत्त्वे समवायित्वावच्छिन्नाभावासम्भवात् । यदि च केवलान्वयितया तदभावस्तदा आत्मत्वावच्छिन्नाभावोऽपि सुलभ एव ।**

ಒಂದು ಘಟವಿರುವಾಗ ಹೇಗೆ ಘಟತ್ವಾವಚ್ಛಿನ್ನಾಭಾವವು ಬರುವುದಿಲ್ಲವೋ ಅದರಂತೆ ಆತ್ಮನೂ ಸಮವಾಯಿಯಾದ್ದರಿಂದ ಆತ್ಮನಿರುವಾಗ ಸಮವಾಯಿತ್ವಾವಚ್ಛಿನ್ನಾಭಾವವು ಬರುವುದಿಲ್ಲ. ಆದ್ದರಿಂದ ಗುಣತ್ವಾವಚ್ಛಿನ್ನ ಅಭಾವವನ್ನು ಕುರಿತು ಸಮವಾಯಿತ್ವಾವಚ್ಛಿನ್ನಾಭಾವವು ವ್ಯಾಪಕವಾದುದರಿಂದ ಆತ್ಮನಿಗೆ ಕಾರಣತ್ವವು ಉಪಪನ್ನವಾಗುತ್ತದೆ ಎಂದು ಹೇಳಬಾರದು. ಆತ್ಮಾಭಾವವು ಕೇವಲಾನ್ವಯಿಯಾದುದರಿಂದ ಸಮವಾಯಿಯಾದ ಆತ್ಮನಿದ್ದರೂ ಸಮವಾಯಿತ್ವಾವಚ್ಛಿನ್ನಾಭಾವವನ್ನು ಹೇಳಬಹುದು ಎಂದು ಹೇಳುವುದಾದರೆ ಆಗ ಆತ್ಮತ್ವಾವಚ್ಛಿನ್ನಾಭಾವವನ್ನೇ ಹೇಳಿ ಆತ್ಮನಿಗೆ ಕಾರಣತ್ವವನ್ನು ಕೂಡಿಸಬಹುದು. ಸಮವಾಯಿತ್ವಾವಚ್ಛಿನ್ನಾಭಾವವನ್ನು ಹೇಳಬೇಕಾದುದಿಲ್ಲ ಎಂದು ಉತ್ತರ.

## ಆತ್ಮನಲ್ಲಿ ಅವ್ಯಾಪ್ತಿ ಇಲ್ಲ

**केचित्तु जन्यगुणमात्रं प्रति समवायितया कारणत्वेन तत्रापि तज्जातीयतयोक्तलक्षणसत्त्वादित्याहुः । तदपि चिन्त्यम्। उक्तरीत्या समवायित्वस्य कार्याभावव्यापकाभावप्रतियोगितावच्छेदकतया समवायित्वेन हेतुत्वमित्येव न स्यात् ।**

ಕೆಲವರು ಜನ್ಯಗುಣಮಾತ್ರವನ್ನು ಕುರಿತು ಸಮವಾಯಿತ್ವೇನ ಕಾರಣತ್ವವನ್ನು ಒಪ್ಪಿ ಪ್ರಕೃತಸ್ಥಳದಲ್ಲಿಯೂ ಕೂಡ ಸಮವಾಯಿಯ ಜಾತೀಯವು ಇರುವುದರಿಂದ ಆತ್ಮನಲ್ಲಿ ಅವ್ಯಾಪ್ತಿಯು ಬರುವುದಿಲ್ಲ ಎಂದು ಹೇಳುತ್ತಾರೆ. ಆದರೆ ಅದು ಸರಿಯಲ್ಲ. ಹಿಂದೆ ಹೇಳಿದ ರೀತಿಯಲ್ಲಿ ಸಮವಾಯಿತ್ವಕ್ಕೆ ಕಾರ್ಯಾಭಾವ ವ್ಯಾಪಕಾಭಾವ ಪ್ರತಿಯೋಗಿತಾವಚ್ಛೇದಕತ್ವವೇ ಬರುವುದಿಲ್ಲವಾದ್ದರಿಂದ ಸಮವಾಯಿತ್ವೇನ ಹೇತುತ್ವವನ್ನು ಅಂಗೀಕರಿಸುವುದೇ ಅಯುಕ್ತವಾಗುತ್ತದೆ.

## ಗುಣಾದಿಗಳಿಗೂ ಹೇತುತ್ವ ಬರಲಿ

**अन्यथा प्रमेयत्वेनैव हेतुत्वापत्तौ तज्जातीयतया गुणादावति-व्याप्त्यापत्तेः ।**

ಸಮವಾಯಿತ್ವಕ್ಕೆ ಪ್ರತಿಯೋಗಿತಾವಚ್ಛೇದಕತ್ವವು ಬರದಿದ್ದರೂ ಸಮವಾಯಿತ್ವವನ್ನು ಕಾರಣತಾವಚ್ಛೇದಕವೆಂದು ಅಂಗೀಕರಿಸಿ ಸಮವಾಯಿತ್ವೇನ ಕಾರಣತ್ವವನ್ನು ಹೇಳುವುದಾದರೆ ಕಾರ್ಯಾಭಾವಾಧಿಕರಣದಲ್ಲಿ ಪ್ರಮೇಯತ್ವಾವಚ್ಛಿನ್ನಾಭಾವವು ಬರುವುದಿಲ್ಲವಾದ್ದರಿಂದ ಪ್ರಮೇಯತ್ವಕ್ಕೆ ಕಾರ್ಯಾಭಾವವ್ಯಾಪಕಾಭಾವ ಪ್ರತಿಯೋಗಿತಾವಚ್ಛೇದಕತ್ವವು ಇಲ್ಲದಿದ್ದರೂ ಪ್ರಮೇಯತ್ವೇನ ಆತ್ಮಕ್ಕೆ ಹೇತುತ್ವವನ್ನು ಅಂಗೀಕಾರ ಮಾಡಿ ಅಂತಹ ಪ್ರಮೇಯತ್ವವುಳ್ಳ ಗುಣಾದಿಗಳಿಗೂ ಜ್ಞಾನವನ್ನು ಕುರಿತು ಹೇತುತ್ವವು ಉಂಟಾಗಲಿ ಎಂದು ಗುಣಾದಿಗಳಲ್ಲಿ ಅತಿವ್ಯಾಪ್ತಿ ಉಂಟಾಗುತ್ತದೆ.

ಸಮವಾಯಿಕಾರಣತ್ವವು ದ್ರವ್ಯಕ್ಕೆ ಮಾತ್ರ ಇರುವುದರಿಂದ ಜ್ಞಾನವನ್ನು ಕುರಿತು ಗುಣವು ಎಂದೂ ಸಮವಾಯಿಕಾರಣವಲ್ಲ. ಇಲ್ಲಿ ಪ್ರಕೃತವಾದ ಕಾರಣತ್ವವು ಸಮವಾಯಿ ಕಾರಣತ್ವರೂಪವಾದುದರಿಂದ ಈ ಆಪತ್ತಿಯು ಬರುತ್ತದೆ.

## ಪ್ರಮೇಯತ್ವಾದಿಗಳಲ್ಲಿ ಅವ್ಯಾಪ್ತಿ ಇಲ್ಲ

**अत एव प्रमेयत्वादौ सामान्यप्रत्यासत्तिकरणे अव्याप्तिः, व्यतिरेकाप्रसिद्धेरित्यपास्तम् । तत्रापि स्वव्याप्यव्यतिरेक-**

**प्रयुक्तकार्याभावप्रसिद्धिसम्भवेन अन्यतरत्वगर्भलक्षणसत्त्वात्। अन्यथा स्वव्याप्याप्रसिद्ध्यैव लक्षणासिद्धिः स्यात् ।**

ಹೀಗೆ ಹೇಳಿರುವುದರಿಂದಲೇ ಎಂದರೆ ಸ್ವ-ಸ್ವವ್ಯಾಪ್ಯೇತರ ಸಾಮಗ್ರೀ ಸಂಪತ್ತೌ ಕಾರ್ಯಾಭಾವವ್ಯಾಪಕ ಅಭಾವಪ್ರತಿಯೋಗಿ ಸ್ವಸ್ವವ್ಯಾಪ್ಯ ಅನ್ಯತರಕತ್ವಂ ಎಂದು ಹೇಳಿರುವುದರಿಂದಲೇ ಸಾಮಾನ್ಯ ಪ್ರತ್ಯಾಸತ್ತಿಕಾರಣವಾದ ಪ್ರಮೇಯತ್ವಾದಿಗಳಲ್ಲಿ ಅವ್ಯಾಪ್ತಿ ಇಲ್ಲ. ಏಕೆಂದರೆ ಅಲ್ಲಿ ಪ್ರಮೇಯತ್ವ ವ್ಯತಿರೇಕ ಪ್ರಸಿದ್ಧಿ ಇಲ್ಲದಿದ್ದರೂ ಪ್ರಮೇಯತ್ವವ್ಯಾಪ್ಯ ವ್ಯತಿರೇಕ ಪ್ರಸಿದ್ಧಿ ಇರುವುದರಿಂದ ತತ್ಪ್ರಯುಕ್ತ ಕಾರ್ಯಾಭಾವವು ಪ್ರಸಿದ್ಧವಾಗುವುದರಿಂದ ಅನ್ಯತರತ್ವ ಘಟಿತಲಕ್ಷಣವು ಅಲ್ಲಿಯೂ ಬರುತ್ತದೆ.

## ಕೆಲವರ ಪ್ರಕಾರ ಅವ್ಯಾಪ್ತಿಯ ಪರಿಹಾರ

**यत्तु जन्यसाक्षात्कारं प्रति प्रत्यासत्तितया कारणत्वे इन्द्रिय-प्रत्यासत्तितद्व्याप्येतरसकलसमवधाने इन्द्रियप्रत्यासत्ति-व्यतिरेके सति सकलसाक्षात्कारासत्त्वात् तज्जातीयत्वेन तत्सत्त्वान्नाव्याप्तिः, अत एवेश्वरज्ञानादौ नाव्याप्तिरिति । तन्न ।**

ಕೆಲವರು ಜನ್ಯಸಾಕ್ಷಾತ್ಕಾರವನ್ನು ಕುರಿತು ಪ್ರತ್ಯಾಸತ್ತಿತ್ವೇನ ಕಾರಣತ್ವವನ್ನು ಹೇಳಿದರೆ ಇಂದ್ರಿಯ ಪ್ರತ್ಯಾಸತ್ತಿ ತದ್ವ್ಯಾಪ್ಯೇತರವಾದ ಸಕಲ ಸಮವಧಾನವಿರುವಾಗ ಇಂದ್ರಿಯ ಪ್ರತ್ಯಾಸತ್ತಿ ವ್ಯತಿರೇಕ ಇರುವಾಗ ಸಕಲ ಸಾಕ್ಷಾತ್ಕಾರವು ಇಲ್ಲದಿರುವುದರಿಂದ ಅವ್ಯಾಪ್ತಿಯು ಬರುತ್ತದೆ. ಆದ್ದರಿಂದ ಪ್ರತ್ಯಾಸತ್ತಿ ಜಾತೀಯತ್ವವನ್ನು ವಿವಕ್ಷೆಮಾಡಿ ಇಂದ್ರಿಯ ಪ್ರತ್ಯಾಸತ್ತಿಗೆ ಕಾರಣತ್ವವನ್ನು ಹೇಳಬೇಕು. ಅದರಂತೆಯೇ ಎಲ್ಲ ಕಾರ್ಯಗಳಿಗೂ ಕಾರಣವಾದ ಈಶ್ವರಜ್ಞಾನದಲ್ಲಿಯೂ ಕೂಡ ಕಾರ್ಯಾಭಾವ ವ್ಯಾಪಕ ಅಭಾವ ಪ್ರತಿಯೋಗಿತ್ವವು ಬರುವುದಿಲ್ಲವಾದ್ದರಿಂದ ಅಲ್ಲಿಯೂ ತಜ್ಜಾತೀಯತ್ವವನ್ನು ವಿವಕ್ಷೆಮಾಡಿ ಅವ್ಯಾಪ್ತಿಯನ್ನು ಪರಿಹಾರಮಾಡಬೇಕು ಎಂದು ಹೇಳುತ್ತಾರೆ. ಅದೂ ಸರಿಯಲ್ಲ.

## ಅವ್ಯಾಪ್ತಿಯ ಪರಿಹಾರ ಸಾಧ್ಯವಿಲ್ಲ

**पूर्वोक्तरीत्या प्रत्यासत्तित्वस्य कार्याभावव्यापकाभाव-**

**प्रतियोगितानवच्छेदकतया तेन रूपेण हेतुत्वप्राप्तेश्च । न हि येन केनापि रूपेण तज्जातीयत्वं वाच्यम् । अतिप्रसङ्गात्। किन्तु अन्वयव्यतिरेकप्रातियोगितावच्छेदकेनैव । न च प्रत्यासत्तित्वं तथा, तदवच्छिन्नस्य व्यतिरेकाप्रसिद्धेरिति ।**

ನಾವು ಹಿಂದೆಹೇಳಿದಂತೆ ಪ್ರತ್ಯಾಸತ್ತಿತ್ವವು ಕಾರ್ಯಾಭಾವ ವ್ಯಾಪಕಾಭಾವ ಪ್ರತಿಯೋಗಿತಾವಚ್ಛೇದಕವೇ ಆಗುವುದಿಲ್ಲವಾದ್ದರಿಂದ ಪ್ರತ್ಯಾಸತ್ತಿತ್ವೇನ ಕಾರಣತ್ವವನ್ನು ಒಪ್ಪಿ ಪ್ರತ್ಯಾಸತ್ತಿಜಾತೀಯತ್ವೇನ ಅವ್ಯಾಪ್ತಿಯನ್ನು ಪರಿಹಾರ ಮಾಡಲು ಬರುವುದಿಲ್ಲ. ಏಕೆಂದರೆ ಪ್ರತ್ಯಾಸತ್ತಿತ್ವೇನ ಕಾರಣತ್ವವೇ ಸಿದ್ಧವಾಗುವುದಿಲ್ಲ. ತಜ್ಜಾತೀಯತ್ವಂ ಎಂದರೆ ಯಾವುದಾದರೂ ರೂಪದಿಂದ ತಜ್ಜಾತೀಯತ್ವಂ ಎಂದು ಹೇಳಿದರೆ ಪ್ರಮೇಯತ್ವೇನ ಗುಣಗಳಿಗೂ ಜ್ಞಾನತ್ವಾವಚ್ಛಿನ್ನಕಾರಣತ್ವವು ಬರಲಿ ಎಂಬ ಆಪತ್ತಿ ಬರುತ್ತದೆ. ಆದ್ದರಿಂದ ಅನ್ವಯವ್ಯತಿರೇಕಪ್ರತಿ ಯೋಗಿತಾವಚ್ಛೇದಕ ರೂಪದಿಂದ ಜಾತೀಯತ್ವವನ್ನು ಹೇಳಬೇಕು.

ಆದರೆ ಪ್ರತ್ಯಾಸತ್ತಿತ್ವವು ಆ ರೀತಿಯದಲ್ಲ. ಏಕೆಂದರೆ ಪ್ರತ್ಯಾಸತ್ತಿತ್ವಾವಚ್ಛಿನ್ನಾಭಾವವು ಅಪ್ರಸಿದ್ಧವಾಗುತ್ತದೆ. ಆದ್ದರಿಂದ ಸರಿಯಲ್ಲ.

## ಪ್ರಾಗಭಾವದಲ್ಲಿ ಅವ್ಯಾಪ್ತಿ

**यद्यपि प्रागभावेऽव्याप्तिः, तदितरसकलसम्पत्तौ कार्याभावाप्रसिद्धेः उत्पन्नस्य पुनरुत्पादेति कार्यस्य सत्त्वात् । तथाप्युत्पत्तिविशिष्टकार्याभावो विवक्षितः, स च तत्राप्यस्ति।**

ಆದರೂ ಪ್ರಾಗಭಾವದಲ್ಲಿ ಅವ್ಯಾಪ್ತಿಯು ಬರುತ್ತದೆ. ಏಕೆಂದರೆ ಪ್ರಾಗಭಾವೇತರ ಸಕಲ ಸಾಮಗ್ರೀ ಸಂಪತ್ತಿ ಇರುವಾಗ ಕಾರ್ಯಾಭಾವವು ಅಪ್ರಸಿದ್ಧವಾಗುತ್ತದೆ. ಕಾರ್ಯೋತ್ಪತ್ತಿಯ ಹಿಂದಿನ ಕ್ಷಣದಲ್ಲಿ ಪ್ರಾಗಭಾವವೇ ಇದೆ. ಪ್ರಾಗಭಾವ ವ್ಯತಿರೇಕವಿಲ್ಲ. ಆಗ ಪ್ರಾಗಭಾವ ವ್ಯತಿರೇಕಕ್ಕೆ ವ್ಯಾಪಕತ್ವವನ್ನು ಹೇಳಲು ಬರುವುದಿಲ್ಲ. ಕಾರ್ಯೋತ್ಪತ್ತಿ ದ್ವಿತೀಯಕ್ಷಣದಲ್ಲಿ ಪ್ರಾಗಭಾವವು ನಾಶವಾಗುತ್ತದೆ. ಆಗ ಕಾರ್ಯವೇ ಇದೆ. ಆಗ ಪ್ರಾಗಭಾವ ವ್ಯತಿರೇಕವಿದ್ದರೂ ಕಾರ್ಯಾಭಾವವಿಲ್ಲ.

ಕಾರ್ಯೋತ್ಪತ್ತಿಕ್ಷಣದಲ್ಲಿ ಪ್ರಾಗಭಾವವು ಇನ್ನೂ ಇದ್ದರೂ ಕಾರ್ಯಾಭಾವವಿಲ್ಲ. ಆದ್ದರಿಂದ ಪ್ರಾಗಭಾವ ವ್ಯತಿರೇಕವು ಕಾರ್ಯಾಭಾವ ವ್ಯಾಪಕವಾಗುವುದಿಲ್ಲವಾದ್ದರಿಂದ ಪ್ರಾಗಭಾವದಲ್ಲಿ ಅವ್ಯಾಪ್ತಿ ಬರುತ್ತದೆ ಎಂಬುದು ಸರಿಯಲ್ಲ.

ನಮಗೆ ಕಾರ್ಯಾಭಾವವೆಂದರೆ ಉತ್ಪತ್ತಿವಿಶಿಷ್ಟ ಕಾರ್ಯಾಭಾವ ಎಂದರೆ ಆದ್ಯಕ್ಷಣಾವಚ್ಛಿನ್ನಕಾರ್ಯಾಭಾವ ಎಂದು ಅರ್ಥ ಎಂದು ಅಭಿಪ್ರಾಯ. ಕಾರ್ಯೋತ್ಪತ್ತಿ ದ್ವಿತೀಯಕ್ಷಣದಲ್ಲಿ ಮಾತ್ರ ಪ್ರಾಗಭಾವ ವ್ಯತಿರೇಕ ಉಂಟಾಗುತ್ತದೆ. ಆಗ ಕಾರ್ಯವಿದ್ದರೂ ಆದ್ಯಕ್ಷಣಾವಚ್ಛಿನ್ನಕಾರ್ಯವಿಲ್ಲದಿರುವುದರಿಂದ ಆಗ ಕಾರಣಾಭಾವವು ವ್ಯಾಪಕವಾಗುತ್ತದೆ. ಆದ್ದರಿಂದ ಪ್ರಾಗಭಾವದಲ್ಲಿ ಅವ್ಯಾಪ್ತಿ ಇಲ್ಲ.

## ದಂಡಕ್ಕೆ ರಸಾದಿಪ್ರಾಗಭಾವವು ಕಾರಣವಾಗಲಿ

**न चैवं गन्धं प्रति रसादिप्रागभावानामपि हेतुत्वापत्तिरिति वाच्यम् । अनन्यथासिद्धत्वेनैव वारणात् ।**

ಹಾಗಾದರೆ ಅದರಂತೆ ಗಂಧವನ್ನು ಕುರಿತು ರಸಾದಿ ಪ್ರಾಗಭಾವವು ಕಾರಣವಾಗಲಿ. ಗಂಧರಸಗಳು ಒಟ್ಟಿಗೆ ಉತ್ಪತ್ತಿಯಾಗುವುದರಿಂದ ಗಂಧೋತ್ಪತ್ತಿ ಕ್ಷಣದಲ್ಲಿ ಗಂಧಪ್ರಾಗಭಾವವಿದ್ದಂತೆ ರಸಪ್ರಾಗಭಾವವೂ ಇದೆ. ಮತ್ತು ರಸಪ್ರಾಗಭಾವಕ್ಕೂ ಗಂಧವ್ಯತಿರೇಕ ವ್ಯಾಪಕತ್ವವು ಬರುತ್ತದೆ ಎಂಬ ಆಕ್ಷೇಪವು ಸರಿಯಲ್ಲ. ಅನನ್ಯಥಾ ಸಿದ್ಧತ್ವ ದಳದಿಂದಲೇ ಈ ಆಪತ್ತಿಯು ವಾರಣೆಯಾಗುತ್ತದೆ. ಅನನ್ಯಥಾ ಸಿದ್ಧತ್ವವನ್ನು ಹಾಕಬೇಕೆಂದು ಮೊದಲೇ ಹೇಳಿದ್ದೇವೆ.

## ಸವ್ಯದಕ್ಷಿಣವಿಷಾಣಗಳಿಗೂ ಕಾರ್ಯಕಾರಣಭಾವ ಬರಲಿ

**न च सव्येतरविषाणयोः परस्परं कार्यकारणभावापत्तिः तदितरसकलसम्पत्तिकालस्य तत्सामग्रीकालत्व-पर्यवसाने तत्कालीनपरस्पराभावव्यापकत्वात् परस्परा-भावस्येति वाच्यम् । 'अग्रिमक्षण' इति विशेषणात् । तत्सम्पत्यग्रिमक्षणे च कार्याभावाभावात् ।**

ಹಾಗಾದರೆ ಸವ್ಯದಕ್ಷಿಣವಿಷಾಣಗಳಿಗೆ ಪರಸ್ಪರ ಕಾರ್ಯಕಾರಣಭಾವವು ಬರಲಿ ಎಂಬ ಆಪತ್ತಿಯು ಬರುತ್ತದೆ. ಏಕೆಂದರೆ ತದಿತರ ಸಕಲ ಸಂಪತ್ತಿಕಾಲವು ತತ್‌ಸಾಮಗ್ರೀಕಾಲದಲ್ಲಿಯೇ ಪರ್ಯವಸಾನ ಹೊಂದುತ್ತದೆ. ಆ ಕಾಲದಲ್ಲಿ ಯಾವ ವಿಷಾಣವೂ ಇಲ್ಲದಿರುವುದರಿಂದ ಆಕಾಲದಲ್ಲಿರುವ ಸವ್ಯವಿಷಾಣಾಭಾವಕ್ಕೆ ದಕ್ಷಿಣವಿಷಾಣಾಭಾವವೂ, ದಕ್ಷಿಣವಿಷಾಣಾಭಾವಕ್ಕೆ ಸವ್ಯವಿಷಾಣಾಭಾವವೂ ವ್ಯಾಪಕವಾಗುತ್ತದೆ. ತಾದೃಶ ಅಭಾವಪ್ರತಿಯೋಗಿತ್ವವು ಎರಡು ವಿಷಾಣದಲ್ಲಿಯೂ ಬರುವುದರಿಂದ ಪರಸ್ಪರವಾಗಿ ಕಾರಣವಾಗಲಿ ಎಂಬ ಆಪತ್ತಿ ಬರುತ್ತದೆ. ಇದನ್ನು ಪರಿಹಾರ ಮಾಡಲು ಇತರ ಸಂಪತ್ತ್ಯುತ್ತರ ಕ್ಷಣೇ ಎಂದು ವಿವಕ್ಷೆಮಾಡುತ್ತೇವೆ.

ಉತ್ತರ ಕ್ಷಣ ಎಂದರೆ ಅವ್ಯವಹಿತ ಉತ್ತರಕ್ಷಣ ಎಂದು ಅರ್ಥ. ಈ ಸ್ಥಳದಲ್ಲಿ ಸಾಮಗ್ರಿಯ ಸಂಪತ್ತಿಯ ಅವ್ಯವಹಿತ ಉತ್ತರಕ್ಷಣದಲ್ಲಿ ಕಾರ್ಯಾಭಾವವು ಇಲ್ಲ ಕಾರ್ಯವೇ ಉಂಟಾಗುತ್ತದೆ. ಆದ್ದರಿಂದ ಸ್ವಪದದಿಂದ ಸವ್ಯೇತರ ವಿಷಾಣಗಳನ್ನು ತೆಗೆದುಕೊಳ್ಳಲು ಬರುವುದಿಲ್ಲವಾದ್ದರಿಂದ ಪರಸ್ಪರ ಕಾರಣತ್ವದ ಆಪತ್ತಿ ಇಲ್ಲ.

## ದಂಡಾಭಾವವು ಘಟಾಭಾವಕ್ಕೆ ವ್ಯಾಪಕವಲ್ಲ

**यत्तु कार्यपदं तदीयकार्यपरमतो नोक्तप्रसङ्ग इति । तन्न। आत्माश्रयात्, सम्पत्तावित्यन्तवैयर्थ्यापत्तेश्च । न च दण्डावयवे घटाभावाद् व्यभिचारेणाव्यापकत्वमिति वाच्यम्। तत्र तत्रेतरसम्पत्त्यवच्छिन्नकार्याभावादित्येके ।**

ಕೆಲವರು ಕಾರ್ಯಪದವು ತದೀಯಕಾರ್ಯಪರ ಎಂದು ಹೇಳಿ ಈ ಅವ್ಯಾಪ್ತಿಯನ್ನು ಪರಿಹಾರ ಮಾಡಲು ಪ್ರಯತ್ನಿಸುತ್ತಾರೆ. ಅದು ಸರಿಯಲ್ಲ. ತದೀಯಕಾರ್ಯ ಎಂದರೆ ತನ್ನಿಷ್ಠ ಕಾರಣತಾನಿರೂಪಿತ ಕಾರ್ಯತಾಶಾಲಿ ಎಂದು ಅರ್ಥ. ಹಾಗೆ ಹೇಳಿದರೆ ಕಾರಣತ್ವ ಲಕ್ಷಣದಲ್ಲಿ ಕಾರಣತ್ವವು ಪ್ರವಿಷ್ಟವಾಗುವುದರಿಂದ ಆತ್ಮಾಶ್ರಯ ದೋಷವು ಬರುತ್ತದೆ. ಮತ್ತು ಸ್ವಸ್ವವ್ಯಾಪ್ಯೇತರ ಸಕಲಸಂಪತ್ತೌ ಎಂದು ನಿವೇಶಮಾಡುವುದು ವ್ಯರ್ಥವೂ ಆಗುತ್ತದೆ. ಹಾಗಾದರೂ ಘಟಕಾರಣವಾದ ದಂಡದಲ್ಲಿ ಅವ್ಯಾಪ್ತಿಯು ಬರುತ್ತದೆ. ಏಕೆಂದರೆ ದಂಡಾವಯವದಲ್ಲಿ ಘಟಾಭಾವವಿದೆ ಆದರೆ ದಂಡವೇ ಇದೆ. ಆದ್ದರಿಂದ ದಂಡಾಭಾವವು ಘಟಾಭಾವಕ್ಕೆ ವ್ಯಾಪಕವಾಗುವುದಿಲ್ಲವಾದ್ದರಿಂದ ಅವ್ಯಾಪ್ತಿಯು ಬರುತ್ತದೆ ಎಂದು ಹೇಳುತ್ತಾರೆ. ಅದೂ ಸರಿಯಲ್ಲ.

## ಕಾರಣತ್ವದ ವಿಷಯದಲ್ಲಿ ಸಿದ್ಧಾಂತದ ಅಭಿಪ್ರಾಯ

**कार्याभाववति यत्संसर्गावच्छिन्नयदभावास्तत्संसर्गावच्छिन्नस्य हेतुत्वरूपत्वम् । अस्ति च घटाभावव्यापको यो दण्डसंसर्गाभावः स दण्डावयवेपीत्यन्ये ।**

ಕಾರ್ಯಾಭಾವವನ್ನು ಕುರಿತು ಯತ್ಸಂಸರ್ಗಾವಚ್ಛಿನ್ನ ಯದಭಾವವು ವ್ಯಾಪಕವಾಗುತ್ತದೆಯೋ ತತ್ಪದಾರ್ಥಕ್ಕೆ ಕಾರಣತ್ವವಿದೆ ಎಂದು ನಮ್ಮ ಅಭಿಪ್ರಾಯ. ಘಟಾಭಾವವನ್ನು ಕುರಿತು ಸಂಯೋಗ ಸಂಬಂಧಾವಚ್ಛಿನ್ನ ದಂಡಾಭಾವವು ವ್ಯಾಪಕವಾಗುತ್ತದೆ. ದಂಡಾವಯವದಲ್ಲಿಯೂ ಸಹ ಸಮವಾಯಿಸಂಬಂಧೇನ ದಂಡವಿದ್ದರೂ ಸಂಯೋಗಸಂಬಂಧಾವಚ್ಛಿನ್ನ ಪ್ರತಿಯೋಗಿತಾಕ ದಂಡಾಭಾವವಿರುವುದರಿಂದ ದಂಡಾಭಾವಕ್ಕೆ ಘಟಾಭಾವ ವ್ಯಾಪಕತ್ವವು ಬರುತ್ತದೆ. ಅಂತಹ ದಂಡಾಭಾವ ಪ್ರತಿಯೋಗಿತ್ವವು ದಂಡದಲ್ಲಿ ಇರುವುದರಿಂದ ಅವ್ಯಾಪ್ತಿಗೆ ಅವಕಾಶವಿಲ್ಲ.

## 'ಕಾರ್ಯಾಭಾವವ್ಯಾಪಕಾಭಾವಪ್ರತಿಯೋಗಿತ್ವಂ' ಎಂಬಲ್ಲಿ ಸಮಾಸ

**केचित्तु कार्याभावव्यापकाभावप्रतियोगित्वमित्यत्र बहुव्रीहिसमासेन कार्याभावव्याप्याभावप्रतियोगित्वमित्यर्थः । कारणस्य कार्यव्यापकत्वेन तदभावस्य कार्याभावव्याप्यतौचित्यात् ।**

ಇನ್ನು ಕೆಲವರು ಕಾರ್ಯಾಭಾವ ವ್ಯಾಪಕಾಭಾವ ಪ್ರತಿಯೋಗಿತ್ವಂ ಎಂಬಲ್ಲಿ ಕಾರ್ಯಾಭಾವ ವ್ಯಾಪಕ ಎಂಬ ಪದಕ್ಕೆ ಕಾರ್ಯಾಭಾವಃ ವ್ಯಾಪಕಃ ಯಸ್ಯ ಎಂದು ವಿಗ್ರಹವನ್ನು ಮಾಡಿ ಕಾರ್ಯಾಭಾವ ವ್ಯಾಪ್ಯ ಎಂದು ಅರ್ಥವನ್ನು ಮಾಡಬೇಕು. ತಥಾಚ ಕಾರ್ಯಾಭಾವ ವ್ಯಾಪ್ಯಾಭಾವ ಪ್ರತಿಯೋಗಿತ್ವಂ ಕಾರಣತ್ವಂ ಎಂದು ಅರ್ಥವಾಗುತ್ತದೆ. ಕಾರಣವು ಕಾರ್ಯಕ್ಕೆ ವ್ಯಾಪಕವಾಗುವುದರಿಂದ ಕಾರಣಾಭಾವವು ಕಾರ್ಯಾಭಾವ ವ್ಯಾಪ್ಯವೆಂದು ಹೇಳುವುದೇ ಉಚಿತ.

## ಚಂದ್ರೋದಯ ಹಾಗೂ ಸಮುದ್ರಗಳ ಅಭಿವೃದ್ಧಿಗೆ ಕಾರ್ಯಕಾರಣಭಾವ ಬರಲಿ

**एवञ्च चन्द्रोदयसमुद्रवृद्ध्योः परस्परं कार्यकारणभावापत्तिरतस्तद्वारणाय सम्पत्तावित्यन्तम् ।**

ಹಾಗೆ ಹೇಳಿದರೆ ಚಂದ್ರೋದಯ ಮತ್ತು ಸಮುದ್ರ ವೃದ್ಧಿಗಳಿಗೆ ಪರಸ್ಪರ ಕಾರ್ಯಕಾರಣಭಾವವು ಬರಲಿ ಎಂಬ ಆಪತ್ತಿಯು ಉಂಟಾಗುತ್ತದೆ. ಏಕೆಂದರೆ ಯದಾ ಚಂದ್ರೋದಯಃ ತಥಾ ಸಮುದ್ರವೃದ್ಧ್ಯಭಾವಃ ಎಂದೂ ಯದಾ ಸಮುದ್ರವೃದ್ಧ್ಯಭಾವಃ ತದಾ ಚಂದ್ರೋದಯಾಭಾವಃ ಎಂದೂ ಪರಸ್ಪರ ವ್ಯಾಪ್ಯತ್ವವು ಸಿದ್ಧವಾಗುತ್ತದೆ.

## ಚಂದ್ರೋದಯಕ್ಕೆ ಸಮುದ್ರ ವೃದ್ಧಿಯು ಕಾರಣ ಹೊರತು, ಸಮುದ್ರವೃದ್ಧಿಗೆ ಚಂದ್ರೋದಯವು ಕಾರಣವಲ್ಲ

**न चैवमपि दोषतादवस्थ्यम् । अग्रिमक्षण इत्यस्य विवक्षितत्वात्। न हि तत्र तादृशग्रिमक्षणे समुद्रवृद्धि-व्यतिरेकश्चन्द्रोदयव्यतिरेकव्याप्तः । आत्मादिहेतौ प्रमेयत्वप्रत्यासत्यादौ च तज्जातीयत्वमादायैव लक्षणगमनम्, अन्यच पूर्ववदूह्यमित्याहुः ॥**

ಆದ್ದರಿಂದ ಸ್ವಸ್ವವ್ಯಾಪ್ಯೇತರ ಸಕಲ ಸಾಮಗ್ರೀ ಸಂಪತ್ತಿಯ ಅಗ್ರಿಮ ಕ್ಷಣವೃತ್ತಿ ಕಾರ್ಯಾಭಾವ ಎಂದು ವಿವಕ್ಷೆ ಮಾಡಬೇಕು. ಹಾಗೆ ಮಾಡಿದರೆ ಅಲ್ಲಿ ಉಂಟಾಗುವ ಸಮುದ್ರ ವೃದ್ಧಿ ವ್ಯತಿರೇಕವು ಚಂದ್ರೋದಯದ ವ್ಯತಿರೇಕ ವ್ಯಾಪ್ಯವಾಗುವುದಿಲ್ಲ. ಚಂದ್ರೋದಯವು ಸಮುದ್ರವೃದ್ಧಿಗೆ ಕಾರಣವಾಗಿರುವುದರಿಂದ ಚಂದ್ರೋದಯ ಕ್ಷಣದಲ್ಲಿ ಸಮುದ್ರವೃದ್ಧಿ ಇಲ್ಲ. ಉತ್ತರಕ್ಷಣದಲ್ಲಿ ಸಮುದ್ರವೃದ್ಧಿ ಉಂಟಾಗುತ್ತದೆ. ಆದ್ದರಿಂದ ಸಮುದ್ರವೃದ್ಧಿಯ ವ್ಯತಿರೇಕವು ಚಂದ್ರೋದಯ ವ್ಯತಿರೇಕಕ್ಕೆ ವ್ಯಾಪ್ಯವಾಗುವುದಿಲ್ಲ. ಆದ್ದರಿಂದ ಚಂದ್ರೋದಯಕ್ಕೆ ಸಮುದ್ರ ವೃದ್ಧಿ ಕಾರಣತ್ವವು ಸಿದ್ಧವಾಗುತ್ತದೆಯೇ ಹೊರತು ಸಮುದ್ರವೃದ್ಧಿಗೆ ಚಂದ್ರೋದಯ ಕಾರಣತ್ವವು ಸಿದ್ಧವಾಗುವುದಿಲ್ಲ.

## ಕಾರಣತ್ವದ ವಿಷಯದಲ್ಲಿ ಸಿದ್ಧಾಂತದ ಅಭಿಪ್ರಾಯ

**कार्याभाववति यत्संसर्गावच्छिन्नयदभावास्तत्संसर्गावच्छिन्नस्य हेतुत्वरूपत्वम् । अस्ति च घटाभावव्यापको यो दण्डसंसर्गाभावः स दण्डावयवेपीत्यन्ये ।**

ಕಾರ್ಯಾಭಾವವನ್ನು ಕುರಿತು ಯತ್ಸಂಸರ್ಗಾವಚ್ಛಿನ್ನ ಯದಭಾವವು ವ್ಯಾಪಕವಾಗುತ್ತದೆಯೋ ತತ್ತದಾರ್ಥಕ್ಕೆ ಕಾರಣತ್ವವಿದೆ ಎಂದು ನಮ್ಮ ಅಭಿಪ್ರಾಯ. ಘಟಾಭಾವವನ್ನು ಕುರಿತು ಸಂಯೋಗ ಸಂಬಂಧಾವಚ್ಛಿನ್ನ ದಂಡಾಭಾವವು ವ್ಯಾಪಕವಾಗುತ್ತದೆ. ದಂಡಾವಯವದಲ್ಲಿಯೂ ಸಹ ಸಮವಾಯಿಸಂಬಂಧೇನ ದಂಡವಿದ್ದರೂ ಸಂಯೋಗಸಂಬಂಧಾವಚ್ಛಿನ್ನ ಪ್ರತಿಯೋಗಿತಾಕ ದಂಡಾಭಾವವಿರುವುದರಿಂದ ದಂಡಾಭಾವಕ್ಕೆ ಘಟಾಭಾವ ವ್ಯಾಪಕತ್ವವು ಬರುತ್ತದೆ. ಅಂತಹ ದಂಡಾಭಾವ ಪ್ರತಿಯೋಗಿತ್ವವು ದಂಡದಲ್ಲಿ ಇರುವುದರಿಂದ ಅವ್ಯಾಪ್ತಿಗೆ ಅವಕಾಶವಿಲ್ಲ.

## 'ಕಾರ್ಯಾಭಾವವ್ಯಾಪಕಾಭಾವಪ್ರತಿಯೋಗಿತ್ವಂ' ಎಂಬಲ್ಲಿ ಸಮಾಸ

**केचित्तु कार्याभावव्यापकाभावप्रतियोगित्वमित्यत्र बहुव्रीहिसमासेन कार्याभावव्याप्याभावप्रतियोगित्वमित्यर्थः । कारणस्य कार्यव्यापकत्वेन तदभावस्य कार्याभावव्याप्यतौचित्यात् ।**

ಇನ್ನು ಕೆಲವರು ಕಾರ್ಯಾಭಾವ ವ್ಯಾಪಕಾಭಾವ ಪ್ರತಿಯೋಗಿತ್ವಂ ಎಂಬಲ್ಲಿ ಕಾರ್ಯಾಭಾವ ವ್ಯಾಪಕ ಎಂಬ ಪದಕ್ಕೆ ಕಾರ್ಯಾಭಾವಃ ವ್ಯಾಪಕಃ ಯಸ್ಯ ಎಂದು ವಿಗ್ರಹವನ್ನು ಮಾಡಿ ಕಾರ್ಯಾಭಾವ ವ್ಯಾಪ್ಯ ಎಂದು ಅರ್ಥವನ್ನು ಮಾಡಬೇಕು. ತಥಾಚ ಕಾರ್ಯಾಭಾವ ವ್ಯಾಪ್ಯಾಭಾವ ಪ್ರತಿಯೋಗಿತ್ವಂ ಕಾರಣತ್ವಂ ಎಂದು ಅರ್ಥವಾಗುತ್ತದೆ. ಕಾರಣವು ಕಾರ್ಯಕ್ಕೆ ವ್ಯಾಪಕವಾಗುವುದರಿಂದ ಕಾರಣಾಭಾವವು ಕಾರ್ಯಾಭಾವ ವ್ಯಾಪ್ಯವೆಂದು ಹೇಳುವುದೇ ಉಚಿತ.

## ಚಂದ್ರೋದಯ ಹಾಗೂ ಸಮುದ್ರಗಳ ಅಭಿವೃದ್ಧಿಗೆ ಕಾರ್ಯಕಾರಣಭಾವ ಬರಲಿ

**एवञ्च चन्द्रोदयसमुद्रवृद्ध्योः परस्परं कार्यकारणभावापत्तिरतस्तद्वारणाय सम्पत्तावित्यन्तम् ।**

ಹಾಗೆ ಹೇಳಿದರೆ ಚಂದ್ರೋದಯ ಮತ್ತು ಸಮುದ್ರ ವೃದ್ಧಿಗಳಿಗೆ ಪರಸ್ಪರ ಕಾರ್ಯಕಾರಣಭಾವವು ಬರಲಿ ಎಂಬ ಆಪತ್ತಿಯು ಉಂಟಾಗುತ್ತದೆ. ಏಕೆಂದರೆ ಯದಾ ಚಂದ್ರೋದಯಃ ತಥಾ ಸಮುದ್ರವೃದ್ಧ್ಯಭಾವಃ ಎಂದೂ ಯದಾ ಸಮುದ್ರವೃದ್ಧ್ಯಭಾವಃ ತದಾ ಚಂದ್ರೋದಯಾಭಾವಃ ಎಂದೂ ಪರಸ್ಪರ ವ್ಯಾಪ್ಯತ್ವವು ಸಿದ್ಧವಾಗುತ್ತದೆ.

## ಚಂದ್ರೋದಯಕ್ಕೆ ಸಮುದ್ರ ವೃದ್ಧಿಯು ಕಾರಣ ಹೊರತು, ಸಮುದ್ರವೃದ್ಧಿಗೆ ಚಂದ್ರೋದಯವು ಕಾರಣವಲ್ಲ

**न चैवमपि दोषतादवस्थ्यम् । अग्रिमक्षण इत्यस्य विवक्षितत्वात्। न हि तत्र तादृशाग्रिमक्षणे समुद्रवृद्धि-व्यतिरेकश्चन्द्रोदयव्यतिरेकव्याप्तः । आत्मादिहेतौ प्रमेयत्वप्रत्यासत्यादौ च तज्जातीयत्वमादायैव लक्षणगमनम्, अन्यच्च पूर्ववदूह्यमित्याहुः ॥**

ಆದ್ದರಿಂದ ಸ್ವಸ್ವವ್ಯಾಪ್ಯೇತರ ಸಕಲ ಸಾಮಗ್ರೀ ಸಂಪತ್ತಿಯ ಅಗ್ರಿಮ ಕ್ಷಣವೃತ್ತಿ ಕಾರ್ಯಾಭಾವ ಎಂದು ವಿವಕ್ಷೆ ಮಾಡಬೇಕು. ಹಾಗೆ ಮಾಡಿದರೆ ಅಲ್ಲಿ ಉಂಟಾಗುವ ಸಮುದ್ರ ವೃದ್ಧಿ ವ್ಯತಿರೇಕವು ಚಂದ್ರೋದಯದ ವ್ಯತಿರೇಕ ವ್ಯಾಪ್ಯವಾಗುವುದಿಲ್ಲ. ಚಂದ್ರೋದಯವು ಸಮುದ್ರವೃದ್ಧಿಗೆ ಕಾರಣವಾಗಿರುವುದರಿಂದ ಚಂದ್ರೋದಯ ಕ್ಷಣದಲ್ಲಿ ಸಮುದ್ರವೃದ್ಧಿ ಇಲ್ಲ. ಉತ್ತರಕ್ಷಣದಲ್ಲಿ ಸಮುದ್ರವೃದ್ಧಿ ಉಂಟಾಗುತ್ತದೆ. ಆದ್ದರಿಂದ ಸಮುದ್ರವೃದ್ಧಿಯ ವ್ಯತಿರೇಕವು ಚಂದ್ರೋದಯ ವ್ಯತಿರೇಕಕ್ಕೆ ವ್ಯಾಪ್ಯವಾಗುವುದಿಲ್ಲ. ಆದ್ದರಿಂದ ಚಂದ್ರೋದಯಕ್ಕೆ ಸಮುದ್ರ ವೃದ್ಧಿ ಕಾರಣತ್ವವು ಸಿದ್ಧವಾಗುತ್ತದೆಯೇ ಹೊರತು ಸಮುದ್ರವೃದ್ಧಿಗೆ ಚಂದ್ರೋದಯ ಕಾರಣತ್ವವು ಸಿದ್ಧವಾಗುವುದಿಲ್ಲ.

ಇನ್ನು ಆತ್ಮ, ಪ್ರಮೇಯತ್ವ, ಪ್ರತ್ಯಾಸತ್ತಿ ಮೊದಲಾದ ಸ್ಥಳಗಳಲ್ಲಿ ತಜ್ಜಾತೀಯತ್ವವನ್ನೇ ತಂದು ಲಕ್ಷಣ ಸಮನ್ವಯವನ್ನು ಮಾಡಬೇಕು ಎಂದು ಹೇಳುತ್ತಾರೆ.

## ಅನನ್ಯಥಾಸಿದ್ಧತ್ವ, ಕಾರ್ಯನಿಯತಪೂರ್ವವೃತ್ತಿತ್ವ ಇವೆರಡೇ ಸಾಕು

**नन्विदं कारणत्वमतीन्द्रियघटितसकलसम्पत्तिगर्भतया दुर्ग्रहं प्रत्यक्षस्याप्रवृत्त्या साध्याप्रसिद्ध्या मानान्तरस्याप्यप्रवृत्तेः, किञ्च अनन्यथासिद्धत्वकार्यनियतपूर्ववर्तित्वादेः प्रवेशे आवश्यके तावन्मात्रमेव लक्षणमस्तु लाघवात् अधिकांशस्य गुरुत्वात्, अत एवाग्रेपि तथैव लक्षणमित्यरुचेदाह – अथ वेति ।।**

ಕಾರಣಕ್ಕೆ ಹೇಳಿದ ಈ ಲಕ್ಷಣದಲ್ಲಿ ಇತರ ಸಕಲಸಂಪತ್ತಿಯಲ್ಲಿ ಅತೀಂದ್ರಿಯ ಸಂಪತ್ತಿಯೂ ಸೇರುವುದರಿಂದ ಅಲ್ಲಿ ಪ್ರತ್ಯಕ್ಷವು ಪ್ರವೃತ್ತವಾಗುವುದಿಲ್ಲ. ಪ್ರತ್ಯಕ್ಷವು ಪ್ರವೃತ್ತವಾಗದಿರುವುದರಿಂದ ಅನುಮಾನದಲ್ಲಿ ಅದನ್ನು ಸಾಧ್ಯವಾಗಿ ನಿರ್ದೇಶಮಾಡಿದರೆ ಸಾಧ್ಯಾಪ್ರಸಿದ್ಧಿಯು ಉಂಟಾಗುವುದರಿಂದ ಅನುಮಾನವು ಪ್ರವೃತ್ತವಾಗುವುದಿಲ್ಲ. ಇನ್ನು ಇಷ್ಟು ಲಕ್ಷಣವನ್ನು ಹೇಳಿದರೂ ಅನನ್ಯಥಾ ಸಿದ್ಧತ್ವವನ್ನು ಮತ್ತು ಕಾರ್ಯನಿಯತಪೂರ್ವವೃತ್ತಿತ್ವವನ್ನು ಅವಶ್ಯವಾಗಿ ನಿವೇಶ ಮಾಡಬೇಕಾಗುವುದರಿಂದ ಅವೆರಡು ದಳವೇ ಲಕ್ಷಣವಾಗಿರಲಿ. ಲಾಘವವಿರುವುದರಿಂದ ಉಳಿದ ಭಾಗವನ್ನು ತ್ಯಜಿಸೋಣ. ಆದ್ದರಿಂದಲೇ ಮುಂದೆ ಹಾಗೆಯೇ ಲಕ್ಷಣ ನಿರೂಪಣೆ ಮಾಡುತ್ತಾರೆ ಎಂಬ ಅಸ್ವಾರಸ್ಯದಿಂದ ಅಥವಾ ಎಂದು ಪಕ್ಷಾಂತರವನ್ನು ಹೇಳುತ್ತಾರೆ – ಅಥವೇತಿ.

## ಕಾರಣತ್ವಲಕ್ಷಣದ ವಿವರಣೆ

**यत्र कार्याभावव्याप्यता इतराभावसहकारावच्छिन्ना तदवच्छिन्नं कारणं तदवच्छिन्नत्वं कारणत्वमिति यावत् । तेन यत्र दण्डाभावत्वं तत्र घटाभाव इति दण्डाभावत्वनिष्ठ-**

**व्याप्तौ दण्डाभावस्यैव अवच्छेदकतयाऽजनके दण्डाभावत्वादौ नातिव्याप्तिः ।**

ಎಲ್ಲಿ ಕಾರ್ಯಾಭಾವ ವ್ಯಾಪ್ಯತ್ವವು ಇತರಾಭಾವ ಸಹಕಾರಾವಚ್ಛಿನ್ನವಾಗುತ್ತದೆಯೋ ತದವಚ್ಛಿನ್ನವಾದುದು ಕಾರಣವಾಗುತ್ತದೆ. ತದವಚ್ಛಿನ್ನತ್ವಂ ಕಾರಣತ್ವಂ ಎಂದು ಅಭಿಪ್ರಾಯ. ಆದ್ದರಿಂದ ಘಟವನ್ನು ಕುರಿತು ದಂಡಾಭಾವತ್ವದಲ್ಲಿ ಅತಿವ್ಯಾಪ್ತಿಯಿಲ್ಲ ಅಥವಾ ಅಂಕುರವನ್ನು ಕುರಿತು ಕಾರಣವಾದ ಬೀಜದಲ್ಲಿಯೂ ಅವ್ಯಾಪ್ತಿಯು ಇಲ್ಲ.

ಇದನ್ನು ವಿವರಿಸುವುದಾದರೆ–'ಯತ್ರ ದಂಡಾಭಾವತ್ವಂ ದಂಡಾಭಾವೇ, ತತ್ರ ನ ಘಟಃ' (ನ ಘಟಃ ಎಂದರೂ ಘಟಾಭಾವ ಎಂದರೂ ಒಂದೇ) ಎಂದು ವ್ಯಾಪ್ತಿ ಇದೆ. ಆದ್ದರಿಂದ ದಂಡಾಭಾವತ್ವದಲ್ಲಿ ಘಟಾಭಾವ ವ್ಯಾಪ್ಯತ್ವವು ಬಂದಿತು. ದಂಡಾಭಾವೇ ಕುತೋ ಘಟಾಭಾವ ಎಂದು ಕೇಳಿದರೆ ಕಾರಣಾಭಾವೇ ಕಾರ್ಯಾಭಾವಃ ಎಂದು ಹೇಳಬೇಕು. ತಥಾಚ ದಂಡಾಭಾವತ್ವನಿಷ್ಠವ್ಯಾಪ್ಯತ್ವವು ದಂಡಾಭಾವಾವಚ್ಛಿನ್ನವಾಗುತ್ತದೆ. ಆದ್ದರಿಂದ ಇತರಾಭಾವಾವಚ್ಛಿನ್ನ ಕಾರ್ಯಾಭಾವವ್ಯಾಪ್ಯತ್ವವು ಬಂದಿದ್ದರಿಂದ ದಂಡಾಭಾವತ್ವದಲ್ಲಿ ಅತಿವ್ಯಾಪ್ತಿಯು ಬರುತ್ತದೆ ಎಂದು ಶಂಕಾ.

ಸಮಾಧಾನವು ಹೀಗೆ. ದಂಡಾಭಾವತ್ವವು ಇರುವಲ್ಲಿ ಏಕೆ ಘಟವು ಉಂಟಾಗುವುದಿಲ್ಲ ಎಂಬ ಪ್ರಶ್ನೆಗೆ ದಂಡಾಭಾವಕ್ಕೆ ಘಟಜನನವನ್ನು ಕುರಿತು ಸ್ವರೂಪ ಯೋಗ್ಯತೆ ಇಲ್ಲದಿರುವುದರಿಂದ (ಇದು ಏಕೆಂದರೆ ದಂಡಕ್ಕೆ ಘಟಜನಕತ್ವವು ಇರುವುದರಿಂದ) ಎಂದು ಹೇಳಬೇಕಾಗುವುದರಿಂದ ದಂಡಾಭಾವತ್ವ ನಿಷ್ಠಘಟಾಭಾವ ವ್ಯಾಪ್ಯತ್ವವು ಸ್ವರೂಪತಃ ಇದೆ ಎಂದರೆ ಘಟಾಭಾವವ್ಯಾಪ್ಯತ್ವವು ದಂಡಾಭಾವತ್ವೇನ (ದಂಡಾಭಾವತ್ವತ್ವೇನ) ಅವಚ್ಛಿನ್ನವಾಗುತ್ತದೆ. ಹೊರತು ಇತರಾಭಾವ ಪ್ರಯುಕ್ತವಾಗಿ ಇಲ್ಲವಾದ್ದರಿಂದ ಇತರಾಭಾವ ಸಹಕಾರಾವಚ್ಛಿನ್ನವಾಗುವುದಿಲ್ಲ. ಆದ್ದರಿಂದ ಅತಿವ್ಯಾಪ್ತಿಯು ಇಲ್ಲ ಎಂದು ಅಭಿಪ್ರಾಯ.

## ಬೀಜದಲ್ಲಿ ಅವ್ಯಾಪ್ತಿ ಇಲ್ಲ

**न वा बीजत्वस्य कार्याभावव्याप्यस्य जनकत्वासम्भवादसम्भवः, तत्र दण्डाभावसहकृतत्वस्यानवच्छेदकत्वात्, बीजत्वाद्यवच्छिन्नस्य जनकत्वाच ।**

ಇನ್ನು ಬೀಜತ್ವಾವಚ್ಛಿನ್ನವು ಜನಕವೇ ಆಗಿರುವುದರಿಂದ ಯತ್ರ ಬೀಜತ್ವಂ ತತ್ರ ಕಾರ್ಯಾಭಾವಃ ಎಂದು ಹೇಳಬೇಕಾದರೆ ಬೀಜತ್ವವಿರುವಲ್ಲಿ ಇತರಾಭಾವದ ಸಹಕಾರವು ಬೇಕೇ ಬೇಕು. ಬೀಜತ್ವತ್ವೇನ ಬೀಜತ್ವವು ಇರುವಲ್ಲಿ ಇತರಾಭಾವವಿಲ್ಲದಿದ್ದರೆ ಕಾರ್ಯವೇ ಉಂಟಾಗುವುದರಿಂದ ಅಲ್ಲಿ ಕಾರ್ಯಾಭಾವ ವ್ಯಾಪ್ಯತ್ವವು ಇತರಾಭಾವ ಸಹಕಾರಾವಚ್ಛಿನ್ನವೇ ಆಗುವುದರಿಂದ ಬೀಜದಲ್ಲಿ ಅವ್ಯಾಪ್ತಿಯು ಇಲ್ಲ.

## ಬೀಜ ಹಾಗೂ ಬೀಜತ್ವಪದಗಳ ಅರ್ಥ

**एवञ्चाग्रे बीजबीजत्वपदे बीजत्वबीजत्वत्वपरे । इतराभावेन-इतराभावसहकृतत्वेन । शिलायांशिलात्वे, शिलात्वेन-शिलात्वत्वेन ।**

ಹೀಗೆ ಮುಂದೆಯೂ ಬೀಜ ಮತ್ತು ಬೀಜತ್ವಪದಗಳು ಬೀಜತ್ವ ಮತ್ತು ಬೀಜತ್ವತ್ವ ಪರವಾದವು ಎಂದು ತಿಳಿಯಬೇಕು. ಇತರಾಭಾವೇನ ಎಂದರೆ ಇತರಾಭಾವಸಹಕೃತತ್ವೇನ ಎಂದು ಅರ್ಥ. ಶಿಲಾಯಾಂ ಎಂದರೆ ಶಿಲಾತ್ವದಲ್ಲಿ ಎಂದೂ, ಶಿಲಾತ್ವೇನ ಎಂದರೆ ಶಿಲಾತ್ವತ್ವೇನ ಎಂದೂ ತಿಳಿಯಬೇಕು.

## ಕಾರಣತ್ವಲಕ್ಷಣಕ್ಕೆ ಅತಿವ್ಯಾಪ್ತಿ ಇಲ್ಲ

**ननु कार्याभावस्तज्जन्यकार्याभावो वा तदभावमात्रं वा? आद्ये आत्माश्रयः । अन्त्ये शिलायामप्यङ्कुरस्य संयोगवृत्त्या सत्त्वेन तत्रापीतराभावसहकृतशिलात्वस्य कार्याभावव्याप्यत्वात् ।**

ಲಕ್ಷಣಪ್ರವಿಷ್ಟವಾದ ಕಾರ್ಯಾಭಾವವು ತಜ್ಜನ್ಯಕಾರ್ಯಾಭಾವವೋ (ಕಾರಣಜನ್ಯಕಾರ್ಯಾಭಾವವೋ) ಅಥವಾ ಕಾರ್ಯಾಭಾವ ಮಾತ್ರವೋ? ತಜ್ಜನ್ಯ ಕಾರ್ಯಾಭಾವವೆಂದರೆ ಕಾರಣತ್ವದ ಶರೀರದಲ್ಲಿ ಕಾರಣತ್ವವು ಸೇರುವುದರಿಂದ ಆತ್ಮಾಶ್ರಯ ದೋಷವು ಬರುತ್ತದೆ. ಕಾರ್ಯಾಭಾವ ಮಾತ್ರ ಎಂದು ಹೇಳಿದರೆ ಶಿಲೆಯಲ್ಲಿ ಅಂಕುರವು ಸಂಯೋಗ ಸಂಬಂಧದಿಂದ ಇರುವುದರಿಂದ ಶಿಲಾತ್ವವಿರುವಲ್ಲಿ ಅಂಕುರ ರೂಪವಾದ ಕಾರ್ಯವೇ

ಇದೆ. ಆದ್ದರಿಂದ ಅಲ್ಲಿಯೂ ಕಾರ್ಯಾಭಾವವು ಬರಬೇಕಾದರೆ ಇತರಾಭಾವದ ಸಹಕಾರವು ಬೇಕೇಬೇಕು. ಆದ್ದರಿಂದ ಶಿಲಾತ್ವನಿಷ್ಠ ಕಾರ್ಯಾಭಾವವ್ಯಾಪ್ಯತ್ವವು ಇತರಾಭಾವಸಹಕಾರಾವಚ್ಛಿನ್ನ-ವಾದ್ದರಿಂದ ಅಂಕುರವನ್ನು ಕುರಿತು ಶಿಲೆಗೆ ಕಾರಣತ್ವವು ಬರಲಿ ಎಂದು ಅತಿವ್ಯಾಪ್ತಿ ಪ್ರಸಂಗವು ಬರುತ್ತದೆ.

## ಕಾರ್ಯಾಭಾವವ್ಯಾಪ್ಯತ್ವವು ಇಲ್ಲದ ಕಾರಣ ಅವ್ಯಾಪ್ತಿ ಇಲ್ಲ

**किञ्च घटकारणज्ञानादौ कार्याभावव्याप्यत्वं ज्ञानत्वत्वादिनैवावच्छिद्यते । दण्डाभावसाहित्यस्य तत्र नीलधूम इव व्यर्थत्वादिति ।**

ಇನ್ನು ಘಟವನ್ನು ಕುರಿತು ಜ್ಞಾನವು ಕಾರಣ. ಜ್ಞಾನತ್ವವಿರುವಲ್ಲಿ ಘಟಾಭಾವವಿದೆ. ಆದರೆ ಜ್ಞಾನತ್ವನಿಷ್ಠ ಘಟಾಭಾವವ್ಯಾಪ್ಯತ್ವವು ಜ್ಞಾನತ್ವತ್ವದಿಂದಲೇ ಅವಚ್ಛಿನ್ನವಾಗುತ್ತದೆಯೇ ಹೊರತಾಗಿ ದಂಡಾಭಾವ ಸಹಕಾರಕ್ಕೆ ಅಲ್ಲಿ ಅಪೇಕ್ಷೆ ಇಲ್ಲದಿರುವುದರಿಂದ ದಂಡಾಭಾವಸಹಕಾರಾವಚ್ಛಿನ್ನ-ವಾಗುವುದಿಲ್ಲ. ಆದ್ದರಿಂದ ಅಲ್ಲಿ ದಂಡಾಭಾವ ಸಹಕಾರಾವಚ್ಛಿನ್ನತ್ವವನ್ನು ಹಾಕುವುದಿಲ್ಲ ವ್ಯರ್ಥವಾಗುತ್ತದೆ. ಧೂಮತ್ವೇನ ವಹ್ನಿತ್ವೇನ ಕಾರ್ಯಕಾರಣಭಾವವನ್ನು ಕಲ್ಪನೆಮಾಡಲು ಬರುವಾಗ ನೀಲ ಧೂಮತ್ವೇನ ಕಲ್ಪನೆಮಾಡುವುದು ಹೇಗೆ ವ್ಯರ್ಥವೋ ಅದರಂತೆ. ತಥಾಚ ಕಾರಣವಾದ ಜ್ಞಾನದಲ್ಲಿ ಇತರ ಸಹಕಾರಾವಚ್ಛಿನ್ನವಾದ ಕಾರ್ಯಾಭಾವ ವ್ಯಾಪ್ಯತ್ವವು ಬರಲಿಲ್ಲವಾದ್ದರಿಂದ ಅವ್ಯಾಪ್ತಿಯು ಬರುತ್ತದೆ.

## ಶಿಲೆಯಲ್ಲಿ ಅತಿವ್ಯಾಪ್ತಿ ಇರುವುದಿಲ್ಲ

**अत्र वदन्ति । उत्पत्तिकालीनसम्बन्धावच्छिन्नकार्याभावव्याप्यत्वं विवक्षितं संयोगसम्बन्धस्योत्पत्त्यनन्तरकालीनतया तदवच्छिन्नाभावमादाय न शिलादौ प्रसङ्गः ।**

ಇಲ್ಲಿ ಹೀಗೆ ಸಮಾಧಾನವನ್ನು ಹೇಳುತ್ತಾರೆ. ಕಾರ್ಯಾಭಾವವೆಂದರೆ ಉತ್ಪತ್ತಿ ಕಾಲೀನ ಸಂಬಂಧಾವಚ್ಛಿನ್ನ (ಆದ್ಯಕ್ಷಣ ಸಂಬಂಧಾವಚ್ಛಿನ್ನ) ಕಾರ್ಯಾಭಾವವೆಂದೇ ಅರ್ಥ.

ತದ್ವ್ಯಾಪ್ಯತ್ವವು ಲಕ್ಷಣಘಟಕವಾಗಿದೆ. ಶಿಲೆಯಲ್ಲಿ ಸಂಯೋಗ ಸಂಬಂಧದಿಂದ ಅಂಕುರವು ಬಂದರೂ ಅಂಕುರ ಸಂಯೋಗವು ಅಂಕುರೋತ್ಪತ್ತಿ ಕ್ಷಣೋತ್ತರ ಕ್ಷಣಭಾವಿಯಾದುದರಿಂದ ಉತ್ಪತ್ತಿಕ್ಷಣಾವಚ್ಛಿನ್ನಾಂಕುರಾಭಾವವು ಬಂದೇ ಬರುತ್ತದೆ. ಶಿಲಾತ್ವನಿಷ್ಠ ತಾದೃಶಾಭಾವವ್ಯಾಪ್ಯತ್ವವು ಶಿಲಾತ್ವತ್ವಾವಚ್ಛಿನ್ನವಾಗುತ್ತದೆ. ಅಲ್ಲಿ ಇತರಾಭಾವದ ಸಹಕಾರದ ಅಪೇಕ್ಷೆಯಿಲ್ಲ. ಆದ್ದರಿಂದ ಶಿಲೆಯಲ್ಲಿ ಅತಿವ್ಯಾಪ್ತಿ ಇಲ್ಲ.

## ಕಾರಣತ್ವವು ಸಂಬಂಧಕೋಟಿಯಲ್ಲಿ ಸೇರಿದೆ

**उत्पत्तिकालीनसम्बन्धो द्वयमेव कारणता समवायश्च तदवच्छिन्नाङ्कुराभावश्चेतराभावावच्छिन्ने स्वसमवायिनि बीजादौ च । द्वयं च कारणमेव । न चैवं करणतागर्भत्वेन आत्माश्रयः । सन्बन्धत्वेन तज्ज्ञानादिति ।।**

ಉತ್ಪತ್ತಿ ಕಾಲೀನ ಸಂಬಂಧವು ಎರಡೇ. ಕಾರಣತ್ವ ಮತ್ತು ಸಮವಾಯಗಳು. ಅಲ್ಲಿ ಕಾರಣತಾಸಂಬಂಧಾವಚ್ಛಿನ್ನ ಕಾರ್ಯಾಭಾವವು ಬೀಜದಲ್ಲಿಯೂ ಸಮವಾಯ ಸಂಬಂಧಾವಚ್ಛಿನ್ನ ಕಾರ್ಯಾಭಾವವು ಅವಯವದಲ್ಲಿಯೂ ಇತರಾಭಾವ ಸಹಕಾರವಿದ್ದರೆ ಮಾತ್ರ ಬರುತ್ತದೆ. ಹಾಗಾದರೆ ಪುನಃ ಕಾರಣತ್ವಲಕ್ಷಣದಲ್ಲಿ ಕಾರಣತ್ವವು ಸೇರುವುದರಿಂದ ಆತ್ಮಾಶ್ರಯ ದೋಷವು ಬರುತ್ತದೆ ಎಂಬ ಆಕ್ಷೇಪಕ್ಕೆ ಎಡೆಯಿಲ್ಲ. ಆ ಕಾರಣತ್ವವನ್ನು ಸಂಬಂಧಕೋಟಿಯಲ್ಲಿ ಸೇರಿಸಿರುವುದರಿಂದ ಅದರ ಜ್ಞಾನದ ಅಪೇಕ್ಷೆಯಿಲ್ಲ. ವಿಶೇಷಣತಯಾ ನಿವೇಶಮಾಡಿದರೆ ಮಾತ್ರ ಆತ್ಮಾಶ್ರಯವು ಬರುತ್ತಿದ್ದಿತು.

## ವಿಷಯವಿಷಯಿಭಾವಸಂಬಂಧವು ವ್ಯುತ್ಪತ್ತಿಕಾಲದಲ್ಲೇ ಸಂಬದ್ಧವಾಗಿದೆ

**अत्रेदं चिन्त्यम् । विषयविषयिभावसम्बन्धस्याप्युत्पत्तिकालीनतया तदवच्छिन्नकार्याभावव्याप्यत्वस्य इतराभावावच्छेद्यतया वह्न्यादेरनुमितिजनकत्वापत्तिः । चरमकारणे कार्यत्वाभावादव्याप्तिश्च ।**

ಇಲ್ಲಿ ಈ ವಿಷಯವನ್ನು ಚಿಂತನೆಮಾಡಬೇಕು. ವಿಷಯವಿಷಯೀಭಾವ ಸಂಬಂಧವು ಉತ್ಪತ್ತಿ ಕಾಲೀನ ಸಂಬಂಧವೇ ಆಗಿದೆ. ವಹ್ನಿಯ ಅನುಮಿತಿಯು ಬರುವ ಸ್ಥಳದಲ್ಲಿ ವಹ್ನಿತ್ವವಿರುವಲ್ಲಿ ತಾದೃಶಸಂಬಂಧಾವಚ್ಛಿನ್ನಕಾರ್ಯವೇ (ಅನುಮಿತಿಯೇ) ಉತ್ಪತ್ತಿಕಾಲದಿಂದಲೂ ಇರುವುದರಿಂದ ತದಭಾವವು ಬರಬೇಕಾದರೆ ಇತರಾಭಾವ ಸಹಕಾರವು ಅಪೇಕ್ಷಿತವಾದಕಾರಣ ಇತರಾಭಾವ ಸಹಕಾರಾವಚ್ಛಿನ್ನ ಕಾರ್ಯಾಭಾವ ವ್ಯಾಪ್ಯತ್ವವು ವಹ್ನಿತ್ವದಲ್ಲಿ ಬರುವುದರಿಂದ ವಹ್ನಿಗೆ ಅನುಮಿತಿಯನ್ನು ಕುರಿತು ಕಾರಣತ್ವವು ಬರಲಿ ಎಂಬ ಆಪತ್ತಿಯು ಉಂಟಾಗುತ್ತದೆ. ಕಪಾಲದ್ವಯ ಸಂಯೋಗ ರೂಪವಾದ ಚರಮಕಾರಣವು ಉಂಟಾದ ಮೇಲೆ ಕಾರ್ಯವೇ ಉಂಟಾಗುವುದರಿಂದ ಕಾರ್ಯಾಭಾವವು ಇಲ್ಲದಿರುವುದರಿಂದ ಚರಮಕಾರಣದಲ್ಲಿ ಕಾರ್ಯಾಭಾವ ವ್ಯಾಪ್ಯತ್ವವು ಬರುವುದಿಲ್ಲ. ಆದ್ದರಿಂದ ಅವ್ಯಾಪ್ತಿಯು ಬರುತ್ತದೆ.

## ಕಾರ್ಯಾಭಾವ ವ್ಯಾಪ್ಯತ್ವದ ತಾತ್ಪರ್ಯ

**वस्तुतस्तु बीजादङ्कुर इति प्रतीतिबलादवध्यवधिमद्भाव-लक्षणस्वरूपसम्बन्धविशेष एव विलक्षणः कार्यकारणयोः । तत्सम्बन्धावच्छिन्नकार्याभावश्च कारणे इतरभावावच्छेदेन । स्वरूपायोग्ये तु तादृशसम्बन्धा भावात् तदवच्छिन्नकार्याभावः स्वसाधारणशिलात्वादिधर्मावच्छेद्यः । एवं च तादृशसम्बन्धा वच्छिन्नकार्याभावव्याप्यत्वं यत्र स्वासाधारणधर्मेतरावच्छिन्नं तदवच्छिन्नं कारणमित्यत्र तात्पर्यम् ।**

ವಸ್ತುತಃ ಬೀಜಾದಂಕುರಃ ಎಂಬ ಪ್ರತೀತಿಯ ಬಲದಿಂದ ಅವಧಿ-ಅವಧಿಮತ್ತ್ವ ರೂಪವಾದ ವಿಲಕ್ಷಣವಾದ ಸ್ವರೂಪಸಂಬಂಧವಿಶೇಷವೇ ಕಾರ್ಯಕಾರಣಗಳಿಗೆ ಇರುವ ಸಂಬಂಧ. ಕಾರಣದಲ್ಲಿ ತತ್ಸಂಬಂಧಾವಚ್ಛಿನ್ನ ಕಾರ್ಯಾಭಾವವು ಇತರಾಭಾವವಿದ್ದಾಗ ಮಾತ್ರ ಬರುತ್ತದೆ. ಆದ್ದರಿಂದ ಇತರಾಭಾವಾವಚ್ಛಿನ್ನವಾಗುತ್ತದೆ. ಸ್ವರೂಪತಃ ಅಯೋಗ್ಯವಾದ ಶಿಲಾದಿಗಳಲ್ಲಿ (ಶಿಲಾತ್ವಾದಿಗಳಲ್ಲಿ) ಆ ಸಂಬಂಧವು ತನ್ನ ಅಸಾಧಾರಣಧರ್ಮವಾದ ಶಿಲಾತ್ವದಿಂದಲೇ (ಶಿಲಾತ್ವತ್ವದಿಂದಲೇ) ಅವಚ್ಛಿನ್ನವಾಗುತ್ತದೆ. ಆದ್ದರಿಂದ ಮೂಲೋಕ್ತವಾದ ಲಕ್ಷಣಕ್ಕೆ ಎಲ್ಲಿ ತಾದೃಶಸಂಬಂಧಾವಚ್ಛಿನ್ನ ಕಾರ್ಯಾಭಾವವ್ಯಾಪ್ಯತ್ವವು ಸ್ವ ಅಸಾಧಾರಣ ಅತಿರಿಕ್ತಧರ್ಮದಿಂದ ಅವಚ್ಛಿನ್ನವಾಗುತ್ತದೋ ತದವಚ್ಛಿನ್ನವಾದುದು ಕಾರಣ ಎಂಬುದರಲ್ಲಿ ತಾತ್ಪರ್ಯ.

## ಅವ್ಯಾಪ್ತಿ ಬರುವುದಿಲ್ಲ

**चरमकारणे च यद्यपीतराभावो नावच्छेदकः । तथाप्युत्पादकाल एव तथा उत्पादानन्तरमेव कार्योत्पादेन तदा कार्याभावात् ।**

ಚರಮಕಾರಣ ಸ್ಥಳದಲ್ಲಿ ಯದ್ಯಪಿ ಇತರಾಭಾವವು ಅವಚ್ಛೇದಕವಾಗುವುದಿಲ್ಲ. ಆದರೂ ಅಲ್ಲಿ ಕಾರ್ಯಾಭಾವವು ಅಪ್ರಸಿದ್ಧವಾಗುವುದಿಲ್ಲ. ಕಪಾಲದ್ವಯ ಸಂಯೋಗವು ಚರಮಕಾರಣವಾದುದರಿಂದ ಕಪಾಲದ್ವಯಸಂಯೋಗೋತ್ಪತ್ತಿಯ ಉತ್ತರಕ್ಷಣದಲ್ಲಿ ಘಟೋತ್ಪತ್ತಿಯಾಗುತ್ತದೆ. ಕಪಾಲದ್ವಯಸಂಯೋಗೋತ್ಪತ್ತಿಯ ಕಾಲದಲ್ಲಿ ಘಟವು ಇಲ್ಲದಿರುವುದರಿಂದ ಅಲ್ಲಿ ಘಟಾಭಾವವು ಆಕ್ಷಣದಲ್ಲಿ ಪ್ರಸಿದ್ಧವಾಗುತ್ತದೆ. ಆ ಸಂಯೋಗದಲ್ಲಿರುವ ಘಟಾಭಾವವ್ಯಾಪ್ಯತ್ವವು ಸ್ವ ಅಸಾಧಾರಣವಾದ ಸಂಯೋಗತ್ವಾವಚ್ಛಿನ್ನವಾಗುವುದಿಲ್ಲ. ಏಕೆಂದರೆ ಅದು ಅತಿ ಪ್ರಸಕ್ತವಾಗುತ್ತದೆ. ಆದ್ದರಿಂದ ಅಲ್ಲಿ ಉತ್ಪತ್ತಿಕ್ಷಣವನ್ನೇ ಅವಚ್ಛೇದಕವೆಂದು ಹೇಳಬೇಕು. ತಥಾಚ ಸ್ವಾಸಾಧಾರಣ ಧರ್ಮೇತರಾವಚ್ಛಿನ್ನವಾದ್ದರಿಂದ ಅಲ್ಲಿಯೂ ಅವ್ಯಾಪ್ತಿಯು ಬರುವುದಿಲ್ಲ.

## ಜಾತಿ ಘಟಿತ ಲಕ್ಷಣವು ಅನಿವಾರ್ಯ

**यद्वा चरमकारणे परामर्शादावपि प्रतिबन्धकाभावविलम्बेन कार्योत्पत्तिविलम्बादित्यन्तराभावावच्छिन्नत्वमेव । यदि च क्वचिन्न तथात्वं तदा तत्सजातीयत्वं लक्षणं बोध्यम् ।**

ಅಥವಾ ಅನುಮಿತಿ ಚರಮಕಾರಣವಾದ ಪರಾಮರ್ಶಾದಿಗಳಲ್ಲಿ ಪ್ರತಿಬಂಧಕಾಭಾವ-ವಿಲಂಬದಿಂದ ಕಾರ್ಯೋತ್ಪತ್ತಿ ವಿಲಂಬವು ಕಂಡುಬರುವುದರಿಂದ ಅಲ್ಲಿಯೂ ಸಹ ಕಾರ್ಯಾಭಾವವು ಇತರಾಭಾವಾವಚ್ಛಿನ್ನವಾಗುತ್ತದೆ. ಎಲ್ಲಿ ಚರಮ ಕಾರಣವಿರುವಾಗ ಕಾರ್ಯಾಭಾವವು ಇತರಾಭಾವಾವಚ್ಛಿನ್ನವಾಗುವುದಿಲ್ಲವೋ ಅಲ್ಲಿಯೂ ಕೂಡ ತಜ್ಜಾತೀಯತ್ವವನ್ನು ತಂದು ಲಕ್ಷಣವನ್ನು ಸಮನ್ವಯಮಾಡಬೇಕು.

## ಅರಣ್ಯಸ್ಥ ದಂಡದಲ್ಲಿ ಅವ್ಯಾಪ್ತಿ ಇಲ್ಲ

**न चारण्यस्थदण्डे तद्दण्डत्वादिनैव तदवच्छेदादव्याप्तिरिति वाच्यम् । दण्डत्वमादाय लक्षणसत्त्वात् । एवञ्च घटकारणज्ञानत्वादावपि तत्सम्बन्धावच्छिन्नकार्याभाव-व्याप्यत्वं दण्डाद्यभावावच्छेद्यमेवेति न तत्राव्याप्तिरिति ध्येयम्।**

ಇನ್ನು ಅರಣ್ಯಸ್ಥ ದಂಡದಲ್ಲಿ ಕಾರ್ಯಾಭಾವ ವ್ಯಾಪ್ಯತ್ವವು ತದ್ದಂಡತ್ವದಿಂದಲೇ ಅವಚ್ಛಿನ್ನವಾಗುವುದರಿಂದ ಅವ್ಯಾಪ್ತಿಯು ಬರುತ್ತದೆ ಎಂಬುದು ಇಲ್ಲ. ಅಲ್ಲಿ ದಂಡತ್ವವನ್ನು ತೆಗೆದುಕೊಂಡು ಲಕ್ಷಣ ಸಮನ್ವಯವನ್ನು ಮಾಡಬಹುದು. ಆದ್ದರಿಂದ ಘಟಕಾರಣ ಜ್ಞಾನತ್ವಾದಿಗಳಲ್ಲಿಯೂ ಅವಧ್ಯವಧಿಮತ್ತ್ವ ಸಂಬಂಧಾವಚ್ಛಿನ್ನ ಕಾರ್ಯಾಭಾವವ್ಯಾಪ್ಯತ್ವವು ದಂಡಾಭಾವದಿಂದಲೇ ಅವಚ್ಛಿನ್ನವಾಗುವುದರಿಂದ ಅಲ್ಲಿಯೂ ಅವ್ಯಾಪ್ತಿಯು ಇಲ್ಲ ಎಂದು ತಿಳಿಯಬೇಕು .

## ದಂಡರೂಪಾದಿಗಳಲ್ಲಿ ಅತಿವ್ಯಾಪ್ತಿ ಇಲ್ಲ

**'ननु दण्डरूपादावतिप्रसङ्ग इति चेत् । न । दण्डाद्धट इतिवद्दण्डरूपाद्धट इति प्रतीत्यभावेन तादृशसम्बन्धा-वच्छिन्नकार्याभावसम्बन्धस्य दण्डरूपत्वेनैवावच्छेदात् । अत एव व्योमादावपि न घटकारणत्वप्रसङ्गः ।**

ಹಾಗಾದರೆ ದಂಡರೂಪಾದಿಗಳಲ್ಲಿ ಅತಿವ್ಯಾಪ್ತಿಯು ಬರುತ್ತದೆ ಎಂಬುದೂ ಸರಿಯಲ್ಲ. ದಂಡಾದ್ಘಟಃ ಎಂಬ ಪ್ರತೀತಿಯು ಇರುವಂತೆ ದಂಡರೂಪಾತ್ಘಟಃ ಎಂಬ ಪ್ರತೀತಿಯು ಇಲ್ಲವಾದ್ದರಿಂದ ದಂಡರೂಪನಿಷ್ಠ ತಾದೃಶಸಂಬಂಧಾವಚ್ಛಿನ್ನ ಕಾರ್ಯಾಭಾವ ವ್ಯಾಪ್ಯತ್ವವು ಸ್ವಾಸಾಧಾರಣ ಧರ್ಮವಾದ ದಂಡರೂಪತ್ವದಿಂದಲೇ ಅವಚ್ಛಿನ್ನವಾಗುತ್ತದೆ. ಇದರಂತೆಯೇ ವ್ಯೋಮಾದಿಗಳಲ್ಲಿ ಘಟಕಾರಣತ್ವಕ್ಕೆ ಅತಿವ್ಯಾಪ್ತಿ ಇಲ್ಲ ಎಂದು ತಿಳಿಯಬೇಕು.

## ವಸ್ತುವಿನ ಸ್ವಭಾವವೇ ಕಾರಣ

**अत्र च स्वभाव एव कारणम् । एवञ्चानन्यथासिद्धत्वेन विशेषणीयमतो नोक्तदोष इति कस्यचिद् व्याख्यानमनादेयम्। उक्तेनैवोपपत्तेरिति ।।**

ದಂಡಾದ್ಘಟಃ ಎಂಬ ಪ್ರತೀತಿಯು ಬರುತ್ತದೆ. ಆಕಾಶಾದ್‌ಘಟಃ ಎಂಬ ಪ್ರತೀತಿಯು ಬರುವುದಿಲ್ಲ ಎಂಬುದಕ್ಕೆ ಏನು ನಿಯಾಮಕ ಎಂಬ ಪ್ರಶ್ನೆಗೆ ವಸ್ತುವಿನ ಸ್ವಭಾವ ಎಂದೇ ಉತ್ತರ. ಆದ್ದರಿಂದ ಅನನ್ಯಥಾ ಸಿದ್ಧತ್ವ ವಿಶೇಷಣವನ್ನು ಕೊಡಬೇಕು ಆದ್ದರಿಂದ ಇಂತಹ ಕಡೆಗಳಲ್ಲಿ ದೋಷವಿಲ್ಲ ಎಂಬ ಕೆಲವರ ಅಭಿಪ್ರಾಯವು ಅನಾದರಣೀಯವಾದುದು. ಏಕೆಂದರೆ ಅನನ್ಯಥಾ ಸಿದ್ಧತ್ವ ವಿಶೇಷಣವನ್ನು ಕೊಡದೇ ನಾವು ಎಲ್ಲವನ್ನೂ ಕೂಡಿಸಿದ್ದೇವೆ.

## ದಂಡತ್ವದಲ್ಲಿರುವ ಕಾರ್ಯ-ಅನುತ್ಪತ್ತಿವ್ಯಾಪ್ಯತ್ವ

**अन्यासमवधानावच्छिन्नेति ।। अन्यासमवधानावच्छिन्नं कार्यानुत्पत्तिव्याप्यत्वं यस्य तदवच्छिन्नत्वं कारणत्वमित्यर्थः। उत्पत्तिगर्भतया पूर्वस्माद्भेदः। अत्रापि पूर्वोक्तसम्बन्धविशेषमादाय उत्पत्त्यभावव्याप्यत्वं बोध्यम् ।**

ಅನ್ಯಾಸಮವಧಾನಾವಚ್ಛಿನ್ನೇತಿ – ಯಾವುದರಲ್ಲಿರುವ ಕಾರ್ಯ ಅನುತ್ಪತ್ತಿ ವ್ಯಾಪ್ಯತ್ವವು ಅನ್ಯ ಅಸಮವಧಾನಾವಚ್ಛಿನ್ನವಾಗುತ್ತದೆಯೋ ತದವಚ್ಛಿನ್ನವಾದುದು ಕಾರಣ ಎಂದು ಅರ್ಥ. ಉತ್ಪತ್ತಿ ಅಂಶವನ್ನು ಸೇರಿಸಿರುವುದರಿಂದ ಈಗ ಹಿಂದೆ ಹೇಳಿದಂತೆ ದಂಡತ್ವದಲ್ಲಿರುವ ಕಾರ್ಯಾನುತ್ಪತ್ತಿ ವ್ಯಾಪ್ಯತ್ವವು ಇತರ ಸಮವಧಾನ ಇಲ್ಲದಿದ್ದರೆ ಮಾತ್ರ ಸಿದ್ಧವಾಗುವುದರಿಂದ ಇತರ ಅಸಮವಧಾನಾವಚ್ಛಿನ್ನವಾಗಿದೆ. ದಂಡತ್ವಾವಚ್ಛಿನ್ನವಾದ ದಂಡವು ಕಾರಣ ಎಂದು ಅಭಿಪ್ರಾಯ. ಇಲ್ಲಿಯೂ ಸಹ ಹಿಂದೆ ಹೇಳಿದ ಅವಧಿ – ಅವಧಿಮತ್ತ್ವರೂಪ ಸಂಬಂಧ ವಿಶೇಷವನ್ನು ತೆಗೆದುಕೊಂಡೇ ಉತ್ಪತ್ತ್ಯಭಾವ ವ್ಯಾಪ್ಯತ್ವವನ್ನು ಹೇಳಬೇಕು.

## ಉತ್ಪತ್ತಿ ಎಂದರೇನು ?

**उत्पत्तिश्च स्वसमानकालीनपदार्थप्रतियोगिकध्वंसानाधारसमयसम्बन्धः । ध्वंसत्वं च प्रागभावप्रतियोग्यभावत्वं प्रागभावत्वं च न प्रतियोगिजनकाभावत्वं येनान्योन्याश्रयः स्यात् । किन्तु गन्धानाधारसमयानाधाराभावत्वम् । शेषं पूर्ववत् ।**

ಉತ್ಪತ್ತಿಯೆಂದರೆ ಸ್ವಸಮಾನಕಾಲೀನ ಪದಾರ್ಥ ಪ್ರತಿಯೋಗಿಕವಾದ ಧ್ವಂಸಕ್ಕೆ ಅನಾಧಾರವಾದ ಸಮಯಸಂಬಂಧ ಎಂದು ಅರ್ಥ. ಘಟಕ್ಕೆ ಸಮಾನಕಾಲೀನವಾದುದು ಪಟವಾದರೆ ಪಟಪ್ರತಿಯೋಗಿಕ ಧ್ವಂಸ ಅನಾಧಾರ ಸಮಯ ಸಂಬಂಧವು ಘಟಕ್ಕೆ ಇರುತ್ತದೆ. ಇದೇ ಉತ್ಪತ್ತಿ. ಘಟೋತ್ಪತ್ತಿ ದ್ವಿತೀಯ ಕ್ಷಣದಲ್ಲಿ ಆದ್ಯಕ್ಷಣವೃತ್ತಿತ್ವವಿಶಿಷ್ಟವಾದ ತದ್ಧ್ವಂಸವಿದೆ. ಆ ಧ್ವಂಸಕ್ಕೆ ಅನಾಧಾರವಾದ ಸಮಯ ಎಂದರೆ ಆದ್ಯಕ್ಷಣ. ತತ್ಸಂಬಂಧವು ಘಟಕ್ಕೆ ಇರುತ್ತದೆ. ಇಲ್ಲಿ ಪ್ರವಿಷ್ಟವಾದ ಧ್ವಂಸವು ಪ್ರಾಗಭಾವ ಪ್ರತಿಯೋಗ್ಯಭಾವ ರೂಪವಾದುದು. ಅದರಲ್ಲಿ ಪ್ರಾಗಭಾವತ್ವವೆಂದರೆ ಪ್ರತಿಯೋಗಿಜನಕ ಅಭಾವತ್ವ ಎಂದು ಹೇಳುವುದಿಲ್ಲ. ಏಕೆಂದರೆ ಕಾರಣಲಕ್ಷಣದಲ್ಲಿ ಜನಕತ್ವವು ಸೇರುವುದರಿಂದ ಅನ್ಯೋನ್ಯಾಶ್ರಯವು ಬರುತ್ತದೆ. ಆದ್ದರಿಂದ ಗಂಧಾನಾಧಾರ – ಸಮಯನಾಧಾರ – ಅಭಾವತ್ವಂ ಎಂದು ಹೇಳುತ್ತೇವೆ. ಗಂಧಾನಾಧಾರ ಸಮಯವೆಂದರೆ ಉತ್ಪತ್ತಿಕ್ಷಣ. ಉತ್ಪತ್ತಿಕ್ಷಣದಲ್ಲಿ ಪ್ರಾಗಭಾವವು ನಷ್ಟವಾಗುವುದರಿಂದ ಪ್ರಾಗಭಾವವು ತಾದೃಶ ಸಮಯಾನಾಧಾರವಾದ ಅಭಾವವಾಗುತ್ತದೆ. ಉಳಿದುದೆಲ್ಲವೂ ಹಿಂದಿನಂತೆಯೇ.

## ನಿಯತಪದದ ಸಾರ್ಥಕ್ಯ

**अनन्यथासिद्धेति ।। घटजातीयं प्रति रासभजातीयमनन्यथासिद्धमिति अत्रातिव्याप्तिवारणाय नियतपदम् । ननु नियतत्वं कालमपेक्ष्य देशमपेक्ष्य वा?**

ಅನನ್ಯಥಾಸಿದ್ಧೇತಿ–ಘಟತ್ವಾವಚ್ಛಿನ್ನವನ್ನು ಕುರಿತು ರಾಸಭತ್ವಾವಚ್ಛಿನ್ನವು ಅನ್ಯಥಾ ಸಿದ್ಧವಾದರೂ ಘಟಜಾತೀಯ ವ್ಯಕ್ತಿಯನ್ನು ಕುರಿತು ರಾಸಭಜಾತೀಯ ವ್ಯಕ್ತಿಯು ಅನ್ಯಥಾ ಸಿದ್ಧವಾಗುವುದಿಲ್ಲ. ಆದ್ದರಿಂದ ಅಲ್ಲಿ ಬರುವ ಅತಿವ್ಯಾಪ್ತಿಯನ್ನು ವಾರಣೆ ಮಾಡಲು ನಿಯತಪದವನ್ನು ಕೊಟ್ಟಿದೆ. ಇನ್ನು ನಿಯತತ್ವವು ಕಾಲದ ವಿವಕ್ಷೆಯಿಂದಲೋ ಅಥವಾ ದೇಶದ ವಿವಕ್ಷೆಯಿಂದಲೋ ಎಂದು ಪ್ರಶ್ನೆ.

## ನಿಯತತ್ವವು ಸಾಕ್ಷಾತ್ತಾಗಿಯೋ ? ಪರಂಪರೆಯಿಂದಲೋ?

**नाद्यः । रासभेपि गतत्वात् । घटपटादिपूर्वकाले रासभजातीयस्य नियमेन सत्त्वात् । नान्त्यः । साक्षात्सम्बन्धेनादृष्टादेर्घटादि-देशापेक्षयाऽनियमात् ।**

ಕಾಲದ ಅಪೇಕ್ಷೆಯಿಂದ ನಿಯತತ್ವ ಎಂದು ಹೇಳಿದರೆ ಘಟಾದಿ ಪೂರ್ವಕಾಲದಲ್ಲಿ ರಾಸಭಜಾತೀಯವಾದುದೂ ಸಹ ನಿಯಮೇನ ಎಲ್ಲೋ ಒಂದುಕಡೆ ಇರುವುದರಿಂದ ರಾಸಭದಲ್ಲಿ ಅತಿವ್ಯಾಪ್ತಿ ಬರುತ್ತದೆ. ಇನ್ನು ದೇಶವಿವಕ್ಷಯಾ ನಿಯತತ್ವ ಎಂದು ಹೇಳಿದರೆ ಆ ದೇಶದಲ್ಲಿ ಸಾಕ್ಷಾತ್ ಸಂಬಂಧದಿಂದ ನಿಯತತ್ವವೋ ಅಥವಾ ಪರಂಪರಾ ಸಂಬಂಧದಿಂದ ನಿಯತತ್ವವು (ಸಾಕ್ಷಾತ್ ಪರಂಪರಾ ಸಾಧಾರಣವಾದ ಸಂಬಂಧಮಾತ್ರದಿಂದ) ವಿವಕ್ಷಿತವೋ ಎಂದು ಪ್ರಶ್ನೆ.

## ಎರಡು ಪಕ್ಷಗಳಲ್ಲಿಯೂ ದೋಷ

**साक्षात्परम्परासाधारणसम्बन्धमात्रविवक्षायां रासभेपि घटादिदेशनियतत्वेनातिप्रसङ्गादिति । नैवम् ।**

ಸಾಕ್ಷಾತ್ ಸಂಬಂಧದಿಂದ ಎಂದು ವಿವಕ್ಷೆಮಾಡಿದರೆ ಘಟಕಾರಣವಾದ ಅದೃಷ್ಟಗಳಿಗೆ ಸಾಕ್ಷಾತ್ ಸಂಬಂಧದಿಂದ ಘಟದೇಶಸಂಬಂಧವಿಲ್ಲದಿರುವುದರಿಂದ ಅವ್ಯಾಪ್ತಿಯು ಬರುತ್ತದೆ. ಪರಂಪರಾ ಸಂಬಂಧವೆಂದಾಗಲೀ ಅಥವಾ ಸಾಕ್ಷಾತ್ ಪರಂಪರಾ ಸಾಧಾರಣ ಸಂಬಂಧಮಾತ್ರದಿಂದಾಗಲೀ ಕಾರ್ಯದೇಶವೃತ್ತಿತ್ವವನ್ನು ವಿವಕ್ಷೆಮಾಡಿದರೆ ಪರಂಪರಾ ಸಂಬಂಧದಿಂದ (ಅಥವಾ ಸಂಬಂಧ ಸಾಮಾನ್ಯದಿಂದ) ರಾಸಭಕ್ಕೆ ಘಟದೇಶನಿಯತತ್ವವು ಬರುವುದರಿಂದ ಅತಿವ್ಯಾಪ್ತಿಯು ಬರುತ್ತದೆ ಎಂಬ ಈ ಆಕ್ಷೇಪವು ಸರಿಯಲ್ಲ.

## ಕೆಲವರ ಉತ್ತರ

**साक्षात्परम्परासाधारणैकजातीयसम्बन्धेन देशनियतत्वस्य विवक्षितत्वात् । रासभादावेकजातीयसम्बन्धेन घटादिदेशनियतत्वाभावात् । घटादावेकजातीयसम्बन्धेना दृष्टादेर्नियतत्वादिति वदन्ति ।**

ಸಾಕ್ಷಾತ್ ಪರಂಪರಾ ಸಾಧಾರಣವಾದ ಏಕಜಾತೀಯ ಸಂಬಂಧದಿಂದ ಕಾರ್ಯದೇಶ ನಿಯತತ್ವವನ್ನು ಹೇಳುತ್ತೇವೆ. ರಾಸಭದಲ್ಲಿ ಅಂತಹ ಏಕಜಾತೀಯ ಸಂಬಂಧದಿಂದ ಘಟದೇಶನಿಯತತ್ವವು ಇಲ್ಲ. ಅದೃಷ್ಟಾದಿಗಳಲ್ಲಿ ಮಾತ್ರ ಇದೆ ಎಂದು ಕೆಲವರು ಉತ್ತರವನ್ನು ಹೇಳುತ್ತಾರೆ.

## ಚಿಂತಿಸಬೇಕಾದ ವಿಚಾರ

**अत्रेदं चिन्त्यम् –**

**कियत्सु घटेषु रासभस्याप्येकजातीयतत्सम्बन्धेन देशनियतत्वादतिप्रसङ्गः । कार्यतावच्छेदकावच्छेदेनादृष्टस्याप्यतथात्वम् । द्रव्यगुणाद्यनेककार्ये एकजातीयतत्सम्बन्धाभावादिति ।**

ಇಲ್ಲಿ ಈ ವಿಷಯವನ್ನು ಚಿಂತಿಸಬೇಕು. ಕೆಲವು ಘಟವ್ಯಕ್ತಿಗಳ ಸ್ಥಳದಲ್ಲಿ ರಾಸಭಕ್ಕೂ ಸಹ ಏಕಜಾತೀಯ ಸಂಬಂಧದಿಂದ ದೇಶನಿಯತತ್ವವು ಬರುವುದರಿಂದ ಅತಿವ್ಯಾಪ್ತಿಯು ಬರುತ್ತದೆ. ಕೆಲವು ಘಟವ್ಯಕ್ತಿಗಳಲ್ಲಿ ಬಂದರೂ ಘಟತ್ವಾವಚ್ಛೇದೇನ ರಾಸಭಕ್ಕೆ ನಿಯತತ್ವವು ಬರುವುದಿಲ್ಲವೆಂದು ಹೇಳಿದರೆ ಅದೃಷ್ಟಕ್ಕೂ ಸಹ ಕಾರ್ಯತಾವಚ್ಛೇದಕಾವಚ್ಛೇದೇನ ನಿಯತತ್ವವು ಬರುವುದಿಲ್ಲ. ದ್ರವ್ಯಗುಣ ಕರ್ಮಾದಿ ಕಾರ್ಯಗಳು ವಿಚಿತ್ರವಾಗಿರುವುದರಿಂದ ಆ ಎಲ್ಲಾ ಸ್ಥಳಗಳಲ್ಲಿಯೂ ಏಕಜಾತೀಯ ಅದೃಷ್ಟದ ಸಂಬಂಧವಿಲ್ಲವಾದ್ದರಿಂದ ಅವ್ಯಾಪ್ತಿಯು ಬರುತ್ತದೆ.

## ಜಾತೀಯ ಎಂಬ ಪದದ ಸಾರ್ಥಕ್ಯ

**भक्षितबीजसङ्ग्रहाय – जातीयेति ।। जातिपदं च कार्य-पूर्ववर्त्तितावच्छेदकधर्मपरम्। अतो नाकाशाद्येकवृत्तिकारणत्वे अव्याप्तिः ।पूर्ववृत्तित्वं च प्रागभावावच्छिन्नसमय-वृत्तित्वम् । प्रागभावश्च न विशेषणं येन प्रागभावेऽव्याप्तिः। किन्तु तदुपलक्षितकालविशेषवृत्तित्वं तच्च तत्राप्यस्ति। कालस्य च स्थूलस्यैवाधिकरणतया हेतुत्वं - तस्य च पूर्वक्षणवृत्तित्वमस्त्येव ।**

ಭಕ್ಷಿತ ಬೀಜದಲ್ಲಿ ಅವ್ಯಾಪ್ತಿಯನ್ನು ಪರಿಹಾರ ಮಾಡುವುದಕ್ಕಾಗಿ ಜಾತೀಯ ಎಂದು ಕೊಟ್ಟಿದೆ. ಜಾತಿ ಎಂದರೆ ಕಾರ್ಯಪೂರ್ವವರ್ತಿತಾವಚ್ಛೇದಕಧರ್ಮವುಳ್ಳದ್ದು ಎಂದು ಅರ್ಥ. ಆದ್ದರಿಂದ ಏಕವ್ಯಕ್ತಿಯಾದ ಆಕಾಶದಲ್ಲಿ ಯಾವ ಜಾತಿಯೂ ಇಲ್ಲದಿರುವುದರಿಂದ ಆಕಾಶಕ್ಕೆ ಶಬ್ದವನ್ನು ಕುರಿತು ಕಾರಣತ್ವವು ಬರದೇ ಅವ್ಯಾಪ್ತಿಯು ಬರುತ್ತದೆ ಎಂಬ ದೋಷಕ್ಕೆ ಅವಕಾಶವಿಲ್ಲ.

ಪೂರ್ವವೃತ್ತಿತ್ವ ಎಂದರೆ ಪ್ರಾಗಭಾವಾವಚ್ಛಿನ್ನ ಸಮಯವೃತ್ತಿತ್ವ ಎಂದು ಅರ್ಥ. ಇದರಲ್ಲಿ ಪ್ರಾಗಭಾವವು ವಿಶೇಷಣವಲ್ಲ ಕಿಂತು ಉಪಲಕ್ಷಣ. ಪ್ರಾಗಭಾವ ವಿಶೇಷಣವಾದರೆ ಸ್ವಾವಚ್ಛಿನ್ನಸಮಯವೃತ್ತಿತ್ವವು ಸ್ವಪದಾರ್ಥಕ್ಕೆ ಬರುವುದಿಲ್ಲವಾದ್ದರಿಂದ ಪ್ರಾಗಭಾವರೂಪಕಾರಣದಲ್ಲಿ ಅವ್ಯಾಪ್ತಿಯು ಬರುತ್ತದೆ. ಆದರೆ ಪ್ರಾಗಭಾವೋಪಲಕ್ಷಿತಕಾಲವಿಶೇಷವೃತ್ತಿತ್ವವು ಪ್ರಾಗಭಾವದಲ್ಲಿಯೂ ಬರುತ್ತದೆ. ಆದ್ದರಿಂದ ಅಲ್ಲಿ ಅವ್ಯಾಪ್ತಿಯಿಲ್ಲ.

## ಪ್ರತಿಯೋಗಿಜನಕತ್ವಾಭಾವತ್ವವನ್ನು ಪ್ರಾಗಭಾವತ್ವ ಎನ್ನಲಾಗದು

**नत्वधिकरणतया हेतुत्वं तस्य च पूर्वक्षणवृत्तित्वमस्त्येव । नत्वधिकरणस्येति न तदव्याप्तिर्दोषः । प्रागभावत्वं च न प्रतियोगिजनकाभावत्वम् । अन्योन्याश्रयात् ।**

ಕಾಲಕ್ಕೆ ಪೂರ್ವವೃತ್ತಿತ್ವವು ಬರುತ್ತದೆಯೇ ಹೊರತು ಕಾರ್ಯಾಧಿಕರಣಕ್ಕೆ ಪೂರ್ವವೃತ್ತಿತ್ವವು ಬರುವುದಿಲ್ಲ. ಆದ್ದರಿಂದ ಅಧಿಕರಣದಲ್ಲೇ ಅವ್ಯಾಪ್ತಿ ಬಂದರೂ ಅಧಿಕರಣದಲ್ಲಿ ಕಾರಣತ್ವವು ಇಲ್ಲದಿರುವುದರಿಂದ ದೋಷವಿಲ್ಲ. ಇಲ್ಲಿ ನಿವಿಷ್ಟವಾದ ಪ್ರಾಗಭಾವವು ಪ್ರತಿಯೋಗಿಜನಕ-ರೂಪವಾದುದು ಎಂದು ಹೇಳಿದರೆ ಪುನಃ ಲಕ್ಷಣದಲ್ಲಿ ಜನಕತ್ವವು ಸೇರುವುದರಿಂದ ಅನ್ಯೋನ್ಯಾಶ್ರಯವು ಬರುತ್ತದೆ. ಆದ್ದರಿಂದ ಪ್ರಾಗಭಾವತ್ವಂ ಪ್ರತಿಯೋಗಿಜನಕಾಭಾವತ್ವಂ ಎಂದು ಹೇಳಲು ಬರುವುದಿಲ್ಲ.

## ಪ್ರಾಗಭಾವತ್ವವು ವಿನಾಶ್ಯಭಾವತ್ವಸ್ವರೂಪವೂ ಅಲ್ಲ

**नापि विनाश्यभावत्वं विनाशस्य प्रागभावगर्भतया-न्योन्याश्रयात् । उत्पत्तिगर्भतया तन्निर्वचने चोत्पत्तिः स्वसमानकालीनपदार्थप्रतियोगिकध्वंसानाधारसमय-सम्बन्धरूपत्वेऽन्योन्याश्रयात् । किन्तु गन्धानाधार-समयानाधाराभावत्वम् ।**

ಅಥವಾ ವಿನಾಶ್ಯಭಾವತ್ವಂ ಎಂದು ಹೇಳಲು ಬರುವುದಿಲ್ಲ. ವಿನಾಶ ಶರೀರದಲ್ಲಿ ಪ್ರಾಗಭಾವವು ಸೇರಿರುವುದರಿಂದ ಪುನಃ ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ವಿನಾಶವನ್ನು ಪ್ರಾಗಭಾವ ಗರ್ಭವಾಗಿ ವಿವಕ್ಷೆಮಾಡದೆ (ಎಂದರೆ ಪ್ರಾಗಭಾವ ಭಿನ್ನತ್ವೇಸತಿ ಸಂಸರ್ಗಾಭಾವತ್ವಂ ಎಂದು ವಿವಕ್ಷೆಮಾಡದೆ) ಉತ್ಪತ್ತಿ ಮದ ಭಾವತ್ವಂ ಎಂದು ವಿವಕ್ಷೆ ಮಾಡಿದರೆ, ಉತ್ಪತ್ತಿಯು ಪುನಃ ಹಿಂದೆ ಹೇಳಿದಂತೆ ಸ್ವಸಮಾನಕಾಲೀನ ಪದಾರ್ಥಪ್ರತಿಯೋಗಿಕ – ಧ್ವಂಸ ಅನಾಧಾರಕಾಲಸಂಬಂಧ ಎಂದು ಹೇಳಬೇಕು. ಆಗ ಪುನಃ ಧ್ವಂಸಲಕ್ಷಣದಲ್ಲಿ ಧ್ವಂಸವು ಸೇರುವುದರಿಂದ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಆದ್ದರಿಂದ (ಘಟಪ್ರಾಗಭಾವತ್ವವೆಂದರೆ) ಗಂಧಾನಾಧಾರಸಮಯಾನಾಧಾರಾಭಾವತ್ವ ಎಂದೇ ಹೇಳಬೇಕು.

## ಘಟಾದಿಗಳಲ್ಲಿ ಅವ್ಯಾಪ್ತಿದೋಷ

**ननु ध्वंसप्रागभावानात्मनि घटादावव्याप्तिः । न चात्र तदलक्ष्यमेवेति वाच्यम् ।**

ಹೀಗೆ ಹೇಳಿದರೆ ಧ್ವಂಸಪ್ರಾಗಭಾವರೂಪವಾದ ಘಟಾದಿಗಳಲ್ಲಿ ಅವ್ಯಾಪ್ತಿಯು ಬರುತ್ತದೆ. ಘಟವು ಘಟಧ್ವಂಸಪ್ರಾಗಭಾವರೂಪವಾಗಿದೆ. ಆದ್ದರಿಂದ ಪ್ರಾಗಭಾವಕ್ಕೆ ಪ್ರಾಗಭಾವವು ಇಲ್ಲದಿರುವುದರಿಂದ ಧ್ವಂಸ ಪ್ರಾಗಭಾವರೂಪ ಘಟವನ್ನು ಕುರಿತು ಪ್ರಾಗಭಾವ ಘಟಿತವಾದ ಕಾರಣಾಶ್ರಯವಾದುದು ಇಲ್ಲವಾದ್ದರಿಂದ ಅವ್ಯಾಪ್ತಿಯು ಬರುತ್ತದೆ. ಇಲ್ಲಿ ಘಟವು ಲಕ್ಷ್ಯವಲ್ಲ ಎಂದು ಹೇಳೋಣ.

## ಕಾರಣತ್ವದ ಲಕ್ಷಣವೇ ಪ್ರಕೃತ

**न प्रागभावलक्षणमिह प्रकृतं किन्तु कारणत्वलक्षणम्। तच्च सामान्यत एव लक्ष्यं तथैवोपक्रमात् । तथा च ध्वंसप्रागभावस्यालक्ष्यत्वे ध्वंसकारणसाधारणं न तल्लक्षणमिति चेत् । न । अभावपदस्य भावाभावसाधारणविरोधिपरत्वात् ।**

ಇಲ್ಲಿ ಪ್ರಾಗಭಾವಲಕ್ಷಣವು ಪ್ರಕೃತವಲ್ಲ ಕಾರಣತ್ವದ ಲಕ್ಷಣವೇ ಪ್ರಕೃತವಾಗಿದೆ. ಅದು ಸಾಮಾನ್ಯತಃ ಪ್ರವೃತ್ತವಾಗಿದೆಯೇ ಹೊರತಾಗಿ ವಿಶೇಷರೂಪೇಣ ಪ್ರವೃತ್ತವಾಗಿಲ್ಲ. ಆದ್ದರಿಂದ ಘಟರೂಪವಾದ ಧ್ವಂಸ ಪ್ರಾಗಭಾವಸ್ಥಳದಲ್ಲಿ ಅವ್ಯಾಪ್ತಿ ಇಲ್ಲ ಎಂದು ಹೇಳಿದರೂ ಘಟಧ್ವಂಸವು ಒಂದುಕಾರ್ಯ. ಆ ಧ್ವಂಸವನ್ನು ಕುರಿತು ಪ್ರಾಗಭಾವವು ಕಾರಣ. ಧ್ವಂಸ ಪ್ರಾಗಭಾವವು ಲಕ್ಷ್ಯವಲ್ಲದಿದ್ದರೆ ಈ ಸ್ಥಳದಲ್ಲಂತೂ ಅವ್ಯಾಪ್ತಿಯು ಬಂದೇಬರುತ್ತದೆ ಎಂಬ ಶಂಕೆಯು ಬಂದರೆ ಕಾರಣತ್ವ ಶರೀರದಲ್ಲಿ ಅಭಾವ ಮತ್ತು ಪ್ರಾಗಭಾವವನ್ನು ಅಭಾವತ್ವೇನ ನಿವೇಶಮಾಡಿಲ್ಲ. ಕಿಂತು ಭಾವಾಭಾವ ಸಾಧಾರಣ ವಿರೋಧಿತ್ವೇನ ನಿವೇಶಮಾಡಿದೆ. ಆದ್ದರಿಂದ ಧ್ವಂಸಕ್ಕೆ ಪ್ರಾಗಭಾವವಿಲ್ಲದಿದ್ದರೂ ಧ್ವಂಸಕ್ಕೆ ವಿರೋಧಿ ಇರುವುದರಿಂದ ಇಲ್ಲಿ ಅವ್ಯಾಪ್ತಿಯು ಬರುವುದಿಲ್ಲ.

## ಅಭಾವಪದದ ಸಾರ್ಥಕ್ಯ

**यद्यप्येवं तद्वैयर्थ्यम् व्यावर्त्याभावात् । तथापि तत्तत्प्रतियोगिकाभावलाभार्थमभावपदम् । न हि प्रागभावसामान्यगर्भं कारणत्वम्, किन्तु तत्तत्प्रतियोगिकप्रागभावावच्छिन्न-**

**समयवृत्तित्वं तत्कारणत्वम् । तथा च तादृशकालावृत्तिस्तद्-भावस्तत्प्रागभाव इति पर्यवस्यति ।**

ಹಾಗಾದರೆ ಕಾರಣ ಶರೀರದಲ್ಲಿ ಅಭಾವ ಎಂಬ ಪದವನ್ನು ಕೊಟ್ಟಿರುವುದು ವ್ಯರ್ಥವಾಗುತ್ತದೆ. ಏಕೆಂದರೆ ಭಾವಕ್ಕೂ ಸಹ ವಿರೋಧಿತ್ವವಿರುವುದರಿಂದ ಅಭಾವಪದ ವ್ಯಾವರ್ತ್ಯವು ಇಲ್ಲ ಎಂಬ ಶಂಕೆಯು ಬಂದರೂ ತತ್ತತ್ಪ್ರತಿಯೋಗಿಕವಾದ ಅಭಾವಲಾಭಾರ್ಥವಾಗಿ ಅಭಾವಪದವನ್ನು ಕೊಟ್ಟಿದೆ. ಕಾರಣತ್ವಲಕ್ಷಣದಲ್ಲಿ ಪ್ರಾಗಭಾವವು ಪ್ರವಿಷ್ಟವಾಗಿಲ್ಲ. ಪ್ರಾಗಭಾವ ವಿಶೇಷಗಳು ಪ್ರವಿಷ್ಟವಾಗಿವೆ. ಆದ್ದರಿಂದ ತತ್ತತ್ಪ್ರತಿಯೋಗಿಕ ಪ್ರಾಗಭಾವವಚ್ಛಿನ್ನ ಸಮಯವೃತ್ತಿತ್ವಂ ತತ್ಕಾರಣತ್ವಂ ಎಂದಿಷ್ಟೇ ನಿವಿಷ್ಟವಾಗಿದೆಯಷ್ಟೆ. ಆದ್ದರಿಂದ ಅಂತಹ ಕಾಲ ಅವೃತ್ತಿಯಾದ ತದಭಾವವು ತತ್‌ಪ್ರಾಗಭಾವ ಎಂದು ಪರ್ಯವಸಾನವನ್ನು ಹೊಂದುತ್ತದೆ.

## ಸಮಯ ಪ್ರಸಿದ್ಧಿಗೆ ಅನುಮಾನ

**न च तादृशसमयाप्रसिद्धिः । गन्धत्वं स्वाधिकरणानधिकरण-समयवृत्तिकादाचित्कमात्रवृत्तिजातित्वात् चैत्रवदित्यनु-मानात् तत्सिद्धेः ।**

ಘಟಪ್ರಾಗಭಾವವು ಗಂಧಾನಾಧಾರ ಸಮಯಾನಾಧಾರ ಎಂದು ಹೇಳಿದ್ದೇವೆ. ಆದ್ದರಿಂದ ಗಂಧಾನಾಧಾರ ಸಮಯಾನಾಧಾರ ಅಭಾವವು ಘಟಪ್ರಾಗಭಾವವೆಂದು ಪರ್ಯವಸಾನವನ್ನು ಹೊಂದುತ್ತವೆ. ಗಂಧಾನಾಧಾರ ಸಮಯವೇ ಪ್ರಸಿದ್ಧವಾಗುವುದಿಲ್ಲವೆಂದು ಶಂಕೆಯನ್ನು ಮಾಡಬಾರದು. ಅನುಮಾನದಿಂದ ಅಂತಹ ಸಮಯವು ಪ್ರಸಿದ್ಧವಾಗುತ್ತದೆ. ಅಂತಹ ಅನುಮಾನ ಪ್ರಯೋಗವು ಈ ರೀತಿಯಿದೆ – ಗಂಧತ್ವವು ಸ್ವಾಧಿಕರಣಾನಧಿಕರಣ ಸಮಯವೃತ್ತಿಯಾಗಿದೆ ಕಾದಾಚಿತ್ಕ ಮಾತ್ರವೃತ್ತಿ ಜಾತಿಯಾದುದರಿಂದ ಚೈತ್ರತ್ವಜಾತಿಯಂತೆ ಎಂಬುದು ಆ ಪ್ರಯೋಗ.

## ಗಂಧಾನಾಧಾರ ಸಮಯದ ಸಾಧನೆಯಿಂದ ಏನು ಉಪಯೋಗ?

**ननु सिद्ध्यतु गन्धानाधारसमयः, तथापि प्रागभावस्य**

**कथं तदनधिकरणत्वं ग्राह्यम् नहि तत्र प्रत्यक्षमागमो वा सम्भवति, अनुमानं तु सम्भवेत् तच्च प्रसिद्ध्युत्तरम् । तथा चानुमानप्रवृत्तौ प्रागभावत्वेन धीस्तस्यां चानुमानप्रवृत्तिरित यन्योन्याश्रय इति चेन्न ।**

ಈ ಅನುಮಾನದಿಂದ ಗಂಧಾನಾಧಾರ ಸಮಯವು ಸಿದ್ಧವಾಗಲಿ, ಅದರ ಪ್ರಾಗಭಾವಕ್ಕೆ ಆ ಸಮಯಾನಧಿಕರಣತ್ವವು ಹೇಗೆ ಗೃಹೀತವಾಗುತ್ತದೆ? ಆ ಸಮಯದಲ್ಲಿ ಪ್ರಾಗಭಾವವಿಲ್ಲವೆಂಬ ವಿಷಯದಲ್ಲಿ ಪ್ರತ್ಯಕ್ಷವಾಗಲೀ ಆಗಮವಾಗಲೀ ಇರಲು ಸಾಧ್ಯವಿಲ್ಲ.

ಇನ್ನು ಅನುಮಾನವನ್ನು ಪ್ರಮಾಣವೆಂದು ಹೇಳಬೇಕು. ಆದರೆ ಅನುಮಾನದಿಂದ ಪ್ರಾಗಭಾವಕ್ಕೆ ತಾದೃಶ ಸಮಯಾನಾಧಾರತ್ವವನ್ನು ಸಾಧಿಸುವುದಾದರೆ, ಅದಕ್ಕಿಂತ ಮೊದಲು ಸಾಧ್ಯ ಪ್ರಸಿದ್ಧಿಯು ಇರಬೇಕು. ಪ್ರಾಗಭಾವತ್ವೇನ ಪ್ರಾಗಭಾವವು ಸಾಧ್ಯಶರೀರದಲ್ಲಿ ಇರುವುದರಿಂದ ಅನುಮಾನ ಪ್ರವೃತ್ತಿಗಿಂತಲೂ ಮೊದಲು ಪ್ರಾಗಭಾವವು ಪ್ರಾಗಭಾವತ್ವೇನ ರೂಪೇಣ ಸಿದ್ಧವಾಗುವುದಿಲ್ಲ. ಸಿದ್ಧವಾದರೆ ಸಾಧ್ಯಪ್ರಸಿದ್ಧಿ ಇರುವುದರಿಂದ ಅನುಮಾನ ಪ್ರಯೋಗದಿಂದ ಪ್ರಾಗಭಾವವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯವು ಬರುವುದರಿಂದ ಪ್ರಾಗಭಾವದಲ್ಲಿ (ಘಟಪ್ರಾಗಭಾವದಲ್ಲಿ) ಗಂಧ ಅನಾಧಾರ ಸಮಯ ಅನಧಿಕರಣತ್ವದ ಜ್ಞಾನವೇ ಬರಲು ಸಾಧ್ಯವಿಲ್ಲ ಎಂದು ಹೇಳಿದರೆ ಈ ಆಕ್ಷೇಪವು ಸರಿಯಲ್ಲ.

## ಗಂಧಾನಾಧಾರ ಸಮಯವೇ ಇರುವುದಿಲ್ಲ

**तादृशनिर्णयवतोपि मीमांसकस्य भविष्यतीति बुद्धेर्निरुक्तातिरिक्तरूपेण प्रागभावस्यावश्यं तद्बुद्धिविषयत्वात् तेन रूपेण तद्बुद्धिविषयत्वेन वोपस्थितस्य प्रागभावस्य लिङ्गाभासादिनापि तादृशसमयानाधारत्वानुमितिसम्भवात्, गन्धस्यैव दृष्टान्तत्वाच्च ।**

ಗಂಧ ಅನಾಧಾರ ಸಮಯವೇ ಇಲ್ಲ ಎಂಬ ನಿಶ್ಚಯವು ಇರುವ ಮೀಮಾಂಸಕನಿಗೂ ಸಹ 'ಭವಿಷ್ಯತಿ' ಎಂಬ ಬುದ್ಧಿಯಿದೆ. ಆದ್ದರಿಂದ ಆ ಬುದ್ಧಿಗೆ ವಿಷಯವಾದದ್ದು ಪ್ರಾಗಭಾವವೆಂದೇ ಹೇಳಬೇಕು. ಆ ಪ್ರಾಗಭಾವವು ಗಂಧ ಅನಾಧಾರ ಸಮಯಾನಾಧಾರ ಅಭಾವತ್ವ ರೂಪದಿಂದಾಗಲೀ ಅಥವಾ ಭವಿಷ್ಯತಿ ಇತಿ ಜ್ಞಾನವಿಷಯತ್ವರೂಪದಿಂದಾಗಲೀ ಉಪಸ್ಥಿತವಾಗಲೇಬೇಕು. ಹೀಗೆ ಸಾಧ್ಯವು ಪ್ರಸಿದ್ಧವಾಗುವುದರಿಂದ ಲಿಂಗಾಭಾಸದಿಂದಲಾದರೂ ಅಂತಹ ಅನುಮಿತಿಯು ಉಂಟಾಗಿ ಗಂಧಾನಾಧಾರ ಸಮಯಾನಾಧಾರತ್ವವು ಸಿದ್ಧವಾಗುತ್ತದೆ. ಈ ಅನುಮಾನದಲ್ಲಿ ಗಂಧವೇ ದೃಷ್ಟಾಂತವಾಗುತ್ತದೆ.

## ಧ್ವಂಸಭಿನ್ನವಾದ ಅಭಾವವೇ ಸಿದ್ಧವಾಗಬೇಕು

**यद्वा कादाचित्काभावत्वेनैव उपस्थितस्य तस्य तदनुमानं ध्वंसांशे बाधादेवाननुमानात्, तदनवतारे तदंशे भ्रमत्वेपि क्षत्यभावाच्च ।**

ಅಥವಾ ಈ ಅನುಮಾನದಿಂದ ಉಪಸ್ಥಿತವಾಗುವ ಅಭಾವವು ಕಾದಾಚಿತ್ಕಾಭಾವತ್ವರೂಪದಿಂದಲೇ ಉಪಸ್ಥಿತವಾಗಲಿ. ಆದರೂ ಕಾದಾಚಿತ್ಕ ಅಭಾವವಾಗಿ ಧ್ವಂಸದ ಪ್ರಸಕ್ತಿಯೇ ಇಲ್ಲದಿರುವುದರಿಂದ (ಘಟವೇ ಉತ್ಪನ್ನವಾಗದಿರುವಾಗ ಘಟಧ್ವಂಸದ ಪ್ರಸಕ್ತಿ ಇಲ್ಲ). ಆದ್ದರಿಂದ ಸಾಧ್ಯವು ಧ್ವಂಸದಲ್ಲಿ ಪರ್ಯವಸಾನವನ್ನು ಹೊಂದುವುದಿಲ್ಲ. ಆದ್ದರಿಂದ ಧ್ವಂಸಭಿನ್ನ ಅಭಾವವೇ ಸಿದ್ಧವಾಗಬೇಕು. ಅಂತಹ ಧ್ವಂಸಾಂಶದಲ್ಲಿ ಅನುಮಿತಿಯು ಭ್ರಮವಾದರೂ ಯಾವ ದೋಷವೂ ಇಲ್ಲ.

## ಮೀಮಾಂಸಕರ ಅಭಿಪ್ರಾಯ

**ननु गन्धानाधारसमयो नास्तीति निर्णयवतो मीमांसकस्येष्टसाधनतालिङ्गककार्यताज्ञानेन प्रवृत्तिदर्शनान्नैतत् प्रागभावत्वगर्भं कारणत्वम्,**

ಸತ್ಕಾರ್ಯವಾದಿಗಳಾದ ಮೀಮಾಂಸಕರು ಗಂಧ ಅನಾಧಾರ ಸಮಯವೇ ಇಲ್ಲವೆಂದು ಹೇಳುತ್ತಾರೆ. ಅವರಿಗೆ ಗಂಧಾನಾಧಾರ ಸಮಯವಿಲ್ಲವೆಂಬ ನಿರ್ಣಯವೇ ಇದೆ. ಅವರು

ಇಷ್ಟಸಾಧನತಾ ಲಿಂಗದಿಂದ ಕಾರ್ಯತಾ ಜ್ಞಾನವನ್ನು ಹೊಂದಿ ಘಟಾದಿಗಳಲ್ಲಿ ಪ್ರವೃತ್ತಿಯನ್ನು ಮಾಡುತ್ತಾರೆ. ಆದ್ದರಿಂದ ಪ್ರವೃತ್ತಿಯನ್ನು ಕುರಿತು ಕಾರ್ಯತಾ ಜ್ಞಾನವು ಕಾರಣ. ಕಾರ್ಯತಾ ಜ್ಞಾನದಲ್ಲಿ ಕಾರಣತ್ವದ ಲಕ್ಷಣವು ಬರಬೇಕು. ಆದರೆ ಗಂಧ ಅನಾಧಾರ ಸಮಯವೇ ಇಲ್ಲವೆಂದು ಹೇಳುವವರಿಗೆ ಗಂಧ ಅನಾಧಾರ ಸಮಯ ಘಟಿತವಾದ ಕಾರಣತ್ವವು ಕಾರ್ಯತಾ ಜ್ಞಾನದಲ್ಲಿ ಬರುವುದಿಲ್ಲವಾದ್ದರಿಂದ ಅವರಿಗೆ ಘಟಾದಿಗಳಲ್ಲಿ ಪ್ರವೃತ್ತಿಯೇ ಉಂಟಾಗಲಾರದು.

## ಮೀಮಾಂಸಕರಿಗೆ ವ್ಯಾಹತಿ ದೋಷ

**किञ्च कारणत्वबोधकशब्दादिरेवैवं महाप्रलयकाले प्रमाणं स्यात् तस्य तद्गर्भत्वात् तथाच तदनभ्युपगमोपि तस्य व्याहन्येतेति चेन्न । गन्धानाधारेत्यादिना भविष्यतीति प्रतीतिनिर्वाहप्रयोजकस्य प्रागभावत्वस्योपलक्षणत्वात्**

ಮತ್ತು ಕಾರಣತ್ವವು ಪ್ರಾಗಭಾವ ಗರ್ಭಿತವಾಗದಿದ್ದರೆ ಮಹಾಪ್ರಲಯದಲ್ಲಿ ಕಾರಣತ್ವವನ್ನು ಹೇಳುವ ಶಬ್ದಗಳೇ ಮಹಾಪ್ರಲಯಕಾಲದಲ್ಲಿ ಪ್ರಮಾಣವಾಗಬಹುದಾದ್ದರಿಂದ ಅವರು ಮಹಾಪ್ರಲಯವನ್ನು ಅಂಗೀಕರಿಸದಿರುವುದು ವ್ಯಾಹತವಾಗುತ್ತದೆ ಎಂಬ ಆಕ್ಷೇಪವು ಸರಿಯಲ್ಲ.

ಗಂಧ ಅನಾಧಾರ ಸಮಯ ಅನಾಧಾರ ಇತ್ಯಾದಿ ಪದಗಳಿಂದ 'ಭವಿಷ್ಯತಿ' ಎಂಬ ಬುದ್ಧಿಗೆ ಪ್ರಯೋಜಕವಾದ ಪ್ರಾಗಭಾವತ್ವವನ್ನೇ ಉಪಲಕ್ಷಿತವಾಗಿ ತೆಗೆದುಕೊಳ್ಳುತ್ತೇವೆ.

## ಭವಿಷ್ಯತಿ ಎಂಬ ಬುದ್ಧಿಗೆ ಪ್ರಯೋಜಕವಾದ ವಸ್ತುವೇ ಹೇತು

**अत एव मीमांसकं प्रति जनकत्वघटितस्य लिङ्गस्य नैयायिकेनोक्तावपि नान्यतरसिद्ध्यादिदोष इति वदन्ति। तच्चिन्त्यम् । तस्यैवानुगतस्य निर्वक्तुमशक्यात् । न चाखण्डमेव प्रागभावत्वं तेनोपलक्षितमिति वाच्यम् ।**

ಆದ್ದರಿಂದಲೇ ನೈಯಾಯಿಕರು ಮೀಮಾಂಸಕರನ್ನು ಕುರಿತು ಕಾರಣತ್ವಘಟಿತವಾದ ಹೇತುವನ್ನು ಪ್ರಯೋಗಿಸಿದರೂ ಅನ್ಯತರಾಸಿದ್ಧಿ ದೋಷವಿಲ್ಲ. ಏಕೆಂದರೆ ಭವಿಷ್ಯತಿ ಎಂಬ ಬುದ್ಧಿಗೆ ಪ್ರಯೋಜಕವಾದ ವಸ್ತುವನ್ನೇ ಅಲ್ಲಿ ಹೇತುವನ್ನಾಗಿ ಮಾಡಿದೆ. ಅದನ್ನು ಮೀಮಾಂಸಕರೂ ಒಪ್ಪಬೇಕು ಎಂದು ಹೀಗೆ ಸಮಾಧಾನವನ್ನು ಹೇಳುತ್ತಾರೆ. ಆದರೆ ಇದೂ ಸರಿಯಲ್ಲ. ಏಕೆಂದರೆ ಅಂತಹ ಬುದ್ಧಿ ನಿರ್ವಾಹಕವಾದ ಅನುಗತವಾದ ಪ್ರಾಗಭಾವವನ್ನು ನಿರ್ವಚನ ಮಾಡಲು ಸಾಧ್ಯವಿಲ್ಲ. ಅಂತಹ ಬುದ್ಧಿಯಿಂದ ಅಖಂಡವಾದ ಪ್ರಾಗಭಾವತ್ವವೇ ಉಪಲಕ್ಷಿತವಾಗುತ್ತದೆ ಎಂದು ಹೇಳುವುದೂ ಸರಿಯಲ್ಲ.

## ಉಪಾಧಿಯು ಅಖಂಡವಾದಲ್ಲಿ ದೋಷ

**उपाधेरखण्डत्वे जात्यपलापापत्तेः । जातेश्चाभावेऽनभ्युपगमात् ।**

ಉಪಾಧಿಯೇ ಅಖಂಡವಾಗುವುದಾದರೆ ಜಾತಿಯನ್ನೇ ಅಂಗೀಕಾರ ಮಾಡಬೇಕಾದ ಪ್ರಸಂಗವಿಲ್ಲ ಎಂದು ಒಂದು ದೋಷ. ಇನ್ನು ಪ್ರಾಗಭಾವತ್ವವನ್ನೇ ಜಾತಿ ಎಂದು ಹೇಳುತ್ತೇವೆ ಎಂದು ಹೇಳಿದರೆ ಅಭಾವದಲ್ಲಿ ಯಾವ ಜಾತಿಯನ್ನೂ ಅಂಗೀಕಾರಮಾಡದಿರುವುದರಿಂದ ಅದು ಇನ್ನೊಂದು ದೋಷ. ಆದ್ದರಿಂದ ಈ ಸಮಾಧಾನವೂ ಸರಿಯಲ್ಲ.

## ಕಾರಣಸಾಧ್ಯತ್ವವೇ ವಿಧಿಯ ಅರ್ಥ

**वस्तुतस्तु नेदं कारणत्वं प्रवृत्त्यनुकूलम् । तथा च स्वमते लक्ष्यतावच्छेदकतया कारणपदप्रवृत्तिनिमित्ततया वा निरुक्तम्; यस्मिन् सतीत्यादिना निरुक्तं क्षेमसाधारणतत्साधकत्वज्ञानमेव प्रवर्तकम् । तदेव विद्ध्यर्थः ।**

ವಾಸ್ತವವಾಗಿ ಈ ಕಾರಣತ್ವವು ಪ್ರವೃತ್ತಿಗೆ ಅನುಕೂಲವಾದುದಲ್ಲ. ಆದ್ದರಿಂದ ಮಣಿಕಾರರ ಮತದಂತೆ ಲಕ್ಷ್ಯತಾವಚ್ಛೇದಕವಾಗಿಯೋ ಕಾರಣತ್ವದ ಪ್ರವೃತ್ತಿ ನಿಮಿತ್ತವಾಗಿಯೋ ನಿರ್ವಚನ ಮಾಡಿದ 'ಯಸ್ಮಿನ್ ಸತಿ' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಕಾರಣತ್ವಜ್ಞಾನವೇ ಪ್ರವರ್ತಕವಾದುದು.

ಈ ಕಾರಣತ್ವವಾದರೂ ಕ್ಷೇಮಸಾಧಾರಣವಾದುದು. ಯೋಗದಲ್ಲಿ ಅಥವಾ ಕ್ಷೇಮದಲ್ಲಿ ಅಂತಹ ಕಾರಣಸಾಧ್ಯತ್ವ ಜ್ಞಾನವು ಬಂದರೆ ಪ್ರವೃತ್ತಿಯುಂಟಾಗುತ್ತದೆ. ಆ ಕಾರಣಸಾಧ್ಯತ್ವವೇ ವಿಧಿಯ ಅರ್ಥ.

## ಪ್ರಾಯಶ್ಚಿತ್ತಾದಿಗಳಲ್ಲಿ ಪ್ರವೃತ್ತಿಯೇ ಕೂಡದಿರಬೇಕಾದೀತು

**अन्यथा प्रागभावस्य प्रागभावाभावे तत्पूर्ववर्तित्वाभावेन तद्घटितजनकत्वाभावाद् दुःखप्रागभावार्थितया प्रायश्चित्तादौ प्रवृत्त्यभावापत्तेरित्यादिविधौ वक्ष्यते । तथाच नोक्तदोषः ।**

ಇಲ್ಲದಿದ್ದರೆ ನಿತ್ಯಕರ್ಮಸ್ಥಳದಲ್ಲಿ ದುರಿತಪ್ರಾಗಭಾವವೇ ಸಾಧ್ಯವಾದುದು. ಅಲ್ಲಿ ಪ್ರಾಯಶ್ಚಿತ್ತದಿಂದ ದುರಿತ ಪ್ರಾಗಭಾವರೂಪವಾದ ಕಾರ್ಯವುಂಟಾಗುತ್ತದೆ. ಪ್ರಾಗಭಾವಕ್ಕೆ ಪ್ರಾಗಭಾವವಿಲ್ಲವಾದ್ದರಿಂದ ಪ್ರಾಗಭಾವಘಟಿತವಾದ ಕಾರಣತ್ವವನ್ನು ನಿರ್ವಚನಮಾಡಿದರೆ ಪ್ರಾಯಶ್ಚಿತ್ತಗಳಲ್ಲಿ ಅಂತಹ ಕಾರಣತ್ವವು ಬರಲು ಸಾಧ್ಯವಿಲ್ಲ. ಆದ್ದರಿಂದ ದುಃಖಪ್ರಾಗಭಾವಾರ್ಥಿಯಾದವನು ಪ್ರಾಯಶ್ಚಿತ್ತಾದಿ-ಗಳಲ್ಲಿ ಪ್ರವೃತ್ತಿಯನ್ನೇ ಮಾಡಲಾರನು ಎಂಬ ಆಪತ್ತಿಯು ಬರುತ್ತದೆ.

ಇವೇ ಮೊದಲಾದ ವಿಷಯಗಳನ್ನು ವಿಧಿವಾದದಲ್ಲಿ ಹೇಳುತ್ತೇವೆ. ಆದ್ದರಿಂದ ಈ ಕಾರಣತ್ವಜ್ಞಾನವು ಪ್ರವರ್ತಕವಾಗದಿದ್ದರೂ ಇಷ್ಟಸಾಧನತಾಲಿಂಗದಿಂದ ಉಂಟಾದ ಕಾರ್ಯತ್ವಜ್ಞಾನವು ಪ್ರಾಯಶ್ಚಿತ್ತಾದಿಗಳಲ್ಲಿ ಪ್ರವರ್ತಕವಾಗುವುದರಿಂದ ಯಾವ ದೋಷವೂ ಇಲ್ಲ.

## ಕಾರ್ಯಕಾರಣಭಾವಕ್ಕೆ ವ್ಯಭಿಚಾರದೋಷವಿಲ್ಲ

**एतेन गन्धानाधारगर्भवन्नीलानाधारगर्भतयापि तन्निर्वचनात् तद्गर्भं कारणत्वमपि भिद्येत । तथा च विनिगमकाभावादुभय-गर्भेष्टसाधनताज्ञानस्य प्रवर्तकतायां प्रवृत्त्यननुगम इत्यपास्तम्। निरुक्तस्य प्रवर्त्तकतानभ्युपगमात् ।**

ಹೀಗೆ ಹೇಳಿದುದರಿಂದ ಎಂದರೆ (ಈ ಕಾರಣತ್ವಜ್ಞಾನವು ಪ್ರವರ್ತಕವಲ್ಲ ಎಂದು ಹೇಳಿದ್ದರಿಂದ) ಈ ಮುಂದೆ ಹೇಳುವ ಆಕ್ಷೇಪವು ಬರುವುದಿಲ್ಲ. ಹೇಗೆಂದರೆ ಘಟಪ್ರಾಗಭಾವವನ್ನು ಗಂಧಾನಾಧಾರ

ಸಮಯಾನಾಧಾರಾಭಾವ ಎಂದು ಹೇಳಿದಂತೆ ನೀಲಾನಾಧಾರ ಸಮಯಾನಾಧಾರಾಭಾವ ಎಂದೂ ಹೇಳಬಹುದು. ಆದ್ದರಿಂದ ಘಟಕಾರಣತ್ವವು ಗಂಧಾನಾಧಾರ ಸಮಯ ಘಟಿತವಾಗುವಂತೆ ನೀಲಾಧಾರ ಸಮಯಘಟಿತವೂ ಆಗುತ್ತದೆ. ಇವೆರಡು ಕಾರಣತ್ವಗಳು ಭಿನ್ನಭಿನ್ನವಾಗಿವೆ. ಏಕೆಂದರೆ ಘಟಕವಾದ ಪದಾರ್ಥಗಳು ಭಿನ್ನಭಿನ್ನವಾಗಿವೆ. ಇಂತಹ ಕಾಲದಲ್ಲಿ ಇಷ್ಟಸಾಧನತಾ ಜ್ಞಾನದಿಂದ ಪ್ರವೃತ್ತಿ ಉಂಟಾಗಬೇಕು. ಆದರೆ ಈ ಕಾರಣತ್ವಗಳೇ ಭಿನ್ನಭಿನ್ನವಾಗಿರುವುದರಿಂದ ಒಂದು ಕಾರಣತ್ವಜ್ಞಾನದಿಂದ ಉಂಟಾದ ಪ್ರವೃತ್ತಿಯ ಸ್ಥಳದಲ್ಲಿ ಇನ್ನೊಂದು ಕಾರಣತ್ವದ ಜ್ಞಾನವು ಇಲ್ಲದಿರುವುದರಿಂದ ಪ್ರವೃತ್ತಿಯ ಅನನುಗಮವು (ಕಾರ್ಯಕಾರಣಭಾವಕ್ಕೆ ವ್ಯಭಿಚಾರವು) ಬರುತ್ತದೆ ಎಂಬ ಈ ಆಕ್ಷೇಪವು ನಿರಸ್ತವಾಯಿತು. ಏಕೆಂದರೆ ಇಂತಹ ಕಾರಣತ್ವಜ್ಞಾನವು ಪ್ರವರ್ತಕವೇ ಅಲ್ಲವೆಂದು ಹೇಳಿದ್ದೇವೆ.

## ಅಭಾವತಾವಚ್ಛಿನ್ನವಾದ ಸಮಯವೇ ಹೇತುವೆಂದು ಹೇಳಲಾಗದು

**यत्तु आकाशपदात् कदाचिच्छब्दाश्रयत्वेन कदाचिदष्टद्र-व्यातिरिक्तद्रव्यत्वेनेतिवत् कदाचिन्नीलाद्यनाधारत्वेनापि समयविशेषोपलक्षणान्न क्वापि गतिः । तत्समयविशेषावृत्त्य-भावत्वावच्छिन्नसमयसत्त्वस्यैव हेतुतया च न प्रवृत्त्यननुगम इति निरुक्तमेव प्रवृत्त्यनुकूलमिति । तच्चिन्त्यम् ।**

ಇನ್ನು ಆಕಾಶಶಬ್ದದಿಂದ ಕೆಲವೊಮ್ಮೆ ಶಬ್ದಾಶ್ರಯತ್ವೇನ ಆಕಾಶಜ್ಞಾನವು ಬರುತ್ತದೆ. ಕೆಲವೊಮ್ಮೆ ಅಷ್ಟದ್ರವ್ಯಾತಿರಿಕ್ತದ್ರವ್ಯತ್ವೇನ ಆಕಾಶಜ್ಞಾನವು ಬರುತ್ತದೆ. ಅದರಂತೆ ನೀಲಾನಾಧಾರತ್ವಘಟಿತಕಾರಣತ್ವ ಜ್ಞಾನದಿಂದಲೂ ಗಂಧಾನಾಧಾರ ಘಟಿತ ಕಾರಣತ್ವ ಜ್ಞಾನದಿಂದಲೂ ಪ್ರವೃತ್ತಿಯುಂಟಾದರೂ ಯಾವ ಹಾನಿಯೂ ಇಲ್ಲ. ನೀಲಾನಾಧಾರ ಸಮಯ ಎಂಬಲ್ಲಿ ಆ ಸಮಯದಲ್ಲಿ ನೀಲಾನಾಧಾರತ್ವವನ್ನು ಅಥವಾ ಗಂಧಾನಾಧಾರತ್ವವನ್ನು ಉಪಲಕ್ಷಣವಾಗಿ ನಿವೇಶಮಾಡಲಾಗಿದೆ. ಆದ್ದರಿಂದ ಅಂತಹ ಸಮಯವಿಶೇಷವೃತ್ತಿಯಾದ ಅಭಾವತ್ವಾವಚ್ಛಿನ್ನವೆಂದು ಅರ್ಥ. ತಥಾಚ ಅಂತಹ ಸಮಯವಿಶೇಷ ಅವೃತ್ತಿ ಅಭಾವತ್ವಾವಚ್ಛಿನ್ನ ಸಮಯವೇ ಹೇತುವೆಂದು ಹೇಳಿದರೆ ಅದು ಎರಡುಕಡೆಗಳಲ್ಲಿಯೂ ಅನುಗತವಾಗುವುದರಿಂದ ಈ ಕಾರಣತ್ವಜ್ಞಾನವು ಪ್ರವೃತ್ತಿಗೆ ಅನುಕೂಲವಾಗುತ್ತದೆ ಎಂಬ ಈ ಸಮಾಧಾನವೂ ಸರಿಯಲ್ಲ.

## ಪ್ರಾಗಭಾವವನ್ನೇ ಒಪ್ಪದ ಮೀಮಾಂಸಕರಿಗೆ ದೋಷ

**तत्समयानभ्युपगन्तुरे तज्ज्ञानं विनैवान्यज्ञानादेव प्रवृत्तिरित्यननुगमस्यैवमप्यपरिहार्यत्वात्, प्रायश्चित्त प्रवृत्त्यनुपपत्तेश्च । अत एव तत्समयाघटितस्यानुगतस्य प्रागभावत्वस्य निर्वक्तुं शक्यत्वेपि न प्रवृत्त्यनुकूलत्वमिति ध्येयम् ।**

ಗಂಧಾನಾಧಾರ ಸಮಯವನ್ನೇ (ಮತ್ತು ನೀಲಾನಾಧಾರ ಸಮಯವನ್ನೇ) ಅಂಗೀಕರಿಸದಿರುವ ಮೀಮಾಂಸಕನು ಈ ಕಾರಣತ್ವಜ್ಞಾನವನ್ನು ಒಪ್ಪದೇ ಇಷ್ಟ ಸಾಧನತಾ ಲಿಂಗಕವಾದ ಕಾರ್ಯತಾಜ್ಞಾನದಿಂದಲೇ ಪ್ರವೃತ್ತಿಯನ್ನು ಒಪ್ಪುವಾಗ ಪುನಃ ಪ್ರವೃತ್ತಿಯನ್ನು ಕುರಿತು ಎರಡು ಕಾರಣಗಳು ಉಂಟಾಗುವುದರಿಂದ ಅನನುಗಮವು ಇದ್ದೇಇದೆ.

ಮತ್ತು ಪ್ರಾಗಭಾವವನ್ನು ಹೀಗೆ ಅನುಗಮಮಾಡಿದರೂ ಪ್ರಾಗಭಾವವನ್ನೇ ಒಪ್ಪದಿರುವ ಮೀಮಾಂಸಕರಿಗೆ ಪ್ರಾಯಶ್ಚಿತ್ತದಲ್ಲಿ ಪ್ರವೃತ್ತಿಯಾಗಲಾರದು ಎಂಬ ದೋಷವು ಹಾಗೆಯೇ ಉಳಿಯುತ್ತದೆ. ಆದ್ದರಿಂದ ಗಂಧಾನಾಧಾರ ಸಮಯ ಘಟಿತವಲ್ಲದ ಅನುಗತವಾದ ಪ್ರಾಗಭಾವವನ್ನು ಹೇಳುವುದಕ್ಕೆ ಬಂದರೂ ಅದು ಪ್ರವೃತ್ತಿಗೆ ಅನುಕೂಲವಾಗುವುದಿಲ್ಲ. ಏಕೆಂದರೆ ಕಾರ್ಯತಾ ಜ್ಞಾನದಿಂದಲೇ ಪ್ರವೃತ್ತಿಯು ಉಂಟಾಗುವುದರಿಂದ ಕಾರ್ಯಕಾರಣಭಾವಕ್ಕೆ ವ್ಯಭಿಚಾರವು ಬಂದೇ ಬರುತ್ತದೆ.

## ವ್ಯರ್ಥವಿಶೇಷಣತ್ವಪರಿಹಾರಕ್ಕಾಗಿ ಮತ್ತೊಂದು ವಿಶೇಷಣ ಬೇಕಾಗಿಲ್ಲ

**यत्तु – गन्धानाधारसमयस्य महाप्रलयत्वे मानाभावः, युगपन्नाशे मानाऽभावात् । तथाच यावद्गन्धनाशानन्तरमपि वस्त्वन्तरसत्त्वसम्भावनया तत्प्रागभावस्य गन्धानाधारसमया नाधारत्वसंशयेन तत्कारणे तद्गर्भकारणलक्षणाव्याप्तिसन्देहः, एवञ्च व्यर्थविशेषणतासन्देहात् तद्वारणाय विशेषणमप्यदेयम् – इति । तन्न ।**

ಇನ್ನು ಗಂಧಾನಾಧಾರ ಸಮಯವು ಮಹಾಪ್ರಲಯ ಎಂಬುದಕ್ಕೆ ಯಾವ ಪ್ರಮಾಣವೂ ಇಲ್ಲ. ಗಂಧ ನಾಶಸಮಯದಲ್ಲಿ ಎಲ್ಲ ಗಂಧಗಳೂ ಒಟ್ಟಿಗೆ ನಾಶವಾಗುತ್ತವೆ ಎಂಬ ವಿಷಯದಲ್ಲಿಯೂ ಪ್ರಮಾಣವಿಲ್ಲ. ಮತ್ತು ಎಲ್ಲ ಗಂಧಗಳೂ ಒಟ್ಟಿಗೆ ನಾಶವನ್ನು ಹೊಂದಿದರೂ ಇನ್ನೊಂದು ಕಾರ್ಯವೂ ನಾಶವನ್ನು ಹೊಂದುತ್ತದೆ ಎಂಬುದಕ್ಕೂ ಪ್ರಮಾಣವಿಲ್ಲ. ಆದ್ದರಿಂದ ಎಲ್ಲಾ ಗಂಧಗಳು ನಾಶವಾದಮೇಲೆಯೂ ಇನ್ನೊಂದು ವಸ್ತುವು ಇರಬಹುದು ಎಂಬ ಸಂಭಾವನೆಯೂ ಉಂಟಾಗುತ್ತದೆ. ಆ ಉಳಿದ ವಸ್ತುವಿನ ಪ್ರಾಗಭಾವದಲ್ಲಿ ಗಂಧಾನಾಧಾರಸಮಯನಾಧಾರತ್ವ ಸಂಶಯವೇ ಉಂಟಾಗುತ್ತದೆ. ಆಗ ಆ ವಸ್ತುವಿಗೆ ಕಾರಣವಾದುದರಲ್ಲಿ ಗಂಧಾನಾಧಾರ ಸಮಯಘಟಿತವಾದ ಕಾರಣತ್ವ ಲಕ್ಷಣಕ್ಕೆ ಅವ್ಯಾಪ್ತಿಯು ಬರುತ್ತದೆ ಎಂಬ ಸಂದೇಹವೂ ಬರುತ್ತದೆ. ಆದ್ದರಿಂದ ಗಂಧಾನಾಧಾರತ್ವವನ್ನು ವಿಶೇಷಣವಾಗಿ ಕೊಡುವುದು ವ್ಯರ್ಥ ಎಂಬ ಸಂದೇಹ ಬರುವುದರಿಂದ ವ್ಯರ್ಥವಿಶೇಷಣತ್ವವನ್ನು ಪರಿಹಾರಮಾಡಲು ಇನ್ನೊಂದು ವಿಶೇಷಣವನ್ನೂ ಕೊಡಬೇಕಾಗಿಲ್ಲ ಎಂಬ ಈ ಅಭಿಪ್ರಾಯವನ್ನು ಕೆಲವರು ಹೇಳುತ್ತಾರೆ. ಆದರೆ ಇದು ಸರಿಯಲ್ಲ.

## ಏಕಕಾಲದಲ್ಲಿಯೇ ಸಕಲ ಕಾರ್ಯಗಳು ನಾಶವಾಗುತ್ತವೆಂದು ಪರಿಹಾರ

**यावद्वन्धनाशो ह्यदृष्टाभावात्, अन्यथा संयोगविभागयोरन्योन्यनाश्यतयान्यतरावस्थितौ सर्वमुक्त्यनुपपत्तेः । तथा च सर्वादृष्टाभावात् कार्याभावो वाच्य इति युगपदेव सर्वनाश इत्याहुः ।**

ಎಲ್ಲ ಅದೃಷ್ಟಗಳೂ ಸಂಪೂರ್ಣವಾಗಿ ನಾಶವಾಗುವುದರಿಂದಲೇ ಭೋಕ್ತೃದೃಷ್ಟವಿಲ್ಲದಿರುವುದರಿಂದ ಎಲ್ಲಾ ಗಂಧಗಳೂ ನಾಶವನ್ನು ಹೊಂದುತ್ತವೆ. ಹೀಗೆ ಅದೃಷ್ಟನಾಶದಿಂದ ಎಲ್ಲಾ ಗಂಧಗಳ ನಾಶವನ್ನು ಒಪ್ಪದಿದ್ದರೆ ಸಂಯೋಗ ವಿಭಾಗಗಳು ಪರಸ್ಪರನಾಶ್ಯವಾದುದರಿಂದ ಕೊನೆಯಲ್ಲಿ ಸಂಯೋಗವಾಗಲೀ, ವಿಭಾಗವಾಗಲೀ ಉಳಿಯಲೇಬೇಕಾಗುತ್ತದೆ. ಒಂದು ಕಾರ್ಯವು ಉಳಿದಿರುವಾಗ ಸರ್ವಮುಕ್ತಿಯು ಅನುಪಪನ್ನವಾಗುತ್ತದೆ. ಆದ್ದರಿಂದ ಸರ್ವಾದೃಷ್ಟ ನಾಶದಿಂದಲೇ ಸಂಯೋಗವಿಭಾಗದ ನಾಶವನ್ನು ಹೇಳಬೇಕು. ಆದ್ದರಿಂದ ಸರ್ವಮುಕ್ತಿಯನ್ನು ಅಂಗೀಕರಿಸುವ ನೈಯಾಯಿಕರಾದ ನಾವು ಎಲ್ಲಾ ಅದೃಷ್ಟದ ನಾಶದಿಂದಲೇ ಕಾರ್ಯನಾಶವನ್ನು ಹೇಳಬೇಕಾಗಿರುವುದರಿಂದ ಏಕಕಾಲದಲ್ಲಿಯೇ

ಗಂಧಾದಿ ಎಲ್ಲಾ ಕಾರ್ಯಗಳೂ ನಾಶವನ್ನು ಹೊಂದುತ್ತವೆ ಎಂದು ಸಮಾಧಾನವನ್ನು ಹೇಳುತ್ತೇವೆ ಎಂದು ಹೇಳುತ್ತಾರೆ.

## ವೃತ್ತಿನಿಯಾಮಕ ಸಂಬಂಧದಿಂದ ವೃತ್ತಿತ್ವವನ್ನು ವಿವಕ್ಷಿಸಿಲ್ಲ

**न चाकाशादेरवृत्तितया पूर्वकालवर्त्तित्वाभावात् अव्याप्तिरिति वाच्यम् । वर्त्तिपदेन समवधानवत्त्वस्योक्तत्वात् ।**

ಆಕಾಶಾದಿಗಳು ಅವೃತ್ತಿ ಪದಾರ್ಥವಾದ್ದರಿಂದ ಪೂರ್ವಕಾಲವರ್ತಿತ್ವ ಘಟಿತವಾದ ಕಾರಣತ್ವಲಕ್ಷಣವು ಅಲ್ಲಿ ಬರುವುದಿಲ್ಲವಾದ್ದರಿಂದ ಶಬ್ದಕ್ಕೆ ಕಾರಣವಾದ ಆಕಾಶದಲ್ಲಿ ಅವ್ಯಾಪ್ತಿಯು ಬರುತ್ತದೆ ಎಂಬ ಆಕ್ಷೇಪವು ಸರಿಯಲ್ಲ. ಪೂರ್ವಕಾಲವರ್ತಿ ಎಂದರೆ ಪೂರ್ವಕಾಲ ಸಮವಧಾನ ಎಂದಿಷ್ಟೇ ಅರ್ಥ. ವೃತ್ತಿನಿಯಾಮಕ ಸಂಬಂಧದಿಂದ ವೃತ್ತಿತ್ವ ಎಂದು ಅರ್ಥವಲ್ಲ.

## ದ್ರವ್ಯತ್ವೇನ ಕಾರಣತ್ವ ಬರಲಿ ಎಂಬ ಆಕ್ಷೇಪ ತಪ್ಪು

**वस्तुतः कालस्य जगदाधारतया तत्रापि तद्वृत्तिः । ननु द्रव्यत्वेन रूपेण दण्डरासभयोर्नियतपूर्ववर्त्तित्वसत्त्वात् कारणत्वं स्यादिति चेन्न ।**

ಆದರೆ ವಾಸ್ತವವಾಗಿ ಕಾಲವು ಜಗದಾಧಾರವಾದ್ದರಿಂದ ಅಲ್ಲಿ ಆಕಾಶವು ವೃತ್ತಿಯಾಗಿಯೇ ಇದೆ. ಆದ್ದರಿಂದ ಕಾರಣತ್ವ ಲಕ್ಷಣಕ್ಕೆ ಆಕಾಶದಲ್ಲಿ ಅವ್ಯಾಪ್ತಿಯು ಬರುವುದಿಲ್ಲ ಎಂದು ಅಭಿಪ್ರಾಯ. ಇನ್ನು ಘಟರೂಪವಾದ ಕಾರ್ಯಸ್ಥಳದಲ್ಲಿ ದಂಡ ಮತ್ತು ರಾಸಭಗಳಿಗೆ ದ್ರವ್ಯತ್ವೇನ ಪೂರ್ವ ವೃತ್ತಿತ್ವವು ಇರುವುದರಿಂದ ಇವೆರಡಕ್ಕೂ ದ್ರವ್ಯತ್ವೇನ ಕಾರಣತ್ವವು ಬರಲಿ ಎಂಬ ಆಕ್ಷೇಪವು ಸರಿಯಲ್ಲ.

## ಕಾರಣತ್ವವು ಅಧಿಕರಣತ್ವ ಸ್ವರೂಪ

**तेन रूपेण तस्यान्यथासिद्धेर्वाच्यत्वात् सामग्री न कारणं क्षणविशेषत्वात् । कालोपाधेश्चाधिकरणत्वेनैव हेतुत्वात् ।**

ದ್ರವ್ಯತ್ವೇನ ದಂಡವು ಮತ್ತು ದ್ರವ್ಯತ್ವೇನ ರಾಸಭವು ಅನ್ಯಥಾ ಸಿದ್ಧವಾಗುತ್ತವೆ. ಇನ್ನು ಸಾಮಗ್ರಿಯು ಕಾರಣವಲ್ಲ. ಏಕೆಂದರೆ ಅದು ಕ್ಷಣವಿಶೇಷ ರೂಪವಾದುದು. ಕ್ಷಣವು ಕಾಲೋಪಾಧಿ

ಯಾದ್ದರಿಂದ ಕಾಲಕ್ಕೆ ಅಧಿಕರಣತ್ವ ರೂಪದಿಂದಲೇ ಕಾರಣತ್ವವೇ ಹೊರತು ಬೇರೆ ರೂಪದಿಂದ ಕಾರಣತ್ವವಿಲ್ಲ.

## ಕಾರಣತ್ವಲಕ್ಷಣಕ್ಕೆ ಸಾಮಗ್ರಿಯಲ್ಲಿ ಅತಿವ್ಯಾಪ್ತಿಯಿಲ್ಲ

**न च कारणमेलकरूपायां तस्यामतिप्रसङ्गः । दण्डादीनां कारणत्वस्येष्टत्वात् । मेलकस्वातिरिक्तस्यानभ्युपगमात् । अभ्युपगमे वा दण्डरूपवदनन्यथासिद्धत्वात्, परस्परप्रत्यासत्तिरूपस्येष्टत्वात् ।**

ಸಾಮಗ್ರಿ ಎಂದರೆ ಕಾರಣ ಮೇಲಕ ರೂಪವಾದುದು. ಅದು ಕಾರ್ಯನಿಯತ ಪೂರ್ವವೃತ್ತಿಯಾಗಿರುವುದರಿಂದ ಕಾರಣತ್ವಲಕ್ಷಣಕ್ಕೆ ಸಾಮಗ್ರಿಯಲ್ಲಿ ಅತಿವ್ಯಾಪ್ತಿ ಬರುತ್ತದೆ ಎಂಬ ಆಕ್ಷೇಪವೂ ಸರಿಯಲ್ಲ. ಸಾಮಗ್ರಿ ಎಂದರೆ ಎಲ್ಲಾ ಕಾರಣಗಳ ಸಮುದಾಯ. ಅದರಲ್ಲಿ ಘಟಕವಾದ ದಂಡಾದಿಗಳಿಗೆ ಕಾರಣತ್ವವು ಸಮ್ಮತವೇ ಆಗಿದೆ. ಇನ್ನು ಮೇಲಕವಾದುದು ಎಂಬ ಯಾವ ವಸ್ತುವೂ ಅಲ್ಲಿ ಇಲ್ಲ. ಅಂತಹ ಯಾವುದಾದರೂ ವಸ್ತುವನ್ನು ಅಂಗೀಕಾರ ಮಾಡಿದರೆ ದಂಡರೂಪದಂತೆ ಅದು ಅನ್ಯಥಾ ಸಿದ್ಧವಾಗುತ್ತದೆ. ಪರಸ್ಪರ ಪ್ರತ್ಯಾಸತ್ತಿರೂಪವಾದುದು ಎಂದು ಹೇಳಿದರೆ ಅದು ಇಷ್ಟವಾದುದೇ. ಅದಕ್ಕೆ ಪ್ರತ್ಯೇಕವಾಗಿ ಕಾರಣತ್ವವಿಲ್ಲ.

## ಕೆಲವರ ಪರಿಹಾರ

**केचित्तु– 'स्वरूपसम्बन्धविशेषःकारणताप्रतियोगित्वादिवत्। तत्परिचायक एवायं धर्मविशेष उक्तः' – इत्याहुः ।**

ಇನ್ನು ಕೆಲವರು ಕಾರಣತ್ವವೆಂದರೆ ಪ್ರತಿಯೋಗಿತ್ವಾದಿಗಳಂತೆ ಅದು ಸ್ವರೂಪಸಂಬಂಧ ವಿಶೇಷರೂಪವಾದುದು. ಈ ಲಕ್ಷಣಗಳನ್ನು ಹೇಳಿದ್ದು ಆ ಸ್ವರೂಪಸಂಬಂಧವನ್ನು ಪರಿಚಯ ಮಾಡಿಕೊಡುವುದಕ್ಕಾಗಿ ಮಾತ್ರ ಎಂದು ಹೇಳುತ್ತಾರೆ.

## ಕಾರಣತ್ವಲಕ್ಷಣಕ್ಕೆ ಅನ್ಯೋನ್ಯಾಶ್ರಯ ದೋಷ

**ननु कारणत्वादन्येन रूपेण सिद्ध्यभावोऽनान्यथासिद्धत्वमित्यन्योन्याश्रयः ।**

ಕಾರಣಲಕ್ಷಣದಲ್ಲಿ ಅನನ್ಯಥಾ ಸಿದ್ಧತ್ವವು ಸೇರಿದೆ. ಆದರಲ್ಲಿ ಘಟಕವಾದ ಅನನ್ಯಥಾ ಸಿದ್ಧತ್ವ ಎಂದರೆ ಏನು? ಎಂದರೆ ಕಾರಣತ್ವ ಭಿನ್ನರೂಪದಿಂದ ಸಿದ್ಧ್ಯಭಾವ ಎಂದು ಹೇಳಬೇಕು. ತಥಾಚ ಅನನ್ಯಥಾ ಸಿದ್ಧತ್ವವು ಕಾರಣತ್ವಘಟಿತವಾದ್ದರಿಂದ ಮತ್ತು ಕಾರಣತ್ವವು ಅನನ್ಯಥಾ ಸಿದ್ಧತ್ವ ಘಟಿತವಾದುದರಿಂದ ಅನ್ಯೋನ್ಯಾಶ್ರಯವು ಬರುತ್ತದೆ.

## ಅನ್ಯಥಾಸಿದ್ಧಿ ಪದಾರ್ಥದ ವಿಭಾಗ

**सिद्धिपदस्य चोत्पत्तिपरत्वे नित्यमात्रेऽतिव्याप्तिः । ज्ञप्तिपरत्वेऽसम्भवः । हेतोरपि प्रमेयत्वादिना ज्ञप्तेरिति योगार्थमपहाय रूढमन्यथासिद्धिपदार्थमाह – अन्यथेति ।।**

ಮತ್ತು ಸಿದ್ಧಿ ಎಂದರೆ ಏನು? ಉತ್ಪತ್ತಿಯೆಂದಾಗಲೀ ಜ್ಞಪ್ತಿ ಎಂದಾಗಲೀ ಹೇಳಬೇಕು. ಉತ್ಪತ್ತಿ ಎಂಬ ಪಕ್ಷದಲ್ಲಿ ಎಲ್ಲಾ ನಿತ್ಯ ಪದಾರ್ಥಗಳಲ್ಲಿಯೂ ಉತ್ಪತ್ತ್ಯಭಾವವು ಇರುವುದರಿಂದ ಅವೆಲ್ಲದರಲ್ಲಿಯೂ ಅನನ್ಯಥಾಸಿದ್ಧಲಕ್ಷಣಕ್ಕೆ ಅತಿವ್ಯಾಪ್ತಿಯು ಬರುತ್ತದೆ. ಜ್ಞಪ್ತಿ ಎಂದು ಅರ್ಥವನ್ನು ಮಾಡಿದರೆ ಕಾರಣತ್ವ ಭಿನ್ನರೂಪದಿಂದ ಜ್ಞಾನಾಭಾವವು ಅನನ್ಯಥಾ ಸಿದ್ಧಿ ಎಂದು ಹೇಳಿದಂತಾಯಿತು. ಆಗ ಕಾರಣಕ್ಕೂ ಕೂಡ ಕಾರಣತ್ವಾತಿರಿಕ್ತವಾದ ಪ್ರಮೇಯತ್ವರೂಪದಿಂದ ಜ್ಞಾನವಿರುವುದರಿಂದ ಅನ್ಯಥಾ ಸಿದ್ಧಿ ಉಂಟಾಗುತ್ತದೆ. ಆದ್ದರಿಂದ ಕಾರಣಲಕ್ಷಣಕ್ಕೆ ಅಸಂಭವವು ಬರುತ್ತದೆ ಎಂಬ ಕಾರಣದಿಂದ ಈ ಯೋಗಾರ್ಥವನ್ನು ಬಿಟ್ಟು ಅನ್ಯಥಾ ಸಿದ್ಧಿ ಪದಾರ್ಥದ ರೂಢಾರ್ಥವನ್ನು ತೆಗೆದುಕೊಂಡು ಅನ್ಯಥಾಸಿದ್ಧಿಪದಾರ್ಥವನ್ನು ವಿಭಾಗಮಾಡಿ ಹೇಳುತ್ತಾರೆ – ಅನ್ಯಥೇತಿ.

## ಕುಸುಮಾಂಜಲಿಯ ವ್ಯಾಖ್ಯಾನದಲ್ಲಿ ನಾನು ಹೀಗೆ ಹೇಳಿದ್ದೇನೆ

**यद्यपि कुसुमाञ्जलिप्रकाशे पञ्चधान्यथासिद्धिरुक्ता तथाप्यवच्छेदकजनकजनकयोरत्रैव प्रवेशान्न तत्सङ्ग्रहाय**

**प्रकारद्वयमुक्तम् । अत एव कुसुमाञ्जलिमकरन्देपि तथैव विभावितम् 'अस्माभिरि'ति ।**

ಯದ್ಯಪಿ ಕುಸುಮಾಂಜಲಿಯ ವ್ಯಾಖ್ಯಾನವಾದ ಪ್ರಕಾಶದಲ್ಲಿ ಅನ್ಯಥಾಸಿದ್ಧಿಯು ಐದು ವಿಧ ಎಂದು ಹೇಳಲ್ಪಟ್ಟಿದೆ. ಆದರೂ ಕಾರಣತಾವಚ್ಛೇದಕ ಮತ್ತು ಕಾರಣಜನಕಗಳನ್ನು ಈ ಮೂರರಲ್ಲಿ ಒಂದು ಅನ್ಯಥಾಸಿದ್ಧಿಯಲ್ಲೇ ಸೇರಿಸಬಹುದಾದ್ದರಿಂದ ಆ ಎರಡು ಪ್ರಕಾರಗಳನ್ನು ಬಿಟ್ಟಿದ್ದಾರೆ. ಆದ್ದರಿಂದಲೇ ಕುಸುಮಾಂಜಲಿ ವ್ಯಾಖ್ಯಾನವಾದ ನನ್ನಿಂದ (ರುಚಿದತ್ತನಿಂದ) ರಚಿಸಲ್ಪಟ್ಟ ಮಕರಂದ ವ್ಯಾಖ್ಯಾನದಲ್ಲಿ ಮೂರೇ ಅನ್ಯಥಾ ಸಿದ್ಧಿ ಎಂದು ಹೇಳಿದ್ದೇನೆ.

## ಪ್ರತ್ಯಕ್ಷಾತ್ಮಕಾವಾದ ಪೂರ್ವವೃತ್ತಿ ಇಲ್ಲದ್ದರಿಂದ ಅವ್ಯಾಪ್ತಿದೋಷ

**येन सहैवेति ।। तेन तदन्यथासिद्धमिति शेषः । ननु शब्दादिना दण्डपूर्ववर्त्तित्वग्रहं विनापि तद्रूपपूर्ववर्त्तित्वग्रह सम्भवात् नियमो सिद्धः । न च प्रत्यक्षेति विशेषणीयम्, अतीन्द्रियान्यथासिद्धेऽव्याप्तेः ।**

ಯೇನ ಸಹೈವೇತಿ – ಆದರಿಂದ ಅದು ಅನ್ಯಥಾ ಸಿದ್ಧವಾಗುತ್ತದೆ ಎಂದು ಇಲ್ಲಿ ಶೇಷವನ್ನು ಇಟ್ಟುಕೊಳ್ಳಬೇಕು. ದಂಡರೂಪಕ್ಕೆ ಪೂರ್ವವೃತ್ತಿತ್ವಗ್ರಹ ಉಂಟಾಗುವಾಗ ದಂಡದ ಜೊತೆಯಲ್ಲಿಯೇ ಪೂರ್ವವೃತ್ತಿತ್ವಗ್ರಹವು ಉಂಟಾಗುತ್ತದೆ ಎಂಬ ನಿಯಮವಿಲ್ಲ. ಏಕೆಂದರೆ ಪ್ರತ್ಯಕ್ಷದಲ್ಲಿ ಹಾಗಾಗಬಹುದಾದರೂ ಶಬ್ದದಿಂದ ದಂಡರೂಪದಲ್ಲಿ ಪೂರ್ವವೃತ್ತಿತ್ವಗ್ರಹವು ಉಂಟಾಗುವಾಗ ದಂಡದ ಪೂರ್ವವೃತ್ತಿತ್ವಗ್ರಹದ ಪ್ರಸಕ್ತಿಯೇ ಇಲ್ಲ. ಯೇನಸಹ ಪೂರ್ವವೃತ್ತಿತ್ವಂ ಗೃಹೀತ್ವೈವ ಎನ್ನುವ ಲಕ್ಷಣದಲ್ಲಿ ಆ ಪೂರ್ವವೃತ್ತಿತ್ವ ಗ್ರಹವು ಪ್ರತ್ಯಕ್ಷಾತ್ಮಕವಾದುದು ಎಂದು ವಿವಕ್ಷೆಮಾಡುತ್ತೇವೆ ಎಂದರೆ ಅತೀಂದ್ರಿಯವಾದ ಅನ್ಯಥಾ ಸಿದ್ಧದಲ್ಲಿ ಪ್ರತ್ಯಕ್ಷಾತ್ಮಕವಾದ ಪೂರ್ವವೃತ್ತಿತ್ವ ಗ್ರಹವೇ ಇಲ್ಲದಿರುವುದರಿಂದ ಅವ್ಯಾಪ್ತಿಯು ಬರುತ್ತದೆ.

## ದಂಡರೂಪಕ್ಕೆ ರೂಪತ್ವೇನ ಗೃಹೀತತ್ವವಿಲ್ಲ

**नियमाविवक्षायां दण्डरूपेणैव दण्डस्यान्यथासिद्ध्यापत्तेरिति चेन्न । रूपत्वमात्रस्यातिप्रसक्ततया दण्डरूपत्वेनैव पूर्ववर्त्तित्वग्रहो वाच्यः । तत्र साहित्यनियमात् ।**

ನಿಯಮಾಂಶವನ್ನು ಪರಿತ್ಯಾಗ ಮಾಡಿ ಯಾವುದರ ಪೂರ್ವವೃತ್ತಿತ್ವಗ್ರಹವು ಯಾವುದರ ಪೂರ್ವವೃತ್ತಿತ್ವಗ್ರಹದ ಜೊತೆಯಲ್ಲಿಯೇ ಉಂಟಾಗುತ್ತದೆಯೋ ಅದು ಅದನ್ನು ಕುರಿತು ಅನ್ಯಥಾ ಸಿದ್ಧವೆಂದು ಹೇಳಿದರೆ ಪ್ರತ್ಯಕ್ಷದಿಂದ ದಂಡಕ್ಕೆ ಪೂರ್ವವೃತ್ತಿತ್ವ ಗ್ರಹವು ಉಂಟಾಗುವಾಗ ದಂಡರೂಪಕ್ಕೂ ಉಂಟಾಗುವುದರಿಂದ ದಂಡರೂಪದಿಂದ ದಂಡಕ್ಕೆ ಅನ್ಯಥಾ ಸಿದ್ಧತ್ವವು ಬರಲಿ ಎಂಬ ಆಪತ್ತಿಯು ಬರುತ್ತದೆ ಎಂಬುದು ಸರಿಯಲ್ಲ. ದಂಡರೂಪಕ್ಕೆ ಪೂರ್ವವೃತ್ತಿತ್ವವು ಗೃಹೀತವಾಗುವಾಗ ರೂಪತ್ವೇನ ಗೃಹೀತವಾಗುತ್ತದೆ ಎಂದು ಹೇಳಲು ಸಾಧ್ಯವಿಲ್ಲ.

ಏಕೆಂದರೆ ರೂಪತ್ವವು ಅತಿಪ್ರಸಕ್ತವಾದ ಧರ್ಮ. ಆದ್ದರಿಂದ ದಂಡರೂಪತ್ವ ರೂಪದಿಂದಲೇ ಪೂರ್ವವೃತ್ತಿತ್ವವು ಗೃಹೀತವಾಗುತ್ತದೆ ಎಂದು ಹೇಳಬೇಕು. ಆಗ ನಿಯಮೇನ ದಂಡದ ಜೊತೆಯಲ್ಲಿಯೇ ದಂಡರೂಪಕ್ಕೆ ಪೂರ್ವವೃತ್ತಿತ್ವವು ಗೃಹೀತವಾಗುತ್ತದೆ ಎಂದು ಸಿದ್ಧವಾಗುತ್ತದೆ.

## ದಂಡತ್ವದಿಂದ ದಂಡಕ್ಕೆ ಅನ್ಯಥಾಸಿದ್ಧಿಯಿಲ್ಲ

**न चैवं द्रव्यत्वादेरतिप्रसक्ततया दण्डत्वेनैव दण्डस्य पूर्ववर्त्तित्वग्रहाद्दण्डत्वेन दण्डस्यान्यथासिद्धिरस्त्विति वाच्यम् । येन पृथगन्वयव्यतिरेकवता सहेत्यर्थात् । अत्रापृथगन्वयादिमत इत्यपि यस्येति विशेषणं देयम्, तेन दण्डेन दण्डसंयोगस्य नान्यथासिद्धिः ।**

ಹಾಗಾದರೆ ದಂಡಕ್ಕೆ ಪೂರ್ವವೃತ್ತಿತ್ವವು ಗೃಹೀತವಾಗುವಾಗ ದ್ರವ್ಯತ್ವವು ಅತಿಪ್ರಸಕ್ತವಾಗುವುದರಿಂದ ದಂಡತ್ವದ ಜೊತೆಯಲ್ಲಿಯೇ ದಂಡಕ್ಕೆ ಪೂರ್ವವೃತ್ತಿತ್ವವು ಗೃಹೀತವಾಗಬೇಕು. ಆದ್ದರಿಂದ ದಂಡತ್ವದಿಂದ ದಂಡಕ್ಕೆ ಅನ್ಯಥಾ ಸಿದ್ಧಿಯು ಬರಲಿ ಎಂದು

ಆಪತ್ತಿಯನ್ನು ಮಾಡಿದರೆ, ಲಕ್ಷಣಘಟಕವಾದ ಯೇನ ಮತ್ತು ಯಸ್ಯ ಎಂಬಲ್ಲಿ (ಯತ್ ಪದಾರ್ಥಗಳಲ್ಲಿ) ವಿಶೇಷಣಗಳನ್ನು ಕೊಡುತ್ತೇವೆ. ಯೇನ ಎಂಬಲ್ಲಿ ಪೃಥಗನ್ವಯ ವ್ಯತಿರೇಕವತಾ ಯೇನ ಎಂದರೆ ಸ್ವತಂತ್ರಾನ್ವಯ ವ್ಯತಿರೇಕವಿರುವ ಯಾವುದರ ಜೊತೆಯಲ್ಲಿ ಎಂದು ಅರ್ಥ.

ಯಸ್ಯ ಎಂಬಲ್ಲಿ ಸ್ವತಂತ್ರಾನ್ವಯ ವ್ಯತಿರೇಕವಿಲ್ಲದಿರುವ ಯಾವುದಕ್ಕೆ ಎಂದು ಅರ್ಥ. ದಂಡಕ್ಕೆ ಸ್ವತಂತ್ರಾನ್ವಯ ವ್ಯತಿರೇಕಗಳು ಇವೆ. ದಂಡತ್ವಕ್ಕೆ ಸ್ವತಂತ್ರಾನ್ವಯ ವ್ಯತಿರೇಕಗಳು ಇಲ್ಲ. ಆದ್ದರಿಂದ ದಂಡತ್ವದಿಂದ ದಂಡಕ್ಕೆ ಅನ್ಯಥಾ ಸಿದ್ಧಿಯಿಲ್ಲ. ಇನ್ನು ದಂಡಕ್ಕೂ ದಂಡಸಂಯೋಗಕ್ಕೂ ಸಹ ಸ್ವತಂತ್ರವಾದ ಅನ್ವಯವ್ಯತಿರೇಕಗಳೇ ಇರುವುದರಿಂದ ಅವೆರಡರಲ್ಲಿ ಯಾವುದರಿಂದ ಯಾವುದಕ್ಕೂ ಅನ್ಯಥಾ ಸಿದ್ಧಿಯಿಲ್ಲ.

## ಎರಡು ವಿಶೇಷಣಗಳಿಂದ ದೊರೆತ ಲಾಭ

**एतद्विशेषणमहिम्नैव यत्रोभयोरुभयविशेषणा- वच्छेदे नैवान्वयाद्यनुविधानं तत्रैकेनापरस्य नान्यथासिद्धिः । 'यथोद्भूतरूपतेजसोः' इत्येके ।**

ಈ ಎರಡು ವಿಶೇಷಣಗಳನ್ನು ಕೊಟ್ಟ ಕಾರಣದಿಂದಲೇ ಎಲ್ಲಿ ಕಾರಣತ್ವೇನ ಅಭಿಮತವಾದ ಎರಡು ವಸ್ತುಗಳಿಗೆ ತಮ್ಮತಮ್ಮ ವಿಶೇಷಣಾವಚ್ಛೇದೇನ ಅನ್ವಯವ್ಯತಿರೇಕ ವಿಧಾನವು ಇದೆಯೋ ಅಲ್ಲಿ ಒಂದರಿಂದ ಇನ್ನೊಂದಕ್ಕೆ ಅನ್ಯಥಾ ಸಿದ್ಧಿಯಿಲ್ಲ. ಉದ್ಭೂತರೂಪ ಮತ್ತು ತೇಜಸ್ಸುಗಳಿಗೆ ಹೇಗೆ ಪರಸ್ಪರ ಅನ್ಯಥಾ ಸಿದ್ಧಿಯಿಲ್ಲವೋ ಆದರಂತೆ ಎಂದು ಕೆಲವರು ಹೇಳುತ್ತಾರೆ.

## ಪೂರ್ವವೃತ್ತಿತ್ವ ಗ್ರಹಗಳಲ್ಲಿ ನಿಯಮೇನ ಸಾಹಿತ್ಯವಿದೆ

**यत्रोभयविशेषणावच्छेदेनैवान्वयाद्यनुविधानं तद्भिन्नत्वेन विशेषणान्न तादृशस्थलेतिऽप्रसङ्ग इत्यन्ये । कुम्भकारपिताप्य- त्रैवान्तर्भवति कुम्भकारत्वेन तदनन्यथासिद्धस्येष्टत्वात् कुम्भकारपितृत्वेनान्यथासिद्धत्वं वाच्यम् । तत्र तत्साहित्यनियमात् ।**

ಇನ್ನು ಕೆಲವರು ಎಲ್ಲಿ ಉಭಯಕ್ಕೆ ಉಭಯವಿಶೇಷಣಾವಚ್ಛೇದೇನ ಅನ್ವಯವ್ಯತಿರೇಕ ವಿಧಾನವಿದೆಯೋ ತದ್ಭಿನ್ನತ್ವ ವಿಶೇಷಣವನ್ನು ಅನ್ಯಥಾ ಸಿದ್ಧಲಕ್ಷಣದಲ್ಲಿ ಕೊಡಬೇಕು ಎಂದು ಹೇಳುತ್ತಾರೆ. ಕುಂಭಕಾರ ಪಿತೃವೂ ಕೂಡ ಈ ಅನ್ಯಥಾ ಸಿದ್ಧದಲ್ಲಿಯೇ ಅಂತರ್ಭಾವವನ್ನು ಹೊಂದುತ್ತಾನೆ. ಏಕೆಂದರೆ ಅಲ್ಲಿ ಪೂರ್ವವೃತ್ತಿತ್ವಗ್ರಹಗಳಲ್ಲಿ ನಿಯಮೇನ ಸಾಹಿತ್ಯವಿದೆ.

## ದೃಢತ್ವದಲ್ಲಿ ಅವ್ಯಾಪ್ತಿ ದೋಷ

**नन्वेवमुद्भूतरूपतेजसोरिव दृढत्वदण्डयोरपि नैकेनापरस्यान्यथासिद्धिः स्यात् । उभयोरुभयविशेषणावच्छेदेनैवान्वयाद्यनुविधानात् ।**

ಹಾಗಾದರೆ ಉದ್ಭೂತರೂಪ ಮತ್ತು ತೇಜಸ್ಸುಗಳಿಗೆ ಹೇಗೆ ಪರಸ್ಪರ ಅನ್ಯಥಾ ಸಿದ್ಧಿಯಿಲ್ಲವೋ, ಅದರಂತೆ ದೃಢತ್ವ ಮತ್ತು ದಂಡಗಳಿಗೂ ಒಂದರಿಂದ ಇನ್ನೊಂದಕ್ಕೆ ಅನ್ಯಥಾ ಸಿದ್ಧಿಯು ಬರುವುದು ಬೇಡ. ಏಕೆಂದರೆ ಎರಡಕ್ಕೂ ತಮ್ಮ ತಮ್ಮ ವಿಶೇಷಣಾವಚ್ಛೇದೇನ ಎಂದರೆ ದೃಢತ್ವಕ್ಕೆ ದೃಢತ್ವತ್ವಾವಚ್ಛೇದೇನ ಮತ್ತು ದಂಡಕ್ಕೆ ದಂಡತ್ವಾವಚ್ಛೇದೇನ ಅನ್ವಯವ್ಯತಿರೇಕಗಳು ಗೃಹೀತವಾಗುತ್ತವೆ. ಆದ್ದರಿಂದ ದೃಢತ್ವದಲ್ಲಿ ತದ್ಭಿನ್ನತ್ವವು ಬರುವುದಿಲ್ಲ. ಆದ್ದರಿಂದ ದೃಢತ್ವದಲ್ಲಿ ಅನ್ಯಥಾ ಸಿದ್ಧಲಕ್ಷಣಕ್ಕೆ ಅವ್ಯಾಪ್ತಿಯು ಬರುತ್ತದೆ.

## ಅವ್ಯಾಪ್ತಿಯ ಸಮರ್ಥನೆ

**न च दृढत्वस्य चक्रभ्रमिजनकत्वस्यान्वयाद्यनुविधानमेव नेति वाच्यम् । तथासति दण्डत्वेनैव हेतुतापत्तौ दृढत्वस्यावच्छेदकतापि न स्यात् ।**

ದೃಢತ್ವದಲ್ಲಿ ಅನ್ವಯವ್ಯತಿರೇಕ ವಿಧಾನವೇ ಇಲ್ಲವೆಂದು ಹೇಳಿ ಅನ್ಯಥಾ ಸಿದ್ಧಿಯನ್ನು ನಿರಾಕರಣೆ ಮಾಡುವುದಾದರೆ ಆಗ ನಿಮಗೆ ಅಭಿಪ್ರೇತವಾದ ಕಾರಣತಾವಚ್ಛೇದಕವೂ ಸಿದ್ಧವಾಗುವುದಿಲ್ಲ. ಆದ್ದರಿಂದ ಅನ್ವಯವ್ಯತಿರೇಕಾನುವಿಧಾನವನ್ನು ಒಪ್ಪಬೇಕು. ಅದು ದೃಢತ್ವತ್ವೇನ ರೂಪೇಣೈವ

ಬರುವುದರಿಂದ ತದ್ಭಿನ್ನರೂಪೇಣ ಬರದೇ ಇರುವುದರಿಂದ ದೃಢತ್ವದಲ್ಲಿ ಅವ್ಯಾಪ್ತಿಯು ಬಂದೇಬರುತ್ತದೆ.

## ರೂಪತ್ವವು ಅತಿಪ್ರಸಕ್ತವಲ್ಲದ್ದರಿಂದ ಅನ್ಯಥಾಸಿದ್ಧಿ

**किञ्च दण्डत्वेन दण्डस्य दण्डेन दण्डत्वस्यान्वयाद्यनुविधानम् इत्युभयोरुभयविशेषणावच्छेदेनैव अनुविधानमिति नैकेनापरस्यान्यथासिद्धिः स्यात् ।**

ಮತ್ತು ದಂಡತ್ವಕ್ಕೆ ಅನ್ವಯವ್ಯತಿರೇಕಾನುವಿಧಾನವು ತಿಳಿಯುವಾಗ ದಂಡದ ಜೊತೆಯಲ್ಲಿಯೇ ತಿಳಿಯುತ್ತದೆ. ಮತ್ತು ದಂಡಕ್ಕೆ ತಿಳಿಯುವಾಗ ದಂಡತ್ವದ ಜೊತೆಯಲ್ಲಿಯೇ ತಿಳಿಯುತ್ತದೆ. ಆದ್ದರಿಂದ ಎರಡಕ್ಕೂ ತಮ್ಮತಮ್ಮ ವಿಶೇಷಣಾವಚ್ಛೇದೇನ ಅನುವಿಧಾನವು ತಿಳಿಯುವುದರಿಂದ ಒಂದರಿಂದ ಇನ್ನೊಂದಕ್ಕೆ ಅನ್ಯಥಾ ಸಿದ್ಧಿ ಇಲ್ಲದೇ ಹೋಗಲಿ ಎಂಬ ಆಪತ್ತಿಯು ಬರುತ್ತದೆ. ಮತ್ತು ಕುಂಭಕಾರ ಪಿತೃವಿಗೆ ಕುಂಭಕಾರಪಿತೃತ್ವೇನ ಅನ್ಯಥಾ ಸಿದ್ಧತ್ವವು ಇದ್ದರೂ ಕುಂಭಕಾರತ್ವೇನ ಅನನ್ಯಥಾ ಸಿದ್ಧತ್ವವು ಇರುವಂತೆ ದಂಡರೂಪತ್ವೇನ ದಂಡರೂಪವು ಅನ್ಯಥಾ ಸಿದ್ಧವಾದರೂ ರೂಪತ್ವವು ಅತಿಪ್ರಸಕ್ತವಲ್ಲವಾದ್ದರಿಂದ ರೂಪತ್ವೇನ ದಂಡರೂಪಕ್ಕೆ ಅನನ್ಯಥಾ ಸಿದ್ಧತ್ವವು ಬರಲಿ ಎಂಬ ಆಕ್ಷೇಪವು ಬರುತ್ತದೆ.

## ದಂಡತ್ವವು ಅನತಿಪ್ರಸಕ್ತವಲ್ಲ

**अपि च कुम्भकारपितृत्वेनान्यथासिद्धस्यापि कुम्भकारत्वेनेव दण्डरूपत्वेनान्यथासिद्धस्यापि रूपत्वादिनाऽन्यथासिद्धिरस्तु न तु तदतिप्रसक्तमिति चेत् । तत् किमतिप्रसक्तत्वमप्यपरान्यथासिद्धिः । तथा चानन्यथासिद्धत्वनियतपूर्ववर्तित्वयोरप्रतिक्षेपे किं तेन ।**

ಹಾಗಾದರೆ ಅತಿಪ್ರಸಕ್ತತ್ವವನ್ನು ಅನ್ಯಥಾ ಸಿದ್ಧಲಕ್ಷಣದಲ್ಲಿ ಸೇರಿಸುತ್ತೀರಾ ಎಂದು ಪ್ರಶ್ನೆ. ಅತಿಪ್ರಸಕ್ತ ಧರ್ಮದಿಂದ ಅನನ್ಯಥಾ ಸಿದ್ಧತ್ವಕ್ಕಾಗಲೀ ಅಥವಾ ನಿಯತಪೂರ್ವವೃತ್ತಿತ್ವಕ್ಕಾಗಲೀ ಯಾವ ವಿರೋಧವೂ ಇಲ್ಲದಿದ್ದರೆ ಅನತಿಪ್ರಸಕ್ತತ್ವವಿಶೇಷಣವನ್ನು ಕಾರಣತ್ವಲಕ್ಷಣದಲ್ಲಿ ಏಕೆ ಕೊಡಬೇಕು? ಮತ್ತು ಅತಿಪ್ರಸಕ್ತತ್ವ ಎಂದರೆ ಫಲಾನುಪಹಿತ ವೃತ್ತಿತ್ವ ಎಂದೇ ಹೇಳಬೇಕು. ಬೇರೆ ಏನನ್ನೂ ಹೇಳಲು ಬರುವುದಿಲ್ಲ. ಫಲಾನುಪಹಿತವೃತ್ತಿತ್ವವು ದಂಡತ್ವಾದಿ ಸಾಧಾರಣವಾಗಿದೆ (ಏಕೆಂದರೆ ಅರಣ್ಯಸ್ಥ ದಂಡದಲ್ಲಿ ದಂಡತ್ವವಿದೆ ಫಲೋಪಧಾನವಿಲ್ಲ). ತಥಾಚ ದಂಡತ್ವವು ಅನತಿಪ್ರಸಕ್ತವಲ್ಲವಾದ್ದರಿಂದ ದಂಡತ್ವಕ್ಕೂ ಅನ್ಯಥಾ ಸಿದ್ಧಿಯು ಬರುವುದಿಲ್ಲ.

## ಅತಿಪ್ರಸಕ್ತತ್ವವೆಂದರೇನು ?

**किञ्च फलानुपहितवृत्तित्वस्यातिप्रसक्तत्वस्य दण्डत्वादिसाधारणत्वात्, अतादृशस्य चाभावात् । न च फलानुपहितनित्यवृत्तित्वेन तथात्वम्, रूपत्वेन नित्यरूपस्यापि घटजनकत्वाविरोधात्, उक्तरूपयोरप्रतिक्षेपात्।**

ಅತಿಪ್ರಸಕ್ತತ್ವವೆಂದರೆ ಫಲಾನುಪಹಿತನಿತ್ಯವೃತ್ತಿತ್ವ ಎಂದು ಹೇಳಿದರೆ ರೂಪತ್ವದಲ್ಲಿ ಫಲಾನುಪಹಿತ ನಿತ್ಯವೃತ್ತಿತ್ವವಿರುವುದರಿಂದ ರೂಪತ್ವೇನ ನಿತ್ಯರೂಪಕ್ಕೂ ಘಟಜನಕತ್ವವನ್ನು ಅಂಗೀಕರಿಸಿದರೆ ಯಾವ ವಿರೋಧವೂ ಇರುವುದಿಲ್ಲ. ಏಕೆಂದರೆ ಅನನ್ಯಥಾ ಸಿದ್ಧತ್ವ ಮತ್ತು ನಿಯತಪೂರ್ವವೃತ್ತಿತ್ವ ರೂಪಗಳಿಗೆ ಅದರಿಂದ ಯಾವ ವಿರೋಧವೂ ಇಲ್ಲ. ಆದ್ದರಿಂದ ರೂಪತ್ವೇನ ನಿತ್ಯರೂಪಕ್ಕೂ ಘಟಜನಕತ್ವವು ಬರಲಿ ಎಂಬ ಆಪತ್ತಿಯು ಬರುತ್ತದೆ.

## ಅನ್ಯಥಾಸಿದ್ಧಿಲಕ್ಷಣದ ಬಗ್ಗೆ

**जन्यरूपत्वेन वा हेतुत्वमस्तु । न च तेन रूपेणान्यत्र क्लृप्तेत्यत्रान्तर्भवतीति वाच्यम् । तर्हि दण्डरूपत्वेनापि तथास्तु किमुक्तान्यथासिद्ध्या इति चिन्त्यम् ।**

ಅಥವಾ ಜನ್ಯರೂಪತ್ವೇನ ರೂಪಕ್ಕೆ ಹೇತುತ್ವವು ಉಂಟಾಗಲಿ. ಅನ್ಯತ್ರ ಕ್ಲಪ್ತನಿಯತಪೂರ್ವವೃತ್ತಿ ಎಂಬ ಅನ್ಯಥಾಸಿದ್ಧಿಲಕ್ಷಣದಲ್ಲಿಯೇ ಇದು ಅಂತರ್ಭಾವವನ್ನು ಹೊಂದುತ್ತದೆ ಇಲ್ಲಿ ಅಂತರ್ಭಾವವನ್ನು ಹೊಂದುವುದಿಲ್ಲ ಎಂದು ಹೇಳಿದರೆ ದಂಡರೂಪಕ್ಕೂ ಸಹ ಅದೇ ಅನ್ಯಥಾ ಸಿದ್ಧಲಕ್ಷಣದಿಂದ ಅಲ್ಲಿಯೇ ಅಂತರ್ಭಾವವನ್ನು ಮಾಡಲು ಬರುವಾಗ ಈ ಮೊದಲನೇ ಅನ್ಯಥಾ ಸಿದ್ಧಿಲಕ್ಷಣವನ್ನು ಏಕೆ ಹೇಳಬೇಕು ಎಂಬ ಪ್ರಶ್ನೆಯು ಬರುತ್ತದೆ ಎಂಬುದು ಚಿಂತಿಸಬೇಕಾದ ವಿಷಯ.

## ವಿಪಕ್ಷೇ ಬಾಧಕತರ್ಕದಿಂದ ಶಬ್ದಕಾರಣತ್ವಸಮರ್ಥನೆ

**अन्यं प्रतीति ।। ननु शब्दोऽष्टद्रव्यातिरिक्तद्रव्याश्रितोऽष्ट-द्रव्यानाश्रितत्वे सति गुणत्वात् इत्यनेनाकाशसिद्धौ शब्द-पूर्ववर्त्तित्वतामज्ञात्वापि ज्ञानादिकं प्रति तस्य पूर्ववर्त्तित्वं ज्ञायत एवेति चेन्न । तेनापि विपक्षबाधकतया शब्दकारणतामुपजीव्यैवाकाशसिद्धेरित्याहुः ।**

ಅನ್ಯಂ ಪ್ರತೀತಿ – ಶಬ್ದಃ ಅಷ್ಟದ್ರವ್ಯಾತಿರಿಕ್ತದ್ರವ್ಯಾಶ್ರಿತಃ ಅಷ್ಟದ್ರವ್ಯಾನಾಶ್ರಿತತ್ವೇಸತಿ ಗುಣತ್ವಾತ್ ಎಂಬ ಅನುಮಾನದಿಂದ ಆಕಾಶವು ಸಿದ್ಧವಾಗುವುದರಿಂದ ಶಬ್ದಪೂರ್ವವೃತ್ತಿತ್ವ ಜ್ಞಾನವು ಉಂಟಾಗದೇ ಆಕಾಶಕ್ಕೆ ಜ್ಞಾನಪೂರ್ವವೃತ್ತಿತ್ವವು ತಿಳಿಯುತ್ತದೆ ಎಂಬುದು ಸರಿಯಲ್ಲ. ಈ ಅನುಮಾನಕ್ಕೆ ಅಪ್ರಯೋಜಕತ್ವ ಶಂಕೆಯನ್ನು ಮಾಡಿದರೆ ವಿಪಕ್ಷ ಬಾಧಕವಾಗಿ ಆಕಾಶಕ್ಕೆ ಶಬ್ದಕಾರಣತ್ವವನ್ನು ಹೇಳಬೇಕಾಗುವುದರಿಂದ ಶಬ್ದಪೂರ್ವವೃತ್ತಿತ್ವವನ್ನು ತಿಳಿದೇ ಜ್ಞಾನಪೂರ್ವವೃತ್ತಿತ್ವವು ತಿಳಿಯುವುದರಿಂದ ಜ್ಞಾನವನ್ನು ಕುರಿತು ಆಕಾಶವು ಅನ್ಯಥಾ ಸಿದ್ಧವಾಗುತ್ತದೆ.

## ಶಬ್ದಪೂರ್ವವೃತ್ತಿತ್ವೇನ ಅನ್ಯಥಾಸಿದ್ಧತ್ವವು ಇಷ್ಟ

**न चैवं संयोगादिकमपि प्रत्याकाशस्यान्यथासिद्धत्वप्रसङ्गः । आकाशत्वेनेष्टत्वात् । द्रव्यत्वेन शब्दपूर्ववर्त्तितामज्ञात्वापि पूर्ववर्त्तित्वग्रहात् ।**

ಹಾಗಾದರೆ ಸಂಯೋಗಾದಿಗಳನ್ನು ಕುರಿತು ಆಕಾಶವು ಅನ್ಯಥಾ ಸಿದ್ಧವಾಗಲಿ ಎಂಬ ಪ್ರಸಂಗವು ಬರುತ್ತದೆ ಎಂದರೆ ಆಕಾಶತ್ವೇನ ಆಕಾಶಕ್ಕೆ ಅನ್ಯಥಾಸಿದ್ಧತ್ವವು ಇಷ್ಟವಾದುದೇ. ಎಂದರೆ ಶಬ್ದಪೂರ್ವವೃತ್ತಿತ್ವೇನ ಆಕಾಶಕ್ಕೆ ಅನ್ಯಥಾ ಸಿದ್ಧತ್ವವು ಇಷ್ಟವಾದುದೇ ಎಂದು ಅರ್ಥ. ಶಬ್ದ ಪೂರ್ವವೃತ್ತಿತ್ವವನ್ನು ತಿಳಿಯದೆಯೂ ಕೂಡ ಸಂಯೋಗವನ್ನು ಕುರಿತು ಪೂರ್ವವೃತ್ತಿತ್ವವು ತಿಳಿಯುವುದರಿಂದ ಎಂದು ಅಭಿಪ್ರಾಯ.

## ಅಪೂರ್ವವನ್ನು ಕುರಿತು ಯಾಗಕ್ಕೆ ಅನ್ಯಥಾ ಸಿದ್ಧಿಯಿಲ್ಲ

**नन्वेवं यागादेरपूर्वेन्यथासिद्ध्यापत्तिः । स्वर्गं प्रति पूर्ववर्त्तित्वे ज्ञात एव तस्य तं प्रति तद्ग्रहादिति चेन्न । साक्षादिति पूर्ववर्त्तित्वे विशेषणादित्याहुः ।**

ಹಾಗಾದರೆ ಅಪೂರ್ವವನ್ನು ಕುರಿತು ಯಾಗಕ್ಕೆ ಅನ್ಯಥಾ ಸಿದ್ಧಿಯು ಬರಲಿ. ಏಕೆಂದರೆ ಸ್ವರ್ಗಕ್ಕೆ ಪೂರ್ವವೃತ್ತಿತ್ವವನ್ನು ತಿಳಿದೇ ಯಾಗಕ್ಕೆ ಅಪೂರ್ವ ಪೂರ್ವವೃತ್ತಿತ್ವವು ತಿಳಿಯುತ್ತದೆ ಎಂಬ ಶಂಕೆಯು ಸರಿಯಲ್ಲ. ಯಾವುದರ ಪೂರ್ವವೃತ್ತಿತ್ವವನ್ನು ಸಾಕ್ಷಾತ್ತಾಗಿ ತಿಳಿದೇ ಯಾವುದಕ್ಕೆ ಸಾಕ್ಷಾತ್‌ಪೂರ್ವವೃತ್ತಿತ್ವವು ಗೃಹೀತವಾಗುತ್ತದೆಯೋ ಎಂದು ಅಭಿಪ್ರಾಯ. ಅಪೂರ್ವಕ್ಕೆ ಸ್ವರ್ಗ ಪೂರ್ವವೃತ್ತಿತ್ವವು ಸ್ವತಂತ್ರವಾಗಿ (ಸಾಕ್ಷಾತ್ತಾಗಿ) ತಿಳಿಯುವುದಿಲ್ಲ. ಯಾಗಕ್ಕೆ ಪೂರ್ವವೃತ್ತಿತ್ವವನ್ನು ತಿಳಿದೇ ತಿಳಿಯುವುದರಿಂದ ಅಪೂರ್ವವನ್ನು ಕುರಿತು ಯಾಗಕ್ಕೆ ಅನ್ಯಥಾ ಸಿದ್ಧಿಯಿಲ್ಲ ಎಂದು ಹೇಳುತ್ತಾರೆ.

## ಕೆಲವರ ಸಮಾಧಾನ

**तत्पूर्ववर्त्तित्वानुपपादकं यस्य पूर्ववर्त्तित्वं गृह्यत इत्यर्थादित्येके।**

ಇನ್ನು ಕೆಲವರು ಯಾವುದರ ಪೂರ್ವವೃತ್ತಿತ್ವಕ್ಕೆ ಉಪಪಾದಕವಾಗುವುದಿಲ್ಲವೋ ಎಂದು ಅರ್ಥವನ್ನು ಹೇಳಿ ಅಪೂರ್ವಕ್ಕೆ ಸ್ವರ್ಗಪೂರ್ವವೃತ್ತಿತ್ವವು, ಯಾಗದ ಸ್ವರ್ಗಪೂರ್ವವೃತ್ತಿತ್ವಕ್ಕೆ

ಉಪಪಾದಕವಾಗಿರುವುದರಿಂದ ಅಪೂರ್ವವನ್ನು ಕುರಿತು ಯಾಗಕ್ಕೆ ಅನ್ಯಥಾ ಸಿದ್ಧಿಯಿಲ್ಲ ಎಂದು ಹೇಳುತ್ತಾರೆ.

ಇನ್ನು ಕೆಲವರು ಯಾವುದು ಯಾವುದರ ಪೂರ್ವವೃತ್ತಿತ್ವವನ್ನು ಉಪಪಾದನೆ ಮಾಡುವುದಿಲ್ಲವೋ ಅದು ಅನ್ಯಥಾ ಸಿದ್ಧವಾಗುತ್ತದೆ ಎಂದು ಹೇಳುತ್ತಾರೆ.

## ದಂಡರೂಪವು ಹೇಗೆ ಅನ್ಯಥಾಸಿದ್ಧ?

**न च परत्वादिपूर्ववर्त्तित्वग्रहानन्तरमन्यकार्ये दिक्कालयोस्तद्ग्रह इत्यन्यथासिद्धिः । तद्ग्रहं विनाप्यधिकरणत्वेन कार्यमात्र-पूर्ववर्त्तित्वग्रहात् कुम्भकारपितुरत्राप्यन्तर्भावः ।**

ಸ್ವರ್ಗವನ್ನು ಕುರಿತು ಅಪೂರ್ವದ ಪೂರ್ವವೃತ್ತಿತ್ವವು ಯಾಗದ ಪೂರ್ವವೃತ್ತಿತ್ವವನ್ನು ಉಪಪಾದನೆ ಮಾಡುತ್ತದೆ. ಆದ್ದರಿಂದ ಅಪೂರ್ವವು ಅನ್ಯಥಾ ಸಿದ್ಧವಾಗುವುದಿಲ್ಲ. ದಂಡರೂಪಕ್ಕೆ ಘಟದ ಪೂರ್ವವೃತ್ತಿತ್ವವು ದಂಡದ ಪೂರ್ವವೃತ್ತಿತ್ವಕ್ಕೆ ಉಪಪಾದಕವಲ್ಲ. ಆದ್ದರಿಂದ ಘಟವನ್ನು ಕುರಿತು ದಂಡರೂಪವು ಅನ್ಯಥಾ ಸಿದ್ಧವಾಗುತ್ತದೆ.

ಈ ಎರಡನೆಯ ಅನ್ಯಥಾ ಸಿದ್ಧಿ ಲಕ್ಷಣವನ್ನು ಅಂಗೀಕರಿಸಿದರೆ ದಿಕ್ಕಾಲಗಳಿಗೆ ಪರತ್ವಾದಿ ಪೂರ್ವವೃತ್ತಿತ್ವವು ತಿಳಿದ ನಂತರವೇ ಅನ್ಯಕಾರ್ಯವನ್ನು ಕುರಿತು ಪೂರ್ವವೃತ್ತಿತ್ವವು ತಿಳಿಯುತ್ತದೆ (ಏಕೆಂದರೆ ಪರತ್ವಾದಿ ಕಾರಣ ಎಂದೇ ದಿಕ್ಕಾಲಗಳು ಸಿದ್ಧವಾಗುತ್ತವೆ). ಆದ್ದರಿಂದ ದಿಕ್ಕಾಲಗಳಿಗೆ ಅನ್ಯಕಾರ್ಯವನ್ನು ಕುರಿತು ಅನ್ಯಥಾ ಸಿದ್ಧಿಯು ಬರಲಿ ಎಂಬ ಆಪತ್ತಿಯು ಬರುತ್ತದೆ. ಆದರೆ ಪರತ್ವಾದಿ ಪೂರ್ವವೃತ್ತಿತ್ವವನ್ನು ತಿಳಿಯದೇ ದಿಕ್ಕಾಲಗಳಿಗೆ ಅಧಿಕರಣತ್ವೇನ ಕಾರ್ಯಮಾತ್ರ ಪೂರ್ವವೃತ್ತಿತ್ವ ಗ್ರಹವು ಉಂಟಾಗಬಹುದಾದ್ದರಿಂದ ಅನ್ಯಥಾ ಸಿದ್ಧಿಯಿಲ್ಲ

(ದಿಕ್ಕಾಲಗಳಿಗೆ ದಂಡಾದಿಳಿಗೆ ಇರುವಂತಹ ಕಾರಣತ್ವವು ಇಲ್ಲ. ಅವಧಿ-ಅವಧಿಮತ್ತ್ವ ವ್ಯವಹಾರಕ್ಕೆ ಪ್ರಯೋಜಕವಾದ ಕಾರಣತ್ವವನ್ನು ಇಲ್ಲಿ ವಿಚಾರ ಮಾಡುತ್ತಿದ್ದೇವೆ. ದಂಡಾತ್ ಘಟಃ ಎಂಬಂತೆ ಕಾಲದ್ ಘಟಃ ಎಂಬ ವ್ಯವಹಾರವಿಲ್ಲ. ಆದ್ದರಿಂದ ದಿಕ್ಕಾಲಗಳಿಗೆ ಅಧಿಕಕಾರಣತ್ವೇನ ಕಾರಣತ್ವವು ಬಂದರೂ ದಂಡಾದಿಗಳಿಗೆ ಇರುವಂತಹ ಕಾರಣತ್ವವು ಇಲ್ಲ ಎಂದು ಅಭಿಪ್ರಾಯ).

## ಕುಲಾಲಪಿತೃವೂ ಕೂಡ ಅನ್ಯಥಾಸಿದ್ಧ

**ननु कुम्भकारपितृत्वेन तथात्वेपि चैत्रत्वादिना तस्यानन्यथासिद्धत्वमस्त्विति चेन्न । तेनापि रूपेण कुम्भकारजनकत्वं ज्ञात्वैव तस्य घटं प्रत्यन्वयादिग्रहात् । तदानीं तद्देशे तस्य सत्त्वानियमेन कुम्भकारद्वारैव घटनियत-पूर्ववर्त्तित्वग्रहात् ।**

ಕುಂಭಕಾರ ಪಿತೃವಿಗೆ ಈ ಅನ್ಯಥಾಸಿದ್ಧಿಯಲ್ಲಿಯೂ ಅಂತರ್ಭಾವವು ಉಂಟಾಗುತ್ತದೆ. ಕುಂಭಕಾರಪಿತೃತ್ವೇನ ಅನ್ಯಥಾಸಿದ್ಧನಾದರೂ ಚೈತ್ರತ್ವೇನ ಕುಂಭಾಕಾರಪಿತೃವಿಗೆ ಅನ್ಯಥಾ ಸಿದ್ಧಿಯಿಲ್ಲವೆಂದು ಹೇಳಬಾರದು. ಅವನಲ್ಲಿ ಕುಂಭಕಾರಜನಕತ್ವವು ತಿಳಿಯದಿದ್ದರೆ ಚೈತ್ರತ್ವೇನ ಘಟವನ್ನು ಕುರಿತು ಅನ್ವಯಾದಿಗಳು ಗೃಹೀತವಾಗುವುದಿಲ್ಲ. ಏಕೆಂದರೆ ಘಟದೇಶದಲ್ಲಿ ಕುಂಭಕಾರನ ಪಿತೃವು ಇದ್ದೇ ಇರುತ್ತಾನೆ ಎಂಬ ನಿಯಮವಿಲ್ಲವಾದ್ದರಿಂದ ಕುಂಭಕಾರನ ದ್ವಾರದಿಂದಲೇ ಅವನಲ್ಲಿ ಘಟನಿಯತ ಪೂರ್ವವೃತ್ತಿತ್ವವನ್ನು ತಿಳಿಯಬೇಕು.

## ದಂಡವು ಅನ್ಯಥಾಸಿದ್ಧವಲ್ಲ

**नन्वयं प्रति पूर्ववर्त्तित्वे ज्ञात एवेत्यत्र येन केनचित् सर्वेण वा। नाद्यः । दण्डादावतिप्रसङ्गात् ।**

ಈ ಅನ್ಯಥಾ ಸಿದ್ಧಿಲಕ್ಷಣದಲ್ಲಿ ಅನ್ಯಂ ಪ್ರತಿ ಪೂರ್ವವೃತ್ತಿತ್ವೇ ಜ್ಞಾತೇ ಎಂದು ಇದೆ. ಆ ಪೂರ್ವವೃತ್ತಿತ್ವಗ್ರಹವು ಯಾವುದಾದರೂ ಒಂದು ರೂಪದಿಂದ ಉಂಟಾದರೆ ಸಾಕೋ, ಅಥವಾ ಸರ್ವರೂಪದಿಂದಲೂ ಉಂಟಾಗಬೇಕೋ ಎಂಬ ಪ್ರಶ್ನೆ. ಯಾವುದಾದರೂ ಒಂದು ರೂಪದಿಂದ ಉಂಟಾದರೆ ಸಾಕು ಎಂದು ಹೇಳಿದರೆ ದಂಡಕ್ಕೆ ದ್ರವ್ಯತ್ವರೂಪದಿಂದ ದಂಡರೂಪವನ್ನು ಕುರಿತು ಪೂರ್ವವೃತ್ತಿತ್ವವು ಗೃಹೀತವಾದಮೇಲೆ ಘಟವನ್ನು ಕುರಿತು ಪೂರ್ವವೃತ್ತಿತ್ವ ಗೃಹೀತವಾಗುವುದರಿಂದ ಘಟವನ್ನು ಕುರಿತು ದಂಡಕ್ಕೆ ಅನ್ಯಥಾ ಸಿದ್ಧಿಯು ಉಂಟಾಗಲಿ ಎಂಬ ಪ್ರಸಂಗವು ಬರುತ್ತದೆ.

## ವಿಪಕ್ಷೇ ಬಾಧಕತರ್ಕ

**नान्त्यः । शब्दनित्यत्वानित्यत्वसन्देहेपि शब्दकारणतामनुपजीव्य शब्दाश्रयत्वेनाकाशसिद्धौ ज्ञानादिपूर्ववर्त्तिताग्रहसम्भवात् । निरुपाधित्वादेरपि विपक्षबाधकत्वसम्भवात् ।**

ಸರ್ವಾತ್ಮನಾ ಪೂರ್ವವೃತ್ತಿತ್ವವು ಗೃಹೀತವಾಗಬೇಕು ಎಂದು ಹೇಳಿದರೆ ಶಬ್ದವು ನಿತ್ಯವೋ ಅಥವಾ ಅನಿತ್ಯವೋ ಎಂದು ಸಂದೇಹವಿರುವುದರಿಂದ ಆಕಾಶದಲ್ಲಿ ಶಬ್ದಕಾರಣತ್ವವು ನಿಶ್ಚಯವಾಗದಿರುವ ಕಾರಣದಿಂದ ಶಬ್ದಕಾರಣತ್ವವನ್ನು ಉಪಜೀವಿಸದೇ ಕೇವಲ ಶಬ್ದಾಶ್ರಯತ್ವೇನ ಆಕಾಶವು ಸಿದ್ಧವಾದಾಗ ಆಕಾಶಕ್ಕೆ ಜ್ಞಾನಾದಿ ಪೂರ್ವವೃತ್ತಿತ್ವ ಗ್ರಹವು ಉಂಟಾಗಬಹುದಾದ್ದರಿಂದ ಜ್ಞಾನವನ್ನು ಕುರಿತು ಆಕಾಶವು ಅನನ್ಯಥಾ ಸಿದ್ಧವಾಗಲಿ ಎಂಬ ಆಪತ್ತಿಯು ಬರುತ್ತದೆ. ಅದರಂತೆಯೇ ನಿರುಪಾಧಿತ್ವಾದಿಗಳಿಗೂ ಕೂಡ ವಿಪಕ್ಷ ಬಾಧಕತ್ವವು ಕೂಡುತ್ತದೆ.

(ಶಬ್ದಾಶ್ರಯತ್ವೇನ ಆಕಾಶಸಿದ್ಧಿಯನ್ನು ಮಾಡುವ ಮೀಮಾಂಸಕರ ಅನುಮಾನಕ್ಕೆ ನೈಯಾಯಿಕರು ಅಪ್ರಯೋಜಕತ್ವಶಂಕೆಯನ್ನು ಮಾಡಿದರೆ, ವಿಪಕ್ಷಬಾಧಕವಾಗಿ ಮೀಮಾಂಸಕರು ನಿರೂಪಾಧಿತ್ವವನ್ನು ಹೇಳಬಹುದು. ಅಪ್ರಯೋಜಕತ್ವವಿರುವ ಕಡೆಯಲ್ಲಿ ಉಪಾಧಿಯು ಇದ್ದೇ ಇರುತ್ತದೆ. ಇಲ್ಲಿ ಉಪಾಧಿಯು ಇಲ್ಲವಾದ್ದರಿಂದ ಅಪ್ರಯೋಜಕತ್ವಶಂಕೆಯನ್ನು ಮಾಡಬಾರದು ಎಂದು. ಆದ್ದರಿಂದ ಶಬ್ದಾಶ್ರಯತ್ವೇನ ಸಿದ್ಧವಾದ ಆಕಾಶಕ್ಕೆ ಜ್ಞಾನಪೂರ್ವವೃತ್ತಿತ್ವವು ಗೃಹೀತವಾಗುತ್ತದೆ ಎಂದು ಅಭಿಪ್ರಾಯ).

## ಮೀಮಾಂಸಕರಿಗೆ ಶಬ್ದಪೂರ್ವವೃತ್ತಿತ್ವ ಜ್ಞಾನವೇ ಉಂಟಾಗದು

**वस्तुतः शब्दनित्यत्वनिर्णयवतो मीमांसकस्य तत्पूर्ववर्त्तित्वमज्ञात्वैव ज्ञानादिपूर्ववर्त्तित्वग्रह इति नियमासिद्धिः।**

ವಾಸ್ತವವಾಗಿ ಮೀಮಾಂಸಕರು ಶಬ್ದವು ನಿತ್ಯ ಎಂದು ನಿಶ್ಚಯವನ್ನು ಹೊಂದಿರುವುದರಿಂದ ಅವರಿಗೆ ಆಕಾಶದಲ್ಲಿ ಶಬ್ದಪೂರ್ವವೃತ್ತಿತ್ವ ಜ್ಞಾನವೇ ಉಂಟಾಗುವುದಿಲ್ಲ. ಅವರಿಗೆ ಹಾಗೆಯೇ

ಜ್ಞಾನಾದಿಪೂರ್ವವೃತ್ತಿತ್ವ ಗ್ರಹವು ಉಂಟಾಗುತ್ತದೆ. ಆದ್ದರಿಂದ ನಿಯಮೇನ ಇನ್ನೊಂದಕ್ಕೆ ಪೂರ್ವವೃತ್ತಿತ್ವವನ್ನು ತಿಳಿದು ಎಲ್ಲಿ ಪೂರ್ವವೃತ್ತಿತ್ವವು ಗೃಹೀತವಾಗುತ್ತದೆಯೋ ಎಂಬ ಈ ಲಕ್ಷಣವು ಆಕಾಶದಲ್ಲಿ ಬರುವುದಿಲ್ಲ. ಆದ್ದರಿಂದ ಇಲ್ಲಿ ಅನ್ಯಥಾ ಸಿದ್ಧಿಲಕ್ಷಣಕ್ಕೆ ಅವ್ಯಾಪ್ತಿಯು ಬರುತ್ತದೆ. ಮತ್ತು ಆಕಾಶವು ತನ್ನ ಸಂಯೋಗವನ್ನು ಕುರಿತು ದ್ರವ್ಯತ್ವೇನ ಕಾರಣವಾದಂತೆ ಜ್ಞಾನಾದಿಗಳನ್ನು ಕುರಿತು ದ್ರವ್ಯತ್ವೇನ (ದ್ರವ್ಯತ್ವರೂಪದಿಂದಲೇ) ಕಾರಣವಾಗಲಿ. ದ್ರವ್ಯತ್ವೇನ ಆಕಾಶಕ್ಕೆ ನಿಯತಪೂರ್ವವೃತ್ತಿತ್ವಗ್ರಹವನ್ನು ಉಂಟುಮಾಡುವ ಗ್ರಾಹಕವಿಲ್ಲದಿರುವುದರಿಂದ ಹೇತುತ್ವವಿಲ್ಲ ಎಂದು ಹೇಳಲು ಬರುವುದಿಲ್ಲ.

ಗ್ರಾಹ್ಯವಾದ ವಸ್ತುವು ಇರುವಾಗ ಗ್ರಾಹಕವು ಇಲ್ಲ ಎಂದು ಹೇಳುವುದು ಅಸಂಭಾವಿತ (ಗ್ರಾಹಕವಿಲ್ಲದಿದ್ದರೆ ಗ್ರಾಹ್ಯವಾದ ವಸ್ತುವಿನ ಅಸ್ತಿತ್ವವೇ ಸಿದ್ಧವಾಗುವುದಿಲ್ಲ).

## ಮೂರನೆಯ ಲಕ್ಷಣದಿಂದ ಅನ್ಯಥಾಸಿದ್ಧಿಯ ಸಮರ್ಥನೆ

**किञ्च द्रव्यत्वेनैवाकाशस्य स्वसंयोग इव ज्ञानादौ हेतुत्वमस्तु। न च ग्राहकाभावेन तेन रूपेण नियतपूर्ववर्त्तित्वाग्रह इति वाच्यम्।**

ಆಕಾಶಕ್ಕೆ ದ್ರವ್ಯತ್ವೇನ ಪೂರ್ವವೃತ್ತಿತ್ವವು ಇದ್ದರೂ ಅದು ಅನ್ಯತ್ರ ಕ್ಲಪ್ತ ನಿಯತಪೂರ್ವವರ್ತಿಗಳಿಂದಲೇ ಇತ್ಯಾದಿ ಮೂರನೇ ಅನ್ಯಥಾ ಸಿದ್ಧಿಯಲ್ಲಿ ಅಂತರ್ಭಾವವನ್ನು ಹೊಂದುತ್ತದೆ. ಆದ್ದರಿಂದ ಅಲ್ಲಿ ಇವೆರಡಕ್ಕೆ ಅವ್ಯಾಪ್ತಿಯು ಬಂದರೂ ಮೂರನೆಯ ಲಕ್ಷಣದಿಂದ ಅಲ್ಲಿ ಅನ್ಯಥಾ ಸಿದ್ಧಿಯು ಸಂಪನ್ನವಾಗುತ್ತದೆ ಎಂದು ಹೇಳಬಾರದು.

## ಶ್ರೋತ್ರಕ್ಕೆ ಶಬ್ದಸಾಕ್ಷಾತ್ಕಾರ ಕಾರಣವಿದೆ

**ग्राह्यसत्त्वे ग्राहकाभावासम्भवात्। न च तेन रूपेणान्यत्रेत्यत्रा-न्तर्भवतीति वाच्यम्। तथा सत्याकाशत्वेनापि तथात्वापत्तेः।**

ಹಾಗೆ ಹೇಳುವುದಾದರೆ ಆಕಾಶತ್ವ ರೂಪದಿಂದಲೂ ಅದಕ್ಕೆ ಅನ್ಯಥಾ ಸಿದ್ಧಿಯು ಬರಲಿ ಎಂಬ ಆಪತ್ತಿಯು ಬರುತ್ತದೆ. ಅದೂ ಅಲ್ಲದೇ, ಹೀಗೆ ಹೇಳಿದರೆ ಶಬ್ದಸಾಕ್ಷಾತ್ಕಾರವನ್ನು ಕುರಿತು

ಆಕಾಶಕ್ಕೆ ಅನ್ಯಥಾ ಸಿದ್ಧಿಯು ಬರಲಿ ಎಂಬ ಆಪತ್ತಿಯು ಬರುತ್ತದೆ (ಶ್ರೋತ್ರೇಂದ್ರಿಯವು ಆಕಾಶರೂಪವಾದದುದರಿಂದ ಶ್ರೋತ್ರಕ್ಕೆ ಶಬ್ದಸಾಕ್ಷಾತ್ಕಾರ ಕಾರಣತ್ವವು ಇರುವುದರಿಂದ ಈ ಆಪತ್ತಿಯು ಅನಿಷ್ಟವಾಗುತ್ತದೆ).

## ಪಾಂಚಭೌತಿಕ ಶರೀರಕ್ಕೆ ಆಕಾಶವು ಅನ್ಯಥಾಸಿದ್ಧವಾಗಲಿ

**अपि च एवं शब्दसाक्षात्कारं प्रत्यपि तस्यान्यथासिद्ध्यापत्तिः। न च शब्दपूर्ववर्त्तितामज्ञात्वापीन्द्रियत्वेन तत्पूर्ववर्त्तिग्रह इति वाच्यम् । श्रोत्रत्वेन तथाप्यन्यथासिद्ध्यापत्तेः । तस्याकाशघटितत्वादाकाशस्य च शब्दपूर्ववर्त्तित्वग्रहं विना सिद्धेरनभ्युपगमादन्यथा ज्ञानेपि तस्यान्यथासिद्धत्वं न स्यात् एवं च पाञ्चभौतिकशरीरं प्रत्यपि तदन्यथासिद्धं स्यात् ।**

ಶಬ್ದಪೂರ್ವವೃತ್ತಿತ್ವವು ತಿಳಿಯದಿದ್ದರೂ ಶ್ರೋತ್ರವು ಇಂದ್ರಿಯವಾದುದರಿಂದ ಇಂದ್ರಿಯತ್ವರೂಪದಿಂದ (ಇಂದ್ರಿಯತ್ವೇನ) ಶಬ್ದಸಾಕ್ಷಾತ್ಕಾರಕ್ಕೆ ಕಾರಣವಾಗುತ್ತದೆ. ಆದ್ದರಿಂದ ಅನ್ಯಥಾಸಿದ್ಧವಾಗುವುದಿಲ್ಲ ಎಂದು ಹೇಳಿದರೆ ಶ್ರೋತ್ರತ್ವೇನ ಅನ್ಯಥಾಸಿದ್ಧವಾಗಲಿ ಎಂಬ ಆಪತ್ತಿಯು ಬರುತ್ತದೆ. ಶ್ರೋತ್ರವು ಆಕಾಶಘಟಿತಸ್ವರೂಪವುಳ್ಳದ್ದಾದ್ದರಿಂದ ಶಬ್ದಪೂರ್ವವೃತ್ತಿತ್ವವನ್ನು ತಿಳಿದೇ ಆಕಾಶಗ್ರಹವು ಉಂಟಾಗಬೇಕಾದ್ದರಿಂದ ಈ ಆಪತ್ತಿಯು ಕೂಡುತ್ತದೆ. ಶಬ್ದಸಾಕ್ಷಾತ್ಕಾರವನ್ನು ಕುರಿತು ಶ್ರೋತ್ರತ್ವೇನ ಅನ್ಯಥಾಸಿದ್ಧಿ ಇಲ್ಲವೆಂದು ಹೇಳುವುದಾದರೆ ಶ್ರೋತ್ರಕ್ಕೆ ಜ್ಞಾನವನ್ನು ಕುರಿತು ಅನ್ಯಥಾ ಸಿದ್ಧಿಯು ಇರುವುದು ಬೇಡ ಎಂಬ ಆಪತ್ತಿಯು ಬರುತ್ತದೆ. ಇದರಂತೆ ಆಕಾಶಕ್ಕೆ ಪಾಂಚಭೌತಿಕ ಶರೀರವನ್ನು ಕುರಿತು ಅನ್ಯಥಾಸಿದ್ಧಿಯು ಬರಲಿ ಎಂಬ ಆಪತ್ತಿಯು ಬರುತ್ತದೆ.

## ಘಟಕ್ಕೆ ಈಶ್ವರಜ್ಞಾನವು ಅನ್ಯಥಾಸಿದ್ಧವಾಗಲಿ

**किञ्च ईश्वरज्ञानादेः क्षितिपूर्ववर्त्तित्वे ज्ञात एव घटपूर्ववर्त्तिताग्रहात् तत्राप्यन्यथासिद्ध्यापत्तिः । न च कार्यमात्रे कर्तृमात्रस्यैकदैव पौर्वापर्यग्रहान्नैवमिति वाच्यम् ।**

**प्रकृतेपि कार्यमात्रे विभुमात्रस्यैकदैव पौर्वापर्यग्रहस्य शब्दादिना सम्भवादन्यथासिद्ध्यभावापत्तेः ।**

ಮತ್ತು ಈಶ್ವರ ಜ್ಞಾನಾದಿಗಳಿಗೆ ಕ್ಷಿತಿಪೂರ್ವವೃತ್ತಿತ್ವವನ್ನು ತಿಳಿದ ನಂತರವೇ ಘಟಪೂರ್ವವೃತ್ತಿತ್ವ ಗ್ರಹವು ಉಂಟಾಗುವುದರಿಂದ ಘಟವನ್ನು ಕುರಿತು ಈಶ್ವರಜ್ಞಾನವು ಅನ್ಯಥಾ ಸಿದ್ಧವಾಗಲಿ ಎಂಬ ಆಪತ್ತಿಯು ಬರುತ್ತದೆ (ಕಾರ್ಯತ್ವಾನುಮಾನದಿಂದ ಈಶ್ವರ ಮತ್ತು ಈಶ್ವರ ಜ್ಞಾನವು ಸಿದ್ಧವಾಗುವಾಗ ಕ್ಷಿತಿಪೂರ್ವವೃತ್ತಿತ್ವರೂಪದಿಂದಲೇ ಅದು ಮೊದಲು ಸಿದ್ಧವಾಗುತ್ತದೆ ಅನಂತರ ಘಟಪೂರ್ವವರ್ತಿತ್ವಗ್ರಹವು ಉಂಟಾಗಬೇಕು. ಆದ್ದರಿಂದ ಈ ಆಪತ್ತಿಯು ಕೂಡುತ್ತದೆ). ಕಾರ್ಯಸಾಮಾನ್ಯವನ್ನು ಕುರಿತು ಕರ್ತೃಸಾಮಾನ್ಯಕ್ಕೆ ಒಂದೇ ಬಾರಿಗೆ ಪೂರ್ವವೃತ್ತಿತ್ವಗ್ರಹವು ಉಂಟಾಗುವುದರಿಂದ ಕ್ಷಿತಿಪೂರ್ವವೃತ್ತಿತ್ವಗ್ರಹ ಮತ್ತು ಘಟಪೂರ್ವವೃತ್ತಿತ್ವಗ್ರಹ ಎಂದು ಎರಡು ಗ್ರಹವು ಇಲ್ಲದಿರುವುದರಿಂದ ಹೀಗೆ ಆಪತ್ತಿಯನ್ನು ಮಾಡಲಾಗುವುದಿಲ್ಲ ಎಂದು ಹೇಳುವುದಾದರೆ ಪ್ರಕೃತ ಜ್ಞಾನಾಕಾಶ ಸ್ಥಳದಲ್ಲಿಯೂ ಕಾರ್ಯಮಾತ್ರವನ್ನು ಕುರಿತು ವಿಭು ಮಾತ್ರವು ಕಾರಣ ಎಂಬ ಪೌರ್ವಾಪರ್ಯ ಗ್ರಹವು ಶಬ್ದಾದಿಗಳಿಂದ ಉಂಟಾಗಬಹುದಾದ್ದರಿಂದ ಅನ್ಯಥಾ ಸಿದ್ಧಿಯು ಇಲ್ಲವೆಂದಾಗಲಿ ಎಂಬ ಆಪತ್ತಿಯು ಬರುತ್ತದೆ.

## ಅನ್ಯಥಾಸಿದ್ಧಿಯ ಆಕ್ಷೇಪ ಅಪರಿಹಾರ್ಯ

**शब्दस्यापि वर्णध्वनिभेदेन नानात्वादन्यतरपूर्ववर्त्तित्वग्रहेणापि सम्भवेन नियमाभावात् । तत्र शब्दत्ववदत्राप्यनुगतपक्षतावच्छेदकस्यान्यतमत्वादेर्वा विशेषणस्य सम्भवादिति चिन्त्यम् ।**

ಮತ್ತು ಶಬ್ದವು ವರ್ಣ ಮತ್ತು ಧ್ವನಿ ಎಂಬ ಭೇದದಿಂದ ಕೂಡಿರುವುದರಿಂದ ವರ್ಣದ ಪೂರ್ವವೃತ್ತಿತ್ವಗ್ರಹವನ್ನು ತಿಳಿದರಾಗಲೀ ಅಥವಾ ಧ್ವನಿಯ ಪೂರ್ವವರ್ತಿತ್ವಗ್ರಹವು ಉಂಟಾದರಾಗಲೀ ಆಕಾಶದ ಜ್ಞಾನವು ಬರುವುದರಿಂದ ಈ ಲಕ್ಷಣದಲ್ಲಿ ಹೇಳಿದ ನಿಯಮವು ಬರುವುದಿಲ್ಲವಾದ್ದರಿಂದ ಅನ್ಯಥಾ ಸಿದ್ಧಿಲಕ್ಷಣಕ್ಕೆ ಅವ್ಯಾಪ್ತಿ ಬರುತ್ತದೆ.

ಅಲ್ಲಿ ವರ್ಣ ಮತ್ತು ಧ್ವನಿಗಳಲ್ಲಿ ಅನುಗತವಾದ ಶಬ್ದತ್ವವಿದೆ. ಶಬ್ದತ್ವಾವಚ್ಛಿನ್ನವನ್ನು ಕುರಿತು ಪೂರ್ವವೃತ್ತಿತ್ವವನ್ನು ತಿಳಿದೇ ಆಕಾಶಕ್ಕೆ ಜ್ಞಾನವನ್ನು ಕುರಿತು ಪೂರ್ವವೃತ್ತಿತ್ವದ ಗ್ರಹವು ಉಂಟಾಗಬೇಕು ಎಂದು ಹೇಳುವುದಾದರೆ ಇಲ್ಲಿಯೂ ಕೂಡ ಅನುಗತ ಪಕ್ಷತಾವಚ್ಛೇದಕವನ್ನಾಗಲೀ ಅಥವಾ ಅನ್ಯತಮತ್ವಾದಿ ವಿಶೇಷಣ ನಿವೇಶನವನ್ನಾಗಲೀ ಮಾಡಬಹುದಾದ್ದರಿಂದ ಶಬ್ದಸಾಕ್ಷಾತ್ಕಾರವನ್ನು ಕುರಿತು ಆಕಾಶಕ್ಕೆ ಅನ್ಯಥಾಸಿದ್ಧಿಯು ಬರಲಿ ಎಂಬ ಆಪತ್ತಿಯು ಇದ್ದೇ ಇದೆ ಎಂದು ಆಲೋಚಿಸಬೇಕು.

## ಲಘುನಿಯತಪೂರ್ವವರ್ತಿತ್ವವೇ ವಿವಕ್ಷಿತ

**अन्यत्रेति ।।एतच्च प्रायिकम् । अवश्यकल्प्यं यल्लघुनियतपूर्ववर्त्ति तत्समवधाननियतत्वं तत्त्वमित्यत्र तात्पर्यम् ।**

ಅನ್ಯತ್ರೇತಿ – ಇದು ಪ್ರಾಯಿಕಾಭಿಪ್ರಾಯದಿಂದ ಹೇಳಿದ ಲಕ್ಷಣ. ವಾಸ್ತವವಾಗಿ ಅವಶ್ಯಕಲ್ಪ್ಯವಾದ ಯಾವ ಲಘುನಿಯತಪೂರ್ವವರ್ತಿ ಇದೆಯೋ ಅಂತಹ ಲಘುನಿಯತ ಪೂರ್ವವರ್ತಿಯ ಸಮವಧಾನನಿಯತತ್ವವೇ ಈ ಮೂರನೆಯ ಅನ್ಯಥಾ ಸಿದ್ಧಿಯ ನಿರ್ವಚನ ಎಂಬುದರಲ್ಲಿ ತಾತ್ಪರ್ಯ.

## ಆತ್ಮಾಶ್ರಯವೂ ಕೂಡ ಪರಿಹಾರವಾಯಿತು

**तेन गुणेन दोषाभावस्य महत्त्वेनानेकद्रव्यत्वस्यान्येषां च गुरूणां पदार्थानामन्यथासिद्धिर्भवति । अतः पञ्चम्या हेतुत्वाभिधानादात्माश्रय इत्यपास्तम् ।**

ಹೀಗೆ ಪರಿಷ್ಕಾರ ಮಾಡುವುದರಿಂದ ಗುಣದಿಂದ ದೋಷಾಭಾವಕ್ಕೂ ಮಹತ್ವದಿಂದ ಅನೇಕ ದ್ರವ್ಯತ್ವಕ್ಕೂ ಮತ್ತು ಉಳಿದ ಗುರುಪದಾರ್ಥಗಳಿಗೂ ಅನ್ಯಥಾ ಸಿದ್ಧಿಯು ಬರುತ್ತದೆ, ಯಥಾಶ್ರುತ ಲಕ್ಷಣದಲ್ಲಿ ಗುಣ, ದೋಷಾಭಾವ ಮೊದಲಾದವುಗಳು ಒಂದೇಕಡೆ ಇರುವುದರಿಂದ ಅಲ್ಲಿ ದೋಷಾಭಾವಾದನ್ಯತ್ರ ಕ್ಲುಪ್ತವಾದ ಗುಣದಿಂದಲೇ ಕಾರ್ಯವು ಸಂಭವಿಸುವಾಗ ಮೊದಲಾದ ರೀತಿಯಲ್ಲಿ ಹೇಳಿದ ಅನ್ಯಥಾ ಸಿದ್ಧಿಯನ್ನು ಉಪಪಾದನೆ ಮಾಡಲು ಬರುತ್ತಿರಲಿಲ್ಲ.

ಹೀಗೆ ಪರಿಷ್ಕಾರ ಮಾಡಿದುದರಿಂದಲೇ ನಿಯತಪೂರ್ವವರ್ತಿನಃ ಎಂಬಲ್ಲಿನ ಪಂಚಮೀ ವಿಭಕ್ತಿಗೆ ಕಾರಣತ್ವವು ಅರ್ಥ, ಆದ್ದರಿಂದ ಕಾರಣತ್ವಲಕ್ಷಣದಲ್ಲಿ ಕಾರಣತ್ವವು ನಿವಿಷ್ಟವಾಗುವುದರಿಂದ ಆತ್ಮಾಶ್ರಯ ದೋಷವು ಬರುತ್ತದೆ ಎಂಬ ಆಕ್ಷೇಪವೂ ಪರಿಹಾರವಾಯಿತು.

## ಯಥಾಶ್ರುತಲಕ್ಷಣ ವಿವಕ್ಷಿಸಿದರೆ ವೈಯರ್ಥ್ಯದೋಷ

**पूर्ववर्त्तिन इत्यत्रावधौ पञ्चमीत्यन्ये । अत एव च रासभादेरपि यथाश्रुतान्यथासिद्ध्यन्तर्भावेऽनन्यथासिद्धपदेनैव तद्वारणे नियतपदं व्यर्थमित्यपास्तम् । निरुक्तस्य रासभेऽसत्त्वात् ।**

ಇನ್ನು ಕೆಲವರು ಪೂರ್ವವರ್ತಿನಃ ಎಂಬಲ್ಲಿ ಪಂಚಮೀ ವಿಭಕ್ತಿಯು ಅವಧಿತ್ವಾರ್ಥದಲ್ಲಿ ಇದೆ. ಆದ್ದರಿಂದಲೇ ಆತ್ಮಾಶ್ರಯ ದೋಷವಿಲ್ಲ ಎಂದು ಹೇಳುತ್ತಾರೆ. ಹೀಗೆ ಪರಿಷ್ಕಾರ ಮಾಡಿದುದರಿಂದಲೇ ರಾಸಭದಲ್ಲಿ ಯಥಾ ಶ್ರುತದಲ್ಲಿ ಬರುತ್ತಿದ್ದ ಅನ್ಯಥಾ ಸಿದ್ಧಿಯು ಈಗ ಬರುವುದಿಲ್ಲ. ಆದ್ದರಿಂದ ಅನನ್ಯಥಾ ಸಿದ್ಧತ್ವದಳದಿಂದ ರಾಸಭವು ವಾರಣೆಯಾಗುವುದಿಲ್ಲವಾದ್ದರಿಂದ ಕಾರ್ಯನಿಯತ ಪೂರ್ವವೃತ್ತಿತ್ವರೂಪವಾದ ವಿಶೇಷಣ ದಳವು ಸಾರ್ಥಕವಾಗುತ್ತದೆ. ಇಲ್ಲಿ ರಾಸಭದಲ್ಲಿ ತಾದೃಶ ಸಮವಧಾನ ನಿಯತತ್ವವು ಇಲ್ಲದಿರುವುದರಿಂದ ಅನನ್ಯಥಾ ಸಿದ್ಧತ್ವವು ಬರುತ್ತದೆ. ಯಥಾಶ್ರುತವಾದ ಲಕ್ಷಣವನ್ನು ತೆಗೆದುಕೊಂಡರೆ ಮಾತ್ರ ರಾಸಭದಲ್ಲಿ ಅನ್ಯಥಾಸಿದ್ಧತ್ವವೇ ಬರುತ್ತಿದ್ದುದರಿಂದ ವಿಶೇಷ್ಯದಳವು ವ್ಯರ್ಥವಾಗುತ್ತಿತ್ತು.

## ಎರಡನೆಯ ಲಕ್ಷಣಕ್ಕೆ ವೈಯರ್ಥ್ಯ

**नन्वेवं दण्डरूपाकाशादेरप्यत्रैवान्तर्भावे तद्ग्राहकान्यथासिद्धेरा नर्थक्यम् ।**

ಹೀಗೆ ಅನ್ಯಥಾ ಸಿದ್ಧಿಯ ಲಕ್ಷಣವನ್ನು ಪರಿಷ್ಕಾರಮಾಡುವುದಾದರೆ ದಂಡರೂಪ ಮತ್ತು ಆಕಾಶಾದಿಗಳಿಗೂ ಈ ಮೂರನೆಯ ಲಕ್ಷಣವೇ ಅನ್ವಯಿಸುವುದರಿಂದ ದಂಡರೂಪದಲ್ಲಿ ಅನ್ವಯವಾಗುವಂತೆ ಮೊದಲನೆಯ ಲಕ್ಷಣವನ್ನು ಮತ್ತು ಆಕಾಶದಲ್ಲಿ ಅನ್ವಯವಾಗುವಂತೆ ಎರಡನೆಯ ಲಕ್ಷಣವನ್ನು ಹೇಳಿದುದೇ ವ್ಯರ್ಥವಾಗುತ್ತದೆ.

## ಎರಡನೆಯ ಲಕ್ಷಣದಲ್ಲಿ ಆತ್ಮಾಶ್ರಯದೋಷ

**किञ्च अवश्यकल्प्यत्वं नियतपूर्ववर्त्तित्वमात्रेण कारणतया वा? नाद्यः। गन्धं प्रति रूपविशेषप्रागभावस्यापि तथात्वेन तेन गन्धप्रागभावस्यान्यथासिद्ध्यापत्तेः। नान्त्यः। आत्माश्रयात्।**

ಮತ್ತು ಅವಶ್ಯಕಲ್ಪ್ಯತ್ವ ಎಂದರೇನು? ನಿಯತ ಪೂರ್ವವರ್ತಿಯಾದುದರಿಂದ ಅವಶ್ಯಕಲ್ಪ್ಯವೇ ಅಥವಾ ಕಾರಣವಾದುದರಿಂದ ಅವಶ್ಯಕಲ್ಪ್ಯವೇ? ನಿಯತಪೂರ್ವವರ್ತಿಯಾದುದರಿಂದ ಅವಶ್ಯಕಲ್ಪ್ಯ ಎಂದು ಹೇಳುವುದಾದರೆ ಗಂಧಸ್ಥಳದಲ್ಲಿ ರೂಪವಿಶೇಷಪ್ರಾಗಭಾವವೂ ಸಹ ನಿಯತ ಪೂರ್ವವರ್ತಿಯಾದುದರಿಂದ ರೂಪಪ್ರಾಗಭಾವದಿಂದ ಗಂಧಪ್ರಾಗಭಾವಕ್ಕೆ ಅನ್ಯಥಾ ಸಿದ್ಧಿಯು ಬರಲಿ ಎಂಬ ಆಪತ್ತಿಯು ಉಂಟಾಗುತ್ತದೆ. ಕಾರಣವಾದ್ದರಿಂದ ಅವಶ್ಯಕಲ್ಪ್ಯ ಎಂಬ ಎರಡನೆಯ ಪಕ್ಷದಲ್ಲಿ ಆತ್ಮಾಶ್ರಯ ದೋಷವು ಸ್ಪಷ್ಟವಾಗಿಯೇ ಇದೆ.

## ಪೃಥಗನ್ವಯಾದ್ಯನನುವಿಧಾಯತ್ವೇ ಸತಿ ಎಂಬ ವಿಶೇಷಣದ ಸಾರ್ಥಕ್ಯ

**अपि च सहकारिणोः परस्परेणान्यथासिद्ध्यापत्तिः। द्वयोरप्यवश्यकल्प्यलघुनियतपूर्ववर्त्तित्वेन तत्समवधाननियतत्वात्।**

ಮತ್ತು ಎಲ್ಲಿ ಒಂದುಕಾರ್ಯಕ್ಕೆ ಎರಡು ಸಹಕಾರಿಗಳು ಇವೆಯೋ ಅಲ್ಲಿ ಪರಸ್ಪರದಿಂದ ಪರಸ್ಪರವಾದುದಕ್ಕೆ ಅನ್ಯಥಾ ಸಿದ್ಧಿಯುಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಏಕೆಂದರೆ ಎರಡೂ ಸಹ ಅವಶ್ಯಕಲ್ಪ್ಯ ಲಘುನಿಯತಪೂರ್ವವರ್ತಿಗಳು ಮತ್ತು ಇತರ ಸಮವಧಾನ ವ್ಯಾಪ್ಯವಾದವುಗಳು. ಹಾಗಾದರೆ ಪೃಥಗನ್ವಯಾದ್ಯನನುವಿಧಾಯಿತ್ವೇ ಸತಿ ಎಂದು ವಿಶೇಷಣವನ್ನು ಕೊಡುತ್ತೇವೆ. ಎಂದರೆ ಸ್ವತಂತ್ರವಾಗಿ ಎರಡಕ್ಕೂ ಅನ್ವಯ ವ್ಯತಿರೇಕಗಳು ಇಲ್ಲದಿದ್ದರೆ ಎಂದು ಅರ್ಥ.

## ಪರಸ್ಪರ ಅನ್ಯಥಾಸಿದ್ಧಿಯಿಲ್ಲ

**न च पृथगन्वयाद्यननुविधायित्वे सतीत्यपि विशेषणम्, तद्धि पृथगन्वयादिग्रहाविषयत्वं समनियतत्वं वा? नाद्यः। रूपप्रागभावस्यापि शब्दादिना तादृशग्रहविषयत्वेन**

**तथात्वापत्तेः । नान्त्यः । आलोकरूपादेरीश्वरज्ञानादे-श्चैवमपि परस्परमन्यथासिद्ध्यापत्तेः ।**

ಎರಡು ಸಹಕಾರಿಗಳ ಸ್ಥಳದಲ್ಲಿ ಎರಡಕ್ಕೂ ಸ್ವತಂತ್ರವಾಗಿ ಅನ್ವಯವ್ಯತಿರೇಕಾನುವಿಧಾನವು ಇರುವುದರಿಂದ ಅಲ್ಲಿ ಪರಸ್ಪರವಾಗಿ ಅನ್ಯಥಾಸಿದ್ಧಿಯು ಉಂಟಾಗುವುದಿಲ್ಲ ಎಂದು ಹೇಳುವುದಾದರೆ ಪೃಥಗನ್ವಯಾದಿ ಅನನುವಿಧಾಯಿತ್ವ ಎಂದರೇನು? ಪೃಥಗನ್ವಯಾದಿ ಗ್ರಹ ಅವಿಷಯತ್ವ ಎಂದು ಅರ್ಥವೇ? ಅಥವಾ ಸಮನಿಯತತ್ವ ಎಂದು ಅರ್ಥವೇ? ಪೃಥಗನ್ವಯಾದಿ ಗ್ರಹ ಅವಿಷಯತ್ವ ಎಂದರೆ ಶಬ್ದಾದಿಗಳಿಂದ ರೂಪಪ್ರಾಗಭಾವಕ್ಕೂ ಪೃಥಗನ್ವಯಾದಿ ಗ್ರಹವು ಉಂಟಾಗಬಹುದಾದ್ದರಿಂದ ರೂಪಪ್ರಾಗಭಾವದಲ್ಲಿ ಅವ್ಯಾಪ್ತಿಯು ಬರುತ್ತದೆ. ಇನ್ನು ಸಮನಿಯತತ್ವ ಎಂದು ಹೇಳಿದರೆ ರೂಪಾದಿ ಜ್ಞಾನವು ಬರುವ ಸ್ಥಳದಲ್ಲಿ ಆಲೋಕ, ರೂಪ ಮತ್ತು ಈಶ್ವರ ಜ್ಞಾನಗಳು ಸಮನಿಯತವಾಗಿರುವುದರಿಂದ ಪರಸ್ಪರವಾಗಿ ಅನ್ಯಥಾಸಿದ್ಧಿಯು ಬರಲಿ ಎಂಬ ಆಪತ್ತಿಯು ಉಂಟಾಗುತ್ತದೆ.

## ಮೂರನೆಯ ಲಕ್ಷಣವನ್ನೂ ವಿಮರ್ಶಿಸಬೇಕು

**एतेनावश्यकल्प्यपूर्ववर्त्तिन एव कार्यसम्भवे तन्नियत-सहभूतत्वमित्यर्थः, पञ्चमी चावधित्वे न तु हेतुतायामित्यपास्तम् इति चिन्त्यम् ।**

ಹೀಗೆ ಹೇಳಿದುದರಿಂದಲೇ ಅವಶ್ಯಕಲ್ಪ್ಯವಾದ ಪೂರ್ವವರ್ತಿಯಿಂದಲೇ ಕಾರ್ಯವು ಉಂಟಾಗಬಹುದಾದಾಗ ತನ್ನಿಯತ ಸಹಭೂತವಾದುದು ಅನ್ಯಥಾ ಸಿದ್ಧವಾದುದು. ಪೂರ್ವರ್ತಿನಃ ಎಂಬಲ್ಲಿನ ಪಂಚಮೀ ವಿಭಕ್ತಿಯು ಅವಧಿತ್ವಾರ್ಥದಲ್ಲಿದೆ ಎಂಬ ಅಭಿಪ್ರಾಯವೂ ನಿರಸ್ತವಾಯಿತು. ಇದು ಮೂರನೆಯ ಲಕ್ಷಣದಲ್ಲಿ ಚಿಂತಿಸಬೇಕಾದ ವಿಷಯ.

## ಯಾಗದಲ್ಲಿ ಅನ್ಯಥಾಸಿದ್ಧಿಲಕ್ಷಣವು ಬರುತ್ತದೆಯೇ ?

**ननु येन सहैवेत्यन्यथासिद्धिर्यागेपीत्यत आह – यागेति ।। अपूर्वानुपस्थितावपि विधिना यागकारणत्वबोधनान्न तु तेन सहेत्यर्थः । तदेवाह – नत्ववगम्यमान इति ।।**

ಯೇನ ಸಹೈವ ಎಂದು ಹೇಳಿದ ಮೊದಲನೆಯ ಅನ್ಯಥಾ ಸಿದ್ಧಿ ಲಕ್ಷಣವು ಯಾಗದಲ್ಲಿಯೂ ಬರುತ್ತದೆ ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಾರೆ – ಯಾಗೇತಿ. ಅಪೂರ್ವದ ಉಪಸ್ಥಿತಿ ಇಲ್ಲದಿರುವಾಗಲೂ ಯಾಗಕ್ಕೆ ಸ್ವರ್ಗಕಾರಣತ್ವವು ಬೋಧಿತ ವಾಗುವುದರಿಂದ ಅಪೂರ್ವದ ಜೊತೆಯಲ್ಲಿಯೇ ಪೂರ್ವವೃತ್ತಿತ್ವವು ಗೃಹೀತವಾಗುವುದಿಲ್ಲ. ಅದನ್ನೇ ಸ್ಪಷ್ಟಪಡಿಸುತ್ತಾರೆ – ನತ್ವವಗಮ್ಯಮಾನ ಇತಿ.

## ಕುಲಾಲನಿಂದ ಕುಲಾಲಪಿತೃವಿಗೂ ಅನ್ಯಥಾಸಿದ್ಧಿಯಿಲ್ಲ

**नन्वेवमपूर्वेण यागवत्कुलालेन पितान्यथासिद्धो न स्यादित्यत आह – यत्रेति ।। कुलालं प्रति पूर्ववर्त्तित्वे ज्ञात एव घटं प्रति कुलालपितृत्वेन पूर्ववर्त्तित्वग्रहात् तेन सोऽन्यथासिद्ध इत्यर्थः।**

ಹಾಗಾದರೆ ಅಪೂರ್ವದಿಂದ ಹೇಗೆ ಯಾಗಕ್ಕೆ ಅನ್ಯಥಾ ಸಿದ್ಧಿಯಿಲ್ಲವೋ ಅದರಂತೆ ಕುಲಾಲನಿಂದ ಕುಲಾಲಪಿತೃವಿಗೂ ಅನ್ಯಥಾಸಿದ್ಧಿಯು ಇರುವುದು ಬೇಡ ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಾರೆ – ಯತ್ರೇತಿ – ಕುಲಾಲನನ್ನು ಕುರಿತು ಪೂರ್ವವರ್ತಿತ್ವವು ಗೃಹೀತವಾದ ಅನಂತರವೇ ಘಟವನ್ನು ಕುರಿತು ಕುಲಾಲಪಿತೃವಿಗೆ ಪೂರ್ವವರ್ತಿತ್ವ ಗ್ರಹವು ಉಂಟಾಗುವುದರಿಂದ ಕುಲಾಲಪಿತೃವು ಅನ್ಯಥಾಸಿದ್ಧ ಎಂದು ಅರ್ಥ.

## ದಂಡಸಂಯೋಗಕ್ಕೆ ಅನ್ಯಥಾಸಿದ್ಧಿ ಬರಲಿ ಎಂಬ ಶಂಕೆಯ ಪರಿಹಾರ

**नन्वेवं कुलालपितृवद्यागोपि अन्यथासिद्धः स्यादित्यत आह – यत्र चेति ।। पूर्वोक्तरीत्या तत्रोक्तान्यथा-सिद्धेरभावादित्यर्थः । नन्वेवं चक्रभ्रमणेन दण्डसंयोगस्यापि कुलालपितृवदन्यथासिद्धिः स्यादत आह – दण्डेति ।।**

ಹಾಗಾದರೆ ಕುಲಾಲಪಿತೃವಿನಂತೆ ಯಾಗವೂ ಅನ್ಯಥಾಸಿದ್ಧವಾಗಲಿ ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಾರೆ – ಯತ್ರಚೇತಿ. ಹಿಂದೆ ಹೇಳಿದ ರೀತಿಯಿಂದ ಯಾಗದಲ್ಲಿ ಅನ್ಯಥಾಸಿದ್ಧಿಯು

ಉಂಟಾಗುವುದಿಲ್ಲ ಎಂದು ಅಭಿಪ್ರಾಯ. ಹಾಗಾದರೆ ಚಕ್ರಭ್ರಮಣದಿಂದ ದಂಡಸಂಯೋಗಕ್ಕೂ ಸಹ ಕುಲಾಲಪಿತೃವಿನಂತೆ ಅನ್ಯಥಾಸಿದ್ಧಿಯು ಉಂಟಾಗಲಿ ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಾರೆ – ದಂಡೇತಿ.

## ದಂಡಸಂಯೋಗವು ಅನ್ಯಥಾಸಿದ್ಧವಲ್ಲ

**तत्र द्वयोरपि समवधानसम्भवेन स्वातन्त्र्येणापि नियतपूर्ववर्त्तिताग्रहसम्भवेन अन्यं प्रति पूर्ववर्त्तित्वे ज्ञात एवेत्यवधारणासम्भवादिति भावः ।**

ದಂಡಸಂಯೋಗ ಮತ್ತು ಚಕ್ರಭ್ರಮಣ ಇವೆರಡಕ್ಕೂ ಕಾರ್ಯದೇಶದಲ್ಲಿ ಸಮವಧಾನವು ಇರುವುದರಿಂದ ಎರಡಕ್ಕೂ ಸ್ವತಂತ್ರವಾಗಿ ನಿಯತಪೂರ್ವವರ್ತಿತ್ವ ಗ್ರಹವೂ ಇದೆ. ಆದ್ದರಿಂದ ಒಂದಕ್ಕೆ ಪೂರ್ವವರ್ತಿತ್ವಗ್ರಹವು ಉಂಟಾದ ಮೇಲೆ ಇನ್ನೊಂದಕ್ಕೆ ಪೂರ್ವವರ್ತಿತ್ವಗ್ರಹವು ಉಂಟಾದರೆ ಎಂಬ ಈ ಎರಡನೆಯ ಲಕ್ಷಣವು ಅಲ್ಲಿ ಬರುವುದಿಲ್ಲವಾದ್ದರಿಂದ ದಂಡಸಂಯೋಗವು ಅನ್ಯಥಾ ಸಿದ್ಧವಾಗುವುದಿಲ್ಲ.

## ಕೆಲವು ಪುಸ್ತಕಗಳಲ್ಲಿರುವ ಪಾಠಾಂತರ

**स्वस्वेति ।। स्वं कारणत्वेनाभिमतं दण्डादि तदनन्तरोत्पत्तिकं तत्संयोगादि तदितरसकलसमवधाने सतीत्यर्थः । क्वचित् स्वस्वानन्तरोत्पत्तिकसकलसमवधाने सतीति पाठः । तत्र स्वपदमन्यपरम् ।।**

ಸ್ವಸ್ವೇತಿ – ಸ್ವ ಎಂದರೆ ಕಾರಣತ್ವೇನ ಅಭಿಪ್ರೇತವಾದ ದಂಡಾದಿಗಳು. ಸ್ವಾನಂತರೋತ್ಪತ್ತಿಕ ಎಂದರೆ ದಂಡೋತ್ಪತ್ತಿಯ ನಂತರ ಉಂಟಾಗುವ ದಂಡಸಂಯೋಗಾದಿಗಳು. ತದಿತರ ಸಕಲ ಸಮವಧಾನವೂ ಇರುವಾಗ ಎಂದು ಅರ್ಥ. ಕೆಲವು ಕಡೆ 'ಸ್ವಸ್ವಾನಂತರೋತ್ಪತ್ತಿಕ ಸಕಲ ಸಮವಧಾನೇ ಸತಿ' ಎಂಬ ಪಾಠವಿದೆ. ಅಲ್ಲಿ ಸ್ವ ಪದವು ಅನ್ಯಪರವಾಗಿದೆ.

('ಸ್ವಸ್ವಾನಂತರೋತ್ಪತ್ತಿಕೇತರ ಸಕಲ ಸಮವಧಾನೇ ಸತಿ ಯಸ್ಯಾಭಾವಾತ್ ಕಾರ್ಯಂ ನ ಜಾಯತೇ' ಎಂದು ಮೊದಲನೆಯ ಪಾಠ. ಇಲ್ಲಿ ಸ್ವಪದದಿಂದ ಎಲ್ಲಿ ಕಾರಣತ್ವವನ್ನು ಸಮನ್ವಯ ಮಾಡಬೇಕೋ ಅಂತಹ ದಂಡಾದಿಗಳನ್ನು ತೆಗೆದುಕೊಂಡು ಅಲ್ಲಿ ಕಾರಣತ್ವವನ್ನು ಕೂಡಿಸಬೇಕು. ಪಾಠಾಂತರವು ಸ್ವಸ್ವಾನಂತರೋತ್ಪತ್ತಿಕ ಸಕಲಸಮವಧಾನೇ ಸತಿ ಯಸ್ಯಾಭಾವಾತ್ ಕಾರ್ಯ ನ ಜಾಯತೇ ಎಂಬುದಾಗಿ. ಇಲ್ಲಿ ದಂಡದಲ್ಲಿ ಕಾರಣತ್ವವನ್ನು ಸಮನ್ವಯ ಮಾಡಬೇಕಾದರೆ ಸ್ವಪದದಿಂದ ದಂಡೇತರವಾದ ಚಕ್ರ ಮತ್ತು ತದನಂತರೋತ್ಪತ್ತಿಕವಾದ ಪದಾರ್ಥವನ್ನು ತೆಗೆದುಕೊಂಡು ಅವುಗಳ ಸಮವಧಾನವಿರುವಾಗ ದಂಡಾಭಾವಾತ್ ಕಾರ್ಯಂ ನ ಜಾಯತೇ ಎಂದು ಹೇಳಿ ದಂಡದಲ್ಲಿ ಕಾರಣತ್ವವನ್ನು ಕೂಡಿಸಬೇಕು. ಇಲ್ಲಿ ದಂಡವು ಯತ್ಪದಾರ್ಥವಾಗುತ್ತದೆ ಆದರೆ ಸ್ವಪದಾರ್ಥವಾಗುವುದಿಲ್ಲ ಎಂದು ಅಭಿಪ್ರಾಯ).

## ವ್ಯಭಿಚಾರ ದೋಷ

**ईश्वरेति ।। एतच्चोपलक्षणम् । यस्याभावादिति पञ्चम्या हेतुत्वार्थकत्वादात्माश्रयः । यदभावनियतः कार्याभाव इति विवक्षायां स्वसत्त्वे स्वानन्तरोत्पत्तिकव्यतिरेकेण यत्र कार्याभावस्तत्र व्यभिचारः ।**

ಈಶ್ವರೇತಿ – ಇದು ಉಪಲಕ್ಷಣ. ಸ್ವಸ್ವಾನಂತರೋತ್ಪತ್ತಿಕ ಇತ್ಯಾದಿ ಹೇಳಿದ ಲಕ್ಷಣದಲ್ಲಿ ಯಸ್ಯಾಭಾವಾತ್ ಕಾರ್ಯಾಭಾವಃ ಎಂಬಲ್ಲಿ ಅಭಾವಾತ್ ಎಂಬಲ್ಲಿರುವ ಪಂಚಮೀ ವಿಭಕ್ತಿಯು ಹೇತುತ್ವಾರ್ಥಕವಾದರೆ ಆತ್ಮಾಶ್ರಯ ದೋಷವು ಬರುತ್ತದೆ. ಯದಭಾವನಿಯತಃ ಕಾರ್ಯಾಭಾವಃ ಎಂದು ವಿವಕ್ಷೆ ಮಾಡಿದರೆ ಕಾರ್ಯಾಭಾವಕ್ಕೆ ಕಾರಣಾಭಾವವು ವ್ಯಾಪಕವಾಗಬೇಕು ಎಂದು ಅರ್ಥವಾಗುತ್ತದೆ. ಆದರೆ ಎಲ್ಲಿ ಒಂದುಕಾರಣವಿದ್ದು ತದನಂತರೋತ್ಪತ್ತಿಕವಾದ ಪದಾರ್ಥವು ಇಲ್ಲದಿರುವಾಗ ಕಾರ್ಯವು ಉಂಟಾಗುವುದಿಲ್ಲವೋ ಅಲ್ಲಿ ಕಾರ್ಯಾಭಾವವಿದೆ ವ್ಯಾಪಕತ್ವೇನ ಅಭಿಮತವಾದ ಕಾರಣಾಭಾವವು ಇಲ್ಲ ಎಂದು ವ್ಯಭಿಚಾರವು ಬರುತ್ತದೆ.

## ಎರಡನೆಯ ಪಾಠದ ವ್ಯಾಖ್ಯಾನ

**द्वितीयपाठे दण्डानन्तरोत्पत्तिकचरमकारणसमवधाने चक्राद्यभावात् कार्याभावाप्रसिद्धेस्तत्राव्याप्तिः । उक्तानन्यथा-**

**सिद्धत्वस्यैव कारणतारूपत्वसम्भवे शेषवैयर्थ्यमुभयत्रेत्यपि द्रष्टव्यम् ।**

ಇನ್ನು ಎರಡನೆಯ ಪಾಠದಲ್ಲಿ (ಮೊದಲನೆಯ ಪಾಠದಲ್ಲಿ ಸತ್ಯಪಿ ಎಂದಿದೆ. ಎರಡನೆಯ ಪಾಠದಲ್ಲಿ ಸತಿ ಎಂದು ಇದೆ. ಇಷ್ಟೇ ವ್ಯತ್ಯಾಸ) ದಂಡಾನಂತರದಲ್ಲಿ ಉತ್ಪತ್ತಿಯಾದ ಕಪಾಲದ್ವಯಸಂಯೋಗರೂಪವಾದ ಚರಮಕಾರಣ ಸಮವಧಾನವು ಇರುವಾಗ ಚಕ್ರಾಭಾವದಿಂದ ಕಾರ್ಯಾಭಾವ ಎಂಬುದು ಅಪ್ರಸಿದ್ಧವಾದುದರಿಂದ ಅಲ್ಲಿ ಕಾರಣಲಕ್ಷಣಕ್ಕೆ ಅವ್ಯಾಪ್ತಿಯು ಬರುತ್ತದೆ. ಇನ್ನು ಹೀಗೆ ಪರಿಷ್ಕಾರ ಮಾಡಿದ ಅನನ್ಯಥಾ ಸಿದ್ಧತ್ವವನ್ನೇ ಕಾರಣತ್ವ ಎಂದು ಹೇಳಲು ಬರುವಾಗ ವಿಶೇಷ್ಯದಳವು ವ್ಯರ್ಥವಾಗುತ್ತದೆ ಎಂದು ಎರಡು ಕಡೆಯಲ್ಲಿಯೂ ಇಟ್ಟುಕೊಳ್ಳಬೇಕು.

## ಶಕ್ತಿವಾದವು ಮುಗಿಯಿತು

**साधकाभावेनेति ।। यद्यप्येकत्र गुरुलघुविषयतासम्भवे लाघवं सहकारि, अन्यथा मानान्तरेण लाघवावतारसम्भवे गुरुमात्रस्यासिद्धिप्रसङ्गात् । तथापि यत्रैवैकसिद्धिरपरसिद्धि विरोधिनी तत्रैव लाघवावतारस्य गुरुसिद्धिप्रतिबन्धकत्वमित याहुः ।।**

ಸಾಧಕಾಭಾವೇನೇತಿ – ಯದ್ಯಪಿ ಒಂದೇ ವಿಷಯದಲ್ಲಿ ಗುರುಲಘುವಿಚಾರವಿಷಯತ್ವವು ಬಂದರೆ ನಿರ್ಣಯವನ್ನು ಮಾಡಲು ಲಾಘವವು ಸಹಕಾರಿಯಾಗುತ್ತದೆ. ಒಂದುಪ್ರಮಾಣದಿಂದ ಲಾಘವವೂ ಇನ್ನೊಂದು ಪ್ರಮಾಣದಿಂದ ಗೌರವವೂ ಪ್ರಸಕ್ತವಾಗುವುದಾದರೆ ಅಲ್ಲಿ ಲಾಘವ ಗೌರವ ವಿಚಾರವಿಲ್ಲ. ಹಾಗೆ ಮಾಡಿದರೆ ಗುರುಭೂತವಾದದ್ದು ಎಲ್ಲಿಯೂ ಸಿದ್ಧವಾಗುವುದಿಲ್ಲ ಎಂಬ ಆಪತ್ತಿಯು ಬರುತ್ತದೆ. ಆದರೂ ಎಲ್ಲಿ ಎರಡು ಪದಾರ್ಥಗಳಲ್ಲಿ ಒಂದರ ಸಿದ್ಧಿಯು ಇನ್ನೊಂದರ ಸಿದ್ಧಿಗೆ ವಿರೋಧಿಯಾಗಿದೆಯೋ ಅಲ್ಲಿಯೇ ಲಾಘವ ವಿಚಾರವು ಗೌರವಗ್ರಸ್ತ ವಿಷಯದ ಸಿದ್ಧಿಯನ್ನು ಪ್ರತಿಬಂಧಮಾಡುತ್ತದೆ ಎಂದು ಹೇಳುತ್ತಾರೆ.

## इति शक्तिवादः

# ಸಿದ್ಧಾಂತತಾಂಡವ

೧. ಅನುವ್ಯಾಖ್ಯಾನ

೨. ನ್ಯಾಯಸುಧಾ

೩. ಯುಕ್ತಿಮಲ್ಲಿಕಾ

೪. ಅಭಿನವತಾಂಡವ

*****

## ಜಗದ್ಗುರು ಶ್ರೀಮಧ್ವಾಚಾರ್ಯವಿರಚಿತ
# ಅನುವ್ಯಾಖ್ಯಾನ

### ಅತೃತ್ವಾಧಿಕರಣದ ಅನುವ್ಯಾಖ್ಯಾನದಲ್ಲಿ ಶಕ್ತಿಯ ಸಮರ್ಥನೆ

अनु – **अनित्यात्वात्क्रियाणां तु कथमेव स्वरूपता ।।**
**इति चेत् स विशेषोऽपि क्रिया शक्त्यात्मना स्थिरः ।।**

ಅನು : ಕ್ರಿಯೆಗಳು ಅನಿತ್ಯಗಳಾದ್ದರಿಂದ ನಿತ್ಯಬ್ರಹ್ಮನ ಸ್ವರೂಪಗಳು ಹೇಗೆ ಆಗುತ್ತವೆ. ಪರಮೇಶ್ವರನ ಕ್ರಿಯಾರೂಪಧರ್ಮವು ಶಕ್ತಿರೂಪದಿಂದ ನಿತ್ಯವಾಗಿದೆಯೋ ಆ ಕಾರಣದಿಂದ ಈ ಆಕ್ಷೇಪ ಸರಿಯಲ್ಲ.

ಪ್ರಕೃತ 'ಇತಿ ಚೇತ್ ಸ ವಿಶೇಷೋಽಪಿ' ಎಂಬಲ್ಲಿರುವ ಅಪಿ ಶಬ್ದವು ಮೊದಲನೆ ಯೋಜನೆಯಲ್ಲಿ ಅನುಕ್ತನಾದ ಈಶ್ವರನನ್ನು ಸಮುಚ್ಚಯಿಸುತ್ತದೆ. ಆಗ ವಿಶೇಷ ಪದಕ್ಕೆ ಧರ್ಮ ಎಂಬ ಅರ್ಥ ಹೇಳಬೇಕು. ಎರಡನೇ ವ್ಯಾಖ್ಯಾನದಲ್ಲಿ ಹಿಂದೆ ಸಮನ್ವಿತವಾದ ಸರ್ವಗತತ್ವಾದಿ ಧರ್ಮಗಳು ಎಂಬುದು ವಿಶೇಷಪದಕ್ಕೆ ಅರ್ಥವಾಗಿದೆ. ಹೀಗೆ ಅಪಿ ಶಬ್ದವು ಉಕ್ತ ಅನುಕ್ತ ಸಮುಚ್ಚಾಯಕವಾಗಿದೆ.

अनु – **शक्तिता व्यक्तिता चेति विशेषोऽपि विशेषवान् ।।**
**अभिन्नेऽपि .......... .......... ...... ।।**

**क्रियादिश्च स्वभाव इति हि श्रुतिः।।**

ಅನು - ಕ್ರಿಯೆಯಲ್ಲಿ ಶಕ್ತಿತ್ವ ವ್ಯಕ್ತಿತ್ವ ಎಂದು ಭೇದಪ್ರತಿನಿಧಿ ವಿಶೇಷವೂ ಇದೆ. ಆ ವಿಶೇಷಗಳೂ ಪರಸ್ಪರ ಅಭಿನ್ನವಾದರೂ ವಿಶೇಷವುಳ್ಳವು. ಕ್ರಿಯಾದಿಗಳು ಸ್ವಾಭಾವಿಕವೆಂದು ಶ್ರುತಿಪ್ರಸಿದ್ಧವಾಗಿದೆ.

**ज्ञानं नित्यं क्रिया नित्या बलं शक्तिः परात्मनः ।।**
**नित्यानन्दोऽव्ययः पूर्णो भगवान्विष्णुरच्युतः ।।**
**इति पैङ्गिश्रुतिश्चाह .... ..... ..... ....**

ಅನು - ಪರಮಾತ್ಮನ ಜ್ಞಾನ ನಿತ್ಯ, ಕ್ರಿಯಾ ನಿತ್ಯ, ಬಲ ನಿತ್ಯ, ಶಕ್ತಿಯೂ ನಿತ್ಯ. ನಿತ್ಯಾನಂದ ಸ್ವರೂಪನೂ, ಅವ್ಯಯ = ಹ್ರಾಸರಹಿತನೂ, ಪೂರ್ಣನೂ ಷಡ್ಗುಣೈಶ್ವರ್ಯಸಂಪನ್ನನೂ ಆದ ವಿಷ್ಣುವು ನಾಶರಹಿತನಾಗಿದ್ದಾನೆ ಎಂದು ಪೈಂಗಿಶ್ರುತಿ ಹೇಳುತ್ತದೆ.

**अनु – .... .... शक्तिसद्भाव एव तु ।।**
**क्रियादिनित्यता ज्ञेया तदन्यत्र त्वनित्यता।।**
**इति सत्तत्त्ववचनम् ।। २ ।।**

ಅನು - ಶಕ್ತಿ ನಿತ್ಯವಾದರೆ ಕ್ರಿಯಾದಿಗಳಿಗೂ ನಿತ್ಯತ್ವ ಇದೆ. ಶಕ್ತಿ ನಿತ್ಯವಲ್ಲವೆಂದಾದಲ್ಲಿ ಕ್ರಿಯೆಗೂ ಅನಿತ್ಯತ್ವ ಇದೆ ಎಂದು ಸತ್ತತ್ತ್ವ ವಚನದ ಪ್ರಮಾಣ ಮೂಲಕ ತಿಳಿಸುತ್ತಾರೆ.)

ಹೀಗೆ ಶ್ರೀಮದಾಚಾರ್ಯರು ಆತ್ಮತ್ವಾಧಿಕರಣದ ಅನುವ್ಯಾಖ್ಯಾನದಲ್ಲಿ ಶಕ್ತಿ ಎಂಬ ಪದಾರ್ಥವನ್ನು ಸಮರ್ಥನೆ ಮಾಡಿದ್ದಾರೆ.

# ಶ್ರೀಮಟ್ಟೀಕಾಕೃತ್ಪಾದರಿಂದ ವಿರಚಿತ
# ಶ್ರೀಮನ್ನ್ಯಾಯಸುಧಾ

## ಅತ್ತೃತ್ವಾಧಿಕರಣದ ನ್ಯಾಯಸುಧೆಯಲ್ಲಿ ಶಕ್ತಿಯ ಸಮರ್ಥನೆ

**न्यायसुधा –** परमेश्वरस्य हि नित्यत्वं जन्मादिसूत्रलब्धम् । स्वयमनित्यस्य सकलकारणत्वानुपपत्तेः । यत् खलु यस्य जनकं न तस्यासौ जनको, यच्च तस्य विनाशकं न तस्यासौ विनाशक इति । क्रियाणां त्वनित्यत्वं सुप्रसिद्धम् । तथा च नित्यानित्ययोः कथमभेदः स्यात् । विरुद्धधर्माध्यासस्य भावभेदाव्यभिचारात्। अन्यथा जगति भेदाभावप्रसङ्गात् । ततो यदि नाम सर्वगतत्वादीनां यावद्द्रव्यभाविनामभेदः तथाऽपि न क्रियाणामसौ युज्यत इति ।

**ಅನು:** ''ಜನ್ಮಾದ್ಯಸ್ಯ ಯತಃ'' ಎಂಬ ಸೂತ್ರದಿಂದ ಪರಮಾತ್ಮನಿಗೆ ನಿತ್ಯತ್ವವು ಜ್ಞಾತ ವಾಗಿದೆ. ಯಾಕೆಂದರೆ, ತಾನೇ ಅನಿತ್ಯನಾದರೆ ಎಲ್ಲಾ ಜಗತ್ತಿನ ಕಾರಣತ್ವವು ಆ ಪರಮಾತ್ಮನಿಗೆ ಕೂಡುವುದಿಲ್ಲ. ಏಕೆಂದರೆ, ಯಾವನು ಯಾರಿಗೆ ಜನಕನೋ ಅವನಿಗೆ ಅವನು ತಂದೆಯಾಗುವುದಿಲ್ಲ. ಹಾಗೆಯೇ ಯಾರು ಯಾರಿಗೆ ನಾಶಕನೋ ಅವನಿಗೆ ಅವನು ನಾಶಕನಾಗುವುದಿಲ್ಲ ಎಂದು ನಿಯಮವಿದೆ. ಪ್ರಕೃತ

ಕ್ರಿಯೆಗಳಿಗೆ ಅನಿತ್ಯತ್ವವು ಲೋಕಪ್ರಸಿದ್ಧವಾಗಿದೆ. ಆದರಿಂದ ನಿತ್ಯನಾದ ಬ್ರಹ್ಮನಿಗೂ ಮತ್ತು ಅನಿತ್ಯ ಕ್ರಿಯೆಗಳಿಗೂ ಹೇಗೆ ಅಭೇದ ಸರಿಹೊಂದೀತು. ಪದಾರ್ಥಗಳಲ್ಲಿ ನಿತ್ಯತ್ವ ಅನಿತ್ಯತ್ವ ಮೊದಲಾದ ವಿರುದ್ಧಧರ್ಮಗಳಿದ್ದರೆ ಆ ಭಾವಪದಾರ್ಥಗಳಿಗೆ ಭೇದವು ನಿಯಮೇನ ಇರಲೇಬೇಕು. ಆದರ ಪ್ರಕಾರ ನಿತ್ಯನಾದ ಪರಮಾತ್ಮನಿಂದ ಅನಿತ್ಯವಾದ ಕ್ರಿಯೆಗಳಿಗೆ ಹೇಗೆ ಅಭೇದ ಕೂಡುತ್ತದೆ ? ಈ ನಿಯಮವನ್ನು ನಾವು ಒಪ್ಪದಿದ್ದರೆ ಜಗತ್ತಿನಲ್ಲಿ ವಸ್ತುಗಳಿಗೆ ಪರಸ್ಪರ ಭೇದವೇ ಇರದಿರಬೇಕಾದೀತು. ತಮ್ಮ ಆಶ್ರಯವಾದ ದ್ರವ್ಯಗಳಿರುವಷ್ಟು ಕಾಲ ಇರುವ ಸರ್ವಗತತ್ವ, ಸರ್ವಜ್ಞತ್ವಾದಿ ಧರ್ಮಗಳಿವೆಯೋ ಅವಕ್ಕೆ ಬ್ರಹ್ಮನಿಂದ ಅಭೇದವಿದ್ದರೂ ಯಾವಾದ್ದ್ರವ್ಯ- ಭಾವಿಯಲ್ಲದ ಕ್ರಿಯೆಗಳಿಗೆ ಅಭೇದವು ಕೂಡುವುದಿಲ್ಲ.

**ವಿವರಣೆ :** ಧಾತ್ವರ್ಥಃ ಕ್ರಿಯಾ ಎಂಬಂತೆ ಧಾತುವಿನ ಅರ್ಥ ಕ್ರಿಯೆಯೇ ಆಗಿದೆ. ಆಗ ಸರ್ವಗತತ್ವ, ಸರ್ವಜ್ಞತ್ವಾದಿಗಳೂ ಕ್ರಿಯೆಗಳಾಗುತ್ತವೆ. ಆಗ 'ಪ್ರಥಮಾತಿಕ್ರಮಣೇ ಮಾನಾಭಾವಾತ್' ಎಂಬಂತೆ ಸರ್ವಗತತ್ವಾಧಿಕರಣದಲ್ಲಿ ಕ್ರಿಯೆಯ ವಿಚಾರದಲ್ಲಿ ಈ ಪ್ರಶ್ನೋತ್ತರಗಳನ್ನು ಮಾಡಬಹುದು ಎಂಬ ಶಂಕೆ ಬರಬಹುದು. ಅದಕ್ಕೋಸ್ಕರವೇ ಅನುವ್ಯಾಖ್ಯಾನದಲ್ಲಿ 'ತು'ಶಬ್ದದಿಂದ ಈ ಶಂಕೆಯನ್ನು ಪರಿಹರಿಸಿದ್ದಾರೆ. ಇದರಿಂದ ಯಾವದ್ದ್ರವ್ಯಭಾವಿಗಳಾದ (ವಸ್ತು ಇರುವಷ್ಟು ಕಾಲ ಇರುವ) ಸರ್ವಗತತ್ವಾದಿಗಳು ಬ್ರಹ್ಮನಿಂದ ಅಭಿನ್ನಗಳಾಗಬಹುದು. ಆದರೆ ಅಯಾವದ್ದ್ರವ್ಯಭಾವಿಗಳಾದ ಚಲನೆ, ಅದನ ಮುಂತಾದ ಕ್ರಿಯೆಗಳಿಗೆ ಅಭೇದ ಹೇಗೆ ಎಂಬ ಪ್ರಶ್ನೆಗೆ ಇಲ್ಲಿಯೇ ಅವಕಾಶವಿದೆ ಎಂದಂತಾಯಿತು.

ಬ್ರಹ್ಮ ಸಕಲ ಕಾರಣನಾಗಬೇಕಾದರೆ ಅವನಿಗೆ ಯಾರೂ ಕಾರಣ ಆಗಬಾರದು. ಹಾಗೆಯೇ ಅವನು ಸಕಲ ನಾಶಕನಾಗಬೇಕಾದರೆ ಆ ಬ್ರಹ್ಮನಿಗೆ ಯಾರೂ ನಾಶಕನಿರಬಾರದು ಎಂಬ ವಿಷಯವು ಜನ್ಮಾದಿ ಸೂತ್ರದಿಂದ ಅರ್ಥಾತ್ ಲಬ್ಧವಾಗಿದೆ.

ಅಭಾವವು ಅಧಿಕರಣ ಸ್ವರೂಪ ಎಂಬುದು ಕೆಲವರ ವಾದ. ಆಗ ಘಟದಲ್ಲಿರುವ ಘಟಾಭಾವವು ಘಟಕ್ಕಿಂತ ವಿರುದ್ಧ ಧರ್ಮಾಧಿಕರಣವಾದರೂ ಅಭೇದವಿದೆ. ಹಾಗೆಯೇ ತಮ್ಮ ಸಿದ್ಧಾಂತದಲ್ಲಿ ಪ್ರತಿಯೋಗಿ ನಿರೂಪ್ಯವಾದ ಅನ್ಯೋನ್ಯಾಭಾವವು,

ಪ್ರತಿಯೋಗಿ ನಿರೂಪ್ಯವಾಗದಿರುವ ಬ್ರಹ್ಮಸ್ವರೂಪವಾಗಿದೆ. ಈ ಎರಡು ಕಾರಣಗಳಿಂದ ಭಾವಭೇದಾವ್ಯಭಿಚಾರಾತ್ ಎಂಬಲ್ಲಿ ಭಾವಪದಪ್ರಯೋಗ ಮಾಡಲಾಗಿದೆ.

ಘಟಪಟಗಳಲ್ಲಿ ಘಟತ್ವಪಟತ್ವರೂಪ ವಿರುದ್ಧ ಧರ್ಮಗಳು ಇವೆ. ಆದ್ದರಿಂದ ಭಿನ್ನಗಳಾಗಿವೆ. ಪ್ರಕೃತಕ್ರಿಯಾ ಮತ್ತು ಬ್ರಹ್ಮರಲ್ಲಿ ನಿತ್ಯತ್ವಾನಿತ್ಯತ್ವಗಳೆಂಬ ವಿರುದ್ಧಧರ್ಮಗಳಿರುವುದರಿಂದ ಆ ಕ್ರಿಯಾ ಮತ್ತು ಬ್ರಹ್ಮರಲ್ಲಿ ಭೇದವನ್ನು ಒಪ್ಪಬೇಕು.

"ಕ್ರಿಯಾಬ್ರಹ್ಮಣೀ ಭಿನ್ನೇ ನಿತ್ಯತ್ವಾನಿತ್ಯತ್ವರೂಪವಿರುದ್ಧಧರ್ಮಾಧಿಕರಣತ್ವಾತ್ ಯದ್ವಿರುದ್ಧಧರ್ಮಾಧಿ- ಕರಣಮ್ ತತ್ತನ್ನ ಘಟಪಟವತ್" ಎಂದು ಅನುಮಾನ ಪ್ರಯೋಗ. ಇದಕ್ಕೆ ಎಲ್ಲಿಯೂ ವ್ಯಭಿಚಾರವಿಲ್ಲ.

**न्यायसुधा** – परिहरति – **इति चेदिति ।।**

ಅನು: 'ಇತಿ ಚೇತ್' ಎಂಬಿತ್ಯಾದಿ ಅನುವ್ಯಾಖ್ಯಾನದಲ್ಲಿ ಈ ಆಕ್ಷೇಪವನ್ನು ಪರಿಹರಿಸುತ್ತಿದ್ದಾರೆ.

## ಈಶ್ವರೀಯಕ್ರಿಯೆಗಳು ಭಗವಂತನ ಸ್ವರೂಪಗಳಾಗಿವೆ

**न्यायसुधा** – नेत्यध्याहारः । कुतः ? न केवलमीश्वरः स्थिरोऽपि तु स तदीयो विशेषो धर्मोऽपि क्रियारूपः स्थिरो यत इति शेषः । अत्र(तु) क्रिया स्थिरेत्येतावदेव वक्तव्यम् । विशेष इति तु क्रियायाः परमेश्वरैक्येऽप्युक्त वक्ष्यमाणन्यायेन तद्धर्मतयाऽप्यङ्गीकरणीयेति ज्ञापयितुम् । न केवलं स विशेषः सर्वगतत्वादिः स्थिरः, किन्तु क्रियाऽपि पारमेश्वरी स्थिरा यत इति वा योज्यम् ।

ಅನು: ಇಲ್ಲಿ ಚೇತ್ ಎಂಬ ಶಬ್ದದ ನಂತರ ನ ಎಂಬ ಪದವನ್ನು ಅಧ್ಯಾಹಾರ ಮಾಡಬೇಕು. ಯಾಕೆ ಈ ಪೂರ್ವಪಕ್ಷ ಕೂಡುವುದಿಲ್ಲ. ಕೇವಲ ಈಶ್ವರ ಮಾತ್ರರ ನಿತ್ಯವಾದವನಲ್ಲ. ಮತ್ತು ಸ = ಅವನಲ್ಲಿರುವ ವಿಶೇಷೋऽಪಿ = ಕ್ರಿಯಾರೂಪವಾದ ಧರ್ಮವು ಕೂಡ ನಿತ್ಯವಾಗಿದೆ. ಇಲ್ಲಿ ಯತಃ

ಎಂಬುದನ್ನು ಶೇಷಪೂರಣೆ ಮಾಡಬೇಕು. ಇಲ್ಲಿ ಕ್ರಿಯಾ ಸ್ಥಿರಾ ಎಂದು ಮಾತ್ರ ಹೇಳಬಹುದಿತ್ತು. ಆದರೆ ವಿಶೇಷ ಎಂಬ ವಿಶೇಷಣವು ಕ್ರಿಯೆಯು ಬ್ರಹ್ಮನಿಂದ ಅಭಿನ್ನವಾದರೂ ಹಿಂದೆ ಹೇಳಿದ ಮತ್ತು ಮುಂದೆ ಹೇಳುವ ಯುಕ್ತಿಗಳಿಂದ ಪರಮಾತ್ಮನ ಧರ್ಮವೂ ಆಗಿದೆ ಎಂದು ತಿಳಿಸಲು ಹೇಳಲ್ಪಟ್ಟಿದೆ ಅಲ್ಲದೇ ವಿಶೇಷಃ = ಸರ್ವಗತತ್ವಾದಿಗಳು ನಿತ್ಯವೆಂದಿಷ್ಟೇ ಅಲ್ಲ ಪರಮಾತ್ಮನ ಕ್ರಿಯೆಗಳೂ ನಿತ್ಯಗಳಾಗಿವೆ ಎಂದು ಯೋಜನೆ ಮಾಡಬಹುದು.

**ವಿವರಣೆ :** ಬ್ರಹ್ಮನ ಧರ್ಮಗಳಿಗೆ ಬ್ರಹ್ಮನಿಂದ ಅಭೇದವನ್ನು ಜನ್ಮಾಧಿಕರಣದಲ್ಲಿ ಹೇಳಿದೆ. ಹಾಗೆಯೇ ಮುಂದಿನ ಅಧಿಕರಣದಲ್ಲಿಯೂ ಹೇಳಲಾಗುವುದು.

ಹಾಗೆಯೇ "ಅತೋಽನಂತಗುಣಂ ಬ್ರಹ್ಮ ನಿರ್ಭೇದಮಪಿ ಭಣ್ಯತೇ । ಏವಂ ಧರ್ಮಾನ್ ...." ಇತ್ಯಾದಿ ಉಕ್ತ ನ್ಯಾಯದಿಂದ ಹಾಗೆಯೇ ಭಕ್ತಿಪಾದದಲ್ಲಿ 'ಉಭಯವ್ಯಪದೇಶಾತ್' ಎಂಬಲ್ಲಿ ಮುಂದೆ ಹೇಳುವ ನ್ಯಾಯದಿಂದ ಅಭೇದ ಪ್ರತಿಪಾದಿಸಲ್ಪಡುತ್ತದೆ. ಇಲ್ಲಿರುವ ವಿಶೇಷ ಪದದಿಂದ ಬ್ರಹ್ಮನಿಗೂ ಅವನ ಧರ್ಮಗಳಿಗೂ ಸವಿಶೇಷಾಭೇದ ಇದೆಯೆಂದು ತಿಳಿಯುತ್ತದೆ.

## ಈಶ್ವರೀಯ ಕ್ರಿಯೆಗಳಿಗೆ ಅನಿತ್ಯತ್ವಾನುಮಾನ ನಿರಾಕರಣೆ

**न्यायसुधा** – अनेन क्रियाया अपि नित्यत्वप्रतिज्ञानेन विरुद्धधर्माध्यासस्यासिद्धिरुक्ता। तथाहि । ईश्वरस्य संहरणादिक्रियाणामनित्यत्वं किं प्रमाणबलादङ्गीक्रियते ? उत नित्यत्वे बाधकसद्भावात्, अथवा तत्साधकप्रमाणाभावात् । नाद्यः । ईश्वरस्य तत्क्रियायाश्च अप्रत्यक्षत्वेन तदनित्यत्वस्य प्रत्यक्षेण प्रत्येतुमशक्यत्वात् । लिङ्गाभावेनानुमानानुपपत्तेः।

**ಅನು:** ಈ ಅನುವ್ಯಾಖ್ಯಾನದಿಂದ ಭಗವಂತನಿಗೆ ಕ್ರಿಯೆಗೆ ನಿತ್ಯತ್ವವನ್ನು ಪ್ರತಿಜ್ಞೆ ಮಾಡಿದ್ದರಿಂದ 'ನಿತ್ಯತ್ವಾನಿತ್ಯತ್ವಗಳೆಂಬ ವಿರುದ್ಧಗಳಿರುವುದರಿಂದ ಬ್ರಹ್ಮ ಹಾಗೂ ಅವನ ಕ್ರಿಯೆಗಳಿಗೆ ಐಕ್ಯವು ಕೂಡುವುದಿಲ್ಲ ಎಂದು ಸಾಧಿಸಲು ಹೊರಟ ಅನುಮಾನಕ್ಕೆ ಅಸಿದ್ಧಿ ದೋಷವು ಹೇಳಲ್ಪಟ್ಟಿತು.

ಭಗವಂತನ ಕ್ರಿಯೆಗೆ ಅನಿತ್ಯತ್ವವನ್ನು ಹೇಳುವವರ ನಿರಾಸವು ಹೀಗಿದೆ – (ಅ) ಈಶ್ವರನ ಸಂಹಾರಾದಿ ಕ್ರಿಯೆಗಳಿಗೆ ಅನಿತ್ಯತ್ವವು ಪ್ರಮಾಣಾಧಾರದಿಂದ ಅಂಗೀಕರಿಸಲ್ಪಡುವುದೋ ಅಥವಾ (ಆ) ಈಶ್ವರನ ಕ್ರಿಯೆಗಳು ನಿತ್ಯಗಳಾಗಲು ಬಾಧಕಗಳಿರುವುದರಿಂದಲೋ, ಅಥವಾ (ಇ) ಈಶ್ವರ ಕ್ರಿಯೆಗೆ ನಿತ್ಯತ್ವ ಸಾಧಕ ಪ್ರಮಾಣ ಇಲ್ಲವಾದ್ದರಿಂದಲೋ ಎಂಬುದಾಗಿ ವಿಕಲ್ಪ ಮಾಡುತ್ತಾರೆ.

ಮೊದಲನೆಯ ಪಕ್ಷವು ಕೂಡುವುದಿಲ್ಲ. ಯಾಕೆಂದರೆ ಈಶ್ವರ ಮತ್ತು ಅವನ ಧರ್ಮವಾದ ಕ್ರಿಯೆಯು ಪ್ರತ್ಯಕ್ಷವಿಲ್ಲವಾದ್ದರಿಂದ ಆ ಕ್ರಿಯೆಗಳ ಅನಿತ್ಯತ್ವವನ್ನು ಪ್ರತ್ಯಕ್ಷದಿಂದ ತಿಳಿಯಲಾಗುವುದಿಲ್ಲ. ಲಿಂಗ ಇಲ್ಲದಿರುವುದರಿಂದ ಅನುಮಾನ ಪ್ರಮಾಣದಿಂದಲೂ ಅನಿತ್ಯತ್ವದ ಸಿದ್ಧಿ ಎಂದನ್ನುವುದು ಕೂಡುವುದಿಲ್ಲ.

> **ವಿವರಣೆ :** ಈಶ್ವರ ಕ್ರಿಯೆ ಅನಿತ್ಯವೆಂದು ಪೂರ್ವಪಕ್ಷಿಗಳು ಅನುಮಾನದಿಂದ ಸಾಧಿಸುತ್ತಾರೆ. ಇದಕ್ಕೆ ಒಂಭತ್ತು ಲಿಂಗಗಳನ್ನು ಹೇಳುತ್ತಾರೆ. ಆ ಒಂಭತ್ತು ಅನುಮಾನಗಳು ಈ ರೀತಿಯಾಗಿವೆ.

ಈಶ್ವರನ ಕ್ರಿಯೆಗೆ ಅನಿತ್ಯತ್ವಸಾಧಕ ಅನುಮಾನಾಭಾಸಗಳು

೧. ಈಶ್ವರಕ್ರಿಯಾ, ಅನಿತ್ಯಾ, ಕ್ರಿಯಾತ್ವಾತ್ ಘಟಕ್ರಿಯಾವತ್ ।

೨. ಈಶ್ವರಕ್ರಿಯಾ, ಅನಿತ್ಯಾ, ಆವರಣಾದೌ ಅಸತಿ ಪ್ರಾಗೂರ್ಧ್ವಂ ಅನುಪಲಂಭಾತ್ । ಘಟಕ್ರಿಯಾವತ್

೩. ಈಶ್ವರಕ್ರಿಯಾ, ಅನಿತ್ಯಾ, ಆವರಣಾದ್ಯಭಾವೇ ಸತಿ ಕದಾಚಿದೇವ ಉಪಲಬ್ಧೇಃ । ಘಟಕ್ರಿಯಾವತ್

೪. ಈಶ್ವರಕ್ರಿಯಾ, ಅನಿತ್ಯಾ, ಕ್ರಿಯಾಜನ್ಯಸಂಯೋಗವಿಭಾಗಜನ್ಮಾನುಪಲಂಭಾತ್ । ಘಟಕ್ರಿಯಾವತ್

೫. ಈಶ್ವರಕ್ರಿಯಾ, ಅನಿತ್ಯಾ, ನಿತ್ಯಂ ಕ್ರಿಯಾಜನ್ಯಸಂಯೋಗವಿಭಾಗಜನ್ಮಾನುಪಲಂಭಾತ್ । ಘಟಕ್ರಿಯಾವತ್

೬. ಈಶ್ವರಕ್ರಿಯಾ, ಅನಿತ್ಯಾ, ಕಾದಾಚಿತ್ಕ ಸಂಯೋಗವಿಭಾಗಜನಕತ್ವಾತ್ । ಘಟಕ್ರಿಯಾವತ್

೭. ಈಶ್ವರಕ್ರಿಯಾ, ಅನಿತ್ಯಾ, ಕದಾಚಿತ್ಸಂಯೋಗಾದ್ಯಸಮವಾಯಿತ್ವಾತ್ । ಘಟಕ್ರಿಯಾವತ್

೮. ಈಶ್ವರಕ್ರಿಯಾ, ಅನಿತ್ಯಾ, ಸಾಮಾನ್ಯವತ್ವೇ ಸತಿ ಅಸ್ಮದಾದಿ ಬಾಹ್ಯೇಂದ್ರಿಯ ಗ್ರಾಹ್ಯತ್ವಾತ್ । ಘಟಕ್ರಿಯಾವತ್

೯. ಈಶ್ವರಕ್ರಿಯಾ, ಅನಿತ್ಯಾ, ಬಾಹ್ಯೇಂದ್ರಿಯಗ್ರಾಹ್ಯ ಸಜಾತೀಯತ್ವಾತ್ । ಘಟಕ್ರಿಯಾವತ್

ಈ ಒಂಭತ್ತು ಲಿಂಗಗಳನ್ನು ಸುಧಾದಲ್ಲಿ ಕ್ರಮವಾಗಿ ಖಂಡನೆ ಮಾಡುತ್ತಾರೆ.

## ಕ್ರಿಯಾತ್ವ ಎಂದರೇನು ?

**न्यायसुधा –** क्रियात्वं लिङ्गमिति चेत्, तत्किं धात्वर्थत्वम् परिस्पन्दत्वं वा । नाद्यः। ज्ञानेच्छाप्रयत्नैः सत्तया च व्यभिचारात् । न द्वितीयः । सर्वक्रियाणामपरिस्पन्दत्वेन भागासिद्धत्वात् । ईश्वरपरिस्पन्दपक्षीकारेत्वाश्रयासिद्धेः । परेण तस्यानङ्गीकृतत्वात् । अङ्गीकारेऽप्यनैकान्त्यम् । क्वचिदनीश्वरपरिस्पन्दानामपि नित्यत्वस्य वक्ष्यमाणत्वात्। क्रियात्वस्य नित्यत्वेन विना वृत्तौ बाधकाभावादप्रयोजकता च । कार्यत्वेन सोपाधिकत्वं च । तस्यापि साधने बाधः । प्रमाणस्य वक्ष्यमाणत्वात् ।

ಅನು: ಈಶ್ವರನ ಕ್ರಿಯೆಗೆ ಅನಿತ್ಯತ್ವ ಸಾಧಿಸಲು ಕ್ರಿಯಾತ್ವವನ್ನು ಲಿಂಗವನ್ನಾಗಿ ಹೇಳಿದರೆ ಕ್ರಿಯಾತ್ವವು ಧಾತ್ವರ್ಥತ್ವವೋ ಅಥವಾ ಪರಿಸ್ಪಂದತ್ವವೋ ಎಂಬ ಪ್ರಶ್ನೆ ಬರುತ್ತದೆ. ಇಲ್ಲಿ ಧಾತ್ವರ್ಥ ಎಂದು ಹೇಳಲಾಗುವುದಿಲ್ಲ. ಯಾಕೆಂದರೆ, ಧಾತ್ವರ್ಥತ್ವವು ನಿತ್ಯವಾದ ಈಶ್ವರನ ಜ್ಞಾನ ಪ್ರಯತ್ನಗಳಲ್ಲಿ ಅದೇ ರೀತಿ ಸತ್ತಾ ಜಾತಿಯಲ್ಲಿಯೂ ಇರುವುದರಿಂದ ವ್ಯಭಿಚಾರ ಬರುತ್ತದೆ. ಇನ್ನು ಎಲ್ಲಾ ಕ್ರಿಯೆಗಳು ಪರಿಸ್ಪಂದ ರೂಪಗಳಲ್ಲವಾದ್ದರಿಂದ ಭಾಗಾಸಿದ್ಧಿದೋಷ ಬರುವುದರಿಂದ ಪರಿಸ್ಪಂದತ್ವ ಎಂಬ ಎರಡನೆಯ ಪಕ್ಷವೂ ಕೂಡುವುದಿಲ್ಲ. ಈಶ್ವರಪರಿಸ್ಪಂದವಷ್ಟೇ ಪಕ್ಷಮಾಡಿ ಅನಿತ್ಯತ್ವ ಸಾಧಿಸಿದರೆ ಭಾಗಾಸಿದ್ಧಿ ಪರಿಹಾರವಾದರೂ ಆಶ್ರಯಾಸಿದ್ಧಿದೋಷ ಬರುವುದು. ಯಾಕೆಂದರೆ ವಾದಿಯ ಪ್ರಕಾರ ಈಶ್ವರನು ವಿಭು. ಆದ್ದರಿಂದ ಚಲನೆಯ (ಪರಿಸ್ಪಂದವ)ನ್ನು ಒಪ್ಪಲಿಲ್ಲ. ಒಂದು ವೇಳೆ ವಾದಿ ಈಶ್ವರನಿಗೆ ಚಲನೆಯನ್ನು ಒಪ್ಪಿದರೂ ವ್ಯಭಿಚಾರ ದೋಷ ತಪ್ಪಿಸಲಾಗುವುದಿಲ್ಲ. ಯಾಕೆಂದರೆ, ಕೆಲವು ಕಡೆ ಈಶ್ವರಾತಿರಿಕ್ತದಲ್ಲಿರುವ ಪರಿಸ್ಪಂದಗಳಿಗೂ ನಿತ್ಯತ್ವವನ್ನು ಮುಂದೆ ಸಾಧಿಸಲಾಗುವುದಷ್ಟೆ. ಹಾಗೆಯೇ

ಲಿಂಗವಾದ ಕ್ರಿಯಾತ್ವವು ಇದ್ದಲ್ಲಿಯೂ ನಿತ್ಯತ್ವವನ್ನೇ ಒಪ್ಪಿ ಅನಿತ್ಯತ್ವವನ್ನು ಒಪ್ಪಿಕೊಳ್ಳದಿದ್ದರೆ ಬಾಧಕ ಇಲ್ಲವಾದ್ದರಿಂದ ಅಪ್ರಯೋಜಕತಾ ದೋಷ ಬರುವುದು. ಹಾಗೆಯೇ ಕಾರ್ಯತ್ವಧರ್ಮದಿಂದ ಲಿಂಗಕ್ಕೆ ಸೋಪಾಧಿಕತ್ವವು ಬರುವುದು. ಕಾರ್ಯತ್ವವನ್ನು ಈಶ್ವರ ಕ್ರಿಯೆಯಲ್ಲಿ ಸಾಧನೆ ಮಾಡಿದರೆ ಬಾಧದೋಷ ಬರುವುದು. ಮುಂದೆ ಈಶ್ವರ ಕ್ರಿಯೆ ಕಾರ್ಯವಲ್ಲ ಎಂದು ಪ್ರಮಾಣದಿಂದ ಉಪಪಾದಿಸಲ್ಪಡುತ್ತದೆಯಷ್ಟೆ.

**ವಿವರಣೆ :** ಧಾತ್ವರ್ಥಕ್ರಿಯೆಯನ್ನು ಪಕ್ಷಮಾಡಿ ಪರಿಸ್ಪಂದತ್ವವನ್ನು ಹೇತುಮಾಡಿದಾಗ ಪಕ್ಷೈಕದೇಶದಲ್ಲಿ ಹೇತ್ವಭಾವವಿರುವುದರಿಂದ ಭಾಗಾಸಿದ್ಧಿದೋಷ ಬರುವುದು. ಈಶ್ವರ ವಿಭುವಾದ್ದರಿಂದ ಈಶ್ವರನಿಗೆ ಪರಿಸ್ಪಂದ ಕೂಡುವುದಿಲ್ಲ. ಏಕೆಂದರೆ ಪರಿಚ್ಛಿನ್ನ ವಸ್ತುವಿಗೆ ಮಾತ್ರ ಚಲನೆ ಇರುವುದು. ಆದ್ದರಿಂದ ಈಶ್ವರನ ಪರಿಸ್ಪಂದವನ್ನು ಪಕ್ಷೀಕರಿಸಲಾಗುವುದಿಲ್ಲ.

ಒಂದು ವೇಳೆ ಈಶ್ವರನಲ್ಲಿ ಪರಿಸ್ಪಂದವನ್ನು ಒಪ್ಪಿದರೂ ಈಶ್ವರಪರಿಸ್ಪಂದಭಿನ್ನಗಳಾದ ನಿತ್ಯಪರಿಸ್ಪಂದದಲ್ಲಿ ಪರಿಸ್ಪಂದತ್ವರೂಪ ಲಿಂಗಕ್ಕೆ ವ್ಯಭಿಚಾರ ಯಾಕೆಂದರೆ, 'ಶಕ್ತಿಸದ್ಭಾವ ಏವತು, ಕ್ರಿಯಾದಿನಿತ್ಯತಾ ಜ್ಞೇಯಾ' ಎಂಬಲ್ಲಿ ಅನೀಶ್ವರ ಪರಿಸ್ಪಂದಗಳಿಗೆ ನಿತ್ಯತ್ವವನ್ನು ಅನುವ್ಯಾಖ್ಯಾನದಲ್ಲಿ ಮುಂದೆ ಹೇಳಲಾಗುವುದರಿಂದ, ಅವುಗಳಲ್ಲಿ ಪರಿಸ್ಪಂದತ್ವರೂಪಲಿಂಗವಿದ್ದು ಅನಿತ್ಯತ್ವರೂಪ ಸಾಧ್ಯವಿಲ್ಲವೆಂದಾಗುತ್ತದೆಯಷ್ಟೆ.

ಈ ಕಾರ್ಯತ್ವ ಉಪಾಧಿ ಎಂದರೆ ಈ ಕಾರ್ಯತ್ವಜನ್ಯತ್ವ ಎಂದರ್ಥ. 'ಸಾಧ್ಯವ್ಯಾಪಕತ್ವೇ ಸತಿ ಸಾಧನಾ- ವ್ಯಾಪಕತ್ವಂ' – ಉಪಾಧಿಯ ಲಕ್ಷಣ. ಇಲ್ಲಿ ದೃಷ್ಟಾಂತಾರ್ಭಾವೇನ ವಿಶೇಷಣ ಪಕ್ಷಾಂತರ್ಭಾವೇನ ವಿಶೇಷ್ಯವನ್ನು ಸಮನ್ವಯ ಮಾಡಬೇಕು. ಪ್ರಕೃತ ದೃಷ್ಟಾಂತವಾದ ಘಟಕ್ರಿಯೆಯು ಅನಿತ್ಯವಾಗಿದೆ. ಹಾಗೆಯೇ ಕಾರ್ಯವೂ ಆಗಿದೆ. ಆದುದರಿಂದ ಈ ಉಪಾಧಿಯು ಸಾಧ್ಯವ್ಯಾಪಕವಾಯಿತು. ಪ್ರಕೃತ ಪಕ್ಷವಾದ ಈಶ್ವರಕ್ರಿಯೆಯಲ್ಲಿ ಕ್ರಿಯಾತ್ವ ರೂಪ ಹೇತು ಇದ್ದರೂ ಕೂಡ ಕಾರ್ಯತ್ವವಿಲ್ಲ. ಆದುದರಿಂದ ಸಾಧನಾವ್ಯಾಪಕವಾಯಿತು.

ಈಶ್ವರಕ್ರಿಯಾ, ಅನಿತ್ಯಾ, ಕ್ರಿಯಾತ್ವಾತ್ । ಘಟಕ್ರಿಯಾವತ್ ಎಂಬ ಅನುಮಾನದಿಂದ ಈಶ್ವರನ ಕ್ರಿಯೆಯಲ್ಲಿ ಕಾರ್ಯತ್ವವು ಸಿದ್ಧವಾಗುವುದರಿಂದ, ಸಾಧನಾವ್ಯಾಪಕತ್ವಭಂಗವಾಗುತ್ತದೆ ಎಂದನ್ನಲು ಬರುವುದಿಲ್ಲ. ಏಕೆಂದರೆ ''ಕ್ರಿಯಾದಿಶ್ಚ ಸ್ವಭಾವ ಇತಿ ಹಿ ಶ್ರುತಿಃ' ಎಂಬಲ್ಲಿ

ಮುಂದೆ ಅಕಾರ್ಯವೆಂಬುದಕ್ಕೆ ಶ್ರುತಿಪ್ರಮಾಣವನ್ನು ಹೇಳುತ್ತಾರೆ. ಆದುದರಿಂದ ಪ್ರಬಲಪ್ರಮಾಣವಿರೋಧರೂಪ ಬಾಧ ಬರುವುದು.

## ಈಶ್ವರನ ಕ್ರಿಯೆ ನಿತ್ಯವಾದರೂ ಬಾಧಕವಿಲ್ಲ

**न्यायसुधा –** असत्यावरणादौ प्रागूर्ध्वं चानुपलम्भो लिङ्गमिति चेत् । अनुपलम्भः किं प्रत्यक्षेण ? उत प्रमाणमात्रेण ? नाद्यः । योग्यतया विशेषणेऽसिद्धेः । अन्यथा गगनादिना व्यभिचारात्। द्वितीये त्वसिद्धिः । आगमादिनोपलब्धेः । एतेनावरणाद्यभावे सति कदाचिदेवोलब्धिरपि प्रत्युक्ता। वर्णनित्यत्ववादेऽनैक्रात्याच्च । किञ्च नित्योऽपि ईश्वरपरिस्पन्दः कदाचिदभिव्यक्तेः कदाचिदेवोपलभ्यत इत्यङ्गीकारे न बाधकं पश्यामः । व्यक्तिरप्यादिग्रहणेन गृह्यत इति चेन्न । सन्दिग्धविोषणासिद्धेः ।

ಅನು: ಆವರಣಾದಿಗಳು ಇಲ್ಲದಿದ್ದರೂ ಮೊದಲು ಮತ್ತು ಅನಂತರ ಉಪಲಂಭವಾಗದಿರುವುದೇ ಈಶ್ವರಕ್ರಿಯಾನಿತ್ಯತ್ವ ಸಾಧನೆಗೆ ಲಿಂಗ ಎಂದು ಹೇಳಿದರೆ ಪ್ರತ್ಯಕ್ಷದಿಂದ ಅನುಪಲಂಭವು ಲಿಂಗವೋ? ಅಥವಾ ಪ್ರಮಾಣ ಸಾಮಾನ್ಯದಿಂದ ಅನುಪಲಂಭವೋ ? ಮೊದಲನೆಯ ಪಕ್ಷದಲ್ಲಿ ಪ್ರತ್ಯಕ್ಷದಿಂದ ಯೋಗ್ಯಾನುಪಲಂಭವನ್ನು ಲಿಂಗವೆನ್ನುವುದಾದರೆ ಈಶ್ವರನ ಕ್ರಿಯೆಯು ಪ್ರತ್ಯಕ್ಷಯೋಗ್ಯವಲ್ಲದಿರುವುದರಿಂದ ಆದರಲ್ಲಿ ಈ ಲಿಂಗ ಬರದಿರುವುದರಿಂದ ಅಸಿದ್ಧಿ ದೋಷ; ಯೋಗ್ಯತಾವಿಶೇಷಣ ಕೊಡದಿದ್ದರೆ ಆಕಾಶದಲ್ಲಿ ಪ್ರತ್ಯಕ್ಷೇಣ ಅನುಪಲಂಭರೂಪಲಿಂಗವಿದ್ದರೂ, ಅನಿತ್ಯತ್ವರೂಪ ಸಾಧ್ಯವಿಲ್ಲದಿರುವುದರಿಂದ ವ್ಯಭಿಚಾರ; ಆಗಮಾದಿಗಳಿಂದ ಈಶ್ವರನ ಕ್ರಿಯೆಯೂ ಪ್ರಾಗ್ ಹಾಗೂ ಊರ್ಧ್ವಕಾಲಗಳಲ್ಲಿ ಉಪಲಬ್ಧವಾಗುತ್ತಿರುವುದರಿಂದ ಪ್ರಮಾಣಸಾಮಾನ್ಯದಿಂದ ಅನುಪಲಂಭ ಎಂಬೀ ಎರಡನೆಯ ಪಕ್ಷವನ್ನು ಇಟ್ಟುಕೊಂಡರೆ ಅಸಿದ್ಧಿ. ಪ್ರತ್ಯಕ್ಷೇಣ ಉಪಲಬ್ಧಿಯನ್ನು ಯೋಗ್ಯತ್ವೇ ಸತಿ ಎಂದು ವಿಶೇಷಣ ಕೊಟ್ಟು ಅಥವಾ ಕೊಡದೇ ಲಿಂಗವೆನ್ನುವುದಾದರೆ, ಆಗಮಾದಿಗಳಿಂದ ಸದಾ ಉಪಲಬ್ಧವಾಗುತ್ತಿರುವ ಈಶ್ವರನ ಕ್ರಿಯಾರೂಪ ಪಕ್ಷದಲ್ಲಿ ಅಸಿದ್ಧಿ; ಪ್ರಮಾಣಸಾಮಾನ್ಯದಿಂದ ಕದಾಚಿದೇವ ಉಪಲಬ್ಧಿಯನ್ನು ಲಿಂಗವೆನ್ನುವುದಾದರೆ, ಆಗಮಾದಿಗಳಿಂದ ಸದಾ ಉಪಲಬ್ಧವಾಗುತ್ತಿರುವ ಈಶ್ವರನ ಕ್ರಿಯೆಯಲ್ಲಿ ಅಸಿದ್ಧಿ ಇರುವುದರಿಂದ 'ಆವರಣಾದಿಗಳು

ಇಲ್ಲದಿದ್ದಾಗ ಕೆಲವೊಮ್ಮೆ ಮಾತ್ರ ಉಪಾಲಂಭವು ಈಶ್ವರನ ಕ್ರಿಯೆಯ ಅನಿತ್ಯತ್ವಸಾಧನೆಗೆ ಲಿಂಗ' ಎಂಬ ಪಕ್ಷವೂ ನಿರಾಕೃತವಾಯಿತು. ಇಷ್ಟೇ ಅಲ್ಲದೇ ವರ್ಣಗಳಿಗೆ ನಿತ್ಯತ್ವವನ್ನು ಹೇಳುವವರ ಮತದಲ್ಲಿ ವರ್ಣಗಳಲ್ಲಿ ಇಂತಹ ಲಿಂಗಗಳಿದ್ದರೂ ಸಾಧ್ಯವಿಲ್ಲದಿರುವುದರಿಂದ ವ್ಯಭಿಚಾರವೂ ಬರುವುದು.

ಇಷ್ಟೇ ಅಲ್ಲದೇ ಈಶ್ವರಪರಿಸ್ಪಂದವು (ಚಲನೆ) ನಿತ್ಯವಾದರೂ ಕೆಲವು ಸಲ ಅಭಿವ್ಯಕ್ತವಾಗುವುದರಿಂದ ಕೆಲವು ಸಲ ಉಪಲಬ್ಧಿಯಾಗುವುದು ಎಂಬುದಾಗಿ ಅಂಗೀಕರಿಸಿದರೆ ಯಾವ ಬಾಧಕವೂ ಇರುವುದಿಲ್ಲ. ಆದುದರಿಂದ ಕದಾಚಿದೇವ ಉಪಲಂಭ ಎಂಬ ಲಿಂಗವು ಅನಿತ್ಯತ್ವಕ್ಕೆ ಅಪ್ರಯೋಜಕವೂ ಆಗಿದೆ. ಒಂದು ವೇಳೆ ಅಭಿವ್ಯಕ್ತಿಯನ್ನೂ ಅಸತ್ಯಾವರಣಾದೌ ಎಂಬಲ್ಲಿರುವ ಆದಿ ಪದದಿಂದ ಗ್ರಹಣ ಮಾಡುತ್ತೇವೆಂದು ಹೇಳಿದರೆ ಸಂದಿಗ್ಧ ವಿಶೇಷಣತಾಸಿದ್ಧಿ ದೋಷ ಬರುವುದು.

**ವಿವರಣೆ :** ಆವರಣಾದೌ ಅಸತಿ ಪ್ರಾಗೂರ್ಧ್ವಂ ಅನುಪಲಂಭಾತ್ - ಎಂಬ ಎರಡನೇ ಹೇತುವಿನಲ್ಲಿ ದಲಕೃತ್ಯ ಹೀಗಿದೆ— ಪೂರ್ವೋತ್ತರಕ್ಷಣಗಳಲ್ಲಿ ಅಂಧಕಾರಾದಿ ಆವರಣದಿಂದ ಕಾಣದಿರುವ ಘಟದಲ್ಲಿ ವ್ಯಭಿಚಾರ ಪರಿಹಾರಕ್ಕಾಗಿ 'ಅಸತಿ ಆವರಣಾದೌ' ಎಂಬ ಇಲ್ಲಿರುವ ಆದಿ ಪದದಿಂದ ಅಭಿವ್ಯಕ್ತಿ, ವ್ಯಂಜಕಾದಿಗಳ ಗ್ರಹಣ. ಆಗ ವರ್ಣನಿತ್ಯತ್ವವಾದದಲ್ಲಿ ಆವರಣ ಇಲ್ಲದಿರುವಾಗ ಪ್ರಾಗೂರ್ಧ್ವ ಅನುಪಲಂಭರೂಪಹೇತುವು ನಿತ್ಯವಾದ ವರ್ಣದಲ್ಲಿಯೂ ಇದೆ ಎಂಬ ಕಾರಣದಿಂದ ವ್ಯಭಿಚಾರಕ್ಕೆ ಅವಕಾಶವಿಲ್ಲ. ಪೂರ್ವೋತ್ತರಕ್ಷಣದಲ್ಲಿ ಉಪಲಬ್ಧವಾದ ನಿತ್ಯವಸ್ತುವಿನಲ್ಲಿ ವ್ಯಭಿಚಾರಪರಿಹಾರಕ್ಕೋಸ್ಕರ ವಿಶೇಷ್ಯದಲ. ಉಪಲಂಭಶಬ್ದಕ್ಕೆ ಪ್ರತೀತಿ ಎಂದರ್ಥ. ಆ ಪ್ರತೀತಿಯಾದರೋ ಪ್ರಮಾಣಮಾತ್ರದಿಂದಲೋ ಅಥವಾ ಕೇವಲ ಪ್ರತ್ಯಕ್ಷದಿಂದಲೋ ಎಂಬ ಪ್ರಶ್ನೆ ಬರುತ್ತದೆ. ಪ್ರತ್ಯಕ್ಷದಿಂದಾದರೆ ಯೋಗ್ಯತಾವಿಶೇಷಣ ಕೊಡಬೇಕೋ ಬೇಡವೋ ಎಂಬುದಾಗಿ ವಿಕಲ್ಪಗಳಾಗುತ್ತವೆ. ಯೋಗ್ಯತ್ವೇ ಸತಿ ಎಂದು ವಿಶೇಷಣ ಕೊಟ್ಟಾಗ 'ಆವರಣಾದೌ ಅಸತಿ ಪ್ರತ್ಯಕ್ಷಯೋಗ್ಯತ್ವೇ ಸತಿ ಪ್ರಾಗೂರ್ಧ್ವಂ ಪ್ರತ್ಯಕ್ಷೇಣ ಅನುಪಲಂಭಾತ್' ಎಂಬುದಾಗಿ ಹೇತುವಾಗುತ್ತದೆ. 'ಆವರಣಾದ್ಯಭಾವೇ ಸತಿ ಕದಾಚಿದೇವ ಉಪಲಬ್ಧೇಃ ಅನುಪಲಂಭಾತ್' ಮೂರನೇ ಹೇತುವಿನಲ್ಲಿ ಹಿಂದಿನಂತೆಯೇ ವಿಕಲ್ಪಮಾಡಿ ಖಂಡನೆಯನ್ನು ಏತೇನ ಎಂಬ ಶಬ್ದವು ಹೇಳುತ್ತದೆ. ಅಲ್ಲೂ ಹಾಗೆಯೇ ಕದಾಚಿತ್ ಉಪಲಬ್ಧಿ ಪ್ರತ್ಯಕ್ಷದಿಂದಲೋ ಅಥವಾ ಪ್ರಮಾಣಮಾತ್ರದಿಂದಲೋ ಎಂಬ ವಿಕಲ್ಪ ಮಾಡಿ ಪ್ರತ್ಯಕ್ಷದಿಂದ ಎಂಬ ಮೊದಲನೆಯ ಪಕ್ಷವನ್ನು ಒಪ್ಪಿದಲ್ಲಿ, ಅಲ್ಲಿ

ಯೋಗ್ಯತಾವಿಶೇಷಣ ಕೊಡಬೇಕೋ ಬೇಡವೋ ಎಂದು ವಿಕಲ್ಪ ಮಾಡಬೇಕು. ಈಶ್ವರ ಕ್ರಿಯೆಯು ಪ್ರತ್ಯಕ್ಷವಲ್ಲವಾದ್ದರಿಂದ ಮೊದಲಿನ ಎರಡು ಪಕ್ಷದಲ್ಲಿ ಅಸಿದ್ಧಿ ಬರುವುದು. ಆಗಮದಿಂದ ಸರ್ವದಾ ಉಪಲಬ್ಧಿ ಇರುವುದರಿಂದ ಮೂರನೇ ಪಕ್ಷದಲ್ಲಿಯೂ ಅಸಿದ್ಧಿದೋಷ ಬರುವುದು. ವರ್ಣ ನಿತ್ಯತ್ವವಾದಲ್ಲಿ ವರ್ಣದಲ್ಲಿ ವ್ಯಭಿಚಾರ, ತಾರ್ಕಿಕರು ವರ್ಣಗಳಿಗೆ ಅನಿತ್ಯತ್ವವನ್ನು ಹೇಳುತ್ತಾರೆ. ಅದಕ್ಕಾಗಿಯೇ "ವರ್ಣನಿತ್ಯತ್ವ ವಾದೇ" ಎಂದು ಹೇಳಿದ್ದಾರೆ. ಈ ವ್ಯಭಿಚಾರ ಹಿಂದಿನ ಎರಡನೆಯ ಹಾಗೂ ಮೂರನೆಯ ಹೇತುಗಳಿಗೆ ಬರುವುದು.

ಅಭಿವ್ಯಕ್ತಿಯನ್ನು ಆವರಣಾದೌ ಎಂಬಲ್ಲಿರುವ ಆದಿಶಬ್ದದಿಂದ ಗ್ರಹಣ ಮಾಡಿದರೆ ಪಕ್ಷವಾದ ಈಶ್ವರಕ್ರಿಯೆಯಲ್ಲಿ ಅಭಿವ್ಯಕ್ತಿ ಇದೆಯೋ ಇಲ್ಲವೋ ಎನ್ನುವುದು ಸಂದಿಗ್ಧವಾದ್ದರಿಂದ ಸಂದಿಗ್ಧವಿಶೇಷಣಾ - ಸಿದ್ಧ ದೋಷ ಬರುವುದು.

## ಈಶ್ವರಕ್ರಿಯಾನಿತ್ಯತ್ವಸಾಧಕವಾದ ಹೇತು ಯಾವುದು ?

**न्यायसुधा** – अस्तु तर्हि फलानुपलम्भो लिङ्गमिति चेन्न । सर्वथाऽनुपलम्भस्यासिद्धत्वात् । न हीश्वरपरिस्पन्दक्रिया कदाऽपि न संयोगविभागलक्षणं फलं जनयतीति युज्यते । तथा सति परिस्पन्दत्वानुपपत्तेः । नित्यसंयोगविभागजन्मानुपलब्धेरिति चेन्न । नित्यगुणादिना व्यभिचारात् । कदाचिदेव संयोगादिजन्म विवक्षितमिति चेत् । तथाऽपि गगनादिना व्यभिचारः । कदाचिदेव संयोगाद्यसमवायिकारणत्वमस्त्विति चेन्न । कदाचिदिति विशेषणवैयर्थ्यात् । तत्परित्यागेऽप्यसमवायिकारणत्वस्य दुर्निरूपत्वेनासिद्धेः ।

ಅನು : ಸಂಯೋಗ ವಿಭಾಗರೂಪವಾದ ಫಲವು ಉಪಲಬ್ಧವಾಗುವುದಿಲ್ಲ ಎಂದೆನ್ನುವುದನ್ನು ಈಶ್ವರ ಪರಿಸ್ಪಂದರೂಪ ಕ್ರಿಯಾऽನಿತ್ಯತ್ವಕ್ಕೆ ಲಿಂಗವೆನ್ನುವುದಾದರೆ ಇಲ್ಲಿ ಸರ್ವಪ್ರಕಾರದಿಂದಲೂ ಫಲಾನುಪಲಂಭವು ಲಿಂಗವೆಂದಭಿಪ್ರಾಯವಾದರೆ ಇದು ಅಸಿದ್ಧವಾಗಿದೆ. ಯಾಕೆಂದರೆ ಈಶ್ವರ ಪರಿಸ್ಪಂದರೂಪ ಕ್ರಿಯೆಯು ಯಾವತ್ತೂ ಸಂಯೋಗವಿಭಾಗರೂಪಫಲವನ್ನು

ಉತ್ಪತ್ತಿ ಮಾಡಿಕೊಡುವುದಿಲ್ಲವೆಂಬುದು ಕೂಡುವುದಿಲ್ಲ. ಒಂದು ವೇಳೆ ಅದು ಯಾವತ್ತೂ ಸಂಯೋಗವಿಭಾಗರೂಪ ಫಲವನ್ನು ಉತ್ಪತ್ತಿ ಮಾಡದಿದ್ದರೆ 'ಸಂಯೋಗವಿಭಾಗಾಸಮವಾಯಿ ಕಾರಣತ್ವ' ಎಂಬ ಲಕ್ಷಣವಿಲ್ಲವೆಂದಾಗಿ ಈ ಈಶ್ವರ ಕ್ರಿಯೆಗೆ ಪರಿಸ್ಪಂದತ್ವವೇ ಕೂಡುವುದಿಲ್ಲ. ನಿತ್ಯಸಂಯೋಗವಿಭಾಗದ ಉತ್ಪತ್ತಿಯು ಉಪಲಬ್ಧವಲ್ಲವಾದ್ದರಿಂದ ಈಶ್ವರ ಕ್ರಿಯೆಗೆ ಅನಿತ್ಯತ್ವವನ್ನು ಸಾಧಿಸಿದರೆ ಅದೂ ಕೂಡುವುದಿಲ್ಲ. ನಿತ್ಯವಾದ ಜ್ಞಾನಾದಿ ಗುಣಗಳಲ್ಲಿ ವ್ಯಭಿಚಾರವು ಬರುವುದು. ಕೆಲವು ಸಲಮಾತ್ರ ಸಂಯೋಗಾದಿ ಫಲದ ಉತ್ಪತ್ತಿಗೆ ಕಾರಣವಾಗಿದೆ ಎಂಬೀ ಲಿಂಗದಿಂದ ಈಶ್ವರ ಪರಿಸ್ಪಂದಕ್ಕೆ ಅನಿತ್ಯತ್ವವನ್ನು ಸಾಧಿಸುತ್ತೇವೆ ಗಗನವು ಸಂಯೋಗಾಸಮವಾಯಿಕಾರಣವಲ್ಲವಾದ್ದರಿಂದ ವ್ಯಭಿಚಾರವಿಲ್ಲವೆನ್ನುವುದಾದರೆ ''ಕದಾಚಿತ್'' ಎಂಬ ವಿಶೇಷಣವು ವ್ಯಭಿಚಾರವಾರಕವಲ್ಲವಾದುದರಿಂದ ವ್ಯರ್ಥವಾಗುವುದು. ಈ ವಿಶೇಷಣವನ್ನು ಬಿಟ್ಟರೆ ಅಸಮವಾಯಿ ಕಾರಣತ್ವವನ್ನು ನಿರೂಪಣೆ ಮಾಡಲು ಬಾರದೇ ಇರುವುದರಿಂದ ಅಸಿದ್ಧಿ ದೋಷವು ಬರುವುದು.

**ವಿವರಣೆ :** ಕ್ರಿಯಾಜನ್ಯಫಲಗಳು ಸಂಯೋಗವಿಭಾಗಗಳು. ಕ್ರಿಯೆಯಿಂದ ವಿಭಾಗ, ವಿಭಾಗದಿಂದ ಪೂರ್ವದೇಶಸಂಯೋಗನಾಶ. ಪೂರ್ವದೇಶಸಂಯೋಗನಾಶದಿಂದ ಉತ್ತರದೇಶಸಂಯೋಗ ಎಂದು ಕಾರ್ಯಕಾರಣಭಾವ. ಪ್ರಕೃತ ಈಶ್ವರಪರಿಸ್ಪಂದವು ಸಂಯೋಗವಿಭಾಗಗಳ ಜನಕವಾದದ್ದು ಕಾಣಲಿಲ್ಲ ಎಂದರ್ಥ. ಆದರೆ ಸಂಯೋಗ-ವಿಭಾಗಾಸಮವಾಯಿಕಾರಣತ್ವವನ್ನು ಪರಿಸ್ಪಂದ ಲಕ್ಷಣವನ್ನಾಗಿ ತಾರ್ಕಿಕರು ಹೇಳುತ್ತಾರೆ. ಆ ಲಕ್ಷಣವೇ ಈಶ್ವರಪರಿಸ್ಪಂದದಲ್ಲಿಲ್ಲದಿದ್ದರೆ ಇದು ಪರಿಸ್ಪಂದವಾಗಲು ಸಾಧ್ಯವಿಲ್ಲ.

'ನಿತ್ಯಂ ಸಂಯೋಗವಿಭಾಗಜನ್ಮಾನುಪಲಬ್ಧಿ' ಎಂದರೆ ಈಶ್ವರಕ್ರಿಯೆಯಿಂದ ಯಾವಾಗಲೂ ಸಂಯೋಗವಿಭಾಗ ಉತ್ಪತ್ತಿಯು ಕಾಣದಿರುವುದು ಎಂದರ್ಥ. ಒಂದುವೇಳೆ ಈಶ್ವರ ಕ್ರಿಯೆಯು ನಿತ್ಯವಾಗಿದ್ದರೆ ಯಾವಾಗಲೂ ಸಂಯೋಗವಿಭಾಗಗಳು ಉತ್ಪತ್ತಿಯಾಗಬೇಕಿತ್ತು. ಆದ್ದರಿಂದ ಈ ವಾಕ್ಯದಿಂದ 'ನಿತ್ಯಂ ಸಂಯೋಗವಿಭಾಗ ಅನುಪಲಂಭಾತ್' ಎಂದು ಹೇತು ಮಾಡಬೇಕು. ಇಲ್ಲಿ ಜನ್ಮ, ನಿತ್ಯಂ ಸಂಯೋಗವಿಭಾಗಯೋಃ ಜನ್ಮ, ತಸ್ಯ ಅನುಪಲಬ್ಧಿಃ ಎಂದು ವಿಗ್ರಹ ಮಾಡಬೇಕು. ಈಶ್ವರಕ್ರಿಯೆಯು ನಿತ್ಯವಾಗಿದ್ದರೆ ಅದರಿಂದ ಯಾವತ್ತೂ ಸಂಯೋಗವಿಭಾಗಗಳು ಹುಟ್ಟುತ್ತಲೇ ಇರಬೇಕಿತ್ತು. ಆದರೆ ಹಾಗೆ ಕಂಡಿಲ್ಲ ಆದುದರಿಂದ ಅದು ನಿತ್ಯವಲ್ಲ ಎಂದು ಅಭಿಪ್ರಾಯ.

ನಿತ್ಯಗುಣಾದಿನಾ ಎಂಬಲ್ಲಿ ಆದಿಪದದಿಂದ ಸಾಮಾನ್ಯವನ್ನು ಇಟ್ಟುಕೊಳ್ಳಬೇಕು. ನಿತ್ಯಗುಣಗಳು ಜಲೀಯ ಪರಮಾಣುರೂಪಾದಿಗಳು. ಪಾರ್ಥಿವಪರಮಾಣು ರೂಪಗಳಾದರೋ ಪಾಕದಿಂದ ಬದಲಾಗುತ್ತವೆ. ಆದ್ದರಿಂದ ಅದನ್ನು ಗ್ರಹಣಮಾಡಬಾರದು. ಈ ನಿತ್ಯ ಗುಣಾದಿಗಳು ಸಂಯೋಗಾದಿಗಳ ಸರ್ವದಾ ಉತ್ಪತ್ತಿಗೆ ಕಾರಣಗಳಲ್ಲ. ಆದ್ದರಿಂದ ಹೇತುವು ಬರುವುದು. ಅನಿತ್ಯತ್ವರೂಪ ಸಾಧ್ಯವಿಲ್ಲ. ಸಾಧ್ಯಾಭಾವವನ್ನು ತೋರಿಸುವುದಕ್ಕೋಸ್ಕರ ಗುಣಗಳಿಗೆ ನಿತ್ಯತ್ವವನ್ನು ವಿಶೇಷಣಮಾಡಿದೆ. ''ಯನ್ನಿತ್ಯಂ ತತ್ ಸರ್ವದಾ ಸ್ವಫಲಜನಕಂ'' ಎಂದು ಸಾಮಾನ್ಯ ವ್ಯಾಪ್ತಿಯನ್ನು ಹೇಳಿದರೆ ನಿತ್ಯಜ್ಞಾನಾದಿಗಳಲ್ಲಿ ವ್ಯಭಿಚಾರ.

ಕದಾಚಿತ್ ಸಂಯೋಗಾದಿ ಜನ್ಮನಃ ಉಪಲಬ್ಧೇಃ ಎಂಬ ಹೇತುವಿಗೆ ಗಗನದಲ್ಲಿ ವ್ಯಭಿಚಾರ. ತಾರ್ಕಿಕರು ವಿಭುದ್ವಯಸಂಯೋಗವನ್ನು ಒಪ್ಪುವುದಿಲ್ಲ. ವಿಭುವಾದ ಗಗನಕ್ಕೆ ಮೂರ್ತಪದಾರ್ಥವಾದ ಘಟಾದಿ- ಸಂಯೋಗವು ಆಗುವುದು. ಅದರ ಉತ್ಪತ್ತಿ ಯಾವತ್ತೂ ಆಗುತ್ತಿರುವುದಿಲ್ಲ. ಕದಾಚಿದೇವ ಆಗುವುದು. ಆದುದರಿಂದ ಗಗನದಲ್ಲಿ ಈ ಹೇತುವಿದೆ. ಅನಿತ್ಯತ್ವರೂಪ ಸಾಧ್ಯವಿಲ್ಲ. ಆದ್ದರಿಂದ ಗಗನದಲ್ಲಿ ವ್ಯಭಿಚಾರ.

ತಾರ್ಕಿಕರ ಪ್ರಕ್ರಿಯೆಯಲ್ಲಿ ತಂತುದ್ವಯಸಂಯೋಗ ಪಟಕ್ಕೆ ಅಸಮವಾಯಿ ಕಾರಣ. ತಂತುರೂಪವು ಪಟರೂಪಕ್ಕೆ ಅಸಮವಾಯಿಕಾರಣ. ಕಾರ್ಯೈಕಾರ್ಥ-ಪ್ರತ್ಯಾಸತ್ಯಾ ಕಾರಣೈಕಾರ್ಥ್ಯಪ್ರತ್ಯಾಸತ್ಯಾ ಎಂದು ಎರಡು ರೀತಿ. ಅದರ ಲಕ್ಷಣವನ್ನು ಸಮವಾಯಿಕಾರಣ ಪ್ರತ್ಯಾಸನ್ನತ್ವೇ ಸತಿ ಅವಧೃತಸಾಮರ್ಥ್ಯಂ, ಎಂದು ಹೇಳಿದರೆ ತುರೀತಂತುಸಂಯೋಗದಲ್ಲಿ ಅತಿವ್ಯಾಪ್ತಿ ಬರುತ್ತದೆ. ಸಮವಾಯಿಕಾರಣಮಾತ್ರ ಪ್ರತ್ಯಾಸನ್ನತ್ವ ಎಂದು ಲಕ್ಷಣಮಾಡಿದರೆ ಸಮವಾಯಿಕಾರಣವಲ್ಲದ ತುರೀಯದಲ್ಲೂ ಪ್ರತ್ಯಾಸನ್ನವಾದ ಆ ಸಂಯೋಗದಲ್ಲಿ ಅತಿವ್ಯಾಪ್ತಿ ಪರಿಹಾರವಾದರೂ ಸುಖಾದಿಗಳಿಗೆ ಅಸಮವಾಯಿಕಾರಣವಾದ, ಆತ್ಮಮನಃ - ಸಂಯೋಗವು ಸುಖಾದಿಗಳ ಸಮವಾಯಿಕಾರಣವಾಗದಿರುವ ಮನಸ್ಸಿನಲ್ಲೂ ಪ್ರತ್ಯಾಸನ್ನವಾಗಿರುವುದರಿಂದ ಅದರಲ್ಲಿ ಅವ್ಯಾಪ್ತಿ. ''ಸಮವಾಯಿಕಾರಣಭಿನ್ನತ್ವೇ ಸತಿ ಕಾರ್ಯಧ್ವಂಸಪ್ರಯೋಜಕ ಧ್ವಂಸಪ್ರತಿಯೋಗಿತ್ವಂ'' ಎಂದು ಲಕ್ಷಣಮಾಡಿದರೆ ದ್ವಿತ್ವ ನಾಶಕ್ಕೆ ಪ್ರಯೋಜಕವಾದ ನಾಶಕ್ಕೆ ಪ್ರತಿಯೋಗಿಯಾದ ಅಪೇಕ್ಷಾ - ಬುದ್ಧಿಯಲ್ಲಿ ಅತಿವ್ಯಾಪ್ತಿ ಬರುವುದು. ಈ ರೀತಿಯಾಗಿ ವೈಶೇಷಿಕಾಧಿಕರಣದಲ್ಲಿ ದುರ್ನಿರೂಪತ್ವವನ್ನು ಸಮರ್ಥಿಸಿದ್ದಾರೆ.

# ಕದಾಚಿದೇವ ಸಂಯೋಗಾದ್ಯಸಮವಾಯಿಕಾರಣತ್ವವು ಹೇತುವಾಗಬಹುದು

**न्यायसुधा –** किञ्च द्वितन्तुकारम्भके(वयवे)तन्तौ कर्मोत्पन्नं तन्त्वन्तराद्विभागं करोति।ततो द्वितन्तुकारम्भकसंयोगविनाशः।तन्नाशे द्वितन्तुकविनाशः।अथेदानीं तन्तोः कार्यसंयुक्तप्रदेशविभागः । ततश्चोत्तरदेशसंयोगः । तस्मात् कर्मणो विनाश इति परेषां प्रक्रिया । एवं च यथाऽनेककालवर्तिन्यपि क्रिया कदाचित् संयोगाद्यारभते न यावत् सत्त्वम् । तथा नित्यापि कदाचित् संयोगाद्यारभतां को विरोधः ।

**ಅನು-** ಹಾಗೆಯೇ ಅಪ್ರಯೋಜಕತಾ ದೋಷವು ಬರುವುದು. ಹೇಗೆಂದರೆ ಎರಡು ತಂತುಗಳುಳ್ಳ ಅವಯವಿಗೆ ಆರಂಭಕವಾದ ಒಂದು ತಂತುವಿನಲ್ಲಿ ಉತ್ಪನ್ನವಾದ ಕರ್ಮವು ಆ ತಂತುವಿಗೆ ಇನ್ನೊಂದು ತಂತುವಿನಿಂದ ವಿಭಾಗವನ್ನು ಉಂಟುಮಾಡುತ್ತದೆ. ಆದ್ದರಿಂದ ದ್ವಿತಂತುಕಾವಯವಿಗೆ ಆರಂಭಕವಾದ ಸಂಯೋಗ ನಾಶವಾಗುವುದು. ಆ ಸಂಯೋಗ ನಾಶವಾದಾಗ ಆ ಅವಯವಿ ನಾಶವಾಗುವುದು ಅನಂತರ ಈವಾಗ ತಂತುವಿಗೆ ಕಾರ್ಯದಿಂದ ಸಂಯುಕ್ತವಾದ ಪ್ರದೇಶದ ವಿಭಾಗ. ಆ ವಿಭಾಗದಿಂದ ಉತ್ತರದೇಶದ ಸಂಯೋಗ. ಆದರಿಂದ ಕರ್ಮನಾಶ ಎಂಬುದು ವೈಶೇಷಿಕರ ಪ್ರಕ್ರಿಯೆ. ಹೀಗಿರುವಾಗ ಹೇಗೆ ಅನೇಕ ಕಾಲದಲ್ಲಿರುವ ಆ ಕ್ರಿಯೆಯು ಕೆಲವೊಮ್ಮೆ ಮಾತ್ರ ಸಂಯೋಗಾದಿಗಳನ್ನು ಉಂಟುಮಾಡುತ್ತದೆ ಹೊರತು ಇರುವಷ್ಟು ಕಾಲವೂ ಸಂಯೋಗಾದಿಗಳನ್ನು ಉಂಟುಮಾಡುವುದಿಲ್ಲ. ಆದರಂತೆಯೇ ನಿತ್ಯವಾದ ಈಶ್ವರಕ್ರಿಯೆಯು ಕೆಲವು ಸಲ ಮಾತ್ರ ಸಂಯೋಗಾದಿ ಕ್ರಿಯೆಗಳನ್ನು ಉಂಟುಮಾಡಿದರೆ ಏನು ವಿರೋಧವಿದೆ. ಆದ್ದರಿಂದ ಕದಾಚಿದೇವ ಸಂಯೋಗಾದ್ಯಸಮವಾಯಿಕಾರಣತ್ವವು ಅನಿತ್ಯತ್ವಕ್ಕೆ ಪ್ರಯೋಜಕವೆನಿಸದು.

**ವಿವರಣೆ :** ದ್ವೌ, ತಂತೂ ಸಮವಾಯಿಕಾರಣೇ ಯಸ್ಯ ಸಃ ದ್ವಿತಂತುಕಃ ಎಂಬುದಾಗಿ ಇಲ್ಲಿ ಬಹುವ್ರೀಹಿ ಸಮಾಸ. ಕದಾಚಿತ್ ಸಂಯೋಗಾದ್ಯಸಮವಾಯಿ ಕಾರಣತ್ವಹೇತುವಿನಿಂದ ಅನಿತ್ಯತ್ವವನ್ನು ಈಶ್ವರ ಪರಿಸ್ಪಂದದಲ್ಲಿ ಸಾಧಿಸುವಾಗ ಹೇತುವು ಅಪ್ರಯೋಜಕವಾಗುವುದು. ಯಾಕೆಂದರೆ, ದ್ವಿತಂತುಕಾವಯವಿಗೆ

ಆರಂಭಕವಾದ ತಂತುವಿನ ಕ್ರಿಯೆಯು ಇರುವಷ್ಟು ಕಾಲ ಸಂಯೋಗವಿಭಾಗ ಜನಕವಾಗಲಿಲ್ಲ. ಆ ಕ್ರಿಯೆಯು ಸ್ವೋತ್ಪತ್ತಿಕ್ಷಣದಲ್ಲಿ, ಆರಂಭಕ ಸಂಯೋಗನಾಶ ಕ್ಷಣದಲ್ಲಿ, ಕಾರ್ಯನಾಶ ಕ್ಷಣದಲ್ಲಿ, ಸಂಯೋಗವಿಭಾಗ ಜನಕವಾಗಲಿಲ್ಲವಷ್ಟೆ. ಆದ್ದರಿಂದ ಈ ಹೇತುವು ಅನಿತ್ಯತ್ವಕ್ಕೆ ಪ್ರಯೋಜಕವಾಗುವುದಿಲ್ಲ.

ಕ್ರಿಯೆಯಿಂದ ವಿಭಾಗ, ವಿಭಾಗದಿಂದ ಪೂರ್ವದೇಶಸಂಯೋಗನಾಶ. ಪೂರ್ವದೇಶಸಂಯೋಗನಾಶದಿಂದ ಉತ್ತರದೇಶಸಂಯೋಗ. ಉತ್ತರದೇಶಸಂಯೋಗದಿಂದ ಕ್ರಿಯಾನಾಶ ಎಂದು ತಾರ್ಕಿಕರ ಪ್ರಕ್ರಿಯೆ. ಆದ್ದರಿಂದ ಉತ್ತರದೇಶಸಂಯೋಗ ಕರ್ಮನಾಶಕ್ಕೆ ಕಾರಣ. ಆದ್ದರಿಂದ ಸಂಯೋಗ ಉತ್ಪತ್ತಿಯಾದ ನಂತರ ಕ್ರಿಯೆ ಇರಲು ಸಾಧ್ಯವಿಲ್ಲ.

## ಸಾಮಾನ್ಯವತ್ವೇ ಸತಿ ಅಸ್ಮದಾದಿಬಾಹ್ಯೇಂದ್ರಿಗ್ರಾಹ್ಯತ್ವವು ಹೇತುವಲ್ಲ

**न्यायसुधा –** सामान्यवत्त्वे सत्यस्मदादिबाह्येन्द्रियग्राह्यत्वं हेतुरस्त्विति चेन्न । विशेष्यासिद्धेः। बाह्येन्द्रियग्राह्यसजातीयत्वस्य परमाण्वादौ व्यभिचारात् । किञ्च वर्णनित्यत्वे स्फुटोऽस्य व्यभिचारः ।

**ಅನು -** ಜಾತಿಗೆ ಆಶ್ರಯವಾಗಿದ್ದು ನಮ್ಮೆಲ್ಲರ ಬಾಹ್ಯೇಂದ್ರಿಯಕ್ಕೆ ಗೋಚರಿಸುವಿಕೆ ಎಂಬ ಹೇತುವಿನಿಂದ ಈಶ್ವರಕ್ರಿಯೆಗೆ ಅನಿತ್ಯತ್ವವನ್ನು ಸಾಧಿಸಬಹುದೆಂದರೆ ಅದೂ ಕೂಡುವುದಿಲ್ಲ. ಯಾಕೆಂದರೆ ಹೇತುವಿನಲ್ಲಿರುವ ವಿಶೇಷ್ಯಭಾಗವು ಅಸಿದ್ಧವಾಗಿದೆ. ಬಾಹ್ಯೇಂದ್ರಿಯ ಗ್ರಾಹ್ಯ ಸಜಾತೀಯತ್ವವನ್ನು ಹೇತು ಮಾಡಿದರೆ ಪರಮಾಣ್ವಾದಿ ನಿತ್ಯ ಪದಾರ್ಥಗಳಲ್ಲಿ ವ್ಯಭಿಚಾರ ಬರುವುದು. ಹಾಗೆಯೇ ವರ್ಣನಿತ್ಯತ್ವ ಪಕ್ಷದಲ್ಲಿ ವರ್ಣಗಳಲ್ಲಿ ವ್ಯಭಿಚಾರವು ಸ್ಪಷ್ಟವಾಗಿದೆ.

**ವಿವರಣೆ :** ಸಾಮಾನ್ಯವತ್ತ್ವೇ ಸತಿ ಅಸ್ಮದಾದಿಬಾಹ್ಯೇಂದ್ರಿಯಗ್ರಾಹ್ಯತ್ವಂ - ಎಂಬುದು ಏಳನೆಯ ಹೇತುವಾಗಿದೆ. ಅನಿತ್ಯವಾದ ಘಟಕ್ರಿಯೆಯಲ್ಲಿ ಕ್ರಿಯಾತ್ವ ಸಾಮಾನ್ಯವೂ ಇದೆ. ಹಾಗೆಯೇ ನಮ್ಮ ಚಕ್ಷುರಿಂದ್ರಿಯ ಗ್ರಾಹ್ಯತ್ವವೂ ಇದೆ. ಆದ್ದರಿಂದ ದೃಷ್ಟಾಂತದಲ್ಲಿ ಹೇತು ಸಾಧ್ಯಗಳಿಗೆ ವ್ಯಾಪ್ತಿ ದೃಷ್ಟವಾಗಿದೆ.

ದಲಕೃತ್ಯ ಹೀಗಿದೆ - ನಿತ್ಯವಾದ ಘಟತ್ವಾದಿ ಜಾತಿಗಳಲ್ಲಿ ವ್ಯಭಿಚಾರದೋಷ ಪರಿಹಾರಕ್ಕೋಸ್ಕರ ಸಾಮಾನ್ಯವತ್ವ ವಿಶೇಷಣ. ಆತ್ಮನಲ್ಲಿ ವ್ಯಭಿಚಾರದೋಷ ಪರಿಹಾರಕ್ಕೋಸ್ಕರ ಬಾಹ್ಯಪದಸ್ವೀಕಾರ. ಯೋಗಿಗಳನ್ನು ವ್ಯಾವೃತ್ತಿ ಮಾಡುವುದಕ್ಕೋಸ್ಕರ ಅಸ್ಮದಾದಿ ವಿಶೇಷಣ. ಈಶ್ವರಕ್ರಿಯೆಯು ಅತೀಂದ್ರಿಯವಾದ್ದರಿಂದ ಅದರಲ್ಲಿ ಅಸ್ಮದಾದಿ ಬಾಹ್ಯೇಂದ್ರಿಯಗ್ರಾಹ್ಯತ್ವ ಎಂಬೀ ವಿಶೇಷ್ಯಭಾಗ ಅಸಿದ್ಧವಾಗಿದೆ.

ಪರಮಾಣ್ವಾದಿಗಳು ನಿತ್ಯ ಪದಾರ್ಥಗಳಾಗಿವೆ. ಇಲ್ಲಿ ಬಾಹ್ಯೇಂದ್ರಿಯಗ್ರಾಹ್ಯ ಘಟಾದಿಗಳ ದ್ರವ್ಯತ್ವಾದಿ ಜಾತಿಗಳಿಂದ ಸಾಜಾತ್ಯ ಇದೆ. ಆದರೆ, ಇಲ್ಲಿ ಅನಿತ್ಯತ್ವವಿಲ್ಲವಾದ್ದರಿಂದ ವ್ಯಭಿಚಾರ.

ವರ್ಣನಿತ್ಯತ್ವ ಪಕ್ಷದಲ್ಲಿ ವರ್ಣವು ಸಾಮಾನ್ಯವತ್ತ್ವೇ ಸತಿ ಬಾಹ್ಯೇಂದ್ರಿಯಗ್ರಾಹ್ಯ ಹಾಗೂ ಬಾಹ್ಯ- ಶ್ರೋತ್ರೇಂದ್ರಿಯಗ್ರಾಹ್ಯ ಸಜಾತೀಯವಾಗಿದೆ. ಆದರೆ, ಅನಿತ್ಯತ್ವವಿಲ್ಲ ಎಂದು ವ್ಯಭಿಚಾರ.

## ಈಶ್ವರಕ್ರಿಯೆ ಅನಿತ್ಯವೆನ್ನಲು ಆಗಮಪ್ರಮಾಣವಿಲ್ಲ

**न्यायसुधा** – नाप्यागमादीश्वरक्रियाऽनित्यतावगतिः । स हीश्वरक्रियाऽनित्येत येवमात्मको वा, स इमान्लोकानसृजतेत्येवमात्मको वा ? आद्यस्तु नोपलभ्यते । द्वितीयस्तु 'स ऐक्षत सोऽकामयत'त्यादिना तुल्यः । तत्र यदि क्रियाया अनित्यत्वं, ज्ञानादेरपि कुतो न भवेदिति ।

ಅನು : ಹಾಗೆಯೇ ಆಗಮದಿಂದಲೂ ಈಶ್ವರ ಕ್ರಿಯೆಗೆ ಅನಿತ್ಯತ್ವ ತಿಳಿಯಲ್ಪಡುವುದಿಲ್ಲ. ಆ ಆಗಮವಾದರೂ ''ಈಶ್ವರಕ್ರಿಯಾऽನಿತ್ಯಾ'' ಎಂದು ಸ್ಪಷ್ಟವಾಗಿ ಹೇಳುತ್ತದೋ, ಸ ಇಮಾನ್ ಲೋಕಾನಸೃಜತ - (ಅವನು ಲೋಕಗಳನ್ನು ಸೃಷ್ಟಿಮಾಡಿದನು) ಎಂದು ಸೃಷ್ಟಿ ಕ್ರಿಯಾದಿಗಳನ್ನು ಭೂತಕಾಲಸಂಬಂಧಿಯಾಗಿ ಹೇಳುವ ಮೂಲಕ ಅನಿತ್ಯತ್ವವನ್ನು ಹೇಳುತ್ತದೋ ಎಂದು ವಿಕಲ್ಪ ಪ್ರಾಪ್ತವಾದಾಗ ಮೊದಲನೆಯ ರೀತಿಯ ಸ್ಪಷ್ಟವಾದ ಆಗಮದ ಉಪಲಬ್ಧಿ ಇಲ್ಲ. ಎರಡನೆಯ ರೀತಿಯದ್ದಾದ ಆಗಮವು ''ಸ ಐಕ್ಷತ, ಸೋऽಕಾಮಯತ'' ಎಂಬ ಜ್ಞಾನೇಚ್ಛಾಗಳನ್ನು ಹೇಳುವ

ಆಗಮಗಳಿಗೆ ಸದೃಶವಾದುದು. ಇಂತಹ ಆಗಮದಿಂದ ಕ್ರಿಯೆಗೆ ಅನಿತ್ಯತ್ವ ಸಿದ್ಧವಾಗುವುದಾದರೆ ಈಶ್ವರನ ಜ್ಞಾನೇಚ್ಛೆಗಳಿಗೂ ಅನಿತ್ಯತ್ವವು ಯಾಕೆ ಸಿದ್ಧಿಸದು.

**ವಿವರಣೆ :** ಕ್ರಿಯಾ ಅನಿತ್ಯಾ ಎಂಬುದಾಗಿ ಈಶ್ವರಕ್ರಿಯೆಗೆ ಸ್ಪಷ್ಟವಾಗಿ ಅನಿತ್ಯತ್ವವನ್ನು ಹೇಳುವ ಆಗಮವಿಲ್ಲ. ಸ ಇಮಾನ್ ಲೋಕಾನ್ ಅಸೃಜತ ಈ ಆಗಮದಲ್ಲಿ ಭೂತಾರ್ಥಕವಾದ ಲಙ್ ಲಕಾರದ ಪ್ರಯೋಗವಿದೆ. ಆದ್ದರಿಂದ ಬ್ರಹ್ಮನು ಈ ಲೋಕಗಳನ್ನು ಹಿಂದೆ ಸೃಷ್ಟಿಮಾಡಿದ ಎಂದು ಅರ್ಥವಾಗಿ ಈಗ ಸೃಷ್ಟಿಕ್ರಿಯೆ ಇಲ್ಲವೆಂದಾಗಿ ಅನಿತ್ಯತ್ವವು ಸಿದ್ಧವಾಗುವುದು ಎಂದು ಪೂರ್ವಪಕ್ಷಿಯ ಅಭಿಪ್ರಾಯ.

ಸೋऽಕಾಮಯತ ಸ ಐಕ್ಷತ ಎಂಬ ಆಗಮ ಬಹ್ಮನ ಜ್ಞಾನೇಚ್ಛಾದಿಗಳನ್ನು ಹೇಳುತ್ತದೆ. ಇಲ್ಲಿ ಲಙ್ ಲಕಾರವಿದೆ. ಆದರೂ ಅಭಿವ್ಯಕ್ತ್ಯರ್ಥವನ್ನು ಇಟ್ಟುಕೊಂಡು ಕೂಡಿಸುವಂತೆ ಸ ಇಮಾನ್.... ಎಂಬಲ್ಲಿ ಇರುವ ಲಙ್ ಲಕಾರವನ್ನೂ ಕೂಡ ಇದೇ ರೀತಿ ಕೂಡಿಸಬೇಕು ಎಂಬುದು ಸಿದ್ಧಾಂತಿಗಳ ಅಭಿಪ್ರಾಯ.

## ಈಶ್ವರನ ಕ್ರಿಯೆಗೆ ನಿತ್ಯತ್ವಸಮರ್ಥನೆ

**न्यायसुधा –** अस्तु तर्हि नित्यत्वे बाधकसद्भावादिति द्वितीयः पक्षः । तथा हि । यदि सृष्टिसमयेऽपि संहारक्रिया विद्येत तदा तथैव श्रुत्यादावुपलभ्येत । जननविनाशौ च घटस्य युगपत्प्रसज्येयाताम् । किञ्च यदीश्वरक्रिया नित्या स्यात्तर्हि क्रियायाः संयोगविभागौ प्रति अनपेक्षकारणत्वात्तदुत्पत्तिसातत्यप्रसङ्गः । अपि चेश्वरक्रिया संयोगविभागौ करोति न वा । नेति पक्षे क्रियात्वं व्याहन्येत । आद्येऽपि किं स्वसत्तोत्तरक्षणे ? उत विरम्य ? नाद्यः । स्वसत्ताया इदं प्रथमताभावेन संयोगादिविशेषस्य विवक्षितक्षणादपि पूर्वमुत्पत्तिप्रसङ्गात् । न द्वितीयः । पूर्वोत्तरावस्थयोरविशिष्टस्य विरम्य व्यापारायोगात् । उत्तरसंयोगस्य कर्मविनाशकत्वेन कृतसंयोगस्य कर्मणोऽवस्थानानुपपत्तेश्चेत्यत उक्तं शक्त्यात्मनेति ।

ಅನು - ಅನಿತ್ಯತ್ವದ ವಿಷಯದಲ್ಲಿ ಸಾಧಕಪ್ರಮಾಣವಿಲ್ಲದಿದ್ದರೇನಂತೆ ಈಶ್ವರ ಕ್ರಿಯೆಗೆ ನಿತ್ಯತ್ವವನ್ನು ಒಪ್ಪಿದರೆ ಬಾಧಕವು ಇರುವುದರಿಂದ ಅನಿತ್ಯತ್ವವು ಸಿದ್ಧವಾಗುತ್ತದೆ ಎಂಬ ಎರಡನೆಯ ಪಕ್ಷವನ್ನು ಅಂಗೀಕರಿಸುತ್ತೇವೆ ಎನ್ನುತ್ತಾರೆ. ಅವರ ಉಪಪಾದನೆ ಈ ರೀತಿಯಾಗಿದೆ : ಒಂದು ವೇಳೆ ಈಶ್ವರನ ಸಂಹಾರ ಕ್ರಿಯೆಯು ಸೃಷ್ಟಿ ಸಮಯದಲ್ಲಿ ಇರುವುದಾದರೆ ಹಾಗೆಯೇ ವೇದಾದಿಗಳಲ್ಲಿ ಉಪಲಬ್ಧವಾಗಬೇಕಿತ್ತು. ಅದೇರೀತಿ ಘಟಕ್ಕೆ ಏಕಕಾಲದಲ್ಲಿಯೇ ಉತ್ಪತ್ತಿ ನಾಶಗಳು ಉಂಟಾಗಬೇಕಾದೀತು.

ಮತ್ತೂ ಕೂಡ ಕ್ರಿಯೆಯು ಸಂಯೋಗ ವಿಭಾಗಗಳಿಗೆ ಬೇರೊಂದು ಸಹಕಾರಿಯ ಅಪೇಕ್ಷೆಯಿಲ್ಲದೆ ತಾನೇ ಕಾರಣವಾಗಿದೆ. ಆದ್ದರಿಂದ ಈಶ್ವರಕ್ರಿಯೆ ನಿತ್ಯವಾದರೆ ನಿರಂತರವಾಗಿ ಸಂಯೋಗ ವಿಭಾಗಗಳ ಉತ್ಪತ್ತಿ ಆಗುವ ಪ್ರಸಂಗವಿದೆ.

ಇನ್ನು ಈಶ್ವರಕ್ರಿಯೆಯು ಸಂಯೋಗ ವಿಭಾಗಗಳನ್ನು ಉತ್ಪತ್ತಿ ಮಾಡುತ್ತದೋ ಇಲ್ಲವೋ ಎಂದು ವಿಕಲ್ಪ ಮಾಡಿ ಉತ್ಪತ್ತಿ ಮಾಡುವುದಿಲ್ಲ ಕ್ರಿಯೆ ಆಗಿದೆ ಎಂದು ಹೇಳಿದರೆ ವ್ಯಾಹತಿ ದೋಷ ಬರುವುದು. (ಯಾಕೆಂದರೆ ಸಂಯೋಗವಿಭಾಗಾಸಮವಾಯಿಕಾರಣತ್ವವೇ ಕ್ರಿಯಾತ್ವವಾಗಿದೆ.) ಈಶ್ವರಕ್ರಿಯೆಯು ಸಂಯೋಗ ವಿಭಾಗಜನಕವಾಗಿದೆ ಎಂಬ ಪಕ್ಷದಲ್ಲಿ ಕ್ರಿಯೆಯು ತಾನಿರುವ ಉತ್ತರ ಕ್ಷಣದಲ್ಲಿ ಉತ್ಪತ್ತಿ ಮಾಡುತ್ತದೋ ಅಥವಾ ಕೆಲವು ಕ್ಷಣಗಳ ನಂತರ ಉತ್ಪತ್ತಿ ಮಾಡುತ್ತದೋ ಎಂಬ ಪ್ರಶ್ನೆ ಬರುತ್ತದೆ. ಕ್ರಿಯೆ ನಿತ್ಯವಾದ್ದರಿಂದ ಇದೇ ಮೊದಲು ಇರುವುದೆಂದು ಹೇಳಲಾಗದಿರುವುದರಿಂದ ವಿವಕ್ಷಿತ ಕ್ಷಣಕ್ಕಿಂತಲೂ ಮೊದಲ ಕ್ಷಣಗಳೂ ಸ್ವಸತ್ತೋತ್ತರಕ್ಷಣಗಳಾಗಿರುವುದರಿಂದ ಸಂಯೋಗಾದಿ ವಿಶೇಷಗಳ ಉತ್ಪತ್ತಿ ಮೊದಲೇ ಆಗಬೇಕಿತ್ತು. ಎರಡನೆಯ ಪಕ್ಷವಾದ ಕೆಲವು ಕ್ಷಣಗಳ ನಂತರ ಉತ್ಪತ್ತಿ ಮಾಡುತ್ತದೆ ಎಂಬುವುದನ್ನು ಅಂಗೀಕರಿಸಿದರೆ ಅದೂ ಕೂಡುವುದಿಲ್ಲ. ಯಾಕೆಂದರೆ ಕ್ರಿಯೆಯಲ್ಲಿ ಪೂರ್ವೋತ್ತರ ಕ್ಷಣದಲ್ಲಿ ವೈಲಕ್ಷಣ್ಯ ಕಾಣದಿರುವುದರಿಂದ ವಿರಮ್ಯ ವ್ಯಾಪಾರವು ಕೂಡುವುದಿಲ್ಲ. (ಕ್ರಿಯೆಯಲ್ಲಿ ಹಿಂದಿನ ಕ್ಷಣಕ್ಕಿಂತ ಮುಂದಿನ ಕ್ಷಣಗಳಲ್ಲಿ ಸಂಯೋಗಾದಿಗಳ ಉತ್ಪತ್ತಿ ಕಾರಣವಾದ ವೈಲಕ್ಷಣ್ಯವಿದ್ದಿದ್ದರೆ ವಿರಮ್ಯ ವ್ಯಾಪಾರವು ಕೂಡಬಹುದು.) ಉತ್ತರದೇಶ ಸಂಯೋಗವು ಕ್ರಿಯಾನಾಶಕವೆಂಬ ನಿಯಮವಿರುವುದರಿಂದ ಸಂಯೋಗ

ಉತ್ಪತ್ತಿ ಆದ ನಂತರ ಕ್ರಿಯೆಯ ಇರುವಿಕೆಯು ಕೂಡುವುದಿಲ್ಲ. ಎಂಬೀ ಬಾಧಕವೂ ಇದೆ ಎಂಬೀ ಆಕ್ಷೇಪಕ್ಕೆ ಉತ್ತರ ರೂಪವಾಗಿ ಆಚಾರ್ಯರು "ಶಕ್ತ್ಯಾತ್ಮನಾ" ಎಂಬುದಾಗಿ ಹೇಳಿದ್ದಾರೆ.

**ವಿವರಣೆ:** ಕ್ರಿಯೆಯು ನಿತ್ಯವಾದರೆ ಏಕಕಾಲದಲ್ಲಿ ಸೃಷ್ಟಿಸಂಹಾರ ಕ್ರಿಯೆಗಳು ಇರುವುದರಿಂದ ಘಟಸೃಷ್ಟಿ ಸಂಹಾರ ಒಟ್ಟಿಗೆ ಆಗಬೇಕಾದೀತು.

ಕಾರಣವಾದ ಕ್ರಿಯೆಯು ಸತತ ಇರುವುದರಿಂದ ಕಾರ್ಯವಾದ ಸಂಯೋಗ ವಿಭಾಗಳ ಉತ್ಪತ್ತಿಯು ನಿರಂತರ ಆಗುತ್ತಾ ಇರಬೇಕಾದೀತು.

ಈಶ್ವರಕ್ರಿಯೆ ನಿತ್ಯವಾದ್ದರಿಂದ ಅದು ಎಲ್ಲಾ ಕ್ಷಣಗಳಲ್ಲಿಯೂ ಇದೆ. ಆದ್ದರಿಂದ ಯಾವ ಕ್ಷಣದಲ್ಲಿ ಸಂಯೋಗ ವಿಭಾಗೋತ್ಪತ್ತಿಯಾಗಬೇಕಾಗಿದೆಯೋ ಅದರ ಪೂರ್ವಕ್ಷಣದಲ್ಲಿರುವಂತೆ ಅದಕ್ಕಿಂತ ಹಿಂದಿನ ಕ್ಷಣಗಳಲ್ಲೂ ಈಶ್ವರ ಕ್ರಿಯೆಯು ಇರುವುದರಿಂದ ಆ ಪೂರ್ವಕ್ಷಣಗಳಲ್ಲೂ ಸಂಯೋಗ ವಿಭಾಗಗಳ ಉತ್ಪತ್ತಿ ಆಗಬೇಕಾದೀತು. ಉತ್ಪತ್ತಿ ನಾಶವುಳ್ಳ ವಸ್ತುವಿಗೆ ಮಾತ್ರ ಪ್ರಥಮಾದಿ ಕ್ಷಣಗಳ ಸಹಾಯದಿಂದ ವ್ಯವಸ್ಥೆ ಕೂಡುವುದು. ನಿತ್ಯ ವಸ್ತು ಯಾವಾಗಲೂ ಇರುವುದರಿಂದ ಇಂತಹ ಪ್ರಥಮಾದಿ ಕ್ಷಣಗಳ ವ್ಯವಸ್ಥೆ ಕೂಡುವುದಿಲ್ಲ.

## ಈಶ್ವರಕ್ರಿಯೆಗೆ ಶಕ್ತಿವ್ಯಕ್ತಿರೂಪತ್ವಸಮರ್ಥನೆ

**न्यायसुधा –** अयमर्थः । तत्तत् कार्यजननशक्तिरेव क्रियेत्युच्यते । अतः तेन रूपेण स्थिरा सा यदा व्यज्यते तदा व्यवहारालम्बनं तत्तत् कार्यजननी च भवतीति न कश्चिद्दोष इति । क्रिया शक्त्यात्मना व्यक्तिशक्तिरूपेण कारणेनेति वा ।

ಅನು - ಇಲ್ಲಿ ಆಚಾರ್ಯರ ಅಭಿಪ್ರಾಯವು ಹೀಗಿದೆ : ಸಂಹಾರಾದಿ ಕಾರ್ಯಗಳನ್ನು ಉತ್ಪತ್ತಿ ಮಾಡುವ ಶಕ್ತಿಯೇ ಕ್ರಿಯೆ ಎಂದು ಹೇಳಲ್ಪಡುತ್ತದೆ. ಆದ್ದರಿಂದ ಶಕ್ತಿರೂಪದಿಂದ ನಿತ್ಯವಾದ ಕ್ರಿಯೆಯು ಯಾವಾಗ ವ್ಯಕ್ತವಾಗುತ್ತದೋ ಆಗ 'ಸಂಹಾರ ಮಾಡಿದನು' ಎಂಬಿತ್ಯಾದಿ ವ್ಯವಹಾರಕ್ಕೆ ವಿಷಯ ಹಾಗೂ ಆಯಾಯಾ ಸಂಹಾರಾದಿ ಕಾರ್ಯ ಜನಕ ಆಗುವುದರಿಂದ ಯಾವ ದೋಷವೂ ಇಲ್ಲ.

ಅಥವಾ ಕ್ರಿಯಾಶಕ್ತ್ಯಾತ್ಮನಾ ಎಂದು ಸಮಸ್ತ ಪದ ಮಾಡಿದರೆ ಕ್ರಿಯಾ ಶಬ್ದಕ್ಕೆ ವ್ಯಕ್ತಿ ಎಂಬ ಅರ್ಥವನ್ನು ಇಟ್ಟುಕೊಂಡು ಶಕ್ತಿ ವ್ಯಕ್ತಿ ರೂಪವಿರುವ ಕಾರಣದಿಂದ ನಿತ್ಯವಾಗಿದೆ ಎಂದು ಅರ್ಥೈಸಬಹುದು.

**ವಿವರಣೆ :** ಕ್ರಿಯಾ ಶಕ್ತ್ಯಾತ್ಮನಾಸ್ಥಿರಾ ಎಂದು ಮೊದಲನೇ ಯೋಜನೆಯಲ್ಲಿ ಭಿನ್ನಪದ. ಎರಡನೇ ಯೋಜನೆಯಲ್ಲಿ ಕ್ರಿಯಾಶಕ್ತ್ಯಾತ್ಮನಾ ಎಂದು ಸಮಸ್ತಪದ. ಎರಡನೇ ಯೋಜನೆಯಲ್ಲಿ ಕ್ರಿಯಾಶಬ್ದಕ್ಕೆ ಅಭಿವ್ಯಕ್ತಿ ಎಂದು ಅರ್ಥ. ಇಲ್ಲಿ ತೃತೀಯಾ ವಿಭಕ್ತಿಯು ಕಾರಣಾರ್ಥದಲ್ಲಿದೆ. ಅಂದರೆ ಶಕ್ತಿರೂಪಕಾರಣೇನ ಎಂಬರ್ಥ.

## ಶಕ್ತಿ ವ್ಯಕ್ತಿ ಎಂದರೇನು ?

**न्यायसुधा –** ननु केयं शक्तेर्व्यक्तिर्नाम । न तावत्प्रतीतिः । ईश्वरापेक्षया नित्यसिद्धत्वेनोक्तदोषानुषक्तेः । परापेक्षया कदाऽप्यभावात् । भावेऽपि कार्योत्पादस्य तदनपेक्षत्वात् । अत एव नावरणनिवृत्तिर्व्यक्तिरिति । मैवम् । व्यक्तिशब्देन शक्तेरेवावस्थाविशेषस्य विवक्षितत्वात् । तत्र यत्तावदुक्तम् यदि सृष्टिसमयेऽपि संहारक्रिया स्यात् तदा तथा व्यवह्रियेतेति तदसत् । व्यक्तिरूपेणैव व्यवहारालम्बनत्वात् । यदपि जननविनाशौ युगपत् स्यातामिति तदपि व्यक्त्यवस्थायामेव शक्तेर्जनकत्वादनुपपन्नम् ।

**ಅನು - ಪ್ರಶ್ನೆ:** ಶಕ್ತಿಯ ವ್ಯಕ್ತಿ ಎಂದರೆ ಏನು ? ಪ್ರತೀತಿಯಲ್ಲ. ಯಾಕೆಂದರೆ ಈಶ್ವರನನ್ನು ಅಪೇಕ್ಷಿಸಿ ಕ್ರಿಯಾಪ್ರತೀತಿಯನ್ನು ವ್ಯಕ್ತಿ ಎಂದು ಹೇಳಿದರೆ ಆ ಈಶ್ವರನಿಗೆ ಪ್ರತೀತಿಯು ಯವಾಗಲೂ ಇರುವುದರಿಂದ ಹಿಂದೆ ಹೇಳಿದ ದೋಷಗಳು ಬರುವವು. ಈಶ್ವರಾತಿರಿಕ್ತ ಜೀವನನ್ನು ಅಪೇಕ್ಷಿಸಿ ಪ್ರತೀತಿಯನ್ನು ಹೇಳಿದರೆ ಜೀವರಿಗೆ ಈಶ್ವರಕ್ರಿಯಾಶಕ್ತಿ ಅತೀಂದ್ರಿಯವಾದ್ದರಿಂದ ಯಾವ ಕಾಲದಲ್ಲಿಯೂ ಈಶ್ವರಕ್ರಿಯೆಯ ವ್ಯಕ್ತಿ ಉಂಟಾಗುವುದು ಸಾಧ್ಯವಿಲ್ಲ. ಒಂದು ವೇಳೆ ಆಗಮಾದಿಗಳಿಂದ ಜೀವರಿಗೆ ಪ್ರತೀತಿಯನ್ನು ಒಪ್ಪಿದರೂ ಆ ಪ್ರತೀತಿಯು ಸಂಹಾರಾದಿ ಕಾರ್ಯೋತ್ಪತ್ತಿಗೆ ಪ್ರಯೋಜಕವಾಗುವುದಿಲ್ಲ. ಇದೇ ಕಾರಣದಿಂದಲೇ ಆವರಣ ನಿವೃತ್ತಿಯನ್ನು ಶಕ್ತಿಶಬ್ದಾರ್ಥವನ್ನಾಗಿ ಹೇಳಲಾಗದು.

**ಉತ್ತರ :** ವ್ಯಕ್ತಿ ಶಬ್ದಾರ್ಥವು ಹೀಗಲ್ಲ. ವ್ಯಕ್ತಿ ಶಬ್ದದಿಂದ ಶಕ್ತಿಯದ್ದೇ ಅವಸ್ಥಾ ವಿಶೇಷವನ್ನು ವಿವಕ್ಷೆ ಮಾಡಿದರೆ ಈ ಹಿಂದೆ ಹೇಳಿದ ದೋಷಗಳು ಬರುವುದಿಲ್ಲ. ಸೃಷ್ಟಿ ಕಾಲದಲ್ಲಿ ಸಂಹಾರ ಕ್ರಿಯೆಯು ಇದ್ದರೆ ಹಾಗೆಯೇ ವ್ಯವಹಾರ ಮಾಡಬೇಕು ಎಂದು ಹಿಂದೆ ಹೇಳಿದ ದೋಷವೂ ಇಲ್ಲ. ಯಾಕೆಂದರೆ, ಕ್ರಿಯೆಯು ಅಭಿವ್ಯಕ್ತಿರೂಪದಿಂದ ಮಾತ್ರ ವ್ಯವಹಾರ ಕಾರಣವಾಗಿದೆಯಷ್ಟೆ. ಆದ್ದರಿಂದ ಪ್ರಕೃತ ಸೃಷ್ಟಿಕಾಲದಲ್ಲಿ ಸಂಹಾರಕ್ರಿಯೆಯ ಅಭಿವ್ಯಕ್ತಿ ಆಗಿರುವುದಿಲ್ಲ. ಆದುದರಿಂದ ವ್ಯವಹಾರ ಉಂಟಾಗಬೇಕಾಗಿಲ್ಲ. ಶಕ್ತಿಯು ವ್ಯಕ್ತವಾದಾಗ ಮಾತ್ರ ತನ್ನ ಸೃಷ್ಟ್ಯಾದಿಕಾರ್ಯ ಜನಕವಾಗುವುದರಿಂದ ಉತ್ಪತ್ತಿ ಸಂಹಾರಕಗಳು ಏಕಕಾಲದಲ್ಲಿ ಆಗಲಿ ಎಂಬ ಆಪತ್ತಿಯೂ ಸರಿಯಲ್ಲ.

**ವಿವರಣೆ :** ಕ್ರಿಯಾಶಕ್ತಿಯ ವ್ಯಕ್ತಿ ಎಂಬುದಕ್ಕೆ ಪ್ರತೀತಿ ಎಂಬ ಅರ್ಥ ಹೇಳಿದರೆ ಈಶ್ವರನಿಗೆ ಪ್ರತೀತಿ ಯಾವಾಗಲೂ ಇರುವುದರಿಂದ ಯಾವಾಗಲೂ ಅಭಿವ್ಯಕ್ತಿ ಇರಬೇಕಾದೀತು. ಈಶ್ವರನಿಗಿಂತ ಭಿನ್ನರಿಗೆ ಪ್ರತೀತಿ ಇಟ್ಟುಕೊಳ್ಳಲು ಆಗುವುದಿಲ್ಲ. ಈಶ್ವರ ಶಕ್ತಿ ಯಾವಾಗಲೂ ಅತೀಂದ್ರಿಯವೇ ಆಗಿದೆ. ಆದ್ದರಿಂದ ಅವರಿಗೆ ಕ್ರಿಯೆಯ ಪ್ರತೀತಿಯೇ ಬರುವುದಿಲ್ಲ. ಒಂದು ವೇಳೆ ಭಗವದನುಗ್ರಹದಿಂದ ಬಂದರೂ ಕಾರ್ಯೋತ್ಪತ್ತಿಗೆ ಅದು ಉಪಯೋಗಿಯಾಗುವುದಿಲ್ಲ.

ಕ್ರಿಯೆಗೆ ಇರುವ ಆವರಣ ನಿವೃತ್ತಿಯು ಕ್ರಿಯೆಯ ವ್ಯಕ್ತಿ ಎನ್ನುವಂತೆಯೂ ಇಲ್ಲ. ಯಾಕೆಂದರೆ, ಈಶ್ವರನಿಗೆ ಆವರಣ ಯಾವಾಗಲೂ ಇರುವುದಿಲ್ಲವಾದ್ದರಿಂದ ಈಶ್ವರಾಪೇಕ್ಷಯಾ ಆವರಣನಿವೃತ್ತಿಯನ್ನು ವ್ಯಕ್ತಿ ಎಂದನ್ನುವಂತಿಲ್ಲ. ಇತರಾಪೇಕ್ಷಯಾ ಯಾವ ಆವರಣವಿದೆಯೋ ಅದರ ನಿವೃತ್ತಿಯೇ ವ್ಯಕ್ತಿ ಎನ್ನುವುದಾದರೆ ಯಾವಾಗಲೂ ಆವರಣ ನಿವೃತ್ತಿ ಆಗದಿರುವುದರಿಂದ ವ್ಯಕ್ತಿ ಯಾವತ್ತೂ ಇಲ್ಲವೆಂದಾದೀತು. ಒಂದು ವೇಳೆ ಆವರಣ ನಿವೃತ್ತಿಯಾದರೂ ಕಾರ್ಯೋತ್ಪತ್ತಿಗೆ ಅದರ ಉಪಯೋಗವಿಲ್ಲ. ಇಲ್ಲಿ ಅವಸ್ಥಾ ವಿಶೇಷ ಶಬ್ದಕ್ಕೆ ಸೃಷ್ಟ್ಯಾದಿಕಾಲಸಂಬಂಧರೂಪ ಅವಸ್ಥಾವಿಶೇಷ ಎಂದು ಅರ್ಥ. ಇಂತಹ ಅವಸ್ಥಾವಿಶೇಷವೇ ವ್ಯಕ್ತಿ ಎಂದಾದಾಗ ಹಿಂದಿನ ಯಾವ ಆಕ್ಷೇಪಗಳಿಗೂ ಅವಕಾಶವಿಲ್ಲ. ವ್ಯಕ್ತಿ ಶಬ್ದಾರ್ಥವಾಗಿದೆ.

## ಕ್ರಿಯೆ ನಿತ್ಯವಾದ ಮಾತ್ರಕ್ಕೆ ನಿರಂತರ ಸಂಯೋಗ ವಿಭಾಗಗಳಾಗಬೇಕಿಲ್ಲ

**न्यायसुधा** – यच्च क्रियाया नित्यत्वे संयोगविभागोत्पत्तिसातत्यप्रसञ्जनं तदप्येवमेव परिहृतम् । किंचैवं पटसामग्र्याः पटोत्पत्तावनपेक्ष(कारण)त्वात् पटोत्पत्तिसातत्यं स्यात् । ननु किं सामग्री तमेव पटं पुनर्जनयतु(येत्) ? उत पटान्तरम् ? नाद्यः। पटप्रागभावस्यापि सामग्रीनिविष्टत्वात् तस्य च पटोत्पत्त्या विनष्टत्वेन सामग्र्या विकलत्वात् । न द्वितीयः । पूर्वपटेन प्रतिबद्धत्वात् । तत्कथं पटोत्पत्तिसातत्यम् । सत्यम् । सममेतत् प्रकृतेऽपीति ।

**ಅನು** - ಹಾಗೆಯೇ ಕ್ರಿಯೆಗೆ ನಿತ್ಯತ್ವವನ್ನು ಒಪ್ಪಿದರೆ ಸಂಯೋಗ ವಿಭಾಗಗಳ ನಿರಂತರ ಉತ್ಪತ್ತಿ ಆಗಬೇಕಾದೀತು ಎಂಬ ಬಾಧಕವೂ ಕೂಡ ವ್ಯಕ್ತಾವಸ್ಥೆಯಲ್ಲಿಯೇ ಸಂಯೋಗ ವಿಭಾಗಗಳ ಉತ್ಪತ್ತಿ ಆಗುವುದೆಂದು ಅಂಗೀಕರಿಸಿರುವುದರಿಂದ ಪರಿಹೃತವಾಯಿತು.

ಇಷ್ಟೇ ಅಲ್ಲದೇ ಕ್ರಿಯೆಯು ಸಂಯೋಗವಿಭಾಗಗಳಿಗೆ ಅನಪೇಕ್ಷ ಕಾರಣವಾಗಿರುವುದರಿಂದ, ಅದು ನಿತ್ಯವಾದಲ್ಲಿ ಸಂಯೋಗವಿಭಾಗಗಳ ಯಾವತ್ತೂ ಉತ್ಪತ್ತಿಯಾಗಬೇಕಾದೀತು ಎಂದು ಆಪಾದಿಸುವುದಾದರೆ ಸಮಾನನ್ಯಾಯೇನ, ಪಟಕಾರಣ ಸಾಮಗ್ರಿಗೆ ಪಟ ಉತ್ಪತ್ತಿಯಲ್ಲಿ ಅನಪೇಕ್ಷ ಕಾರಣತ್ವವಿರುವುದರಿಂದ ಯಾವಾಗಲೂ ಪಟದ ಉತ್ಪತ್ತಿ ಆಗುತ್ತಾ ಇರಬೇಕಾದೀತು ಎಂಬ ಅತಿಪ್ರಸಂಗ ಉಂಟಾದೀತು. ಅದಕ್ಕೆ ಪರಿಹಾರವಾಗಿ ಆ ಕಾರಣ ಸಾಮಗ್ರಿ ಉತ್ಪನ್ನವಾದ ಪಟವನ್ನೇ ಪುನಃ ಉತ್ಪಾದಿಸಲಿ ಎಂಬ ಆಕ್ಷೇಪವೋ ಅಥವಾ ಇನ್ನೊಂದು ಪಟವನ್ನು ಉತ್ಪಾದಿಸಲಿ ಎಂದೋ ಎಂಬ ವಿಕಲ್ಪ ಮಾಡಿ ಪಟಪ್ರಾಗಭಾವವೂ ಪಟಕಾರಣ ಸಾಮಗ್ರಿಯಲ್ಲಿ ಸೇರಿದ್ದರಿಂದ, ಅದು ಪಟೋತ್ಪತ್ತಿ ಆದಾಗ ನಾಶವಾದ್ದರಿಂದ, ಸಾಮಗ್ರಿ ಇಲ್ಲವೆಂಬೀ ಕಾರಣದಿಂದ ಪುನಃ ಅದೇ ಪಟದ ಉತ್ಪತ್ತಿಗೆ ಅವಕಾಶವಿಲ್ಲವೆಂದಾಗಿ ಮೊದಲನೆಯ ಪಕ್ಷ ಕೂಡುವುದಿಲ್ಲ ; ಪಟ ಸಾಮಗ್ರಿಯೂ ಪೂರ್ವಪಟದಿಂದ ತಡೆಯಲ್ಪಡುವುದರಿಂದ ಪಟಾಂತರವನ್ನು ಉತ್ಪತ್ತಿ ಮಾಡಲಾರದಾದುದರಿಂದ ಎರಡನೆಯ ಪಕ್ಷವು ಅಯುಕ್ತ. ಆದ್ದರಿಂದ ಪಟೋತ್ಪತ್ತಿ ಸಾತತ್ಯಾಪತ್ತಿಯು ಅಯುಕ್ತವೆನ್ನುವುದಾದರೆ ಪ್ರಕೃತದಲ್ಲಿಯೂ ಸಂಯೋಗ ವಿಭಾಗೋತ್ಪತ್ತಿ ಸಾತತ್ಯಾಪತ್ತಿಯನ್ನೂ ಹೀಗೆ ಪರಿಹರಿಸುತ್ತೇವೆ.

**ವಿವರಣೆ:** ನಿತ್ಯವಾದ ಈಶ್ವರ ಕ್ರಿಯೆಗೆ ಶಕ್ತಿ ವ್ಯಕ್ತಿ ಎಂಬ ಎರಡು ಅವಸ್ಥೆಗಳು ಇವೆ. ಆದ್ದರಿಂದ ಹಿಂದೆ ಕ್ರಿಯಾನಿತ್ಯತ್ವವನ್ನು ಒಪ್ಪಿದರೆ ಆಪಾದಿಸಲಾದ ಎಲ್ಲಾ ಬಾಧಕಗಳು ಪರಿಹೃತವಾಗುತ್ತವೆ ಕ್ರಿಯೆಗೆ ಅನಿತ್ಯತ್ವ ಪಕ್ಷದಲ್ಲಿ ಉತ್ಪತ್ತಿ ವಿನಾಶಗಳು ಇವೆ. ಆದ್ದರಿಂದ ಯಾವುದೇ ಬಾಧಕಗಳು ಬರುವುದಿಲ್ಲ. ಆದರಂತೆ ಉತ್ಪತ್ತಿಯ ಸ್ಥಾನದಲ್ಲಿ ಅಭಿವ್ಯಕ್ತಿಯನ್ನು ಇಟ್ಟುಕೊಳ್ಳಲಾಗಿದೆ. ಆಗ ಸೃಷ್ಟಿಕಾಲದಲ್ಲಿ ಸಂಹಾರ ಕ್ರಿಯಾಭಿವ್ಯಕ್ತಿಯಾಗಿಲ್ಲ. ಆದ್ದರಿಂದ ಸಂಹಾರರೂಪ ಕಾರ್ಯ ಹಾಗೂ 'ಸಂಹರತಿ' ಎಂಬಿತ್ಯಾದಿ ರೀತಿಯ ವ್ಯವಹಾರ ಉಂಟಾಗಬೇಕಾಗಿಲ್ಲ. ಆದ್ದರಿಂದ ಅಲ್ಲಿ ಏಕಕಾಲಕ್ಕೆ ಉತ್ಪತ್ತಿ ವಿನಾಶಗಳ ಪ್ರಸಕ್ತಿ ಮೊದಲಾದ ಅತಿಪ್ರಸಂಗಗಳಿಗೆ ಅವಕಾಶವಿಲ್ಲ.

ನಿತ್ಯಕ್ರಿಯೆಯು ಅಭಿವ್ಯಕ್ತವಾದಾಗ ಸಂಯೋಗವಿಭಾಗೋತ್ಪತ್ತಿಯನ್ನು ಮಾಡುತ್ತದೆ. ಶಕ್ತಿರೂಪದಿಂದ ಇದ್ದಾಗ ಸಂಯೋಗವಿಭಾಗಗಳನ್ನು ಉತ್ಪತ್ತಿ ಮಾಡುವುದಿಲ್ಲ. ಹೀಗೆ ಸಂತತ ಸಂಯೋಗವಿಭಾಗೋತ್ಪತ್ತಿ ಪ್ರಸಂಗಕ್ಕೂ ಅವಕಾಶವಿಲ್ಲ.

ಸಂತತೋತ್ಪತ್ತಿ ಪ್ರಸಂಗವನ್ನು ಪಟೋತ್ಪತ್ತಿ ಸಾತತ್ಯಪ್ರಸಂಗರೂಪ ಪ್ರತಿಬಂದಿಯಿಂದ ಪರಿಹಾರ ಮಾಡಲು ಮುಂದಾದಾಗ ಆ ಪಟದ ಉತ್ಪತ್ತಿ ಸಾತತ್ಯ ಪ್ರಸಂಗವನ್ನು ಪರಿಹಾರ ಮಾಡಲು ಯಾವ ಮಾರ್ಗವನ್ನು ಅನುಸರಿಸಲಾಗುವುದೋ ಅದೇ ಮಾರ್ಗದಿಂದ ಸಂಯೋಗಾದಿಗಳ ಉತ್ಪತ್ತಿಸಾತತ್ಯಪ್ರಸಂಗವನ್ನು ಪರಿಹರಿಸಬಹುದಾಗಿದೆ. ಅದು ಹೀಗಿದೆ – ಕ್ರಿಯೆಯು ಒಮ್ಮೆ ಹುಟ್ಟಿದ ಸಂಯೋಗವನ್ನೇ ಹುಟ್ಟಿಸಲಿ ಎಂಬ ಅಭಿಪ್ರಾಯವೋ ಅಥವಾ ಬೇರೆ ಸಂಯೋಗವನ್ನು ಹುಟ್ಟಿಸಲಿ ಎಂಬ ಅಭಿಪ್ರಾಯವೋ ಎಂದು ವಿಕಲ್ಪ ಮಾಡಿ, ಹುಟ್ಟಿದ ಸಂಯೋಗವನ್ನೇ ಹುಟ್ಟಿಸಲಿ ಎಂಬ ಪಕ್ಷವು ಕೂಡುವುದಿಲ್ಲ. ಸಂಯೋಗಪ್ರಾಗಭಾವವು ಸಾಮಗ್ರ್ಯಂತರ್ಗತವಾಗಿದೆ. ಆ ಪ್ರಾಗಭಾವವು ಸಂಯೋಗ ಉತ್ಪತ್ತಿಯಾಗುವಾಗ ನಷ್ಟವಾಗಿದೆ. ಆದ್ದರಿಂದ ಸಾಮಗ್ರಿಯೇ ಇಲ್ಲ. ಬೇರೆ ಸಂಯೋಗವನ್ನು ಹುಟ್ಟಿಸಲಿ ಎಂಬ ಎರಡನೆಯ ಪಕ್ಷವೂ ಕೂಡುವುದಿಲ್ಲ. ಹಿಂದಿನ ಸಂಯೋಗದ ಪ್ರತಿರೋಧವಿರುವುದರಿಂದ ಸಂಯೋಗಾಂತರವು ಹುಟ್ಟಲಾರದು ಎಂದು. ವಿಭಾಗ ಉತ್ಪತ್ತಿ ಸಾತತ್ಯವನ್ನು ಹೀಗೆಯೇ ಪರಿಹರಿಸಬೇಕು.

## ಅಭಿವ್ಯಕ್ತಿಯು ಕಾದಾಚಿತ್ಕ

**न्यायसुधा –** यदपीश्वरक्रिया संयोगविभागौ करोति ? न वा ? इति पृष्टम्। तत्र करोतीति ब्रूमः । कुर्वन्ती च विरम्यैव । नच तदनुपपत्तिः । व्यक्त्या विशिष्टत्वात् । अन्यथाऽवयवक्रियाऽप्युत्तरदेशसंयोगं स्वोत्पत्त्युत्तरक्षण एव कुर्यात् । नच कृतसंयोगस्य कर्मणोऽवस्थानानुपपत्तिः । अनित्यक्रियासु तद्व्यवस्थोपपत्तेः ।

**ಅನು -** ಹಾಗೆಯೇ ಈಶ್ವರಕ್ರಿಯೆಯು ಸಂಯೋಗ ವಿಭಾಗವನ್ನು ಉಂಟುಮಾಡುತ್ತದೋ ಇಲ್ಲವೋ ಎಂದು ಏನು ಪ್ರಶ್ನೆ ಮಾಡಲಾಗಿದೆ ಅದಕ್ಕೆ ಸಂಯೋಗವಿಭಾಗಗಳಿಗೆ ಅದು ಜನಕವಾಗಿದೆ ಎಂದು ಉತ್ತರ. ಹಾಗೆಯೇ ಈಶ್ವರ ಕ್ರಿಯೆಯು ಕೆಲವು ಕ್ಷಣಗಳ ನಂತರ ಉತ್ಪತ್ತಿ ಮಾಡುತ್ತದೆ ಎಂದೂ ಉತ್ತರಿಸುತ್ತೇವೆ. ಅದನ್ನು ಕ್ರಿಯೆಯು ಅಭಿವ್ಯಕ್ತಿಯಿಂದ ವಿಶಿಷ್ಟವಾದಾಗ ಸಂಯೋಗವಿಭಾಗವನ್ನು ಉಂಟು ಮಾಡುತ್ತದೆ ಎಂದಂಗೀಕರಿಸುವುದರಿಂದ ಈ ರೀತಿಯ ವಿರಮ್ಯವ್ಯಾಪಾರ ಅನುಪಪನ್ನವೇನಲ್ಲ. ಕ್ರಿಯೆಗೆ ಒಂದು ವೇಳೆ ವಿರಮ್ಯವ್ಯಾಪಾರ ಅನುಪಪನ್ನವೆಂದಾದಲ್ಲಿ ಅವಯವಕ್ರಿಯೆಯೂ ಕೂಡ ಉತ್ತರದೇಶ ಸಂಯೋಗವನ್ನು ತನ್ನ ಉತ್ಪತ್ತಿಯ ಅವ್ಯವಹಿತ ಉತ್ತರಕ್ಷಣದಲ್ಲಿ ಉತ್ಪತ್ತಿ ಮಾಡಬೇಕಾದೀತು. ಕರ್ಮವು (ಕ್ರಿಯೆಯು) ಸಂಯೋಗ ಉತ್ಪತ್ತಿ ನಂತರದಲ್ಲಿ ಇರುವುದಿಲ್ಲ ಎಂಬ ನಿಯಮವು ಅನಿತ್ಯ ಕ್ರಿಯೆಯಲ್ಲಿ ಮಾತ್ರ. (ನಿತ್ಯಕ್ರಿಯೆಗೆ ಅದು ಅನ್ವಯಿಸುವುದಿಲ್ಲ.)

**ವಿವರಣೆ :** ಈಶ್ವರ ಕ್ರಿಯೆಯ ಅಭಿವ್ಯಕ್ತಿಯು ಕಾದಾಚಿತ್ಕವಾಗಿದೆ. ಆದ್ದರಿಂದ ಅಭಿವ್ಯಕ್ತಿಯನ್ನು ಅನುಸರಿಸಿ ಪೂರ್ವೋತ್ತರ ಅವಸ್ಥೆಗಳಲ್ಲಿ ವ್ಯತ್ಯಾಸವನ್ನು ಇಟ್ಟುಕೊಳ್ಳಬಹುದು. ಹೀಗೆ ಕ್ರಿಯೆಯು ಅಭಿವ್ಯಕ್ತಿಯಾದ ನಂತರ ವ್ಯವಧಾನ ರಹಿತವಾಗಿ (ವಿರಾಮವಿಲ್ಲದೆ) ಸಂಯೋಗವಿಭಾಗ ಉತ್ಪತ್ತಿಯಾಗುವುದರಿಂದ ಬಾಧಕವಿಲ್ಲ.

## ಶಕ್ತಿವ್ಯಕ್ತಿಗಳ ಮಧ್ಯೆ ವಿಶೇಷ ಬೇಕು

**न्यायसुधा–** ननु संहारकाले क्रिया व्यक्ता (अथ) न वा । न चेत्कथं तत्र व्यवहारोऽर्थक्रिया वा । आद्ये कथं सृष्टिव्यवहाराद्यभावः ? मैवम् । व्यक्तेरप्यवान्तरानन्तविशेषवत्ताऽङ्गीकारात् । तदिदमुक्तम् – **सविशेषोऽपीति ।।**

**ಅನು** - ಸಂಹಾರದ ಸಮಯದಲ್ಲಿ ಈಶ್ವರನ ಕ್ರಿಯೆಯ ಅಭಿವ್ಯಕ್ತಿ ಆಗುತ್ತದೋ ಇಲ್ಲವೋ? ಎಂದು ಪ್ರಶ್ನಿಸುತ್ತೇವೆ. ಆಗುವುದಿಲ್ಲವೆಂದರೆ ಆ ಸಂಹಾರ ಕಾಲದಲ್ಲಿ ಸಂಹಾರ ವ್ಯವಹಾರ ಹಾಗೂ ಸಂಹಾರರೂಪ ಅರ್ಥಕ್ರಿಯೆಯು ಹೇಗೆ ಆಗುತ್ತದೆ ? ಕ್ರಿಯಾಭಿವ್ಯಕ್ತಿ ಇದೆ ಎಂಬ ಮೊದಲ ಪಕ್ಷವನ್ನು ಒಪ್ಪಿದಲ್ಲಿ ಕ್ರಿಯಾಭಿವ್ಯಕ್ತಿ ಆದ್ದರಿಂದ ಯಾಕೆ ಸೃಷ್ಟಿ ವ್ಯವಹಾರಾದಿಗಳು ಇಲ್ಲ? ಎಂಬ ಆಕ್ಷೇಪ ಸರಿಯಲ್ಲ. ಯಾಕೆಂದರೆ, ಅಭಿವ್ಯಕ್ತಿಯಲ್ಲಿಯೂ ಅವಾಂತರವಾದ ಅನಂತ ಧರ್ಮದ ಇರುವಿಕೆಯನ್ನು ಅಂಗೀಕಾರ ಮಾಡಲಾಗಿದೆಯಷ್ಟೆ. ಅದಕ್ಕೋಸ್ಕರ ಆಚಾರ್ಯರು **ಸವಿಶೇಷೋಽಪಿ** ಎಂದಿದ್ದಾರೆ. (ಯಃ - ವ್ಯವಹಾರ ಕಾರಣವಾದ, ವಿಶೇಷಃ - ವ್ಯಕ್ತಿ ಎಂಬ ಧರ್ಮವಿದೆಯೋ, ಸಃ - ಅದು, ಸವಿಶೇಷಃ - ಅನಂತ ವಿಶೇಷಗಳಿಂದ ಕೂಡಿದೆ ಎಂದು ಯೋಜನೆ ಮಾಡಬೇಕು.)

## ಪ್ರತಿವಾದಿಗಳಿಗೆ ಸಮಾನ ಆಪತ್ತಿ

**न्यायसुधा** – एवमनङ्गीकारे परेषामपि समानः प्रसङ्गः । पारमेश्वरस्य ज्ञानेच्छाप्रयत्नलक्षणस्य संहारव्यापारस्य नित्यत्वात् । नित्यमपि परमेश्वरेच्छादिकं सहकारि-सद्भाव एव कार्यकारीति चेन्न । सहकारिणामपि नित्यत्वात्, परमेश्वरेच्छाद्यायत्तत्वाच्च । नेच्छादिमात्रं संहारादिकारणं किन्तु सञ्जिहीर्षादिकम् उत संहारादिविशेषविशिष्टं तदेव ? नाद्यः । अनभ्युपगमात् । तत एव संहारादिसिद्धाविच्छादिकल्पना-वैयर्थ्याच्च । सञ्जिहीर्षादेश्च नित्यानित्यविकल्पानुपपत्तेः । न द्वितीयः । सति संहारादौ सञ्जिहीर्षादिकं ततः संहारादिरिति परस्पराश्रयप्रसङ्गात् ।

**ಅನು** - ಈ ರೀತಿಯಾಗಿ ವ್ಯವಸ್ಥೆಯನ್ನು ಒಪ್ಪದಿದ್ದರೆ ಪ್ರತಿವಾದಿಗಳಿಗೂ ಸಮಾನ ಆಪತ್ತಿ ಬರುವುದು. ಹೇಗೆಂದರೆ, ಈಶ್ವರನ ಜ್ಞಾನೇಚ್ಛಾಪ್ರಯತ್ನ ರೂಪವಾದ ಸಂಹಾರ ವ್ಯಾಪಾರವು ನಿತ್ಯವಾದ್ದರಿಂದ ಅವಾಂತರ ವಿಶೇಷವನ್ನು ಒಪ್ಪದಿದ್ದರೆ ಪೂರ್ವೋಕ್ತ ದೋಷವು ಬರುವುದು. ಈಶ್ವರನ ಇಚ್ಛಾದಿಗಳು ನಿತ್ಯವಾಗಿದ್ದರೂ ಸಹಕಾರಿ ಇರುವಾಗಲೇ ಕಾರ್ಯಜನಕಗಳಾಗುತ್ತವೆ ಎಂದು

ಅಂಗೀಕರಿಸಿರುವುದರಿಂದ ವಿಶೇಷವನ್ನು ಒಪ್ಪುವ ಆವಶ್ಯಕತೆಯಿಲ್ಲ ಎಂಬ ಸಮಾಧಾನ ಸರಿಯಲ್ಲ, ಆ ಸಹಕಾರಿಗಳೂ ನಿತ್ಯವಾಗಿವೆ ಮತ್ತು ಆ ಸಹಕಾರಿಗಳು ಈಶ್ವರೇಚ್ಛಾದಿಗಳ ಅಧೀನಗಳಾಗಿವೆ. (ಆದುದರಿಂದ ಇದರಿಂದ ವ್ಯವಸ್ಥಾನಿಯಮನವು ಸಾಧ್ಯವಿಲ್ಲ.)

ಇಚ್ಛಾದಿಗಳು ಮಾತ್ರ ಸಂಹಾರಾದಿಗಳಿಗೆ ಕಾರಣವಲ್ಲ. ಮತ್ತಿನ್ನೇನೆಂದರೆ, ಸಂಜಿಹೀರ್ಷಾದಿಗಳು ಕಾರಣವೆನ್ನುವುದಾದರೆ ಆ ಸಂಜಿಹೀರ್ಷಾದಿಗಳು (ಸಂಹಾರ ಮಾಡಬೇಕೆಂಬ ಇಚ್ಛಾದಿಗಳು) ಇಚ್ಛಾದಿ ಮಾತ್ರಗಳಿಂದ ಭಿನ್ನವೋ ಅಥವಾ ಸಂಹಾರಾದಿವಿಶೇಷವಿಶಿಷ್ಟವಾದ ಇಚ್ಛಾದಿ ಮಾತ್ರವೇ ಆಗಿದೆಯೋ ಎಂದು ಪ್ರಶ್ನಿಸುತ್ತೇವೆ. ಇಚ್ಛಾದಿಮಾತ್ರದಿಂದ ವ್ಯತಿರಿಕ್ತವಾದ ಸಂಜಿಹೀರ್ಷಾದಿಗಳನ್ನು ಅಂಗೀಕಾರ ಮಾಡದಿರುವುದರಿಂದ ಮೊದಲನೆಯ ಪಕ್ಷ ಕೂಡುವುದಿಲ್ಲ ಮತ್ತು ಆ ಸಂಜೀಹೀರ್ಷಾದಿಗಳಿಂದಲೇ ಸಂಹಾರಾದಿ ಆಯಾಯ ಕಾರ್ಯಗಳು ಸಿದ್ಧಿಸುವಾಗ ಅದಕ್ಕಿಂತ ಪ್ರತ್ಯೇಕವಾಗಿ ಇಚ್ಛಾದಿಮಾತ್ರಗಳ ಕಲ್ಪನೆಯೂ ವ್ಯರ್ಥವೂ ಆಗುತ್ತದೆ. ಹಾಗೆಯೇ ಸಂಜಿಹೀರ್ಷಾದಿಗಳಲ್ಲಿ ನಿತ್ಯಾನಿತ್ಯ ವಿಕಲ್ಪಗಳೂ ಉಪಪನ್ನಗಳಾಗುವುದಿಲ್ಲ. ಸಂಹಾರಾದಿ ಧರ್ಮಗಳಿಂದ ವಿಶಿಷ್ಟವಾದ ಇಚ್ಛಾದಿ ಮಾತ್ರವೇ ಸಂಜಿಹೀರ್ಷಾದಿಗಳು ಎಂಬ ಎರಡನೆಯ ಪಕ್ಷವೂ ಕೂಡುವುದಿಲ್ಲ. ಯಾಕೆಂದರೆ ಸಂಹಾರಾದಿಗಳು ಹುಟ್ಟಿದ ಮೇಲೆ ಅಂತಹ ಸಂಜಿಹೀರ್ಷಾದಿಗಳು; ಸಂಜಿಹೀರ್ಷಾದಿಗಳ ನಂತರ ಸಂಹಾರಾದಿಗಳ ಹುಟ್ಟು ಎಂಬೀ ರೀತಿಯ ಅನ್ಯೋನ್ಯಾಶ್ರಯ ದೋಷವು ಬರುವುದು.

**ವಿವರಣೆ :** "ಸಂಜಿಹೀರ್ಷಾದೇಃ ನಿತ್ಯಾನಿತ್ಯ ವಿಕಲ್ಪಾನುಪಪತ್ತೇಶ್ಚ = ಸಂಜಿಹೀರ್ಷಾದಿಗಳು ನಿತ್ಯವೆಂದಾದಲ್ಲಿ ಸದಾ ಸಂಹಾರಾದಿಪ್ರಸಂಗ. ಅನಿತ್ಯವೆಂದಾದಲ್ಲಿ, ಅವುಗಳ ಸಂಹಾರವೂ ಸಂಜಿಹೀರ್ಷಾಧೀನವಾದುದರಿಂದ ಆತ್ಮಾಶ್ರಯಅನವಸ್ಥಾದಿದೋಷ-ಪ್ರಸಂಗ. ಅವುಗಳ ಸಂಹಾರವು ಸಂಜಿಹೀರ್ಷಾಧೀನವಲ್ಲ ಎಂದಾದಲ್ಲಿ ಇತರ ಸಂಹಾರಗಳೂ ಹಾಗಾಗಬೇಕಾದೀತು ಎಂಬೀ ದೋಷಪ್ರಸಂಗ ಎಂದಭಿಪ್ರಾಯ.

**न्यायसुधा –** नच स्वरूपसता संहारादिनेच्छादिकमुपधीयते । किन्तु विषयभूतेनेति चेत् । संहारादिविषयता किमागन्तुकी ? अथवा नित्या ? इति वक्तव्यम् । नाद्यः । गुणेष्वागन्तुक धर्मोत्पत्तेरनभ्युपगमात् । द्वितीये तु सर्वदा संहारादिप्रसङ्गः । तस्मात् शक्तिव्यक्तिरूपता सर्वथाऽनुसरणीया । सा च समा क्रियायामपीति ।

**ಅನು**- ಸ್ವರೂಪತಃ ಇರುವ ಸಂಹಾರಾದಿಗಳಿಂದ ವಿಶಿಷ್ಟವಾದ ಇಚ್ಛಾಮಾತ್ರ ಎಂದು ಒಪ್ಪುವುದಿಲ್ಲ. (ಹಾಗಾದಲ್ಲಿ ಹಿಂದೆ ಹೇಳಿದಂತೆ ಅನ್ಯೋನ್ಯಾಶ್ರಯ ಪ್ರಸಂಗ). ಮತ್ತೇನೆಂದರೆ ವಿಷಯರೂಪದಿಂದ ಸಂಹಾರಾದಿವಿಶಿಷ್ಟ ಇಚ್ಛಾದಿಗಳೆನ್ನುತ್ತೇವೆ. (ಇಂತಹ ವಿಷಯತಯಾ ಸಂಹಾರಾದಿವೈಶಿಷ್ಟ್ಯವು ಸಂಹಾರಾದಿಗಳು ಹುಟ್ಟುವ ಮೊದಲೂ ಕೂಡುವುದರಿಂದ ಅನ್ಯೋನ್ಯಾಶ್ರಯವಿಲ್ಲ) ಎಂದು ಹೇಳಿದರೆ ಆ ಇಚ್ಛಾದಿಗಳಿಗೆ ಸಂಹಾರಾದಿ ವಿಷಯತ್ವ ಆಗಂತುಕವಾಗಿದೆಯೋ ಅಥವಾ ನಿತ್ಯವೋ? ಎಂಬ ಪ್ರಶ್ನೆ ಬರುತ್ತದೆ. ಮೊದಲನೆಯ ಪಕ್ಷ ಕೂಡುವುದಿಲ್ಲ. ಏಕೆಂದರೆ, ಇಚ್ಛಾದಿಗಳು ಗುಣಗಳಾದ್ದರಿಂದ ಗುಣಗಳಲ್ಲಿ ಆಗಂತುಕ ಧರ್ಮೋತ್ಪತ್ತಿಯನ್ನು ಒಪ್ಪುವುದಿಲ್ಲವಷ್ಟೆ. ನಿತ್ಯ ಎಂಬ ಎರಡನೆಯ ಪಕ್ಷವನ್ನು ಒಪ್ಪಿದಲ್ಲಿ ನಿತ್ಯವೂ ಸಂಹಾರಾದಿಗಳು ಆಗಬೇಕಾದೀತು. ಆದ್ದರಿಂದ ಈಶ್ವರನ ಜ್ಞಾನೇಚ್ಛಾ ಪ್ರಯತ್ನಗಳಲ್ಲಿ ಶಕ್ತಿವ್ಯಕ್ತಿ ರೂಪತ್ವವನ್ನು ಅಂಗೀಕರಿಸಿಯೇ ವ್ಯವಸ್ಥೆಯನ್ನು ಕೂಡಿಸಬೇಕು. ಅಲ್ಲಿ ಒಪ್ಪಿದಂತೆಯೇ ಪ್ರಕೃತ ಕ್ರಿಯೆಗಳಲ್ಲೂ ಒಪ್ಪುವುದು ಯುಕ್ತವೆನಿಸುತ್ತದೆ.

> **ವಿವರಣೆ** – ಗುಣಗಳಲ್ಲಿ ಆಗಂತುಕಧರ್ಮೋತ್ಪತ್ತಿ ತಾರ್ಕಿಕರಿಗೆ ಸಮ್ಮತವಲ್ಲ. ಜನ್ಯವಾದ ಭಾವಪದಾರ್ಥವು ದ್ರವ್ಯಗುಣ ಅಥವಾ ಕರ್ಮರೂಪವಾಗಿರಬೇಕೆಂದು ನಿಯಮ. ಗುಣದಲ್ಲಿ ಅಂತಹ ಜನ್ಯಭಾವಪದಾರ್ಥವು ದ್ರವ್ಯವಾಗಲಿ, ಗುಣವಾಗಲಿ, ಕರ್ಮವಾಗಲಿ ಯಾವುದೂ ಇಲ್ಲ. ಅದರಿಂದ ಜನ್ಯಭಾವಪದಾರ್ಥವನ್ನೇ ಗುಣದಲ್ಲಿ ಒಪ್ಪಲಾಗುವುದಿಲ್ಲ.

## ಈಶ್ವರನಲ್ಲಿ ಪರಿಸ್ಪಂದರೂಪ ಕ್ರಿಯೆ ಒಪ್ಪಲು ಆತಂಕವಿಲ್ಲ

**न्यायसुधा**–ननु पारमेश्वरी ज्ञानादिलक्षणा संहारादिक्रिया परेणापि नित्येत्यङ्गीकृतम्। परिस्पन्दलक्षणा तु नास्त्येव । तस्माद् व्यर्थोऽयं प्रयत्नः । मैवम् । परिस्पन्दाभावे प्रमाणाभावात् । परममहत्परिमाणमस्तीति चेत्, न, अणुमध्यमपरिमाणाभ्यां सत्प्रतिपक्षत्वात् । नच, ते न स्तः । परममहत्त्वेऽपि तथा वक्तुं शक्यत्वात्। 'अणोरणीयान् महतो महीयान्' इति द्वयोरपि श्रौतत्वात् । अणोरणीयस्त्वम प्रत्यक्षत्वोपलक्षणमिति चेत् । महतो महत्त्वमपि परमपूज्यत्वमिति किं न

स्यात् । विरोधादुभयाङ्गीकारो नोचित इति चेत् तर्हि प्रथमप्राप्तत्वादणुत्वमेव ग्राह्यम् । परिहरिष्यते चायं विरोध इति ।

**ಅನು** - ಈಶ್ವರನ ಜ್ಞಾನೇಚ್ಛಾಪ್ರಯತ್ನರೂಪವಾದ ಸಂಹಾರಾದಿ ವಿಷಯಕ(ಧಾತ್ವರ್ಥರೂಪ) ಕ್ರಿಯೆಯು ನಿತ್ಯವೆಂದು ಪ್ರತಿವಾದಿಯು ಅಂಗೀಕರಿಸಿದ್ದಾನೆ. ಅನಿತ್ಯವೆನಿಸಬಹುದಾದ ಪರಿಸ್ಪಂದ (ಚಲನೆ) ರೂಪಕ್ರಿಯೆಯು ಈಶ್ವರನಲ್ಲಿ ಇಲ್ಲವೇ ಇಲ್ಲ. ಆದ್ದರಿಂದ ನಿತ್ಯತ್ವವನ್ನು ಸಾಧಿಸುವ ಈ ಪ್ರಯತ್ನ ವ್ಯರ್ಥವಲ್ಲವೇ ಎಂಬೀ ಆಕ್ಷೇಪ ಸರಿಯಲ್ಲ. ಯಾಕೆಂದರೆ, ಈಶ್ವರನಲ್ಲಿ ಚಲನವಿಲ್ಲವೆನ್ನುವ ವಿಷಯದಲ್ಲಿ ಪ್ರಮಾಣವಿಲ್ಲ. ಈಶ್ವರನಲ್ಲಿ ಗಗನದಂತೆ ಪರಮಮಹತ್ಪರಿಮಾಣ ಇರುವುದರಿಂದ ಚಲಿಸಲು ಸಾಧ್ಯವಿಲ್ಲ ಎಂಬೀ ರೀತಿಯ ಅನುಮಾನವೇ ಪ್ರಮಾಣ ಎಂದು ಏನು ಹೇಳುತ್ತಾರೆ, ಅದು ಕೂಡುವುದಿಲ್ಲ. ಏಕೆಂದರೆ, ಈಶ್ವರನಲ್ಲಿ ಅಣುಮಧ್ಯಮ ಪರಿಮಾಣಗಳಿರುವುದರಿಂದ ಪರಿಸ್ಪಂದಾಭಾವಸಾಧಕ ಅನುಮಾನಕ್ಕೆ ಸತ್ಪ್ರತಿಪಕ್ಷವನ್ನು ಹೇಳಬಹುದು.''ಅಣೋರಣೀಯಾನ್ ಮಹತೋಮಹೀಯಾನ್'' ಎಂಬುದಾಗಿ ಎರಡೂ ಪರಿಮಾಣಗಳೂ ಶ್ರುತಿಸಿದ್ಧವಾಗಿರುವಾಗ ಅದಕ್ಕೆ ವಿರುದ್ಧವಾಗಿ ಈಶ್ವರನಲ್ಲಿ ಅಣುಮಧ್ಯಮ ಪರಿಮಾಣಗಳಿಲ್ಲ ಎಂದು ಹೇಳುವುದಾದರೆ ಇವುಗಳಂತೆ ಪರಮ ಮಹತ್ಪರಿಮಾಣವನ್ನೂ ಅಲ್ಲಗಳೆಯಬಹುದಾಗಿದೆ. ಶ್ರುತಿಯಲ್ಲಿರುವ ಅಣೋರಣೀಯತ್ವವನ್ನು ಈಶ್ವರ ಸೂಕ್ಷ್ಮನಾದ್ದರಿಂದ ಅಪ್ರತ್ಯಕ್ಷನಾಗಿದ್ದಾನೆ ಎಂಬೀ ರೀತಿಯಲ್ಲಿ ಲಕ್ಷಣದಲ್ಲಿ ಕೂಡಿಸುವೆವು ಎಂದೆನ್ನುವುದಾದರೆ ಅದೇ ಶ್ರುತಿಸಿದ್ಧವಾದ ಮಹತೋಮಹೀಯತ್ವವನ್ನು ಪರಮ ಪೂಜ್ಯತ್ವಾರ್ಥದಲ್ಲಿ ಲಕ್ಷಣಾ ಎಂದು ಏಕೆ ಕೂಡಿಸಬಾರದು. ಅಣುತ್ವ ಮಹತ್ವಗಳು ವಿರುದ್ಧ ಧರ್ಮಗಳಾದ್ದರಿಂದ ಎರಡೂ ಪರಿಮಾಣಗಳನ್ನು ಒಬ್ಬನೇ ಈಶ್ವರನಿಗೆ ಹೇಳುವುದು ಯುಕ್ತವಲ್ಲ ಎಂದು ಹೇಳಿದರೆ ಅಣುತ್ವವು ಶ್ರುತಿಯಲ್ಲಿ ಪ್ರಥಮಪ್ರಾಪ್ತವಾಗಿದೆ. ಆದ್ದರಿಂದ ಅದನ್ನೇ ಈಶ್ವರನಲ್ಲಿ ಸ್ವೀಕರಿಸಿ ಪರಮಮಹತ್ವವನ್ನು ತ್ಯಜಿಸಿ ವಿರೋಧಪರಿಹಾರ ಎಂದು ಯಾಕಾಗಬಾರದು. ಇಷ್ಟೇ ಅಲ್ಲದೆ ಈ ವಿರೋಧವನ್ನು ಅಕ್ಷರಾಧಿಕರಣದಲ್ಲಿ ಮತ್ತು ವೈಶೇಷಿಕಾಧಿಕರಣದಲ್ಲಿ ಪರಿಹಾರ ಮಾಡುತ್ತಾರೆ.

**ವಿವರಣೆ :** ಆಚಾರ್ಯರು ಈಶ್ವರಕ್ರಿಯೆಗೆ ಶಕ್ತಿರೂಪದಿಂದ ನಿತ್ಯತ್ವವನ್ನು ಕೂಡಿಸಿದ್ದಾರೆ. ಆಗ ಶಿಷ್ಯನು ಈ ರೀತಿಯಾಗಿ ಪ್ರಶ್ನೆ ಮಾಡುತ್ತಾನೆ : ಸಂಹಾರ ವಿಷಯಕ ಜ್ಞಾನ, ತದ್ವಿಷಯಕ

ಇಚ್ಛಾದಿಗಳಿಗೆ ಪ್ರತಿವಾದಿಯು ನಿತ್ಯತ್ವವನ್ನು ಅಂಗೀಕರಿಸಿದ್ದಾನೆ. ಆ ಜ್ಞಾನೇಚ್ಛಾದಿಗಳಾದರೂ ಧಾತ್ವರ್ಥಗಳಾದ್ದರಿಂದ ಕ್ರಿಯೆಗಳಾಗುತ್ತವೆ. ಆದ್ದರಿಂದ ಪರಾಂಗೀಕೃತವಾದವನ್ನೇ ಪುನಃ ಸಾಧಿಸಿದರೆ ಸಿದ್ಧಸಾಧನದೋಷವು ಬರುವುದು. ಈಶ್ವರನಲ್ಲಿ ಪರಿಸ್ಪಂದ (ಚಲನೆ) ರೂಪಕ್ರಿಯೆಯನ್ನು ಪ್ರತಿವಾದಿಯು ಒಪ್ಪಿಲ್ಲ ಎಂಬ ಉತ್ತರ ಸರಿಯಲ್ಲ.

ಏಕೆಂದರೆ, ವಿಭುಪದಾರ್ಥಗಳಿಗೆ ಚಲನೆ ಇಲ್ಲ ಎಂಬುದು ತಾರ್ಕಿಕರ ವಾದ. ಈಶ್ವರನಾದರೂ ವಿಭುವಾಗಿದ್ದಾನೆ. ಅಂದರೆ ಪರಮ ಮಹತ್ಪರಿಣಾಮ ಉಳ್ಳವನು ಎಂದರ್ಥ. ಆದ್ದರಿಂದ - ಈಶ್ವರಃ ಪರಿಸ್ಪಂದಾಭಾವವಾನ್ ವಿಭುತ್ವಾತ್ । ಆಕಾಶವತ್ - ಎಂಬ ಅನುಮಾನ ಪ್ರಮಾಣದಿಂದ ಈಶ್ವರನಿಗೆ ಚಲನಾಭಾವವು ಸಿದ್ಧವಾಗಿದೆ ಎನ್ನುತ್ತಾರೆ. ಆದುದರಿಂದ ಅದಕ್ಕೆ ನಿತ್ಯತ್ವಸಾಧನೆಯ ಪ್ರಸಕ್ತಿಯೇ ಇಲ್ಲ. ಈ ಪ್ರಶ್ನೆಗೆ ಉತ್ತರವಾಗಿ ಟೀಕಾಕಾರರು ಈಶ್ವರನಲ್ಲಿ ಚಲನೆ ಇಲ್ಲವೆಂದು ಸಾಧಿಸಲು ಹೊರಟ ಅನುಮಾನಕ್ಕೆ ಸತ್ಪ್ರತಿಪಕ್ಷಾನುಮಾನವನ್ನು ಹೇಳುವ ಮೂಲಕ ಈಶ್ವರನಿಗೆ ಚಲನಾಭಾವವನ್ನು ನಿರಾಕರಿಸಿದ್ದಾರೆ.

ಈಶ್ವರಃ ಪರಿಸ್ಪಂದವಾನ್ ಅಣುತ್ವಾತ್ ಪರಮಾಣುವತ್
ಈಶ್ವರಃ ಪರಿಸ್ಪಂದವಾನ್ ಮಧ್ಯಮ ಪರಮಾಣ್ವತ್ವಾತ್ ಘಟವತ್ -

ಈ ಅಣುತ್ವ ಮಧ್ಯಮಪರಿಮಾಣಗಳು ಈಶ್ವರನಲ್ಲಿ ಅಣೋರಣೀಯಾನ್ ಮಹತೋಮಹೀಯಾನ್ ಎಂಬ ಶ್ರುತಿಯಿಂದ ಸಿದ್ಧವಾಗಿದೆ. ಆದ್ದರಿಂದ ಹೇತು ಅಸಿದ್ಧ ಎಂದು ಹೇಳಲಾಗುವುದಿಲ್ಲ. ಹೀಗೆ ಪೂರ್ವಪಕ್ಷಿ ಮತ್ತು ಸಿದ್ಧಾಂತಿಗಳ ಅನುಮಾನವು ಸಮಬಲವುಳ್ಳದ್ದಾಗಿದೆ.

ಒಬ್ಬನೇ ಈಶ್ವರನಲ್ಲಿ ಅಣುತ್ವಮಹತ್ವಗಳು ವಿರುದ್ಧವಾದ್ದರಿಂದ ಈಶ್ವರ ಸೂಕ್ಷ್ಮನಾದ್ದರಿಂದ ಪ್ರತ್ಯಕ್ಷ ಗೋಚರನಲ್ಲ ಎಂಬೀ ಅಭಿಪ್ರಾಯದಿಂದಲೇ ಶ್ರುತಿಯಲ್ಲಿ ಈಶ್ವರನಿಗೆ ಅಣುತ್ವವನ್ನು ಹೇಳಿದೆ ಹೊರತು ಅಣು ಪರಿಮಾಣನೆಂದಲ್ಲ ಎಂದು ಹೇಳಿದರೆ ಮಹ-ಪೂಜಾಯಾಮ್ ಎಂಬ ಧಾತುವಿನಿಂದ ಮಹತ್ವ ಶಬ್ದವು ನಿಷ್ಪನ್ನವಾಗಿದೆ. ಆದ್ದರಿಂದ ಪರಮಪೂಜ್ಯ ಎಂಬ ಅರ್ಥದಲ್ಲಿ ಮಹಚ್ಛಬ್ದ ಪ್ರಯೋಗವಾಗಿದೆ ಹೊರತು ಪರಮಮಹತ್ ಪರಿಮಾಣ ಎಂಬ ಅರ್ಥದಲ್ಲಲ್ಲ. ಎಂದೂ ಹೇಳಬಹುದಲ್ಲವೇ ? ವಸ್ತುತಃ ಎರಡೂ ಪರಿಮಾಣಗಳು

ಈಶ್ವರನಲ್ಲಿವೆ. ಈಶ್ವರನಿಗೆ ಸಂಬಂಧಿಸಿದಂತೆ ಅಣುತ್ವಮಹತ್ವಗಳಿಗೆ ವಿರೋಧವನ್ನು ಅಕ್ಷರಾಧಿಕರಣ ಹಾಗೂ ವೈಶೇಷಿಕಾಧಿಕರಣಗಳಲ್ಲಿ ಪರಿಹರಿಸುತ್ತಾರೆ–

ಅತೋ ವಿರುದ್ಧವದ್ಭಾತಮಪಿ ವ್ಯಾಖ್ಯಾಯ ತತ್ತ್ವತಃ । ಯೋಜನೀಯಂ ಹರೌ ವಾಕ್ಯಂ ವಿರುದ್ಧೈರ್ಲಕ್ಷಣೈರ್ಯುತಂ। ಬ್ರಹ್ಮೈವ ತಾನಿ ಲಿಂಗಾನಿ ತದನ್ಯತ್ರ ತ್ವಸಂತ್ಯಪಿ। ಅವಿರೋಧೇನ ಗೋವಿಂದೇ ಸಂತ್ಯಸ್ಥೂಲಾದಿಕಾನಿ ಚ ॥

(ವಿರುದ್ಧದಂತೆ ತೋರುವ ಶ್ರುತಿವಾಕ್ಯವನ್ನು ಸರಿಯಾಗಿ ವ್ಯಾಖ್ಯಾನಿಸಿ ಹರಿಯಲ್ಲಿ ಕೂಡಿಸಬೇಕು. ಅಸ್ಥೂಲಾದಿ ವಿರುದ್ಧ ಧರ್ಮಗಳು ಈಶ್ವರನಿಂದ ಬೇರೆ ಕಡೆ ಏಕತ್ರ ಇಲ್ಲದಿದ್ದರೂ ಗೋವಿಂದನಲ್ಲಿ ವಿರೋಧ ರಹಿತವಾಗಿವೆ).

## ಶಕ್ತಿ ವ್ಯಕ್ತಿಗಳು ಭಿನ್ನವೂ ಅಭಿನ್ನವೋ ?

**न्यायसुधा** – ननु (च)क्रियायाः शक्तिव्यक्तिरूपे परस्परं भिन्नेऽभिन्ने वा । आद्ये शक्तिरेव नित्या क्रियात्वनित्येत्यापन्नम् । द्वितीये त्वनिवृत्तः सदा व्यवहारादिप्रसङ्ग इत्यत आह – **शक्तितेति** ।।

**ಅನು** - ಕ್ರಿಯೆಯ ಶಕ್ತಿ ಮತ್ತು ಅಭಿವ್ಯಕ್ತಿರೂಪಗಳು ಪರಸ್ಪರ ಭಿನ್ನಗಳೋ ಅಥವಾ ಅಭಿನ್ನ-ಗಳೋ ? ಭಿನ್ನಗಳು ಎಂಬ ಪ್ರಥಮ ಪಕ್ಷದಲ್ಲಿ ಶಕ್ತಿ ಮಾತ್ರ ನಿತ್ಯ; ಅಭಿವ್ಯಕ್ತಿಯು ಅನಿತ್ಯವೆಂದಾದೀತು. ಅಭಿನ್ನಗಳು ಎಂಬ ಎರಡನೆಯ ಪಕ್ಷದಲ್ಲಿ ಯಾವಾಗಲೂ ಪೂರ್ವೋಕ್ತ ವ್ಯವಹಾರ ಪ್ರಸಂಗವು ಇದ್ದೇ ಇದೆ ಎಂಬ ಆಕ್ಷೇಪಕ್ಕೆ ಆಚಾರ್ಯರು "**ಶಕ್ತತಾ**" ಎಂಬಿತ್ಯಾದಿ ಅನುವ್ಯಾಖ್ಯಾನದಲ್ಲಿ ಉತ್ತರಿಸಿದ್ದಾರೆ.

## ವಿಶೇಷಬಲದಿಂದ ಭೇದವ್ಯವಹಾರ

**न्यायसुधा** – अभिन्ने एव शक्तिव्यक्ती । न चोक्तदोषः । यतस्तत्र शक्तितेति व्यक्तितेति च विशेषोऽप्यस्ति । सच भेदकार्यनिर्वाहक इति च प्रागेवोक्तमिति ।

स च विशेषः परस्परं विशेषिणा च यदि भिन्नः, तदा शक्तिव्यक्त्योरपि किं भेदो न स्यात् । अथाभिन्नः पुनर्व्यवहारादिसाङ्कर्यमित्यत आह – **विशेषवानिति ।।**

ಅನು- ಶಕ್ತಿ ಮತ್ತು ಅಭಿವ್ಯಕ್ತಿಗಳು ಅಭಿನ್ನಗಳೇ ಆಗಿವೆ. ಈ ರೀತಿಯಾಗಿ ಹೇಳಿದರೆ ಹಿಂದೆ ಹೇಳಿದ ದೋಷ ಬರುವುದಿಲ್ಲ. ಯಾಕೆಂದರೆ ಆ ಶಕ್ತಿ ವ್ಯಕ್ತಿಗಳಲ್ಲಿ ಶಕ್ತಿತಾ ವ್ಯಕ್ತಿತಾ ಎಂಬ ಭೇದಪ್ರತಿನಿಧಿ ವಿಶೇಷವೂ ಇದೆ. ಆದಾದರೂ ಭೇದಕಾರ್ಯ ನಿರ್ವಹಣ ಮಾಡುವುದು ಎಂದನ್ನುವುದನ್ನು ಹಿಂದೆ ಹೇಳಿಯಾಗಿದೆ.

ಆ ವಿಶೇಷವಾದರೂ ಅನ್ಯೋನ್ಯವಾಗಿ ಹಾಗೂ ವಿಶೇಷಿಯಾದ ಶಕ್ತಿವ್ಯಕ್ತಿಗಳಿಂದ ಭಿನ್ನವಾದರೆ ಶಕ್ತಿ ವ್ಯಕ್ತಿಗಳಿಗೂ ಭೇದವು ಯಾಕೆ ಉಂಟಾಗಲಾರದು? ಅಭಿನ್ನವಾದರೆ ಹಿಂದಿನಂತೆ ವ್ಯವಹಾರ ಸಾಂಕರ್ಯಪ್ರಸಂಗ ಎಂಬ ಆಕ್ಷೇಪಕ್ಕೆ ಆಚಾರ್ಯರು ವಿಶೇಷವಾನ್ ಎಂದು ಉತ್ತರಿಸಿದ್ದಾರೆ.

**ವಿವರಣೆ :** ಸುಧಾದಲ್ಲಿ ಕ್ರಿಯಾ ತ್ವನಿತ್ಯೇತ್ಯಾಪನ್ನಂ ಎಂಬ ವಾಕ್ಯದ ಕ್ರಿಯಾ ಎಂಬ ಪದಕ್ಕೆ ಅಭಿವ್ಯಕ್ತಿ ಎಂದು ಅರ್ಥ. ಹಿಂದೆ "ಕ್ರಿಯಾಶಕ್ತ್ಯಾತ್ಮನಾ ಸ್ಥಿರಾ" ಎಂಬ ಅನುವ್ಯಾಖ್ಯಾನದ ಕ್ರಿಯಾ ಶಬ್ದಕ್ಕೆ ಟೀಕಾಚಾರ್ಯರು ವ್ಯಕ್ತಿ ಎಂಬ ಅರ್ಥವನ್ನು ಮಾಡಿದ್ದಾರೆ. ಭೇದ ಸ್ಥಳದಲ್ಲಿ ಭೇದವ್ಯವಹಾರವನ್ನು ವಿಶೇಷವು ನಿರ್ವಹಿಸುತ್ತದೆ. ಈ ವಿಶೇಷಕ್ಕೆ ಆಚಾರ್ಯರು "ಸ್ವನಿರ್ವಾಹಕ" ಎಂದನ್ನುವುದನ್ನು ಜನ್ಮಾಧಿಕರಣದ ಅನುವ್ಯಾಖ್ಯಾನದಲ್ಲಿ ವಿವರಿಸಿದ್ದಾರೆ. ಇಲ್ಲಿ ಕ್ರಿಯೆಯ ಶಕ್ತಿ ಮತ್ತು ವ್ಯಕ್ತಿಗಳಲ್ಲಿ ಕ್ರಮವಾಗಿ ಶಕ್ತಿತಾ ಮತ್ತು ವ್ಯಕ್ತಿತಾ ಎಂಬ ಪರಸ್ಪರ ಅಭಿನ್ನವಾದ ಧರ್ಮವೊಂದಿದೆ. ಈ ಸಂದರ್ಭದಲ್ಲಿ ಶೇಷವಾಕ್ಯಾರ್ಥ ಚಂದ್ರಿಕಾಕಾರರು ಇಲ್ಲಿ ಶಕ್ತಿತಾ- ವ್ಯಕ್ತಿತಾಗಳಿಗೇ ವಿಶೇಷತ್ವವನ್ನು ತಿಳಿದುಕೊಳ್ಳಬಾರದು, ಮತ್ತೆ ಆ ಶಕ್ತಿತಾ-ವ್ಯಕ್ತಿತಾಗಳಿಂದ ಅಭಿನ್ನವಾದ ಕ್ರಿಯೆಗಳಲ್ಲಿ ಶಕ್ತಿತ್ವ-ವ್ಯಕ್ತಿತ್ವ ವ್ಯವಸ್ಥಾಪಕವಾದ ಬೇರೆ ವಸ್ತುವನ್ನು ವಿಶೇಷ ಎಂದು ತಿಳಿಯಬೇಕು. ಶಕ್ತಿತ್ವ ವ್ಯಕ್ತಿತ್ವ ವಿಶೇಷವನ್ನು ಒಪ್ಪಿ ಪುನಃ ವಿಶೇಷಕ್ಕೆ ವಿಶೇಷಾಂತರವನ್ನು ಒಪ್ಪಿದರೆ ಅನವಸ್ಥಾ ದೋಷ ಬರುವುದು. ಆದಕ್ಕಾಗಿಯೇ ಆಚಾರ್ಯರು ವಿಶೇಷವನ್ನು ಎಂದು ಸ್ವನಿರ್ವಾಹಕ ಹೇಳಿದ್ದಾರೆ. ಅಂದರೆ ಆ ವಿಶೇಷವು ತನಗೂ ಇತರಕ್ಕೂ ತಾನೇ ಭೇದವ್ಯವಹಾರ ನಿರ್ವಾಹಕವಾಗಿದೆ ಎಂದರ್ಥ.

## ವಿಶೇಷವು ಸ್ವನಿರ್ವಾಹಕ

**न्यायसुधा** – विशेष इत्यनुवर्तते । अभिन्न एवायं विशेष इति ब्रूमः । न चोक्तानुपपत्तिः । यतोऽभिन्नोऽपि विशेषवानङ्गीक्रियते । स्वनिर्वाहक इत्यर्थः ।

**ಅನು** - ಇಲ್ಲಿ ವಿಶೇಷ ಎಂಬ ಪದವನ್ನು ಹಿಂದಿನ ವಾಕ್ಯದಿಂದ ಅನುಷಂಗ ಮಾಡಬೇಕು. ಈ ವಿಶೇಷವಾದರೂ ಅಭಿನ್ನವಾಗಿದೆ ಎಂದು ಹೇಳುತ್ತೇವೆ. ಆಗ ಹಿಂದೆ ಹೇಳಿದ ಯಾವುದೇ ರೀತಿ ಅನುಪಪತ್ತಿಯು ಬರುವುದಿಲ್ಲ. ಯಾಕೆಂದರೆ ಆ ವಿಶೇಷವು ಅಭಿನ್ನವಾದರೂ ವಿಶೇಷವುಳ್ಳದ್ದಾಗಿ ಅಂಗೀಕರಿಸಲ್ಪಡುವುದು ಅಂದರೆ ಸ್ವನಿರ್ವಾಹಕ ಎಂದು ಅರ್ಥ.

## ಮಾನಾಧೀನಾ ಮೇಯಸಿದ್ಧಿಃ

**न्यायसुधा** – नन्वेवमन्यत्रापि क्रियाया नित्यत्वमङ्गीकतर्व्यम् । शक्ति व्यक्तिस्वीकारेण सकलदोषपरिहारादिति चेत् । अङ्गीक्रियतां यदि तन्नित्यतायां प्रमाणमस्ति । सति निर्बाधे प्रमाणे, तद्विपरीतव्यवहारेषु च तदन्यथाऽनुपपत्त्या कल्पनैषा भवति । नच घटादिक्रियाया नित्यत्वे निर्बाधं प्रमाणमस्ति । अस्ति तु परमेश्वरादिक्रियाया नित्यत्वे तदित्याह – **क्रियादिश्चेति ।।**

**ಅನು** - ಶಕ್ತಿ ವ್ಯಕ್ತಿ ಸ್ವೀಕಾರದಿಂದ ಎಲ್ಲವನ್ನೂ ಕೂಡಿಸುವುದಾದರೆ, ಪರಮಾತ್ಮೇತರ ಸ್ಥಳದಲ್ಲಿ ಕ್ರಿಯೆಗೆ ನಿತ್ಯತ್ವವನ್ನು ಅಂಗೀಕರಿಸಬೇಕಾದೀತು. ಅಲ್ಲಿಯೂ ಶಕ್ತಿ ವ್ಯಕ್ತಿ ಸ್ವೀಕಾರದಿಂದ ಸದಾ ವ್ಯವಹಾರಾದಿ ಪ್ರಸಂಗ ದೋಷವನ್ನು ಪರಿಹರಿಸಬಹುದು ಎಂದು ಆಕ್ಷೇಪಿಸಿದರೆ ಅನ್ಯತ್ರ ಕ್ರಿಯೆಯ ನಿತ್ಯತ್ವದಲ್ಲಿ ಪ್ರಮಾಣವಿದ್ದರೆ ಶಕ್ತಿವ್ಯಕ್ತಿಗಳನ್ನು ಅಂಗೀಕರಿಸಬಹುದು. ಯಾಕೆಂದರೆ, ಕ್ರಿಯೆಯು ನಿತ್ಯ ಎಂಬ ವಿಷಯದಲ್ಲಿ ಬಾಧರಹಿತವಾದ ಪ್ರಮಾಣವಿದ್ದು ವಿಪರೀತ ವ್ಯವಹಾರಗಳೂ ಪ್ರಮಾಣಸಿದ್ಧವಾಗಿರುವುದರಿಂದ ಅನ್ಯಥಾನುಪಪತ್ತಿಯಿಂದ ಶಕ್ತಿ ವ್ಯಕ್ತಿಗಳನ್ನು ಕಲ್ಪಿಸಲಾಗಿದೆಯಷ್ಟೆ. ಆದರೆ ಘಟಾದಿ ಕ್ರಿಯೆಯ ನಿತ್ಯತ್ವದಲ್ಲಿ ನಿರ್ಬಾಧ ಪ್ರಮಾಣವಿಲ್ಲ. ಆದರೆ ಪರಮಾತ್ಮ

ಕ್ರಿಯೆಯ ನಿತ್ಯತ್ವದಲ್ಲಿ ನಿರ್ಬಾಧ ಪ್ರಮಾಣವಿದೆ ಎಂದು ಆಚಾರ್ಯರು **ಕ್ರಿಯಾದಿಶ್ಚ** ಎಂಬಿತ್ಯಾದಿ ಅನುವ್ಯಾಖ್ಯಾನದಲ್ಲಿ ಹೇಳುತ್ತಿದ್ದಾರೆ.

**ವಿವರಣೆ :** ನನ್ವೇವಮಪಿ ಎಂಬ ಪೂರ್ವಪಕ್ಷದ ಹಿಂದಿರುವ ಅಭಿಪ್ರಾಯ ಹೀಗಿದೆ.—

ಹಿಂದೆ ಹೇಳಿದ ಪ್ರಕಾರ ಕ್ರಿಯೆಗೆ ಶಕ್ತಿವ್ಯಕ್ತಿಗಳನ್ನು ಒಪ್ಪಿಕೊಂಡು ಸದಾ ವ್ಯವಹಾರಾದಿ ಬಾಧಕ ಪರಿಹಾರವನ್ನು ಮಾಡುವ ಮೂಲಕ ನಿತ್ಯತ್ವವನ್ನು ಸಮರ್ಥಿಸಲಾಯಿತು. ಹಾಗಿರುವಾಗ ''ಕ್ರಿಯಾದಿಶ್ಚ......'' ಇತ್ಯಾದಿ ಅನುವ್ಯಾಖ್ಯಾನವು ವ್ಯರ್ಥ ಎಂಬ ಆಕ್ಷೇಪಕ್ಕೆ ಉತ್ತರವಾಗಿ ನನು ಇತ್ಯಾದಿ ಗ್ರಂಥದಿಂದ ಪ್ರಶ್ನೆ ರೂಪ ಅವತರಣಿಕೆ ಕೊಡುತ್ತಾರೆ. ಇಲ್ಲಿ ಆಕ್ಷೇಪಕ್ಕೆ ಮೂಲ ಅಭಿಪ್ರಾಯ ಹೀಗಿದೆ : ಕೆಲವು ಕ್ರಿಯೆಗೆ ನಿತ್ಯತ್ವ ಇನ್ನು ಕೆಲವು ಕ್ರಿಯೆಗಳಿಗೆ ಅನಿತ್ಯತ್ವವನ್ನು ಒಪ್ಪುವುದು ಸರಿಯಲ್ಲ. ಘಟಾದಿಗಳ ಕ್ರಿಯೆಗೂ ನಿತ್ಯತ್ವ ಒಪ್ಪಿ ಶಕ್ತಿವ್ಯಕ್ತಿಗಳ ವ್ಯವಸ್ಥೆಯಿಂದ ಬಾಧಕವನ್ನು ಪರಿಹರಿಸಬಹುದು ಎಂದು ಈ ಆಕ್ಷೇಪ ಪರಿಹಾರದ ಹಿಂದಿರುವ ಅಭಿಪ್ರಾಯ.– ಈಶ್ವರನ ಕ್ರಿಯೆಯ ನಿತ್ಯತ್ವದಲ್ಲಿ ''ಪರಾಸ್ಯ ಶಕ್ತಿ........ಜ್ಞಾನಂ ನಿತ್ಯಾ'' ಇತ್ಯಾದಿ ಶ್ರುತಿರೂಪ ಪ್ರಮಾಣವಿದೆ. ಘಟಾದಿ ಕ್ರಿಯೆಗೆ ನಿತ್ಯತ್ವ ಪ್ರಮಾಣ ಸಿದ್ಧವಲ್ಲ. ಅಬಾಧಿತಪ್ರಮಾಣವಿದ್ದರೆ ಆಗ ಅದನ್ನು ಕೂಡಿಸಲು ಈ ಶಕ್ತಿವ್ಯಕ್ತಿಗಳ ಅಂಗೀಕಾರ ಯುಕ್ತ. ಪ್ರಮಾಣ ಇಲ್ಲದಿದ್ದರೆ, ಅನಿತ್ಯತ್ವವನ್ನೇ ಒಪ್ಪಿಕೊಳ್ಳಬೇಕು ಎಂದು.

## ಅನಿತ್ಯಧರ್ಮಿಯಲ್ಲಿ ನಿತ್ಯಧರ್ಮವಿರದು

**न्यायसुधा –** एतेन तृतीयोऽपि निर(परा)स्तः । 'पराऽस्य शक्तिर्विविधैव श्रूयते स्वाभाविकी ज्ञानबलक्रिया च' इति श्रुतिमनेनोपलक्षयति । स्वाभाविकी = यावद्द्रव्यभाविनी ।

**ಅನು -** ಹೀಗೆ ಶ್ರುತಿ ಪ್ರಮಾಣವನ್ನು ಹೇಳಿದ್ದರಿಂದ ನಿತ್ಯತ್ವ ವಿಷಯದಲ್ಲಿ ಸಾಧಕ ಪ್ರಮಾಣ ಇಲ್ಲದಿರುವುದರಿಂದ ಅನಿತ್ಯತ್ವವನ್ನು ಒಪ್ಪಬೇಕು ಎಂಬ ತೃತೀಯ ಪಕ್ಷವು ಖಂಡಿತವಾಯಿತು. ಈ ಅನುವ್ಯಾಖ್ಯಾನದಿಂದ ''ಪರಾऽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲ ಕ್ರಿಯಾ ಚ'' ಈ ಪರಮಾತ್ಮನ ಸ್ವಾಭಾವಿಕ ಶಕ್ತಿ ಅನೇಕ ವಿಧವಾಗಿ ಕೇಳಲ್ಪಡುತ್ತದೆ. (ಹೀಗೆಯೇ ಅವನ

ಸ್ವಾಭಾವಿಕವಾದ ಜ್ಞಾನಬಲಕ್ರಿಯೆಗಳೂ ಕೂಡ.) ಎಂಬ ಶ್ರುತಿಯು ಉಲ್ಲೇಖಿಸಲ್ಪಡುತ್ತದೆ. ಇಲ್ಲಿ ಸ್ವಾಭಾವಿಕೀ ಎಂದರೆ ವಸ್ತು ಇರುವಷ್ಟು ಕಾಲ ಇರುವ ಪದಾರ್ಥ, ಪ್ರಕೃತ ಪರಮಾತ್ಮನು ನಿತ್ಯನಾದುದರಿಂದ ಜ್ಞಾನಬಲ ಕ್ರಿಯೆಗಳು ನಿತ್ಯ ಎಂದು ಅರ್ಥ.

**ವಿವರಣೆ :** ಶ್ರುತಿಯಲ್ಲಿ ಸ್ವಾಭಾವಿಕೀ ಎಂಬ ಶಬ್ದವಿದೆ. ಇಲ್ಲಿ ಸ್ವಭಾವ ಶಬ್ದಕ್ಕೆ ಠಕ್ ಎಂಬ ಪ್ರತ್ಯಯ ಬಂದಿದೆ. ಠಕ್ ಪ್ರತ್ಯಯ ವಿಧಿಸುವ ಸೂತ್ರವು "ತೇನ ನಿರ್ವೃತ್ತಂ" ಎಂಬ ಅಧಿಕಾರದಲ್ಲಿ ಸೇರಿದೆ. ಆದ್ದರಿಂದ ಸ್ವಾಭಾವಿಕೀ ಶಬ್ದಕ್ಕೆ ಸ್ವಭಾವದಿಂದ ಉಂಟಾದದ್ದು ಅನಿತ್ಯ ಎಂಬ ಅರ್ಥ ಆಗುವ ಪ್ರಸಂಗ. ಅದಕ್ಕೆ ಸ್ವಾಭಾವಿಕೀ ಶಬ್ದಕ್ಕೆ ಯಾವದ್ರವ್ಯಭಾವಿನೀ ಎಂಬ ಅರ್ಥವನ್ನು ಮಾಡಿದ್ದಾರೆ, ಅಂದರೆ ಸ್ವಾರ್ಥದಲ್ಲಿ ಠಕ್ ಪ್ರತ್ಯಯ ಎಂಬ ಅಭಿಪ್ರಾಯ.

ಇಲ್ಲಿ ಈಶ್ವರಕ್ರಿಯೆಯ ನಿತ್ಯತ್ವ ವಿಷಯದಲ್ಲಿ ಶ್ರುತಿಪ್ರಮಾಣವನ್ನು ಹೇಳಲಾಗಿದೆ. ಆದ್ದರಿಂದ "ಕ್ರಿಯಾನಿತ್ಯತ್ವೇ ಪ್ರಮಾಣಾಭಾವಾತ್" ಎಂಬ ಮೂರನೇ ಪಕ್ಷವನ್ನು ಖಂಡಿಸಿದಂತಾಯಿತು.

**न्यायसुधा** – अत्र स्पष्टां च श्रुतिमाह – **ज्ञानमिति** ।।

ಅನು - ಈ ವಿಷಯದಲ್ಲಿ ಆಚಾರ್ಯರು ಸ್ಪಷ್ಟ ಶ್ರುತಿಯನ್ನು ಜ್ಞಾನಂ ನಿತ್ಯಂ ಎಂಬಿತ್ಯಾದಿ ಅನುವ್ಯಾಖ್ಯಾನದಲ್ಲಿ ಹೇಳುತ್ತಾರೆ.

## ಸ್ಪಷ್ಟಶ್ರುತಿಯ ಆಧಾರ

**न्यायसुधा** – अथवा पूर्वा श्रुतिः शक्तिरेव क्रियेत्यत्र पठिता उत्तरा तु क्रियाया नित्यत्वे। यद्वा, पूर्वा स्वरूपत्वे । तस्य विवादास्पदत्वात्(त्वे) । द्वितीया तु तद्धेतौ नित्यत्व इति ।

ಅನು - ಅಥವಾ ಹಿಂದಿನ ಶ್ರುತಿಯು ಶಕ್ತಿಯೇ ಈಶ್ವರನ ಕ್ರಿಯೆ ಎಂಬ ವಿಷಯದಲ್ಲಿ ಉದಾಹೃತವಾಗಿದೆ. ನಂತರದ ಶ್ರುತಿಯು ಕ್ರಿಯೆಯ ನಿತ್ಯತ್ವವಿಷಯದಲ್ಲಿ ಉದಾಹೃತವಾಗಿದೆ. ಅಥವಾ ಹಿಂದಿನ ಶ್ರುತಿಯು ಕ್ರಿಯೆಗೆ ಭಗವತ್ಸ್ವರೂಪತ್ವವನ್ನು ಹೇಳುತ್ತದೆ. ಏಕೆಂದರೆ ಆ ವಿಷಯದಲ್ಲಿಯೇ

ವಿವಾದ ಬಂದಿತ್ತು. ಎರಡನೆಯ ಶ್ರುತಿಯು ಸ್ವರೂಪತ್ವಕ್ಕೆ ಸಾಧಕವಾದ ನಿತ್ಯತ್ವವಿಷಯದಲ್ಲಿ ಉದಾಹೃತವಾಗಿದೆ.

**ವಿವರಣೆ :** ಪರಾಸ್ಯ ಎಂಬ ಶ್ರುತಿಯು "ಜ್ಞಾನಬಲಕ್ರಿಯಾ ಶಕ್ತಿಃ" ಎಂದು ಯೋಜಿಸಿದಾಗ ಪರಮಾತ್ಮನ ಕ್ರಿಯೆಯು ಶಕ್ತಿಯೆಂಬ ಅಭಿಪ್ರಾಯದಲ್ಲಿ ಉದಾಹೃತವಾಗಿದೆ. ಎರಡನೆಯ ಶ್ರುತಿಯು ಆ ಕ್ರಿಯೆಯ ನಿತ್ಯತ್ವದಲ್ಲಿ ಉದಾಹೃತವಾಗಿದೆ. ಪೂರ್ವಶ್ರುತಿಯಲ್ಲಿ ಜ್ಞಾನಬಲಕ್ರಿಯಾ ಸ್ವಾಭಾವಿಕೀ ಎಂದು ಕ್ರಿಯೆಗೆ ಈಶ್ವರ ಸ್ವರೂಪತ್ವವನ್ನು ತಿಳಿಸಿದ್ದಾರೆ. ಅನಿತ್ಯಕ್ರಿಯೆ ನಿತ್ಯಈಶ್ವರ ಸ್ವರೂಪ ಹೇಗೆ ಎಂದು ಆಕ್ಷೇಪ ಬಂದರೆ ಕ್ರಿಯೆಯು ಈಶ್ವರ ಸ್ವರೂಪವಾಗಿದೆ ಎಂದು ಸಾಧಿಸಲು ಹೇತುವಾಗಿ ಕ್ರಿಯೆಗೂ ನಿತ್ಯತ್ವವು ಆವಶ್ಯಕ. ಅದನ್ನು ಎರಡನೇ ಶ್ರುತಿ ತಿಳಿಸುತ್ತದೆ.

**न्यायसुधा –** अस्त्वेवमीश्वरक्रिया नित्या । अन्यक्रिया किमनित्यैवेत्यतो विवेकं प्रमाणान्तरेण दर्शयति – **शक्तीति** ।।

**ಅನು -** ಈಶ್ವರ ಕ್ರಿಯೆ ನಿತ್ಯವಾಗಲಿ. ಇತರರ ಕ್ರಿಯೆಯು ಅನಿತ್ಯವೇ ಆಗಿದೆಯೇನೋ ಎಂಬ ಪ್ರಶ್ನೆಗೆ ಉತ್ತರವಾಗಿ ಈಶ್ವರಕ್ರಿಯೆ ಹಾಗೂ ಇತರರ ಕ್ರಿಯೆಗಳಿಗೆ ವ್ಯತ್ಯಾಸವನ್ನು ಬೇರೊಂದು ಪ್ರಮಾಣದಿಂದ ಆಚಾರ್ಯರು ಶಕ್ತಿ ಎಂಬಿತ್ಯಾದಿ ಅನುವ್ಯಾಖ್ಯಾನದಲ್ಲಿ ತೋರಿಸುತ್ತಾರೆ.

**न्यायसुधा – सद्भावे =** नित्यत्वे । आदिपदेन ज्ञानादिग्रहणम् । अथवा **नित्यतेति** स्थायित्वमुच्यते । ततश्च ज्ञानक्रियादिशक्तिः यावत्कालभाविनी तावत्कालभावि ज्ञानादिकमपीत्युक्तं भवति ।

**ಅನು -** ಅನುವ್ಯಾಖ್ಯಾನದಲ್ಲಿ ಸದ್ಭಾವೇ ಅಂದರೆ (ಶಕ್ತಿಗೆ) ನಿತ್ಯತ್ವವಿರುವುದಾದರೆ ಎಂದರ್ಥ. ಇಲ್ಲಿ ಕ್ರಿಯಾದಿ ಎನ್ನುವಲ್ಲಿ ಆದಿ ಪದದಿಂದ ಜ್ಞಾನೇಚ್ಛಾದಿಗಳನ್ನು ಸ್ವೀಕಾರ ಮಾಡಬೇಕು. ಅಥವಾ ನಿತ್ಯತಾ ಎಂಬುವುದರಿಂದ ಸ್ಥಾಯಿತ್ವವನ್ನು ಇಟ್ಟುಕೊಳ್ಳಬೇಕು. ಆಗ ಜ್ಞಾನಕ್ರಿಯಾದಿಶಕ್ತಿಯು ಎಲ್ಲಿಯ ವರೆಗೆ ಇರುತ್ತದೋ ಅಲ್ಲಿಯವರೆಗೆ ಜ್ಞಾನಾದಿಗಳು ಇರುತ್ತವೆ ಎಂದು ಹೇಳಿದ ಹಾಗೆ ಆಗುತ್ತದೆ.

**ವಿವರಣೆ :** ಶಕ್ತಿಸದ್ಭಾವೇ ಇತ್ಯಾದಿ ಅನುವ್ಯಾಖ್ಯಾನವನ್ನು ಎರಡು ರೀತಿಯಾಗಿ ಯೋಜನೆ ಮಾಡಿದ್ದಾರೆ. ಮೊದಲು ಶಕ್ತಿಸದ್ಭಾವೇ ಶಕ್ತಿ ನಿತ್ಯವಾದರೆ, ಕ್ರಿಯಾದಿಗಳು ನಿತ್ಯವಾಗಿವೆ. ಇದು ಜೀವಸ್ವರೂಪಕ್ರಿಯೆಯ ಅಭಿಪ್ರಾಯದಿಂದ ಯೋಜನೆ, ಅನಂತರ ಶಕ್ತಿ ಸ್ಥಾಯಿಯಾದರೆ ಅದು ಇರುವ ತನಕ ಕ್ರಿಯೆ ಇರುತ್ತದೆ ಎಂದು ಅಭಿಪ್ರಾಯ. ದೇಹವಿಶಿಷ್ಟ ಜೀವನ ಕ್ರಿಯೆಯನ್ನು ಇಟ್ಟುಕೊಂಡು ಈ ರೀತಿಯಾಗಿ ಹೇಳಿದ್ದರಿಂದ ತಾರ್ಕಿಕರು ಹೇಳುತ್ತಿರುವ ಜ್ಞಾನಾದಿ ಕ್ರಿಯಾಗಳ ಕ್ಷಣಿಕತ್ವವು ಖಂಡಿತವಾಯಿತು.

## ಶಕ್ತಿಯಿಲ್ಲವೆನ್ನುವವರ ಖಂಡನೆ

**न्यायसुधा** – स्वरूपसहकारिसमवधानातिरिक्ता शक्तिरेव नास्तीति केचित् । तेषामुदाहृतश्रुत्यादिविरोधः । नच तत्स्वरूपमात्रम् । सम्बन्धितया प्रतीतेः । नापि सहकारिपरम्। स्वाभाविकत्वादिश्रवणात् । किं चास्ति तावदित्थं व्यवहारः । स्फोटादिकार्यं प्रति शक्तिमानपि दहनो देहसंयोगादिसहकारिविरहात् न तदजीजनदिति । तत्र न तावच्छक्तिशब्देन वह्निस्वरूपमात्रमुच्यते । मतुपो वैयर्थ्यप्रसङ्गात् । नापि सहकारिसमवधानं तदभावस्योक्तत्वात् । दहनत्वसामान्यमेव शक्तिरिति चेत् । कथं तर्हि स्वरूप सहकारिसमवधानातिरिक्ता नास्ति । सामान्यमपि सहकारिवर्गान्तर्गतमिति चेत् । तत्किं प्रत्यक्षमप्रत्यक्षं वा । आद्ये दहनदर्शने स्फोटजननशक्तिजिज्ञासा न स्यात्। न द्वितीयः । अपसिद्धान्तापातात् । तथाभ्युपगमे वा सैव शक्तिरस्माकम्। किञ्च मृत्तन्त्वादिस्वरूपं प्रत्यक्षादिसिद्धम् । तस्य घटादिकारणत्वं तु अन्वयव्यतिरेकसमधिगम्यम् । अन्वयव्यतिरेकग्रहणोपायश्च सामान्यम् । तच्च प्रत्यक्षादिसिद्धमिति परेणापि स्वीकृतम् । नच कारणत्वं स्वरूपं, सहकारिसमवधानं वा । स्वरूपस्यान्वयव्यतिरेकानपेक्षाधिगतत्वात् । कारणस्यैव सहकारि समवधानान्वेषणात् । ततोऽतीन्द्रियमेव किञ्चिन्मृदादीनां घटादिकारणत्वमभ्युपगमनीयम् । तदेव शक्तिरिति शक्तिवादिभिरभ्युपेयत इत्यास्तां प्रपञ्चः ।

ಅನು - ಕೆಲವರು ವಸ್ತು ಸ್ವರೂಪ ಮತ್ತು ಸಹಕಾರಿ ಕಾರಣದ ಕೂಡುವಿಕೆಗಿಂತ ಅತಿರಿಕ್ತವಾದ ಶಕ್ತಿಯನ್ನು ಇಲ್ಲ ಎಂದನ್ನುವರು. ಅವರಿಗೆ ಶಕ್ತಿಯನ್ನು ನಿರೂಪಿಸುತ್ತಿರುವ ಹಿಂದೆ ಉದಾಹರಿಸಿದ ಶ್ರುತ್ಯಾದಿ ವಿರೋಧವಿದೆ. ಆ ಶ್ರುತ್ಯಾದಿಗಳಿಂದ ನಿರೂಪಿತವಾದ ಶಕ್ತಿಯು ಸ್ವರೂಪವೇ ಆಗಿದೆ ಎಂದನ್ನುವುದು ಸರಿಯಲ್ಲ. ''ಪರಾऽಸ್ಯ'' ಎಂಬೀ ರೀತಿಯಲ್ಲಿ ಸಂಬಂಧವಾಚಕಷಷ್ಠೀವಿಭಕ್ತಿಯಿಂದ ಆ ಶಕ್ತಿಯು ಸ್ವರೂಪವಲ್ಲ, ಸಂಬಂಧ ಎಂದು ಕಾಣುತ್ತಿದೆಯಷ್ಟೆ. ಸಹಕಾರಿ ಮೇಲನವೇ ಶಕ್ತಿ ಎಂದೆನ್ನುವುದೂ ಸರಿಯಲ್ಲ. ಏಕೆಂದರೆ, ಆ ಶಕ್ತಿಯು ಸ್ವಾಭಾವಿಕ, ನಿತ್ಯ ಎಂದು ತಿಳಿದು ಬರುವುದರಿಂದ ಅದನ್ನು ಆಗಂತುಕ ಹಾಗೂ ಅನಿತ್ಯವೆನಿಸಿರುವ ಸಹಕಾರಿ ಮೇಲನ ಎನ್ನಬಾರದು. ಇಷ್ಟೇ ಅಲ್ಲದೇ ಸ್ಫೋಟಾದಿ ಕಾರ್ಯವನ್ನು ಕುರಿತು ಶಕ್ತಿ ಉಳ್ಳದ್ದಾದರೂ ದೇಹಸಂಯೋಗಾದಿ ಸಹಕಾರಿ ಇಲ್ಲದಿರುವುದರಿಂದ ಅಗ್ನಿಯು ಸ್ಫೋಟಾದಿ ಗಳನ್ನು ಉತ್ಪಾದಿಸಲಿಲ್ಲ ಎಂಬಿತ್ಯಾದಿ ರೀತಿಯ ವ್ಯವಹಾರ ಕಂಡಿದೆ. ಇಲ್ಲಿ ಶಕ್ತಿ ಶಬ್ದದಿಂದ ವಹ್ನಿ ಸ್ವರೂಪವು ಮಾತ್ರ ಹೇಳಲ್ಪಡುತ್ತಿದೆ ಎಂದನ್ನುವಂತಿಲ್ಲ. ಯಾಕೆಂದರೆ ಹಾಗಿದ್ದಲ್ಲಿ ಶಕ್ತಿಃ ದಹನಃ ಎಂದಿರಬೇಕಿತ್ತು. ಶಕ್ತಿಮಾನ್ ದಹನ ಎಂದು ಸಂಬಂಧಾರ್ಥಕ ಮತುಪ್ ಪ್ರತ್ಯಯವಿರುವುದರಿಂದ ಸ್ವರೂಪವಲ್ಲವೆಂದು ಸಿದ್ಧವಾಗುತ್ತದೆ. ಸಹಕಾರಿ ಸಮಾಧಾನವು ಇಲ್ಲವೆಂದನ್ನುವುದನ್ನು ''ದೇಹಸಂಯೋಗಾದಿ ಸಹಕಾರಿವಿರಹಾತ್'' ಎಂದು ಈ ವಾಕ್ಯದಲ್ಲೇ ಹೇಳಲಾಗಿರುವುದರಿಂದ ಇಲ್ಲಿರುವ ಶಕ್ತಿಶಬ್ದವು ಸಹಕಾರಿ ಸಮವಧಾನ ಪರ ಎಂದನ್ನುವುದೂ ಸರಿಯಲ್ಲ. ದಹನತ್ವ ಜಾತಿಯನ್ನೇ ಇಲ್ಲಿ ಶಕ್ತಿ ಎಂದು ಹೇಳಲಾಗಿದೆ ಎಂದನ್ನುವುದೂ ಸರಿಯಲ್ಲ. ಹಾಗಿದ್ದಲ್ಲಿ ಅದು ಸ್ವರೂಪಸಹಕಾರಿಸಮವಧಾನಕ್ಕಿಂತ ಭಿನ್ನವೇ ಆಗಿರುವುದರಿಂದ ಸ್ವರೂಪಸಹಕಾರಿ ಸಮವಧಾನಕ್ಕಿಂತ ಭಿನ್ನವಾದ ಶಕ್ತಿ ಇಲ್ಲವೆಂದು ಹೇಳಿದ್ದು ಸರಿಹೊಂದಲಾರದು. ಜಾತಿಯನ್ನು ಸಹಕಾರಿ ಸಾಮಗ್ರಿಯಲ್ಲಿ ಸೇರಿಸಲಾಗುವುದು. ಆದುದರಿಂದ ಸ್ವರೂಪಸಹಕಾರಿ ಸಮವಧಾನಕ್ಕಿಂತ ಭಿನ್ನವಾದ ಶಕ್ತಿ ಇಲ್ಲ ಎಂದನ್ನುವುದು ಯುಕ್ತವೆನ್ನುವುದಾದರೆ ಆ ಜಾತಿಯು ಪ್ರತ್ಯಕ್ಷಗೋಚರವೋ ಅಲ್ಲವೋ ಎಂಬ ಪ್ರಶ್ನೆ ಬರುತ್ತದೆ. ಪ್ರತ್ಯಕ್ಷ ಗೋಚರ ಎಂಬ ಪಕ್ಷವನ್ನು ಒಪ್ಪಿದಲ್ಲಿ ವಹ್ನಿ ಕಾಣುವಾಗ ಜಾತಿರೂಪವಾದ ಆ ಶಕ್ತಿಯೂ ಕಂಡಂತಾಗುವುದರಿಂದ ಸ್ಫೋಟಜನನ ಶಕ್ತಿ ಇದೆಯೋ ಇಲ್ಲವೋ ಎಂಬೀ ರೀತಿಯ ಜಿಜ್ಞಾಸೆಯೇ ಉಂಟಾಗಲಾರದು. ಇನ್ನು ಪ್ರತ್ಯಕ್ಷ ಗೋಚರ ಅಲ್ಲ ಎಂಬ ಪಕ್ಷವನ್ನು ಒಪ್ಪಿದಲ್ಲಿ ಪ್ರತ್ಯಕ್ಷಪದಾರ್ಥದಲ್ಲಿರುವ ಜಾತಿಯು ಪ್ರತ್ಯಕ್ಷ

ಎಂದಂಗೀಕರಿಸುವ ನೈಯಾಯಿಕರಿಗೆ ಅಪಸಿದ್ಧಾಂತ ದೋಷಪ್ರಸಕ್ತಿ. ಅತೀಂದ್ರಿಯವಾದ ಒಂದು ಬಗೆಯ ಜಾತಿಯೂ ಇದೆ ಎಂದು ಒಪ್ಪಿದರೆ ಅದನ್ನೇ ಶಕ್ತಿ ಎಂದು ಕರೆಯುತ್ತೇವೆ.

ಇಷ್ಟೇ ಅಲ್ಲದೇ ಮೃತ್ ತಂತ್ವಾದಿಗಳ ಸ್ವರೂಪವು ಪ್ರತ್ಯಕ್ಷ ಮೊದಲಾದವುಗಳಿಂದ ಸಿದ್ಧವಾಗಿದೆ. ಅವುಗಳಿಗಿರುವ ಘಟಾದಿ ಕಾರಣತ್ವವು ಅನ್ವಯವ್ಯತಿರೇಕ ಸಹಚಾರಗಳಿಂದ ಸಿದ್ಧವಾಗಿದೆ. ಅನ್ವಯ ವ್ಯತಿರೇಕ ಸಹಚಾರಗಳು ತಿಳಿಯುವುದಾದರೂ ಜಾತಿಯಿಂದ ಆ ಜಾತಿಯಾದರೂ ಪ್ರತ್ಯಕ್ಷಾದಿಗಳಿಂದ ಸಿದ್ಧವಾಗಿದೆ ಎಂದು ಪ್ರತಿವಾದಿಯೂ ಒಪ್ಪಿದ್ದಾನೆ. ಕಾರಣತ್ವವು ಸ್ವರೂಪ ಅಥವಾ ಸಹಕಾರಿ ಸಮವಧಾನವೇ ಎಂದೂ ಹೇಳುವಂತಿಲ್ಲ. ಸ್ವರೂಪದ ಗ್ರಹಣವು ಕಾರಣತ್ವಗ್ರಹಣದಂತೆ ಅನ್ವಯವ್ಯತಿರೇಕ ಸಹಚಾರಗಳ ಅಧೀನವಾಗಿಲ್ಲ; ಆದುದರಿಂದ ಕಾರಣಗಳಲ್ಲಿರುವ ಕಾರಣತ್ವವು ವಸ್ತುಸ್ವರೂಪವೆನ್ನುವಂತಿಲ್ಲ. ಸಹಕಾರಿಯ ಅಪೇಕ್ಷೆಯಿರುವುದು ಕಾರಣಕ್ಕೇನೇ ಆಗಿರುವುದರಿಂದ ಈ ಕಾರಣತ್ವವನ್ನು ಸಹಕಾರಿ ಸಮವಧಾನ ಎಂದನ್ನುವಂತೆಯೂ ಇಲ್ಲ. ಆದ್ದರಿಂದ ಮೃದಾದಿ-ಗಳಲ್ಲಿರುವ ಘಟಾದಿ ಕಾರಣತ್ವವನ್ನು ಅತೀಂದ್ರಿಯವಾದುದೆಂದೇ ಅಂಗೀಕರಿಸಬೇಕು. ಇದನ್ನೇ ಶಕ್ತಿವಾದಿಗಳು ಶಕ್ತಿ ಎಂದು ಅಂಗೀಕರಿಸುತ್ತಾರೆ. ಪ್ರಕೃತ ಇಷ್ಟು ವಿಸ್ತಾರ ಸಾಕು.

**ವಿವರಣೆ :** ಕ್ರಿಯೆಯಲ್ಲಿ ಶಕ್ತಿ ವ್ಯಕ್ತಿಗಳನ್ನು ಒಪ್ಪಿ ಪರಿಹಾರ ಮಾಡುವುದು ಸರಿಯಲ್ಲ. ತಾರ್ಕಿಕ ವಾದಿಗಳ ಮತಾನುಸಾರವಾಗಿ ವಸ್ತು ಸ್ವರೂಪ ಮತ್ತು ಸಹಕಾರಿಕೂಡುವಿಕೆಗಿಂತ ಅತಿರಿಕ್ತವಾದ ಶಕ್ತಿ ಎಂದನ್ನುವುದನ್ನು ಒಪ್ಪುವುದಿಲ್ಲ. ಪ್ರಮಾಣವಿಲ್ಲವೆಂದು ತಾರ್ಕಿಕರು ಶಕ್ತಿಯನ್ನು ಖಂಡನೆ ಮಾಡುತ್ತಾರೆ. ಅದರ ವಿಷಯದಲ್ಲಿ ಶಕ್ತಿಯ ಇರುವಿಕೆಗೆ ಪರಾಸ್ಯಶಕ್ತಿಃ ಇತ್ಯಾದಿ ಶ್ರುತಿಯೇ ಪ್ರಮಾಣ. ಇದಕ್ಕಾಗಿ ಅನುವ್ಯಾಖ್ಯಾನವನ್ನು ''ಶಕ್ತಿ ಸದ್ಭಾವ ಏವ ತು .... ಇತಿ ಪೈಂಗಿ ಶ್ರುತಿಶ್ಚಾಹ'' ಎಂದು ಯೋಜನೆಮಾಡಬೇಕು.

''ಪರಾऽಸ್ಯಶಕ್ತಿಃ ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ'' ಶ್ರುತಿಯಲ್ಲಿ ಅಸ್ಯ ಎಂಬ ಸಂಬಂಧಾರ್ಥಕ ಷಷ್ಠ್ಯಂತ ಇದಂ ಶಬ್ದದಿಂದ ಸಂಬಂಧ ತಿಳಿಯುತ್ತದೆ. ಸಂಬಂಧವಾದ ಎರಡು ವಸ್ತುಗಳಿಗೆ ಭೇದವಿರುತ್ತದೆ. ಆದರಿಂದ ಈಶ್ವರ ಮತ್ತು ಕ್ರಿಯೆ ಶಕ್ತಿಯು ಬೇರೆ ಬೇರೆ ಎಂದಾಯಿತು. ಹೀಗೆಯೇ ಶಕ್ತಿಃ ಪರಾತ್ಮನಃ ಎಂಬ ಪೈಂಗಿಶ್ರುತಿಯಲ್ಲಿಯೂ ಸಂಬಂಧಾರ್ಥಕ ಷಷ್ಠೀ ವಿಭಕ್ತಿ ಇದೆ. ''ಸಂಬಂಧಿತಯಾ'' ಎಂಬ

ಶಬ್ದಕ್ಕೆ ಉಪಲಕ್ಷಣವಾಗಿ ವಿವಿಧತಯಾ ಎಂಬುದನ್ನು ಇಟ್ಟುಕೊಳ್ಳಬೇಕು. ಈ ವಿವಿಧತ್ವವನ್ನು ವಿವಿಧೈವ ಶಬ್ದದಿಂದ ಹೇಳಿದೆ. ಒಬ್ಬ ಈಶ್ವರನೂ ಅವನ ವಿವಿಧವಾದ ಶಕ್ತಿಯೂ ಬೇರೆ ಬೇರೆ ಎಂದಾಯಿತು.

ಶ್ರುತ್ಯಾದಿ ಎಂಬಲ್ಲಿರುವ ಶಬ್ದದಿಂದ ಶಕ್ತಿಸದ್ಭಾವ ಏವ ತು ಇತ್ಯಾದಿ ಸತ್ತತ್ತ್ವವಚನದ ಗ್ರಹಣ ಮಾಡಬೇಕು. ಅಥವಾ ಪರಿಮಳದಲ್ಲಿ ಉಲ್ಲೇಖಿಸಲ್ಪಟ್ಟ "ಶಕ್ತಯಃ ಸರ್ವಭಾವಾನಾಂ ಅಚಿಂತ್ಯಾ ಜ್ಞಾನಗೋಚರಾಃ" (ಎಲ್ಲಾ ಭಾವಪದಾರ್ಥಗಳ ಶಕ್ತಿಗಳು ಅಚಿಂತ್ಯಗಳಾಗಿವೆ, ದಿವ್ಯಜ್ಞಾನಗೋಚರಗಳಾಗಿವೆ.) ಎಂಬ ವಿಷ್ಣುಪುರಾಣ- ವಾಕ್ಯರೂಪದ ಸ್ಮೃತಿಯನ್ನೂ ಸ್ವೀಕಾರ ಮಾಡಬಹುದಾಗಿದೆ.

ಕಿಂಚಾಸ್ತಿ ತಾವದಿತ್ಥಂ ವ್ಯವಹಾರಃ ಇತ್ಯಾದಿ ವಾಕ್ಯಗಳಿಂದ ಅತಿರಿಕ್ತ ಶಕ್ತಿಯ ವಿಷಯದಲ್ಲಿ ವ್ಯವಹಾರಾ- ನ್ಯಥಾನುಪಪತ್ತಿಯನ್ನು ಪ್ರಮಾಣವಾಗಿ ಹೇಳುತ್ತಿದ್ದಾರೆ.

ಬೆಂಕಿಗೆ ಮೃತಶರೀರ ಸಂಬಂಧವಾದಾಗ ಸ್ಫೋಟವಾಗುತ್ತದೆ. ಹಾಗೆಯೇ, ತಂಡುಲಾದಿಗಳ ಸಂಬಂಧದಿಂದ ಪಾಕವಾಗುತ್ತದೆ. ಈ ಎಲ್ಲಾ ಕಾರ್ಯಗಳನ್ನು ಮಾಡುವಲ್ಲಿ ಬೆಂಕಿಗೆ ಶಕ್ತಿಯಿದೆ. ಆದರೆ ಅದು ಸಹಕಾರಿ ಇರುವಾಗ ಕಾರ್ಯಕಾರಿ ಆಗುತ್ತದೆ. ಇಲ್ಲದಿರುವಾಗ ಕಾರ್ಯಕಾರಿ ಆಗುವುದಿಲ್ಲ. ಇಲ್ಲಿ ಸ್ವರೂಪ ಬೇರೆ ಹಾಗೂ ಶಕ್ತಿ ಬೇರೆಯಾಗಿವೆ. ದಹನದಲ್ಲಿರುವ ದಹನತ್ವ ಜಾತಿಯು ಶಕ್ತಿ ಆಗಲಾರದು. ಯೇನ ಇಂದ್ರಿಯೇಣ ಯಾ ವ್ಯಕ್ತಿಃ ಗೃಹ್ಯತೇ ತೇನೈವ ಇಂದ್ರಿಯೇಣ ತದ್ಗತಾ ಜಾತಿಃ ಗೃಹ್ಯತೇ ಎಂಬುದು ತಾರ್ಕಿಕರ ಸಿದ್ಧಾಂತ. ಆದ್ದರಿಂದ ದಹನ ಪ್ರತ್ಯಕ್ಷವಾದಾಗ, ದಹನತ್ವ ಪ್ರತ್ಯಕ್ಷ ಆಗಿಯೇ ಆಗುತ್ತದೆ. ಆಗ ದಹನದಲ್ಲಿ ಸ್ಫೋಟಜನನ ಶಕ್ತಿ ಇದೆಯೋ ಇಲ್ಲವೋ ಎಂಬ ವಿಚಾರ ಕೂಡಲಾರದು.

ಇಲ್ಲಿ ಸಾಮಾನ್ಯವು ಅಪ್ರತ್ಯಕ್ಷವೆಂದು ತಾರ್ಕಿಕರು ಒಪ್ಪದಿದ್ದರೂ, ಅತೀಂದ್ರಿಯ ಶಕ್ತಿಯ ಸ್ಥಾನದಲ್ಲಿ ಅಂತಹ ಸಾಮಾನ್ಯವು ಇರುವುದರಿಂದ ಆ ಪಕ್ಷದ ಸ್ವೀಕಾರ. ಮೊದಲು ಗೂಢಾಭಿಸಂಧಿಯಿಂದ ಪ್ರಶ್ನೋತ್ತರಗಳು. ಸಾಮಾನ್ಯಮಪಿ ಇತ್ಯಾದಿಗಳಿಂದ ಸ್ಪಷ್ಟೀಕರಣ. ಸಾಮಾನ್ಯಮಪಿ ಸಹಕಾರಿ ವರ್ಗಾಂತರ್ಗತಂ ಎಂಬಲ್ಲಿ ಪೂರ್ವಪಕ್ಷಿಯ ಅಭಿಪ್ರಾಯ ಹೀಗಿದೆ: ದಹನತ್ವ ಜಾತಿಯು ಅವಚ್ಛೇದಕ ಧರ್ಮ; ಅವಚ್ಛೇದಕ ಧರ್ಮವನ್ನು ಬಿಟ್ಟು ಅವಚ್ಛಿನ್ನ ಇರುವುದಿಲ್ಲ. ಆದ್ದರಿಂದ ದಹನದ ಹಾಗೆ ಅದರ ಜೊತೆಯೇ ಇರುವ ದಹನತ್ವವೂ

ಸ್ಫೋಟಕ್ಕೆ ಪ್ರಯೋಜಕವಾಗಿದೆ. ಆದರಿಂದ ಅದೂ ಸಹಕಾರಿವರ್ಗದಲ್ಲಿ ಸೇರುತ್ತದೆ ಎಂದು. ಆದರೆ ಹೀಗೆ ಪ್ರತ್ಯಕ್ಷಗೋಚರವಾದ ದಹನತ್ವವನ್ನು ಅತೀಂದ್ರಿಯವಾದ ದಾಹಶಕ್ತಿಯನ್ನು ಒಂದೆನ್ನುವುದು ಯುಕ್ತವಾಗುವುದಿಲ್ಲ. ಅತೀಂದ್ರಿಯವಾದ ದಾಹಶಕ್ತಿ ಒಂದೆನ್ನುವುದು ಯುಕ್ತವಾಗುವುದಿಲ್ಲ. ಅತೀಂದ್ರಿಯವಾದ ಶಕ್ತಿಯನ್ನು ಅನುಮಾನದಿಂದ ತಿಳಿಯುವ ಬಗೆ ಹೀಗೆ – ತಾರ್ಕಿಕರು ಯೇನ ಇಂದ್ರಿಯೇಣ ಎಂಬ ನಿಯಮದಿಂದ ಸಾಮಾನ್ಯಕ್ಕೆ ಪ್ರತ್ಯಕ್ಷ ವಿಷಯತ್ವವನ್ನು ಅಂಗೀಕರಿಸುತ್ತಾರೆ. ಕಾರಣಸತ್ವೇ ಕಾರ್ಯಸತ್ವಂ-ಅನ್ವಯಸಹಚಾರ, ಕಾರಣಾಭಾವೇ ಕಾರ್ಯಾಭಾವಃ ಎಂಬುದು ವ್ಯತಿರೇಕಸಹಚಾರ. ಇಲ್ಲಿ ಪ್ರತಿಯೊಂದು ಮೃದಾದಿಗಳಿಗೂ ಘಟಾದಿಗಳಿಗೂ ಅನ್ವಯವ್ಯತಿರೇಕ ಸಹಚಾರ ತಿಳಿಯಲು ಅಶಕ್ಯ. ಭೂತಭಾವಿ ವರ್ತಮಾನ ಅನಂತ ಮೃದಾದಿಗಳ ಉಪಸ್ಥಿತಿ ಅಶಕ್ಯವಷ್ಟೆ. ಆದುದರಿಂದ ಎಲ್ಲ ಮೃದಾದಿಗಳಲ್ಲಿಯೂ ಘಟಾದಿಗಳಲ್ಲಿಯೂ ಮೃತ್ತ್ವ ಘಟತ್ವ ಜಾತಿಯು ಒಂದೇ ಆಗಿರುವುದರಿಂದ ಆ ಜಾತಿಗಳನ್ನು ಇಟ್ಟುಕೊಂಡು ಮೃತ್ತ್ವಾವಚ್ಛಿನ್ನಸತ್ವೇ ಘಟತ್ವಾವಚ್ಛಿನ್ನಸತ್ವಂ, ತದಭಾವೇ ತದಭಾವಃ - ಎಂದು ಅನ್ವಯವ್ಯತಿರೇಕವನ್ನು ತಿಳಿಯಬೇಕು. ಹೀಗೆ ಜಾತಿಯ ಮೂಲಕ ಅನ್ವಯವ್ಯತಿರೇಕದಿಂದ ಕಾರಣತ್ವವು ತಿಳಿಯುತ್ತದೆ. ಸ್ವರೂಪ ಮತ್ತು ಜಾತಿಗಳಾದರೂ ಪ್ರತ್ಯಕ್ಷ ಸಿದ್ಧವಾಗಿವೆ. ಹೊರತು ಅನ್ವಯ ವ್ಯತಿರೇಕ ಗಮ್ಯವಲ್ಲ. ಆದ್ದರಿಂದ ಕಾರಣತ್ವವು ಸ್ವರೂಪವೂ ಅಲ್ಲ. ಜಾತಿಯೂ ಅಲ್ಲ. ಮೃತ್ ಕಾರಣ ದಂಡ ಚಕ್ರಾದಿಗಳು ಸಹಕಾರಿಗಳು. ಇಲ್ಲಿ ಕಾರಣ ಇದ್ದರೂ ಕೂಡ ಕಾರ್ಯ ಆಗಬೇಕಾದರೆ ಕಾರಣಭಿನ್ನವಾದ ದಂಡಚಕ್ರಾದಿ ಸಹಕಾರಿಗಳ ಕೂಡುವಿಕೆ ಆಗತ್ಯ. ಆದ್ದರಿಂದ ಕಾರಣತ್ವವೇ ಬೇರೆ ಸಹಕಾರಿ ಸಮವಧಾನವೇ ಬೇರೆ ಎರಡೂ ಒಂದೇ ಆಗದು. (ಕಾರಣತ್ವಂ ನ ಸಹಕಾರಿಸಮವಧಾನರೂಪಂ ಸಹಕಾರಿಸಮವಧಾನಪ್ರಯೋಜಕತ್ವಾತ್.) ಹೀಗೆ ಪರಿಶೇಷಾನುಮಾನದಿಂದ ಮೃದಾದಿ ಕಾರಣಗತ ಕಾರಣತ್ವವು ಅತೀಂದ್ರಿಯ ಶಕ್ತಿರೂಪವೆಂದು ಸಿದ್ಧವಾಗುವುದು.

ಅನ್ವಯವ್ಯತಿರೇಕ ಸಹಚಾರದಿಂದ ಅನುಮೇಯವಾಗುವುದು ಅತೀಂದ್ರಿಯ ಶಕ್ತಿಯಲ್ಲ. ಅನನ್ಯಥಾಸಿದ್ಧ ನಿಯತಪೂರ್ವವೃತ್ತಿತ್ವರೂಪಕಾರಣತ್ವವೇ ಅನುಮೇಯವಾಗಿದೆ ಎಂಬ ತಾರ್ಕಿಕರ ಪಕ್ಷವೂ ಸರಿಯಲ್ಲ. ಅನನ್ಯಥಾಸಿದ್ಧನಿಯತಪೂರ್ವವೃತ್ತಿತ್ವವು ಅನ್ವಯವ್ಯತಿರೇಕಸಹಚಾರದಿಂದ ಕೂಡಿರುವ ಪ್ರತ್ಯಕ್ಷಕ್ಕೇ ಗಮ್ಯವಾಗಿದೆ. ಅದು ಶಕ್ತಿರೂಪ ಕಾರಣತ್ವಕ್ಕೆ ಲಿಂಗವಾಗಿದೆ ಎಂದೇ ಹೇಳಬೇಕು.

ಇತ್ಯಾಸ್ತಾಂ ಪ್ರಪಂಚಃ ಎಂಬುದಾಗಿ ಟೀಕಾಚಾರ್ಯರು ಶಕ್ತಿಗೆ ಅತೀಂದ್ರಿಯ ಕಾರಣತ್ವಾಭಿನ್ನತೆಯನ್ನು ಸಾಧನೆ ಮಾಡಿ ಇನ್ನು ಬಂದ ಪ್ರಶ್ನೆಗಳಿಗೆ ಈ ರೀತಿಯಾಗಿ ಉತ್ತರಿಸಬಹುದು ಎಂದು ಹೇಳಿದ್ದಾರೆ. ಈ ವಿಚಾರವನ್ನು ವ್ಯಾಸರಾಯರು ತರ್ಕತಾಂಡವದಲ್ಲಿ ವಿಮರ್ಶೆ ಮಾಡುತ್ತಾರೆ. ಅದನ್ನು ಯಾದುಪತ್ಯದಲ್ಲಿ ಈ ರೀತಿಯಾಗಿ ವಿಚಾರಮಾಡಿದ್ದಾರೆ –

**ಪ್ರಶ್ನೆ:** ಕಾರಣತ್ವವೇ ಶಕ್ತಿಯಾದರೆ ಶಕ್ತಿಯು ಕಾರಣವಲ್ಲ, ಕಾರಣತ್ವ ಎಂದಾಯಿತು. ಆಗ ದಾಹಾನುಕೂಲಾ ಶಕ್ತಿಃ ಎಂಬ ವಿಶಿಷ್ಟ ಪ್ರಯೋಗವು ಕೂಡುವುದಿಲ್ಲ. ಇಲ್ಲಿ ಅನುಕೂಲ ಶಬ್ದಕ್ಕೆ ಕಾರಣವೆಂದರ್ಥ. ಶಕ್ತಿಯು ಕಾರಣಸ್ವರೂಪವಲ್ಲ, ಆದರೆ, ಇಲ್ಲಿ ದಾಹಕಾರಣ ಶಕ್ತಿ ಎಂದು ಅರ್ಥವಾಗುತ್ತದೆ. ಆದ್ದರಿಂದ ಈ ಪ್ರಯೋಗವು ತಪ್ಪಾಗಬೇಕಾದೀತು.

**ಉತ್ತರ:** ಕಾರಣವು ಅನುಕೂಲತ್ವಕ್ಕೆ ಆಶ್ರಯವಾದಂತೆ ಕಾರಣತ್ವವೂ ಆಶ್ರಯವಾಗುತ್ತದೆ. ಯಾಕೆಂದರೆ ಕಾರ್ಯಪ್ರಾಗಭಾವವ್ಯಾಪ್ಯ ಪ್ರಾಗಭಾವಪ್ರತಿಯೋಗಿತ್ವವೇ ಅನುಕೂಲತ್ವವಾಗಿದೆ. ಘಟಕಾರಣ ಮೃತ್ತಿನಲ್ಲಿ ಈ ಅನುಕೂಲತ್ವ ಇದೆ. ಯತ್ರ ಮೃತ್ ಪ್ರಾಗಭಾವಃ ತತ್ರ ಘಟಪ್ರಾಗಭಾವಃ ಎಂದು ವ್ಯಾಪ್ತಿ. ಇಲ್ಲಿ ಘಟಪ್ರಾಗಭಾವವ್ಯಾಪ್ಯ ಪ್ರಾಗಭಾವ = ಮೃತ್‌ಪ್ರಾಗಭಾವ ತತ್ಪ್ರತಿಯೋಗಿತ್ವವು ಮೃದ್ರೂಪ ಕಾರಣದಲ್ಲಿದೆ. ಅದರಂತೆಯೇ ಘಟಕಾರಣ ಮೃತ್ತಿನಲ್ಲಿರುವ ಕಾರಣತ್ವದಲ್ಲಿಯೂ ಘಟಪ್ರಾಗಭಾವಪ್ರತಿಯೋಗಿತ್ವ-ವಿರುವುದರಿಂದ ಅದೂ ಘಟಾನುಕೂಲವೆನಿಸುತ್ತದೆ. ಹೀಗೆ ದಾಹಾನುಕೂಲತ್ವವು ಕಾರಣತ್ವರೂಪ ಶಕ್ತಿ- ಯಲ್ಲಿ ಇರುವುದರಿಂದ ವಿಶಿಷ್ಟಪ್ರಯೋಗಾನುಪಪತ್ತಿ ಬರುವುದಿಲ್ಲ.

**ಪ್ರಶ್ನೆ :** ವಹ್ನಿಯಲ್ಲಿರುವ ದಾಹಾನುಕೂಲ ಶಕ್ತಿಯು ಪ್ರತಿಬಂಧಕ ಮಣಿ ತಂದಾಗ ನಾಶವಾಗುತ್ತದೆ, ಉತ್ತೇಜಕ ಮಣಿ ತಂದಾಗ ಅಥವಾ ಪ್ರತಿಬಂಧಕ ತೆಗೆದಾಗ ಉತ್ಪತ್ತಿ ಆಗುತ್ತದೆ. ಹೀಗೆ ಅನಂತಶಕ್ತಿ ಕಲ್ಪನೆ ಮಾಡುವುದರಿಂದ ಕಲ್ಪನಾ ಗೌರವ ದೋಷ.

**ಉತ್ತರ :** ಕೊಡಲಿಯು ಛೇದನಕಾರಣವಾಗಿದೆ. ಆದರೂ, ಕೊಡಲಿಯ ತೀಕ್ಷ್ಣತೆ ಕಡಿಮೆಯಾದಾಗ ಛೇದಿಸುವುದಿಲ್ಲ. ಆಗ ಕೊಡಲಿಗೆ ಸಂಸ್ಕಾರ ಮಾಡಬೇಕಾಗುತ್ತದೆ. ಆ ಸಂಸ್ಕಾರದಿಂದ ಪುನಃ ಛೇದಿಸುತ್ತದೆ. ಇದರಿಂದ ಕೋಡಲಿಯ ಛೇದಕತ್ವವು ಮೊದಲು ಕುಂಠಿತವಾಗಿತ್ತು, ಸಂಸ್ಕಾರದಿಂದ ಅದೇ ಛೇದಕತ್ವವು ಉದ್ಬುದ್ಧವಾಯಿತು. ಅದರಂತೆ ಅಗ್ನಿಯಲ್ಲಿ ದಾಹಾನುಕೂಲ ಶಕ್ತಿಯಲ್ಲಿಯೂ ಪ್ರತಿಬಂಧಕದಿಂದ ಕುಂಠಿತವಾಗಿ ಅದೇ

ಶಕ್ತಿಯೇ ಉತ್ತೇಜಕದಿಂದ ಉದ್ಬುದ್ಧವಾಗುವುದು ಹೊರತು ಶಕ್ತಿನಾಶವಾಗಿ ಭೇದಶಕ್ತಿಯ ಅಂಗೀಕಾರವಿಲ್ಲ. ಆದ್ದರಿಂದ ಕಲ್ಪನಾ ಗೌರವವಿಲ್ಲ.

**ಪ್ರಶ್ನೆ** : ಬೀಜದಲ್ಲಿ ಅಂಕುರಜನನ ಶಕ್ತಿಯಿದೆ. ಆ ಶಕ್ತಿಗೆ ಬೀಜವು ಸಮವಾಯ ಕಾರಣವಾಗಿದೆ. ಆದ್ದರಿಂದ ಬೀಜದಲ್ಲಿ ಅಂಕುರಜನನ ಶಕ್ತಿಗೆ ಕಾರಣವಾದ ಇನ್ನೊಂದು ಶಕ್ತಿಯನ್ನು ಒಪ್ಪಬೇಕು. ಆ ಶಕ್ತಿಗೆ ಕಾರಣವಾದ ಇನ್ನೊಂದು ಶಕ್ತಿಯನ್ನು ಒಪ್ಪಬೇಕು. ಹೀಗೆ ಅನಾದಿಶಕ್ತಿ ಪರಂಪರೆಯನ್ನು ಒಪ್ಪಬೇಕಾದ ಪ್ರಸಂಗ. ಆಗ ಸಾದಿಯಾದ ಬೀಜಕ್ಕೆ ಅನಾದಿತ್ವ ಬರಬೇಕಾದೀತು.

**ಉತ್ತರ** : ನಮ್ಮ ಸಿದ್ಧಾಂತರೀತಿಯಲ್ಲಿ ಅಂಕುರ ಜನನ ಶಕ್ತಿಯಿಂದ ಕೂಡಿದ ಬೀಜದಲ್ಲಿ, ಶಕ್ತವಾದ ತನ್ನ ಕಾರಣದಿಂದಲೇ ಆ ಶಕ್ತಿಯ ಉತ್ಪತ್ತಿ ಆಗುವುದರಿಂದ ಶಕ್ತಿ ಪರಂಪರಾ ಕಲ್ಪನೆ ಇಲ್ಲ.

**ಪ್ರಶ್ನೆ**: ಕಾರಣತ್ವರೂಪ ಶಕ್ತಿಯಲ್ಲಿಯೂ ತನ್ನ ಕಾರ್ಯಜನನ ಶಕ್ತಿಯನ್ನು ಅಂಗೀಕರಿಸಬೇಕು. ಆ ಶಕ್ತಿಯಲ್ಲಿ ಇನ್ನೊಂದು ಶಕ್ತಿಯನ್ನು ಅಂಗೀಕರಿಸಬೇಕು. ಹೀಗೆ ಅನವಸ್ಥಾದೋಷ ಬರುವುದು.

**ಉತ್ತರ** : ತಾರ್ಕಿಕರು ಹೇಗೆ ಸಮವಾಯ ಮತ್ತು ವಿಶೇಷಾದಿಗಳಿಗೆ ಸ್ವನಿರ್ವಾಹಕತ್ವವನ್ನು ಒಪ್ಪುವರೋ ಅದರಂತೆಯೇ ಶಕ್ತಿಗೂ ಸ್ವನಿರ್ವಾಹಕತ್ವವನ್ನು ಒಪ್ಪಬೇಕು. ಆದ್ದರಿಂದ ಅನವಸ್ಥೆ ಬರುವುದಿಲ್ಲ.

ಹೀಗೆ ಕಾರಣತ್ವವನ್ನೇ ಶಕ್ತಿಯೆಂದು ಅಂಗೀಕರಿಸಿದರೆ ಯಾವುದೂ ಕೂಡ ಅನುಪಪನ್ನವಾದುದು ಇರುವುದಿಲ್ಲ. ಈ ಅಭಿಪ್ರಾಯದಿಂದಲೇ ಟೀಕಾಚಾರ್ಯರು ಆಸ್ತಾಂ ಪ್ರಪಂಚಃ ಎಂದು ಹೇಳಿದ್ದಾರೆ.

****

## ಶ್ರೀಮದ್ವಾದಿರಾಜತೀರ್ಥಪೂಜ್ಯಚರಣರಿಂದ ವಿರಚಿತವಾದ

# ಯುಕ್ತಿಮಲ್ಲಿಕಾ

## ಗುಣಸೌರಭ

## ಪ್ರತಿಬಂಧಕನಾಶಕ್ಕಾಗಿ ಮಾತ್ರ ಸಾಕ್ಷಿಯ ವಿಮರ್ಶೆ

ನಿರೋಧಮಾತ್ರನಾಶಾಯ ನದೀರುದ್ಧೇನ ನೌರಿವ।
ಪರೀಕ್ಷಾಪೇಕ್ಷತೇ ಕ್ವಾಪಿ ತದಭಾವೇ ಸ್ವಯಂ ಪಟುಃ।
ನಹಿ ರಾಜಪಥೇ ಗಂತ್ರಾ ಗಮನೇ ನೌರಪೇಕ್ಷತೇ ||೩.೩೮||

ಅರ್ಥ - ನದೀರುದ್ಧೇನ = ನಡೆಯುವಾಗ ಅಡ್ಡವಾಗಿ ಬಂದ ನದಿಯಿಂದ ತಡೆಯಲ್ಪಟ್ಟವನಿಂದ, ನೌರಿವ = ನೌಕೆಯಂತೆ, ಕ್ವಾಪಿ ಕೆಲವೊಮ್ಮೆ, ನಿರೋಧಮಾತ್ರನಾಶಾಯ = ಪ್ರತಿಬಂಧಕದ ನಾಶಕ್ಕಾಗಿಯೇ, ಪರೀಕ್ಷಾ = ವಿಮರ್ಶೆಯು, (ಸಾಕ್ಷಿಣಾ) = ಅಪೇಕ್ಷ್ಯತೇ = ಸಾಕ್ಷಿಯಿಂದ ಅಪೇಕ್ಷಿಸಲ್ಪಡುತ್ತದೆ. ತದಭಾವೇ = ಪ್ರತಿಬಂಧಕಗಳು ಇಲ್ಲದಾದಾಗ, ಸ್ವಯಂ = ತಾನಾಗಿಯೇ, ಪಟುಃ =ಸಮರ್ಥವು. ರಾಜಪಥೇ = ರಾಜಮಾರ್ಗದಲ್ಲಿ, ಗಂತ್ರಾ = ಹೋಗವುವನಿಂದ, ಗಮನೇ = ತಾನೇ ಹೋಗಬೇಕಾದಲ್ಲಿ, ನೌಃ = ನೌಕೆಯು, ನಹಿ ಅಪೇಕ್ಷ್ಯತೇ = ಅರಸಲ್ಪಡುವುದಿಲ್ಲ.

**ಅನುವಾದ - ದಾರಿಹೋಕನಿಗೆ ನದಿಯು ಅಡ್ಡಬಂದಾಗ ನೌಕೆಯಂತೆ ಕೆಲವೊಮ್ಮೆ ಸಾಕ್ಷಿಯಿಂದಲೂ ಪ್ರತಿಬಂಧಕದ ನಾಶಕ್ಕಾಗಿಯಷ್ಟೇ ವಿಮರ್ಶೆಯು ಅಪೇಕ್ಷಿಸಲ್ಪಡುತ್ತದೆ. ಪ್ರತಿಬಂಧಕಗಳಿಲ್ಲದಿದ್ದಾಗ ಸಾಕ್ಷಿಯು ತಾನೇತಾನಾಗಿ ಪ್ರಾಮಾಣ್ಯಗ್ರಹಣಮಾಡಲುಸಮರ್ಥವಾಗಿದೆ. ರಾಜಮಾರ್ಗದಲ್ಲಿ ಹೋಗುವುವನೆಂದೂ ನೌಕೆಯನ್ನು ಅಪೇಕ್ಷಿಸುವುದಿಲ್ಲ ತಾನೆ.**

**ಸುರೋತ್ತಮತೀರ್ಥೀಯಮ್ - ನಿರೋಧನಾಶಮಾತ್ರಾಯ ನಿರೋಧಕದೋಷಶಂಕಾ ನಿರಾಸಮಾತ್ರಾಯ ನತು ಪ್ರಾಮಾಣ್ಯನಿಶ್ಚಯಾಯೇತ್ಯರ್ಥಃ । ಕ್ವಾಪಿ ಕ್ವಚಿತ್ಪರೀಕ್ಷಾ ತದ್ಭೋಗಜನ್ಯ ಸುಖಾನುಭವಾಖ್ಯಪ್ರವೃತ್ತಿಸಾಮರ್ಥ್ಯವಿಚಾರಃ ಅಪೇಕ್ಷ್ಯತ ಇತಿ ಸಂಬಂಧಃ । ತತ್ರ ದೃಷ್ಟಾಂತಃ – ನದೀರುದ್ಧೇನೇತಿ ॥ ನದೀರುದ್ಧೇನ ಗ್ರಾಮಂ ಜಿಗಮಿಷತಾ ಪುರುಷೇಣ ನೌರಿವೇತಿ । ತದಭಾವೇ ದೋಷಾದಿಪ್ರತಿಬಂಧಕಾಭಾವೇ । ತದಭಾವೇ ಸ್ವಯಂ ಪಟುರಿತ್ಯತ್ರಾರ್ಥಾಂತರನ್ಯಾಸಃ ॥ ನಹೀತಿ ॥ ರಾಜಪಥ ಇತ್ಯನೇನ ನದ್ಯಾದಿಪ್ರತಿಬಂಧಕಾಭಾವಂ ಸೂಚಯತಿ । ಗನ್ತ್ರಾ ಪುರುಷೇಣ ॥೩೩೮॥**

**ವಿವರಣೆ** - ಕೆಲವೊಮ್ಮೆ ದೂರದಲ್ಲಿ ವಸ್ತುವನ್ನು ಕಂಡಾಗ ಈ ಜ್ಞಾನವು ಸರಿಯೋ ತಪ್ಪೋ? ಎಂಬ ಮಾನಸಿಕ ಸಂದೇಹ ಬರುತ್ತದೆ. ಆಗ ಸಾಕ್ಷಿಯು ಈ ಸಂದೇಹದಿಂದ ಪ್ರತಿಬದ್ಧವಾಗಿ ಜ್ಞಾನಪ್ರಾಮಾಣ್ಯವನ್ನು ನಿರ್ಧರಿಸುವುದಿಲ್ಲ. ಅಂತಹ ಸಂದರ್ಭದಲ್ಲಿ ಹತ್ತಿರಹೋಗಿ ಸರಿಯೋ ತಪ್ಪೋ ? ಎಂದು ವಿಮರ್ಶೆ ನಡೆಸಬೇಕಾಗುತ್ತದೆ. ಈ ವಿಮರ್ಶೆಯನ್ನೇ ಪರೀಕ್ಷಾ ಎನ್ನಲಾಗುತ್ತದೆ. ಈ ಪರೀಕ್ಷೆಯಿಂದ ಸಂದೇಹವು ನಿವಾರಣೆಯಾದಾಗ ಸಾಕ್ಷಿಯು ಪ್ರಾಮಾಣ್ಯವನ್ನು ನಿರ್ಧರಿಸುತ್ತದೆ. ಇಷ್ಟುಮಾತ್ರದಿಂದ ಸಾಕ್ಷಿಯು ಪ್ರಾಮಾಣ್ಯವನ್ನು ನಿರ್ಧರಿಸಲು ಪರೀಕ್ಷೆಯ ಸಹಕಾರಬೇಕು ಎನ್ನಬಾರದು. ಇದಕ್ಕೆ ತತ್ತ್ವನಿರ್ಣಯಪ್ರಕರಣದಲ್ಲಿ ಆನೆಯ ನಡಿಗೆಗೆ ಗೋಕ್ಷುರಕವು ಪ್ರತಿಬಂಧಕವಾದಂತೆ ಎಂದು ದೃಷ್ಟಾಂತವನ್ನು ಕೊಡಲಾಗಿದೆ. ವಾದಿರಾಜರು ನಡೆಯುವ ವ್ಯಕ್ತಿಗೆ ನದಿ ಅಡ್ಡ ಬಂದಂತೆ, ಎಂಬ ದೃಷ್ಟಾಂತವನ್ನು ಕೊಟ್ಟಿದ್ದಾರೆ. ನಡಿಗೆ ನಮ್ಮ ಸಹಜಶಕ್ತಿ. ಆದರೆ ದಾರಿಗೆ ಅಡ್ಡವಾಗಿ ನದಿ ಬಂದರೆ ನೌಕೆ ಬೇಕಾಗುತ್ತದೆ. ಅಂದಮಾತ್ರಕ್ಕೆ ನಮ್ಮ ನಡಿಗೆಗೆ ನೌಕೆಯು ಕಾರಣ ಎನ್ನಲಾಗದು. ಏಕೆಂದರೆ ಯಾವ ತಡೆಯೂ ಇಲ್ಲದ ರಾಜಮಾರ್ಗದಲ್ಲಿ ನಡೆಯಬೇಕಾದರೆ ನೌಕೆಯ ಅಗತ್ಯವೇ ಇಲ್ಲ. ಅದರಂತೆ ಮಾನಸಿಕ ಸಂದೇಹನಿರಾಸಕ್ಕೆ ಮಾತ್ರ ಪರೀಕ್ಷೆಯ ಸಹಾಯ ಬೇಕಾಗುತ್ತದೆ. ಪ್ರಾಮಾಣ್ಯವನ್ನು ನಿರ್ಧರಿಸಲು ಸಾಕ್ಷಿಗೆ ಅದರ ಅಗತ್ಯವಿಲ್ಲ. ಇದನ್ನೇ ಶಾಸ್ತ್ರೀಯ ಭಾಷೆಯಲ್ಲಿ ಪರೀಕ್ಷೆಯು ಪ್ರತಿಬಂಧನಿರಾಸಕ, ಪ್ರಾಮಾಣ್ಯಗ್ರಹಣಕ್ಕೆ

ಕಾರಣವಲ್ಲ ಎನ್ನಲಾಗುತ್ತದೆ. ಇದನ್ನು ಆಚಾರ್ಯರು ವಿಷ್ಣುತತ್ತ್ವನಿರ್ಣಯದಲ್ಲಿ ಹೀಗೆ ಹೇಳಿದ್ದಾರೆ -

ಬುದ್ಧಿದೋಷನಿರಾಸಮಾತ್ರಕಾರಣತ್ವಾಗ್ ಯುಕ್ತೀನಾಂ.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - 'ತದ್ಭೋಗಜನ್ಯಸುಖಾನುಭವಾಖ್ಯ ಪ್ರವೃತ್ತಿಸಾಮರ್ಥ್ಯವಿಚಾರಃ - ಪರೀಕ್ಷಾ' ಎಂದರೆ ನೀರನ್ನು ದೂರದಿಂದ ಕಂಡು ಹತ್ತಿರಹೋಗಿ ಕುಡಿದು ಸುಖವನ್ನು ಅನುಭವಿಸುವುದು. ಇಂತಹ ಸುಖಾನುಭವವಾದರೆ ಮಾತ್ರ ನೀರಿನ ಜ್ಞಾನವು ಪ್ರಮಾಣವೆಂದು ನಿರ್ಧಾರವಾಗುತ್ತದೆ.

ಹಾಗಾದರೆ ಸಾಕ್ಷಿಯು ಪ್ರಾಮಾಣ್ಯವನ್ನು ನಿರ್ಧರಿಸಬೇಕಾದರೆ ಪ್ರತಿಬಂಧಕಗಳು ಇರಬಾರದು ಎಂದಾಯಿತು. ಅಲ್ಲಿಗೆ ಪ್ರತಿಬಂಧಕಾಭಾವವು ಸಾಕ್ಷಿಗೆ ಸಹಾಯ ಮಾಡುತ್ತದೆ. ಇದರಿಂದ ಅಸಹಾಯಕವಾಗಿ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಅದಕ್ಕೂ ಮತ್ತೊಂದರ ಸಹಾಯ ಬೇಕು ಎಂದಂತಾಯಿತು.

## ಪ್ರತಿಬಂಧಕಾಭಾವವು ಕಾರಣವಲ್ಲ

ನಿರೋಧಕೋऽಪಿ ಕಾರ್ಯಸ್ಯಾಭಾವಂ ಸಂಪಾದಯೇತ್ಪರಂ।
ತದಭಾವಸ್ಯಾಪಿ ಕಾರ್ಯೇ ಕಾರಣತ್ವಂ ನ ಶೋಭತೇ ॥೩೩೯॥

ಅರ್ಥ - ನಿರೋಧೇ ಅಪಿ = ಪ್ರತಿಬಂಧಕವೂ ಕೂಡ, ಪರಂ = ಹೆಚ್ಚೆಂದರೆ, ಕಾರ್ಯಸ್ಯ = ಕಾರ್ಯದ, ಅಭಾವಂ = ಅಭಾವವನ್ನು, ಸಂಪಾದಯೇತ್ = ಮಾಡೀತು. ತದಭಾವಸ್ಯಾಪಿ = ಪ್ರತಿಬಂಧಕಾಭಾವಕ್ಕೆ, ಕಾರ್ಯೇ ಕಾರಣತ್ವಂ = ಕಾರ್ಯವನ್ನು ಕುರಿತು ಕಾರಣತ್ವವು, ನ ಶೋಭತೇ = ಶೋಭಿಸುವುದಿಲ್ಲ.

ಅನುವಾದ - ಪ್ರತಿಬಂಧಕವೂ ಕೂಡ ಕಾರ್ಯದ ಅಭಾವವನ್ನು ಉಂಟುಮಾಡುತ್ತದೆ. ಅಷ್ಟುಮಾತ್ರಕ್ಕೆ ಪ್ರತಿಬಂಧಕಾಭಾವವನ್ನು ಕಾರ್ಯಕ್ಕೆ ಕಾರಣ ಎಂದು ಹೇಳುವುದು ಉಚಿತವಲ್ಲ.

ಸುರೋತ್ತಮತೀರ್ಥೀಯಮ್ - ಮಾಸ್ತು ತರ್ಹಿ ಪ್ರಾಮಾಣ್ಯನಿಶ್ಚಯಂ ಪ್ರತಿ ಪರೀಕ್ಷಾಪೇಕ್ಷಾ। ದೋಷಾಖ್ಯಪ್ರತಿಬಂಧಕಾಭಾವಸ್ಯ ತು ಕಾರಣತಾ ಸ್ಯಾತ್ । ದೋಷಾದ್ಯಪ್ರತಿರುದ್ಧಸ್ಯ

ಭವದ್ಭಿರಪ್ಯಂಗೀಕಾರಾದಿತ್ಯತ ಆಹ– ನಿರೋಧಕೋಽಪೀತಿ॥ ಕಾರ್ಯಸ್ಯ ಪ್ರಾಮಾಣ್ಯನಿಶ್ಚಯರೂಪಸ್ಯ। ತದಭಾವಸ್ಯಾಪಿ ಪ್ರತಿಬಂಧಕಾಭಾವಸ್ಯಾಪಿ ॥೩೬೯॥

ವಿವರಣೆ - ವಸ್ತುಗಳು ಕಾಣಿಸಲು ಕತ್ತಲೆಯು ಪ್ರತಿಬಂಧಕ. ಆದರೆ ವಸ್ತು ಕಾಣಿಸಲು ಕತ್ತಲೆಯ ಅಭಾವವು ಕಾರಣವಲ್ಲ. ಬೆಳಕು ಕಾರಣ. ಪ್ರತಿಬಂಧಕಾಭಾವವು ಕಾರ್ಯಕ್ಕೆ ಹೇತುವಲ್ಲ.

ಕಾರ್ಯ ಆಗದಿರಲು ಕಾರಣದ ಅಭಾವವೂ ಕಾರಣ. ಪ್ರತಿಬಂಧಕ ಇರುವುದೂ ಕಾರಣ. ಉದಾಹಣೆ - ಕಣ್ಣೇ ಇಲ್ಲದಿದ್ದರೂ ಕಾಣಿಸುವುದಿಲ್ಲ, ಕಣ್ಣಿದ್ದರೂ ಕತ್ತಲೆ ಇದ್ದಾಗ ವಸ್ತುಗಳು ಕಾಣುವುದಿಲ್ಲ. ಹೀಗೆ ಕಾರ್ಯವಾಗದಿರಲು ಕಾರಣಾಭಾವ ಮತ್ತು ಪ್ರತಿಬಂಧಕಸದ್ಭಾವ ಎರಡೂ ಹೇತುವಾಗುತ್ತವೆ. ಇದು ಶ್ಲೋಕದಲ್ಲಿರುವ 'ನಿರೋಧಕೋಽಪಿ' ಎಂಬ ಅಪಿ ಶಬ್ದದ ಅರ್ಥ.

ಪ್ರತಿಬಂಧಕಾಭಾವವು ಕಾರಣವೆಂದರೆ ಮುಂದಿನ ಶ್ಲೋಕಗಳಲ್ಲಿ ಬಾಧಕವನ್ನು ಹೇಳುತ್ತಾರೆ.

## ಪ್ರತಿಬಂಧಕ ಎಂದರೇನು ?

ರುಣದ್ಧಿ ಯದ್ಧಿ ಸಾಮಗ್ರೀಸತ್ವೇಽಪ್ಯಭಿಮತಂ ಫಲಂ।
ಬುದ್ಧೈಸ್ತದೇವ ಸರ್ವತ್ರ ಪ್ರತಿಬಂಧಕಮುಚ್ಯತೇ ॥೩೭೦॥

ಅರ್ಥ – ಬುಧೈಃ = ತಿಳಿದವರಿಂದ, ಯದ್ಧಿ = ಯಾವುದು ಸಾಮಗ್ರೀಸತ್ವೇ ಅಪಿ = ಕಾರ್ಯಕ್ಕೆ ಬೇಕಾಗಿರುವ ಎಲ್ಲ ಸಲಕರಣೆಗಳೂ ಇದ್ದಾಗ, ಅಭಿಮತಂ ಫಲಂ = ಇಷ್ಟವಾದ ಕಾರ್ಯವನ್ನು, ರುಣದ್ಧಿ = ತಡೆಯುವುದೋ, ತದೇವ = ಅದು ಮಾತ್ರ, ಸರ್ವತ್ರ = ಎಲ್ಲ ಕಡೆಗಳಲ್ಲೂ, ಪ್ರತಿಬಂಧಕಂ = ಪ್ರತಿಬಂಧಕವಾಗಿ, ಉಚ್ಯತೇ = ಹೇಳಲ್ಪಡುತ್ತದೆ.

ಅನುವಾದ – ಯಾವುದು ಕಾರ್ಯಕ್ಕೆ ಬೇಕಾದ ಎಲ್ಲಾ ಸಲಕರಣೆಗಳು ಇದ್ದರೂ ಅಭಿಮತವಾದ ಕಾರ್ಯವನ್ನು ಹುಟ್ಟದಂತೆ ತಡೆಯುತ್ತದೋ ಅದನ್ನೇ ಜ್ಞಾನಿಗಳು ಎಲ್ಲ ಕಡೆಯೂ ಪ್ರತಿಬಂಧಕವೆಂದು ಕರೆಯುತ್ತಾರೆ.

**ಸುರೋತ್ತಮತೀರ್ಥೀಯಮ್ – ಕುತೋ ನ ಶೋಭತ ಇತ್ಯತ ಆಹ – ರುಣದ್ಧೀತಿ ॥ ಯದ್ವಸ್ತು ಸಾಮಗ್ರೀಸತ್ತ್ವೇಽಪಿ ಕಾರಣಕಲಾಪಸತ್ತ್ವೇಽಪಿ । ಅಭಿಮತಂ ಫಲಂ ದಾಹಾದಿಕಮ್ । ತದೇವ ರೋಧಕಮಣ್ಯಾದಿವಸ್ವೇವ ಸರ್ವತ್ರ ಸರ್ವಕಾರ್ಯೇಷು । ತಥಾಚ ಪ್ರತಿಬಂಧಕಾಭಾವಸ್ಯ ನ ಕಾರಣಸಾಮಗ್ರ್ಯಪ್ರವೇಶಃ । ತಸ್ಯಾಪಿ ಕಾರಣಸಾಮಗ್ರ್ಯಾಂ ಪ್ರವೇಶೇ ಸಾಮಗ್ರ್ಯಭಾವೇನೈವ ಕಾರ್ಯಾಭಾವಾತ್ ಸಾಮಗ್ರೀಸತ್ತ್ವೇಽಪ್ಯಭಿಮತ-ಫಲರೋಧಕತ್ವಲಕ್ಷಣಂ ಪ್ರತಿಬಂಧಕಂ ಪ್ರತಿಬಂಧಕಾಭಿಮತಸ್ಯ ನ ಸ್ಯಾದಿತಿ ಭಾವಃ ॥೩೪೦॥**

ವಿವರಣೆ - ಒಂದು ವಸ್ತುವು ಹುಟ್ಟಲು ಬೇಕಾದ ಎಲ್ಲ ಸಾಮಗ್ರಿಗಳು ಇದ್ದರೂ ಯಾವುದರಿಂದಾಗಿ ಆ ವಸ್ತುವು ಹುಟ್ಟುವುದಿಲ್ಲವೋ ಅದು ಪ್ರತಿಬಂಧಕ. ಉದಾಹರಣೆ - ನೀರಿದೆ, ತಗ್ಗು ಇದೆ. ಆದರೂ ನೀರು ಹರಿಯುತ್ತಿಲ್ಲ. ಏಕೆಂದರೆ ಗೋಡೆ ಅಡ್ಡವಾಗಿದೆ. ಆದ್ದರಿಂದ ನೀರು ಹರಿಯಲು ಗೋಡೆಯು ಪ್ರತಿಬಂಧಕವಾಗಿದೆ. ನೀರಿದೆ, ತಗ್ಗಾದ ಜಾಗ ಇಲ್ಲ. ನೀರು ಏಕೆ ಹರಿಯುತ್ತಿಲ್ಲ? ಇದಕ್ಕೆ ಉತ್ತರ - ಪ್ರತಿಬಂಧಕವಿರುವುದರಿಂದ ನೀರು ಹರಿಯುತ್ತಿಲ್ಲ, ಎಂದಲ್ಲ. ಹರಿಯಲು ಬೇಕಾದ ಕಾರಣವಿಲ್ಲವಾದುದರಿಂದ ಹರಿಯುತ್ತಿಲ್ಲ ಎಂಬುದೇ ಸರಿಯಾದ ಉತ್ತರ.

ಹೀಗೆ ಈ ಶ್ಲೋಕದಲ್ಲಿ ಪ್ರತಿಬಂಧಕದ ಲಕ್ಷಣವನ್ನು ನಿರೂಪಿಸಲಾಗಿದೆ. ಇದರ ಪ್ರಕೃತೋಪಯೋಗವನ್ನು ವ್ಯಾಖ್ಯಾನದಲ್ಲಿ ವಿವರಿಸಲಾಗಿದೆ. ದಾಹಕ್ಕೆ ಮಣಿಯು ಪ್ರತಿಬಂಧಕ. ಮಣಿಯ ಅಭಾವವು ದಾಹಕ್ಕೆ ಕಾರಣ ಎನ್ನಬಾರದು. ಹಾಗೆ ಹೇಳಿದರೆ ಮಣಿಯಲ್ಲಿ ಪ್ರತಿಬಂಧಕದ ಲಕ್ಷಣವೇ ಬರಲಿಕ್ಕಿಲ್ಲ. ಏಕೆಂದರೆ, ಇಲ್ಲಿ ಕಾರ್ಯ - ದಾಹ. ದಾಹಕ್ಕೆ ಬೇಕಾದ ಸಕಲಸಾಮಗ್ರಿಗಳು ಎಂದರೆ ಬೆಂಕಿ. ವಸ್ತುವಿಗೆ ಬೆಂಕಿಯೊಂದಿಗೆ ಸಂಪರ್ಕ ಮತ್ತು ಮಣಿಯ ಅಭಾವ ಇವಿಷ್ಟು ಇದ್ದಾಗಲೂ ದಾಹ ಆಗದಿದ್ದಲ್ಲಿ ಮಾತ್ರ ಮಣಿಯು ಪ್ರತಿಬಂಧಕವೆಂದಾಗುತ್ತದೆ. ಆದರೆ ಇವಿಷ್ಟು ಇದ್ದಾಗ ದಾಹ ಆಗಿಯೇ ತೀರುತ್ತದೆ. ಆದ್ದರಿಂದ ಮಣ್ಯಭಾವವನ್ನು ದಾಹಕ್ಕೆ (ಸುಡಲು) ಕಾರಣ ಎನ್ನಬಾರದು. ಈಗ ಪ್ರತಿಬಂಧಕದ ಲಕ್ಷಣವನ್ನು ಮಣಿಯಲ್ಲಿ ತೋರಿಸಬಹುದು. ದಾಹಕ್ಕೆ ಕಾರಣ - ಬೆಂಕಿ. ವಸ್ತು ಮತ್ತು ಆ ವಸ್ತುವಿಗೆ ಬೆಂಕಿಯ ಸಂಪರ್ಕ, ಇವಿಷ್ಟು ಇದ್ದರೂ ಮಣಿ ಇದ್ದರೆ ದಾಹವಾಗುವುದಿಲ್ಲ. ಆದ್ದರಿಂದ ಮಣಿಯು ಪ್ರತಿಬಂಧಕ.

ಭವದ್ಭಿರಪ್ಯಂಗೀಕಾರಾದಿತ್ಯತ ಆಹ– ನಿರೋಧಕೋಽಪೀತಿ॥ ಕಾರ್ಯಸ್ಯ ಪ್ರಾಮಾಣ್ಯನಿಶ್ಚಯರೂಪಸ್ಯ। ತದಭಾವಸ್ಯಾಪಿ ಪ್ರತಿಬಂಧಕಾಭಾವಸ್ಯಾಪಿ ॥೩೩೯॥

ವಿವರಣೆ - ವಸ್ತುಗಳು ಕಾಣಿಸಲು ಕತ್ತಲೆಯು ಪ್ರತಿಬಂಧಕ. ಆದರೆ ವಸ್ತು ಕಾಣಿಸಲು ಕತ್ತಲೆಯ ಅಭಾವವು ಕಾರಣವಲ್ಲ. ಬೆಳಕು ಕಾರಣ. ಪ್ರತಿಬಂಧಕಾಭಾವವು ಕಾರ್ಯಕ್ಕೆ ಹೇತುವಲ್ಲ.

ಕಾರ್ಯ ಆಗದಿರಲು ಕಾರಣದ ಅಭಾವವೂ ಕಾರಣ. ಪ್ರತಿಬಂಧಕ ಇರುವುದೂ ಕಾರಣ. ಉದಾಹಣೆ - ಕಣ್ಣೇ ಇಲ್ಲದಿದ್ದರೂ ಕಾಣಿಸುವುದಿಲ್ಲ, ಕಣ್ಣಿದ್ದರೂ ಕತ್ತಲೆ ಇದ್ದಾಗ ವಸ್ತುಗಳು ಕಾಣುವುದಿಲ್ಲ. ಹೀಗೆ ಕಾರ್ಯವಾಗದಿರಲು ಕಾರಣಾಭಾವ ಮತ್ತು ಪ್ರತಿಬಂಧಕಸದ್ಭಾವ ಎರಡೂ ಹೇತುವಾಗುತ್ತವೆ. ಇದು ಶ್ಲೋಕದಲ್ಲಿರುವ 'ನಿರೋಧಕೋಽಪಿ' ಎಂಬ ಅಪಿ ಶಬ್ದದ ಅರ್ಥ.

ಪ್ರತಿಬಂಧಕಾಭಾವವು ಕಾರಣವೆಂದರೆ ಮುಂದಿನ ಶ್ಲೋಕಗಳಲ್ಲಿ ಬಾಧಕವನ್ನು ಹೇಳುತ್ತಾರೆ.

## ಪ್ರತಿಬಂಧಕ ಎಂದರೇನು ?

ರುಣದ್ಧಿ ಯದ್ಧಿ ಸಾಮಗ್ರೀಸತ್ತ್ವೇಽಪ್ಯಭಿಮತಂ ಫಲಂ।
ಬುಧೈಸ್ತದೇವ ಸರ್ವತ್ರ ಪ್ರತಿಬಂಧಕಮುಚ್ಯತೇ ॥೩೪೦॥

ಅರ್ಥ – ಬುಧೈಃ = ತಿಳಿದವರಿಂದ, ಯದ್ಧಿ = ಯಾವುದು ಸಾಮಗ್ರೀಸತ್ತ್ವೇ ಅಪಿ = ಕಾರ್ಯಕ್ಕೆ ಬೇಕಾಗಿರುವ ಎಲ್ಲ ಸಲಕರಣೆಗಳೂ ಇದ್ದಾಗ, ಅಭಿಮತಂ ಫಲಂ = ಇಷ್ಟವಾದ ಕಾರ್ಯವನ್ನು, ರುಣದ್ಧಿ = ತಡೆಯುವುದೋ, ತದೇವ = ಅದು ಮಾತ್ರ, ಸರ್ವತ್ರ = ಎಲ್ಲ ಕಡೆಗಳಲ್ಲೂ, ಪ್ರತಿಬಂಧಕಂ = ಪ್ರತಿಬಂಧಕವಾಗಿ, ಉಚ್ಯತೇ = ಹೇಳಲ್ಪಡುತ್ತದೆ.

ಅನುವಾದ – ಯಾವುದು ಕಾರ್ಯಕ್ಕೆ ಬೇಕಾದ ಎಲ್ಲಾ ಸಲಕರಣೆಗಳು ಇದ್ದರೂ ಅಭಿಮತವಾದ ಕಾರ್ಯವನ್ನು ಹುಟ್ಟದಂತೆ ತಡೆಯುತ್ತದೋ ಅದನ್ನೇ ಜ್ಞಾನಿಗಳು ಎಲ್ಲ ಕಡೆಯೂ ಪ್ರತಿಬಂಧಕವೆಂದು ಕರೆಯುತ್ತಾರೆ.

**ಸುರೋತ್ತಮತೀರ್ಥೀಯಮ್ – ಕುತೋ ನ ಶೋಭತ ಇತ್ಯತ ಆಹ – ರುಣದ್ಧೀತಿ ॥ ಯದ್ವಸ್ತು ಸಾಮಗ್ರಿಯಸತ್ವೇऽಪಿ ಕಾರಣಕಲಾಪಸತ್ವೇऽಪಿ । ಅಭಿಮತಂ ಫಲಂ ದಾಹಾದಿಕಮ್ । ತದೇವ ರೋಧಕಮಣ್ಯಾದಿವಸ್ವೇವ ಸರ್ವತ್ರ ಸರ್ವಕಾರ್ಯೇಷು । ತಥಾಚ ಪ್ರತಿಬಂಧಕಾಭಾವಸ್ಯ ನ ಕಾರಣಸಾಮಗ್ರ್ಯಪ್ರವೇಶಃ । ತಸ್ಯಾಪಿ ಕಾರಣಸಾಮಗ್ರ್ಯಾಂ ಪ್ರವೇಶೇ ಸಾಮಗ್ರ್ಯಭಾವೇನೈವ ಕಾರ್ಯಾಭಾವಾತ್ ಸಾಮಗ್ರೀಸತ್ವೇऽಪ್ಯಭಿಮತ-ಫಲರೋಧಕತ್ವಲಕ್ಷಣಂ ಪ್ರತಿಬಂಧಕಂ ಪ್ರತಿಬಂಧಕಾಭಿಮತಸ್ಯ ನ ಸ್ಯಾದಿತಿ ಭಾವಃ ॥೩೪೦॥**

ವಿವರಣೆ - ಒಂದು ವಸ್ತುವು ಹುಟ್ಟಲು ಬೇಕಾದ ಎಲ್ಲ ಸಾಮಗ್ರಿಗಳು ಇದ್ದರೂ ಯಾವುದರಿಂದಾಗಿ ಆ ವಸ್ತುವು ಹುಟ್ಟುವುದಿಲ್ಲವೋ ಅದು ಪ್ರತಿಬಂಧಕ. ಉದಾಹರಣೆ - ನೀರಿದೆ, ತಗ್ಗು ಇದೆ. ಆದರೂ ನೀರು ಹರಿಯುತ್ತಿಲ್ಲ. ಏಕೆಂದರೆ ಗೋಡೆ ಅಡ್ಡವಾಗಿದೆ. ಆದ್ದರಿಂದ ನೀರು ಹರಿಯಲು ಗೋಡೆಯು ಪ್ರತಿಬಂಧಕವಾಗಿದೆ. ನೀರಿದೆ, ತಗ್ಗಾದ ಜಾಗ ಇಲ್ಲ. ನೀರು ಏಕೆ ಹರಿಯುತ್ತಿಲ್ಲ? ಇದಕ್ಕೆ ಉತ್ತರ - ಪ್ರತಿಬಂಧಕವಿರುವುದರಿಂದ ನೀರು ಹರಿಯುತ್ತಿಲ್ಲ, ಎಂದಲ್ಲ. ಹರಿಯಲು ಬೇಕಾದ ಕಾರಣವಿಲ್ಲವಾದುದರಿಂದ ಹರಿಯುತ್ತಿಲ್ಲ ಎಂಬುದೇ ಸರಿಯಾದ ಉತ್ತರ.

ಹೀಗೆ ಈ ಶ್ಲೋಕದಲ್ಲಿ ಪ್ರತಿಬಂಧಕದ ಲಕ್ಷಣವನ್ನು ನಿರೂಪಿಸಲಾಗಿದೆ. ಇದರ ಪ್ರಕೃತೋಪಯೋಗವನ್ನು ವ್ಯಾಖ್ಯಾನದಲ್ಲಿ ವಿವರಿಸಲಾಗಿದೆ. ದಾಹಕ್ಕೆ ಮಣಿಯು ಪ್ರತಿಬಂಧಕ. ಮಣಿಯ ಅಭಾವವು ದಾಹಕ್ಕೆ ಕಾರಣ ಎನ್ನಬಾರದು. ಹಾಗೆ ಹೇಳಿದರೆ ಮಣಿಯಲ್ಲಿ ಪ್ರತಿಬಂಧಕದ ಲಕ್ಷಣವೇ ಬರಲಿಕ್ಕಿಲ್ಲ. ಏಕೆಂದರೆ, ಇಲ್ಲಿ ಕಾರ್ಯ - ದಾಹ. ದಾಹಕ್ಕೆ ಬೇಕಾದ ಸಕಲಸಾಮಗ್ರಿಗಳು ಎಂದರೆ ಬೆಂಕಿ. ವಸ್ತುವಿಗೆ ಬೆಂಕಿಯೊಂದಿಗೆ ಸಂಪರ್ಕ ಮತ್ತು ಮಣಿಯ ಅಭಾವ ಇವಿಷ್ಟು ಇದ್ದಾಗಲೂ ದಾಹ ಆಗದಿದ್ದಲ್ಲಿ ಮಾತ್ರ ಮಣಿಯು ಪ್ರತಿಬಂಧಕವೆಂದಾಗುತ್ತದೆ. ಆದರೆ ಇವಿಷ್ಟು ಇದ್ದಾಗ ದಾಹ ಆಗಿಯೇ ತೀರುತ್ತದೆ. ಆದ್ದರಿಂದ ಮಣ್ಯಭಾವವನ್ನು ದಾಹಕ್ಕೆ (ಸುಡಲು) ಕಾರಣ ಎನ್ನಬಾರದು. ಈಗ ಪ್ರತಿಬಂಧಕದ ಲಕ್ಷಣವನ್ನು ಮಣಿಯಲ್ಲಿ ತೋರಿಸಬಹುದು. ದಾಹಕ್ಕೆ ಕಾರಣ - ಬೆಂಕಿ. ವಸ್ತು ಮತ್ತು ಆ ವಸ್ತುವಿಗೆ ಬೆಂಕಿಯ ಸಂಪರ್ಕ, ಇವಿಷ್ಟು ಇದ್ದರೂ ಮಣಿ ಇದ್ದರೆ ದಾಹವಾಗುವುದಿಲ್ಲ. ಆದ್ದರಿಂದ ಮಣಿಯು ಪ್ರತಿಬಂಧಕ.

ಪ್ರಕೃತದಲ್ಲಿ, ಸಾಕ್ಷಿಯು ಪ್ರಾಮಾಣ್ಯವನ್ನು ನಿಶ್ಚಯಿಸಲು ದೋಷಗಳು ಪ್ರತಿಬಂಧಕ. ಏಕೆಂದರೆ, ಜ್ಞಾನ, ಸಾಕ್ಷಿ ಇವೆರಡೂ ಇದ್ದಾಗಲೂ ದೋಷವಿದ್ದರೆ ಸಾಕ್ಷಿಯು ಪ್ರಾಮಾಣ್ಯವನ್ನು ನಿರ್ಧರಿಸುವುದಿಲ್ಲ. ಆದ್ದರಿಂದ ದೋಷವು ಪ್ರತಿಬಂಧಕ. ಒಂದು ವೇಳೆ ದೋಷಾಭಾವವೂ ಪ್ರಾಮಾಣ್ಯನಿಶ್ಚಯಕ್ಕೆ ಕಾರಣವಾದರೆ ಪ್ರತಿಬಂಧಕದ ಲಕ್ಷಣವನ್ನು ದೋಷದಲ್ಲಿ ಸಮನ್ವಯ ಮಾಡಲಾಗದು. ಆದ್ದರಿಂದ ದೋಷಾಭಾವವು ಕಾರಣವಲ್ಲ.

## ಸುಡುವ ಶಕ್ತಿ ಬೆಂಕಿಗೆ ಸಹಜವಾಗಿದೆ

ಉಷ್ಣಸ್ಪರ್ಶಭರೇಣೋಗ್ರಃ ಶಕ್ತೋ ದಗ್ಧುಂ ಹಿ ಪಾವಕಃ।
ಮಂತ್ರಾದಿಪ್ರತಿಬದ್ಧಸ್ತು ನ ದಹೇದನ್ಯಥಾ ದಹೇತ್ ॥೩೪೦॥

ಅರ್ಥ – ಉಷ್ಣಸ್ಪರ್ಶಭರೇಣ = ತನ್ನಲ್ಲಿರುವ ಬಿಸಿಯಿಂದಾಗಿ, ಉಗ್ರಃ ಪಾವಕಃ = ಭಯಂಕರವಾದ ಬೆಂಕಿಯು, ದಗ್ಧುಂ = ಸುಡಲು, ಶಕ್ತಃ = ಸಮರ್ಥವಾಗಿದೆ. ಮಂತ್ರಾದಿಪ್ರತಿಬದ್ಧಸ್ತು = ಮಣಿ ಅಥವಾ ಮಂತ್ರಗಳಿಂದ ತಡೆಯಲ್ಪಟ್ಟಾಗ, ನ ದಹೇತ್ = ಸುಡುವುದಿಲ್ಲ. ಅನ್ಯಥಾ = ಇಲ್ಲವಾದರೆ, ದಹೇದ್ದಿ = ಸುಡುತ್ತದೆಯಷ್ಟೇ.

ಅನುವಾದ – ಉಗ್ರವಾದ ಬೆಂಕಿಯು ಉಷ್ಣಸ್ಪರ್ಶವಿರುವ ಕಾರಣದಿಂದಾಗಿ ಸ್ವಾಭಾವಿಕವಾಗಿ ಸುಡುತ್ತದೆ. ಅದೇ ಬೆಂಕಿಯು ಮಣಿ ಮಂತ್ರಾದಿಗಳಿಂದ ಪ್ರತಿಬದ್ಧವಾದರೆ ಸುಡುವುದಿಲ್ಲ. ಅಂತಹ ಪ್ರತಿಬಂಧಕಗಳು ಇಲ್ಲದಿರುವಾಗ ಸುಡುತ್ತದೆಯಷ್ಟೇ!

ಸುರೋತ್ತಮತೀರ್ಥೀಯಮ್ – ತದುಪಪಾದಯತಿ – ಉಷ್ಣಸ್ಪರ್ಶೇತಿ ॥ ಉಷ್ಣಸ್ಪರ್ಶಭರೇಣ ಸ್ವಯಮೇವ ದಗ್ಧುಂ ಶಕ್ತಃ ಪಾವಕೋ ಮನ್ತ್ರಾದಿಪ್ರತಿಬದ್ಧಸ್ತು ನ ದಹೇತ್ । ಅನ್ಯದಾ ಮನ್ತ್ರಾದಿಪ್ರತಿಬಂಧಕಾಭಾವೇ ಉಷ್ಣಸ್ಪರ್ಶಭರೇಣೈವ ದಹೇದ್ಧೀತಿ ಪೂರ್ವಪದಾವೃತ್ತ್ಯಾ ಯೋಜನಾ ॥೩೪೦॥

ವಿವರಣೆ – ಸುಡುವ ಶಕ್ತಿ ಬೆಂಕಿಗೆ ಸಹಜವಾಗಿಯೇ ಇದೆ, ಆದರೆ ಸೂರ್ಯಕಾಂತ ಮಣಿ ಅಥವಾ ಅಗ್ನಿಸ್ತಂಭನವಿದ್ಯೆ ಇವುಗಳಿದ್ದಾಗ ಅದು ಸುಡುವುದಿಲ್ಲ. ಇದರಿಂದ ಅಗ್ನಿಯಿಂದಾಗುವ ದಾಹಕ್ಕೆ ಮಣಿ ಮಂತ್ರಾದಿಗಳು ಪ್ರತಿಬಂಧಕಗಳೆಂದು ತಿಳಿಯುತ್ತದೆ. ಅಷ್ಟುಮಾತ್ರಕ್ಕೆ ಬೆಂಕಿಗೆ ಸುಡುವ ಶಕ್ತಿಯು ಅಸಹಜ, ಪ್ರತಿಬಂಧಕಾಭಾವವು ದಾಹಕ್ಕೆ

ಕಾರಣವೆಂದೇನೂ ಆಗುವುದಿಲ್ಲ. ಅದರಂತೆ, ಸಾಕ್ಷಿಗೆ ಪ್ರಾಮಾಣ್ಯಗ್ರಹಣಶಕ್ತಿಯು ಸಹಜವಾದುದು. ದೋಷಾದಿಗಳು ಅದಕ್ಕೆ ಪ್ರತಿಬಂಧಕಗಳು. ದೋಷಾಭಾವವು ಕಾರಣವಲ್ಲ.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - ಸುರೋತ್ತಮರು ಶ್ಲೋಕದ ಪದಾವೃತ್ತಿ ಮಾಡಿ ಅನ್ವಯವನ್ನು ತೋರಿಸಿದ್ದಾರೆ. ಅನ್ಯಥಾ - ಮಂತ್ರಾದಿಪ್ರತಿಬಂಧಕಾಭಾವೇ, ಉಷ್ಣಸ್ಪರ್ಶಭರೇಣೈವ ದಹೇದ್ಧಿ ಇತಿ ಪೂರ್ವಪದಾವೃತ್ತ್ಯಾ ಯೋಜನಾ.

ಪ್ರತಿಬಂಧಕದ ಲಕ್ಷಣ - ಕಾರಣೀಭೂತ ಅಭಾವಪ್ರತಿಯೋಗಿತ್ವಂ, ದಾಹಕ್ಕೆ ಮಣಿಯ ಅಭಾವವು ಕಾರಣ. ಅಂತಹ ಅಭಾವಕ್ಕೆ ಪ್ರತಿಯೋಗಿ ಮಣಿ. ಆದ್ದರಿಂದ ಮಣಿಯು ಪ್ರತಿಬಂಧಕ. ಹೀಗೆ ಮಣಿಯು ಪ್ರತಿಬಂಧಕವಾಗಬೇಕಾದರೆ ಮಣಿಯ ಅಭಾವವು ಕಾರಣವಾಗಲೇಬೇಕಾಗುತ್ತದೆ. ಆದ್ದರಿಂದ ಪ್ರತಿಬಂಧಕಾಭಾವವನ್ನು ಕಾರಣವೆಂದು ಹೇಳಲೇಬೇಕು. ಈ ಆಕ್ಷೇಪಕ್ಕೆ ಉತ್ತರಿಸುತ್ತಾರೆ.

## ಪ್ರತಿಬಂಧಕತ್ವ ಎಂದರೆ ಕಾರಣೀಭೂತಾಭಾವಪ್ರತಿಯೋಗಿತ್ವ ಅಲ್ಲ

**ಯತ್ ಪ್ರಾಗಭಾವಾದುದಯನ್ ಘಟೋ ನ ಸ್ವನಿರೋಧಕೃತ್ ।**
**ಯತಸ್ತಂತು ವಿನಾಶೇನ ಪಟನಾಶೇನ ತಂತುಷು ।**
**ತದ್‌ರೋದ್ಧೃತಾ ಯತಶ್ಚೇಶೋ ನಿತ್ಯಃ ಕ್ಷ್ಮಾಪಾತರೋಧಕೃತ್ ॥೩೪೨॥**

ಅರ್ಥ – ಯತ್ = ಯಾವಕಾರಣದಿಂದ, ಪ್ರಾಗಭಾವಾತ್ = ತನ್ನ ಪ್ರಾಗಭಾವದಿಂದ, ಉದಯನ್ = ಹುಟ್ಟುವ, ಘಟಃ = ಮಡಿಕೆಯು, ಸ್ವನಿರೋಧಕೃತ್ = ತನಗೆ ತಾನೇ ಪ್ರತಿಬಂಧಕವು, ನ = ಅಲ್ಲ. ಯತಃ = ಯಾವ ಕಾರಣದಿಂದ, ತಂತುವಿನಾಶೇನ = ನೂಲಿನ ನಾಶದಿಂದ, ಪಟನಾಶೇ = ಬಟ್ಟೆಯು ನಾಶವಾದಾಗ, ತಂತುಷು = ನೂಲುಗಳಲ್ಲಿ, ತದ್ ರೋದ್ಧತಾ = ಪಟಪ್ರತಿಬಂಧಕತ್ವವು, ನ = ಇಲ್ಲ.

ಯತಶ್ಚ = ಯಾವಕಾರಣದಿಂದ, ನಿತ್ಯಃ = ನಿತ್ಯನಾದ, ಈಶಃ = ಪರಮಾತ್ಮನು, ಕ್ಷ್ಮಾಪಾತರೋಧಕೃತ್ = ಭೂಮಿಯ ಪತನಕ್ಕೆ ಪ್ರತಿಬಂಧಕನಾಗಿದ್ದಾನೆ. ಆದ್ದರಿಂದ ಕಾರಣೀಭೂತಾಭಾವಪ್ರತಿಯೋಗಿತ್ವವು ಪ್ರತಿಬಂಧಕದ ಲಕ್ಷಣವಲ್ಲ.

ಅನುವಾದ – ಯಾವ ಕಾರಣದಿಂದ ತನ್ನ ಪ್ರಾಗಭಾವದಿಂದ ಹುಟ್ಟಿರುವ ಘಟವು ತನಗೆ ತಾನೇ ಪ್ರತಿಬಂಧಕವಲ್ಲವೋ. ಯಾವ ಕಾರಣದಿಂದ ತಂತುನಾಶದಿಂದ ಪಟನಾಶವಾದಾಗ ತಂತುವು ಪಟಕ್ಕೆ ಪ್ರತಿಬಂಧಕವಲ್ಲವೋ, ಯಾವ ಕಾರಣದಿಂದ ನಿತ್ಯನಾದ ಪರಮಾತ್ಮನು ವರಾಹರೂಪದಿಂದ ಭೂಪತನಕ್ಕೆ ಪ್ರತಿಬಂಧಕನಾಗಿರುವನೋ, ಆ ಕಾರಣಗಳಿಂದಾಗಿ ಕಾರಣೀಭೂತಾಭಾವಪ್ರತಿಯೋಗಿತ್ವಂ ಪ್ರತಿಬಂಧಕತ್ವಂ ಎಂದು ಹೇಳಬಾರದು.

ಸುರೋತ್ತಮತೀರ್ಥೀಯಮ್ – ನನು ಸತಿ ಪುಷ್ಕಲಕಾರಣೇ ಕಾರ್ಯಾಭಾವಸಂಪಾದಕಂ ಪ್ರತಿಬಂಧಕತ್ವಮಿತಿ ಪ್ರತಿಬಂಧಕಲಕ್ಷಣಂ ಚೇತ್ ಸ್ಯಾದೇವ ಪ್ರತಿಬಂಧಕಾಭಾವಸ್ಯ ಕಾರಣಕೋಟಾವಪ್ರವೇಶಃ । ಕಾರಣೀಭೂತಾಭಾವಪ್ರತಿಯೋಗಿತ್ವಂ ಪ್ರತಿಬಂಧಕತ್ವಮಿತಿ ಪಕ್ಷೇ ಕಥಮುಕ್ತೋ ದೋಷ ಇತ್ಯತಸ್ತಲ್ಲಕ್ಷಣಂ ದೂಷಯತಿ – ಯದಿತಿ ॥ ಯದ್ಯಸ್ಮಾತ್ಕಾರಣಾತ್ ಪ್ರಾಗಭಾವಾತ್ಸ್ವಪ್ರಾಗಭಾವಾದ್ ಉದಯನ್ನುತ್ಪದ್ಯಮಾನಃ ನ ಸ್ವನಿರೋಧಕೃತ್ ಸ್ವಪ್ರತಿಬಂಧಕೋ ನೇತಿ ಸಂಬಂಧಃ । ನಹಿ ಸ್ವಕಾರಣೀಭೂತಸ್ವಪ್ರಾಗಭಾವಪ್ರತಿಯೋಗೀ ಘಟಃ ಪ್ರತಿಬಂಧಕ ಇತ್ಯುಚ್ಯತೇ ಲೋಕೈಃ। ತಥಾಚ ತ್ವದುಕ್ತಲಕ್ಷಣಂ ಘಟೇಽತಿವ್ಯಾಪ್ತಮಿತಿ ಭಾವಃ। ಸ್ಥಲಾಂತರೇಽಪ್ಯತಿವ್ಯಾಪ್ತಿಂ ದರ್ಶಯತಿ – ಯತ ಇತಿ ॥ ಯತೋ ಯಸ್ಮಾತ್ಕಾರಣಾತ್ । ತಂತುನಾಶೇನ ಪಟನಾಶೇ ಜಾಯಮಾನೇ ಸತಿ ಪಟನಾಶಕಾರಣೀಭೂತಾಭಾವಃ ತಂತುನಾಶಸ್ತತ್ಪ್ರತಿಯೋಗಿತ್ವಂ ತಂತುಷ್ವಸ್ತೀತಿ ಹೇತೋಃ ತಂತೂನಾಂ ತದ್ರೋದ್ಧೃತಾ ಪಟನಾಶರೋದ್ಧೃತಾ ನೇತಿ ಸಂಬಂಧಃ । ತಂತುಷು ಸತ್ಸ್ವೇವ ತಂತುಸಂಯೋಗ-ನಾಶಜನ್ಯಪಟನಾಶಸ್ಯ ಜಾಯಮಾನತ್ವೇನ ತಂತೂನಾಂ ಪಟನಾಶಂ ಪ್ರತ್ಯಪ್ರತಿಬಂಧಕತ್ವಾತ್ । ತಥಾಚ ಪಟನಾಶಕಾರಣೀಭೂತತಂತುಧ್ವಂಸಪ್ರತಿಯೋಗಿಷು ಪಟನಾಶಾಪ್ರತಿಬಂಧಕೇಷು ಚ ತಂತುಷ್ವತಿವ್ಯಾಪ್ತಂ ಪರೋಕ್ತಲಕ್ಷಣಮಿತಿ ಭಾವಃ । ಅತಿವ್ಯಾಪ್ತಿಮುಕ್ತ್ವಾಽವ್ಯಾಪ್ತಿಮಪ್ಯಾಹ – ಯತಶ್ಚೇತಿ ॥ ನಿತ್ಯ ಇತ್ಯನೇನ ಕಾರಣೀಭೂತಾಭಾವಪ್ರತಿಯೋಗಿತ್ವಮೀಶ್ವರಸ್ಯ ನಾಸ್ತೀತಿ ದ್ಯೋತಯತಿ । ಕ್ಷ್ಮಾಪಾತರೋಧಕೃತ್ ಕೂರ್ಮರೂಪೇಣಾಸುಭೂಪತನಪ್ರತಿಬಂಧಕೃತ್ । ತಥಾಚ ಭೂಪತನಪ್ರತಿಬಂಧಕೇ ತ್ವದುಕ್ತಲಕ್ಷಣಾಭಾವಾದವ್ಯಾಪ್ತಿರಿತಿ ಭಾವಃ ॥೩೪೨॥

ವಿವರಣೆ – ಹಿಂದೆ ಹೇಳಿದ ಪ್ರತಿಬಂಧಕಲಕ್ಷಣದ ಪ್ರಕಾರ ಪ್ರತಿಬಂಧಕಾಭಾವವು ಕಾರಣಸಾಮಾಗ್ರಿಯಲ್ಲಿ ಸೇರುವುದಿಲ್ಲ. ಆದರೆ ನೈಯಾಯಿಕರು ಕಾರಣೀಭೂತಾಭಾವಪ್ರತಿಯೋಗಿತ್ವಂ ಎಂದು ಪ್ರತಿಬಂಧಕದ ಲಕ್ಷಣವನ್ನು ಹೇಳುತ್ತಾರೆ. ಯಾವುದು ಇಲ್ಲದಿರುವಾಗ ಮಾತ್ರ ಕಾರ್ಯವು ಹುಟ್ಟುವುದೋ, ಅದು ಪ್ರತಿಬಂಧಕ. ಮಣಿ ಇಲ್ಲದಿರುವಾಗಲೇ ದಾಹವು ಉಂಟಾಗುತ್ತದೆ. ಆದ್ದರಿಂದ ಮಣಿಯು ಪ್ರತಿಬಂಧಕ.

ಈ ಲಕ್ಷಣದಂತೆ ಪ್ರತಿಬಂಧಕಾಭಾವವು ಕಾರ್ಯಕ್ಕೆ ಹೇತು ಎಂದು ಹೇಳಲೇಬೇಕಾಗುತ್ತದೆ. ಇದು ನೈಯಾಯಿಕರ ಆಕ್ಷೇಪ.

ನೈಯಾಯಿಕರು ಹೇಳುವ ಈ ಪ್ರತಿಬಂಧಕ ಲಕ್ಷಣಕ್ಕೆ ಎರಡು ಕಡೆ ಅತಿವ್ಯಾಪ್ತಿಯನ್ನೂ, ಒಂದು ಕಡೆ ಅವ್ಯಾಪ್ತಿಯನ್ನೂ ತೋರಿಸಲಾಗಿದೆ.

ಅತಿವ್ಯಾಪ್ತಿ - 1. ಘಟಕ್ಕೆ ಘಟಪ್ರಾಗಭಾವವು ಕಾರಣ. ಅಲ್ಲಿ ಕಾರಣೀಭೂತಾವಾದ ಅಭಾವಕ್ಕೆ ಪ್ರತಿಯೋಗಿಯಾಗಿದೆ ಘಟ. ಆದರೆ ಘಟಕ್ಕೆ ಘಟವು ಪ್ರತಿಬಂಧಕವಲ್ಲ.

ಅತಿವ್ಯಾಪ್ತಿ - 2. ಪಟನಾಶಕ್ಕೆ ಕಾರಣವಾದುದು ತಂತುನಾಶ. ಅದಕ್ಕೆ ಪ್ರತಿಯೋಗೀ ತಂತು. ಆದರೆ ತಂತುವು ಪಟನಾಶಕ್ಕೆ ಪ್ರತಿಬಂಧಕವಲ್ಲ.

ಅವ್ಯಾಪ್ತಿ - ಭೂಗೋಳವು ಪ್ರಲಯೋದಕದಲ್ಲಿ ಬೀಳದಂತೆ ಕೂರ್ಮರೂಪದಿಂದ ಪರಮಾತ್ಮನು ತಡೆದಿದ್ದಾನೆ. ಅವನು ಭೂಗೋಳದ ಪತನಕ್ಕೆ ಪ್ರತಿಬಂಧಕ. ಆದರೆ ಅವನಲ್ಲಿ ಕಾರಣೀಭೂತ ಅಭಾವಪ್ರತಿಯೋಗಿತ್ವ ಎಂಬ ತಾರ್ಕಿಕರು ಹೇಳುವ ಪ್ರತಿಬಂಧಕದ ಲಕ್ಷಣವು ಇಲ್ಲ. ಏಕೆಂದರೆ, ಪರಮಾತ್ಮನು ನಿತ್ಯನಾದುದದರಿಂದ ಅವನು ಅಭಾವಕ್ಕೆ ಪ್ರತಿಯೋಗಿಯಲ್ಲ.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - ತದ್‌ರೋಧೃತಾ - ಪಟನಾಶರೋದ್ಧೃತಾ ನೇತಿ ಸಂಬಂಧಃ। ತದ್‌ರೋದ್ಧೃತಾ ಎಂಬುದು ಸಮಸ್ತಪದ. ತಸ್ಯ ರೋದ್ಧೃತಾ ಎಂದು ಸಮಾಸ. ಪಟನಾಶಪ್ರತಿಬಂಧಕತ್ವವು ತಂತುವಿಗೆ ಇಲ್ಲ. ಏಕೆಂದರೆ ತಂತುಸಂಯೋಗನಾಶದಿಂದ ಪಟನಾಶವಾದಾಗ ತಂತುವು ನಾಶವಾಗದೇ ಉಳಿದಿರುತ್ತದೆ. ಆದರೂ ಪಟವು ನಾಶವಾಗುತ್ತದೆ. ಆದ್ದರಿಂದ ತಂತು ಪಟನಾಶಕ್ಕೆ ಪ್ರತಿಬಂಧಕವಲ್ಲ.

ಕ್ಷ್ಮಾಪಾತರೋಧಕೃತ್ - ಕೂರ್ಮರೂಪೇಣ ಅಪ್ಸು ಭೂಪತನಪ್ರತಿಬಂಧಕೃತ್। ಪರಮಾತ್ಮನು ಕೂರ್ಮರೂಪವನ್ನು ಧರಿಸಿ ಪ್ರಲಯೋದಕದಲ್ಲಿ ಭೂಮಿಯು ಮುಳುಗದಂತೆ ತಡೆಹಿಡಿದಿರುತ್ತಾನೆ.

# ಹಾಗಾದಲ್ಲಿ ಅವ್ಯಾಪ್ತಿ ಅತಿವ್ಯಾಪ್ತಿ

**ಅತೋ ನ ಕಾರಣೀಭೂತಾಭಾವಸ್ಯ ಪ್ರತಿಯೋಗಿತಾ ।**
**ಪ್ರತಿಬಂಧಕತಾ ಕಿಂತು ಪೂರ್ವೋಕ್ತೈವ ಸತಾಂ ಮತಾ ॥೩೪೩॥**

ಅರ್ಥ – ಅತಃ = ಅತಿವ್ಯಾಪ್ತಿ ಮತ್ತು ಅವ್ಯಾಪ್ತಿ ದೋಷಗಳು ಇರುವ ಕಾರಣದಿಂದಾಗಿ, ಕಾರಣೀಭೂತಾಭಾವಪ್ರತಿಯೋಗಿತಾ = ಕಾರಣವಾದ ಅಭಾವಕ್ಕೆ ಪ್ರತಿಯೋಗಿಯಾಗಿರುವುದು, ಪ್ರತಿಬಂಧಕತಾ = ಪ್ರತಿಬಂಧಕತ್ವವು, ನ = ಅಲ್ಲ. ಕಿಂತು = ಹೊರತಾಗಿ, ಪೂರ್ವೋಕ್ತೈವ = ನಾವು ಹಿಂದೆ ಹೇಳಿದ ರೀತಿಯ ಪ್ರತಿಬಂಧಕತ್ವವೇ, ಸತಾಂ = ಸಜ್ಜನರಿಗೆ, ಮತಾ = ಅಭಿಮತವಾಗಿದೆ.

**ಅನುವಾದ – ಅತಿವ್ಯಾಪ್ತಿ ಅವ್ಯಾಪ್ತಿ ದೋಷಗಳಿರುವ ಪ್ರಯುಕ್ತ ಕಾರಣೀಭೂತಾಭಾವ ಪ್ರತಿಯೋಗಿತ್ವವನ್ನು ಪ್ರತಿಬಂಧಕತ್ವ ಎನ್ನಬಾರದು. ನಾವು ಹೇಳಿದ ಪ್ರತಿಬಂಧಕತ್ವವನ್ನೇ ಅಂಗೀಕರಿಸಬೇಕು.**

**ಸುರೋತ್ತಮತೀರ್ಥೀಯಮ್ – ಅತಃ ಅವ್ಯಾಪ್ತ್ಯತಿವ್ಯಾಪ್ತ್ಯಾದಿದೋಷಗ್ರಸ್ತತ್ವಾದಿತ್ಯರ್ಥಃ । ಪೂರ್ವೋಕ್ತೈವ ರುಣದ್ಧೀತಿ ಪೂರ್ವವಾಕ್ಯೋಕ್ತೈವ ॥೩೪೩॥**

ವಿವರಣೆ – 'ಕಾರಣೀಭೂತಾಭಾವಪ್ರತಿಯೋಗಿತ್ವಂ ಪ್ರತಿಬಂಧಕತ್ವಂ' ಎಂದು ಹೇಳಿದರೆ ಹಿಂದೆ ಹೇಳಿದ ಅತಿವ್ಯಾಪ್ತಿ ಅವ್ಯಾಪ್ತಿದೋಷಗಳು ಬರುತ್ತವೆ. ಆದ್ದರಿಂದ ಅದು ಪ್ರತಿಬಂಧಕತ್ವದ ಸ್ವರೂಪವಲ್ಲ. ನಾವು ಹೇಳಿದಂತೆ ಕಾರ್ಯೋತ್ಪಾದಕಸಕಲಸಾಮಗ್ರೀಸತ್ವೇ ಯತ್ಸತ್ವೇ ಕಾರ್ಯಂ ನೋತ್ಪದ್ಯತೇ ತತ್ ಪ್ರತಿಬಂಧಕಂ ಎಂದೇ ಪ್ರತಿಬಂಧಕದ ಲಕ್ಷಣವನ್ನು ಹೇಳಬೇಕು. ಆದ್ದರಿಂದ ಪ್ರಾಮಾಣ್ಯಗ್ರಹಣಪ್ರತಿಬಂಧಕವಾದ ದೋಷಾಭಾವವು ಪ್ರಾಮಾಣ್ಯಗ್ರಹಣಕ್ಕೆ ಕಾರಣವಲ್ಲ.

ಪೂರ್ವೋಕ್ತೈವ - ಹಿಂದೆ 340ನೇ ಶ್ಲೋಕದಲ್ಲಿ ಹೇಳಿದ ರುಣದ್ಧಿ ಯದ್ಧಿ ಸಾಮರ್ಥ್ಯಂ ಎಂಬುದೇ ಪ್ರತಿಬಂಧಕದ ಲಕ್ಷಣ.

ನೀವು ಹೇಳಿದ ಪ್ರತಿಬಂಧಕಲಕ್ಷಣವೂ ಸರಿಯಲ್ಲ. ಏಕೆಂದರೆ, ಆ ಲಕ್ಷಣವು ಪ್ರತಿಬಂಧಕಾದೃಷ್ಟದಲ್ಲಿ ಇಲ್ಲ. ಪ್ರತಿಬಂಧಕವಾದ ಅದೃಷ್ಟವು ಕಾರ್ಯಕ್ಕೆ ಬೇಕಾದ ಕಾರಣಕಲಾಪಗಳನ್ನು ಇರದಂತೆ ಮಾಡುತ್ತದೆ. ಅಂತಹ ಅದೃಷ್ಟದಲ್ಲಿ ಸತಿ ಪುಷ್ಕಲಕಾರಣೇ

ಇತ್ಯಾದಿ ಪ್ರತಿಬಂಧಕಲಕ್ಷಣವು ಬರುವುದಿಲ್ಲ. ಆದಕ್ಕೆ ಪರಿಹಾರವನ್ನು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ -

## ಪಾಪಾದಿಗಳು ಅಮುಖ್ಯಪ್ರತಿಬಂಧಕಗಳು

ಮಣ್ಯಾದಿರ್ಮುಖ್ಯತೋ ರೋದ್ಧಾ ತಸ್ಯೈವಾದರ್ಶಿತಕ್ಷಣಮ್ ।
ಹೇತೋರ್ವಿಘಟಕಾದೃಷ್ಟಂ ತ್ವಮುಖ್ಯಂ ತನ್ನ ಲಕ್ಷಿತಮ್ ॥ ೩೪೪ ॥

ಅರ್ಥ – ಮುಖ್ಯತಃ = ಮುಖ್ಯವಾಗಿ, ರೋದ್ಧಾ = ಪ್ರತಿಬಂಧಕವಾದುದು, ಮಣ್ಯಾದಿಃ = ಮಣಿ ಮುಂತಾದವು. ಅತಃ, ತಸ್ಯೈವ = ಅದಕ್ಕೆ ಮಾತ್ರ, ಲಕ್ಷಣಂ = ಲಕ್ಷಣವು, ಆದರ್ಶಿ = ತೋರಿಸಲ್ಪಟ್ಟಿದೆ. ಹೇತೋಃ = ಕಾರಣಗಳಿಗೆ, ವಿಘಟಕಾದೃಷ್ಟಂ ತು = ಪ್ರತಿಬಂಧಕವಾದ ಅದೃಷ್ಟವಾದರೋ, ಅಮುಖ್ಯಂ = ಅಮುಖ್ಯವಾದ ಪ್ರತಿಬಂಧಕ. ಅತಃ ತತ್ = ಅಂತಹ ಪ್ರತಿಬಂಧಕವು, ನ ಲಕ್ಷಿತಂ = ಲಕ್ಷಣವುಳ್ಳದ್ದಾಗಿ ತೋರಿಸಲ್ಪಟ್ಟಿಲ್ಲ.

ಅನುವಾದ – ಪ್ರಕೃತದಲ್ಲಿ ವಿವಕ್ಷಿತವಾದ ಪ್ರತಿಬಂಧಕ ಎಂದರೆ ದಾಹಕ್ಕೆ ಪ್ರತಿಬಂಧಕವಾದ ಮಣ್ಯಾದಿಗಳು. ಕಾರ್ಯಕ್ಕೆ ಬೇಕಾದ ಎಲ್ಲ ಸಾಮಗ್ರಿಗಳು ಇದ್ದರೂ ಅವುಗಳು ಕಾರ್ಯವಾಗದಂತೆ ತಡೆಯುತ್ತವೆ. ಆದರೆ ಪಾಪಾದಿಗಳು ಹೀಗಲ್ಲ. ಅವುಗಳು ಕಾರ್ಯಕ್ಕೆ ಬೇಕಾದ ಸಾಮಗ್ರಿಗಳೇ ಸಿಗದಂತೆ ಮಾಡುತ್ತವೆ. ಉದಾಹರಣೆಗೆ ಉದ್ಯೋಗಕ್ಕೆ ಬೇಕಾದ ಸಾಮಗ್ರಿ - ಪದವಿ. ಪಾಪವು ನಮಗೆ ಪದವಿಯನ್ನೇ ಸಿಗದಂತೆ ಮಾಡುತ್ತದೆ. ಇಂತಹ ಪ್ರತಿಬಂಧಕದಲ್ಲಿ ಪ್ರಕೃತ ಪ್ರತಿಬಂಧಕದ ಲಕ್ಷಣ ಬರುವುದಿಲ್ಲ. ಆದರೂ ಲಕ್ಷಣಕ್ಕೆ ಅವ್ಯಾಪ್ತಿ ದೋಷವಿಲ್ಲ. ಏಕೆಂದರೆ ಇಂತಹ ಪ್ರತಿಬಂಧಕಗಳು ಅಮುಖ್ಯಪ್ರತಿಬಂಧಕಗಳು. ಆದ್ದರಿಂದ ಅವುಗಳು ಪ್ರಕೃತಲಕ್ಷಣಕ್ಕೆ ಲಕ್ಷ್ಯಗಳೇ ಅಲ್ಲ.

ಸುರೋತ್ತಮತೀರ್ಥೀಯಮ್ – ನನು ಸಾಮಗ್ರೀವಿಘಟಕಮದೃಷ್ಟಂ ಪ್ರತಿಬಂಧಕಮಿತ್ಯುಚ್ಯತೇ । ತತ್ರ ಸತಿ ಪುಷ್ಕಲಕಾರಣೇ ಕಾರ್ಯಾಭಾವಸಂಪಾದಕತ್ವಸ್ಯ ಭವದುಕ್ತಲಕ್ಷಣಸ್ಯಾವ್ಯಾಪ್ತಿರಿತ್ಯತ ಆಹ – ಮಣ್ಯಾದಿರಿತಿ ॥ ಹೇತೋಃ ಕಾರಣಕಲಾಪಸ್ಯ ವಿಘಟಕಂ ಯದದೃಷ್ಟಂ ತತ್ತ್ವಮುಖ್ಯಪ್ರತಿಬಂಧಕಮ್। ಕಾರ್ಯಾಜನಕಸಾಮಗ್ರೀಸಂಘಟನಪ್ರತಿಬಂಧದ್ವಾರಾ ಪರಂಪರಯಾ ಕಾರ್ಯಪ್ರತಿಬಂಧನಾತ್। ತತ್ತಸ್ಮಾನ್ಮುಖ್ಯಪ್ರತಿಬಂಧಕತ್ವಾಭಾವಾನ್ನ ಲಕ್ಷಿತಂ ಲಕ್ಷಣವತ್ತಯಾ ನ ಪ್ರದರ್ಶಿತಮ್ । ಮಣ್ಯಾದಿಸ್ತು ಸಾಕ್ಷಾತ್ಕಾರ್ಯಂ ಪ್ರತ್ಯೇವ ಪ್ರತಿಬಂಧಕತ್ವೇನ ಮುಖ್ಯಪ್ರತಿಬಂಧಕತ್ವಾತ್ತಸ್ಯೈವ ಲಕ್ಷಣಮುಕ್ತಮಿತಿ ಭಾವಃ। ನಹಿ ಮುಖ್ಯಗಂಗಾಲಕ್ಷಣಂ ವದನ್ತೋಽಮುಖ್ಯತೀರಮಪಿ ಸಂಗೃಹ್ಣಂತೀತಿ ಭಾವಃ॥೩೪೪॥

ವಿವರಣೆ - ಪ್ರತಿಬಂಧಕಾಭಾವವು ಕಾರಣವಾದರೆ, ಮಣಿಯಲ್ಲಿ ಪ್ರತಿಬಂಧಕದ ಲಕ್ಷಣವೇ ಬರಲಾರದು ಎಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ.

## ಪ್ರತಿಬಂಧಕತ್ವದ ಲಕ್ಷಣ ಮಣಿಯಲ್ಲಿಲ್ಲ ಎಂದಾದೀತು

**ಪ್ರತಿಬಂಧಕಮಣ್ಯಾದೇರಭಾವೋ ಯದಿ ಕಾರಣಮ್ ।**
**ಕಾರಣಾಭಾವತಸ್ತರ್ಹಿ ಕಾರ್ಯಾಭಾವೋ ಭವಿಷ್ಯತಿ ॥೩೪೫॥**

**ಪ್ರತಿಬಂಧಕತಾಽಪ್ಯತ್ರ ಮಣ್ಯಾದೇರ್ಭಣ್ಯತೇ ಕುತಃ ॥ ೩೪೬॥**

ಅರ್ಥ – ಪ್ರತಿಬಂಧಕಮಣ್ಯಾದೇಃ = ಪ್ರತಿಬಂಧಕವಾದ ಮಣ್ಯಾದಿಗಳ, ಅಭಾವಃ = ಅಭಾವವು, ಯದಿ = ಒಂದು ವೇಳೆ, ಕಾರಣಂ = ಕಾರಣವಾಗುವುದಾದರೆ, ತರ್ಹಿ = ಆಗ, ಕಾರಣಾಭಾವತಃ = ಕಾರಣವು ಇಲ್ಲದಿರುವುದರಿಂದಲೇ, ಕಾರ್ಯಾಭಾವಃ = ದಾಹರೂಪವಾದ ಕಾರ್ಯದ ಅಭಾವವು, ಭವಿಷ್ಯತಿ = ಆಗುತ್ತದೆ. ಅತ್ರ = ದಾಹರೂಪವಾದ ಕಾರ್ಯದಲ್ಲಿ, ಮಣ್ಯಾದೇಃ = ಮಣಿಮೊದಲಾದವುಗಳಿಗೆ, ಪ್ರತಿಬಂಧಕತಾಪಿ = ಪ್ರತಿಬಂಧಕತ್ವವಾದರೂ, ಕುತಃ = ಹೇಗೆ, ಭಣ್ಯತೇ = ಹೇಳಲ್ಪಡುತ್ತದೆ?

ಅನುವಾದ – ಪ್ರತಿಬಂಧಕವಾದ ಮಣ್ಯಭಾವವು ದಾಹಕ್ಕೆ ಕಾರಣವಲ್ಲ. ಹಾಗೇನಾದರೂ ಕಾರಣವೆಂದು ಹೇಳಿದರೆ ಕಾರಣಾಭಾವದಿಂದ ಕಾರ್ಯಾಭಾವ ಆಗುತ್ತದೆಂದು ಹೇಳಿದಂತಾಗುತ್ತದೆ. ದಾಹವೆಂಬ ಕಾರ್ಯದಲ್ಲಿ ಮಣಿಗೆ ಪ್ರತಿಬಂಧಕತ್ವ ಕೂಡುವುದಿಲ್ಲ.

ಸುರೋತ್ತಮತೀರ್ಥೀಯಮ್ – ಮಣ್ಯಭಾವಸ್ಯಾಪಿ ದಾಹಕಾರಣತ್ವೇ ಮಣೇಃ ಪ್ರತಿಬಂಧಕತ್ವಕಥೈವ ವೃಥೇತ್ಯೇತತ್ ಸದೃಷ್ಟಾಂತಮುಪಪಾದಯತಿ – ಪ್ರತಿಬಂಧಕೇತಿ ॥ ಪ್ರತಿಬಂಧಕಶ್ಚಾಸೌ ಮಣ್ಯಾದಿರಿತಿ ವಿಗ್ರಹಃ । ಕಾರಣಾಭಾವತಃ ಪ್ರತಿಬಂಧಕಾಭಾವಾಖ್ಯಕಾರಣಾಭಾವತಃ ಕಾರ್ಯಾಭಾವಃ ದಾಹಲಕ್ಷಣ-ಕಾರ್ಯಾಭಾವಃ ॥೩೪೫॥

ಅತ್ರ ದಾಹಲಕ್ಷಣಕಾರ್ಯೇ । ಪ್ರತಿಬಂಧಕತಾ ನಿರೋಧಕತಾ ॥೩೪೬॥

ವಿವರಣೆ – ಪ್ರತಿಬಂಧಕದ ಅಭಾವವು ಕಾರ್ಯಕ್ಕೆ ಕಾರಣವೆನ್ನುವುದಾದರೆ, ಮಣಿಯು ದಾಹಕ್ಕೆ ಪ್ರತಿಬಂಧಕವೇ ಆಗಲಾರದು. ಏಕೆಂದರೆ, ಅದರಲ್ಲಿ ಪ್ರತಿಬಂಧಕದ ಲಕ್ಷಣವೇ

ಇಲ್ಲ. ಕಾರ್ಯಕ್ಕೆ ಬೇಕಾದ ಸಕಲಸಲಕರಣೆಗಳೂ ಇದ್ದು ಯಾವುದರಿಂದಾಗಿ ಕಾರ್ಯವು ಆಗುವುದಿಲ್ಲವೋ ಅದು ಪ್ರತಿಬಂಧಕ. ಪ್ರಕೃತ ದಾಹವೆಂಬ ಕಾರ್ಯಕ್ಕೆ ಮಣಿಯ ಅಭಾವವೂ ಕಾರಣವಾದಲ್ಲಿ ಮಣಿ ಇದ್ದಾಗ ಮಣಿಯ ಅಭಾವರೂಪವಾದ ಕಾರಣವು ಇಲ್ಲವಾದುದರಿಂದಲೇ ದಾಹವಾಗಿಲ್ಲ. ಹೊರತು ಮಣಿ ಇರುವುದರಿಂದಲ್ಲ. ಹೀಗೆ ಮಣಿಯಲ್ಲಿ ಪ್ರತಿಬಂಧಕದ ಲಕ್ಷಣ ಬರಲಿಲ್ಲ. ಆದ್ದರಿಂದ ಪ್ರತಿಬಂಧಕಾಭಾವವು ಕಾರಣವಲ್ಲ.

ಮಣಿಗೆ ಪ್ರತಿಬಂಧಕತ್ವವು ಇಲ್ಲ ಎನ್ನುವುದಕ್ಕೆ ದೃಷ್ಟಾಂತವನ್ನು ತೋರಿಸುತ್ತಿದ್ದಾರೆ.

## ಕಾರ್ಯವಾಗದಿರಲು ಕಾರಣಾಭಾವವೇ ಕಾರಣ

ದಂಡಾಖ್ಯಕಾರಣಾಭಾವಾದ್ಯತ್ರ ಕಾರ್ಯಂ ನ ಜಾಯತೇ।
ಪ್ರತಿಬಂಧೇನ ನಿರ್ಬಂಧಂ ತತ್ರ ಕೋ ವಕ್ತಿ ಮಾನವಃ ॥೩೪೭॥

ಅರ್ಥ – ದಂಡಾಖ್ಯಕಾರಣಾಭಾವಾತ್ = ದಂಡವೆಂಬ ಕಾರಣವು ಇಲ್ಲದಿರುವುದರಿಂದ, ಯತ್ರ = ಎಲ್ಲಿ, ಕಾರ್ಯಂ = ಘಟರೂಪವಾದ ಕಾರ್ಯವು, ನ ಜಾಯತೇ = ಹುಟ್ಟುವುದಿಲ್ಲವೋ, ತತ್ರ = ಅಂತಹ ಕಡೆಯಲ್ಲಿ, ಕಃ ಮಾನವಃ = ಯಾವ ಮನುಷ್ಯತಾನೇ, ಪ್ರತಿಬಂಧೇನ = ಪ್ರತಿಬಂಧಕದಿಂದ, ನಿರ್ಬಂಧಂ = ಕಾರ್ಯಾಭಾವರೂಪವಾದ ನಿರ್ಬಂಧವನ್ನು, ವಕ್ತಿ = ಹೇಳುತ್ತಾನೆ?

ಸುರೋತ್ತಮತೀರ್ಥೀಯಮ್ – ತತ್ರ ದೃಷ್ಟಾಂತಮಾಹ – ದಣ್ಡಾಖ್ಯೇತಿ ॥ ಯತ್ರ ಯಸ್ಮಿನ್ ದೇಶೇ ತತ್ರ ತಸ್ಮಿನ್ ದೇಶೇ ಪ್ರತಿಬನ್ಧೇನ ಪ್ರತಿಬಂಧಕೇನ ನಿರ್ಬಂಧಂ ಕಾರ್ಯಾಭಾವಲಕ್ಷಣನಿಬಂಧಂ ಕೋ ಮಾನವೋ ವಕ್ತೀತಿ ಸಂಬಂಧಃ ॥೩೪೭॥

ವಿವರಣೆ – ಘಟಕ್ಕೆ ದಂಡವು ಕಾರಣ. ಅಂತಹ ದಂಡವು ಇಲ್ಲದಿದ್ದಾಗ ಘಟವು ಹುಟ್ಟುವುದಿಲ್ಲ. ಅಂತಹ ಸಂದರ್ಭದಲ್ಲಿ ಪ್ರತಿಬಂಧಕ ಇರುವ ಕಾರಣದಿಂದಾಗಿ ಕಾರ್ಯವು ಆಗುವುದಿಲ್ಲ ಎಂದು ಯಾರೂ ಹೇಳುವುದಿಲ್ಲ. ಕಾರಣವು ಇಲ್ಲವಾದುದರಿಂದಲೇ ಅಲ್ಲಿ ಕಾರ್ಯವಾಗುವುದಿಲ್ಲ. ಮಳೆಗಾಲದಲ್ಲಿ ಮಳೆಯಾಗದಿದ್ದಲ್ಲಿ ಪ್ರತಿಬಂಧಕವನ್ನು ಕಲ್ಪಿಸಬಹುದು. ಬೇಸಿಗೆಯಲ್ಲಿ ಮಳೆಯಾಗದಿರಲು ಮೋಡ ಇಲ್ಲದಿರುವುದೇ ಕಾರಣ.

ಎರಡು ರೀತಿಯ ಪ್ರತಿಬಂಧಕಗಳನ್ನೂ ತೋರಿಸಿ ಪ್ರತಿಬಂಧಕಾಭಾವವು ಕಾರಣವಾದಲ್ಲಿ ಮಣಿಗೆ ಎರಡು ರೀತಿಯ ಪ್ರತಿಬಂಧಕತ್ವವೂ ಇಲ್ಲದಂತಾಗುತ್ತದೆ. ಇದನ್ನು ಮುಂದಿನ ಶ್ಲೋಕದಲ್ಲಿ ತೋರಿಸಲಾಗಿದೆ.

## ಪ್ರತಿಬಂಧಕ ಎರಡು ವಿಧ

ಕಾರಣಾಭಾವಹೇತುಶ್ಚ ಕಶ್ಚಿತ್ಸ್ಯಾತ್ಪ್ರತಿಬಂಧಕಃ।
ಸತ್ಯೇವ ಕಾರಣೇ ಶಕ್ತಿಸ್ತಂಭಕೋಽಪ್ಯಸ್ತಿ ಕಶ್ಚನ ॥೩೪೮॥

ಅರ್ಥ – ಕಾರಣಾಭಾವಹೇತುಃ ಚ = ಕಾರಣಗಳಲ್ಲಿ ಇಲ್ಲದಿರುವಂತೆ ಮಾಡುವ, ಕಶ್ಚಿತ್ = ಕೆಲವೊಂದು, ಪ್ರತಿಬಂಧಕಃ = ಪ್ರತಿಬಂಧಕವು, ಸ್ಯಾತ್ = ಇರುತ್ತದೆ. ಸತ್ಯೇವ ಕಾರಣೇ = ಎಲ್ಲ ಕಾರಣಗಳು ಇದ್ದಾಗಲೇ (ಅಂತಹ ಕಾರಣಗಳಲ್ಲಿ ಇರುವ) ಶಕ್ತಿಸ್ತಂಭಕಃ ಅಪಿ = ಶಕ್ತಿಯನ್ನು ತಡೆಯುವ, ಕಶ್ಚನ = ಮತ್ತೊಂದು ವಿಧವಾದ, ಪ್ರತಿಬಂಧಕಃ ಅಪಿ = ಪ್ರತಿಬಂಧಕವೂ, ಅಸ್ತಿ = ಇದೆ.

ಸುರೋತ್ತಮತೀರ್ಥೀಯಮ್ – ಕಾರಣವಿಘಟಕಾದೃಷ್ಟೇ ಸ್ವೋಕ್ತಪ್ರತಿಬಂಧಕಲಕ್ಷಣಾವ್ಯಾಪ್ತಿಪರಿಹಾರಾಯ ಯದುಕ್ತಮದೃಷ್ಟಸ್ಯಾಮುಖ್ಯಪ್ರತಿಬಂಧಕತ್ವಂ ಮಣೇಶ್ಚ ಮುಖ್ಯತಃ ಪ್ರತಿಬಂಧಕತ್ವಂ ತದುಭಯಂ ಸಯುಕ್ತಿಕಂ ವಿವಿಚ್ಯ ದರ್ಶಯನ್ ಪ್ರತಿಬಂಧಕಾಭಾವಸ್ಯಾಪಿ ಕಾರಣತ್ವೇ ಮಣೇರ್ದ್ವೇಧಾಪಿ ಪ್ರತಿಬಂಧಕತ್ವಾಯೋಗಾದಪ್ರತಿಬಂಧಕತ್ವಮೇವ ಸ್ಯಾದಿತ್ಯಾಹ – ಕಾರಣಾಭಾವಹೇತುಶ್ಚೇತ್ಯಾದಿನಾ॥ ಕಾರಣಾಭಾವಹೇತುಃ ಕಾರಣಸಾಮಗ್ರೀವಿಘಟಕ ಇತಿ ಯಾವತ್ । ಕಶ್ಚಿದದೃಷ್ಟಾದಿಃ । ಸತ್ಯೇವ ಕಾರಣೇ ಕಾರಣಕಲಾಪೇ ಸತೀತಿ ಯಾವತ್ । ಶಕ್ತಿಸ್ತಂಭಕಃ ವಹ್ನ್ಯಾದೇರ್ದಾಹಾದಿಶಕ್ತಿಪ್ರತಿಬಂಧಕಃ । ಶಕ್ತಿಪ್ರತಿಬಂಧಕತ್ವಂ ನಾಮ ದಾಹಕಶಕ್ತೌ ಸತ್ಯಾಮೇವ ತತೋ ದಾಹಾದಿಕಾರ್ಯಂ ಭವಿತುಂ ನ ಮುಂಚತೀತಿ ಸಾಕ್ಷಾತ್ಕಾರ್ಯಪ್ರತಿಬಂಧಕತ್ವಮೇವೇತ್ಯರ್ಥಃ। ಕಶ್ಚನ ಮಣ್ಯಾದಿಃ ॥೩೪೮॥

ಅನುವಾದ – ಪ್ರತಿಬಂಧಕಗಳು ಎರಡು ವಿಧವಾಗಿವೆ.

೧. ಕಾರ್ಯಕ್ಕೆ ಬೇಕಾದ ಕಾರಣಗಳನ್ನೇ ಇಲ್ಲದಂತೆ ಮಾಡುವ ಪ್ರತಿಬಂಧಕಗಳು.

೨. ಎಲ್ಲ ಕಾರಣಗಳು ಇದ್ದರೂ ಆ ಕಾರಣಗಳಲ್ಲಿರುವ ಶಕ್ತಿಯನ್ನು ನಾಶಮಾಡುವ ಪ್ರತಿಬಂಧಕಗಳು.

ನಮಗೆ ಸಂತತಿಗೆ ಪ್ರತಿಬಂಧಕಗಳಾದ ಪಾಪಗಳು ಮದುವೆಯೇ ಆಗದಂತೆ ತಡೆಯಬಹುದು. ಅಥವಾ ಮದುವೆಯಾದರೂ ಮಕ್ಕಳಾಗದಂತೆ ಮಾಡಬಹುದು. ಹೀಗೆ ಎರಡು ವಿಧದ ಪ್ರತಿಬಂಧಕಗಳಿವೆ.

ಪ್ರತಿಬಂಧಕಾಭಾವವು ಕಾರಣವಾದಲ್ಲಿ ಮಣಿಗೆ ಈ ಎರಡೂ ವಿಧದ ಪ್ರತಿಬಂಧಕತ್ವವೂ ಇರಲಾರದು ಎಂದು ಮುಂದಿನ ಶ್ಲೋಕದಲ್ಲಿ ಹೇಳಿದ್ದಾರೆ.

## ಮಣಿಗೆ ದ್ವಿವಿಧಕಾರಣತ್ವವೂ ಇಲ್ಲ

ಮಣ್ಯಭಾವಸ್ಯ ಹೇತುತ್ವೇ ತದಭಾವಾತ್ಮಕೋ ಮಣಿಃ ।
ನ ಹೇತ್ವಭಾವಹೇತುತ್ವಾತ್ ಪ್ರತಿಬಧ್ನಾತ್ಯದೃಷ್ಟವತ್ ॥೩೪೯॥

ಅರ್ಥ – ಮಣ್ಯಭಾವಸ್ಯ = ಮಣಿಯ ಅಭಾವಕ್ಕೆ, ಹೇತುತ್ವೇ = ದಾಹಹೇತುತ್ವವನ್ನು ಒಪ್ಪಿದರೆ, ತದಭಾವಾತ್ಮಕಃ = ಮಣಿಯ ಅಭಾವದ ಅಭಾವರೂಪವಾದ, ಮಣಿಃ = ಮಣಿಯು, ಹೇತ್ವಭಾವಹೇತುತ್ವಾತ್ = ಕಾರಣಾಭಾವ- ಸಂಪಾದಕವಾದುದರಿಂದ, ಅದೃಷ್ಟವತ್ = ಪಾಪದಂತೆ, ನ ಪ್ರತಿಬಧ್ನಾತಿ = ದಾಹವನ್ನು ಪ್ರತಿಬಂಧಿಸಲಾರದು.

ಸುರೋತ್ತಮತೀರ್ಥೀಯಮ್ – ತದಭಾವಾತ್ಮಕ ಇತ್ಯತ್ರ ತತ್ಪದೇನ ದಾಹಕಾರಣತ್ವೇನ ಪರಾಭಿಮತೋ ಮಣ್ಯಭಾವೋ ಗೃಹ್ಯತೇ । ಅಭಾವಪದೇನ ಚ ತಸ್ಯಾಭಾವಸ್ಯಾಭಾವೋ ಗೃಹ್ಯತೇ। ಸಚಾಭಾವಾಭಾವೋ ಭಾವ ಏವೇತಿ ಮಣಿರೇವೇತಿ ಭಾವೇನೋಕ್ತಮ್ – ತದಭಾವಾತ್ಮಕೋ ಮಣಿರಿತಿ ॥ ಹೇತ್ವಭಾವಹೇತುತ್ವಾದ್ ಹೇತ್ವಭಾವಸಂಪಾದಕತ್ವಾದದೃಷ್ಟವನ್ನ ಪ್ರತಿಬಧ್ನಾತೀತಿ ಸಂಬಂಧಃ। ಮಣ್ಯಭಾವಸ್ಯ ಹೇತುತ್ವೇ ಮಣ್ಯಭಾವಾಭಾವರೂಪೋ ಮಣಿಃ ಹೇತ್ವಭಾವಾತ್ಮಕ ಏವ ನತ್ವದೃಷ್ಟವದ್ ಹೇತ್ವಭಾವಸಂಪಾದಕತಯಾ ಪ್ರತಿಬಂಧಕ ಇತಿ ಭಾವಃ ॥೩೪೯॥

ಅನುವಾದ – ಪಾಪರೂಪವಾದ ಅದೃಷ್ಟವು ಕಾರಣವನ್ನು ಇಲ್ಲದಂತೆ ಮಾಡಿ ಕಾರ್ಯಕ್ಕೆ ಪ್ರತಿಬಂಧಕವಾಗುತ್ತದೆ. ಪ್ರಕೃತ ಮಣ್ಯಭಾವವು ಕಾರಣವೆಂದು ಒಪ್ಪಿದಲ್ಲಿ ಮಣಿಯು ಈ ಅದೃಷ್ಟದಂತೆ ಪ್ರತಿಬಂಧಕವೆಂದು ಹೇಳಲು ಬರುವುದಿಲ್ಲ. ಏಕೆಂದರೆ ಮಣಿಯು ಕಾರಣಾಭಾವರೂಪವಾಗುತ್ತದೆ. ಕಾರಣಾಭಾವಸಂಪಾದಕವಾಗುವುದಿಲ್ಲ. ಮಣ್ಯಭಾವಕಾರಣ, ಮಣ್ಯಭಾವಾಭಾವ ಮಣಿರೂಪ. ಆದ್ದರಿಂದ ಮಣಿಯು ಕಾರಣಾಭಾವರೂಪವಾಯಿತು. ಕಾರಣಾಭಾವಸಂಪಾದಕವಲ್ಲ. (ಹೇತ್ವಭಾವತ್ಮಕ ಏವ, ನ ತು ಅದೃಷ್ಟವತ್ ಹೇತ್ವಭಾವಸಂಪಾದಕತಯಾ ಪ್ರತಿಬಂಧಕಃ ಇತಿ ಭಾವಃ)

ಕಾರಣಗತಶಕ್ತಿವಿಘಟಕವಾಗಿಯೂ ಮಣಿಯು ಪ್ರತಿಬಂಧಕವಾಗಲಾರದು ಎಂದು ಮುಂದಿನ ಶ್ಲೋಕದಲ್ಲಿ ತಿಳಿಸಲಾಗಿದೆ.

## ಶಕ್ತಿನಾಶಕತ್ವವೇ ಇಲ್ಲವಾಗಲಿ

ಕಾರ್ಯಾಭಾವೋ ಯತಃ ಸ್ವಾಭಾವಾಖ್ಯಹೇತೋರಭಾವತಃ।
ಸತಿ ತಸ್ಮಿನ್ನಭೂತ್ತೇನ ಶಕ್ತಿಸ್ತಂಭಕತಾ ಗತಾ ॥೩೫೦॥

ಅರ್ಥ – ತಸ್ಮಿನ್ ಸತಿ = ಮಣಿ ಇರುತ್ತಿರಲು, ಯತಃ = ಯಾವ ಕಾರಣದಿಂದ, ಸ್ವಾಭಾವಾಖ್ಯಹೇತೋಃ = ಮಣ್ಯಭಾವ ಎಂಬ ಕಾರಣದ, ಅಭಾವತಃ = ಅಭಾವ ಇರುವ ಕಾರಣದಿಂದಾಗಿಯೇ, ಕಾರ್ಯಾಭಾವಃ = ದಾಹವೆಂಬ ಕಾರ್ಯದ ಅಭಾವವು, ಅಭೂತ್ = ಆಯಿತು. ತೇನ = ಆ ಕಾರಣದಿಂದಾಗಿ, ಶಕ್ತಿಸ್ತಂಭಕತಾ = ಕಾರಣಗತಶಕ್ತಿನಾಶಕತ್ವವು, ಗತಾ = ಹೋಯಿತು.

ಸುರೋತ್ತಮತೀರ್ಥೀಯಮ್ – ಶಕ್ತಿಸ್ತಂಭಕತ್ವೇನ ಪ್ರತಿಬಂಧಕತ್ವಂ ದೂಷಯತಿ – ಕಾರ್ಯಾಭಾವ ಇತಿ ॥ ಯತಸ್ತಸ್ಮಿನ್ ಮಣೌ ಸತಿ ಕಾರ್ಯಾಭಾವೋ ದಾಹಲಕ್ಷಣಕಾರ್ಯಾಭಾವಃ ಸ್ವಾಭಾವಾಖ್ಯಹೇತೋಃ ಸ್ವಸ್ಯ ಮಣೇರಭಾವಾಭಿಧದಾಹಹೇತೋರಭಾವತೋಽಭೂದಿತಿ ಸಂಬಂಧಃ। ತೇನ ಕಾರಣೇನ ॥೩೫೦॥

ವಿವರಣೆ–ಮಣಿಯ ಅಭಾವವು ದಾಹಕ್ಕೆ ಕಾರಣವಾದರೆ, ಕಾರಣಗತಶಕ್ತಿನಾಶಕತ್ವರೂಪವಾದ ಪ್ರತಿಬಂಧಕತ್ವವೂ ಮಣಿಗೆ ಇಲ್ಲದಾಗುತ್ತದೆ. ಮಣಿ ಇದ್ದಾಗ ಮಣ್ಯಭಾವ ಎಂಬ ಕಾರಣವು ಇಲ್ಲದಿರುವುದರಿಂದಲೇ ದಾಹಾಭಾವವನ್ನು ಸಮರ್ಥಿಸಬಹುದು. ಮಣಿಯು ವಹ್ನಿಗತ ಶಕ್ತಿಗೆ ನಾಶಕವಾಗಿದೆ ಎಂದು ಹೇಳಬೇಕಾದ ಅಗತ್ಯವಿಲ್ಲ.

ಹೀಗೆ ಪ್ರತಿಬಂಧಕಾಭಾವವು ಕಾರ್ಯಹೇತುವಾದರೆ ಮಣಿಗೆ ಪ್ರತಿಬಂಧಕತ್ವವನ್ನೇ ಹೇಳಲಾಗದು.

## ಕಾರಣಗತಶಕ್ತಿವಿನಾಶಕತ್ವವನ್ನು ಏಕೆ ಕಲ್ಪಿಸಬೇಕು ?

ಕಾರಣಾಭಾವಮಾತ್ರೇಣ ಕಾರ್ಯಾಭಾವಸ್ಯ ಸಿದ್ಧಿತಃ।
ಶಕ್ತಿಸ್ತಂಭಕತಾ ಕೇನ ಕಲ್ಪ್ಯಾ ಕಲ್ಪಕಸಂಸದಿ ॥೩೫೦॥

ಅರ್ಥ – ಕಾರಣಾಭಾವಮಾತ್ರೇಣ = ಕಾರಣವು ಇಲ್ಲವಾದುದರಿಂದಲೇ, ಕಾರ್ಯಾಭಾವಸ್ಯ = ದಾಹವೆಂಬ ಕಾರ್ಯದ ಅಭಾವವು, ಸಿದ್ಧಿತಃ = ಸಿದ್ಧವಾಗುತ್ತಿರುವಾಗ, ಕಲ್ಪಕಸಂಸದಿ = ವಿದ್ವತ್ಸಭೆಯಲ್ಲಿ, ಶಕ್ತಿಸ್ತಂಭಕತಾ = ಕಾರಣಗತಶಕ್ತಿವಿನಾಶಕತ್ವವು, ಕೇನ = ಯಾವ ಕಾರಣದಿಂದ, ಕಲ್ಪ್ಯಾ = ಕಲ್ಪಿಸಲ್ಪಡಬೇಕು?

ಅನುವಾದ – ಕಾರಣವು ಇಲ್ಲವಾದ್ದರಿಂದಲೇ ದಾಹವೆಂಬ ಕಾರ್ಯದ ಅಭಾವವು ಸಿದ್ಧವಾಗುತ್ತಿರುವಾಗ ವಿದ್ವತ್ - ಸಭೆಯಲ್ಲಿ ಕಾರಣಗತಶಕ್ತಿವಿನಾಶಕತ್ವವು ಯಾವ ಕಾರಣದಿಂದ ಕಲ್ಪಿಸಬೇಕು?

ಸುರೋತ್ತಮತೀರ್ಥೀಯಮ್ – ತೇನ ಶಕ್ತಿಸ್ತಂಭಕತಾ ಗತೇತ್ಯೇತದ್ ವಿಶದಯತಿ – ಕಾರಣಾಭಾವಮಾತ್ರೇಣೇತಿ ॥ ಮಣ್ಯಭಾವರೂಪದಾಹಕಾರಣಾಭಾವೇನೈವ ಕಾರ್ಯಾಭಾವಸ್ಯ ದಾಹಲಕ್ಷಣಕಾರ್ಯಾಭಾವಸ್ಯ ಸಿದ್ಧಿತಃ ಸಂಭವಾತ್ ಶಕ್ತಿಸ್ತಂಭಕತಾ ದಾಹಕಾರಣಸಾಮಗ್ರ್ಯಾಂ ದಾಹಶಕ್ತಿಸ್ತಂಭಕತಾ ಕೇನ ಕಾರಣೇನ ಕಲ್ಪ್ಯಾ । ಮಣ್ಯಭಾವಾಖ್ಯಕಾರಣಾಭಾವೇನ ಸಾಮಗ್ರ್ಯಾ ಏವಾಭಾವಾತ್ ಕಾರ್ಯಾಭಾವೋಪಪತ್ತೌ ಪುನರ್ಮಣೇರಪಿ ಕಾರಣಶಕ್ತಿಸ್ತಂಭಕತಾಯಾ ನ ಕಿಂಚಿತ್ಕಲ್ಪಕಮಿತಿ ಭಾವಃ ॥೩೫೦॥

## ದಂಡದ ಅಭಾವವೂ ಪ್ರತಿಬಂಧಕವಾದೀತು

ಸರ್ವಥಾ ಕಾರಣಾಭಾವಾದ್ಭಿನ್ನಃ ಸ್ಯಾತ್ಪ್ರತಿಬಂಧಕಃ।
ನಚೇದ್ದಂಡಾಭಾವತಶ್ಚ ಪ್ರತಿಬಂಧಕತಾ ಭವೇತ್ ॥೩೫೧॥

ಅರ್ಥ – ಪ್ರತಿಬಂಧಕಃ = ಪ್ರತಿಬಂಧಕವು, ಕಾರಣಾಭಾವಾತ್ = ಕಾರಣದ ಅಭಾವಕ್ಕಿಂತ, ಸರ್ವಥಾ = ಖಂಡಿತವಾಗಿಯೂ, ಭಿನ್ನಃ = ಬೇರೆಯಾಗಿ, ಸ್ಯಾತ್ = ಆಗಿರಬೇಕು. ನ ಚೇತ್ = ಇಲ್ಲವಾದಲ್ಲಿ, ದಂಡಾಭಾವತಶ್ಚ = ದಂಡದ ಅಭಾವದಿಂದ, ದಂಡಾಭಾವಸ್ಯ = ದಂಡದ ಅಭಾವಕ್ಕೆ, ಪ್ರತಿಬಂಧಕತಾ = ಪ್ರತಿಬಂಧಕತ್ವವು, ಭವೇತ್ = ಬಂದೀತು.

ಅನುವಾದ – ಪ್ರತಿಬಂಧಕವು ಕಾರಣದ ಅಭಾವಕ್ಕಿಂತ ಬೇರೆಯೇ ಆಗಿರುತ್ತದೆ. ಇಲ್ಲವಾದರೆ ದಂಡದ ಅಭಾವಕ್ಕೂ ಪ್ರತಿಬಂಧಕತ್ವ ಬರಬೇಕಾದೀತು.

ಸುರೋತ್ತಮತೀರ್ಥೀಯಮ್ – ಪ್ರತಿಬಂಧಕಾಭಾವಸ್ಯ ಕಾರಣತ್ವೇ ಪ್ರಕಾರಾಂತರೇಣಾಪಿ ಮೇ ಪ್ರತಿಬಂಧಕತ್ವಂ ನ ಘಟತ ಇತ್ಯಾಹ – ಸರ್ವಥೇತಿ ॥ ಕಾರಣಾಭಾವಾತ್ಕಾರಣಸ್ಯ ಮಣ್ಯಭಾವಸ್ಯಾಭಾವಾತ್ ಪ್ರತಿಬಂಧಕಃ ಭಿನ್ನಃ ಸ್ಯಾದಿತಿ ಸಂಬಂಧಃ । ಮಣ್ಯಭಾವಸ್ಯ ಕಾರಣತ್ವಮತೇ ಚ ಮಣ್ಯಭಾವಾಭಾವಾತ್ಮಕೋ ಮಣಿಃ ಕಾರಣಸ್ಯಾಭಾವರೂಪ ಏವ । ನತು ಕಾರಣಾಭಾವಾದ್ಭಿನ್ನ ಇತಿ ಭಾವಃ । ಪ್ರತಿಬಂಧಕಸ್ಯ ಕಾರಣಾಭಾವಾದ್ಭಿನ್ನತ್ವಾನಂಗೀಕಾರೇ ಬಾಧಕಮಾಹ – ನಚೇದಿತಿ ॥ ದಂಡಸ್ಯ ಘಟಂ ಪ್ರತಿ ಕಾರಣತ್ವಾದ್ದಂಡಾಭಾವಾದ್ಯತ್ರ ಘಟಾಭಾವಸ್ತತ್ರ ದಂಡಾಭಾವಾದಾವಪಿ ಪ್ರತಿಬಂಧಕತಾ ಭವೇತ್ । ದಂಡಾಭಾವಸ್ಯಾಪಿ ಪ್ರತಿಬಂಧಕಂ ವಿದ್ವದ್ಭಿಃ ಕಥ್ಯೇತೇತಿ ಭಾವಃ ॥೩೫೨॥

ವಿವರಣೆ – ಮಣ್ಯಭಾವವು ಕಾರಣವಾದಲ್ಲಿ ಮಣಿಯು ಕಾರಣಾಭಾವರೂಪವಾಗುತ್ತದೆ. ಪ್ರತಿಬಂಧಕವು ಎಂದೂ ಕಾರಣಾಭಾವರೂಪವಾಗಿರಬಾರದು. ಹಾಗಿದ್ದರೆ, ಘಟಕ್ಕೆ ದಂಡವು ಕಾರಣ, ದಂಡದ ಅಭಾವವು ಪ್ರತಿಬಂಧಕವೆಂದಾಗಬೇಕಾದೀತು.

ಇಲ್ಲಿಗೆ ಯುಕ್ತಿಮಲ್ಲಿಕೆಯ ಗುಣಸೌರಭದಲ್ಲಿ ಶಕ್ತಿವಾದವು ಸಮಾಪ್ತವಾಯಿತು

## ಶ್ರೀಮತ್-ಸತ್ಯನಾಥತೀರ್ಥ ಶ್ರೀಪಾದಂಗಳವರಿಂದ

## ವಿರಚಿತವಾದ

# ಅಭಿನವತಾಂಡವ

### ಪರಮಾತ್ಮನು ಅನಂತಶಕ್ತಿಯುಳ್ಳವನು ಉಳಿದದ್ದು ಅಲ್ಪಶಕ್ತಿವುಳ್ಳದ್ದು

**यथा परमेश्वरोऽनन्तशक्तिमान् तथाऽन्ये चेतनाः अचेतनाश्च स्वस्वकार्यानुकूलशक्तिमन्तः । इयांस्तु विशेषः । परमेश्वरोऽनन्ताघटितकार्य हेतुत्वात् अनन्तशक्तिः, अन्ये कतिपयकार्यहेतुत्वात् अल्पशक्तिमन्तः ।**

ಪರಮಾತ್ಮನು ಹೇಗೆ ಅನಂತಶಕ್ತಿಯುಳ್ಳವನೋ, ಅದರಂತೆ ಉಳಿದೆಲ್ಲಾ ಚೇತನರೂ ಕೂಡ ತಮ್ಮತಮ್ಮ ಕಾರ್ಯಕ್ಕೆ ಅನುಕೂಲವಾದ ಬಹುಬಗೆಯ ಶಕ್ತಿಯುಳ್ಳವರು. ಅಷ್ಟೇ ಅಲ್ಲದೇ ಜಡಪದಾರ್ಥಗಳೂ ಕೂಡ ತಮ್ಮತಮ್ಮ ಕಾರ್ಯಕ್ಕೆ ಅನುಕೂಲವಾದ ಬಹುಬಗೆಯಾದ ಶಕ್ತಿಯುಳ್ಳವುಗಳು. ಇಷ್ಟು ಮಾತ್ರ ವ್ಯತ್ಯಾಸ - ಪರಮಾತ್ಮನು ಅನಂತವಾದ ಅಘಟಿತಕಾರ್ಯಕ್ಕೆ ಕಾರಣನಾಗಿರುವುದರಿಂದ ಅನಂತವಾದ ಶಕ್ತಿಯುಳ್ಳವನಾಗಿದ್ದಾನೆ. ಉಳಿದೆಲ್ಲ ಚೇತನಗಳಾಗಲೀ, ಜಡಪದಾರ್ಥಗಳಾಗಲೀ, ಕೆಲವಷ್ಟೇ ಕಾರ್ಯಗಳಿಗೆ ಕಾರಣವಾಗಿದ್ದರಿಂದ ಅಲ್ಪಶಕ್ತಿವುಳ್ಳವುಗಳು.

## 'ಶಕ್ತಿ' ಎಂಬ ಪದಾರ್ಥವನ್ನು ಒಪ್ಪಬೇಕಾಗಿಲ್ಲ

**ननु न शक्तिर्नाम पदार्थो विद्यते । सहकारिवशादेव कार्योत्पत्तिसम्भवात्।**

ಆಕ್ಷೇಪ - 'ಶಕ್ತಿ' ಎಂಬ ಪದಾರ್ಥವೇ ಇಲ್ಲ. ಸಹಕಾರಿಕಾರಣಗಳು ಸೇರಿದಾಗ ಕಾರ್ಯೋತ್ಪತ್ತಿ ಆಗುತ್ತದೆ. ಅನಾವಶ್ಯಕವಾದ ಶಕ್ತಿಯನ್ನೇಕೆ ಮಧ್ಯದಲ್ಲಿ ಒಪ್ಪಬೇಕು ?

ವಿವರಣೆ - 'ನನು ನ ಶಕ್ತಿಃ' ಎಂಬ ವಾಕ್ಯದಿಂದ ಪ್ರಾರಂಭ ಮಾಡಿ, 'ಆಚರಂತಿ ಇತಿ ಚೇತ್' ಎಂಬಲ್ಲಿಯ ತನಕ ಪೂರ್ವಪಕ್ಷಿಗಳು ಶಕ್ತಿಯೆಂಬ ಪದಾರ್ಥವನ್ನು ಅಲ್ಲಗಳೆಯುತ್ತಿದ್ದಾರೆ. ಮುಂದೆ 'ಅತ್ರೋಚ್ಯತೇ' ಇತ್ಯಾದಿಯಾಗಿ ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುತ್ತಾರೆ.

## ಚಂದ್ರಕಾಂತಮಣಿಯಿಂದ ಶಕ್ತಿ ಸಿದ್ಧವಾಗುತ್ತದೆ ಅಲ್ಲವೇ ?

**ननु यादृशादेव करतलानलसंयोगात् दाहो जायते तादृशादेव मणिसमवधाने न जायते इत्यनुभवसिद्धम् । न च तत्कार्याजनकत्वं मणेः वह्निनिष्ठशक्तिप्रतिबन्धकत्वं विना सम्भवतीति मणिप्रतिबध्या शक्तिः अभ्युपगन्तव्या इति चेत् ।**

ಪ್ರಶ್ನೆ - ಯಾವ ರೀತಿಯಲ್ಲಿ ಕರತಲ ಹಾಗೂ ಅನಲಗಳಿಗೆ ಸಂಯೋಗವಾದಾಗ ಕರತಲವು ಸುಡುತ್ತದೋ, ಅದೇ ರೀತಿಯಲ್ಲಿದ್ದಾಗಲೇ ಚಂದ್ರಕಾಂತಮಣಿಯ ಸಂಪರ್ಕವಿದ್ದರೆ ಕರತಲವು ಸುಡುವುದಿಲ್ಲ. ಇದು ಪ್ರತಿಯೊಬ್ಬರಿಗೂ ಇರುವ ಅನುಭವ. ಸುಡುವಿಕೆ ಎಂಬ ಕಾರ್ಯದ ಅಜನಕತ್ವವು ಮಣಿಗೆ ವಹ್ನಿಯಲ್ಲಿರುವ ಶಕ್ತಿಯನ್ನು ಪ್ರತಿಬಂಧಕವನ್ನಾಗಿ ಮಾಡುವುದರ ಹೊರತಾಗಿ ಇರುವುದಿಲ್ಲ. ವಹ್ನಿಯಲ್ಲಿರುವ ಸುಡುವಿಕೆ ಎಂಬ ಅತೀಂದ್ರಿಯವಾದ ಶಕ್ತಿಯನ್ನು ಒಪ್ಪುವುದು ಇಲ್ಲಿ ಅತ್ಯಂತ ಅನಿವಾರ್ಯವಲ್ಲವೇ?

## ಚಂದ್ರಕಾಂತಮಣ್ಯಭಾವವೂ ಕೂಡ ಕಾರಣಕೋಟಿ ಪ್ರವಿಷ್ಟ

**न । मण्यभावस्य कारणत्वेन कारणाभावादेव कार्याभावोपपत्तौ शक्तेः तत्प्रतिबन्धकत्वस्य वा अप्रकल्प्यत्वात् ।**

ಉತ್ತರ - ಈ ಪ್ರಶ್ನೆ ತಪ್ಪು. ದಾಹಕ್ಕೆ ಕರತಲ ಹಾಗೂ ಅನಲಗಳ ಸಂಯೋಗವು ಹೇಗೆ ಕಾರಣವೋ, ಅದರಂತೆ ಚಂದ್ರಕಾಂತಮಣಿಯ ಭಾವವೂ ಕೂಡ ಕಾರಣವಾಗಿದೆ. ಯಾವಾಗ ಚಂದ್ರಕಾಂತಮಣ್ಯಭಾವ ಎಂಬ ಕಾರಣವಿರುವುದಿಲ್ಲವೋ, (ಚಂದ್ರಕಾಂತಮಣಿಯೇ ಇರುತ್ತದೋ) ಆಗ ಕಾರಣವಿಲ್ಲದ್ದರಿಂದಲೇ ದಾಹ ಎಂಬ ಕಾರ್ಯವು ಹುಟ್ಟುತ್ತಿಲ್ಲವೆಂದು ಸುಲಭವಾಗಿ ಸಮರ್ಥಿಸಬಹುದು. ಹೀಗಿರುವಾಗ ಅಗ್ನಿಯಲ್ಲಿ ಅತೀಂದ್ರಿಯವಾದ ಶಕ್ತಿಯನ್ನು ಒಪ್ಪಿ, ತತ್ಪ್ರತಿಬಂಧಕವನ್ನು ಚಂದ್ರಮಣಿಗೆ ಒಪ್ಪುವುದು ಅನಾವಶ್ಯಕ. ಹಾಗೂ ಕಲ್ಪನಾಗೌರವ.

## ಮಗು ಹುಟ್ಟದಿರಲು ದುರದೃಷ್ಟವೇ ಕಾರಣ

**न च वन्ध्यास्त्रीसंप्रयोगे अपत्योत्पादो न दृश्यते । अन्यासु च दृश्यते इति तद्वैलक्षण्याय, वन्ध्यासु नापत्यजननशक्तिः, अन्यासु अपत्यजनन-शक्तिरस्तीत्यभ्युपेयम् । दुरदृष्टस्य प्रतिबन्धकत्वेन वन्ध्यास्वपत्या-भावोपपत्तेः ।**

ಪ್ರಶ್ನೆ - ಬಂಜೆ ಸ್ತ್ರೀಯನ್ನು ಸಂಪರ್ಕ ಮಾಡಿದಾಗ ಮಗು ಹುಟ್ಟುತ್ತಿಲ್ಲ. ಬಂಜೆ ಸ್ತ್ರೀಯಲ್ಲದ ಬೇರೆ ಸ್ತ್ರೀಯನ್ನು ಸಂಪರ್ಕ ಮಾಡಿದಾಗ ಮಗು ಹುಟ್ಟುತ್ತದೆ. ಈ ಒಂದು ವ್ಯತ್ಯಾಸದಿಂದ ಬಂಜೆಸ್ತ್ರೀಯಲ್ಲಿ ಅಪತ್ಯಜನನಶಕ್ತಿಯು ಇರುವುದಿಲ್ಲ. ಬೇರೆ ಸ್ತ್ರೀಯರಲ್ಲಿ ಅಪತ್ಯಜನನಶಕ್ತಿಯು ಇರುತ್ತದೆ ಎಂದು ಒಪ್ಪಬೇಕಲ್ಲವೇ ?

ಉತ್ತರ - ಬಂಜೆಸ್ತ್ರೀಯಿಂದ ಮಗು ಏಕೆ ಹುಟ್ಟುತ್ತಿಲ್ಲ ? ಎಂದರೆ ದುರದೃಷ್ಟ ಎಂಬ ಪ್ರತಿಬಂಧಕವಿದೆ. ಇದರಿಂದಲೇ ಬಂಜೆಸ್ತ್ರೀಯು ಮಗುವಿನ ಹುಟ್ಟುವಿಕೆಗೆ ಕಾರಣಳಾಗಿರುವುದಿಲ್ಲವೆಂದು ಸುಲಭವಾಗಿ ಹೇಳಬಹುದು. ಇದಕ್ಕಿಂತ ಹೊರತಾಗಿ ಶಕ್ತಿ ಎಂಬ ಪದಾರ್ಥವನ್ನು ಒಪ್ಪುವ ಅವಶ್ಯಕತೆ ಇರುವುದಿಲ್ಲ.

## ಪ್ರತಿಬಂಧಕತ್ವ ಎಂದರೇನು ?

**न च 'दुरदृष्टस्य प्रतिबन्धकत्वान्यथानुपपत्त्यैव शक्तिः सिध्यति । कारणशक्तिविघटकस्यैव प्रतिबन्धकत्वात्' इति वाच्यम् । कारणीभूतस्वाभावविघटकत्वेनैव प्रतिबन्धकत्वसम्भवे कारणेषु शक्तिं प्रकल्प्य तद्विघटकत्वाङ्गीकारायोगात् ।**

ಪ್ರಶ್ನೆ - ಮಗುವಿನ ಹುಟ್ಟುವಿಕೆಗೆ ದುರದೃಷ್ಟವು ಪ್ರತಿಬಂಧಕವಾಗಿದೆ ಎಂದು ಹೇಳುತ್ತಿದ್ದೀರಿ. ಇದರ ಅನ್ಯಥಾನುಪಪತ್ತಿಯಿಂದಲೇ ಶಕ್ತಿಯೆಂಬ ಪದಾರ್ಥವು ಸಿದ್ಧವಾಗುತ್ತದಲ್ಲವೇ? ಏಕೆಂದರೆ ಕಾರಣಶಕ್ತಿಯನ್ನು ವಿಘಟನ ಮಾಡುವಿಕೆಯೇ ಪ್ರತಿಬಂಧಕ ಎಂದು ಕರೆಸಿಕೊಳ್ಳುತ್ತದೆ. ಶಕ್ತಿಯನ್ನು ಒಪ್ಪದಿದ್ದರೆ ಪ್ರತಿಬಂಧಕತ್ವವನ್ನೂ ಕೂಡ ಒಪ್ಪಲು ಸಾಧ್ಯವಿಲ್ಲ ಅಲ್ಲವೇ ?

ಉತ್ತರ - ಇದೂ ಕೂಡ ತಪ್ಪು. ಕಾರಣಶಕ್ತಿವಿಘಟಕತ್ವವು ಪ್ರತಿಬಂಧಕತ್ವ ಎಂದು ಕರೆಸಿಕೊಳ್ಳುವುದಿಲ್ಲ. ಕಾರಣೀಭೂತಸ್ವಾಭಾವವಿಘಟಕತ್ವವು ಪ್ರತಿಬಂಧಕತ್ವವೆಂದು ಕರೆಸಿಕೊಳ್ಳುತ್ತದೆ. ಆದ್ದರಿಂದ ಮಗುವಿನ ಹುಟ್ಟುವಿಕೆಗೆ ಯಾವುದು ಕಾರಣವೋ, ಅದು ಇಲ್ಲದಿರುವುದೇ ಪ್ರತಿಬಂಧಕವಾಗುತ್ತದೆ. ಹೀಗೆ ಸುಲಭವಾಗಿ ಕೂಡಿಸಲು ಬರುವಾಗ ಕಾರಣದಲ್ಲಿ ಶಕ್ತಿಯನ್ನು ಕಲ್ಪನೆ ಮಾಡಿ, ಅದರ ವಿಘಟಕತ್ವವನ್ನು ಕಲ್ಪನೆ ಮಾಡುವುದರಿಂದ ಕೇವಲ ಕಲ್ಪನಾಗೌರವ ಬರುತ್ತದೆ ಹೊರತು, ಶಕ್ತಿಪದಾರ್ಥವು ಸಿದ್ಧವಾಗುವುದಿಲ್ಲ.

## ದುರದೃಷ್ಟ ಒಪ್ಪಿದರೆ ಸಾಕು, ಶಕ್ತಿ ಒಪ್ಪಬೇಕಾಗಿಲ್ಲ

**अत एव हि सर्वेऽपि लौकिकाः परीक्षकाश्च 'सर्वाऽपि सामग्री वृत्ता; अस्य दुरदृष्टवशात्तु कार्यं न जातम्' इति वदन्ति । 'प्रतिबन्धकीभूतदुरदृष्ट निवृत्तये च अश्वत्थसेवादिकं आचरन्ति' इति चेत् ।**

ಆದ್ದರಿಂದಲೇ ಪ್ರತಿಯೊಬ್ಬ ಲೌಕಿಕರೂ ಹಾಗೂ ಜ್ಞಾನಿಗಳು ಹೀಗೆ ಹೇಳುತ್ತಾರೆ - 'ಇವನಿಗೆ ಎಲ್ಲಾ ಅನುಕೂಲವಿದೆ. ದುರದೃಷ್ಟದಿಂದ ಇವನು ಅಂದುಕೊಂಡದ್ದು ಏನೂ ಆಗುತ್ತಿಲ್ಲ' ಎಂದು. ಪ್ರತಿಬಂಧಕವಾದ ಇಂಥ ದುರದೃಷ್ಟದ ಪರಿಹಾರಕ್ಕಾಗಿಯೇ ಅಶ್ವತ್ಥವೃಕ್ಷದ ಸೇವೆ ಮೊದಲಾದವುಗಳನ್ನು ಪ್ರತಿಯೊಬ್ಬರೂ ಆಚರಿಸುತ್ತಾರೆ. ಹೀಗೆ ದುರದೃಷ್ಟವೆಂಬ ಪ್ರತಿಬಂಧಕದಿಂದಲೇ ಎಲ್ಲವನ್ನೂ ಕೂಡಿಸಲು ಬರುವಾಗ ಹೊಸದಾದ ಶಕ್ತಿ ಎಂಬ ಪದಾರ್ಥವನ್ನು ಒಪ್ಪುವ ಅವಶ್ಯಕತೆಯಿಲ್ಲ.

## ಶಕ್ತಿಯನ್ನು ಒಪ್ಪಲು ಶ್ರುತಿ ಪ್ರಮಾಣ

**अत्रोच्यते – अस्त्येव पदार्थेषु शक्तिर्नाम पदार्थः । 'पराऽस्य शक्तिर्विविधैव श्रूयते स्वाभाविकी ज्ञानबलक्रिया च' । 'आत्मा हि परमः स्वतन्त्रः सर्ववित् सर्वशक्तिः परमसुखः परमो जीवः तद्वशोऽल्पज्ञोऽल्प शक्तिरार्तोऽल्पकः' इत्यादिश्रुतेः।**

ಪೂರ್ವಪಕ್ಷಕ್ಕೆ ಹೀಗೆ ಉತ್ತರಿಸುತ್ತೇವೆ - ಸಕಲಪದಾರ್ಥಗಳಲ್ಲಿ 'ಶಕ್ತಿ' ಎಂಬ ಪದಾರ್ಥವು ಇದ್ದೇ ಇರುತ್ತದೆ. ಈ ವಿಷಯದಲ್ಲಿ ಶ್ರುತಿಪ್ರಮಾಣ ಹೀಗಿದೆ - 'ಪರಾऽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ।' 'ಪರಮಾತ್ಮನ ಶಕ್ತಿಯು ಬಹುಬಗೆಯಾಗಿ ಕೇಳಿಸುತ್ತಿದೆ. ಇದು ಸ್ವಾಭಾವಿಕವಾಗಿದೆ'. 'ಆತ್ಮಾ ಹಿ ಪರಮಃ ಸ್ವತಂತ್ರಃ ಸರ್ವವಿತ್ ಸರ್ವಶಕ್ತಿಃ ಪರಮಸುಖಃ ಪರೋ ಜೀವಃ ತದ್ವಶೋऽಲ್ಪಜ್ಞೋऽಲ್ಪಶಕ್ತಿ-

ರಾರ್ತೋಲ್ಲಕಃ' ಪರಮಾತ್ಮನು ಸ್ವತಂತ್ರನು, ಸರ್ವಜ್ಞನು, ಸರ್ವಶಕ್ತಿವುಳ್ಳವನು, ಪರಮಸುಖವುಳ್ಳವನು, ಸರ್ವೋತ್ತಮನು ಆಗಿರುತ್ತಾನೆ. ಜೀವನಾದರೂ ಇವನ ಅಧೀನನಾಗಿದ್ದಾನೆ, ಅಲ್ಪಜ್ಞನಾಗಿದ್ದಾನೆ, ಅಲ್ಪಶಕ್ತಿವುಳ್ಳವನಾಗಿದ್ದಾನೆ, ದುಃಖಿಯಾಗಿದ್ದಾನೆ ಎಲ್ಲದರಲ್ಲಿಯೂ ಸಣ್ಣವನಾಗಿದ್ದಾನೆ ಇವೇ ಮೊದಲಾದ ಶ್ರುತಿಗಳಿಂದ 'ಶಕ್ತಿ' ಎಂಬ ಪದಾರ್ಥವು ಸಿದ್ಧವಾಗುತ್ತದೆ.

## ಶಕ್ತಿಯನ್ನು ಒಪ್ಪಲು ಸ್ಮೃತಿ ಪ್ರಮಾಣ

**'तत्र तत्र स्थितो विष्णुः तत्तच्छक्तीः प्रबोधयन्' (तत्तच्छक्तिप्रबोधकः) इत्यादिस्मृतेः ।**

'ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತೀಃ ಪ್ರಬೋಧಯನ್' (ತತ್ತಚ್ಛಕ್ತಿಪ್ರಬೋಧಕಃ) ಆಯಾ ಪದಾರ್ಥಗಳಲ್ಲಿ ನೆಲೆಸಿರುವ ಮಹಾವಿಷ್ಣುವು ಆಯಾ ಪದಾರ್ಥಗಳಲ್ಲಿರುವ ಶಕ್ತಿಯನ್ನು ಪ್ರೇರಣೆ ಮಾಡುತ್ತಾನೆ. ಇವೇ ಮೊದಲಾದ ಸ್ಮೃತಿಗಳೂ ಕೂಡ ಪ್ರಮಾಣವಾಗಿದೆ.

ವಿವರಣೆ - ಈ ಶ್ಲೋಕವನ್ನು ಅನುವ್ಯಾಖ್ಯಾನದ ಸರ್ವಗತತ್ವಾಧಿಕರಣದಲ್ಲಿ ಶ್ರೀಮದಾಚಾರ್ಯರು ಉಲ್ಲೇಖ ಮಾಡಿದ್ದಾರೆ. ಇದಕ್ಕೆ ಶ್ರೀಮಟ್ಟೀಕಾಕೃತ್ಪಾದರು ನ್ಯಾಯಸುಧೆಯಲ್ಲಿ ಏಳು ಬಗೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಹಾಗೂ ತಂತ್ರಸಾರಸಂಗ್ರಹದಲ್ಲಿಯೂ ಕೂಡ ಈ ಶ್ಲೋಕವನ್ನು 'ತತ್ತಚ್ಛಕ್ತಿಪ್ರಬೋಧಕಃ' ಎಂಬ ಪಾಠಾಂತರದಿಂದ ಉಲ್ಲೇಖ ಮಾಡಿದ್ದಾರೆ.

## ಶಕ್ತಿಯನ್ನು ಒಪ್ಪಲು ಯುಕ್ತಿಪ್ರಮಾಣ

**'दण्डादिः घटोत्पादनशक्तिमान् । तज्जनकत्वात् । यन्नैवं तन्नैवं यथा रासभादिः' इत्यादियुक्तेश्च ।**

'ದಂಡಾದಿಃ ಘಟೋತ್ಪಾದನಶಕ್ತಿಮಾನ್ । ತಜ್ಜನಕತ್ವಾತ್ । ಯನ್ನೈವಂ ತನ್ನೈವಂ ಯಥಾ ರಾಸಭಾದಿಃ' ದಂಡ ಮೊದಲಾದವು ಘಟವನ್ನು ಉತ್ಪತ್ತಿ ಮಾಡುವ ಶಕ್ತಿಯುಳ್ಳವುಗಳು. ಏಕೆಂದರೆ ಘಟಜನಕವಾಗಿರುವುದರಿಂದ. ಯಾವುದು ಘಟಜನಕವಲ್ಲವೋ, ಅದರಲ್ಲಿ ಘಟೋತ್ಪಾದನೆ ಶಕ್ತಿಯಿರುವುದಿಲ್ಲ. ಉದಾಹರಣೆ - 'ರಾಸಭ' ಇದೇ ಮೊದಲಾದ ಯುಕ್ತಿಗಳು ಪ್ರಮಾಣವಾಗಿರುವುದರಿಂದ ಶಕ್ತಿಯನ್ನು ಒಪ್ಪಬೇಕು.

## ಲೋಕವ್ಯವಹಾರದಿಂದ ಶಕ್ತಿಯ ಸಮರ್ಥನೆ

**किञ्च यः पाषाणादिः दृढाङ्गेन विंशतिवार्षिकेण उत्ध्रियते, नासौ बालेन उत्ध्रियते इत्यनुभवसिद्धम् । तदेतद् वैषम्यं शक्त्यशक्तिकृतमेव । 'अयमस्योद्धरणे शक्तो नायं' इति व्यवहारात् ।**

ಶಕ್ತಿಯನ್ನು ಒಪ್ಪಲು ಮತ್ತೊಂದು ಕಾರಣ ಹೀಗಿದೆ - ಬಂಡೆಗಲ್ಲನ್ನು ದಷ್ಟಪುಷ್ಟ ಅಂಗವುಳ್ಳ ಇಪ್ಪತ್ತು ವರ್ಷದ ಯುವಕನು ಹೇಗೆ ಲೀಲಾಜಾಲವಾಗಿ ಎತ್ತುತ್ತಾನೋ, ಅದರಂತೆ ಬಾಲಕನಿಂದ ಎತ್ತಲು ಸಾಧ್ಯವಾಗುವುದಿಲ್ಲ. ಇದು ಪ್ರತಿಯೊಬ್ಬರಿಗೂ ಅನುಭವಸಿದ್ಧವಾಗಿದೆ. ಇದಕ್ಕೆ ಕಾರಣವೇನೆಂದರೆ ಇಪ್ಪತ್ತು ವರ್ಷದ ಯುವಕನಲ್ಲಿ ಆ ಬಂಡೆಗಲ್ಲನ್ನೆತ್ತುವ ಶಕ್ತಿಯಿದೆ. ಬಾಲಕನಲ್ಲಿ ಆ ಶಕ್ತಿಯಿಲ್ಲ ಎಂದೇ ಹೇಳಬೇಕು. ಏಕೆಂದರೆ ಲೋಕದಲ್ಲಿ 'ಯುವಕನು ಬಂಡೆಗಲ್ಲನ್ನು ಎತ್ತಲು ಶಕ್ತನಾಗಿದ್ದಾನೆ, ಬಾಲಕನು ಶಕ್ತನಾಗಿಲ್ಲ' ಎಂದೇ ವ್ಯವಹರಿಸುತ್ತಾರೆ.

## ಯುವಕನಾದಾಗ ಮಾತ್ರವಲ್ಲ, ಬಾಲಕನಾಗಿದ್ದಾಗಲೂ ಶಕ್ತಿಯಿದೆ

**न चैवं बाल्ये स्थूलपाषाणोद्धरणसामर्थ्याभावात् शक्तेः सहजत्वं न स्यादिति वाच्यम् । बाल्येऽपि तच्छक्त्यङ्गीकारात् ।**

ಪ್ರಶ್ನೆ - ಬಾಲ್ಯಾವಸ್ಥೆಯಲ್ಲಿ ಭಾರವಾದ ಬಂಡೆಗಲ್ಲನ್ನು ಎತ್ತುವ ಸಾಮರ್ಥ್ಯ ಇರುವುದಿಲ್ಲ. ಆದ್ದರಿಂದ ಬಾಲಕನಿಗೆ ಬಂಡೆಗಲ್ಲನ್ನೆತ್ತುವ ಶಕ್ತಿಯು ಸಹಜವಾಗಿರುವುದಿಲ್ಲ ಎಂದು ಹೇಳಬಹುದಲ್ಲವೇ ?

ಉತ್ತರ - ಇದು ತಪ್ಪು. ಬಾಲ್ಯಾವಸ್ಥೆಯಲ್ಲಿಯೂ ಕೂಡ ಬಂಡೆಗಲ್ಲನ್ನು ಎತ್ತುವ ಶಕ್ತಿಯು ಬಾಲಕನಿಗೆ ಇದ್ದೇ ಇರುತ್ತದೆ.

## ಅಭಿವ್ಯಕ್ತವಾದ ಶಕ್ತಿಯೇ ಕಾರ್ಯಜನಕ

**कथं तर्हि शक्त्यभावोक्तिः ? तदा कार्याभावश्चेति चेत् । न । अभिव्यक्तशक्तेरेव कार्योन्मुखत्वेन तादृशशक्त्यभावेन बाल्ये कार्याभावस्य शक्तिर्नेति व्यवहारस्य चोपपत्तेः । उपवासादिना शक्तिह्रासस्य भोगादिना तद्वृद्धेश्च अनुभवसिद्धत्वेन च न शक्त्यपलापो युक्तः ।**

ಪ್ರಶ್ನೆ - ಹಾಗಾದರೆ ಬಾಲಕನಿಗೆ ಶಕ್ತಿಯಿಲ್ಲವೆಂದೇಕೆ ವ್ಯವಹರಿಸುತ್ತಾರೆ ? ಶಕ್ತಿಯಿಲ್ಲದ್ದರಿಂದಲೇ ಬಂಡೆಗಲ್ಲೆನ್ನುತ್ತುವ ಸಾಮರ್ಥ್ಯ ಅವನಿಗೆ ಇರುವುದಿಲ್ಲ ಅಲ್ಲವೇ ?

ಉತ್ತರ - ಇದು ತಪ್ಪು. ಅಭಿವ್ಯಕ್ತವಾದ ಶಕ್ತಿಯೇ ಕಾರ್ಯಜನಕವಾಗುತ್ತದೆ. ಬಾಲಕನಲ್ಲಿರುವ ಶಕ್ತಿಯು ಅನಭಿವ್ಯಕ್ತವಾಗಿದೆ. ಅಭಿವ್ಯಕ್ತವಾದ ಶಕ್ತಿ ಇಲ್ಲದ ಕಾರಣ ಬಂಡೆಗಲ್ಲನ್ನೆತ್ತುವ ಕಾರ್ಯವೂ ಕೂಡ ಉಂಟಾಗಿರುವುದಿಲ್ಲ. ಈ ಕಾರಣದಿಂದಷ್ಟೇ ಲೋಕದಲ್ಲಿ ಬಾಲಕನಿಗೆ ಶಕ್ತಿಯಿಲ್ಲ ಎಂದು ವ್ಯವಹರಿಸುತ್ತಾರೆ. ಏಕೆಂದರೆ ಯುವಕನಿಗೂ ಕೂಡ ಉಪವಾಸಾದಿಗಳನ್ನು ಮಾಡಿದಾಗ ಶಕ್ತಿಯು ಕುಂದುತ್ತದೆ. ಶಕ್ತಿದಾಯಕವಾದ ಪದಾರ್ಥಗಳನ್ನು ತಿಂದಾಗ ಅದೇ ಶಕ್ತಿಯು ಅಭಿವೃದ್ಧವಾಗುತ್ತದೆ ಎಂಬುದು ಅನುಭವಸಿದ್ಧವಾಗಿದೆ. ಆದ್ದರಿಂದ ಇರುವ ಶಕ್ತಿಯೇ ಅನಭಿವ್ಯಕ್ತವಾಗುತ್ತದೆ ಎಂದು ಒಪ್ಪಬೇಕು ಹೊರತು ಶಕ್ತಿಯನ್ನು ಅಪಲಾಪ ಮಾಡಬಾರದು.

## ಶಕ್ತಿಯು ಪ್ರತಿಬದ್ಧವಾಗದಿದ್ದರೆ ಗಮನಕ್ರಿಯೆಯ ನಿವೃತ್ತಿಯನ್ನು ಕೂಡಿಸಲಾಗದು

**अपि च गच्छन् गजः गोक्षुरकादिप्रतिबन्धके न गच्छतीत्यनुभवसिद्धम्। न च गोक्षुरकादिप्रतिबद्धशक्तित्वाभावे तदुपपन्नम् । गत्युपयोगिदार्ढ्यादिसम्पन्नस्य सहसैव गतिनिवृत्तौ निमित्ताभावात् ।**

ಮತ್ತು ನಡೆದು ಹೋಗುತ್ತಿರುವ ಆನೆಗೆ ದಾರಿಯಲ್ಲಿ ಗೋಕ್ಷುರಕ ಎಂಬ ಮುಳ್ಳಿನ ರಾಶಿಯು ಎದುರಾದಾಗ, ಮುಂದೆ ಹೋಗಲಾರದು. ಮುಂದಿನ ಹೋಗುವಿಕೆಗೆ ಗೋಕ್ಷುರಕವೇ ಪ್ರತಿಬಂಧಕವಾಗಿದೆ ಎಂಬುದು ಅನುಭವಸಿದ್ಧವಾಗಿದೆ. ಗೋಕ್ಷುರಕದಿಂದ ಆನೆಯಲ್ಲಿರುವ ಗಮನಶಕ್ತಿಯು ಪ್ರತಿಬದ್ಧವಾಯಿತು ಎಂದು ಒಪ್ಪದಿದ್ದರೆ ಈ ಅನುಭವವನ್ನು ಕೂಡಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ಆನೆಯ ಗಮನಕ್ಕೆ ಆವಶ್ಯಕವಾದ ದಾರ್ಢ್ಯಾದಿಸಂಪನ್ನತ್ವವು ಇರುತ್ತದೆ. ಆದರೂ ಇದ್ದಕ್ಕಿದ್ದಂತೆ ಹೋಗುವಿಕೆಯನ್ನು ನಿಲ್ಲಿಸಿದರೆ, ಶಕ್ತಿಯಿಂದ ಪ್ರತಿಬದ್ಧವಾಯಿತೆಂಬುದನ್ನು ಬಿಟ್ಟು ಬೇರೆ ಕಾರಣವನ್ನು ಹೇಳಲು ಸಾಧ್ಯವೇ ಇಲ್ಲ.

## ಗೋಕ್ಷುರಕಾಭಾವವು ಸಹಕಾರಿಯಲ್ಲ

**न च गोक्षुरकाभावः सहकारी, तदभावात् गत्यनुदयः इति वाच्यम् । गोक्षुरकस्य प्रतिबन्धकत्वाभावप्रसङ्गात् । न हि कारणाभावं प्रतिबन्धकं मान्याः मन्यन्ते । दण्डाभावस्यापि प्रतिबन्धकत्वापातात् ।**

ಪ್ರಶ್ನೆ - ಗಜಗಮನಕ್ಕೆ ಗೋಕ್ಷುರಕಾಭಾವವು ಸಹಕಾರಿಯಾಗಿದೆ. ಸಹಕಾರಿಯಿಲ್ಲದ ಕಾರಣ ಆನೆಯ ಗಮನವು ಸಹ ನಿವೃತ್ತವಾಗಿದೆ ಎಂದೇಕೆ ಹೇಳಬಾರದು ?

ಉತ್ತರ - ಗೋಕ್ಷುರಕಾಭಾವವನ್ನು ಸಹಕಾರಿ ಎಂದು ಹೇಳಿದರೆ ಗೋಕ್ಷುರಕಾಭಾವಾಭಾವವನ್ನು ಎಂದರೆ ಗೋಕ್ಷುರಕವನ್ನು ಪ್ರತಿಬಂಧಕವೆಂದು ಹೇಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ಕಾರಣಾಭಾವವನ್ನು ಪ್ರತಿಬಂಧಕವೆಂದು ಜ್ಞಾನಿಗಳು ಒಪ್ಪುವುದಿಲ್ಲ. ಹಾಗಾದಲ್ಲಿ ಘಟಕ್ಕೆ ದಂಡಾಭಾವವು ಪ್ರತಿಬಂಧಕವೆಂದು ಒಪ್ಪಬೇಕಾಗುತ್ತದೆ. ಹಾಗಾಗಿ ಗೋಕ್ಷುರಕಾಭಾವವು ಸಹಕಾರಿವೆಂದು ಹೇಳಬಾರದು. ಹೊರತಾಗಿ ಗೋಕ್ಷುರಕವೆಂಬ ಪ್ರತಿಬಂಧಕದಿಂದ ಗಜದಲ್ಲಿ ಶಕ್ತಿಯು ಪ್ರತಿಬದ್ಧವಾಯಿತೆಂದೇ ಹೇಳಬೇಕು.

## ಪ್ರತಿಬಂಧಕ ಹಾಗೂ ಉತ್ತೇಜಕ ಶಬ್ದಗಳ ಪರ್ಯಾಲೋಚನೆಯಿಂದ ಶಕ್ತಿಯ ಸಮರ್ಥನೆ

**किञ्च मणिर्हि दाहप्रतिबन्धकः । मन्त्रस्तु उत्तेजकः इति व्यवहरन्ति । प्रतिबन्धकोत्तेजकशब्दार्थपर्यालोचनया शक्तिः सिद्धा भवति ।**

ಮತ್ತು 'ಚಂದ್ರಕಾಂತಮಣಿಯು ವಹ್ನಿಯಲ್ಲಿರುವ ದಾಹಕ್ಕೆ ಪ್ರತಿಬಂಧಕವಾಗಿದೆ. ಮಂತ್ರೋಚ್ಚಾರಣೆಯು ಅಗ್ನಿಯಲ್ಲಿರುವ ದಾಹಕ್ಕೆ ಉತ್ತೇಜಕವಾಗಿದೆ'. ಹೀಗೆ ಲೋಕದಲ್ಲಿ ಎಲ್ಲರು ವ್ಯವಹರಿಸುತ್ತಾರೆ. ಈ ವ್ಯವಹಾರದಲ್ಲಿರುವ ಪ್ರತಿಬಂಧಕ ಹಾಗೂ ಉತ್ತೇಜಕ ಎಂಬೆರಡು ಶಬ್ದಗಳನ್ನು ಸರಿಯಾಗಿ ಪರ್ಯಾಲೋಚನೆ ಮಾಡುವುದರಿಂದಲೇ ಶಕ್ತಿಯು ಸಿದ್ಧವಾಗುತ್ತದೆ.

## ಪ್ರತಿಬಂಧಕ ಹಾಗೂ ಉತ್ತೇಜಕಶಬ್ದಗಳ ಪರ್ಯಾಲೋಚನೆ

**प्रतिबन्धं करोतीति प्रतिबन्धकः; उत्तेजयति कार्योन्मुखं करोतीति उत्तेजकः इत्यर्थावगमात् । कारणस्य कार्यानुन्मुखत्वातिरिक्तप्रतिबन्धस्य कार्योन्मुखशक्तिकत्वातिरिक्तोत्तेजनस्य चाभावात् । 'प्रतिबद्धत्वात्**

**गजो नेदानीं गन्तुं शक्नोति; अन्यदा तु सत्यपि प्रतिबन्धके उत्तेजकसद्भावात् गच्छति' इति व्यवहरन्ति ।**

ಅದು ಹೀಗೆ - ಯಾವುದು ತಡೆಯನ್ನುಂಟು ಮಾಡುತ್ತದೋ, ಅದೇ ಪ್ರತಿಬಂಧಕ ಎನಿಸುತ್ತದೆ. ಯಾವುದು ಕಾರ್ಯೋನ್ಮುಖವನ್ನಾಗಿ ಮಾಡುತ್ತದೋ, ಅದು ಉತ್ತೇಜಕ. ಹೀಗೆ ಪ್ರತಿಬಂಧಕ ಹಾಗೂ ಉತ್ತೇಜಕ ಶಬ್ದಗಳ ಅರ್ಥ. ಆದರಂತೆ ಕಾರಣಕ್ಕೆ ಕಾರ್ಯೋನ್ಮುಖತ್ವವನ್ನುವುಂಟುಮಾಡುವಿಕೆಗಿಂತ ಅತಿರಿಕ್ತವಾದ ಉತ್ತೇಜನವೂ ಕೂಡ ಸರ್ವಥಾ ಇರುವುದಿಲ್ಲ. ಗೋಕ್ಷುರಕದಿಂದ ತಡೆಹಿಡಿಯಲ್ಪಟ್ಟದ್ದರಿಂದ ಆನೆಯು ಈಗ ಮುಂದೆ ನಡೆಯಲು ಸಮರ್ಥವಾಗಿರುವುದಿಲ್ಲ. ಉಳಿದ ಸಂದರ್ಭದಲ್ಲಿ ಪ್ರತಿಬಂಧಕವಿದ್ದರೂ ಕೂಡ ಉತ್ತೇಜಕವಿದ್ದರೆ ಮುಂದೆ ನಡೆಯಲು ಸಮರ್ಥವಾಗುತ್ತದೆ. ಹೀಗೆ ಲೋಕದಲ್ಲಿ ವ್ಯವಹರಿಸುತ್ತಾರೆ.

## ಪ್ರತಿಬಂಧಕವಿದ್ದಾಗಲೂ ಕಾರ್ಯ ಹುಟ್ಟಬಹುದು

**एतेनैव 'उत्तेजकाभावविशिष्टमणिः प्रतिबन्धकः' इति वदन्तः परास्ताः वेदितव्याः । सत्यपि प्रतिबन्धके उत्तेजकेन कार्यमिति व्यवहारविरोधात् ।**

ಹೀಗೆ ಸಮರ್ಥನೆ ಮಾಡಿದ್ದರಿಂದ 'ಉತ್ತೇಜಕಾಭಾವವಿಶಿಷ್ಟವಾದ ಮಣಿಯೇ ಪ್ರತಿಬಂಧಕ' ಎಂಬ ಮತವನ್ನು ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಪ್ರತಿಬಂಧಕವಿದ್ದಾಗಲೂ ಉತ್ತೇಜಕದಿಂದ ಕಾರ್ಯವು ಹುಟ್ಟುತ್ತದೆ ಎಂದು ಎಲ್ಲರೂ ವ್ಯವಹರಿಸುತ್ತಾರೆ. ಆ ವ್ಯವಹಾರಕ್ಕೆ ಈ ಮತವು ವಿರುದ್ಧವಾಗಿದೆ.

## ಒಂದು ಕಾರಣದಲ್ಲಿ ಅನಂತ ಶಕ್ತಿಕಲ್ಪನಾಪ್ರಸಂಗ

**ननु यदि कार्योत्पादार्थं कारणे शक्तिरङ्गीक्रियते तर्हि**

**भावकार्यस्योपादानजन्यत्वनियमात् शक्त्युपादाने दण्डादौ शक्तिजननोपयोगिशक्त्यन्तरं अभ्युपेयं स्यात् । एवं तच्छक्तिसिद्ध्यर्थं शक्त्यन्तरं अभ्युपेयं स्यात् । ततश्च एकस्मिन् दण्डे अनेकशक्तिकल्पनाप्रसङ्गः इति चेत् ।**

ಆಕ್ಷೇಪ - ಕಾರ್ಯದ ಉತ್ಪತ್ತಿಗಾಗಿ ಕಾರಣದಲ್ಲಿ ಶಕ್ತಿಯನ್ನು ಅಂಗೀಕರಿಸುತ್ತಿದ್ದೀರಿ. ಇದು ತಪ್ಪು. ಹಾಗೇನಾದರೂ ಕಾರಣದಲ್ಲಿ ಶಕ್ತಿಯನ್ನು ಅಂಗೀಕರಿಸುವುದಾದರೆ, ಸಕಲ-ಭಾವಕಾರ್ಯಗಳು ಉಪಾದಾನಕಾರಣದಿಂದ ಜನ್ಯವಾಗುತ್ತವೆಂಬ ನಿಯಮವಿರುವುದರಿಂದ, ಶಕ್ತಿಯೆಂಬ ಭಾವಕಾರ್ಯಕ್ಕೂ ಕೂಡ ಒಂದು ಉಪಾದಾನಕಾರಣವನ್ನು ಒಪ್ಪಬೇಕು. ಉದಾ:- 'ಘಟ' ಎಂಬ ಕಾರ್ಯಕ್ಕೆ 'ದಂಡ'ವು ಕಾರಣವಾಗಿದೆ. ಈ ದಂಡದಲ್ಲಿ ಘಟಜನನಾನುಕೂಲವಾದ ಶಕ್ತಿಯಿದೆ. ಈ ಶಕ್ತಿಗೆ ದಂಡವನ್ನೇ ಉಪಾದಾನಕಾರಣವೆಂದು ಹೇಳಬೇಕು. ಆಗ ಶಕ್ತಿಗೆ ಉಪಾದಾನವಾದ ದಂಡದಲ್ಲಿ ಶಕ್ತಿಜನನಕ್ಕೆ ಉಪಯೋಗಿಯಾದ ಮತ್ತೊಂದು ಶಕ್ತಿಯನ್ನು ಅಂಗೀಕರಿಸಬೇಕಾಗುತ್ತದೆ. ಯಾವರೀತಿಯಾಗಿ ಘಟಜನನಕ್ಕೆ ಉಪಯೋಗಿಯಾದ ಶಕ್ತಿಯನ್ನು ದಂಡದಲ್ಲಿ ಒಪ್ಪುತ್ತೀರೋ, ಅದರಂತೆ ಶಕ್ತಿಯ ಉತ್ಪತ್ತಿಗೆ ಅನುಕೂಲವಾದ ಮತ್ತೊಂದು ಶಕ್ತಿಯನ್ನು ಉಪಾದಾನಕಾರಣವಾದ ದಂಡದಲ್ಲಿ ಒಪ್ಪಬೇಕಾದ ಪರಿಸ್ಥಿತಿ ಬರುತ್ತದೆ. ಈ ಶಕ್ತಿಯೂ ಕೂಡ ಭಾವಕಾರ್ಯವಾದ್ದರಿಂದ ಅದಕ್ಕೊಂದು ಉಪಾದಾನಕಾರಣ ಬೇಕು. ಅದಕ್ಕಾಗಿ ಇನ್ನೊಂದು ಶಕ್ತಿಯನ್ನು ಒಪ್ಪಬೇಕು. ಆ ಇನ್ನೊಂದು ಶಕ್ತಿಗೆ ಮಗದೊಂದು ಶಕ್ತಿಯನ್ನು ಒಪ್ಪಬೇಕು. ಹೀಗೆ ಒಂದೇ ದಂಡದಲ್ಲಿ ಅನಂತಶಕ್ತಿಗಳನ್ನು ಕಲ್ಪನೆ ಮಾಡಬೇಕಾದ ಪರಿಸ್ಥಿತಿ ಎದುರಾಗುತ್ತದೆ.

## ಪೂರ್ವವೃತ್ತಿಯಾಗದ ದಂಡವು ಶಕ್ತಿಗೆ ಉಪಾದಾನವಲ್ಲ

**न । दण्डनिष्ठघटजननशक्तेः दण्डेन सहैव दण्डकारणजातत्वेनापूर्ववर्तिनो दण्डस्यानुपादानत्वात् ।**

ಸಮಾಧಾನ - ದಂಡದಲ್ಲಿ ಘಟಜನನ ಶಕ್ತಿಯಿದೆ. ಈ ಶಕ್ತಿಯು ದಂಡದ ಜೊತೆಯೇ ಹುಟ್ಟುತ್ತದೆ. ಆದ್ದರಿಂದ ತಾನು ಹುಟ್ಟುವ ಮೊದಲು ದಂಡವಿರಲಿಲ್ಲ. ಹೀಗೆ ಪೂರ್ವವೃತ್ತಿಯಾಗದ ದಂಡವು ಘಟಜನನಶಕ್ತಿಗೆ ಉಪಾದಾನಕಾರಣವಾಗಲು ಸರ್ವಥಾ ಸಾಧ್ಯವಿಲ್ಲ.

## ರೂಪರಸಾದಿಗಳ ಸೃಷ್ಟಿಯೇ ಅನುಪಪನ್ನವಾಗುತ್ತದಲ್ಲವೇ ?

**ननु यदि शक्तेः दण्डो नोपादानं तर्हि रूपरस्पर्शादीनां अपि दण्डो नोपादानं स्यात् । सहजत्वाविशेषात् । ततश्च उपादानाभावात् सृष्टिः न स्यात्।**

ಆಕ್ಷೇಪ - ಘಟಜನನಶಕ್ತಿಗೆ ದಂಡವು ಉಪಾದಾನಕಾರಣವಾಗುವುದಿಲ್ಲವೆಂದು ಸಮಾಧಾನ ನೀಡಿದಿರಿ. ಹಾಗಾದರೆ ದಂಡದಲ್ಲಿರುವ ರೂಪ, ರಸ, ಸ್ಪರ್ಶ ಮೊದಲಾದ ಗುಣಗಳಿಗೂ ಕೂಡ ದಂಡವು ಉಪಾದಾನಕಾರಣ ಆಗದಿರಬೇಕಾದೀತು. ಏಕೆಂದರೆ ದಂಡದ ಜೊತೆಗೇ ಶಕ್ತಿಯು ಹುಟ್ಟಿದೆ ಎಂಬ ಕಾರಣದಿಂದ ಶಕ್ತಿಗೆ ದಂಡವು ಕಾರಣವಾಗುವುದಿಲ್ಲವಾದಲ್ಲಿ, ದಂಡದ ಜೊತೆಗೇ ಹುಟ್ಟಿರುವ ರೂಪರಸಾದಿಗಳಿಗೂ ಕೂಡ ದಂಡವು ಉಪಾದಾನಕಾರಣವಾಗಲು ಸಾಧ್ಯವಿಲ್ಲ. ಆದ್ದರಿಂದ ರೂಪರಸಾದಿಗಳಿಗೆ ಉಪಾದಾನಕಾರಣವೇ ಇಲ್ಲದ್ದರಿಂದ ಅವುಗಳ ಸೃಷ್ಟಿಯೇ ಅನುಪಪನ್ನವಾಗುತ್ತದೆ.

## ದಂಡಗತ ಗುಣಗಳಿಗೆ ತದವಯವಗತ ಗುಣಗಳು ಕಾರಣವಲ್ಲ

**न च दण्डोपादानमेव दण्डगुणानामप्युपादानमिति वाच्यम् । तथा सति रूपादीनां दण्डावयवगतत्वप्रास्या दण्डस्य रूपादिशून्यतापातात् ।**

ಪ್ರಶ್ನೆ - ದಂಡಕ್ಕೆ ಯಾವುದು ಉಪಾದಾನಕಾರಣವೋ, ದಂಡದಲ್ಲಿರುವ ರೂಪರಸಾದಿ-ಗುಣಗಳಿಗೂ ಕೂಡ ಅದನ್ನೇ ಉಪಾದಾನಕಾರಣವೆನ್ನಬಹುದಲ್ಲವೇ ?

ಉತ್ತರ - ಗೋಕ್ಷುರಕಾಭಾವವನ್ನು ಸಹಕಾರಿ ಎಂದು ಹೇಳಿದರೆ ಗೋಕ್ಷುರಕಾಭಾವಾಭಾವವನ್ನು ಎಂದರೆ ಗೋಕ್ಷುರಕವನ್ನು ಪ್ರತಿಬಂಧಕವೆಂದು ಹೇಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ಕಾರಣಾಭಾವವನ್ನು ಪ್ರತಿಬಂಧಕವೆಂದು ಜ್ಞಾನಿಗಳು ಒಪ್ಪುವುದಿಲ್ಲ. ಹಾಗಾದಲ್ಲಿ ಘಟಕ್ಕೆ ದಂಡಾಭಾವವು ಪ್ರತಿಬಂಧಕವೆಂದು ಒಪ್ಪಬೇಕಾಗುತ್ತದೆ. ಹಾಗಾಗಿ ಗೋಕ್ಷುರಕಾಭಾವವು ಸಹಕಾರಿವೆಂದು ಹೇಳಬಾರದು. ಹೊರತಾಗಿ ಗೋಕ್ಷುರಕವೆಂಬ ಪ್ರತಿಬಂಧಕದಿಂದ ಗಜದಲ್ಲಿ ಶಕ್ತಿಯು ಪ್ರತಿಬದ್ಧವಾಯಿತೆಂದೇ ಹೇಳಬೇಕು.

## ಪ್ರತಿಬಂಧಕ ಹಾಗೂ ಉತ್ತೇಜಕ ಶಬ್ದಗಳ ಪರ್ಯಾಲೋಚನೆಯಿಂದ ಶಕ್ತಿಯ ಸಮರ್ಥನೆ

**किञ्च मणिर्हि दाहप्रतिबन्धकः । मन्त्रस्तु उत्तेजकः इति व्यवहरन्ति । प्रतिबन्धकोत्तेजकशब्दार्थपर्यालोचनया शक्तिः सिद्धा भवति ।**

ಮತ್ತು 'ಚಂದ್ರಕಾಂತಮಣಿಯು ವಹ್ನಿಯಲ್ಲಿರುವ ದಾಹಕ್ಕೆ ಪ್ರತಿಬಂಧಕವಾಗಿದೆ. ಮಂತ್ರೋಚ್ಚಾರಣೆಯು ಅಗ್ನಿಯಲ್ಲಿರುವ ದಾಹಕ್ಕೆ ಉತ್ತೇಜಕವಾಗಿದೆ'. ಹೀಗೆ ಲೋಕದಲ್ಲಿ ಎಲ್ಲರು ವ್ಯವಹರಿಸುತ್ತಾರೆ. ಈ ವ್ಯವಹಾರದಲ್ಲಿರುವ ಪ್ರತಿಬಂಧಕ ಹಾಗೂ ಉತ್ತೇಜಕ ಎಂಬೆರಡು ಶಬ್ದಗಳನ್ನು ಸರಿಯಾಗಿ ಪರ್ಯಾಲೋಚನೆ ಮಾಡುವುದರಿಂದಲೇ ಶಕ್ತಿಯು ಸಿದ್ಧವಾಗುತ್ತದೆ.

## ಪ್ರತಿಬಂಧಕ ಹಾಗೂ ಉತ್ತೇಜಕಶಬ್ದಗಳ ಪರ್ಯಾಲೋಚನೆ

**प्रतिबन्धं करोतीति प्रतिबन्धकः; उत्तेजयति कार्योन्मुखं करोतीति उत्तेजकः इत्यर्थावगमात् । कारणस्य कार्यानुन्मुखत्वातिरिक्तप्रतिबन्धस्य कार्योन्मुखशक्तिकत्वातिरिक्तोत्तेजनस्य चाभावात् । 'प्रतिबद्धत्वात्**

**गजो नेदानीं गन्तुं शक्नोति; अन्यदा तु सत्यपि प्रतिबन्धके उत्तेजकसद्भावात् गच्छति' इति व्यवहरन्ति ।**

ಅದು ಹೀಗೆ - ಯಾವುದು ತಡೆಯನ್ನುಂಟು ಮಾಡುತ್ತದೋ, ಅದೇ ಪ್ರತಿಬಂಧಕ ಎನಿಸುತ್ತದೆ. ಯಾವುದು ಕಾರ್ಯೋನ್ಮುಖವನ್ನಾಗಿ ಮಾಡುತ್ತದೋ, ಅದು ಉತ್ತೇಜಕ. ಹೀಗೆ ಪ್ರತಿಬಂಧಕ ಹಾಗೂ ಉತ್ತೇಜಕ ಶಬ್ದಗಳ ಅರ್ಥ. ಅದರಂತೆ ಕಾರಣಕ್ಕೆ ಕಾರ್ಯೋನ್ಮುಖತ್ವವನ್ನುವುಂಟುಮಾಡುವಿಕೆಗಿಂತ ಅತಿರಿಕ್ತವಾದ ಉತ್ತೇಜನವೂ ಕೂಡ ಸರ್ವಥಾ ಇರುವುದಿಲ್ಲ. ಗೋಕ್ಷುರಕದಿಂದ ತಡೆಹಿಡಿಯಲ್ಪಟ್ಟಿದ್ದರಿಂದ ಆನೆಯು ಈಗ ಮುಂದೆ ನಡೆಯಲು ಸಮರ್ಥವಾಗಿರುವುದಿಲ್ಲ. ಉಳಿದ ಸಂದರ್ಭದಲ್ಲಿ ಪ್ರತಿಬಂಧಕವಿದ್ದರೂ ಕೂಡ ಉತ್ತೇಜಕವಿದ್ದರೆ ಮುಂದೆ ನಡೆಯಲು ಸಮರ್ಥವಾಗುತ್ತದೆ. ಹೀಗೆ ಲೋಕದಲ್ಲಿ ವ್ಯವಹರಿಸುತ್ತಾರೆ.

## ಪ್ರತಿಬಂಧಕವಿದ್ದಾಗಲೂ ಕಾರ್ಯ ಹುಟ್ಟಬಹುದು

**एतेनैव 'उत्तेजकाभावविशिष्टमणिः प्रतिबन्धकः' इति वदन्तः परास्ताः वेदितव्याः । सत्यपि प्रतिबन्धके उत्तेजकेन कार्यमिति व्यवहारविरोधात् ।**

ಹೀಗೆ ಸಮರ್ಥನೆ ಮಾಡಿದ್ದರಿಂದ 'ಉತ್ತೇಜಕಾಭಾವವಿಶಿಷ್ಟವಾದ ಮಣಿಯೇ ಪ್ರತಿಬಂಧಕ' ಎಂಬ ಮತವನ್ನು ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಪ್ರತಿಬಂಧಕವಿದ್ದಾಗಲೂ ಉತ್ತೇಜಕದಿಂದ ಕಾರ್ಯವು ಹುಟ್ಟುತ್ತದೆ ಎಂದು ಎಲ್ಲರೂ ವ್ಯವಹರಿಸುತ್ತಾರೆ. ಆ ವ್ಯವಹಾರಕ್ಕೆ ಈ ಮತವು ವಿರುದ್ಧವಾಗಿದೆ.

## ಒಂದು ಕಾರಣದಲ್ಲಿ ಅನಂತ ಶಕ್ತಿಕಲ್ಪನಾಪ್ರಸಂಗ

**ननु यदि कार्योत्पादार्थं कारणे शक्तिरङ्गीक्रियते तर्हि**

**भावकार्यस्योपादानजन्यत्वनियमात् शक्त्युपादाने दण्डादौ शक्तिजननोपयोगिशक्त्यन्तरं अभ्युपेयं स्यात् । एवं तच्छक्तिसिद्ध्यर्थं शक्त्यन्तरं अभ्युपेयं स्यात् । ततश्च एकस्मिन् दण्डे अनेकशक्तिकल्पनाप्रसङ्गः इति चेत् ।**

ಆಕ್ಷೇಪ - ಕಾರ್ಯದ ಉತ್ಪತ್ತಿಗಾಗಿ ಕಾರಣದಲ್ಲಿ ಶಕ್ತಿಯನ್ನು ಅಂಗೀಕರಿಸುತ್ತಿದ್ದೀರಿ. ಇದು ತಪ್ಪು. ಹಾಗೇನಾದರೂ ಕಾರಣದಲ್ಲಿ ಶಕ್ತಿಯನ್ನು ಅಂಗೀಕರಿಸುವುದಾದರೆ, ಸಕಲ-ಭಾವಕಾರ್ಯಗಳು ಉಪಾದಾನಕಾರಣದಿಂದ ಜನ್ಯವಾಗುತ್ತವೆಂಬ ನಿಯಮವಿರುವುದರಿಂದ, ಶಕ್ತಿಯೆಂಬ ಭಾವಕಾರ್ಯಕ್ಕೂ ಕೂಡ ಒಂದು ಉಪಾದಾನಕಾರಣವನ್ನು ಒಪ್ಪಬೇಕು. ಉದಾ:- 'ಘಟ' ಎಂಬ ಕಾರ್ಯಕ್ಕೆ 'ದಂಡ'ವು ಕಾರಣವಾಗಿದೆ. ಈ ದಂಡದಲ್ಲಿ ಘಟಜನನಾನುಕೂಲವಾದ ಶಕ್ತಿಯಿದೆ. ಈ ಶಕ್ತಿಗೆ ದಂಡವನ್ನೇ ಉಪಾದಾನಕಾರಣವೆಂದು ಹೇಳಬೇಕು. ಆಗ ಶಕ್ತಿಗೆ ಉಪಾದಾನವಾದ ದಂಡದಲ್ಲಿ ಶಕ್ತಿಜನನಕ್ಕೆ ಉಪಯೋಗಿಯಾದ ಮತ್ತೊಂದು ಶಕ್ತಿಯನ್ನು ಅಂಗೀಕರಿಸಬೇಕಾಗುತ್ತದೆ. ಯಾವರೀತಿಯಾಗಿ ಘಟಜನನಕ್ಕೆ ಉಪಯೋಗಿಯಾದ ಶಕ್ತಿಯನ್ನು ದಂಡದಲ್ಲಿ ಒಪ್ಪುತ್ತೀರೋ, ಅದರಂತೆ ಶಕ್ತಿಯ ಉತ್ಪತ್ತಿಗೆ ಅನುಕೂಲವಾದ ಮತ್ತೊಂದು ಶಕ್ತಿಯನ್ನು ಉಪಾದಾನಕಾರಣವಾದ ದಂಡದಲ್ಲಿ ಒಪ್ಪಬೇಕಾದ ಪರಿಸ್ಥಿತಿ ಬರುತ್ತದೆ. ಈ ಶಕ್ತಿಯೂ ಕೂಡ ಭಾವಕಾರ್ಯವಾದ್ದರಿಂದ ಅದಕ್ಕೊಂದು ಉಪಾದಾನಕಾರಣ ಬೇಕು. ಅದಕ್ಕಾಗಿ ಇನ್ನೊಂದು ಶಕ್ತಿಯನ್ನು ಒಪ್ಪಬೇಕು. ಆ ಇನ್ನೊಂದು ಶಕ್ತಿಗೆ ಮಗದೊಂದು ಶಕ್ತಿಯನ್ನು ಒಪ್ಪಬೇಕು. ಹೀಗೆ ಒಂದೇ ದಂಡದಲ್ಲಿ ಅನಂತಶಕ್ತಿಗಳನ್ನು ಕಲ್ಪನೆ ಮಾಡಬೇಕಾದ ಪರಿಸ್ಥಿತಿ ಎದುರಾಗುತ್ತದೆ.

## ಪೂರ್ವವೃತ್ತಿಯಾಗದ ದಂಡವು ಶಕ್ತಿಗೆ ಉಪಾದಾನವಲ್ಲ

**न । दण्डनिष्ठघटजननशक्तेः दण्डेन सहैव दण्डकारणजातत्वेनापूर्ववर्तिनो दण्डस्यानुपादानत्वात् ।**

ಸಮಾಧಾನ - ದಂಡದಲ್ಲಿ ಘಟಜನನ ಶಕ್ತಿಯಿದೆ. ಈ ಶಕ್ತಿಯು ದಂಡದ ಜೊತೆಯೇ ಹುಟ್ಟುತ್ತದೆ. ಆದ್ದರಿಂದ ತಾನು ಹುಟ್ಟುವ ಮೊದಲು ದಂಡವಿರಲಿಲ್ಲ. ಹೀಗೆ ಪೂರ್ವವೃತ್ತಿಯಾಗದ ದಂಡವು ಘಟಜನನಶಕ್ತಿಗೆ ಉಪಾದಾನಕಾರಣವಾಗಲು ಸರ್ವಥಾ ಸಾಧ್ಯವಿಲ್ಲ.

## ರೂಪರಸಾದಿಗಳ ಸೃಷ್ಟಿಯೇ ಅನುಪಪನ್ನವಾಗುತ್ತದಲ್ಲವೇ ?

**ननु यदि शक्तेः दण्डो नोपादानं तर्हि रूपरस्पर्शादीनां अपि दण्डो नोपादानं स्यात् । सहजत्वाविशेषात् । ततश्च उपादानाभावात् सृष्टिः न स्यात्।**

ಆಕ್ಷೇಪ - ಘಟಜನನಶಕ್ತಿಗೆ ದಂಡವು ಉಪಾದಾನಕಾರಣವಾಗುವುದಿಲ್ಲವೆಂದು ಸಮಾಧಾನ ನೀಡಿದಿರಿ. ಹಾಗಾದರೆ ದಂಡದಲ್ಲಿರುವ ರೂಪ, ರಸ, ಸ್ಪರ್ಶ ಮೊದಲಾದ ಗುಣಗಳಿಗೂ ಕೂಡ ದಂಡವು ಉಪಾದಾನಕಾರಣ ಆಗದಿರಬೇಕಾದೀತು. ಏಕೆಂದರೆ ದಂಡದ ಜೊತೆಗೇ ಶಕ್ತಿಯು ಹುಟ್ಟಿದೆ ಎಂಬ ಕಾರಣದಿಂದ ಶಕ್ತಿಗೆ ದಂಡವು ಕಾರಣವಾಗುವುದಿಲ್ಲವಾದಲ್ಲಿ, ದಂಡದ ಜೊತೆಗೇ ಹುಟ್ಟಿರುವ ರೂಪರಸಾದಿಗಳಿಗೂ ಕೂಡ ದಂಡವು ಉಪಾದಾನಕಾರಣವಾಗಲು ಸಾಧ್ಯವಿಲ್ಲ. ಆದ್ದರಿಂದ ರೂಪರಸಾದಿಗಳಿಗೆ ಉಪಾದಾನಕಾರಣವೇ ಇಲ್ಲದ್ದರಿಂದ ಅವುಗಳ ಸೃಷ್ಟಿಯೇ ಅನುಪಪನ್ನವಾಗುತ್ತದೆ.

## ದಂಡಗತ ಗುಣಗಳಿಗೆ ತದವಯವಗತ ಗುಣಗಳು ಕಾರಣವಲ್ಲ

**न च दण्डोपादानमेव दण्डगुणानामप्युपादानमिति वाच्यम् । तथा सति रूपादीनां दण्डावयवगतत्वप्राप्त्या दण्डस्य रूपादिशून्यतापातात् ।**

ಪ್ರಶ್ನೆ - ದಂಡಕ್ಕೆ ಯಾವುದು ಉಪಾದಾನಕಾರಣವೋ, ದಂಡದಲ್ಲಿರುವ ರೂಪರಸಾದಿ-ಗುಣಗಳಿಗೂ ಕೂಡ ಅದನ್ನೇ ಉಪಾದಾನಕಾರಣವೆನ್ನಬಹುದಲ್ಲವೇ ?

ಉತ್ತರ - ಇದು ತಪ್ಪು. ಹಾಗಾದರೆ ದಂಡದಲ್ಲಿರುವ ರೂಪರಸಾದಿಗಳು ದಂಡದ ಅವಯವದಲ್ಲಿ ಇರುತ್ತವೆ ಎಂದು ಹೇಳಬೇಕಾಗುತ್ತದೆ. ದಂಡದಲ್ಲಿ ರೂಪರಸಾದಿ ಯಾವುದೇ ಗುಣಗಳೂ ಕೂಡ ಇಲ್ಲವೆಂದಾಗುತ್ತದೆ.

**न च तदिष्टम् । महत्त्वसमानाधिकरणोद्भूतरूपवत्त्वाभावेन अचाक्षुषतापातात् । 'दण्डो रूपवान्' इत्याद्यनुभवविरोधाच्च इति चेत् ।**

ದಂಡದಲ್ಲಿರುವ ರೂಪಾದಿಗಳು ತದವಯವದಲ್ಲಿದೆ ಎಂಬುದನ್ನು ಇಷ್ಟಾಪತ್ತಿ ಎನ್ನಲಾಗದು. ಏಕೆಂದರೆ ಮಹತ್ವಸಮಾನಾಧಿಕರಣವಾದ ಉದ್ಭೂತರೂಪವತ್ವವು ಇಲ್ಲದ ಕಾರಣ ದಂಡವು ಅಚಾಕ್ಷುಷವೆಂದಾಗಬೇಕಾಗುತ್ತದೆ, ಎಂದರೆ ಮಹತ್ವವಿದ್ದಲ್ಲೇ ಉದ್ಭೂತರೂಪವಿರುತ್ತದೆ. ಪ್ರಕೃತ ದಂಡದಲ್ಲಿರುವ ಮಹತ್ವದಲ್ಲಿ ಉದ್ಭೂತರೂಪವತ್ವವಿಲ್ಲವೆಂದು ಹೇಳುವುದಾದರೆ ಕಣ್ಣಿಗೆ ಕಾಣಿಸದೇ ಇರುವ ಪರಿಸ್ಥಿತಿ ಬರುತ್ತದೆ. ಅಷ್ಟೇ ಅಲ್ಲದೇ - 'ದಂಡವು ರೂಪವುಳ್ಳದ್ದು' ಎಂಬುದೇ ಪ್ರತಿಯೊಬ್ಬರ ಅನುಭವವಿದೆ ಹೊರತು, ದಂಡದ ಅವಯವದಲ್ಲಿ ರೂಪವಿದೆ ಎಂಬ ಅನುಭವ ಯಾರಿಗೂ ಇಲ್ಲ.

ಆದ್ದರಿಂದ ದಂಡದಲ್ಲಿರುವ ಶಕ್ತಿಗೆ ದಂಡವು ಉಪಾದಾನಕಾರಣವಾಗದಿದ್ದರೆ, ದಂಡದಲ್ಲಿರುವ ರೂಪರಸಾದಿಗಳಿಗೂ ಕೂಡ ಉಪಾದಾನಕಾರಣವೇ ಇಲ್ಲವೆಂದಾಗಬೇಕಾಗುತ್ತದೆ.[೦೧]

## ಧರ್ಮಿಸತ್ತಾಸಾಪೇಕ್ಷವಾದ ಆಗುಂತುಕಗುಣಗಳಿಗೆ ಧರ್ಮಿಯೇ ಉಪಾದಾನಕಾರಣ

(೦೧) 'ನನು ಯದಿ' ಎಂಬಲ್ಲಿಂದ ಪ್ರಾರಂಭಿಸಿ, 'ಅನುಭವವಿರೋಧಾಚ್ಚ ಇತಿ ಚೇತ್' ಎಂಬಲ್ಲಿಯ ತನಕ ಇರುವ ವಾಕ್ಯಗಳು.

**न । सहजगुणानां निरूपादानैव सृष्टिः । धर्मिसत्तासापेक्षागन्तुकगुणानां धर्म्येवोपादानमित्यङ्गीकारात् ।**

ಈ ಆಕ್ಷೇಪ ತಪ್ಪು. ಕಾರಣದ ಜೊತೆಗೆ ಹುಟ್ಟುವ ಗುಣಗಳಿಗೆ ಉಪಾದಾನಕಾರಣವೇ ಬೇಕಾಗಿರುವುದಿಲ್ಲ. ಹಾಗೆಯೇ ಅದರ ಶಕ್ತಿಯನ್ನು ನಮ್ಮ ಸಿದ್ಧಾಂತದಲ್ಲಿ ಅಂಗೀಕರಿಸಲಾಗಿದೆ. ಏಕೆಂದರೆ ಧರ್ಮಿಸತ್ತಾಸಾಪೇಕ್ಷವಾದ ಆಗಂತುಕಗುಣಗಳಿಗೆ ಧರ್ಮಿಯೇ ಉಪಾದಾನವಾಗಿದೆ ಎಂಬುದು ನಮ್ಮ ಸಿದ್ಧಾಂತ.

## ಅಭಿನ್ನಪದಾರ್ಥಗಳಲ್ಲಿಯೂ ವಿಶೇಷಬಲದಿಂದ ತಾರತಮ್ಯ

**न च सोपादानदण्डाभिन्नस्य रूपादेः निरुपादानत्वमयुक्तमिति वाच्यम् । स्पार्शनघटाभिन्नस्य रूपादेः विशेषबलेनास्पार्शनत्ववत् इन्द्राभिन्नस्यार्जुनस्य तदपेक्षया न्यूनत्ववच्च सोपादानदण्डाभिन्नस्य सहजस्य रूपादेः विशेषबलेन निरुपादानत्वोपपत्तेः ।**

ಪ್ರಶ್ನೆ - ಉಪಾದಾನಕಾರಣದಿಂದ ಕೂಡಿರುವ ದಂಡದಿಂದ ರೂಪಾದಿಗಳು ಅಭಿನ್ನವಾದ ಮೇಲೆ ನಿರುಪಾದಾನವಾಗುತ್ತವೆಂದು ಹೇಳುವುದು ಅಯುಕ್ತವಲ್ಲವೇ? ದಂಡದಂತೆ ರೂಪಾದಿಗಳೂ ಕೂಡ ಸೋಪಾದಾನವೇ ಆಗಬೇಕು. ಅಭಿನ್ನವಾದ ಎರಡು ಪದಾರ್ಥಗಳಲ್ಲಿ ಒಂದನ್ನು ಸೋಪಾದಾನವೆಂದು ಹೇಳಿ, ಮತ್ತೊಂದನ್ನು ನಿರುಪಾದಾನವೆಂದು ಹೇಳುವುದು ಅಯುಕ್ತವಲ್ಲವೇ ?

ಉತ್ತರ - ಈ ಪ್ರಶ್ನೆ ಅಯುಕ್ತವಾಗಿದೆ. ಏಕೆಂದರೆ ಸ್ಪರ್ಶವೆಂಬ ಗುಣವುಳ್ಳ ಘಟದಿಂದ ಅಭಿನ್ನವಾದ ರೂಪಾದಿಗಳು ಸ್ಪರ್ಶೇಂದ್ರಿಯದಿಂದ ಗೋಚರವಾಗುತ್ತವೆಂದು ಹೇಳುವುದಿಲ್ಲ. ಏಕೆಂದರೆ ವಿಶೇಷಬಲದಿಂದ ಅಭೇದವಿದ್ದರೂ ಭೇದದ ಕಾರ್ಯವು ನಡೆಯುತ್ತದೆ. ಮತ್ತೊಂದು ಉದಾಹರಣೆ - ದೇವೇಂದ್ರನಿಂದ ಅರ್ಜುನನು

ಅಭಿನ್ನನಾಗಿದ್ದಾನೆ. ಆದರೂ ಕೂಡ ದೇವೇಂದ್ರನ ಅಪೇಕ್ಷೆಯಿಂದ ನ್ಯೂನತ್ವವು ಅರ್ಜುನನಲ್ಲಿದೆ. ಈ ಉದಾಹರಣೆಯಂತೆ ದಂಡವು ಸೋಪಾದಾನವಾಗಿದ್ದರೂ ತದಭಿನ್ನವಾದ ಜೊತೆಯಲ್ಲಿಯೇ ಹುಟ್ಟಿರುವ ರೂಪಾದಿಗಳು ನಿರುಪಾದಾನವಾಗಬಹುದು. ವಿಶೇಷಬಲದಿಂದ ಈ ವಿರೋಧವನ್ನು ಪರಿಹರಿಸುತ್ತೇವೆ.

## ರೂಪರಸಾದಿಗಳಿಗೆ ದಂಡವೇ ಏಕೆ ಉಪಾದಾನಕಾರಣವಲ್ಲ ?

**ननु दण्डः प्रथमे क्षणे निर्गुण एवोपपद्यते । पश्चात् समवेता गुणाः उत्पद्यन्ते । तथा च दण्ड एव स्वगुणोपादानमिति चेत् ।**

ಆಕ್ಷೇಪ - ದಂಡವು ಹುಟ್ಟಿದ ಕ್ಷಣದಲ್ಲಿ ನಿರ್ಗುಣವಾಗಿಯೇ ಇರುತ್ತದೆ. ದ್ವಿತೀಯ ಕ್ಷಣದಲ್ಲಿ ಉಳಿದ ಗುಣಗಳು ಆ ದಂಡದಲ್ಲಿ ಬಂದು ಸೇರುತ್ತದೆ. ಹೀಗೊಪ್ಪಿದಾಗ ದಂಡದಲ್ಲಿರುವ ಶಕ್ತಿ, ರಸ,ರೂಪ ಮೊದಲಾದ ಕಾರಣಗಳಿಗೆ. ತಾನೇ ಉಪಾದಾನಕಾರಣವೆಂದು ಹೇಳಬಹುದಲ್ಲವೇ ?

## 'ಉತ್ಪನ್ನಂ ದ್ರವ್ಯಂ' ಇತ್ಯಾದಿ ನ್ಯಾಯವೇ ಅಪ್ರಾಮಾಣಿಕ

**अत्र वक्तव्यम् – किमेवं अनुभवबलात् उच्यते । उत भावकार्यस्य सोपादानत्वनियमात् । आहोस्वित् स्वसमयानुरोधात् । नाद्यः अनुभवाभावात् । प्रत्युत प्रथमक्षण एव सगुणत्वानुभवाच्च । नापि द्वितीयः । नियमस्य प्रायिकत्वात् । नापि तृतीयः । तत्समयस्य अप्रामाणिकत्वात् ।।**

**।। इति स्वमते सहजशक्तिनिरूपणम् ।।**

ಹುಟ್ಟಿದಾಕ್ಷಣ ದ್ರವ್ಯವು ನಿರ್ಗುಣವಾಗಿರುತ್ತದೆಂದು ನೀವು ಹೇಳುತ್ತಿದ್ದೀರಿ. ಅನುಭವದಿಂದ ಹೀಗೆ ಹೇಳುತ್ತಿದ್ದಿರೋ? ಅಥವಾ ಯಾವುದೇ ಭಾವಕಾರ್ಯಕ್ಕೆ ಉಪಾದಾನಕಾರಣವಿರಲೇ ಬೇಕೆಂಬ ನಿಯಮಕ್ಕೆ ಅನುಸಾರಿಯಾಗಿ ಹೀಗೆ ಹೇಳುತ್ತಿದ್ದೀರೋ? ಅಥವಾ ನಿಮ್ಮ ಸಿದ್ಧಾಂತಕ್ಕೆ ಜೋತುಬಿದ್ದು ಹೀಗೆ ಹೇಳುತ್ತಿದ್ದಿರೋ ?

ಮೊದಲನೆಯ ಪಕ್ಷ ತಪ್ಪು. ಯಾರೊಬ್ಬರಿಗೂ ಹುಟ್ಟಿದ್ದ ದ್ರವ್ಯವು ನಿರ್ಗುಣವಾಗಿರುತ್ತದೆ ಎಂಬ ಅನುಭವವಿರುವುದಿಲ್ಲ. ಹೊರತಾಗಿ ಪ್ರಥಮಕ್ಷಣದಲ್ಲಿಯೇ ಅದರಲ್ಲಿರುವ ಗುಣವನ್ನು ಅನುಭವಿಸುತ್ತಾರೆ.

ಎರಡನೆಯ ಪಕ್ಷವೂ ಕೂಡ ಅಯುಕ್ತವಾಗಿದೆ. ಏಕೆಂದರೆ ಭಾವಕಾರ್ಯವು ಸೋಪಾದಾನವಾಗಿರಲೇ ಬೇಕೆಂಬ ನಿಯಮವು ಪ್ರಾಯಿಕವಾದದ್ದು. ಅಪವಾದವಿದ್ದಾಗ ಉಪಾದಾನಕಾರಣವಿಲ್ಲದೆಯೂ ಹುಟ್ಟಬಹುದು.

ಮೂರನೆಯ ಪಕ್ಷವೂ ಆಯುಕ್ತವಾಗಿದೆ. ನಿಮ್ಮ ಸಿದ್ಧಾಂತಕ್ಕೆ ಅನುಸಾರಿಯಾಗಿ ಹುಟ್ಟಿದ ದ್ರವ್ಯವು ನಿರ್ಗುಣವಾಗಿದೆ ಎಂದು ಹೇಳಬೇಕು. ಆದರೆ ನಿಮ್ಮ ಸಿದ್ಧಾಂತವೇ ಅಪ್ರಾಮಾಣಿಕವಾಗಿದೆ.

ಇಲ್ಲಿಗೆ ನಮ್ಮ ಸಿದ್ಧಾಂತದ ಪ್ರಕಾರ ಸಹಜಶಕ್ತಿನಿರೂಪಣೆ ಎಂಬ ಪ್ರಕರಣವು ಸಮಾಪ್ತವಾಯಿತು.

## ತತ್ವಚಿಂತಾಮಣಿಯಲ್ಲಿ ಸಹಜಶಕ್ತಿ ನಿರಾಸ

**मणिकारस्तु – 'नास्त्येव शक्तिर्नाम पदार्थः । मानाभावात् । ननु ईश्वरवत् शक्तिरपि कार्येणैव अनुमीयते । तथा हि यादृशादेव करतलानलसंयोगात् दाहो जायते तादृशादेव प्रतिबन्धकसत्त्वे न जायते । अतो यदभावात् कार्याभावः तद् वह्न्यादौ अभ्युपेयम् । अन्यथा प्रतिबन्धकवेलायां कार्याभावो न सिध्येत् । क्लृप्तसकलकारणसद्भावे कार्यानुत्पादायोगात् इति चेत् ।**

ತತ್ವಚಿಂತಾಮಣಿಕಾರನು ಹೀಗೆ ಹೇಳುತ್ತಾನೆ - 'ಶಕ್ತಿ' ಎಂಬ ಪದಾರ್ಥವೇ ಇರುವುದಿಲ್ಲ. ಏಕೆಂದರೆ 'ಶಕ್ತಿ' ವಿಷಯದಲ್ಲಿ ಯಾವುದೇ ಪ್ರಮಾಣಗಳು ಇರುವುದಿಲ್ಲ.

ಪ್ರಶ್ನೆ - ಶಕ್ತಿಯನ್ನು ಒಪ್ಪದಿದ್ದರೆ ಈಶ್ವರನನ್ನು ಕಾರ್ಯತ್ವ ಹೇತುವಿನಿಂದ ಹೇಗೆ ಅನುಮಾನ ಮಾಡಲಾಗುತ್ತದೋ, ಅದೇ ರೀತಿಯಲ್ಲಿ ಶಕ್ತಿಯನ್ನೂ ಕೂಡ ಕಾರ್ಯತ್ವ ಹೇತುವಿನಿಂದ ಅನುಮಾನ ಮಾಡಬಹುದು - ಎಂತಹ ಕರತಲ ಹಾಗೂ ವಹ್ನಿಗಳ ಸಂಯೋಗದಿಂದ ದಾಹವು ಉಂಟಾಗುತ್ತದೋ, ಅಂತಹ ಕಾರಣಕಲಾಪಗಳಿದ್ದಾಗಲೇ ಪ್ರತಿಬಂಧಕವಿದ್ದಲ್ಲಿ ದಾಹವು ಉಂಟಾಗುವುದಿಲ್ಲ. ಆದ್ದರಿಂದ ಯಾವುದನ್ನು ಒಪ್ಪದಿದ್ದರೆ (ಯಾವ ಶಕ್ತಿಯನ್ನು ಒಪ್ಪದಿದ್ದರೆ) ದಾಹವೆಂಬ ಕಾರ್ಯವು ಉಂಟಾಗುವುದಿಲ್ಲವೋ, ಅಂತಹ ಪದಾರ್ಥವನ್ನು (ಶಕ್ತಿಯನ್ನು) ವಹ್ನ್ಯಾದಿಗಳಲ್ಲಿ ಅಂಗೀಕಾರ ಮಾಡಲೇಬೇಕು. ಇಲ್ಲದಿದ್ದರೆ ಪ್ರತಿಬಂಧಕವಿದ್ದಾಗ ಕಾರ್ಯಾಭಾವವನ್ನೇ ಉಪಪಾದನೆ ಮಾಡಲು ಸಾಧ್ಯವಾಗುವುದಿಲ್ಲ. ಕಾರ್ಯೋತ್ಪಾದಕ್ಕೆ ಅವಚ್ಛೇದಕವಾದ ಸಕಲಕಾರಣಕಲಾಪಗಳಿದ್ದಾಗ ಕಾರ್ಯವು ಉಂಟಾಗುತ್ತಿಲ್ಲ ಎಂಬುದನ್ನು ಉಪಾದನೆ ಮಾಡಲು ಸಾಧ್ಯವಾಗದೇ ಇರಬೇಕಾದೀತು. ಆದ್ದರಿಂದ ಶಕ್ತಿಯೆಂಬ ಪದಾರ್ಥವನ್ನು ಒಪ್ಪಲೇ ಬೇಕು.

## ಕಾರ್ಯಾಭಾವ ಆಗಲು ಪ್ರತಿಬಂಧಕಾಭಾವವೆಂಬ ಕಾರಣಾಭಾವವಿದೆ

**न । प्रतिबन्धकवेलायां प्रतिबन्धकाभावरूपकारणाभावेनैव कार्याभावोपपत्तेः ।**

ಉತ್ತರ - ಈ ಪ್ರಶ್ನೆಯು ಅಯುಕ್ತವಾಗಿದೆ. ಪ್ರತಿಬಂಧಕವಿರುವ ಸಂದರ್ಭದಲ್ಲಿ ಪ್ರತಿಬಂಧಕಾಭಾವವೆಂಬ ಕಾರಣಾಭಾವದಿಂದಲೇ ಕಾರ್ಯವುಂಟಾಗುತ್ತಿಲ್ಲವೆಂದು ಕೂಡಿಸಬಹುದು.

ವಿವರಣೆ - ''ಸಕಲಕಾರಣಕಲಾಪಗಳಿದ್ದಾಗ ಕಾರ್ಯಾನುತ್ಪಾದವನ್ನು ಕೂಡಿಸಲು ಸಾಧ್ಯವಾಗದೇ ಇರಬೇಕಾದೀತು'' ಎಂಬ ಪ್ರಶ್ನೆಯೇ ತಪ್ಪು. ಏಕೆಂದರೆ ಪ್ರತಿಬಂಧಕಾಭಾವವನ್ನೂ ಕೂಡ ಕಾರ್ಯೋತ್ಪಾದಕ್ಕೆ ಕಾರಣವೆಂದು ನಾವು ಹೇಳುತ್ತೇವೆ. ಆದ್ದರಿಂದ ಕ್ಲಪ್ತಸಕಲಕಾರಣಕಲಾಪಗಳಿವೆ ಎಂಬುದೇ ಅಯುಕ್ತವಾಗಿದೆ. ಪ್ರತಿಬಂಧಕವಿದ್ದಾಗ ಪ್ರತಿಬಂಧಕಾಭಾವವೆಂಬ ಕಾರಣವು ಇರುವುದಿಲ್ಲ. ಹೀಗೆ ಪ್ರತಿಬಂಧಕಾಭಾವವೆಂಬ ಕಾರಣಭಾವದಿಂದಲೇ ಕಾರ್ಯಾಭಾವವನ್ನು ಕೂಡಿಸಲು ಬರುತ್ತಿರುವಾಗ ಅತಿರಿಕ್ತವಾದ ಶಕ್ತಿಯೆಂಬ ಪದಾರ್ಥವನ್ನು ಒಪ್ಪುವ ಅವಶ್ಯಕತೆಯಿರುವುದಿಲ್ಲ ಎಂಬುದು ಮಣಿಕಾರನ ಸಿದ್ಧಾಂತ.

## ಪ್ರತಿಬಂಧಕಾಭಾವಕ್ಕೆ ವ್ಯಭಿಚಾರ ಬರುತ್ತದಲ್ಲವೇ ?

**अथ न प्रतिबन्धकाभावः कारणम् । उत्तेजकवेलायां सत्यपि प्रतिबन्धके कार्यदर्शनात् इति चेत् ।**

ಪ್ರತಿಬಂಧಕಾಭಾವವನ್ನು ಕಾರಣವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಉತ್ತೇಜಕವಿರುವಾಗ ಪ್ರತಿಬಂಧಕವಿದ್ದರೂ ಕೂಡ ಕಾರ್ಯವು ಉಂಟಾಗುತ್ತಿಲ್ಲ. ಪ್ರತಿಬಂಧಕಾಭಾವವನ್ನು ಕಾರಣವೆಂದು ಹೇಳಿದರೆ ವ್ಯಭಿಚಾರ ದೋಷವು ಪ್ರಾಪ್ತವಾಗುತ್ತದೆ. ಪ್ರತಿಬಂಧಕಾಭಾವ ಇಲ್ಲದಿದ್ದಾಗ ಕಾರ್ಯವು ಆಗಬಾರದು. ಆದರೆ

ಉತ್ತೇಜಕವಿದ್ದಲ್ಲಿ ಕಾರ್ಯೋತ್ಪತ್ತಿಯು ಉಂಟಾಗುತ್ತದೆ. ಏಕೆಂದರೆ ಉತ್ತೇಜಕವು ಪ್ರತಿಬಂಧಕಕ್ಕೂ ಕೂಡ ಪ್ರತಿಬಂಕಧಕವಾಗಿದೆ. ಆದ್ದರಿಂದ 'ಪ್ರತಿಬಂಧಕಾಭಾವೇ ಸತಿ ಕಾರ್ಯಮುತ್ಪದ್ಯತೇ ಪ್ರತಿಬಂಧಕಾಭಾವಾಭಾವೇ ಸತಿ ಅನುತ್ಪದ್ಯತೇ' ಎಂಬ ನಿಯಮಕ್ಕೆ ವ್ಯಭಿಚಾರವು ಬರುತ್ತದೆ. ಏಕೆಂದರೆ ಪ್ರತಿಬಂಧಕವಿದ್ದಾಗಲೂ ಕೂಡ ಉತ್ತೇಜಕಪ್ರಯುಕ್ತವಾಗಿ ಕಾರ್ಯವು ಉಂಟಾಗುತ್ತದೆ.

## ಉತ್ತೇಜಕಾಭಾವವಿಶಿಷ್ಟಮಣ್ಯಭಾವವನ್ನು ಕಾರಣವೆಂದಾಗ ವ್ಯಭಿಚಾರವಿಲ್ಲ

**न । उत्तेजकाभावविशिष्टमण्यभावस्य कारणत्वाङ्गीकारात् । उत्तेजकदशायां च मणिसद्भावेऽपि उत्तेजकाभावविशिष्टमण्यभावो न विरुद्धः।**

ಉತ್ತರ - ಇದು ತಪ್ಪು. ಉತ್ತೇಜಕಾಭಾವವಿಶಿಷ್ಟವಾದ ಮಣ್ಯಭಾವವನ್ನು ನಾವು ಕಾರಣವೆಂದು ಅಂಗೀಕರಿಸುತ್ತೇವೆ. ಉತ್ತೇಜಕವಿರುವ ಸಂದರ್ಭದಲ್ಲಿ ಮಣಿಯಿದ್ದರೂ ಕೂಡ ಉತ್ತೇಜಕಾಭಾವವಿಶಿಷ್ಟಮಣ್ಯಭಾವವೆಂಬ ಕಾರಣವು ಇರುವುದಿಲ್ಲವಾದ್ದರಿಂದ ವಿರೋಧವಿಲ್ಲ.

ವಿವರಣೆ - ಅಗ್ನಿಯಿಂದ ದಾಹವು ಉಂಟಾಗಲು ಮಣಿಯ ಅಭಾವವು ಕಾರಣವಾಗಿದೆ ಎಂದಷ್ಟೇ ನಾವು ಹೇಳುವುದಿಲ್ಲ. ಉತ್ತೇಜಕಾಭಾವದಿಂದ ವಿಶಿಷ್ಟವಾದ ಮಣ್ಯಭಾವವು ದಾಹವನ್ನು ಕುರಿತು ಕಾರಣವೆಂದು ಹೇಳುತ್ತೇವೆ. ಉತ್ತೇಜಕವಿರುವ ಸಂದರ್ಭದಲ್ಲಿ ಮಣಿಯಿದ್ದರೂ ಕೂಡ ಉತ್ತೇಜಕಾಭಾವವೆಂಬ ವಿಶೇಷ್ಯವಿರುವುದಿಲ್ಲ. ಆದ್ದರಿಂದ ಉತ್ತೇಜಕಾಭಾವವಿಶಿಷ್ಟಮಣ್ಯಭಾವವು ಇರುತ್ತದೆ. ಆದ್ದರಿಂದ ಉತ್ತೇಜಕಾಭಾವವಿಶಿಷ್ಟ ಮಣ್ಯಭಾವವೆಂಬ ಕಾರಣವಿರುವುದರಿಂದ ದಾಹವೆಂಬ ಕಾರ್ಯವು ಉಂಟಾಗುವುದಿಲ್ಲ.

## ಉತ್ತೇಜಕಾಭಾವವಿಶಿಷ್ಟಮಣ್ಯಭಾವವನ್ನು ಕಾರಣವೆಂದರೆ ವ್ಯತಿರೇಕ ವ್ಯಭಿಚಾರ

**ननु विशेषणविशेष्यतत्सम्बन्धातिरिक्तविशिष्टानङ्गीकारात् कदाचित् विशेषणाभावः, कदाचित् विशेष्याभावः, कदाचिदुभयाभावः कारणमिति वाच्यम् । तथा च परस्परव्यभिचारात् नैकस्यापि हेतुत्वमिति चेत् ।**

ಪ್ರಶ್ನೆ - ವಿಶೇಷಣ, ವಿಶೇಷ್ಯ, ತತ್‌ಸಂಬಂಧ ಇವುಗಳಿಗಿಂತ ಅತಿರಿಕ್ತವಾದ ವಿಶಿಷ್ಟವೆಂಬ ಪದಾರ್ಥವನ್ನು ಒಪ್ಪದ ಕಾರಣ ಕೆಲವೊಮ್ಮೆ ವಿಶೇಷಣಾಭಾವವನ್ನು, ಇನ್ನೂ ಕೆಲವೊಮ್ಮೆ ವಿಶೇಷ್ಯಾಭಾವವನ್ನು, ಇನ್ನೂ ಕೆಲವೊಮ್ಮೆ ಉಭಯಾಭಾವವನ್ನು ಕಾರಣವೆಂದು ಹೇಳಿದಂತಾಯಿತು. ಆದ್ದರಿಂದ ಪರಸ್ಪರ ವ್ಯಭಿಚಾರ ಬರುವುದರಿಂದ ಯಾವುದೊಂದೂ ಕೂಡ ಹೇತುವಾಗದಿರಬೇಕಾದೀತಲ್ಲವೇ?

ಉತ್ತರ - ನಮ್ಮ ಸಿದ್ಧಾಂತದಲ್ಲಿ ವಿಶಿಷ್ಟವನ್ನು ಅತಿರಿಕ್ತಪದಾರ್ಥವೆಂದು ಅಂಗೀಕರಿಸಿದ್ದೇವೆ. ಆದರೆ ತಾರ್ಕಿಕರು ಅತಿರಿಕ್ತಪದಾರ್ಥವೆಂದು ಒಪ್ಪಿರುವುದಿಲ್ಲ. ವಿಶಿಷ್ಟಪದಾರ್ಥವು ವಿಶೇಷಣ ವಿಶೇಷ್ಯ ಹಾಗೂ ತತ್‌ಸಂಬಂಧಸ್ವರೂಪವೆಂದು ಹೇಳುತ್ತಾರೆ. ಆದ್ದರಿಂದ ತಾರ್ಕಿಕರ ಮೇಲೆ ಬರುವ ಆಕ್ಷೇಪವಿಷ್ಟು - ವಿಶಿಷ್ಟಾಭಾವವನ್ನು ಕಾರಣವೆಂದು ಹೇಳುತ್ತಿದ್ದೀರಿ. ಈ ವಿಶಿಷ್ಟಾಭಾವವು ವಿಶೇಷಣ, ವಿಶೇಷ್ಯ ಹಾಗೂ ತತ್‌ಸಂಬಂಧರೂಪವೇ ಆಗಿರುವುದರಿಂದ ಎಲ್ಲಿ ವಿಶೇಷಣವಿರುವುದಿಲ್ಲವೋ, ಆಗ ಕೇವಲ ವಿಶೇಷಣಾಭಾವವನ್ನೇ ಕಾರಣವೆಂದು ಹೇಳಿದಂತಾಗುತ್ತದೆ. ಎಲ್ಲಿ ವಿಶೇಷ್ಯ ಇರುವುದಿಲ್ಲವೋ, ಆಗ ವಿಶೇಷ್ಯಾಭಾವವೆಂಬ ವಿಶಿಷ್ಟಾಭಾವವೇ ಕಾರಣವೆಂದು ಹೇಳಿದಂತಾಗುತ್ತದೆ. ಇನ್ನು ಎಲ್ಲಿ ವಿಶೇಷಣ ಹಾಗೂ ವಿಶೇಷ್ಯಗಳೆರಡೂ ಇರುವುದಿಲ್ಲವೋ ಅಲ್ಲಿ ಉಭಯಾಭಾವವನ್ನು, ವಿಶಿಷ್ಟಾಭಾವ ಮೂಲಕವಾಗಿ ಕಾರಣವೆಂದು ಹೇಳಿದಂತಾಗುತ್ತದೆ. ವಿಶೇಷಣಾಭಾವವೆಂಬ ಕಾರಣವಿದ್ದಾಗ ವಿಶೇಷ್ಯಾಭಾವವೆಂಬ ಕಾರಣವಿಲ್ಲದ್ದರಿಂದ ಅದೇ ರೀತಿಯಾಗಿ

ವಿಶೇಷ್ಯಾಭಾವವೆಂಬ ಕಾರಣವಿದ್ದಾಗ ಉಭಯಾಭಾವವೆಂಬ ಕಾರಣವಿಲ್ಲದ ಪ್ರಯುಕ್ತ ಪರಸ್ಪರ ವ್ಯತಿರೇಕವ್ಯಭಿಚಾರವು ಪ್ರಾಪ್ತವಾಗುತ್ತದೆ.

**न । विशेषणविशेष्यसम्बन्धाभावस्य एकस्यैव कारणत्वाङ्गीकारात् ।**

ಈ ಪ್ರಶ್ನೆಯು ತಪ್ಪು. ಏಕೆಂದರೆ ವಿಶೇಷಣ ಹಾಗೂ ವಿಶೇಷ್ಯಗಳಲ್ಲಿರುವ ಸಂಬಂಧಾಭಾವವೆಂಬ ಒಂದೇ ಕಾರಣತ್ವವನ್ನು ನಾವು ಅಂಗೀಕರಿಸುತ್ತೇವೆ.

## ವಿಶೇಷಣವಿಶೇಷ್ಯಸಂಬಂಧಾಭಾವವೊಂದೇ ಕಾರಣ

**तथा हि – विशेषणविशेष्ययोः सम्बन्धात् विशिष्टव्यवहारः इति, तयोः सम्बन्धाभावात् विशिष्टाभावव्यवहारः; यथा भूतले घटसम्बन्ध घटसत्त्वासत्त्वाभ्यां घटीवैशिष्ट्यतदभावव्यवहारौ ।**

ಉತ್ತರ - ಈ ಪ್ರಶ್ನೆಯು ಅಯುಕ್ತವಾಗಿದೆ. ಏಕೆಂದರೆ ವಿಶೇಷಣವಿಶೇಷ್ಯಸಂಬಂಧಾ-ಭಾವ ಎಂಬ ಒಂದೇ ಕಾರಣವನ್ನು ಅಂಗೀಕರಿಸುತ್ತೇವೆ. ಅದು ಹೀಗೆ - ವಿಶೇಷಣ ಹಾಗೂ ವಿಶೇಷ್ಯಗಳಿಗೆ ಸಂಬಂಧವಿದ್ದಾಗ ವಿಶಿಷ್ಟವ್ಯವಹಾರವು ಆಗುತ್ತದೆ. ವಿಶೇಷಣ ಹಾಗೂ ವಿಶೇಷ್ಯಗಳಿಗೆ ಸಂಬಂಧವಿಲ್ಲದಿದ್ದಾಗ ವಿಶಿಷ್ಟವ್ಯವಹಾರವು ಆಗುವುದಿಲ್ಲ. ಉದಾಹರಣೆ - ಭೂತಲದಲ್ಲಿ ಘಟಸಂಬಂಧವಿದ್ದಾಗ, ಘಟವೈಶಿಷ್ಟ್ಯವ್ಯವಹಾರವನ್ನು ಮಾಡುತ್ತಾರೆ. ಭೂತಲದಲ್ಲಿ ಘಟಸಂಬಂಧವು ಇಲ್ಲದಿದ್ದಾಗ ಘಟವೈಶಿಷ್ಟ್ಯದ ವ್ಯವಹಾರವನ್ನು ಮಾಡುವುದಿಲ್ಲ.

ವಿವರಣೆ - 'ದಂಡೀ ದೇವದತ್ತಃ' ಎಂಬಲ್ಲಿ ದಂಡವು ವಿಶೇಷಣ ದೇವದತ್ತನು ವಿಶೇಷ್ಯ. ದಂಡ ಹಾಗೂ ದೇವದತ್ತ ಈ ಎರಡು ಪದಾರ್ಥಕ್ಕೆ ಸಂಬಂಧವಾದಾಗ 'ದಂಡೀ' ಎಂಬುದಾಗಿ ವಿಶಿಷ್ಟವ್ಯವಹಾರವನ್ನು ಮಾಡುತ್ತೇವೆ. ಒಂದುವೇಳೆ ದಂಡ ಹಾಗೂ ದೇವದತ್ತ ಈ ಪದಾರ್ಥಗಳಿಗೆ ಸಂಬಂಧ ಇಲ್ಲದಿದ್ದರೆ, ಅಥವಾ ವಿಶೇಷಣ ಹಾಗೂ ವಿಶೇಷ್ಯ ಇವೆರಡೂ

ಇದ್ದು ಇವುಗಳಿಗೆ ಸಂಬಂಧವಿಲ್ಲದಿದ್ದರೆ 'ದಂಡೀ' ಎಂಬುದಾಗಿ ವ್ಯವಹಾರವನ್ನು ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ 'ದಂಡೀ' ಎಂಬ ವಿಶಿಷ್ಟವ್ಯವಹಾರಕ್ಕೆ ವಿಶೇಷಣ ಹಾಗೂ ವಿಶೇಷ್ಯಗಳ ಸಂಬಂಧವೇ ವಿಷಯವಾಗಿದೆ. ಆದ್ದರಿಂದ ವಿಶಿಷ್ಟಾಭಾವವು ಕಾರಣವಾಗಿದೆ ಎಂಬ ಮಾತಿಗೆ ವಿಶೇಷಣ ಹಾಗೂ ವಿಶೇಷ್ಯಗಳ ಸಂಬಂಧಾಭಾವವು ಕಾರಣವಾಗಿದೆ ಎಂದರ್ಥ.

## ಸಂಬಂಧಾಭಾವವು ವಿಶಿಷ್ಟಾಭಾವದ ಸ್ವರೂಪ

**यस्य यत्र यः सम्बन्धः स एव तत्र वैशिष्ट्यं स च सम्बन्धाभावो विशेषणाभावात्, विशेष्याभावात्, उभयाभावात्, सर्वत्राविशिष्टः एकः विशेषणविशेष्योभयाभावानां व्यापकोऽनुगतविशिष्टाभावव्यवहारादिहेतुः ।**

ಯಾವುದಕ್ಕೆ, ಯಾವುದರಲ್ಲಿ ಯಾವ ಸಂಬಂಧವಿದೆಯೋ ಅದೇ ಅಲ್ಲಿ ವೈಶಿಷ್ಟ್ಯ ಎಂದು ಕರೆಸಿಕೊಳ್ಳುತ್ತದೆ. ಅಂಥ ಸಂಬಂಧಾಭಾವವು ವಿಶೇಷಣಾಭಾವಪ್ರಯುಕ್ತವಾಗಿ, ವಿಶೇಷ್ಯಾಭಾವಪ್ರಯುಕ್ತವಾಗಿ ಹಾಗೂ ಉಭಯಾಭಾವಪ್ರಯುಕ್ತವಾಗಿ ಬರುತ್ತದೆ. ಎಲ್ಲೆಡೆಯೂ ಅವಿಶಿಷ್ಟವಾದ ಒಂದೇ ವಿಶೇಷಣ ವಿಶೇಷ್ಯ ಉಭಯಾಭಾವಗಳಿಂದ ವ್ಯಾಪಕವಾಗಿ ಅನುಗತವಾಗಿ ವಿಶಿಷ್ಟಾಭಾವವ್ಯವಹಾರಾದಿಗಳಿಗೆ ಕಾರಣವಾಗುತ್ತದೆ.

ವಿವರಣೆ - ವೈಶಿಷ್ಟ್ಯ ಎಂದರೆ 'ಯಸ್ಯ ಯತ್ರ ಯಃ ಸಂಬಂಧಃ ಸ ಏವ' ಎಂದರ್ಥ. ಉದಾಹರಣೆ - ಯಸ್ಯ = ಘಟಕ್ಕೆ, ಯತ್ರ = ಭೂತಲದಲ್ಲಿ, ಯಃ ಸಂಬಂಧಃ = ಸಂಯೋಗಸಂಬಂಧವಿದೆ, ಸ ಏವ = ಆ ಸಂಯೋಗ ಸಂಬಂಧವೇ, ತತ್ರ = ಭೂತಲದಲ್ಲಿ, ವೈಶಿಷ್ಟಂ = ವೈಶಿಷ್ಟ್ಯವೆಂದು ಕರೆಸಿಕೊಳ್ಳುತ್ತದೆ. ಇಂಥ ಸಂಯೋಗಸಂಬಂಧದ ಅಭಾವವು ಮೂರು ಕಾರಣಗಳಿಂದ ಉಂಟಾಗುತ್ತದೆ. ಕೆಲವೆಡೆ ವಿಶೇಷಣಾಭಾವಪ್ರಯುಕ್ತವಾಗಿ, ಇನ್ನೂ ಕೆಲವೆಡೆ ವಿಶೇಷ್ಯಾಭಾವಪ್ರಯುಕ್ತವಾಗಿ, ಇನ್ನೂ ಕೆಲವೆಡೆ ಉಭಯಾಭಾವಪ್ರಯುಕ್ತವಾಗಿ ಪ್ರಾಪ್ತವಾಗುತ್ತದೆ. ಸಂಬಂಧಾಭಾವವು ಮೂರು ಅಭಾವಗಳಿಂದ ವ್ಯಾಪಕವಾಗಿದೆ. 'ಯತ್ರ ವಿಶೇಷಣಾಭಾವಃ ತತ್ರ ಸಂಬಂಧಾಭಾವಃ ಯತ್ರ ವಿಶೇಷ್ಯಾಭಾವಃ ತತ್ರ ಸಂಬಂಧಾಭಾವಃ,

ಯತ್ರ ಉಭಯಾಭಾವಃ ತತ್ರ ಸಂಬಂಧಾಭಾವಃ' ಎಂಬುದಾಗಿ ಸಂಬಂಧಾಭಾವವು ಮೂರು ಅಭಾವಗಳಿಂದ ವ್ಯಾಪಕವಾಗಿದೆ. ಆದ್ದರಿಂದ ಎಲ್ಲಿ ವಿಶಿಷ್ಟಾಭಾವದ ವ್ಯವಹಾರವಿರುತ್ತದೋ, ಅಲ್ಲಿ ಸಂಬಂಧಾಭಾವವೇ ಕಾರಣವಾಗಿರುತ್ತದೆ. ಆದ್ದರಿಂದ ವೈಶಿಷ್ಟ್ಯ ಎಂದರೆ ವಿಶೇಷಣ ವಿಶೇಷ್ಯಗಳ ಸಂಬಂಧ. ವೈಶಿಷ್ಟ್ಯಾಭಾವ ಎಂದರೆ ವಿಶೇಷಣ ಹಾಗೂ ವಿಶೇಷ್ಯಗಳಿಗಿರುವ ಸಂಬಂಧಾಭಾವ ಎಂದು ಸಿದ್ಧವಾಯಿತು.

## ಒಂದೇ ಕಾರಣವೆಂದು ಸಿದ್ಧವಾಯಿತು

**एवं च प्रतिबन्धकोत्तेजकाभावयोः सम्बन्धाभावो दाहकारणम् । स च प्रतिबन्धकाभावे प्रतिबन्धकोत्तेजकसद्भावे उभयाभावे चास्ति, सर्वत्र प्रतिबन्धकोत्तेजकाभावयोः सम्बन्धो नास्तीति प्रतीतेः ।**

ಆದ್ದರಿಂದ ಪ್ರತಿಬಂಧಕ ಹಾಗೂ ಉತ್ತೇಜಕಾಭಾವಗಳಿಗಿರುವ ಸಂಬಂಧಾಭಾವವೇ ದಾಹಕ್ಕೆ ಕಾರಣವಾಗುತ್ತದೆ. ಈ ದಾಹವು ಪ್ರತಿಬಂಧಕವಿಲ್ಲದಿದ್ದಾಗ ಹಾಗೂ ಉತ್ತೇಜಕವಿದ್ದಾಗ ಹಾಗೂ ಉಭಯಾಭಾವವಿದ್ದಾಗ ಉಂಟಾಗುತ್ತದೆ. ಮೂರು ಸ್ಥಳದಲ್ಲಿಯೂ ಪ್ರತಿಬಂಧಕ ಉತ್ತೇಜಕಾಭಾವಗಳಿಗೆ ಸಂಬಂಧವಿರುವುದಿಲ್ಲವೆಂದು ಪ್ರತೀತವಾಗುತ್ತಿರುವುದರಿಂದ.

ವಿವರಣೆ - ದಾಹಕ್ಕೆ ಉತ್ತೇಜಕಾಭಾವವಿಶಿಷ್ಟಮಣ್ಯಭಾವವು ಕಾರಣ ಎಂದು ಹೇಳಿದಾಗ, ಉತ್ತೇಜಕಾಭಾವ ಹಾಗೂ ಮಣಿ ಇವುಗಳಿಗಿರುವ ಸಂಬಂಧಾಭಾವವು ಕಾರಣ ಎಂದು ಹೇಳಿದಂತಾಗುತ್ತದೆ. ಇಲ್ಲಿ ಉತ್ತೇಜಕಾಭಾವವು ವಿಶೇಷಣವಾಗಿದೆ. ಪ್ರತಿಬಂಧಕರೂಪವಾದ ಮಣಿ ವಿಶೇಷ್ಯವಾಗಿದೆ. ಈ ವಿಶೇಷಣ ಹಾಗೂ ವಿಶೇಷ್ಯಗಳಿಗೆ ಸಂಬಂಧವು ಇಲ್ಲದಿದ್ದಾಗ ದಾಹವು ಉಂಟಾಗುತ್ತದೆ.

ಒಂದುವೇಳೆ ಪ್ರತಿಬಂಧಕವೆಂಬ ವಿಶೇಷ್ಯವೇ ಇಲ್ಲದಿದ್ದರೆ ಆಗ ಸಂಬಂಧಾಭಾವವು ಪ್ರಾಪ್ತವಾಗುತ್ತದೆ. ಅಥವಾ ಪ್ರತಿಬಂಧಕವಿದ್ದರೂ ಕೂಡ ಉತ್ತೇಜಕಾಭಾವ ಹಾಗೂ ಮಣಿ ಎರಡೂ ಇಲ್ಲದಿದ್ದರೂ ಕೂಡ ಸಂಬಂಧಾಭಾವವು ಬರುತ್ತದೆ. ಏಕೆಂದರೆ ಮೂರು ದಶೆ-

ಯಲ್ಲಿಯೂ ಕೂಡ ಪ್ರತಿಬಂಧಕ ಉತ್ತೇಜಕಾಭಾವಗಳಿಗೆ ಸಂಬಂಧವಿಲ್ಲ ಎಂಬುದಾಗಿ ನಮಗೆ ಪ್ರತೀತಿಯು ಬರುತ್ತದೆ. ಆದ್ದರಿಂದ ಪ್ರತಿಬಂಧಕವಾದ ಮಣಿಯೆಂಬ ವಿಶೇಷ್ಯಕ್ಕೆ ಹಾಗೂ ಉತ್ತೇಜಕಾಭಾವ ಎಂಬ ವಿಶೇಷಣಕ್ಕೆ ಯಾವ ಸಂಬಂಧವಿದೆಯೋ, ತದಭಾವವು ದಾಹವನ್ನು ಕುರಿತು ಕಾರಣವಾಗಿದೆ. ಈ ಸಂಬಂಧಾಭಾವವು ಪ್ರತಿಬಂಧಕವೆಂಬ ವಿಶೇಷ್ಯವಿಲ್ಲದಿದ್ದರೆ ಉತ್ತೇಜಕಾಭಾವವೆಂಬ ವಿಶೇಷಣವಿಲ್ಲದಿದ್ದರೂ ಪ್ರಾಪ್ತವಾಗುತ್ತದೆ. ಆದ್ದರಿಂದ ಸಂಬಂಧಾಭಾವವೆಂಬ ಒಂದೇ ಕಾರಣವನ್ನು ಹೇಳಿದಂತಾಯಿತು.

## ಪ್ರತಿಬಂಧಕ ಹಾಗೂ ಉತ್ತೇಜಕಾಭಾವಗಳಿದ್ದಲ್ಲೂ ದಾಹ ಉಂಟಾಗಲಿ

**ननु यत्र प्रतिबन्धकं उत्तेजकाभावश्चेति द्वावपि स्तः । तत्रापि दाहः स्यात् । कारणत्वेनाभिमतस्य उत्तेजकाभावप्रतिबन्धकयोः संसर्गाभावस्य सत्त्वात् । अभावेन सहाधिकरणस्य संयोगसमवायरूपसम्बन्धानङ्गीकारात् इति चेत् ।**

ಪ್ರಶ್ನೆ - ಎಲ್ಲಿ ಪ್ರತಿಬಂಧಕ ಹಾಗೂ ಉತ್ತೇಜಕಾಭಾವ ಎರಡೂ ಇದೆಯೋ, ಅಲ್ಲಿಯೂ ಕೂಡ ದಾಹವು ಉಂಟಾಗಲಿ. ಏಕೆಂದರೆ ಕಾರಣತ್ವೇನ ಅಭಿಮತವಾದ ಉತ್ತೇಜಕಾಭಾವ ಹಾಗೂ ಪ್ರತಿಬಂಧಕಗಳಿಗೆ ಸಂಸರ್ಗಾಭಾವವು ಅಲ್ಲಿರುತ್ತದೆ. ಅಭಾವದಿಂದ ಅಧಿಕರಣಕ್ಕೆ ಸಂಯೋಗ ಹಾಗೂ ಸಮವಾಯ ಎಂಬ ಸಂಬಂಧವನ್ನು ಅಂಗೀಕಾರ ಮಾಡಿರುವುದಿಲ್ಲ.

ವಿವರಣೆ - ಉತ್ತೇಜಕಾಭಾವಕ್ಕೆ ಪ್ರತಿಬಂಧಕೀಭೂತವಾದ ಚಂದ್ರಕಾಂತಮಣಿಯು ಅಧಿಕರಣವಾಗಿದೆ. ಅಭಾವ ಹಾಗೂ ಅಧಿಕರಣಗಳಿಗೆ ಸಂಯೋಗ ಅಥವಾ ಸಮವಾಯ ಸಂಬಂಧಗಳನ್ನು ಅಂಗೀಕರಿಸಿರುವುದಿಲ್ಲ. ಆದ್ದರಿಂದ ಪ್ರತಿಬಂಧಕ ಹಾಗೂ ಉತ್ತೇಜಕಾಭಾವಗಳಿದ್ದರೂ ಕೂಡ ಸಂಸರ್ಗಾಭಾವವು ಇರುತ್ತದೆ. ಆದ್ದರಿಂದ ಸಂಬಂಧಾಭಾವವೆಂಬ ಕಾರಣವಿರುವುದರಿಂದ ದಾಹವು ಉತ್ಪನ್ನವಾಗಲಿ ಎಂಬುದು ಆಕ್ಷೇಪದ ಅಭಿಪ್ರಾಯ.

## ಸ್ವರೂಪಸಂಬಂಧದಿಂದ ಚಂದ್ರಕಾಂತಮಣಿಯಲ್ಲಿ ಉತ್ತೇಜಕಾಭಾವವಿದೆ

**न । संयोगादिसम्बन्धाभावेऽपि स्वरूपसम्बन्धाङ्गीकारात् । यत्र चोत्तेजकाभावप्रतिबन्धके स्तः तत्र तयोः स्वरूपसम्बन्धसद्भावेन तदभावरूपकारणाभावात् न दाहोत्पत्तिः ।**

ಈ ಆಕ್ಷೇಪವು ಅಯುಕ್ತವಾಗಿದೆ. ಮಣಿಯೆಂಬ ಪ್ರತಿಬಂಧಕಕ್ಕೂ, ಉತ್ತೇಜಕಾಭಾವಕ್ಕೂ ಸಂಯೋಗ ಹಾಗೂ ಸಮವಾಯಸಂಬಂಧಗಳು ಇಲ್ಲದಿದ್ದರೂ ಸ್ವರೂಪಸಂಬಂಧವನ್ನು ಅಂಗೀಕಾರ ಮಾಡಿರುತ್ತೇವೆ. ಎಲ್ಲಿ ಉತ್ತೇಜಕಾಭಾವ ಹಾಗೂ ಪ್ರತಿಬಂಧಕಗಳೇ ಇರುತ್ತವೋ, ಅಂಥ ಸ್ಥಳದಲ್ಲಿ ಆ ಉತ್ತೇಜಕಾಭಾವ ಹಾಗೂ ಪ್ರತಿಬಂಧಕಗಳಿಗೆ ಸ್ವರೂಪಸಂಬಂಧವು ಇರುವುದರಿಂದ ಸಂಬಂಧಾಭಾವರೂಪಕಾರಣವು ಇರುವುದಿಲ್ಲ. ಆದ್ದರಿಂದ ದಾಹವು ಉತ್ಪನ್ನವಾಗಲು ಸಾಧ್ಯವಿಲ್ಲ.

ವಿವರಣೆ - ಪ್ರತಿಬಂಧಕವು ಉತ್ತೇಜಕಾಭಾವಕ್ಕೆ ಅಧಿಕರಣವೆಂದು ಇಲ್ಲಿ ವಿವಕ್ಷಿಸಿದ್ದಾರೆ. ಆದರೆ ವಹ್ನಿಯು ಅಧಿಕರಣವಲ್ಲವೇ ? ಎಂಬ ಪ್ರಶ್ನೆ ಇಲ್ಲಿ ಹುಟ್ಟುತ್ತದೆ. ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು - ಘಟಾಭಾವಕ್ಕೆ ಅಧಿಕರಣವಾದದ್ದು, ಭೂತಲ ಹೇಗೆ ಆಗುತ್ತದೋ, ಅದರಂತೆ ಪಟವೂ ಕೂಡ ಅಧಿಕರಣವಾಗುತ್ತದೆ. ಅದರಂತೆ ಇಲ್ಲಿಯೂ ಕೂಡ ಉತ್ತೇಜಕಾಭಾವಕ್ಕೆ ವಹ್ನಿಯು ಅಧಿಕರಣವಾದಂತೆ ಚಂದ್ರಕಾಂತಮಣಿಯೂ ಕೂಡ ಅಧಿಕರಣವಾಗುತ್ತದೆ. ಆದ್ದರಿಂದ ಇಲ್ಲಿ ಪ್ರತಿಬಂಧಕೀಭೂತವಾದ ಚಂದ್ರಕಾಂತಮಣಿಯು ಉತ್ತೇಜಕಾಭಾವಕ್ಕೆ ಸ್ವರೂಪಸಂಬಂಧದಿಂದ ಅಧಿಕರಣವಾಗಿದೆ ಎಂದು ವಿವಕ್ಷಿಸಿದ್ದು ಸಾಧುವಾಗಿದೆ.

## ಸ್ವರೂಪಸಂಬಂಧವನ್ನು ವಿವಕ್ಷಿಸಿದರೆ ಆಕ್ಷೇಪ

**ननु अभावाधिकरणयोः स्वरूपमेव सम्बन्धः इत्ययुक्तम् । उत्तेजकस्थलेऽपि दाहाभावप्रसङ्गात् । तत्र मणेः स्थलान्तरीयोत्तेजकाभावस्य**

**च सम्बन्धात्मकस्वरूपद्वयानपायात् । उत्तेजकाभावसम्बद्धमणेरेव प्रतिबन्धकत्वात् इति चेत् ।**

ಪ್ರಶ್ನೆ - ಅಭಾವ ಹಾಗೂ ಅಧಿಕರಣಗಳಿಗೆ ಸ್ವರೂಪವೇ ಸಂಬಂಧವೆಂದು ಹೇಳಿದ್ದು ಅಯುಕ್ತವಾಗಿದೆ. ಹಾಗಾದಲ್ಲಿ ಉತ್ತೇಜಕವಿರುವ ಸ್ಥಳದಲ್ಲೂ ಕೂಡ ದಾಹವು ಆಗದಿರಬೇಕಾದೀತು. ಏಕೆಂದರೆ ಆ ಸ್ಥಳದಲ್ಲಿ ಮಣಿಯು ಇರುತ್ತದೆ. ಹಾಗೂ ಸ್ಥಳಾಂತರದಲ್ಲಿರುವ ಉತ್ತೇಜಕಾಭಾವವೂ ಕೂಡ ಇರುತ್ತದೆ. ಉತ್ತೇಜಕಾಭಾವದಿಂದ ಸಂಬಂಧವಾದ ಮಣಿಯನ್ನೇ ಪ್ರತಿಬಂಧಕವೆಂದು ಹೇಳಿರುವುದರಿಂದ ಪ್ರಕೃತ ಉತ್ತೇಜಕಾಭಾವಸಂಬಂಧವಾದ ಮಣಿಯು ಇರುವ ಪ್ರಯುಕ್ತ ದಾಹವು ಆಗದಿರಬೇಕಾದೀತು ?

> ವಿವರಣೆ - ಉತ್ತೇಜಕಾಭಾವ ಹಾಗೂ ಪ್ರತಿಬಂಧಕಗಳಿಗೆ ಸ್ವರೂಪಸಂಬಂಧ ಎಂದರೆ ಅವುಗಳ ಸ್ವರೂಪವೇ ಸಂಬಂಧರೂಪವಾಗಿದೆ ಎಂದಭಿಪ್ರಾಯ. ಆದ್ದರಿಂದ ಅವುಗಳ ಸ್ವರೂಪವಿದ್ದರೆ ಸಂಬಂಧವೂ ಕೂಡ ಇದೆಯೆಂದೇ ಹೇಳಿದಂತಾಗುತ್ತದೆ. ಚಂದ್ರಕಾಂತಮಣಿಯನ್ನು ವಹ್ನಿಯಲ್ಲಿ ಇಟ್ಟಾಗ ಚಂದ್ರಕಾಂತಮಣಿಯ ಸ್ವರೂಪ ಅದರಲ್ಲಿದೆ ಎಂದು ಹೇಳಿದಂತಾಯಿತು. ಆ ಸಂದರ್ಭದಲ್ಲಿ ಬೇರೆ ಸ್ಥಳದಲ್ಲಿರುವ ಉತ್ತೇಜಕಾಭಾವದ ಸ್ವರೂಪವೂ ಕೂಡ ವಹ್ನಿಯಲ್ಲಿರುತ್ತದೆ. ಹೀಗೆ ಎರಡರ ಸ್ವರೂಪವು ವಹ್ನಿಯಲ್ಲಿರುವುದರಿಂದ ಸ್ವರೂಪಸಂಬಂಧದಿಂದ ಪ್ರತಿಬಂಧಕದಲ್ಲಿ ಉತ್ತೇಜಕಾಭಾವವಿದೆಯೆಂದು ಹೇಳಿದಂತಾಯಿತು. ಆದ್ದರಿಂದ ಅಲ್ಲಿಯೂ ಕೂಡ ಉತ್ತೇಜಕಾಭಾವವಿಶಿಷ್ಟಮಣ್ಯಭಾವವೆಂಬ ಕಾರಣವಿರುವುದರಿಂದ ದಾಹವು ಆಗದೇ ಇರಬೇಕಾದೀತು ಎಂಬುದು ಮತ್ತೊಂದು ಆಕ್ಷೇಪ.

## ಉಪಶ್ಲಿಷ್ಟಸ್ವಭಾವವತ್ವವೇ ಸ್ವರೂಪಸಂಬಂಧ

**न ब्रूमो वयं नाधिकरणाभावावेव स्वरूपसम्बन्धः । येनोक्तदोषः स्यात् । किं नाम उपश्लिष्टस्वभावत्वम् । उपश्लिष्टस्वभावत्वं च सम्बन्धान्तरं विना विशिष्टप्रत्ययजननयोग्यत्वम् ।**

ಅಧಿಕರಣ ಹಾಗೂ ಅಭಾವಗಳನ್ನೇ ಸ್ವರೂಪಸಂಬಂಧವೆಂದು ನಾವು ಹೇಳುವುದಿಲ್ಲ. ಹಾಗೇ ಹೇಳಿದ್ದಲ್ಲಿ ಹಿಂದಿನ ಆಕ್ಷೇಪಕ್ಕೆ ಅವಕಾಶವಿರುತ್ತಿತ್ತು. ಹೊರತಾಗಿ ಉಪಶ್ಲಿಷ್ಟ ಸ್ವಭಾವತ್ವವನ್ನು ಸ್ವರೂಪಸಂಬಂಧವೆಂದು ಹೇಳುತ್ತೇವೆ. ಈ ಉಪಶ್ಲಿಷ್ಟಸ್ವಭಾವತ್ವವಾದರೂ ಬೇರೆ ಸಂಬಂಧವಿಲ್ಲದೇ ವಿಶಿಷ್ಟಪ್ರತ್ಯಯವನ್ನು ಹುಟ್ಟಿಸಲು ಯೋಗ್ಯವಾಗಿರುತ್ತದೆ.

ವಿವರಣೆ - ಘಟಾಭಾವವು ಭೂತಲದಲ್ಲಿ ಸ್ವರೂಪಸಂಬಂಧದಿಂದ ಇದೆ ಎಂದು ಹೇಳಿದಾಗ ಘಟಭಾವವನ್ನೇ ಸಂಬಂಧವೆಂದು ಹೇಳಿದಂತಾಯಿತು. ಅಥವಾ ಭೂತಲವನ್ನೇ ಸಂಬಂಧವೆಂದು ಹೇಳಿದಂತಾಯಿತು ಎಂದಷ್ಟೇ ಅಭಿಪ್ರಾಯವಲ್ಲ. ಇದಕ್ಕಿಂತಲೂ ಹೆಚ್ಚಿನ ವಿಶೇಷವಿದೆ. ಉಪಶ್ಲಿಷ್ಟಸ್ವಭಾವತ್ವವೇ ಆ ಹೆಚ್ಚಿನ ವಿಶೇಷ. ಉಪಶ್ಲಿಷ್ಟಸ್ವಭಾವತ್ವವೆಂದರೆ ಬೇರೆ ಸಂಬಂಧದ ಅವಶ್ಯಕತೆಯಿಲ್ಲದೇ ವಿಶಿಷ್ಟಪ್ರತ್ಯಯವನ್ನು ಹುಟ್ಟಿಸಲು ಯೋಗ್ಯವಾಗಿರುವಿಕೆ. ಉಪಶ್ಲಿಷ್ಟ ಶಬ್ದಕ್ಕೆ ಸಂಬದ್ಧ ಎಂದರ್ಥ. ಸಂಬದ್ಧವಾದ ಸ್ವಭಾವವುಳ್ಳದ್ದು ಎಂದಭಿಪ್ರಾಯ. ಆದ್ದರಿಂದ ಎಲ್ಲಿ ಉಪಶ್ಲಿಷ್ಟ ಸ್ವಭಾವತ್ವವಿರುತ್ತದೋ, ಅಲ್ಲಿ ಮಾತ್ರ ಸ್ವರೂಪಸಂಬಂಧವನ್ನು ನಾವು ಅಂಗೀಕರಿಸುತ್ತೇವೆ.

## ಉಪಶ್ಲಿಷ್ಟಸ್ವಭಾವತ್ವವೆಂದರೆ ವಿಶಿಷ್ಟಪ್ರತ್ಯಯಜನನಯೋಗ್ಯತ್ವ

**न च स्थलान्तरीयोत्तेजकाभावेन मणेः विशिष्टप्रत्ययजननयोग्यत्वमस्ति । येनोत्तेजकेऽपि दाहो न स्यात् । तादृशस्वरूपसम्बन्धाभावश्च प्रतिबन्धकाभावे प्रतिबन्धकोत्तेजकसद्भावे उभयाभावे चाविशिष्ट एव ।**

ಬೇರೆ ಸ್ಥಳದಲ್ಲಿರುವ ಉತ್ತೇಜಕಾಭಾವವು ಮಣಿಯಲ್ಲಿ ವಿಶಿಷ್ಟಪ್ರತ್ಯಯವನ್ನು ಹುಟ್ಟಿಸಲು ಕಾರಣವಾಗುವುದಿಲ್ಲ. ಹಾಗಾಗಿದ್ದಲ್ಲಿ ಉತ್ತೇಜಕವಿದ್ದರೂ ಕೂಡ ದಾಹವು ಆಗದಿರಬೇಕಾದೀತು ಎಂಬ ಆಕ್ಷೇಪಕ್ಕೆ ಅವಕಾಶವಿರುತ್ತಿತ್ತು. ಇಂಥ ಸ್ವರೂಪಸಂಬಂಧದ ಅಭಾವವು ಪ್ರತಿಬಂಧಕವಿಲ್ಲದಿದ್ದಾಗ ಉತ್ತೇಜಕವಿದ್ದಾಗ ಹಾಗೂ ಉಭಯಾಭಾವವಿದ್ದಾಗ ಪ್ರಾಪ್ತವಾಗುತ್ತದೆ. ವಿಶಿಷ್ಟಭಾವರೂಪವಾದ ಕಾರಣಾಭಾವದಿಂದ ಕಾರ್ಯಾಭಾವವನ್ನು ಆಗ ಹೇಳಬಹುದು.

ವಿವರಣೆ - ಉಪಶ್ಲಿಷ್ಟಸ್ವಭಾವತ್ವರೂಪವಾದ ಸ್ವರೂಪಸಂಬಂಧವನ್ನೇ ಅಂಗೀಕರಿಸಬೇಕು. ಏಕೆಂದರೆ ಭೂತಲದಲ್ಲಿ ಘಟಾಭಾವವು ಸ್ವರೂಪಸಂಬಂಧೇನ ಇದೆ ಎಂದು ಒಪ್ಪಿದಾಗ, ಘಟಾಭಾವ ಹಾಗೂ ಭೂತಲವನ್ನೇ ಸಂಬಂಧರೂಪವೆಂದು ಹೇಳಿದರೆ ಘಟವಿರುವ ಭೂತಲದಲ್ಲಿಯೂ ಕೂಡ 'ಘಟಾಭಾವವದ್ ಭೂತಲಂ' ಎಂಬ ಪ್ರತೀತಿಯು ಬರಬೇಕಾದೀತು. ಏಕೆಂದರೆ ಈ ಭೂತಲದಲ್ಲಿ ಘಟವಿದ್ದರೂ ಕೂಡ ಬೇರೆ ಸ್ಥಳದಲ್ಲಿ ಘಟಾಭಾವ ಇರುತ್ತದೆ. ಘಟಾಭಾವವಿರುವ ಸ್ವರೂಪವು ಸ್ಥಳಾಂತರದಲ್ಲಿದೆ. ಈ ಭೂತಲದಲ್ಲಿ ಭೂತಲವೆಂಬ ಸ್ವರೂಪವಿದೆ. ಆದ್ದರಿಂದ ಸ್ವರೂಪವನ್ನೇ ಸಂಬಂಧವೆಂದು ಹೇಳಿದರೆ ಘಟವಿರುವ ಭೂತಲದಲ್ಲಿಯೂ 'ಘಟಾಭಾವವತ್ ಭೂತಲಂ' ಎಂಬ ಪ್ರತೀತಿಯು ಬರಬೇಕಾಗುತ್ತದೆ. ಆದಕ್ಕೋಸ್ಕರ ಉಪಶ್ಲಿಷ್ಟಸ್ವಭಾವವತ್ವವನ್ನೇ ಸ್ವರೂಪಸಂಬಂಧವೆನ್ನಬೇಕು. ಉಪಶ್ಲಿಷ್ಟ- ಸ್ವಭಾವವತ್ವವೆಂದರೆ ವಿಶಿಷ್ಟಪ್ರತ್ಯಯವನ್ನು ಹುಟ್ಟಿಸಲು ಯೋಗ್ಯವಾಗಿರುವುದು ಎಂದರ್ಥ. ಉಪಶ್ಲಿಷ್ಟಸ್ವಭಾವವತ್ವವನ್ನು ಹೇಳಬೇಕೆಂದರೆ ಈ ಭೂತಲದಲ್ಲಿಯೇ ಘಟಾಭಾವವು ಇರಬೇಕು. ಆಗಷ್ಟೇ ಸ್ವರೂಪಸಂಬಂಧವನ್ನು ಹೇಳಲು ಸಾಧ್ಯವಾಗುತ್ತದೆ. ಪ್ರಕೃತದಲ್ಲಿಯೂ ಪ್ರತಿಬಂಧಕದಲ್ಲಿಯೇ ಉತ್ತೇಜಕಾಭಾವವು ಇರಬೇಕು. ಇಂಥ ಸಂದರ್ಭದಲ್ಲಿ ಉಪಶ್ಲಿಷ್ಟಸ್ವಭಾವವತ್ವ ಇರುವತನಕ ಸ್ವರೂಪಸಂಬಂಧವಿದೆಯೆಂದು ಹೇಳಬಹುದು. ಈ ಸ್ವರೂಪಸಂಬಂಧವು ಇರುವುದರಿಂದ ದಾಹವು ಆಗುವುದಿಲ್ಲ. ಸ್ವರೂಪಸಂಬಂಧವಿದ್ದರೆ ದಾಹವು ಆಗುತ್ತದೆ. ಸ್ವರೂಪಸಂಬಂಧದಿಲ್ಲದಿರುವಿಕೆಯು ಮೂರು ಕಾರಣದಿಂದ ಪ್ರಾಪ್ತವಾಗುತ್ತದೆ.

## ಮತ್ತೊಂದು ಬಗೆಯಲ್ಲಿ ಅನನುಗಮ ದೋಷದ ಪರಿಹಾರ

**यद्वा यथाऽदण्डपुरुषस्याभावे दण्डी पुरुषो यथा न प्रतियोगी, तस्यादण्डत्वाभावात् । किन्तु तदन्यः प्रतियोगी। तस्य च अभावो दण्डिसद्भावेऽपि दण्डमात्रसद्भावे उभयासत्त्वे चाविशिष्ट इति; तस्मात् केवलपुरुषाभावव्यवहारोऽनुगतः । तथा केवलप्रतिबन्धकाभावे उत्तेजकसहकृतः प्रतिबन्धको न प्रतियोगी तस्य केवलत्वाभावात् । किन्तु**

**तदन्यः । तदन्यस्य च केवलप्रतिबन्धकस्याभावः उत्तेजकप्रतिबन्धकसत्त्वे उत्तेजकमात्रसत्त्वे उभयासत्त्वे च अविशिष्ट एवेति नाननुगमः । उत्तेजकापनये च केवलप्रतिबन्धोऽस्तीति न तदभावः इति न दाहो भवति इत्याह ।।**

ಅಥವಾ ಮತ್ತೊಂದು ಸಮಾಧಾನವು ಹೀಗಿದೆ - ಅದಂಡಪುರುಷನ ಅಭಾವವನ್ನು ಹೇಳುವಾಗ ದಂಡಿಯಾದ ಪುರುಷನು ಪ್ರತಿಯೋಗಿಯಾಗುವುದಿಲ್ಲ ? ಏಕೆಂದರೆ ಅವನಲ್ಲಿ ಅದಂಡತ್ವವು ಇರುವುದಿಲ್ಲ. ಹಾಗಾಗಿ ತದನ್ಯನಾದ ಅದಂಡಪುರುಷನೇ ಪ್ರತಿಯೋಗೀ ಎಂದು ಹೇಳಬೇಕು. ಅದಂಡಪುರುಷನ ಅಭಾವವನ್ನು ಒಟ್ಟು ಮೂರು ಬಗೆಯಲ್ಲಿ ಹೇಳಲು ಸಾಧ್ಯವಿದೆ.

೧. ದಂಡಿಯಿದ್ದಾಗ, ೨. ದಂಡಮಾತ್ರವಿದ್ದಾಗ, ೩. ಎರಡೂ ಇಲ್ಲದಿದ್ದಾಗ. ಈ ಮೂರು ಕಾರಣಗಳಿಂದ ವಿಶಿಷ್ಟಾಭಾವವನ್ನು ಹೇಳಲು ಸಾಧ್ಯವಿದೆ. ಆದ್ದರಿಂದ ಕೇವಲಪುರುಷಾಭಾವ ವ್ಯವಹಾರವು ಅನುಗತವಾಗುತ್ತದೆ.

ಇದೇ ಉದಾಹರಣೆಯಂತೆ ಪ್ರಕೃತದಲ್ಲಿ ಕೇವಲ ಪ್ರತಿಬಂಧಕಾಭಾವದಲ್ಲಿ ಉತ್ತೇಜಕ ಸಹಕೃತವಾದ ಪ್ರತಿಬಂಧಕವು ಪ್ರತಿಯೋಗಿಯಾಗುವುದಿಲ್ಲ. ಏಕೆಂದರೆ ಇದರಲ್ಲಿ ಕೇವಲತ್ವವೇ ಇರುವುದಿಲ್ಲ. ಆದ್ದರಿಂದ ಇದಕ್ಕಿಂತ ಭಿನ್ನವಾದ ಉತ್ತೇಜಕರಹಿತವಾದ ಪ್ರತಿಬಂಧಕವೇ ಪ್ರತಿಯೋಗಿ ಎಂದು ಹೇಳಬೇಕು. ಈ ಕೇವಲ ಪ್ರತಿಬಂಧಕಾಭಾವವು ಒಟ್ಟು ಮೂರು ಬಗೆಯಲ್ಲಿ ಯುಕ್ತವಾಗುತ್ತದೆ. ೧. ಉತ್ತೇಜಕದ ಪ್ರತಿಬಂಧಕವಿದ್ದಾಗ, ೨. ಉತ್ತೇಜಕವಷ್ಟೇ ಇದ್ದಾಗ, ೩. ಎರಡೂ ಇಲ್ಲದಿದ್ದಾಗ ವಿಶಿಷ್ಟಾಭಾವವನ್ನು ಹೇಳಲು ಸಾಧ್ಯವಿದೆ. ಆದ್ದರಿಂದ ಅನನುಗಮದೋಷಕ್ಕೆ ಅವಕಾಶವಿಲ್ಲ. ಉತ್ತೇಜಕವನ್ನು ತೆಗೆದಾಗ ಕೇವಲ ಪ್ರತಿಬಂಧಕಾಭಾವವೆಂಬ ಕಾರಣ ಇಲ್ಲದ ಪ್ರಯುಕ್ತ ದಾಹವು ಉಂಟಾಗುವುದಿಲ್ಲ.

ಹೀಗೆ ಕೇವಲ ಪ್ರತಿಬಂಧಕಾಭಾವವು ದಾಹಕ್ಕೆ ಕಾರಣವೆಂದು ಹೇಳಿದಾಗ ಯಾವುದೇ ದೋಷಕ್ಕೆ ಅವಕಾಶವಿಲ್ಲ.

ಹೀಗೆ ತತ್ವಚಿಂತಾಮಣಿಯಲ್ಲಿ ಸಹಜಶಕ್ತಿಯನ್ನು ನಿರಾಕರಿಸಲಾಗಿದೆ.

ವಿವರಣೆ - ಅದಂಡಾಪುರುಷಾಭಾವಕ್ಕೆ ದಂಡಿಯಾದ ಪುರುಷನು ಪ್ರತಿಯೋಗಿಯಾಗುವುದಿಲ್ಲ. ಅದಂಡಪುರುಷನೇ ಪ್ರತಿಯೋಗಿಯಾಗುತ್ತಾನೆ. ಈ ಅದಂಡಪುರುಷನ ಅಭಾವವನ್ನು ಒಟ್ಟು ಮೂರು ಬಗೆಯಲ್ಲಿ ಹೇಳಬಹುದು -

1. ದಂಡಿಯಾದ ಪುರುಷನು ಇದ್ದಾಗ ಅದಂಡೀಪುರುಷನ ಅಭಾವವನ್ನು ಹೇಳಬಹುದು.

2. ದಂಡವಷ್ಟೇ ಇದ್ದು ಪುರುಷನು ಇಲ್ಲದಿದ್ದಾಗಲೂ ಅದಂಡಿಪುರುಷರ ಅಭಾವವನ್ನು ಹೇಳಬಹುದು.

3. ಪುರುಷ ಹಾಗೂ ದಂಡ ಎರಡು ಇಲ್ಲದಿದ್ದಾಗ ಅದಂಡಿಪುರುಷನ ಅಭಾವವನ್ನು ಹೇಳಬಹುದು. ಈ ಮೂರು ಕಾರಣಗಳಿದ್ದಾಗ ಕೇವಲ ಪುರುಷಾಭಾವ ವ್ಯವಹಾರವನ್ನು ಮಾಡಬಹುದು. ಕೇವಲ ಶಬ್ದಕ್ಕೆ ಅದಂಡಿಯಾದ ಎಂದರ್ಥ. ಕೇವಲಾಪುರುಷಾಭಾವ ವ್ಯವಹಾರವೆಂದರೆ ಅದಂಡಿಪುರುಷಾಭಾವದ ವ್ಯವಹಾರವು ಎಂದರ್ಥ. ಮೇಲೆ ಹೇಳಿದ ಮೂರು ಕಾರಣಗಳಿದ್ದಾಗ ಅದಂಡಿಯಾದ ಪುರುಷನು ಇರುವುದಿಲ್ಲ ಎಂಬುದಾಗಿ ವ್ಯವಹರಿಸಬಹುದು. ಮೂರೂ ಕಡೆಯೂ ಈ ವ್ಯವಹಾರವು ಅನುಗತವಾಗಿದೆ.

ಪ್ರಕೃತ ಪ್ರತಿಬಂಧಕಾಭಾವವನ್ನಷ್ಟೇ ಕಾರಣವೆಂದು ಹೇಳದೇ ಕೇವಲ ಪ್ರತಿಬಂಧಕಾಭಾವವನ್ನು ಕಾರಣವೆಂದು ಹೇಳುತ್ತೇವೆ. ಅದಂಡೀಪುರುಷನನ್ನು ಕೇವಲ ಪುರುಷ ಎಂದು ಕರೆದಂತೆ ಉತ್ತೇಜಕರಹಿತವಾದ ಪ್ರತಿಬಂಧಕವನ್ನು ಕೇವಲ ಪ್ರತಿಬಂಧಕವೆಂದು ವ್ಯವಹರಿಸಲಾಗುತ್ತದೆ. ಉತ್ತೇಜಕರಹಿತವಾದ ಪ್ರತಿಬಂಧಕದ ಅಭಾವದಲ್ಲಿ ಉತ್ತೇಜಕಸಹಿತವಾದ ಪ್ರತಿಬಂಧಕವು ಪ್ರತಿಯೋಗಿ ಆಗುವುದಿಲ್ಲ. ಏಕೆಂದರೆ ಅದು ಕೇವಲ ಆಗಿರುವುದಿಲ್ಲ. ಹೊರತಾಗಿ ಬೇರೆಯದ್ದೇ ಪ್ರತಿಯೋಗಿ ಆಗುತ್ತದೆ. ಉತ್ತೇಚಕ ರಹಿತವಾದ ಮಣಿ ಎಂಬ ಪ್ರತಿಬಂಧಕವೇ ಪ್ರತಿಯೋಗಿಯಾಗುತ್ತದೆ. ಕೇವಲ ಪ್ರತಿಬಂಧಕದ ಅಭಾವವು ಪ್ರತಿಬಂಧಕವಿದ್ದಾಗ, ಅಥವಾ

ಉತ್ತೇಜಕವಿದ್ದಾಗ, ಅಥವಾ ಎರಡೂ ಇಲ್ಲದಿದ್ದಾಗ ಅವಿಶಿಷ್ಟವೇ ಆಗುತ್ತದೆ. ಆದ್ದರಿಂದ ಅನುನುಗಮ ದೋಷಕ್ಕೆ ಅವಕಾಶವಿಲ್ಲ. ಉತ್ತೇಜಕವನ್ನು ತೆಗೆದಾಗ ಕೇವಲ ಪ್ರತಿಬಂಧಕವು ಉತ್ತೇಜಕ ಸಹಿತವಾದ ಪ್ರತಿಬಂಧಕವು ಇರುವುದಿಲ್ಲ. ಆದ್ದರಿಂದ ತದಭಾವವು ಇಲ್ಲದ ಕಾರಣ ದಾಹವು ಉಂಟಾಗುವುದಿಲ್ಲ.

ಸಾರಾಂಶ - ಉತ್ತೇಜಕಾಭಾವವಿಶಿಷ್ಟವಾದ ಮಣ್ಯಭಾವವು ದಾಹ ಅನುತ್ಪಾದಕ್ಕೆ ಕಾರಣವೆಂದು ಹೇಳಿದರೆ, ಕೆಲವೆಡೆ ವಿಶೇಷಣಾಭಾವದಿಂದ, ಕೆಲವೆಡೆ ವಿಶೇಷ್ಯಾಭಾವದಿಂದ, ಕೆಲವೆಡೆ ಉಭಯಾಭಾವದಿಂದ ಕಾರ್ಯ ಅನುತ್ಪಾದವನ್ನು ಹೇಳಬೇಕಾಗುತ್ತದೆ. ಆದ್ದರಿಂದ ಅನುನುಗಮ ದೋಷ ಮಣಿಕಾರನಿಗೆ ಪ್ರಾಪ್ತವಾಗುತ್ತದೆಂದು ಪ್ರಾರಂಭದಲ್ಲಿ ಆಕ್ಷೇಪಿಸಲಾಗಿದೆ. ಈ ಅನುನುಗಮ ದೋಷವನ್ನು ಎರಡು ರೀತಿಯಲ್ಲಿ ಮಣಿಕಾರನು ಪರಿಹರಿಸಿಕೊಂಡಿರುತ್ತಾನೆ.

೧. ಸಂಬಂಧವೇ ವೈಶಿಷ್ಟ್ಯ. ಸಂಬಂಧಾಭಾವವೊಂದೇ ದಾಹವನ್ನು ಕುರಿತು ಕಾರಣವಾಗಿದೆ. ಈ ಸಂಬಂಧಾಭಾವಕ್ಕೆ ವಿಶೇಷಣಾಭಾವ, ವಿಶೇಷ್ಯಾಭಾವ ಹಾಗೂ ಉಭಯಾಭಾವಗಳು ಕಾರಣವಾಗಿವೆ. ಈ ಸಂಬಂಧಾಭಾವವು ಬಂದರೆ ದಾಹವು ಆಗುತ್ತದೆ. ಸಂಬಂಧವೆಂದರೆ ಸ್ವರೂಪ ಸಂಬಂಧವೆಂದು ವಿವಕ್ಷಿಸಬೇಕು. ಸ್ವರೂಪ ಸಂಬಂಧವಾದರೂ ಉಪಶ್ಲಿಷ್ಟಸ್ವಭಾವತ್ವ ರೂಪವಾಗಿದೆ ಎಂದು ಮೊದಲನೆಯ ಪಕ್ಷದ ಸಮಾಧಾನ.

೨. ಕೇವಲ ಪ್ರತಿಬಂಧಕಾಭಾವವೇ ದಾಹಕ್ಕೆ ಕಾರಣವಾಗಿದೆ. ಕೇವಲ ಪ್ರತಿಬಂಧಕಾಭಾವದಲ್ಲಿ ಉತ್ತೇಜಕಸಹಿತವಾದ ಮಣಿಯು ಪ್ರತಿಯೋಗಿಯಾಗುವುದಿಲ್ಲ. ಆದ್ದರಿಂದ ಕೇವಲ ಪ್ರತಿಬಂಧಕಾಭಾವವನ್ನೇ ಪ್ರತಿಯೋಗಿ ಎಂದು ಹೇಳಬೇಕು. ಇದೇ ದಾಹಕ್ಕೆ ಕಾರಣವೆಂದು ಒಪ್ಪಿದಂತಾಯಿತು.

ಪ್ರಥಮಪಕ್ಷದಲ್ಲಿ ಸಂಬಂಧಾಭಾವವನ್ನು ದಾಹಕ್ಕೆ ಕಾರಣವೆಂದು, ದ್ವಿತೀಯಪಕ್ಷದಲ್ಲಿ ಕೇವಲ ಪ್ರತಿಬಂಧಕಾಭಾವವನ್ನು ದಾಹಕ್ಕೆ ಕಾರಣವೆಂದು ಒಪ್ಪಿದಂತಾಯಿತು.

# ತತ್ವಚಿಂತಾಮಣಿಯ ನಿರಾಕರಣೆ

## ಶಕ್ತಿಯ ವಿಷಯದಲ್ಲಿ ಶ್ರುತಿ-ಸ್ಮೃತಿಗಳು ಆಧಾರವಾಗಿವೆ

**तन्न ।। 'पराऽस्य शक्तिर्विविधैव श्रूयते' । 'विचित्रशक्तिः पुरुषः पुराणो न चान्येषां शक्तयस्तादृशाः स्युः' । 'सर्वैर्युक्ता शक्तिभिर्देवता सा' इत्यादिश्रुत्या, 'शक्तयः सर्वभावानां अचिन्त्यज्ञानगोचराः ।। यतोऽतो ब्रह्मणस्तास्तु सर्गाद्या भावशक्तयः' इत्यादिस्मृत्या च शक्तेः सिद्धत्वात् ।**

ತತ್ವಚಿಂತಾಮಣಿಯಲ್ಲಿ ಸಮರ್ಥಿಸಿದ ಶಕ್ತಿಯ ನಿರಾಕರಣೆಯು ಅಸಾಧುವಾಗಿದೆ. 'ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ' ಪರಮಾತ್ಮನ ಶಕ್ತಿಯು ಅನೇಕ ಬಗೆಗಳಲ್ಲಿ ಶ್ರುತವಾಗಿದೆ. 'ವಿಚಿತ್ರಶಕ್ತಿಃ ಪುರುಷಃ ಪುರಾಣೋ ನ ಚಾನ್ಯೇಷಾಂ ಶಕ್ತಯಸ್ತಾದೃಶಾಃ ಸ್ಯುಃ' ಅನಾದಿನಿತ್ಯನಾದ ಎಲ್ಲರಲ್ಲಿಯೂ ನೆಲೆಸಿರುವ ಪರಮಾತ್ಮನು ವಿಚಿತ್ರಶಕ್ತಿಯುಳ್ಳವನು. ಉಳಿದವರ ಶಕ್ತಿಯು ಪರಮಾತ್ಮನ ಅಧೀನವಾಗಿ ಅನೇಕ ವಿಧದಲ್ಲಿದೆ. ಹೀಗೆ ಶ್ವೇತಾಶ್ವತರ ಶ್ರುತಿಯು ಹೇಳುತ್ತಿದೆ.

'ಸರ್ವೈರ್ಯುಕ್ತಾ ಶಕ್ತಿಭಿರ್ದೇವತಾ ಸಾ' ಎಲ್ಲಾ ವಿಧದ ಶಕ್ತಿಗಳಿಂದ ದೇವತೆಗಳು ಕೂಡಿರುತ್ತಾರೆ. ಇವೇ ಮೊದಲಾದ ಶ್ರುತಿಗಳಿಂದ 'ಶಕ್ತಯಃ ಸರ್ವಭಾವಾನಾಂ ಅಚಿಂತ್ಯಜ್ಞಾನಗೋಚರಾಃ ॥ ಯತೋಽತೋ ಬ್ರಹ್ಮಣಸ್ತಾಸ್ತು ಸರ್ಗಾದ್ಯಾ ಭಾವಶಕ್ತಯಃ'

ಎಲ್ಲಾ ಭಾವಪದಾರ್ಥಗಳಲ್ಲಿರುವ ಶಕ್ತಿಯು ಅಚಿಂತ್ಯಜ್ಞಾನಗೋಚರವಾಗಿವೆ. ಬ್ರಹ್ಮನಲ್ಲಿರುವ ಶಕ್ತಿ ಮೊದಲಾದ ಕಾರ್ಯಗಳು ಭಾವಶಕ್ತಿಯೆಂದು ಕರೆಸಿಕೊಳ್ಳುತ್ತವೆ. ಇವೇ ಮೊದಲಾದ ಸ್ಮೃತಿಗಳಿಂದ ಶಕ್ತಿಯೆಂಬ ಪದಾರ್ಥವು ಸಿದ್ಧವಾಗುತ್ತದೆ.

## ಪ್ರತಿಬಂಧಕತ್ವವನ್ನು ಒಪ್ಪಿದ ಮೇಲೆ ಶಕ್ತಿಯನ್ನೂ ಒಪ್ಪಿದಂತೆ

**किञ्च प्रतिबन्धकस्य प्रतिबन्धकत्वानुपपत्त्यैव शक्तिसिद्धिः । कारणसामर्थ्यविघटकस्यैव प्रतिबन्धकत्वात् ।**

ಮತ್ತು ಪ್ರತಿಬಂಧಕಕ್ಕೆ ಪ್ರತಿಬಂಧಕತ್ವದ ಅನ್ಯಥಾನುಪಪತ್ತಿಯಿಂದಲೇ ಶಕ್ತಿ ಎಂಬ ಪದಾರ್ಥವು ಸಿದ್ಧವಾಗುತ್ತದೆ. ಏಕೆಂದರೆ ಕಾರಣಸಾಮರ್ಥ್ಯವಿಘಟಕತ್ವವೇ ಪ್ರತಿಬಂಧಕತ್ವವೆಂದು ಪ್ರಸಿದ್ಧವಾಗಿದೆ.

ವಿವರಣೆ - ತಾರ್ಕಿಕರು ಶಕ್ತಿಯನ್ನು ಒಪ್ಪುವುದಿಲ್ಲ. ಆದರೆ ಪ್ರತಿಬಂಧಕತ್ವವನ್ನು ಒಪ್ಪುತ್ತಾರೆ. ಪ್ರತಿಬಂಧಕತ್ವವನ್ನು ಒಪ್ಪಿದ ಮೇಲೆ ಶಕ್ತಿಯನ್ನು ಒಪ್ಪಿದಂತಾಯಿತೆಂಬುದು ಸಿದ್ಧಾಂತಿಗಳಾದ ನಾವು ಹೇಳುತ್ತಿರುವ ಸಮಾಧಾನ. ಪ್ರತಿಬಂಧಕತ್ವ ಶಬ್ದಕ್ಕೆ ಕಾರಣದಲ್ಲಿರುವ ಸಾಮರ್ಥ್ಯವನ್ನು ವಿಘಟನೆ ಮಾಡುವುದು ಎಂಬರ್ಥವನ್ನೇ ತಾರ್ಕಿಕರೂ ಕೂಡ ಹೇಳಬೇಕು. ಕಾರಣದಲ್ಲಿರುವ ಸಾಮರ್ಥ್ಯವನ್ನೇ ನಾವು ಶಕ್ತಿಯೆಂದು ಹೇಳುತ್ತಿದ್ದೇವೆ. ಹೀಗೆ ಪ್ರತಿಬಂಧಕತ್ವವನ್ನು ಒಪ್ಪುವ ಮೂಲಕ ತಾರ್ಕಿಕರು ಶಕ್ತಿಯನ್ನು ಒಪ್ಪಿದಂತಾಗುತ್ತದೆ.

## ಶಕ್ತಿಯನ್ನೊಪ್ಪದೇ ಪ್ರತಿಬಂಧಕತ್ವವನ್ನು ತೋರಿಸುತ್ತೇವೆ

**न च प्रतिबन्धकाभावस्य कारणत्वात् तद्विघटनरूपत्वेनैव प्रतिबन्धकत्वमुपपन्नमिति न तदन्यथानुपपत्त्या शक्तिसिद्धिरिति वाच्यम्।**

ತಾರ್ಕಿಕರು - ಪ್ರತಿಬಂಧಕಾಭಾವವನ್ನು ಕಾರಣವೆಂದು ನಾವು ಹೇಳುತ್ತಿದ್ದೇವೆ. ಆದ್ದರಿಂದ ಕಾರಣವನ್ನು ವಿಘಟನೆ ಮಾಡುವ ಮೂಲಕವೇ ಪ್ರತಿಬಂಧಕತ್ವವು

ಉಪಪನ್ನವಾಗುತ್ತದೆ. ಆದ್ದರಿಂದ ಪ್ರತಿಬಂಧಕತ್ವದ ಅನ್ಯಥಾನುಪಪತ್ತಿಯಿಂದ ಶಕ್ತಿಯನ್ನು ಅಂಗೀಕರಿಸುವ ಆವಶ್ಯಕತೆಯಿರುವುದಿಲ್ಲ ಅಲ್ಲವೇ ?

## ಪ್ರತಿಬಂಧಕಾಭಾವವು ಕಾರಣವಲ್ಲ

**प्रतिबन्धकाभावस्य अकारणत्वात् । अन्यथा प्रतिबन्धकस्य प्रतिबन्धकत्वं न स्यात् । कारणाभावादेव कार्याभावोपपत्तौ मण्यादेः प्रतिबन्धकतावाचोयुक्तेः अयुक्तत्वात् । दण्डाभावादौ प्रतिबन्धकत्वव्यवहाराभावात् ।**

ತತ್ವವಾದಿಗಳು - ಪ್ರತಿಬಂಧಕಾಭಾವವನ್ನು ಕಾರಣವೆಂದು ಹೇಳಲು ಸಾಧ್ಯವೇ ಇಲ್ಲ. ಹಾಗೇನಾದರೂ ಪ್ರತಿಬಂಧಕಾಭಾವವನ್ನೇ ಕಾರಣವೆಂದು ಒಪ್ಪಿದರೆ, ಪ್ರತಿಬಂಧಕಕ್ಕೆ ಪ್ರತಿಂಬಧಕತ್ವವನ್ನೇ ಉಪಪಾದನೆ ಮಾಡಲು ತಾರ್ಕಿಕರಿಗೆ ಸಾಧ್ಯವಾಗುವುದಿಲ್ಲ. ಏಕೆಂದರೆ ಕಾರಣಾಭಾವಪ್ರಯುಕ್ತವಾಗಿಯೇ ಕಾರ್ಯಾಭಾವವು ಉಪಪನ್ನವಾಗುತ್ತದೆ ಎಂದು ಹೇಳಲು ಬರುವಾಗ ಮಣ್ಯಾದಿಗಳಿಗೆ ಪ್ರತಿಬಂಧಕತ್ವದ ವ್ಯವಹಾರವೇ ಆಯುಕ್ತವಾಗುತ್ತದೆ. ದಂಡಾಭಾವಾದಿಗಳಲ್ಲಿ ಪ್ರತಿಬಂಧಕತ್ವದ ವ್ಯವಹಾರವೇ ಇಲ್ಲದ ಕಾರಣ.

> ವಿವರಣೆ - ತಾರ್ಕಿಕರು ಪ್ರತಿಬಂಧಕಾಭಾವವನ್ನು ಕಾರಣವೆಂದು ಹೇಳುತ್ತಾರೆ. ಆದರೆ ಇದು ತಪ್ಪು. ಹಾಗೇನಾದರೂ ಪ್ರತಿಬಂಧಕಾಭಾವವನ್ನೇ ಕಾರಣವೆನ್ನುವುದಾದರೆ ಕಾರ್ಯಾಭಾವವು ಪ್ರತಿಬಂಧಕವೆಂಬ ಕಾರಣವಿಲ್ಲದ್ದರಿಂದಲೇ ಆಗುತ್ತದೆ ಎಂದು ಹೇಳಿದಂತಾಯಿತು. ಆದರೆ ಪ್ರತಿಯೊಬ್ಬರೂ ಕೂಡ ಲೋಕದಲ್ಲಿ ಏಕೆ ಕಾರ್ಯವಾಗಲಿಲ್ಲ? ಎಂಬುದಕ್ಕೆ ಪ್ರತಿಬಂಧಕ ಇರುವುದರಿಂದ ಎಂದು ಉತ್ತರಿಸುತ್ತಾರೆ. ಇದೇ ಈಗ ಅಯುಕ್ತವಾಗುತ್ತದೆ. ಹೇಗೆ ದಂಡಾಭಾವವನ್ನೇ ಪ್ರತಿಬಂಧಕವೆಂದು ವ್ಯವಹರಿಸುವುದಿಲ್ಲವೋ, ಆದರಂತೆ ಪ್ರತಿಬಂಧಕಾಭಾವವನ್ನು ಕಾರಣಸ್ವರೂಪವೆಂದೂ ಕೂಡ ಅಂಗೀಕರಿಸಲು ಸಾಧ್ಯವಾಗುವುದಿಲ್ಲ.

ತಾರ್ಕಿಕರು - ದಾಹಪ್ರತಿಬಂಧಕಸಾಮಾನ್ಯಾಭಾವವನ್ನೇ ದಾಹಕ್ಕೆ ಕಾರಣವೆಂದು ಹೇಳುತ್ತೇವೆ. ಮಂತ್ರವಿರುವ ದೆಶೆಯಲ್ಲಿ ಪ್ರತಿಬಂಧಕಸಾಮಾನ್ಯಾಭಾವವಿಲ್ಲದ ಕಾರಣ ದಾಹವು ಉತ್ಪನ್ನವಾಗುವುದಿಲ್ಲ.

ತತ್ವವಾದಿಗಳು - ಹೀಗೆ ಹೇಳಿದರೆ ನಿಮಗೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಮಣ್ಯಾದಿಗಳಿಗೆ ಪ್ರತಿಬಂಧಕತ್ವ ಎಂದರೆ ಕಾರಣೀಭೂತಾಭಾವಪ್ರತಿಯೋಗಿತ್ವ ಎಂದರ್ಥ. ಇದು ಸಿದ್ಧವಾದರೆ, ಪ್ರತಿಬಂಧಕಸಾಮಾನ್ಯಾಭಾವಕ್ಕೆ ಕಾರಣತ್ವವು ಸಿದ್ಧವಾಗುತ್ತದೆ. ಇದು ಸಿದ್ಧವಾದರೆ ಇಂಥ ಕಾರಣೀಭೂತಾಭಾವಪ್ರತಿಯೋಗಿತ್ವ ಸ್ವರೂಪವಾದ ಪ್ರತಿಬಂಧಕತ್ವವು ಸಿದ್ಧವಾಗುತ್ತದೆ.

ವಿವರಣೆ - ಮಣಿಸಾಮಾನ್ಯಾಭಾವವನ್ನು ದಾಹೋತ್ಪತ್ತಿಗೆ ಕಾರಣವೆಂದು ಹೇಳುವುದಿಲ್ಲ, ದಾಹಕ್ಕೆ ಎಷ್ಟು ಪ್ರತಿಬಂಧಕಗಳಿವೆಯೋ, ಆ ಎಲ್ಲಾ ಪ್ರತಿಬಂಧಕಗಳ ಅಭಾವವನ್ನೇ ದಾಹಕ್ಕೆ ಕಾರಣವೆಂದು ಹೇಳುತ್ತೇವೆ. ಆದ್ದರಿಂದ ದಾಹಪ್ರತಿಬಂಧಕತಾವಚ್ಛೇದಕಾ-ವಚ್ಛಿನ್ನ ಸಕಲಪ್ರತಿಯೋಗಿಕಾಭಾವಗಳೇ ದಾಹೋತ್ಪತ್ತಿಗೆ ಕಾರಣವೆಂದು ತಾರ್ಕಿಕರು ಪರಿಷ್ಕಾರ ಮಾಡುತ್ತಾರೆ. ಆದ್ದರಿಂದ ಮಣಿ ಇಲ್ಲದ ಸಂದರ್ಭದಲ್ಲಿ ಮಂತ್ರವಿದ್ದರೂ ಕೂಡ ದಾಹಪ್ರತಿಬಂಧಕತಾವಚ್ಛೇದಕಾವಚ್ಛಿನ್ನಪ್ರತಿಬಂಧಕಾಭಾವವೆಂಬ ಕಾರಣವಿಲ್ಲದ ಪ್ರಯುಕ್ತ ದಾಹವು ಉತ್ಪತ್ತಿಯಾಗುವುದಿಲ್ಲ. ಹೀಗೆ ಅತಿಪ್ರಸಂಗವನ್ನು ತಾರ್ಕಿಕರು ಪರಿಹರಿಸುತ್ತಾರೆ.

ಆದರೆ ತಾರ್ಕಿಕರಿಗೆ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಏಕೆಂದರೆ ಪ್ರತಿಬಂಧಕತ್ವದ ಪರಿಷ್ಕಾರವನ್ನು ತಾರ್ಕಿಕರು ಕಾರಣೀಭೂತಾಭಾವಪ್ರತಿಯೊ ೯ಗಿತ್ವವೆಂದು ಹೇಳುತ್ತಾರೆ. ಅಂದರೆ ಪ್ರತಿಬಂಧಕತ್ವದ ಲಕ್ಷಣದಲ್ಲಿ ಕಾರಣತ್ವವು ಗರ್ಭಿತವಾಗಿದೆ. ಪ್ರಕೃತ ಪ್ರತಿಬಂಧಕಸಾಮಾನ್ಯಾಭಾವವನ್ನು ಕಾರಣವೆಂದು ಹೇಳುತ್ತಿದ್ದಾರೆ. ಹೀಗೆ ಕಾರಣತ್ವಲಕ್ಷಣದಲ್ಲಿ ಪ್ರತಿಬಂಧಕತ್ವವು ಗರ್ಭಿತವಾಗಿದೆ. ಆದ್ದರಿಂದ ಕಾ ರಣೀಭೂತಾಭಾವಪ್ರತಿಯೋಗಿತ್ವ-ರೂಪವಾದ ಪ್ರತಿಬಂಧಕತ್ವವು ಸಿದ್ಧವಾದರೆ ಮಾತ್ರ ಪ್ರತಿಬಂಧಕಸಾಮಾನ್ಯಾಭಾವತ್ವೇನ ಪ್ರತಿಬಂಧಕಾಭಾವಕ್ಕೆ ಕಾರಣತ್ವವು ಸಿದ್ಧವಾಗುತ್ತದೆ. ಪ್ರತಿಬಂಧಕಾಭಾವಕ್ಕೆ ಕಾರಣತ್ವವು ಸಿದ್ಧವಾದರೆ ಕಾರಣೀಭೂತಾಭಾವ-

ಪ್ರತಿಯೋಗಿತ್ವರೂಪವಾದ ಪ್ರತಿಬಂಧಕತ್ವವು ಸಿದ್ಧವಾಗುತ್ತದೆ. ಪ್ರತಿಬಂಧಕ-ಸಾಮಾನ್ಯಾಭಾವಕ್ಕೆ ಕಾರಣತ್ವವು ಸಿದ್ಧವಾಗದೇ, ಪ್ರತಿಬಂಧಕತ್ವವು ಸಿದ್ಧವಾಗುವುದಿಲ್ಲ. ಪ್ರತಿಬಂಧಕತ್ವವು ಸಿದ್ಧವಾಗದೇ ಏತಾದೃಶಪ್ರತಿಬಂಧಕಾಭಾವಕ್ಕೆ ಕಾರಣತ್ವವು ಸಿದ್ಧವಾಗುವುದಿಲ್ಲ. ಹೀಗೆ ಅನಾಯಾಸವಾಗಿ ಅನ್ಯೋನ್ಯಾಶ್ರಯದೋಷವು ಪ್ರಾಪ್ತವಾಗುತ್ತದೆ.

## ಕಾರ್ಯಾನುತ್ಪಾದಪ್ರಯೋಜಕತ್ವವು ಪ್ರತಿಬಂಧಕತ್ವವಲ್ಲ

**ननु न कारणीभूताभावप्रतियोगित्वं प्रतिबन्धकत्वम् । अपि तु कार्यानुत्पाद-प्रयोजकत्वम् । एवं च मण्याद्यभावस्य कारणत्वग्रहं विनाऽपि मण्यादेः प्रतिबन्धकत्वं ज्ञातुं शक्यमेवेति नान्योन्याश्रयः इति चेत् । न । अनादिकार्यानुत्पादं प्रति सादिप्रतिबन्धकस्य प्रयोजकत्वायोगात् ।**

ತಾರ್ಕಿಕರು - ಕಾರಣೀಭೂತಾಭಾವಪ್ರತಿಯೋಗಿತ್ವವನ್ನು ಪ್ರತಿಬಂಧಕತ್ವವೆಂದು ನಾವು ಹೇಳುವುದಿಲ್ಲ. ಮತ್ತೇನೆಂದರೆ ಕಾರ್ಯಾನುತ್ಪಾದಪ್ರಯೋಜಕತ್ವವನ್ನೇ ಪ್ರತಿಬಂಧಕತ್ವ-ವೆಂದು ಹೇಳುತ್ತೇವೆ. ಆದ್ದರಿಂದ ಮಣ್ಯಾದ್ಯಭಾವಕ್ಕೆ ಕಾರಣತ್ವಜ್ಞಾನವಿಲ್ಲದಿದ್ದರೂ ಮಣ್ಯಾದಿಗಳಿಗೆ ಪ್ರತಿಬಂಧಕತ್ವವನ್ನು ತಿಳಿಯಲು ಸಾಧ್ಯವಿದೆ. ಆದ್ದರಿಂದ ಪ್ರತಿಬಂಧಕತ್ವದ ಲಕ್ಷಣದಲ್ಲಿ ಕಾರಣತ್ವವು ಗರ್ಭಿತವಾಗದ ಕಾರಣ ಅನ್ಯೋನ್ಯಾಶ್ರಯದೋಷವು ಪರಿಹಾರವಾಗುತ್ತದೆ.

ತತ್ವವಾದಿಗಳು - ಇದೂ ಕೂಡ ತಪ್ಪು. ಅನಾದಿಯಾದ ಪ್ರಾಗಭಾವಕ್ಕೆ ಸಾದಿಯಾದ ಮಣಿಯೆಂಬ ಪ್ರತಿಬಂಧಕವು ಪ್ರಯೋಜಕವಾಗಲು ಸಾಧ್ಯವಿಲ್ಲ.

ವಿವರಣೆ - ಕಾರ್ಯಾನುತ್ಪಾದಪ್ರಯೋಜಕತ್ವವು ಪ್ರತಿಬಂಧಕದ ಲಕ್ಷಣವೆಂದು ತಾರ್ಕಿಕರು ಹೇಳುತ್ತಾರೆ. ಅನುತ್ಪಾದಶಬ್ದಕ್ಕೆ ಪ್ರಾಗಭಾವವೆಂದೇ ಅರ್ಥ. ಕಾರಣದ ಪ್ರಾಗಭಾವಕ್ಕೆ ಯಾವುದು ಪ್ರಯೋಜಕವೋ, ಅದು ಪ್ರತಿಬಂಧಕವೆಂಬುದು ಇದರ ಅಭಿಪ್ರಾಯ. ಪ್ರಕೃತ

ದಾಹವೆಂಬ ಕಾರ್ಯದ ಪ್ರಾಗಭಾವಕ್ಕೆ ಮಣಿಯು ಪ್ರಯೋಜಕವಾಗಿದೆ ಎಂದು ಹೇಳಬೇಕು. ಆದರೆ ಪ್ರಾಗಭಾವವು ಅನಾದಿಯೆಂದು ಸಕಲರಿಗೂ ಸಿದ್ಧವಾದ ವಿಚಾರ. ಇಂಥ ಅನಾದಿಯಾದ ಪ್ರಾಗಭಾವಕ್ಕೆ ಸಾದಿಯಾದ ಮಣಿಯೆಂಬ ಪ್ರತಿಬಂಧಕವು ಪ್ರಯೋಜಕವಾಗಲು ಹೇಗೆ ಸಾಧ್ಯವಾಗುತ್ತದೆ ? ಆದ್ದರಿಂದ ಕಾರ್ಯಾನುತ್ಪಾದ-ಪ್ರಯೋಜಕತ್ವವನ್ನು ಪ್ರತಿಬಂಧಕತ್ವವೆಂದು ಹೇಳಲು ಸಾಧ್ಯವಿಲ್ಲ.

## ಕಾರ್ಯಪ್ರಾಗಭಾವಕ್ಕೆ ಉತ್ತರಕಾಲಸಂಬಂಧಪ್ರಯೋಜಕತ್ವಮ್ ಎಂಬುದು ಕಾರ್ಯಾನುತ್ಪಾದಪ್ರಯೋಜಕತ್ವವಲ್ಲ

**कार्यानुत्पादप्रयोजकत्वं नाम कार्यप्रागभावस्योत्तरकाल सम्बन्धप्रयोजकत्वम् । तच्च सादित्वेऽपि मण्यादीनामुपपन्नमिति चेत् । न । कारणाविघटकस्य कारणाभावत्वज्ञानमन्तरा अनुत्पादप्रयोजकत्वस्य ज्ञातुमशक्यत्वेन मण्याद्यभावस्य कारणत्वसिद्धौ कारणाभावत्वेन मण्यादीनां कार्यानुत्पादप्रयोजकत्वरूपप्रतिबन्धकत्वसिद्धिः । तत्सिद्धौ च मण्याद्यभावस्य प्रतिबन्धकाभावत्वेन कारणत्वसिद्धिः इत्यन्योन्याश्रयात्।**

ತಾರ್ಕಿಕರು - ಕಾರ್ಯಪ್ರಾಗಭಾವದ ಉತ್ತರಕಾಲಸಂಬಧಕ್ಕೆ ಪ್ರಯೋಜಕವಾದದ್ದು ಕಾರ್ಯಾನುತ್ಪಾದಪ್ರಯೋಜಕತ್ವವೆಂದು ಕರೆಸಿಕೊಳ್ಳುತ್ತದೆ. ಆಗ ಮಣಿಯು ಸಾದಿಯಾದರೂ ಕೂಡ ಅನಾದಿಯಾದ ಪ್ರಾಗಭಾವಕ್ಕೆ ಪ್ರಯೋಜಕವೆಂದು ಹೇಳುವುದು ಉಪಪನ್ನವಾಗುತ್ತದೆ.

ತತ್ವವಾದಿಗಳು - ಕಾರಣಾವಿಘಟಕಕ್ಕೆ ಕಾರಣಭಾವತ್ವಜ್ಞಾನವಿಲ್ಲದೇ ಅನುತ್ಪಾದ-ಪ್ರಯೋಜಕತ್ವವನ್ನು ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ ಮಣ್ಯಾದ್ಯಭಾವಕ್ಕೆ ಕಾರಣತ್ವವು ಸಿದ್ಧವಾದರೆ ಕಾರಣಾಭಾವತ್ವೇನ ಮಣ್ಯಾದಿಗಳಿಗೆ ಕಾರ್ಯಾನುತ್ಪಾದಪ್ರಯೋಜಕತ್ವರೂಪ

ವಾದ ಪ್ರತಿಬಂಧಕತ್ವವು ಸಿದ್ಧವಾಗುತ್ತದೆ. ಮಣ್ಯಾದಿಗಳಿಗೆ ಕಾರ್ಯಾನುತ್ಪಾದಪ್ರಯೋಜಕತ್ವರೂಪವಾದ ಪ್ರತಿಬಂಧಕತ್ವವು ಸಿದ್ಧವಾದರೆ ಮಣ್ಯಾದ್ಯಭಾವಕ್ಕೆ ಪ್ರತಿಬಂಧಕಾಭಾವತ್ವೇನ ಕಾರಣತ್ವವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವು ಪ್ರಾಪ್ತವಾಗುತ್ತದೆ.

ವಿವರಣೆ - ಅನುಮಿತಿಯ ಅನುತ್ಪಾದಕ್ಕೆ ಪ್ರಯೋಜಕವಾದದ್ದು ವ್ಯಭಿಚಾರಜ್ಞಾನ. ಏಕೆಂದರೆ ಅನುಮಿತಿಗೆ ಕಾರಣವಾದದ್ದು ವ್ಯಾಪ್ತಿಜ್ಞಾನ. ಅದನ್ನು ವ್ಯಭಿಚಾರಜ್ಞಾನವು ವಿಘಟನ ಮಾಡುವುದರಿಂದ ಅನುಮಿತಿಯ ಅನುಷ್ಠಾನಕ್ಕೆ ಪ್ರಯೋಜಕವಾಗಿದೆ. ಆದರೆ ಕಾರಣವನ್ನು ವಿಘಟನ ಮಾಡದೇ ಅನುತ್ಪಾದಕ್ಕೆ ಪ್ರಯೋಜಕವಾಗಬೇಕೆಂದು ಹೇಳುವುದಾದರೆ ಕಾರಣಾಭಾವ ಆದರೆ ಮಾತ್ರ ಸಾಧ್ಯವಾಗುತ್ತದೆ. ಆದ್ದರಿಂದ ಕಾರ್ಯಾನುತ್ಪಾದಕ್ಕೆ ಪ್ರಯೋಜಕವಾಗಲು ಕಾರಣವನ್ನು ವಿಘಟನೆ ಮಾಡಬೇಕು. ಅಥವಾ ಸ್ವತಃ ಕಾರಣಾಭಾವರೂಪ ಆಗಿರಬೇಕು. ಪ್ರಕೃತದಲ್ಲಿ ಮಣಿಯು ದಾಹಾನುತ್ಪಾದಕ್ಕೆ ಪ್ರಯೋಜಕವೆಂದು ಹೇಳಿದಾಗ ಕಾರ್ಯವಿಘಟನದ ಮೂಲಕವಾಗಿ ಪ್ರಯೋಜಕವಾಗಲು ಸಾಧ್ಯವಿಲ್ಲ. 'ವಹ್ನಿ' ಎಂಬ ಕಾರಣವನ್ನು ಅದು ವಿಘಟನೆ ಮಾಡುತ್ತಿಲ್ಲ. ಆದ್ದರಿಂದ ಕಾರಣಾಭಾವರೂಪವಾಗಿಕಾರ್ಯವನ್ನುವಿಘಟನೆಮಾಡುತ್ತದೆಂದೇಹೇಳಬೇಕು.ಮಣಿಯು ಕಾರಣಾಭಾವರೂಪವೆಂದು ಹೇಳಬೇಕು. ಹಾಗೇ ಹೇಳಬೇಕೆಂದರೆ ಮಣ್ಯಭಾವವನ್ನು ಕಾರಣರೂಪವೆಂದು ಹೇಳಬೇಕು. ಆದ್ದರಿಂದ ಮಣ್ಯಭಾವವು ಕಾರಣವೆಂದು ಸಿದ್ಧವಾದರೆ ಕಾರಣೀಭೂತಮಣಿಯ ಭಾವಾಭಾವರೂಪತ್ವೇನ ಮಣಿಗೆ ಕಾರ್ಯಾನುತ್ಪಾದ- ಪ್ರಯೋಜಕತ್ವವು ಸಿದ್ಧವಾಗುತ್ತದೆ. ಕಾರ್ಯಾನುತ್ಪಾದಪ್ರಯೋಜಕತ್ವವೆಂಬ ಪ್ರತಿಬಂಧಕತ್ವವು ಸಿದ್ಧವಾದರೆ ಅಂಥ ಪ್ರತಿಬಂಧಕತ್ವರೂಪವಾದ ತಾದೃಶಮಣ್ಯಭಾವಕ್ಕೆ ಕಾರಣತ್ವವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವು ಬರುತ್ತದೆ.

ಒಟ್ಟು ಅಭಿಪ್ರಾಯ - ಕಾರಣವನ್ನು ವಿಘಟನೆ ಮಾಡದೇ ಕಾರ್ಯಾನುತ್ಪಾದಕ್ಕೆ ಪ್ರಯೋಜಕವಾಗಬೇಕೆಂದರೆ ಅದು ಸ್ವತಃ ಕಾರಣಾಭಾವರೂಪವಾಗಬೇಕು. ಮಣಿಯು ಕಾರಣಾಭಾವರೂಪವಾಗಬೇಕೆಂದರೆ ಮಣ್ಯಭಾವವು ಕಾರಣವಾಗಬೇಕು. ಮಣ್ಯಭಾವವು ಕಾರಣರೂಪವಾಗಬೇಕಾದರೆ ಪ್ರತಿಬಂಧಕಾಭಾವರೂಪವಾಗಬೇಕು. ಆಗ

ಕಾರಣತ್ವಲಕ್ಷಣದಲ್ಲಿ ಹಾಗೂ ಪ್ರತಿಬಂಧಕತ್ವಲಕ್ಷಣದಲ್ಲಿ ಪರಸ್ಪರ ಕಾರಣತ್ವ ಹಾಗೂ ಪ್ರತಿಬಂಧಕತ್ವಗಳ ಜ್ಞಾನದ ಅವಶ್ಯಕತೆಯಿದೆ. ಆದ್ದರಿಂದ ಅನ್ಯೋನ್ಯಾಶ್ರಯದೋಷವು ಬರುತ್ತದೆ.

## ಉತ್ತೇಜಕಾಭಾವವಿಶಿಷ್ಟಪ್ರತಿಬಂಧಕಾಭಾವವು ದಾಹಕ್ಕೆ ಕಾರಣವಲ್ಲ

**अपि च उत्तेजकदशायां मणिसद्भावेऽपि कार्योदयदर्शनात् न प्रतिबन्धकसामान्याभावः कारणम्। न च उत्तेजकाभावविशिष्टप्रतिबन्धकाभावः कारणम् । उत्तेजकदशायां प्रतिबन्धकसद्भावेऽपि उत्तेजकाभावविशिष्ट-प्रतिबन्धकाभावोऽस्त्येवेति वाच्यम् । विशिष्टाभावस्य कारणत्वे विशिष्टस्यैव कारणीभूताभावप्रतियोगित्वेन प्रतिबन्धकत्वापत्त्या केवलमण्यादेः प्रतिबन्धकत्वाभावापातात् ।**

ತಾರ್ಕಿಕರಿಗೆ ಮತ್ತೊಂದು ದೋಷ. ಉತ್ತೇಜಕವಿರುವ ಸಂದರ್ಭದಲ್ಲಿ ಚಂದ್ರಕಾಂತಮಣಿಯಿದ್ದರೂ ಕೂಡ ದಾಹವೆಂಬ ಕಾರ್ಯವು ಹುಟ್ಟುತ್ತಿದೆ. ಆದ್ದರಿಂದ ಪ್ರತಿಬಂಧಕಸಾಮಾನ್ಯಾಭಾವವು ದಾಹೋತ್ಪತ್ತಿಗೆ ಕಾರಣವೆಂದು ತಾರ್ಕಿಕರಿಗೆ ಹೇಳಲು ಸಾಧ್ಯವಿಲ್ಲ.

ತಾರ್ಕಿಕರು - ಉತ್ತೇಜಕಾಭಾವವಿಶಿಷ್ಟವಾದ ಪ್ರತಿಬಂಧಕಾಭಾವವನ್ನು ಕಾರಣವೆಂದು ಹೇಳುತ್ತೇವೆ. ಉತ್ತೇಜಕವಿರುವ ಸಂದರ್ಭದಲ್ಲಿ ಪ್ರತಿಬಂಧಕವಿದ್ದರೂ ಕೂಡ ಉತ್ತೇಜಕಾಭಾವವಿಶಿಷ್ಟವಾದ ಪ್ರತಿಬಂಧಕಾಭಾವವು ಇರುವುದರಿಂದ ದಾಹೋತ್ಪತ್ತಿಯು ಉಂಟಾಗುತ್ತದೆ.

ತತ್ವವಾದಿಗಳು - ಇದೂ ಕೂಡ ತಪ್ಪು. ವಿಶಿಷ್ಟಾಭಾವವನ್ನು ಕಾರಣವೆಂದು ಹೇಳಿದರೆ, ವಿಶಿಷ್ಟವನ್ನು ಕಾರಣೀಭೂತಾಭಾವಪ್ರತಿಯೋಗಿತ್ವೇನ ಪ್ರತಿಬಂಧಕತ್ವವೆಂದು

ಹೇಳಿದಂತಾಯಿತು. ಆಗ ಕೇವಲ ಮಣಿಗೆ ಪ್ರತಿಬಂಧಕತ್ವವೇ ಇಲ್ಲವೆಂದು ಆಗಬೇಕಾದೀತು.

ವಿವರಣೆ - ಮಣ್ಯಭಾವವು ದಾಹೋತ್ಪತ್ತಿಗೆ ಕಾರಣವಲ್ಲ. ಉತ್ತೇಜಕಾಭಾವವಿಶಿಷ್ಟವಾದ ಮಣ್ಯಭಾವವು ದಾಹೋತ್ಪತ್ತಿಗೆ ಕಾರಣವೆಂದು ತಾರ್ಕಿಕರು ಹೇಳುತ್ತಿದ್ದಾರೆ. ಹೀಗೆ ಹೇಳಿದರೆ ವಿಶಿಷ್ಟಾಭಾವವು ಕಾರಣವೆಂದು ಹೇಳುವುದಾದರೆ ವಿಶಿಷ್ಟದಲ್ಲೇ ಕಾರಣೀಭೂತಾಭಾವ-ಪ್ರತಿಯೋಗಿತ್ವೇನ ಪ್ರತಿಬಂಧಕತ್ವವೆಂದು ಹೇಳಿದಂತಾಯಿತು. ಕೇವಲ ಮಣಿಗೆ ಪ್ರತಿಬಂಧಕತ್ವವೇ ಸಿದ್ಧವಾಗದೇ ಇರಬೇಕಾದೀತು. ಏಕೆಂದರೆ ಕಾರಣೀಭೂತವಾದ ಅಭಾವವೆಂದರೆ ವಿಶಿಷ್ಟಾಭಾವವಾಗಿದೆ. ಇದರಲ್ಲಿ ಪ್ರತಿಯೋಗಿಯಾದದ್ದು ವಿಶಿಷ್ಟವೇ ಆಗಿದೆ. ಹೊರತು, ಶುದ್ಧಮಣಿಯು ಪ್ರತಿಯೋಗಿಯಾಗಿರುವುದಿಲ್ಲ. ಆದ್ದರಿಂದ ಲೋಕದಲ್ಲಿ ಸಿದ್ಧವಾದ ಮಣಿಯಲ್ಲಿ ಪ್ರತಿಬಂಧಕತ್ವವಿದೆಯೆಂಬ ಲೋಕರೂಢಿಯೇ ತಪ್ಪಾಗಬೇಕಾದೀತು.

## ಮಣಿಗೆ ಪ್ರತಿಬಂಧಕತ್ವ ಕೂಡಿಸಲು ಸಾಧ್ಯವಿಲ್ಲ

**न च विशिष्टस्य विशेषणविशेष्यतत्सम्बन्धात्मकत्वेन विशेष्यस्यापि कारणीभूतविशिष्टाभावप्रतियोगित्वात् प्रतिबन्धकत्वमुपपन्नमिति वाच्यम्। एवं सति विशेषणतत्सम्बन्धयोरपि तथात्वेन तयोरपि प्रतिबन्धकत्वापातात्।**

ತಾರ್ಕಿಕರು - ವಿಶಿಷ್ಟವು ವಿಶೇಷಣ, ವಿಶೇಷ್ಯ ಹಾಗೂ ತತ್‌ಸಂಬಂಧ ಸ್ವರೂಪವಾಗಿದೆ. ಆದ್ದರಿಂದ ವಿಶೇಷ್ಯವೂ ಕೂಡ ಕಾರಣೀಭೂತವಿಶಿಷ್ಟಾಭಾವಕ್ಕೆ ಪ್ರತಿಯೋಗಿ-ಯಾಗಿರುವುದರಿಂದ ಪ್ರತಿಬಂಧಕವಾಗುತ್ತದಲ್ಲವೇ ?

ತತ್ವವಾದಿಗಳು - ಹಾಗಾದರೆ ವಿಶೇಷ್ಯದಂತೆ ವಿಶೇಷಣ ಹಾಗೂ ತತ್‌ಸಂಬಂಧಗಳೂ ಕೂಡ ಪ್ರತಿಯೋಗಿಯಾಗಿರುವುದರಿಂದ ಇವುಗಳೂ ಕೂಡ ಪ್ರತಿಬಂಧಕವಾಗಲಿ.

ವಿವರಣೆ - ವಿಶಿಷ್ಟವನ್ನು ತಾರ್ಕಿಕರು ಪ್ರತ್ಯೇಕ ಪದಾರ್ಥವೆಂದು ಅಂಗೀಕರಿಸುವುದಿಲ್ಲ. ವಿಶೇಷಣ, ವಿಶೇಷ್ಯ ಹಾಗೂ ತತ್‌ಸಂಬಂಧಸ್ವರೂಪವೆಂದು ಅಂಗೀಕರಿಸುತ್ತಾರೆ. ಹೀಗೆ

ಹೇಳಿದಾಗ ವಿಶಿಷ್ಟವು ವಿಶೇಷ್ಯರೂಪವೂ ಕೂಡ ಆಗುತ್ತದೆ. ವಿಶೇಷ್ಯವಾದದ್ದು ಮಣಿಯಿಂದ ಪ್ರತಿಬಂಧಕವಾಗಿದೆ. ಆದ್ದರಿಂದ ವಿಶಿಷ್ಟಕ್ಕೆ ಕಾರಣೀಭೂತಾಭಾವಪ್ರತಿಯೋಗಿತ್ವರೂಪವಾದ ಪ್ರತಿಬಂಧಕತ್ವ ಬಂದರೆ ತತ್‌ಸ್ವರೂಪವಾದ ವಿಶೇಷ್ಯಕ್ಕೂ ಕೂಡ ಕಾರಣೀಭೂತಭಾವ - ಪ್ರತಿಯೋಗಿತ್ವರೂಪವಾದ ಪ್ರತಿಬಂಧಕತ್ವವು ಉಪಪನ್ನವಾಗುತ್ತದೆ ಎಂಬುದು ತಾರ್ಕಿಕರ ಅಭಿಪ್ರಾಯ. ಆದರೆ ವಿಶಿಷ್ಟವು ಕೇವಲ ವಿಶೇಷ್ಯಸ್ವರೂಪವಷ್ಟೇ ಅಲ್ಲ. ವಿಶೇಷಣಾಸ್ವರೂಪ ಹಾಗೂ ತತ್‌ಸಂಬಂಧ ಸ್ವರೂಪವೆಂದೂ ಕೂಡ ತಾರ್ಕಿಕರು ಒಪ್ಪಿರುವುದರಿಂದ ವಿಶೇಷಣವಾದ ಉತ್ತೇಜಕಭಾವವೂ ಕೂಡ ಪ್ರತಿಬಂಧಕವೆಂದು ಹೇಳಬೇಕಾದೀತು. ಹಾಗೂ ವಿಶೇಷ್ಯ ಹಾಗೂ ವಿಶೇಷಣಗಳಿಗಿರುವ ಸಂಬಂಧವೂ ಕೂಡ ಪ್ರತಿಬಂಧಕವೆಂದು ತಾರ್ಕಿಕರು ಒಪ್ಪಬೇಕಾಗುತ್ತದೆ. ಆದ್ದರಿಂದ ಉತ್ತೇಜಕಾಭಾವವಿಶಿಷ್ಟಪ್ರತಿಬಂಧಕಾಭಾವಕ್ಕೆ ಕಾರಣತ್ವವು ಸಿದ್ಧವಾಗುವುದಿಲ್ಲ.

## ಉತ್ತೇಜಕಾಭಾವಾವಚ್ಛಿನ್ನವಾದ ಮಣ್ಯಭಾವವು ದಾಹಕ್ಕೆ ಕಾರಣವಲ್ಲ

**ननु न मणित्वावच्छिन्नमण्यभावः दाहकारणम् । नापि विशिष्टाभावः। किन्तु उत्तेजकाभावावच्छिन्नमण्यभावः । न च अस्याभावस्य मण्यधिकरणेऽसम्भवः। प्रतियोगितावच्छेदकावच्छिन्नप्रतियोगिसत्त्वस्यैवाभावविरोधित्वेन प्रतियोगिसत्त्वमात्रस्य अविरोधित्वात् । गुणकर्मादौ गुणकर्मान्यत्वावच्छिन्नत्वाभावस्य दर्शनात् इति चेत् । न । उत्तेजकस्य प्रतिबन्धकात्ववेलायां उत्तेजकाभावावच्छिन्नमण्यभावस्य सत्त्वेन दाहोत्पत्तिप्रसङ्गात् ।**

ಮಣಿತ್ವಾವಚ್ಛಿನ್ನಮಣ್ಯಭಾವವು ದಾಹವನ್ನು ಕುರಿತು ಕಾರಣವಾಗಿರುವುದಿಲ್ಲ. ಅಥವಾ ವಿಶಿಷ್ಟಾಭಾವವೂ ಕೂಡ ದಾಹವನ್ನು ಕುರಿತು ಕಾರಣವಲ್ಲ. ಮತ್ತೇನೆಂದರೆ ಉತ್ತೇಜಕಾಭಾವಾವಚ್ಛಿನ್ನಮಣ್ಯಭಾವವು ದಾಹವನ್ನು ಕುರಿತು ಕಾರಣವಾಗಿದೆ. ಮಣ್ಯಧಿಕರಣದಲ್ಲಿ ಈ ಅಭಾವವು ಅಸಂಭಾವಿತವೆಂದು ಹೇಳಬಾರದು. ಪ್ರತಿಯೋಗಿತಾ-

ವಚ್ಛೇದಕಾವಚ್ಛಿನ್ನಪ್ರತಿಯೋಗಿಸತ್ವವೇ ಅಭಾವದಿಂದ ವಿರುದ್ಧವಾಗಿದೆ. ಕೇವಲ ಪ್ರತಿಯೋಗಿತ್ವವು ಅಭಾವದಿಂದ ವಿರುದ್ಧವಾಗಿರುವುದಿಲ್ಲ. ಗುಣದಲ್ಲಿ ಗುಣಾನ್ಯತ್ವಾವಚ್ಛಿನ್ನವಾದ ಅಭಾವವು ಹಾಗೂ ಕರ್ಮದಲ್ಲಿ ಕರ್ಮಾನ್ಯತ್ವಾವಚ್ಛಿನ್ನವಾದ ಅಭಾವವನ್ನು ಹೇಳುವುದು ಕಂಡಿದೆ.

ಹೀಗೆ ಆಕ್ಷೇಪ ಮಾಡಬಾರದು. ಏಕೆಂದರೆ ಉತ್ತೇಜಕಕ್ಕೆ ಮತ್ತೊಂದು ಪ್ರತಿಬಂಧಕವಿರುವ ಸಂದರ್ಭದಲ್ಲಿ ಉತ್ತೇಜಕಾಭಾವಾವಚ್ಛಿನ್ನವಾದ ಮಣ್ಯಭಾವದಿಂದ ಕಾರಣವನ್ನು ಹೇಳಬಹುದಾದ್ದರಿಂದ ದಾಹೋತ್ಪತ್ತಿಯಾಗಲಿ ಎಂಬ ಆಕ್ಷೇಪವು ತಾರ್ಕಿಕರಿಗೆ ಇದ್ದೇ ಇರುತ್ತದೆ.

ವಿವರಣೆ - ಮಣ್ಯಭಾವವು ದಾಹವನ್ನು ಕುರಿತು ಕಾರಣವೆಂದು ಹೇಳಿದಾಗ ಪ್ರತಿಯೋಗಿತಾವಚ್ಛೇದಕವಾದದ್ದು ಮಣಿತ್ವವಲ್ಲ. ಹೊರತು, ಉತ್ತೇಜಕಾಭಾವವು ಅವಚ್ಛೇದಕವಾಗಿದೆ. ಆದ್ದರಿಂದ ಉತ್ತೇಜಕಾಭಾವವಚ್ಛಿನ್ನಮಣ್ಯಭಾವವೇ ದಾಹಕ್ಕೆ ಕಾರಣವೆಂದು ಹೇಳುತ್ತೇವೆ. ಮಣಿಯಿದ್ದಾಗ ಅಭಾವಕ್ಕೆ ಕೇವಲ ಪ್ರತಿಯೋಗಿಯು ವಿರುದ್ಧವಾಗಿರುವುದಿಲ್ಲ. ಪ್ರತಿಯೋಗಿತಾವಚ್ಛೇದಕವಚ್ಛಿನ್ನವಾದ ಪ್ರತಿಯೋಗಿಯೇ ವಿರೋಧಿ- ಯಾಗಿರುತ್ತದೆ. ಪ್ರಕೃತ ಮಣಿಯು ಪ್ರತಿಯೋಗಿಯಾಗಿದೆ. ಉತ್ತೇಜಕಾಭಾವವು ಪ್ರತಿಯೋಗಿತಾವಚ್ಛೇದಕವಾಗಿದೆ. ಮಣಿಯಿದ್ದರೂ ಕೂಡ ಉತ್ತೇಜಕಾಭಾವವೆಂಬ ಅವಚ್ಛೇದಕವಿಲ್ಲದಿದ್ದರೆ ತದವಚ್ಛಿನ್ನವಾದ ಅಭಾವವನ್ನು ಹೇಳಬಹುದು. ಆಗ ದಾಹೋತ್ಪಾದವನ್ನು ಹೇಳಬಹುದು. ಉದಾಹರಣೆ - ಘಟದಲ್ಲಿ ಗುಣವು ಗುಣತ್ವೇನ ರೂಪೇಣ ಇದ್ದರೂ ಕೂಡ ಗುಣಾನ್ಯತ್ವೇನ ರೂಪೇಣ ಇರುವುದಿಲ್ಲ. ಅದರಂತೆ ಕರ್ಮವೂ ಕೂಡ ಕರ್ಮತ್ವೇನ ರೂಪೇಣ ಘಟದಲ್ಲಿ ಇದ್ದರೂ ಕೂಡ ಕರ್ಮಾನ್ಯತ್ವೇನ ರೂಪೇಣ ಇರುವುದಿಲ್ಲ. ಆದ್ದರಿಂದ ಗುಣಾನ್ಯತ್ವಾವಚ್ಛಿನ್ನವಾದ ಗುಣವು ಮತ್ತು ಕರ್ಮಾನ್ಯತ್ವಾವಚ್ಛಿನ್ನವಾದ ಕರ್ಮವು ಘಟದಲ್ಲಿ ಇಲ್ಲವೆಂದು ಹೇಳಬಹುದು. ಅದರಂತೆ ಪ್ರಕೃತದಲ್ಲಿ ಮಣಿಯಿದ್ದಾಗಲೂ ಕೂಡ ಉತ್ತೇಜಕಾಭಾವವಚ್ಛಿನ್ನವಾದ ಮಣಿಯ ಅಭಾವವನ್ನು ಮಣಿಯಿದ್ದಾಗಲೂ ಕೂಡ ಹೇಳಬಹುದು. ಇಷ್ಟು ತಾರ್ಕಿಕರ ಅಭಿಪ್ರಾಯ.

ಹೇಳಿದಾಗ ವಿಶಿಷ್ಟವು ವಿಶೇಷ್ಯರೂಪವೂ ಕೂಡ ಆಗುತ್ತದೆ. ವಿಶೇಷ್ಯವಾದದ್ದು ಮಣಿಯಿಂದ ಪ್ರತಿಬಂಧಕವಾಗಿದೆ. ಆದ್ದರಿಂದ ವಿಶಿಷ್ಟಕ್ಕೆ ಕಾರಣೀಭೂತಾಭಾವಪ್ರತಿಯೋಗಿತ್ವರೂಪವಾದ ಪ್ರತಿಬಂಧಕತ್ವ ಬಂದರೆ ತತ್‌ಸ್ವರೂಪವಾದ ವಿಶೇಷ್ಯಕ್ಕೂ ಕೂಡ ಕಾರಣೀಭೂತಭಾವ - ಪ್ರತಿಯೋಗಿತ್ವರೂಪವಾದ ಪ್ರತಿಬಂಧಕತ್ವವು ಉಪಪನ್ನವಾಗುತ್ತದೆ ಎಂಬುದು ತಾರ್ಕಿಕರ ಅಭಿಪ್ರಾಯ. ಆದರೆ ವಿಶಿಷ್ಟವು ಕೇವಲ ವಿಶೇಷ್ಯಸ್ವರೂಪವಷ್ಟೇ ಅಲ್ಲ. ವಿಶೇಷಣಸ್ವರೂಪ ಹಾಗೂ ತತ್‌ಸಂಬಂಧ ಸ್ವರೂಪವೆಂದೂ ಕೂಡ ತಾರ್ಕಿಕರು ಒಪ್ಪಿರುವುದರಿಂದ ವಿಶೇಷಣವಾದ ಉತ್ತೇಜಕಭಾವವೂ ಕೂಡ ಪ್ರತಿಬಂಧಕವೆಂದು ಹೇಳಬೇಕಾದೀತು. ಹಾಗೂ ವಿಶೇಷ್ಯ ಹಾಗೂ ವಿಶೇಷಣಗಳಿಗಿರುವ ಸಂಬಂಧವೂ ಕೂಡ ಪ್ರತಿಬಂಧಕವೆಂದು ತಾರ್ಕಿಕರು ಒಪ್ಪಬೇಕಾಗುತ್ತದೆ. ಆದ್ದರಿಂದ ಉತ್ತೇಜಕಾಭಾವವಿಶಿಷ್ಟಪ್ರತಿಬಂಧಕಾಭಾವಕ್ಕೆ ಕಾರಣತ್ವವು ಸಿದ್ಧವಾಗುವುದಿಲ್ಲ.

## ಉತ್ತೇಜಕಾಭಾವಾವಚ್ಛಿನ್ನವಾದ ಮಣ್ಯಭಾವವು ದಾಹಕ್ಕೆ ಕಾರಣವಲ್ಲ

**ननु न मणित्वावच्छिन्नमण्यभावः दाहकारणम् । नापि विशिष्टाभावः। किन्तु उत्तेजकाभावावच्छिन्नमण्यभावः । न च अस्याभावस्य मण्यधिकरणेऽसम्भवः। प्रतियोगितावच्छेदकावच्छिन्नप्रतियोगिसत्त्वस्यैवाभावविरोधित्वेन प्रतियोगिसत्त्वमात्रस्य अविरोधित्वात् । गुणकर्मादौ गुणकर्मान्यत्वावच्छिन्नत्वाभावस्य दर्शनात् इति चेत् । न । उत्तेजकस्य प्रतिबन्धकात्ववेलायां उत्तेजकाभावावच्छिन्नमण्यभावस्य सत्त्वेन दाहोत्पत्तिप्रसङ्गात् ।**

ಮಣಿತ್ವಾವಚ್ಛಿನ್ನಮಣ್ಯಭಾವವು ದಾಹವನ್ನು ಕುರಿತು ಕಾರಣವಾಗಿರುವುದಿಲ್ಲ. ಅಥವಾ ವಿಶಿಷ್ಟಾಭಾವವೂ ಕೂಡ ದಾಹವನ್ನು ಕುರಿತು ಕಾರಣವಲ್ಲ. ಮತ್ತೇನೆಂದರೆ ಉತ್ತೇಜಕಾಭಾವಾವಚ್ಛಿನ್ನಮಣ್ಯಭಾವವು ದಾಹವನ್ನು ಕುರಿತು ಕಾರಣವಾಗಿದೆ. ಮಣ್ಯಧಿಕರಣದಲ್ಲಿ ಈ ಅಭಾವವು ಅಸಂಭಾವಿತವೆಂದು ಹೇಳಬಾರದು. ಪ್ರತಿಯೋಗಿತಾ-

ವಚ್ಛೇದಕಾವಚ್ಛಿನ್ನಪ್ರತಿಯೋಗಿಸತ್ವವೇ ಅಭಾವದಿಂದ ವಿರುದ್ಧವಾಗಿದೆ. ಕೇವಲ ಪ್ರತಿಯೋಗಿತ್ವವು ಅಭಾವದಿಂದ ವಿರುದ್ಧವಾಗಿರುವುದಿಲ್ಲ. ಗುಣದಲ್ಲಿ ಗುಣಾನ್ಯತ್ವಾವಚ್ಛಿನ್ನವಾದ ಅಭಾವವು ಹಾಗೂ ಕರ್ಮದಲ್ಲಿ ಕರ್ಮಾನ್ಯತ್ವಾವಚ್ಛಿನ್ನವಾದ ಅಭಾವವನ್ನು ಹೇಳುವುದು ಕಂಡಿದೆ.

ಹೀಗೆ ಆಕ್ಷೇಪ ಮಾಡಬಾರದು. ಏಕೆಂದರೆ ಉತ್ತೇಜಕಕ್ಕೆ ಮತ್ತೊಂದು ಪ್ರತಿಬಂಧಕವಿರುವ ಸಂದರ್ಭದಲ್ಲಿ ಉತ್ತೇಜಕಾಭಾವಾವಚ್ಛಿನ್ನವಾದ ಮಣ್ಯಭಾವದಿಂದ ಕಾರಣವನ್ನು ಹೇಳಬಹುದಾದ್ದರಿಂದ ದಾಹೋತ್ಪತ್ತಿಯಾಗಲಿ ಎಂಬ ಆಕ್ಷೇಪವು ತಾರ್ಕಿಕರಿಗೆ ಇದ್ದೇ ಇರುತ್ತದೆ.

ವಿವರಣೆ - ಮಣ್ಯಭಾವವು ದಾಹವನ್ನು ಕುರಿತು ಕಾರಣವೆಂದು ಹೇಳಿದಾಗ ಪ್ರತಿಯೋಗಿತಾವಚ್ಛೇದಕವಾದದ್ದು ಮಣಿತ್ವವಲ್ಲ. ಹೊರತು, ಉತ್ತೇಜಕಾಭಾವವು ಅವಚ್ಛೇದಕವಾಗಿದೆ. ಆದ್ದರಿಂದ ಉತ್ತೇಜಕಾಭಾವವಚ್ಛಿನ್ನಮಣ್ಯಭಾವವೇ ದಾಹಕ್ಕೆ ಕಾರಣವೆಂದು ಹೇಳುತ್ತೇವೆ. ಮಣಿಯಿದ್ದಾಗ ಅಭಾವಕ್ಕೆ ಕೇವಲ ಪ್ರತಿಯೋಗಿಯು ವಿರುದ್ಧವಾಗಿರುವುದಿಲ್ಲ. ಪ್ರತಿಯೋಗಿತಾವಚ್ಛೇದಕವಚ್ಛಿನ್ನವಾದ ಪ್ರತಿಯೋಗಿಯೇ ವಿರೋಧಿ- ಯಾಗಿರುತ್ತದೆ. ಪ್ರಕೃತ ಮಣಿಯು ಪ್ರತಿಯೋಗಿಯಾಗಿದೆ. ಉತ್ತೇಜಕಾಭಾವವು ಪ್ರತಿಯೋಗಿತಾವಚ್ಛೇದಕವಾಗಿದೆ. ಮಣಿಯಿದ್ದರೂ ಕೂಡ ಉತ್ತೇಜಕಾಭಾವವೆಂಬ ಅವಚ್ಛೇದಕವಿಲ್ಲದಿದ್ದರೆ ತದವಚ್ಛಿನ್ನವಾದ ಅಭಾವವನ್ನು ಹೇಳಬಹುದು. ಆಗ ದಾಹೋತ್ಪಾದವನ್ನು ಹೇಳಬಹುದು. ಉದಾಹರಣೆ - ಘಟದಲ್ಲಿ ಗುಣವು ಗುಣತ್ವೇನ ರೂಪೇಣ ಇದ್ದರೂ ಕೂಡ ಗುಣಾನ್ಯತ್ವೇನ ರೂಪೇಣ ಇರುವುದಿಲ್ಲ. ಅದರಂತೆ ಕರ್ಮವೂ ಕೂಡ ಕರ್ಮತ್ವೇನ ರೂಪೇಣ ಘಟದಲ್ಲಿ ಇದ್ದರೂ ಕೂಡ ಕರ್ಮಾನ್ಯತ್ವೇನ ರೂಪೇಣ ಇರುವುದಿಲ್ಲ. ಆದ್ದರಿಂದ ಗುಣಾನ್ಯತ್ವಾವಚ್ಛಿನ್ನವಾದ ಗುಣವು ಮತ್ತು ಕರ್ಮಾನ್ಯತ್ವಾವಚ್ಛಿನ್ನವಾದ ಕರ್ಮವು ಘಟದಲ್ಲಿ ಇಲ್ಲವೆಂದು ಹೇಳಬಹುದು. ಅದರಂತೆ ಪ್ರಕೃತದಲ್ಲಿ ಮಣಿಯಿದ್ದಾಗಲೂ ಕೂಡ ಉತ್ತೇಜಕಾಭಾವವಚ್ಛಿನ್ನವಾದ ಮಣಿಯ ಅಭಾವವನ್ನು ಮಣಿಯಿದ್ದಾಗಲೂ ಕೂಡ ಹೇಳಬಹುದು. ಇಷ್ಟು ತಾರ್ಕಿಕರ ಅಭಿಪ್ರಾಯ.

ಇದು ತಪ್ಪು. ದಾಹಕ್ಕೆ ಪ್ರತಿಬಂಧಕವಾದದ್ದು ಮಣಿ. ಮಣಿಗೆ ಪ್ರತಿಬಂಧಕವಾದದ್ದು ಉತ್ತೇಜಕ. ಈ ಉತ್ತೇಜಕಕ್ಕೂ ಕೂಡ ಮತ್ತೊಂದು ಪ್ರತಿಬಂಧಕವಿದ್ದಾಗ ಆಗ ದಾಹವು ಉಂಟಾಗುವುದಿಲ್ಲ. ಇಂಥ ಸಂದರ್ಭದಲ್ಲಿ ಉತ್ತೇಜಕವು ಪ್ರತಿಬದ್ಧವಾಗಿರುವುದರಿಂದ ಕಾರ್ಯವು ಉಂಟಾಗುವುದಿಲ್ಲ. ಆದರೆ ಇಂಥ ಸಂದರ್ಭದಲ್ಲಿಯೂ ಕಾರ್ಯವು ಉಂಟಾಗಲಿ ಎಂದು ಆಕ್ಷೇಪ ಮಾಡುತ್ತೇವೆ. ಏಕೆಂದರೆ ಉತ್ತೇಜಕಾಭಾವಾವಚ್ಛಿನ್ನವಾದ ಮಣ್ಯಭಾವ ಎಂಬ ಕಾರಣವಿದೆ. ವಹ್ನಿಯಲ್ಲಿ ಚಂದ್ರಕಾಂತಮಣಿ ಇದ್ದರೂ ಕೂಡ ಅದು ಉತ್ತೇಜಕಾಭಾವಾವಚ್ಛಿನ್ನವಾಗಿದೆ. ಉತ್ತೇಜಕದಲ್ಲಿ ಉತ್ತೇಜಕತ್ವವೇ ಪ್ರಕೃತ ಇರುವುದಿಲ್ಲ. ಆದ್ದರಿಂದ ಉತ್ತೇಜಕಾಭಾವಾವಚ್ಛಿನ್ನವಾದ ಮಣ್ಯಭಾವದ ಕಾರಣದಿಂದ ದಾಹೋತ್ಪತ್ತಿ ಆಗಲಿ ಎಂಬ ಆಕ್ಷೇಪವು ತಾರ್ಕಿಕರಿಗೆ ಪ್ರಾಪ್ತವಾಗುತ್ತದೆ.

## ಪ್ರತಿಬಂಧಕ ಹಾಗೂ ಉತ್ತೇಜಕಾಭಾವಗಳಿಗಿರುವ ಸಂಬಂಧಾಭಾವವು ದಾಹಕಾರಣವಲ್ಲ

**यत्तु – 'प्रतिबन्धकोत्तेजकाभावयोः सम्बन्धाभावो दाहकारणम्' इति । तन्न। कारणीभूताभावप्रतियोगित्वेन सम्बन्धस्यैव प्रतिबन्धकत्वापत्त्या सम्बन्धाधिकरणस्य मण्यादेः प्रतिबन्धकत्वाभावापातात् । त्वन्मते अभावाधिकरणयोः सम्बन्धाभावेन उत्तेजकाभावकालिक प्रतिबन्धकवेलायां दाहप्रसङ्गात् । अभावाधिकरणयोः अतिरिक्तसम्बन्धानङ्गीकारेऽपि स्वरूपसम्बन्धोऽङ्गीक्रियते इति चेत् । न। उत्तेजकसमवधानकालेऽपि दाहाभावप्रसङ्गात् । तदापि प्रतिबन्धकस्य देशान्तरगतोत्तेजकाभावेन सम्बन्धसद्भावात्।**

'ಪ್ರತಿಬಂಧಕೋತ್ತೇಜಕಾಭಾವಯೋಃ ಸಂಬಂಧಾಭಾವೋ ದಾಹಕಾರಣಮ್' ದಾಹಕ್ಕೆ ಪ್ರತಿಬಂಧಕ ಹಾಗೂ ಉತ್ತೇಜಕಾಭಾವಗಳಿಗೆ ಇರುವ ಸಂಬಂಧಾಭಾವವು ಕಾರಣವಾಗಿದೆ ಎಂದು ತಾರ್ಕಿಕರು ಹೇಳಿದ್ದರು. ಇದು ತಪ್ಪು. ಹಾಗಾದರೆ ಕಾರಣೀಭೂತಾಭಾವ-

ಪ್ರತಿಯೋಗಿಯಾದ ಸಂಬಂಧವನ್ನೇ ಪ್ರತಿಬಂಧಕವೆಂದು ಹೇಳಬೇಕೇ ಹೊರತು ಸಂಬಂಧಕ್ಕೆ ಅಧಿಕರಣವಾದ ಮಣಿ ಹಾಗೂ ಉತ್ತೇಜಕಾಭಾವಗಳಿಗೆ ಪ್ರತಿಬಂಧವೆಂದು ವ್ಯವಹಾರ ಮಾಡದೇ ಇರಬೇಕಾದೀತು. ಏಕೆಂದರೆ ನಿಮ್ಮ ಮತದಲ್ಲಿ ಅಭಾವ ಹಾಗೂ ಅಧಿಕರಣಗಳಿಗೆ ಸಂಬಂಧವೇ ಇಲ್ಲದ್ದರಿಂದ ಉತ್ತೇಜಕಾಭಾವವಿಲ್ಲದ ಕಾಲದಲ್ಲಿ ಪ್ರತಿಬಂಧಕವಿರುವಾಗ ದಾಹವು ಉಂಟಾಗಬೇಕಾದೀತು.

ಪ್ರಶ್ನೆ - ಅಭಾವ ಹಾಗೂ ಅಧಿಕರಣಗಳಿಗೆ ಅತಿರಿಕ್ತಸಂಬಂಧವನ್ನು ಅಂಗೀಕಾರ ಮಾಡದಿದ್ದರೂ ಸ್ವರೂಪಸಂಬಂಧವನ್ನು ತಾರ್ಕಿಕರು ಅಂಗೀಕರಿಸಿದ್ದಾರಲ್ಲವೇ?

ಉತ್ತರ - ಇದೂ ಕೂಡ ತಪ್ಪು. ಏಕೆಂದರೆ ಯಾವ ಸ್ಥಳದಲ್ಲಿ ಪ್ರತಿಬಂಧಕವಿದೆಯೋ, ಅದೇ ಸ್ಥಳದಲ್ಲಿ ಉತ್ತೇಜಕವಿದ್ದರೂ ಕೂಡ ಬೇರೆ ಸ್ಥಳದಲ್ಲಿ ಉತ್ತೇಜಕವು ಇರುವುದಿಲ್ಲ. ಸ್ಥಳಾಂತರದಲ್ಲಿರುವ ಉತ್ತೇಜಕಾಭಾವ ಹಾಗೂ ಈ ಸ್ಥಳದಲ್ಲಿರುವ ಪ್ರತಿಬಂಧಕ ಇವೆರಡಕ್ಕೆ ಸ್ವರೂಪಸಂಬಂಧವಿರುವ ಕಾರಣ ದಾಹವು ಉಂಟಾಗದೇ ಇರಬೇಕಾದೀತು ಎಂಬ ಆಕ್ಷೇಪ ತಾರ್ಕಿಕರಿಗೆ ಬಂದೇ ಬರುತ್ತದೆ.

## ಉಪಶ್ಲಿಷ್ಟಸ್ವಭಾವತ್ವವೆಂಬ ಸ್ವರೂಪಸಂಬಂಧಕ್ಕೆ ವ್ಯಾಹತಿದೋಷ

**यदत्रोक्तम् – 'नाधिकरणाभावावेव स्वरूपसम्बन्धः । किं नाम उपश्लिष्टस्वभावत्वम् । उपश्लिष्टस्वभावत्वं च सम्बन्धान्तरं विना विशिष्टप्रत्ययजननयोग्यत्वं' इति । तदपि न । सम्बन्धतदभावौ विना विशिष्टप्रत्ययजनकत्वाजनकत्वयोरसम्भवात् । यत्र हि सम्बन्धः सम्भावितः सः विशिष्टप्रत्ययजननस्वभावयोग्यः, यत्र तु सम्बन्धोऽसम्भावितः नासौ विशिष्टप्रत्ययजननयोग्यः इति नियमात् ।**

ಮೇಲಿನ ಆಕ್ಷೇಪಕ್ಕೆ ತಾರ್ಕಿಕರ ಉತ್ತರ ಹೀಗಿದೆ - ''ಅಧಿಕರಣ ಹಾಗೂ ಅಭಾವಗಳಿಗಷ್ಟೇ ಸ್ವರೂಪಸಂಬಂಧವನ್ನು ಅಂಗೀಕಾರ ಮಾಡಿರುವುದಿಲ್ಲ. ಉಪಶ್ಲಿಷ್ಟಸ್ವಭಾತ್ವರೂಪವಾದ ಸ್ವರೂಪಸಂಬಂಧವನ್ನು ಅಂಗೀಕರಿಸಿದ್ದೇವೆ. ಉಪಶ್ಲಿಷ್ಟಸ್ವಭಾವತ್ವವೆಂದರೆ ಬೇರೆ ಯಾವ ಸಂಬಂಧವಿಲ್ಲದೇ ವಿಶಿಷ್ಟಪ್ರತ್ಯಯವನ್ನು ಹುಟ್ಟಿಸಲು ಯೋಗ್ಯವಾಗಿದೆ ಎಂದರ್ಥ'' ಎಂದು.

ಇದು ತಪ್ಪು. ಸಂಬಂಧವಿಲ್ಲದೇ ವಿಶಿಷ್ಟಪ್ರತ್ಯಯಜನಕತ್ವವು ಕೂಡುವುದಿಲ್ಲ. ಸಂಬಂಧಾಭಾವವಿಲ್ಲದೇ ವಿಶಿಷ್ಟಪ್ರತ್ಯಯಜನಕತ್ವಾಭಾವವೂ ಕೂಡ ಕೂಡುವುದಿಲ್ಲ. ಏಕೆಂದರೆ ಎಲ್ಲಿ ಸಂಬಂಧವು ಸಂಭಾವಿತವಾಗಿರುತ್ತದೋ, ಅಲ್ಲಷ್ಟೇ ವಿಶಿಷ್ಟಪ್ರತ್ಯಯಜನನಸ್ವಭಾವಕ್ಕೆ ಯೋಗ್ಯತ್ವವನ್ನು ಹೇಳಬಹುದು. ಎಲ್ಲಿ ಸಂಬಂಧವು ಅಸಂಭಾವಿತವಾಗಿರುತ್ತದೋ, ಅಲ್ಲಿ ವಿಶಿಷ್ಟಪ್ರತ್ಯಯಜನನಯೋಗ್ಯತ್ವವನ್ನು ಹೇಳಬಾರದೆಂಬ ನಿಯಮವು ಲೋಕಸಿದ್ಧವಾಗಿದೆ.

ವಿವರಣೆ - ಯಾವ ಸಂಬಂಧವೂ ಇಲ್ಲದೇ ವಿಶಿಷ್ಟ ಪ್ರತ್ಯಯವನ್ನು ಹುಟ್ಟಿಸುವುದೇ ಸ್ವರೂಪಸಂಬಂಧವೆಂದು ತಾರ್ಕಿಕರು ಹೇಳುತ್ತಾರೆ. ಇದು 'ಮೇ ಮಾತಾ ವಂಧ್ಯ' ಎಂಬ ಮಾತಿನಂತೆ ವ್ಯಾಹತವಾಗಿದೆ. ಏಕೆಂದರೆ 'ವಿಶಿಷ್ಟಪ್ರತ್ಯಯವನ್ನು ಹುಟ್ಟಿಸುತ್ತದೆ' ಎಂದರೆ 'ಯಾವುದಾದರೂ ಒಂದು ಸಂಬಂಧದ ಜ್ಞಾನವನ್ನು ಹುಟ್ಟಿಸುತ್ತದೆ' ಎಂದೇ ಅರ್ಥ. ಆದರೆ ತಾರ್ಕಿಕರಾದ ನೀವು ಯಾವ ಸಂಬಂಧದ ಜ್ಞಾನವನ್ನೂ ಹುಟ್ಟಿಸದೇ ವಿಶಿಷ್ಟಪ್ರತ್ಯಯವನ್ನು ಹುಟ್ಟಿಸುತ್ತದೆ ಎಂದು ಹೇಳುತ್ತಿದ್ದೀರಿ. ಆದ್ದರಿಂದ ಸಂಬಂಧವಿದ್ದರೆ ವಿಶಿಷ್ಟಪ್ರತ್ಯಯಜನಕತ್ವವಿರುತ್ತದೆ. ಸಂಬಂಧ- ವಿಲ್ಲದಿದ್ದರೆ ವಿಶಿಷ್ಟಪ್ರತ್ಯಯಜನಕತ್ವವೂ ಕೂಡ ಇರುವುದಿಲ್ಲ.

## ಕೇವಲಪ್ರತಿಬಂಧಕಾಭಾವವು ದಾಹಕ್ಕೆ ಕಾರಣವಲ್ಲ

**यदपि – 'केवलप्रतिबन्धकाभावे उत्तेजकसहकृतः प्रतिबन्धको न प्रतियोगी। तस्य केवलत्वाभावात् । किन्तु तदन्यः । तदन्यस्य च केवलप्रतिबन्धकस्य अभावः उत्तेजकसहितप्रतिबन्धकसत्त्वे उत्तेजकमात्रसत्त्वे उभयासत्त्वे चाविशिष्ट एवेति नाननुगमः । उत्तेजकापनये च केवलप्रतिबन्धकोऽस्तीति न तदभावः इति न दाहो भवति' इति ।।**

**तन्न । प्रतिबन्धकदशायां उत्तेजकाभावेऽपि दाहप्रसङ्गात् । कारणीभूतस्य केवलप्रतिबन्धकाभावस्य तत्रापि सत्त्वात् । न च केवलमणिसद्भावात् तदभावासम्भवः । तत्रत्यप्रतिबन्धकस्य क्षणादिविशिष्टत्वेन केवलत्वाभावात्। न च प्रतिबन्धकस्य केवलत्वं नामोत्तेजकाभाववैशिष्ट्यं विवक्षितम् । न तु विशेषणमात्रवैधुर्यमिति वाच्यम् । उत्तेजकाभावविशिष्टमण्यभावस्य कारणतायाः प्रागेव दूषितत्वात्।**

ಅನುನುಗಮದೋಷವನ್ನು ತತ್ತ್ವಚಿಂತಾಮಣಿಕಾರನು ಎರಡನೆಯ ಬಗೆಯಲ್ಲಿ ಹಿಂದೆ ಹೀಗೆ ಪರಿಹರಿಸಿಕೊಂಡಿದ್ದನು - ''ಕೇವಲ ಪ್ರತಿಬಂಧಕಾಭಾವವು ಉತ್ತೇಜಕಸಹಕೃತವಾದಾಗ ಪ್ರತಿಬಂಧಕವು ಪ್ರತಿಯೋಗಿಯಾಗುವುದಿಲ್ಲ. ಏಕೆಂದರೆ ಅದರಲ್ಲಿ ಕೇವಲತ್ವವು ಇರುವುದಿಲ್ಲ. ಆದ್ದರಿಂದ ತದನ್ಯವನ್ನೇ ಪ್ರತಿಯೋಗಿಯೆನ್ನಬೇಕು. ತದನ್ಯವಾದ ಕೇವಲಪ್ರತಿಬಂಧಕವಾದ ಅಭಾವವು ಉತ್ತೇಜಕಸಹಿತಪ್ರತಿಬಂಧಕವಿದ್ದಾಗ, ಅಥವಾ ಉತ್ತೇಜಕವಿದ್ದಾಗ, ಅಥವಾ ಎರಡೂ ಇಲ್ಲದಿದ್ದಾಗ ವಿಶಿಷ್ಟಾಭಾವವು ಅನುಗತವಾಗುತ್ತದೆ. ಉತ್ತೇಜಕವು ನಾಶವಾದರೆ ಕೇವಲ ಪ್ರತಿಬಂಧಕವು ಇರುವುದರಿಂದ ತದಭಾವವನ್ನು

ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ದಾಹವೂ ಕೂಡ ಉತ್ಪನ್ನವಾಗುವುದಿಲ್ಲ'' ಎಂದು.

ಇವನ ಈ ಮಾತು ಅಸಾಧುವಾಗಿದೆ. ಹೀಗೆ ಹೇಳಿದರೆ ಪ್ರತಿಬಂಧಕವಿರುವ ಸಂದರ್ಭದಲ್ಲಿ ಉತ್ತೇಜಕವಿಲ್ಲದ್ದಿದರೂ ದಾಹವು ಉಂಟಾಗಲಿ. ಏಕೆಂದರೆ ಕಾರಣೀಭೂತವಾದ ಕೇವಲ ಪ್ರತಿಬಂಧಕಾಭಾವವು ಅಲ್ಲಿಯೂ ಸಹ ಇರುತ್ತದೆ. ಕೇವಲ ಮಣಿಯಿರುವುದರಿಂದ ತದಭಾವವನ್ನು ಹೇಗೆ ಹೇಳುವಿರಿ? ಎಂದು ಪ್ರಶ್ನಿಸಬಾರದು. ಇಲ್ಲಿರುವ ಪ್ರತಿಬಂಧಕವು ಕ್ಷಣಾದಿವಿಶಿಷ್ಟವಾಗಿರುವುದರಿಂದ ಕೇವಲ ಪ್ರತಿಬಂಧಕವಾಗುವುದಿಲ್ಲ. ಇಲ್ಲಿ ಪ್ರತಿಬಂಧಕಕ್ಕೆ ಕೇವಲತ್ವವೆಂದರೆ ಉತ್ತೇಜಕಾಭಾವ-ವಿಶಿಷ್ಟತ್ವವೆಂದು ವಿವಕ್ಷಿಸಲಾಗಿದೆ. ಹೊರತು ಯಾವುದೇ ವಿಶೇಷಣಗಳಿಂದ ರಹಿತವಾಗಿರುವುದು ಎಂದರ್ಥವಲ್ಲ ಎಂದು ಪ್ರಶ್ನಿಸಬಹುದು. ಆದರೆ ಉತ್ತೇಜಕಾಭಾವ-ವಿಶಿಷ್ಟಮಣ್ಯಭಾವವನ್ನೇ ಕಾರಣವೆಂದು ಹೇಳಿದಂತಾಯಿತು. ಇದನ್ನು ಹಿಂದಿನ ಪಕ್ಷದಲ್ಲಿಯೇ ನಿರಕಾರಣೆ ಮಾಡಲಾಗಿದೆ.

ವಿವರಣೆ - ದಾಹಕ್ಕೆ ಉತ್ತೇಜಕಾಭಾವವಿಶಿಷ್ಟವಾದ ಮಣ್ಯಭಾವವು ಕಾರಣವೆಂದು ತಾರ್ಕಿಕರು ಹೇಳಿದರೆ ಅನುನುಗಮದೋಷವನ್ನು ಹೇಳಲಾಗಿತ್ತು. ಇದನ್ನು ಎರಡು ರೀತಿಯಲ್ಲಿ ಮಣಿಕಾರನು ಪರಿಹರಿಸಿದ್ದನು. ಕೇವಲಪ್ರತಿಬಂಧಕಾಭಾವವು ದಾಹಕಾರಣವೆಂಬುದು ಎರಡನೆಯ ಪರಿಹಾರ. ಸಂಬಂಧಾಭಾವವು ಕಾರಣವೆಂಬುದು ಮೊದಲನೆಯ ಪಕ್ಷ. ಕೇವಲ ಪ್ರತಿಬಂಧಕಾಭಾವವು ದಾಹಕ್ಕೆ ಕಾರಣವೆಂಬುದು ಎರಡನೆಯ ಪಕ್ಷ. ಇದನ್ನು ಪ್ರಕೃತ ನಿರಾಕರಣೆ ಮಾಡುತ್ತಿದ್ದಾರೆ. ಕೇವಲ ಪ್ರತಿಬಂಧಕಾಭಾವವು ಕಾರಣವೆಂದು ಹೇಳಿದರೆ ಪ್ರತಿಬಂಧಕವಿರುವ ಸಂದರ್ಭದಲ್ಲಿ ಉತ್ತೇಜಕವಿಲ್ಲದಿದ್ದರೂ ದಾಹವು ಉಂಟಾಗಲಿ ಎಂಬ ಅತಿಪ್ರಸಂಗವು ತಾರ್ಕಿಕರಿಗೆ ಬರುತ್ತದೆ. ಏಕೆಂದರೆ ಕೇವಲಪ್ರತಿಬಂಧಕಾಭಾವವು ಇಲ್ಲಿಯೂ ಕೂಡ ಇರುತ್ತದೆ. ಕೇವಲಮಣಿಯೆಂದರೆ ಉತ್ತೇಜಕಾಭಾವವಿಶಿಷ್ಟವಾದದ್ದು ಎಂದರ್ಥ. ಆದ್ದರಿಂದ ಉತ್ತೇಜಕಾಭಾವವಿಶಿಷ್ಟವಾದ ಮಣಿಯೇ ಇರುವುದರಿಂದ

ತದಭಾವವೆಂಬ ಕಾರಣವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಅತಿಪ್ರಸಂಗವನ್ನು ಹೇಗೆ ಹೇಳುತ್ತೀರಿ ? ಎಂದು ತಾರ್ಕಿಕರು ಆಕ್ಷೇಪ ಮಾಡಬಹುದು. ಆದರೆ ಜಗತ್ತಿನಲ್ಲಿ ಕೇವಲ ವಸ್ತುವೇ ಇರುವುದಿಲ್ಲ. ಎಲ್ಲವೂ ಕೂಡ ಯಾವುದಾದರೂ ವಿಶೇಷಣದಿಂದ ವಿಶಿಷ್ಟ ಆಗಿಯೇ ಇರುತ್ತದೆ. ಪ್ರತಿಬಂಧಕವೂ ಕೂಡ ಕ್ಷಣಲವಾದಿವಿಶಿಷ್ಟವಾಗಿರುವುದರಿಂದ ಕೇವಲ ಆಗಿರುವುದಿಲ್ಲ.

ಯಾವುದೇ ವಿಶೇಷಣಗಳಿಂದ ವಿಶಿಷ್ಟವಾಗಿರಬಾರದು ಎಂದರ್ಥವಲ್ಲ. ಉತ್ತೇಜಕದಿಂದ ವಿಶಿಷ್ಟವಾಗಿರಬಾರದು ಎಂದಭಿಪ್ರಾಯ ಎಂದು ತಾರ್ಕಿಕರು ಸಮರ್ಥಿಸಬಹುದು.

ಇದು ತಪ್ಪು. ಏಕೆಂದರೆ ಉತ್ತೇಜಕಾಭಾವವಿಶಿಷ್ಟವಾದ ಮಣ್ಯಭಾವವು ದಾಹಕ್ಕೆ ಕಾರಣವೆಂದೇ ಹೇಳಿದಂತಾಯಿತು. ಆದ್ದರಿಂದ ಈ ಪಕ್ಷವು ಹಿಂದಿನ ಪಕ್ಷದಲ್ಲಿ ಅಂತರ್ಗತವಾದ್ದರಿಂದ ಹಿಂದೆ ಹೇಳಿದ ದೋಷಗಳು ಇಲ್ಲಿಯೂ ಕೂಡ ಪ್ರಾಪ್ತವಾಗುತ್ತವೆ.

## ಪ್ರತಿಬಂಧಕಾಭಾವವು ಸಂಸರ್ಗಾಭಾವಸ್ವರೂಪವೆಂಬುದರ ನಿರಾಕರಣೆ

**यदपि चोक्तम् – 'प्रतिबन्धकस्य संसर्गाभावो हेतुः । तेन प्रतिबन्धकवेलायां तदन्योन्याभावसत्त्वेऽपि न कार्यं इति ।। तन्न । मणिप्रागभावतत्ध्वंसयोः मण्यवयववृत्तित्वेन कराद्यवृत्तितयाऽकारणत्वेन तत्सङ्ग्रहाय मणिसंसर्गाभावः कारणमिति वचनस्य अयुक्तत्वात् ।**

ಪ್ರತಿಬಂಧಕಾಭಾವವು ಕಾರಣವೆಂದು ಹೇಳಿದರೆ ಪ್ರತಿಬಂಧಕದ ಸಂಸರ್ಗಾಭಾವವು ಕಾರಣವೆಂದರ್ಥ. ಆದ್ದರಿಂದ ಪ್ರತಿಬಂಧಕವಿರುವ ಸಂದರ್ಭದಲ್ಲಿ ಪ್ರತಿಬಂಧಕದ ಅನ್ಯೋನ್ಯಾಭಾವವಿದ್ದರೂ ಕೂಡ ಕಾರ್ಯವು ಉಂಟಾಗುವುದಿಲ್ಲ ಎಂದು ತಾರ್ಕಿಕರು ಹೇಳುತ್ತಾರೆ.

ಇದು ತಪ್ಪು. ಏಕೆಂದರೆ ಮಣಿಯ ಪ್ರಾಗಭಾವ ಹಾಗೂ ಮಣಿಯ ಧ್ವಂಸ ಇವೆರಡು ಸಂಸರ್ಗಾಭಾವರೂಪವೇ ಆಗಿವೆ. ಇವೆರಡು ಮಣಿಯ ಅವಯವದಲ್ಲಿ ವೃತ್ತಿಯಾಗಿವೆ. ಹೊರತು, ಕರತಲ ಹಾಗೂ ವಹ್ನಿಯಲ್ಲಿ ವೃತ್ತಿಯಾಗಿರುವುದಿಲ್ಲ. ಆದ್ದರಿಂದ ಮಣಿಯ ಪ್ರಾಗಭಾವ ಹಾಗೂ ಮಣಿಯ ಧ್ವಂಸಗಳು ಕಾರಣವೇ ಆಗಿರುವುದಿಲ್ಲ. ಇವುಗಳನ್ನು ಸಂಗ್ರಹ ಮಾಡುವುದಕ್ಕಾಗಿ ಮಣಿಸಂಸರ್ಗಾಭಾವವನ್ನು ಕಾರಣವೆಂದು ಹೇಳಿರುವುದು ಅಯುಕ್ತವಾಗುತ್ತದೆ.

## ಸಂಸರ್ಗಾಭಾವವು ಅತ್ಯಂತಾಭಾವಸ್ವರೂಪ ಎಂಬುದರ ನಿರಾಕರಣೆ

**ननु संसर्गाभावविशेषः कारणम् । न प्रागभावप्रध्वंसौ । न चात्यन्ताभावरूपस्य तस्य नित्यत्वात्, प्रतिबन्धकवेलायामपि कार्योत्पत्तिः । नित्योऽपि प्रतिबन्धकाभावः प्रतिबन्धकवेलायां न करादिना संसृज्यते । ततश्च संसर्गाभावात् न प्रतिबन्धकवेलायां कार्योदयः इत्यङ्गीकारात् इति चेत्। न । त्वन्मते अभावस्य धर्मिणा स्वरूपसम्बन्धा तिरिक्तसम्बन्धा(न्तरा)भावात्, स्वरूपसम्बन्धस्य च नित्यत्वेन कार्यस्य कादाचित्कत्वाभिधाना योगात् ।**

ತಾರ್ಕಿಕರು - ಸಂಸರ್ಗಾಭಾವವಿಶೇಷವು ದಾಹಕ್ಕೆ ಕಾರಣವಾಗಿದೆ. ಪ್ರಾಗಭಾವ-ಪ್ರಧ್ವಂಸಭಾವಗಳು ಸಂಸರ್ಗಾಭಾವಸ್ವರೂಪವಲ್ಲ. ಹೊರತು, ಅತ್ಯಂತಾಭಾವ-ಸ್ವರೂಪವೆಂದು ಹೇಳುತ್ತೇವೆ.

ಅತ್ಯಂತಾಭಾವವು ನಿತ್ಯವಾದ್ದರಿಂದ ಪ್ರತಿಬಂಧಕವಿರುವ ಸಂದರ್ಭದಲ್ಲಿಯೂ ಕಾರ್ಯೋತ್ಪತ್ತಿಯಾಗಲಿ ಎಂದು ಪ್ರಶ್ನಿಸಬಾರದು. ಏಕೆಂದರೆ ಪ್ರತಿಬಂಧಕಾಭಾವವು ನಿತ್ಯವಾದರೂ ಕೂಡ ಪ್ರತಿಬಂಧಕವಿರುವ ಸಂದರ್ಭದಲ್ಲಿ ಕರತಲ ಹಾಗೂ ಅನಲಗಳ

ಜೊತೆ ಸಂಸರ್ಗವು ಆಗಿರುವುದಿಲ್ಲ. ಆದ್ದರಿಂದ ಸಂಸರ್ಗಾಭಾವವು ಇರುವುದರಿಂದ ಪ್ರತಿಬಂಧಕವಿರುವ ಸಂದರ್ಭದಲ್ಲಿ ಕಾರ್ಯೋತ್ಪತ್ತಿಯು ಆಗುವುದಿಲ್ಲ.

ತತ್ವವಾದಿಗಳು - ಇದು ತಪ್ಪು. ನಿಮ್ಮ ಮತದಲ್ಲಿ ಅಭಾವವು ಧರ್ಮಿಯಿಂದ ಸ್ವರೂಪಸಂಬಂಧವಿಲ್ಲದೇ ಇರುತ್ತದೆ ಎಂದು ಅಂಗೀಕರಿಸಲಾಗಿದೆ. ಸ್ವರೂಪಸಂಬಂಧಕ್ಕಿಂತ ಅತಿರಿಕ್ತವಾದ ಸಂಬಂಧವನ್ನು ಧರ್ಮಿಯ ಜೊತೆ ಅಭಾವಕ್ಕೆ ಅಂಗೀಕರಿಸಿರುವುದಿಲ್ಲ. ಪ್ರ ಕೃತ ಅತ್ಯಂತಾಭಾವಸ್ವರೂಪವು ನಿತ್ಯವಾಗಿರುವುದರಿಂದ ತತ್‌ಸ್ವರೂಪಭೂತವಾದ ಸಂಬಂಧವೂ ಕೂಡ ನಿತ್ಯವೇ ಆಗಿದೆ. ಆಗ ಸಂಬಂಧಾಭಾವವನ್ನು ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಕಾರ್ಯಕ್ಕೆ ಕಾದಾಚಿತ್ಕವನ್ನು ಹೇಳಲು ಸಾಧ್ಯವಾಗುವುದಿಲ್ಲ.

## ಉಪಶ್ಲಿಷ್ಟಸ್ವಭಾವತ್ವದ ನಿರಾಕರಣೆ

**उपश्लिष्टस्वभावत्वाभावात् न कार्यं इति चेत् । न । सम्बन्धान्तरं विना विशिष्टप्रत्ययजननयोग्यत्वस्योपश्लिष्टत्वस्य कादाचित्कत्वायोगात् । निर्निमित्तस्य कादाचित्कत्वादर्शनात् । प्रतियोगिसम्बन्धः उपश्लिष्टस्वभावत्वहानिहेतुः । तदपगमश्च पुनरुत्पत्तिहेतुरिति चेत् । न । प्रतियोगिसम्बन्धदशायामपि प्राचीनप्रतियोगिसम्बन्धध्वंसेन उपश्लिष्ट-स्वाभावत्वोत्पादप्रसङ्गात् । कारणे सति कार्यावश्यंभावनियमात् ।**

ತಾರ್ಕಿಕರು - ಸ್ವರೂಪಸಂಬಂಧವು ನಿತ್ಯವಾಗಿದ್ದರೂ ಕೂಡ ಕಾರ್ಯವನ್ನು ಕಾದಾಚಿತ್ಕವೆಂದು ಹೇಳಬಹುದು. ಏಕೆಂದರೆ ಉಪಶ್ಲಿಷ್ಟಸ್ವಭಾವವತ್ವವು ಸ್ವರೂಪಸಂಬಂಧಕ್ಕೆ ಇಲ್ಲದಿರುವುದರಿಂದ ಕಾರ್ಯವು ಹುಟ್ಟುವುದಿಲ್ಲವೆಂದು ಹೇಳುತ್ತೇವೆ.

ತತ್ತ್ವವಾದಿಗಳು - ಇದು ತಪ್ಪು. ಬೇರೆ ಸಂಬಂಧವಿಲ್ಲದೇ ವಿಶಿಷ್ಟಪ್ರತ್ಯಯಜನನಯೋಗ್ಯತ್ವ-ವೆಂದು ಉಪಶ್ಲಿಷ್ಟಸ್ವಭಾವತ್ವವೆಂದು ಹೇಳುವುದರಿಂದ ಕಾದಾಚಿತ್ಕವನ್ನು ಹೇಳಲು ತಾರ್ಕಿಕರಿಗೆ ಸಾಧ್ಯವಿಲ್ಲ. ಏಕೆಂದರೆ ಯಾವುದೇ ನಿಮಿತ್ತಗಳಿಲ್ಲದೇ ಕಾದಾಚಿತ್ಕತ್ವವು ಎಲ್ಲಿಯೂ ಕಂಡಿಲ್ಲ.

ತಾರ್ಕಿಕರು - ಪ್ರತಿಯೋಗಿಸಂಬಂಧವು ಉಪಶ್ಲಿಷ್ಟಸ್ವಭಾವತ್ವದ ಹಾನಿಗೆ ಹೇತುವಾಗಿದೆ. ಪ್ರತಿಯೋಗಿಸಂಬಂಧದ ಅಪಗಮವು ಉಪಶ್ಲಿಷ್ಟಸ್ವಭಾವತ್ವದ ಉತ್ಪತ್ತಿಗೆ ಹೇತುವಾಗಿದೆ ಎಂದು ಹೇಳುತ್ತೇವೆ.

ತತ್ತ್ವವಾದಿಗಳು - ಇದೂ ಕೂಡ ತಪ್ಪು. ಹಾಗಾದರೆ ಪ್ರತಿಯೋಗಿಯಾದ ಚಂದ್ರಕಾಂತಮಣಿಯ ಸಂಬಂಧವಿರುವ ಕಾಲದಲ್ಲಿಯೂ, ಹಿಂದಿನ ಚಂದ್ರಕಾಂತಮಣಿಯೆಂಬ ಸಂಬಂಧದ ಧ್ವಂಸಪ್ರಯುಕ್ತವಾಗಿ ಉಪಶ್ಲಿಷ್ಟಸ್ವಭಾವತ್ವವು ಉತ್ಪತ್ತಿಯಾಗಲಿ ಎಂಬ ಅತಿಪ್ರಸಂಗ ಬಂದೇ ಬರುತ್ತದೆ. ಕಾರಣವಿದ್ದಾಗ ಕಾರ್ಯದ ಹುಟ್ಟುವಿಕೆಯನ್ನು ಅವಶ್ಯವಾಗಿ ಒಪ್ಪಲೇ ಬೇಕೆಂಬ ನಿಯಮವಿದೆ.

ವಿವರಣೆ - ಯಾವುದೇ ಒಂದು ಪದಾರ್ಥವು ಕಾದಾಚಿತ್ಕ ಎಂದು ಹೇಳಲು ನಿಮಿತ್ತವಿರಬೇಕು. ನಿಮಿತ್ತವೇ ಇಲ್ಲದಿದ್ದರೆ ಕಾದಾಚಿತ್ಕ ಆಗಲು ಸಾಧ್ಯವಿಲ್ಲ. ಪ್ರಕೃತ ಸ್ವರೂಪಸಂಬಂಧವು ಕಾದಾಚಿತ್ಕ ಎಂದು ಹೇಳಬೇಕಾದರೆ ನಿಮಿತ್ತವಿರಬೇಕು. ಸ್ವರೂಪಸಂಬಂಧದಲ್ಲಿ ಉಪಶ್ಲಿಷ್ಟಸ್ವಭಾವತ್ವವು ಕೆಲವೊಮ್ಮೆ ಇರುತ್ತದೆ, ಕೆಲವೊಮ್ಮೆ ಇರುವುದಿಲ್ಲ ಎಂದು ತಾರ್ಕಿಕರು ಹೇಳುತ್ತಾರೆ. ಪ್ರತಿಬಂಧಕವಿದ್ದರೆ ಉಪಶ್ಲಿಷ್ಟಸ್ವಭಾವತ್ವವು ಇರುವುದಿಲ್ಲ. ಪ್ರತಿಬಂಧಕವಿಲ್ಲದಿದ್ದರೆ ಉಪಶಿಷ್ಟಸ್ವಭಾವತ್ವವು ಇರುತ್ತದೆ ಎಂದು ಹೇಳುತ್ತಾರೆ. ಆದರೆ ಬೇರೆ ಸಂಬಂಧವಿಲ್ಲದಿದ್ದಾಗ ವಿಶಿಷ್ಟಪ್ರತ್ಯಯಜನನಯೋಗ್ಯತ್ವವೇ ಉಪಶ್ಲಿಷ್ಟಸ್ವಭಾವವತ್ವವೆಂದು ಹೇಳುತ್ತೀರಿ. ಬೇರೆ ಸಂಬಂಧವಿಲ್ಲ ಎನ್ನುವುದರಿಂದಲೇ ಯಾವುದೇ ನಿಮಿತ್ತವಿಲ್ಲವೆಂದು

ಹೇಳಿದಂತಾಯಿತು. ಆದ್ದರಿಂದ ಸ್ವರೂಪಸಂಬಂಧವು ನಿರ್ನಿಮಿತ್ತ ಎಂದು ಒಪ್ಪಿದಂತಾಯಿತು. ನಿರ್ನಿಮಿತ್ತವಾಗಿ ಕಾದಾಚಿತ್ಕತ್ವವನ್ನು ಸ್ವರೂಪಸಂಬಂಧದಲ್ಲಿ ಹೇಳಲು ಸಾಧ್ಯವೇ ಆಗುವುದಿಲ್ಲ.

ಉಪಶ್ಲಿಷ್ಟಸ್ವಭಾವತ್ವವು ಚಂದ್ರಕಾಂತಮಣಿಯೆಂಬ ಪ್ರತಿಯೋಗಿಯ ಸಂಬಂಧವಾದಾಗ ಇರುತ್ತದೆ. ಪ್ರತಿಯೋಗಿಸಂಬಂಧವು ಹೋದರೆ ಉಪಶ್ಲಿಷ್ಟಸ್ವಭಾವತ್ವವು ಪುನಃ ಉತ್ಪನ್ನವಾಗುತ್ತದೆ ಎಂದು ತಾರ್ಕಿಕರು ಸಮರ್ಥಿಸುತ್ತಾರೆ. ಇದೂ ಕೂಡ ತಪ್ಪು.

ಪ್ರತಿಯೋಗಿಯಾದ ಮಣಿಯ ಸಂಬಂಧವಾದಾಗಲೂ ಕೂಡ ಉಪಶ್ಲಿಷ್ಟಸ್ವಭಾವತ್ವವು ಹಾನಿಯಾಗಬಾರದು. ಏಕೆಂದರೆ ಹಿಂದಿನ ಮಣಿಯೆಂಬ ಪ್ರತಿಯೋಗಿಯ ಸಂಬಂಧದ ಧ್ವಂಸವು ಈಗ ಇರುತ್ತದೆ. ತತ್ಪ್ರಯುಕ್ತವಾಗಿ ಉಪಶ್ಲಿಷ್ಟಸ್ವಭಾವತ್ವವನ್ನು ಹೇಳಲೇ ಬೇಕು. ನಿತ್ಯವಾದ್ದರಿಂದ ಪ್ರತಿಯೋಗಿಯ ಅತ್ಯಂತಾಭಾವವು ಇದೆ. ಈ ನಿತ್ಯವಾದ ಅತ್ಯಂತಾಭಾವದ ಜೊತೆ ಅಗ್ನ್ಯಾದಿಗಳ ಸಂಬಂಧವೂ ಕೂಡ ನಿತ್ಯವಾಗಿದೆ. ಇಂಥ ಸಂದರ್ಭದಲ್ಲಿ ಪ್ರಾಚೀನಪ್ರತಿಯೋಗಿಸಂಬಂಧದ ಧ್ವಂಸಪ್ರಯುಕ್ತವಾಗಿ ದಾಹೋತ್ಪತ್ತಿಯಾಗಲಿ ಎಂಬ ಅತಿಪ್ರಸಂಗವನ್ನು ತಾರ್ಕಿಕರಿಗೆ ಪರಿಹರಿಸಿಕೊಳ್ಳಲು ಸಾಧ್ಯವಿಲ್ಲ.

**ननु मणिप्रतियोगिकवर्तमानसम्बन्धात् न प्राचीनसंसर्गध्वंसस्य कार्यहेतुत्वमिति चेत् । अत्र वक्तव्यम् – वर्तमानसम्बन्धः किं कारणी भूताभावप्रतियोगित्वात् प्रतिबन्धकः ? उत कारणशक्तिविघटकत्वात् । नाद्यः । कारणत्वेनाभिमतं प्राचीनसंसर्गप्रध्वंसं प्रति वर्तमानसम्बन्धस्या प्रतियोगित्वात्। न द्वितीयः । त्वया शक्त्यनङ्गीकारात्। अङ्गीकारे च सिद्धं नः समीहितम् ।**

ತಾರ್ಕಿಕರು - ಮಣಿಪ್ರತಿಯೋಗಿಕವಾದ ವರ್ತಮಾನಸಂಬಂಧವು ಅಗ್ನಿಯಲ್ಲಿ

ಇರುವುದರಿಂದ ಹಿಂದಿನ ಮಣಿಪ್ರತಿಯೋಗಿಕವಾದ ಸಂಸರ್ಗದ ಧ್ವಂಸವು ಕಾರ್ಯಹೇತು ಆಗುವುದಿಲ್ಲ.

ತತ್ವವಾದಿಗಳು - ಇದು ತಪ್ಪು. ನಿಮ್ಮನ್ನು ಕುರಿತು ನಾವು ಪ್ರಶ್ನಿಸುತ್ತೇವೆ. ವರ್ತಮಾನಸಂಬಂಧವು ಕಾರಣೀಭೂತವಾದ ಅಭಾವಕ್ಕೆ ಪ್ರತಿಯೋಗಿಯಾಗಿರುವುದರಿಂದ ಪ್ರತಿಬಂಧಕವೋ? ಅಥವಾ ಕಾರಣಶಕ್ತಿಗೆ ವಿಘಟಕವಾಗಿರುವುದರಿಂದ ಪ್ರತಿಬಂಧಕವೋ? ಎಂದು. ಮೊದಲನೆಯ ಪಕ್ಷವು ಅಯುಕ್ತವಾಗಿದೆ.

ತಾರ್ಕಿಕರು - ಮಣಿಪ್ರತಿಯೋಗಿಕವರ್ತಮಾನಸಂಬಂಧವಿರುವುದರಿಂದ ಪ್ರಾಚೀನ-ಮಣಿಪ್ರತೀಯೋಗಿಕವಾದ ಸಂಸರ್ಗಧ್ವಂಸವು ಕಾರ್ಯಕ್ಕೆ ಹೇತುವಾಗುವುದಿಲ್ಲ.

ತತ್ವವಾದಿಗಳು - ನಿಮ್ಮನ್ನು ಕುರಿತು ನಾವು ಪ್ರಶ್ನಿಸುತ್ತೇವೆ. ವರ್ತಮಾನಸಂಬಂಧವು ಕಾರಣೀಭೂತಾಭಾವಪ್ರತಿಯೋಗಿಯಾಗಿರುವುದರಿಂದ ಪ್ರತಿಬಂಧಕವಾಗುತ್ತದೋ, ಅಥವಾ ಕಾರಣಶಕ್ತಿಗೆ ವಿಘಟಕವಾದ್ದರಿಂದ ಪ್ರತಿಬಂಧಕವಾಗುತ್ತದೋ, ಮೊದಲನೆಯ ಪಕ್ಷ ತಪ್ಪು. ಏಕೆಂದರೆ ಕಾರಣತ್ವೇನ ಅಭಿಮತವಾದ ಪ್ರಾಚೀನಸಂಸರ್ಗಧ್ವಂಸವನ್ನು ಕುರಿತು ವರ್ತಮಾನಮಣಿಪ್ರತಿಯೋಗಿಕವಾದ ಸಂಬಂಧವು ಪ್ರತಿಯೋಗಿಯಾಗಲು ಸಾಧ್ಯವೇ ಇಲ್ಲ. ಎರಡನೆಯ ಪಕ್ಷವು ತಪ್ಪು. ನೀವು ಶಕ್ತಿಯನ್ನೇ ಅಂಗೀಕರಿಸಿಲ್ಲ. ಆದ್ದರಿಂದ ನಮಗೆ ಇಷ್ಟವಾದದ್ದು ಸಿದ್ಧವಾಯಿತು.

ವಿವರಣೆ - ಅಗ್ನಿ, ಕರತಲ, ಪ್ರತಿಬಂಧಕವಾದ ಮಣಿ ಹಾಗೂ ಮಣ್ಯಭಾವ ಇವುಗಳೆಲ್ಲವು ಒಟ್ಟಿಗೇ ಇವೆ. ಇವುಗಳಲ್ಲಿರುವ ಮಣಿಯ ಅತ್ಯಂತಾಭಾವಕ್ಕೂ, ವಹ್ನಿಗೂ, ಉಪಶ್ಲಿಷ್ಟ-ಸ್ವಭಾವವತ್ವವು ಇರುವುದಿಲ್ಲ. ಉಪಶ್ಲಿಷ್ಟಸ್ವಭಾವತ್ವವು ಹುಟ್ಟುವುದಕ್ಕೆ ಪ್ರಾಚೀನ-ಸಂಬಂಧಧ್ವಂಸವು ಕಾರಣವಾಗುತ್ತದೆ. ಆದರೆ ಪ್ರಾಚೀನಮಣಿಪ್ರತಿಯೋಗಿಕಧ್ವಂಸ-ವಿದ್ದರೂ ಉಪಶ್ಲಿಷ್ಟಸ್ವಭಾವತ್ವವು ಹುಟ್ಟುತ್ತಿಲ್ಲ. ಇದಕ್ಕೆ ಕಾರಣ ವರ್ತಮಾನಮಣಿಯ

ಸಂಬಂಧವೆಂದು ಹೇಳುತ್ತಿದ್ದೀರಿ. ಆಗ ವರ್ತಮಾನಮಣಿಯ ಸಂಬಂಧವು ಉಪಶ್ಲಿಷ್ಟಸ್ವಭಾವತ್ವಕ್ಕೆ ಪ್ರತಿಬಂಧಕವೆಂದು ಹೇಳಿದಂತಾಯಿತು. ಆದ್ದರಿಂದ ಪ್ರಾಚೀನ ಪ್ರತಿಯೋಗಿಕಸಂಬಂಧಧ್ವಂಸವು ಉಪಶ್ಲಿಷ್ಟಸ್ವಭಾವತ್ವಕ್ಕೆ ಕಾರಣವಾಗಿದೆ. ವರ್ತಮಾನ ಮಣಿಯ ಸಂಬಂಧವು ಪ್ರತಿಬಂಧಕವಾಗಿದೆ. ಇದು ಪ್ರತಿಬಂಧಕವಾಗಬೇಕಾದರೆ ಕಾರಣೀಭೂತಾಭಾವಪ್ರತಿಯೋಗಿತ್ವವೆಂಬ ಲಕ್ಷಣವು ಇದರಲ್ಲಿ ಬರಬೇಕು. ಅಥವಾ ನಮ್ಮ ಪ್ರಕಾರ ಕಾರಣಶಕ್ತಿವಿಘಟಕತ್ವವನ್ನು ಹೇಳಬೇಕು. ನೀವು ಶಕ್ತಿಯನ್ನು ಒಪ್ಪದ ಕಾರಣ ಕಾರಣಶಕ್ತಿವಿಘಟಕತ್ವರೂಪವಾದ ಪ್ರತಿಬಂಧಕತ್ವವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಕಾರಣೀಭೂತಾಭಾವಪ್ರತಿಯೋಗಿತ್ವೇನ ಪ್ರತಿಬಂಧಕತ್ವವನ್ನು ಹೇಳಬೇಕು. ಆಗ ಕಾರಣೀಭೂತವಾದ ಅಭಾವವೆಂದರೆ ಪ್ರಾಚೀನಮಣಿಸಂಸರ್ಗದ ಅಭಾವವೇ ಆಗಿದೆ. ಪ್ರಾಚೀನಮಣಿಪ್ರತಿಯೋಗಿಕಸಂಬಂಧಾಭಾವಕ್ಕೆ ಪ್ರತಿಯೋಗಿಯಾದದ್ದು, ಪ್ರಾಚೀನಮಣಿಯೇ ಆಗುತ್ತದೆ ಹೊರತು, ವರ್ತಮಾನ ಮಣಿಯು ಪ್ರತಿಯೋಗಿಯಾಗುವುದಿಲ್ಲ. ಆದ್ದರಿಂದ ಉಪಶ್ಲಿಷ್ಟಸ್ವಭಾವವತ್ವವೆಂಬ ಕಾರ್ಯೋತ್ಪತ್ತಿಗೆ ಪ್ರಾಚೀನಮಣಿಪ್ರತಿಯೋಗಿಕ ಸಂಬಂಧಧ್ವಂಸ, ವರ್ತಮಾನಮಣಿಪ್ರತಿಯೋಗಿಕಸಂಬಂಧವು ಪ್ರತಿಬಂಧಕವೆಂದು ಹೇಳಬೇಕಾದರೆ ವರ್ತಮಾನಮಣಿಯು ಪ್ರತಿಯೋಗಿಯಾಗಲು ಸಾಧ್ಯವಿಲ್ಲ.

## ಮಂತ್ರವಿಲ್ಲದಿದ್ದರೂ ದಾಹವಾಗುತ್ತಿಲ್ಲ

**किञ्च प्रतिबन्धकीभूतमन्त्रविनाशेऽपि दाहादर्शनात् न प्रतिबन्धकाभावः कारणम् । मन्त्रस्य त्वन्मते आशुविनाशित्वात् ।**

ಮತ್ತು ಪ್ರತಿಬಂಧಕಾಭಾವವನ್ನು ಕಾರಣವೆಂದು ಹೇಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ಪ್ರತಿಬಂಧಕವಾದ ಮಂತ್ರವು ನಾಶವಾದರೂ ಕೂಡ ದಾಹವಾಗುವುದು ಕಾಣಿಸುತ್ತಿಲ್ಲ. ಏಕೆಂದರೆ ನಿಮ್ಮ ಮತದಲ್ಲಿ ಮಂತ್ರವು ಆಶುವಿನಾಶಿ ಎಂದು

ಅಂಗೀಕರಿಸಲಾಗಿದೆ. ಮಂತ್ರವೆಂಬ ಪ್ರತಿಬಂಧಕವಿಲ್ಲದಿದ್ದರೂ ದಾಹವು ಉಂಟಾಗುತ್ತಿಲ್ಲ.

## ಮಂತ್ರವು ಪ್ರತಿಬಂಧಕವೆಂಬುದನ್ನು ತಾರ್ಕಿಕರು ಕೈಬಿಟ್ಟರು

**यदत्रोक्तं – 'न मन्त्रः प्रतिबन्धकः । किन्तु उद्देश्यज्ञानाहितसंस्कार विशिष्टः प्रहरादिरूपः कालः प्रतिबन्धकः इति, प्रतिबन्धकसद्भावात् न प्रहराभ्यन्तरे दाहः' इति । तदपि न । 'मन्त्रः प्रतिबन्धकः इति प्रामाणिक व्यवहारविरोधात् । संस्कारविशिष्टकालस्य सर्वगतत्वेन सर्वत्रादाहप्रसङ्गाच्च। न च 'एनं मा दह' इति अग्निविशेषस्य प्रहरपर्यन्तं अदाहकतया पुरुषविशेषस्य अदाह्यतया च सङ्कल्पात् न पुरुषान्तरस्य वह्न्यन्तरेणादाहः इति वाच्यम् । दाहाभावस्य सङ्कल्पाधीनत्वेन सङ्कल्पस्यैव प्रतिबन्धकतौचित्येन 'कालः प्रतिबन्धकः' इति वचसो रिक्तत्वापातात् । न चाशुविनाशित्वात् मन्त्रस्येव सङ्कल्पस्यापि प्रतिबन्धकत्वासम्भवः । 'द्वादशाब्दं वनवासं करिष्यामः' इति पाण्डवसङ्कल्पस्य वनवासहेतुत्ववदुपपत्तेः ।**

ತಾರ್ಕಿಕರು - ಮಂತ್ರವು ಪ್ರತಿಬಂಧಕವಲ್ಲ. ಉದ್ದೇಶ್ಯಜ್ಞಾನದಿಂದ ಆಹಿತವಾದ ಸಂಸ್ಕಾರವಿಶಿಷ್ಟವಾದ ಪ್ರಹರಾದಿರೂಪವಾದ ಕಾಲವು ಪ್ರತಿಬಂಧಕವಾಗಿದೆ. ಈ ಪ್ರತಿಬಂಧಕವಿರುವುದರಿಂದ ಒಂದು ಪ್ರಹರದ ತನಕ ದಾಹವು ಉಂಟಾಗುವುದಿಲ್ಲ.

ತತ್ವವಾದಿಗಳು - ಇದೂ ಕೂಡ ತಪ್ಪು. ಏಕೆಂದರೆ ಮಂತ್ರವು ಪ್ರತಿಬಂಧಕವಾಗಿದೆ ಎಂಬುದು ಪ್ರಾಮಾಣಿಕವಾದ ಲೋಕವ್ಯವಹಾರವಾಗಿದೆ. ಇದಕ್ಕೆ ನಿಮ್ಮ ಮತವು ವಿರುದ್ಧವಾಯಿತು. ಮತ್ತು ಸಂಸ್ಕಾರವಿಶಿಷ್ಟವಾದ ಕಾಲವು ಸರ್ವಗತವಾಗಿರುವುದರಿಂದ ಪ್ರತಿಬಂಧಕವು ಎಲ್ಲೆಡೆಯೂ ಇದೆ ಎಂದಾಯಿತು. ಆದ್ದರಿಂದ ಎಲ್ಲೂ ಕೂಡ ದಾಹವೇ

ಹುಟ್ಟದೇ ಇರಬೇಕಾದೀತು.

ತಾರ್ಕಿಕರು - "ಇವನನ್ನು ಸುಡಬೇಡ" ಎಂಬ ಅಗ್ನಿವಿಶೇಷಕ್ಕೆ ಒಂದು ಪ್ರಹರದ ತನಕ ಅದಾಹಕತ್ವವನ್ನು ಪುರುಷವಿಶೇಷನಿಗೆ ಅದಾಹ್ಯತ್ವವನ್ನು ಮಂತ್ರಪ್ರಯೋಕ್ತೃವು ಸಂಕಲ್ಪ ಮಾಡಿರುತ್ತಾನೆ. ಆದ್ದರಿಂದ ಮತ್ತೊಬ್ಬ ಪುರುಷನಿಗೆ ಹಾಗೂ ಮತ್ತೊಂದು ವಹ್ನಿಗೆ ಅದಾಹ್ಯತ್ವವನ್ನು ಹಾಗೂ ಅದಾಹಕತ್ವವನ್ನು ಆಕ್ಷೇಪ ಮಾಡಬಾರದು.

ತತ್ವವಾದಿಗಳು - ಇದೂ ಕೂಡ ತಪ್ಪು. ದಾಹಾಭಾವವು ಸಂಕಲ್ಪಾಧೀನವಾಯಿತು. ಹಾಗಾದರೆ ಸಂಕಲ್ಪವೇ ಪ್ರತಿಬಂಧಕವೆಂದು ನೀವು ಹೇಳಿದಂತಾಯಿತು. ಆಗ ಕಾಲವು ಪ್ರತಿಬಂಧಕ ಎಂಬ ಮಾತನ್ನು ನೀವೇ ಬಿಟ್ಟಿರುವಿರಿ.

ತಾರ್ಕಿಕರು - ಮಂತ್ರವು ಹೇಗೆ ಆಶುತರವಿನಾಶಿಯಾಗಿದೆಯೋ, ಅದರಂತೆ ಸಂಕಲ್ಪವೂ ಕೂಡ ಆಶುತರವಿನಾಶಿಯಾಗಿದೆ. ಆದ್ದರಿಂದ ಮಂತ್ರದತೆ ಸಂಕಲ್ಪವೂ ಕೂಡ ಪ್ರತಿಬಂಧಕವಾಗುವುದಿಲ್ಲ.

ತತ್ವವಾದಿಗಳು - ಸಂಕಲ್ಪವು ಕ್ಷಣಿಕವಾದರೂ ಕೂಡ ದಾಹಕ್ಕೆ ಪ್ರತಿಬಂಧಕವಾಗಬಹುದು. 'ದ್ವಾದಶಾಬ್ದಂ ವನವಾಸಂ ಕರಿಷ್ಯಾಮಃ' ಹನ್ನೆರಡು ವರ್ಷಗಳ ಕಾಲ ವನವಾಸವನ್ನು ಮಾಡುತ್ತೇವೆ ಎಂಬುದಾಗಿ ಪಾಂಡವರು ಸಂಕಲ್ಪ ಮಾಡಿದರು. ಈ ಸಂಕಲ್ಪವು ಕ್ಷಣಿಕವಾದರೂ ಕೂಡ ದೀರ್ಘವಾದ ವನವಾಸಕ್ಕೆ ಹೇಗೆ ಕಾರಣವಾಯಿತೋ, ಅದರಂತೆ ದೀರ್ಘಕಾಲದ ದಾಹಕ್ಕೆ ಸಂಕಲ್ಪವು ಪ್ರತಿಬಂಧಕವಾಗಲು ಯಾವುದೇ ಅಡ್ಡಿಯಿಲ್ಲ.

ವಿವರಣೆ - ಮಂತ್ರವನ್ನು ಪ್ರತಿಬಂಧಕವೆನ್ನುವುದಿಲ್ಲ. ಉದ್ದೇಶಜ್ಞಾನಾಹಿತವಾದ ಸಂಸ್ಕಾರವಿಶಿಷ್ಟವಾದ ಕಾಲವನ್ನು ಪ್ರತಿಬಂಧಕವೆನ್ನುತ್ತೇವೆ. ಮಂತ್ರೋಚ್ಚಾರಣೆಯು ಆಶುತರವಿನಾಶಿಯಾಗಿದೆ. ಆದ್ದರಿಂದ ಮಂತ್ರವನ್ನು ಉಚ್ಚಾರಣೆ ಮಾಡುವವನು ಒಂದು ಮುಹೂರ್ತದ ಕಾಲ ಇವನನ್ನು ಸುಡಬಾರದು ಎಂದು ಉದ್ದೇಶ್ಯವನ್ನು ಹೊಂದಿರುತ್ತಾನೆ. ಇಲ್ಲಿ ಮಂತ್ರವು ಕ್ಷಣಿಕವಾಗಿದೆ. ಅವನ ಉದ್ದೇಶಜ್ಞಾನವೂ ಕೂಡ

ಕ್ಷಣಿಕವಾಗಿದೆ. ಆದರೆ ಉದ್ದೇಶಜ್ಞಾನದಿಂದ ಆಹಿತವಾದ ಸಂಸ್ಕಾರವು ನಿತ್ಯವಾಗಿದೆ. ಇಂಥ ಸಂಸ್ಕಾರದಿಂದ ವಿಶಿಷ್ಟವಾದ ಪ್ರಹರಾದಿ ರೂಪವಾದ ಕಾಲವು ಪ್ರತಿಬಂಧಕವಾಗಿದೆ. ಇಲ್ಲಿ ಪ್ರಹರಾದಿಕಾಲವನ್ನಷ್ಟೇ ಪ್ರತಿಬಂಧಕವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಇದು ಯಾವಾಗಲೂ ಇರುತ್ತದೆ. ಆದಕ್ಕಾಗಿ ಉದ್ದೇಶಜ್ಞಾನಾಹಿತಸಂಸ್ಕಾರವಿಶಿಷ್ಟವಾಗಿರಬೇಕು ಎಂದು ಹೇಳಬೇಕು. ಕಾಲವು ಸರ್ವಾಧಾರವಾಗಿರುವುದರಿಂದ ಎಲ್ಲದರಿಂದಲೂ ಕೂಡ ವಿಶಿಷ್ಟವಾಗಿರುತ್ತದೆ. ಇಂಥ ಪ್ರತಿಬಂಧಕವಿದ್ದಾಗ ಒಂದು ಪ್ರಹರದ ತನಕ ದಾಹವು ಉಂಟಾಗುವುದಿಲ್ಲ. ಏಕೆಂದರೆ ಉದ್ದೇಶಜ್ಞಾನಾಹಿತಸಂಸ್ಕಾರವಿಶಿಷ್ಟವಾದ ಪ್ರಹರಾದಿರೂಪ ಕಾಲವೆಂಬ ಪ್ರತಿಬಂಧಕವು ಆಗ ಇರುತ್ತದೆ. ಇತ್ಯಾದಿ ದೋಷಗಳು ಪ್ರಾಪ್ತವಾಗುತ್ತದೆ.

## ಸಂಕಲ್ಪವಿಷಯವಾದ ಕಾಲವು ಪ್ರತಿಬಂಧಕವೆಂಬ ರುಚಿದತ್ತನ ನಿರಾಕರಣೆ

**रुचिदत्तस्तु – 'सङ्कल्पविषयः काल एव प्रतिबन्धकः । सङ्कलपस्य च न विशेषणत्वम् । किन्तु स्वविषयीभूतकालोपलक्षणत्वं' इत्याह । तन्न । मन्त्रप्रयोगे दाहाभावः तदप्रयोगे च दाहः इत्यन्वयव्यतिरेकाभ्यां मन्त्रस्यैव प्रतिबन्धकत्वावगमात् । न च विनष्टस्य मन्त्रस्य प्रतिबन्धकत्वासम्भवः। प्रयुज्यमानो मन्त्रः प्रयोक्तृपुरुषसङ्कल्पानुसारेण विवक्षितकालपर्यन्तरं कारणशक्तिं कुण्ठयतीति सिद्धान्तात् । तद्यथा दृढाङ्गो युवा बलीयसा दण्डेनाभिहतो मुहूर्तपर्यन्तं मूर्च्छावस्थां गतः शेते । अनन्तरं उत्थाय कर्म करोति । न च दण्डाघातः मुहूर्तावस्थायी न वा मुहूर्तमूर्च्छां प्रत्यकारणम्। येनाशुविनाशिमन्त्रः प्रतिबन्धको न स्यात् ।।**

**।। इति मण्युक्तसहजशक्तिनिरासभङ्गः ।।**

ರುಚಿದತ್ತನ ಅಭಿಪ್ರಾಯ ಹೀಗಿದೆ - ಸಂಕಲ್ಪವಿಷಯವಾದ ಕಾಲವೇ ಪ್ರತಿಬಂಧಕವಾಗಿದೆ. ಸಂಕಲ್ಪವು ವಿಶೇಷಣವಲ್ಲ ಹೊರತು ಸ್ವವಿಷಯೀಭೂತವಾದ ಕಾಲಕ್ಕೆ ಉಪಲಕ್ಷಣವಾಗಿದೆ ಎಂದು.

ಇದು ತಪ್ಪು. ಮಂತ್ರವನ್ನು ಪ್ರಯೋಗ ಮಾಡಿದರೆ ದಾಹವು ಉಂಟಾಗುವುದಿಲ್ಲ. ಮಂತ್ರವನ್ನು ಪ್ರಯೋಗ ಮಾಡದಿದ್ದರೆ ದಾಹವು ಉಂಟಾಗುತ್ತದೆ ಎಂಬ ಅನ್ವಯವ್ಯತಿರೇಕಗಳಿಂದ ದಾಹಕ್ಕೆ ಮಂತ್ರವೇ ಪ್ರತಿಬಂಧಕವೆಂದು ತಿಳಿಯುತ್ತದೆ. ಹೊರತು, ಕಾಲ, ಸಂಕಲ್ಪ ಇವುಗಳು ಪ್ರತಿಬಂಧಕವೆಂದು ತಿಳಿಯುವುದಿಲ್ಲ.

ತಾರ್ಕಿಕರು - ಕ್ಷಣಿಕವಾದ ಮಂತ್ರವು ವಿನಷ್ಟವಾದ್ದರಿಂದ ಹೇಗೆ ತಾನೇ ಅದು ಪ್ರತಿಬಂಧಕವಾಗುತ್ತದೆ ?

ಸಿದ್ಧಾಂತಿಗಳು - ಪ್ರಯೋಗಿಸಲ್ಪಟ್ಟ ಮಂತ್ರವು ಪ್ರಯೋಕ್ತೃವಾದ ಪುರುಷನ ಸಂಕಲ್ಪಕ್ಕೆ ಅನುಸಾರಿಯಾಗಿ ವಿವಕ್ಷಿತವಾದ ಕಾಲದ ತನಕ ಕಾರಣದಲ್ಲಿರುವ ಶಕ್ತಿಯನ್ನು ವಿಘಟನ ಮಾಡುತ್ತದೆ ಎಂಬುದೇ ನಮ್ಮ ಸಿದ್ಧಾಂತವಾಗಿದೆ. ಉದಾಹರಣೆ - ದಷ್ಟಪುಷ್ಟವಾದ ಅಂಗವುಳ್ಳ ಯುವಕನನ್ನು ಬಲಿಷ್ಠವಾದ ದಂಡದಿಂದ ಒಂದು ಮುಹೂರ್ತದ ತನಕ ಮೂರ್ಛಾವಸ್ಥೆಯನ್ನು ಹೊಂದುತ್ತಾನೆ. ಅನಂತರ ಎದ್ದು ತನ್ನ ಕೆಲಸದಲ್ಲಿ ನಿರತನಾಗುತ್ತಾನೆ. ಇಲ್ಲಿ ದಂಡದ ಆಘಾತವು ಮುಹೂರ್ತದ ತನಕ ಇರುವುದಿಲ್ಲವಷ್ಟೇ, ಅಂದ ಮಾತ್ರಕ್ಕೆ ಮುಹೂರ್ತ ಪರ್ಯಂತ ಮೂರ್ಛಾವಸ್ಥೆಗೆ ಕ್ಷಣಿಕವಾದ ದಂಡಾಘಾತವು ಕಾರಣವಲ್ಲ ಎಂದು ಹೇಳಲು ಸಾಧ್ಯವಿಲ್ಲವಷ್ಟೇ. ಹಾಗಾಗಿದ್ದಲ್ಲಿ ಆಶುವಿನಾಶಿಯಾದ ದೀರ್ಘಕಾಲದ ದಾಹಕ್ಕೆ ಪ್ರತಿಬಂಧಕವಲ್ಲವೆಂದು ಒಪ್ಪಬಹುದಿತ್ತು. ಆದ್ದರಿಂದ ಕ್ಷಣಿಕವಾದ ಮಂತ್ರವುದಾಹಕ್ಕೆ ಪ್ರತಿಬಂಧಕವೆಂದು ಹೇಳಲು ಯಾವುದೇ ಆತಂಕವಿಲ್ಲ.

**ವಿವರಣೆ** - ಸಂಕಲ್ಪವಿಶಿಷ್ಟವಾದ ಕಾಲವೇ ಪ್ರತಿಬಂಧಕವಾಗಿದೆ. ಸಂಕಲ್ಪವು ಕ್ಷಣಿಕವಾದ್ದರಿಂದ ವಿಶೇಷಣವು ನಾಶವಾದರೆ ವಿಶಿಷ್ಟವೂ ಕೂಡ ನಾಶವಾಗಬೇಕಲ್ಲವೇ ? ಎಂದು ಪ್ರಶ್ನಿಸಬಾರದು. ಸಂಕಲ್ಪವನ್ನು ವಿಶೇಷಣವೆಂದು ಹೇಳುವುದಿಲ್ಲ. ಉಪಲಕ್ಷಣವೆಂದು ಹೇಳುತ್ತೇವೆ. ಸ್ವವಿಷಯಭೂತವಾದ ಕಾಲಕ್ಕೆ ಉಪಲಕ್ಷಣವಾಗಿದೆ ಹೊರತು, ವಿಶೇಷಣವಲ್ಲ. ವಿಶೇಷಣನಾಶವಾದರೆ, ವಿಶಿಷ್ಟನಾಶವನ್ನು ಹೇಳಬಹುದೇ ಹೊರತು, ಉಪಲಕ್ಷಣನಾಶದಿಂದ ವಿಶಿಷ್ಟನಾಶವನ್ನು ಹೇಳಲು ಸಾಧ್ಯವಿಲ್ಲ ಎಂಬುದು ರುಚಿದತ್ತನ ಅಭಿಪ್ರಾಯ.

ಇಲ್ಲಿಗೆ ತತ್ವಚಿಂತಾಮಣಿಯಲ್ಲಿ ಮಾಡಿದ ಸಹಜಶಕ್ತಿಯ ನಿರಾಕರಣೆಯ
ಭಂಗಪ್ರಕರಣವು ಸಮಾಪ್ತವಾಯಿತು.

ಇಲ್ಲಿಗೆ ತರ್ಕತಾಂಡವ ವಿಶ್ವರೂಪ ಎಂಬ ಕೃತಿಯ ಎಂಟನೆಯ ಭಾಗವು
ಸಮಾಪ್ತವಾಯಿತು

ಅಸ್ಮದ್ಗುರ್ವಂತರ್ಗತ ಹನುಮ-ಭೀಮ-ಮಧ್ವಾಂತರ್ಗತ-ರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಾಭಿನ್ನ-ಸೀತಾಪತೇಶ್ರೀರಾಮಚಂದ್ರಾಯನಮಃ

॥ ಶ್ರೀಕೃಷ್ಣಾರ್ಪಣಮಸ್ತು ॥

# ವಿಷಯಾನುಕ್ರಮಣಿಕೆ (ವಿಸ್ತೃತ)
# ತರ್ಕತಾಂಡವವಿಶ್ವರೂಪ
## ದ್ವಿತೀಯಪರಿಚ್ಛೇದ
## ಶಕ್ತಿವಾದ

# ಪೂರ್ವಪಕ್ಷತಾಂಡವ

# ಸಿದ್ಧಾಂತ ತಾಂಡವ

* * * * * *



ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥಶ್ರೀಪಾದಂಗಳವರು
ಮಂತ್ರಾಲಯ ಕ್ಷೇತ್ರದಲ್ಲಿ ಶ್ರೀರಾಘವೇಂದ್ರಸ್ವಾಮಿಗಳ ಮಧ್ಯಾರಾಧನೆಯ (ದಿನಾಂಕ: ೩೧.೦೮.೨೦೧೫) ಶುಭಸಂದರ್ಭದಲ್ಲಿ
'ತರ್ಕತಾಂಡವ–ವಿಶ್ವರೂಪ' ಕೃತಿಯ ಏಳನೆಯ ಸಂಪುಟವನ್ನು ಲೋಕೇಶಾರ್ಪಣೆ ಹಾಗೂ ಲೋಕಾರ್ಪಣೆ ಮಾಡಿ
ಲೇಖಕರಾದ ವಿ॥ ಶ್ರೀಬೆಮ್ಮತ್ತಿ ವೇಂಕಟೇಶಾಚಾರ್ಯರಿಗೆ ಆಶೀರ್ವದಿಸಿದರು.

## ತರ್ಕತಾಂಡವ ವಿಶ್ವರೂಪ–ದಲ್ಲಿರುವ ಗ್ರಂಥಗಳು

೧. ಅನುವ್ಯಾಖ್ಯಾನ
೨. ಶ್ರೀಮನ್ನ್ಯಾಯಸುಧಾ
೩. ಯುಕ್ತಿಮಲ್ಲಿಕಾ
೪. ತರ್ಕತಾಂಡವ
೫. ನ್ಯಾಯದೀಪ
೬. ಅಭಿನವ ತಾಂಡವ
೭. ನ್ಯಾಯಕುಸುಮಾಂಜಲಿ
೮. ನ್ಯಾಯಲೀಲಾವತಿ
೯. ನ್ಯಾಯಲೀಲಾವತಿ – ಪ್ರಕಾಶ
೧೦. ತತ್ವಚಿಂತಾಮಣಿ
೧೧. ಪ್ರಕಾಶ

ದೇವರು ತರ್ಕಕ್ಕೆ ನಿಲುಕದವನು, ತರ್ಕವನ್ನು ಮೀರಿದವನು ಎಂಬುದನ್ನು
ತರ್ಕಬದ್ಧವಾಗಿ ತಿಳಿಸುವುದೇ ಬ್ರಹ್ಮತರ್ಕ.
ಉಳಿದ ತರ್ಕಗಳೆಲ್ಲಾ ಶುಷ್ಕತರ್ಕ.
ಪ್ರತಿವಾದಿಗಳ ಕುತರ್ಕಗಳ ಮೇಲೆ ನಿರಾಯಾಸವಾಗಿ,
ಮನಮೋಹಕವಾಗಿ ತಾಂಡವನೃತ್ಯ ಮಾಡಿದ
ಶ್ರೀವ್ಯಾಸರಾಜರ ಕೃತಿಯ ವಿಶ್ವರೂಪ ಇದೋ ನಿಮಗಾಗಿ !! ...